# ವೈದ್ಯಾಧಿಕಾರಿಯ
# ಬದುಕು-ಬವಣೆ

ಡಾ|| ಎಚ್. ಡಿ. ಚಂದ್ರಪ್ಪಗೌಡ

ಮಲೆನಾಡು ಸಾಹಿತ್ಯ ಪ್ರಕಾಶನ
೬೪, ಮಿಷನ್ ಕಾಂಪೌಂಡ್
ಶಿವಮೊಗ್ಗ - ೫೭೭ ೨೦೧.

VAIDYADHIKARIYA - BADUKU BHAVANE - Autobiography of Dr. H. D. CHANDRAPPA GOWDA, District Surgeon (Rtd.), Printed at Pragathi Printers, IIIrd Cross, Garden Area, SHIMOGA - 577 201 and Published on behalf of MALENADU SAHITHYA PRAKASHANA, 64 Mission Compound, SHIMOGA - 577 201. (Karnataka)

Pages : 352 + 16 + 4

*First Impression : 2002*



**ಪ್ರಕಾಶಕರು : ಮಲೆನಾಡು ಸಾಹಿತ್ಯ ಪ್ರಕಾಶನ,**
64, ಮಿಷನ್ ಕಾಂಪೌಂಡ್,
**ಶಿವಮೊಗ್ಗ - 577 201.**

*ವಿತರಕರು/ಹಂಚಿಕೆದಾರರು :*

1. **ಕರ್ನಾಟಕ ಸಂಘ,** ಬಿ. ಹೆಚ್. ರಸ್ತೆ, **ಶಿವಮೊಗ್ಗ**
2. **ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್,**
   ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, **ಬೆಂಗಳೂರು - 560 001.**
3. **ಸಪ್ನ ಬುಕ್ ಹೌಸ್**
   ತುಂಗಾ ಕಾಂಪ್ಲೆಕ್ಸ್, ಗಾಂಧಿನಗರ, **ಬೆಂಗಳೂರು - 560 009.**
4. **ಅತ್ರಿ ಬುಕ್ ಸೆಂಟರ್,**
   4, ಶರಾವತಿ ಬಿಲ್ಡಿಂಗ್, ಬಲ್ಮಠ, **ಮಂಗಳೂರು - 575 001.**
5. **ಗೀತಾ ಬುಕ್‌ಹೌಸ್**
   ಕೆ. ಆರ್. ಸರ್ಕಲ್, **ಮೈಸೂರು - 570 001.**
6. **ಅನನ್ಯ ಪುಸ್ತಕಗಳು**
   ಭರಣಿ ಕಾಂಪ್ಲೆಕ್ಸ್, 3ನೇ ಕ್ರಾಸ್, ದುರ್ಗಿಗುಡಿ, **ಶಿವಮೊಗ್ಗ - 577 201.**

**ಮುದ್ರಣ :** ಪ್ರಗತಿ ಮುದ್ರಣಾಲಯ, **ಶಿವಮೊಗ್ಗ - 577 201.** ✆ : 270474.





# ಅರ್ಪಣೆ

ಭವಿಷ್ಯದ ಬಗೆಗೆ ಅಪಾರ ಭರವಸೆ ಹಾಗೂ
ಪ್ರೀತಿವಾತ್ಸಲ್ಯವಿರಿಸಿದ್ದ ಆದರೆ
ನನ್ನ ಜೀವನದ ಸಾಧನೆಗಳನ್ನು ನೋಡಲಾಗದೆ
ಯುವ ವಯಸ್ಸಿನಲ್ಲೇ ಗತಿಸಿದ ಜನುಮದಾತ

**ತಂದೆಗೆ**

ತಬ್ಬಲಿ ಶಿಶುವನ್ನು ಜತನದಿಂದ ಪೋಷಿಸಿ
ತ್ರಿವಿಕ್ರಮ ಛಲದಿಂದ ವಿದ್ಯೆ ಬುದ್ಧಿಗಳನ್ನು ಕಲಿಸಿ
ನನ್ನೆಲ್ಲಾ ಸಾಧನೆಗಳ ಹಿಂದಿನ ಅದೃಶ್ಯ ಶಕ್ತಿಯಾಗಿದ್ದ

**ತಾಯಿಗೆ**

ಪ್ರೀತಿಪೂರ್ವಕವಾಗಿ

ಹಾಗೂ

ನನ್ನ ಜೀವನ ಮಾರ್ಗಕ್ಕೆ ಅನಿರೀಕ್ಷಿತ ತಿರುವು ನೀಡಿ
ವೈದ್ಯ ಪದವೀಧರನಾಗಲು ಸಹಾಯ ಹಸ್ತವಿತ್ತು
ಮಾರ್ಗದರ್ಶನದಿಂದ ಸಹಕಾರವಿತ್ತ
ಕರ್ನಾಟಕದ ನಿಸ್ವಾರ್ಥ, ಪ್ರಾಮಾಣಿಕ,
ದಕ್ಷ ಹಾಗೂ ಅಪರೂಪದ ರಾಜಕಾರಿಣಿ

**ಕಡಿದಾಳ್ ಮಂಜಪ್ಪನವರಿಗೆ**

ಗೌರವಾದರಪೂರ್ವಕವಾಗಿ





# ಪರಿವಿಡಿ

ಮುನ್ನುಡಿ
ಅರಿಕೆ

೧. ಊರು - ಮನೆ ೧
೨. ಬಾಲ್ಯ, ವಿದ್ಯಾಭ್ಯಾಸ ೭
೩. ಪ್ರೌಢಶಾಲಾ ವ್ಯಾಸಂಗ ೨೪
೪. ಇಂಟರ್‌ಮೀಡಿಯೇಟ್ ಕಾಲೇಜು ೩೬
೫. ಅನಿರೀಕ್ಷಿತ ತಿರುವು ೪೩
೬. ಮೆಡಿಕಲ್ ವಿದ್ಯಾಭ್ಯಾಸ ೫೩
೭. ನಾನೊಬ್ಬ ಡಾಕ್ಟರಾದೆ! ೬೩
೮. ಮೊದಲ ಹುದ್ದೆ - ಶಿಕಾರಿಪುರ ೬೭
೯. ಕೆ.ಜಿ.ಎಫ್. - ರೆಸಿಡೆಂಟ್ ಮೆಡಿಕಲ್ ಆಫೀಸರ್ ೧೧೭
೧೦. ಮರಳಿ ಮೈಸೂರು ೧೪೨
೧೧. ಮಂಗಳೂರು - ಮತ್ತೊಮ್ಮೆ ವಿದ್ಯಾರ್ಥಿ ೧೫೩
೧೨. ಕೊಳ್ಳೇಗಾಲದ ಕೈಂಕರ್ಯ ೧೬೩
೧೩. ಚಿಕ್ಕಮಗಳೂರು - ವತ್ತಿ ಸಂತೃಪ್ತಿ ೨೧೨
೧೪. ಶಿವಮೊಗ್ಗಾ - ಮತ್ತೊಮ್ಮೆ ರೆಸಿಡೆಂಟ್ ಮೆಡಿಕಲ್ ಆಫೀಸರ್ ೨೩೦
೧೫. ಮತ್ತೆ ಮಂಗಳೂರು -
- ಇನ್ನೊಮ್ಮೆ ರೆಸಿಡೆಂಟ್ ಮೆಡಿಕಲ್ ಆಫೀಸರ್ ೨೫೧
೧೬. ಮರಳಿ ಚಿಕ್ಕಮಗಳೂರು - ಅಂತಿಮ ನಮನ ೨೫೬
೧೭. ಸಾಮಾಜಿಕ ಹಾಗೂ ಸಂಘ ಸಂಸ್ಥೆಗಳಲ್ಲಿ ಪಾತ್ರ ೨೮೯
೧೮. ಸಾಹಿತ್ಯ ಲೋಕದಲ್ಲಿ ವಿಹಾರ ೩೦೪
೧೯. ಉಪಸಂಹಾರ ೩೩೯

ಒಂದು ಅನಿಸಿಕೆ ೩೪೯
ಒಂದು ಅಭಿಪ್ರಾಯ ೩೫೦
ಪ್ರಕಟವಾದ ಪುಸ್ತಕಗಳು ೩೫೧
ಲಭಿಸಿದ ಪ್ರಶಸ್ತಿ ಪುರಸ್ಕಾರಗಳು. ೩೫೨

ಹಿನ್ನುಡಿ

# ಮುನ್ನುಡಿ

ಜಗತ್ತಿನ ಅತಿ ಪ್ರಾಚೀನ ವೃತ್ತಿಗಳಲ್ಲಿ ವೈದ್ಯವೃತ್ತಿಯೂ ಒಂದು. ಜನರನ್ನು ಕಾಡುವ ರೋಗರುಜಿನಗಳನ್ನು ಗುರುತಿಸಿ ಔಷಧೋಪಚಾರ ಮಾಡಿ, ಅವರ ನೋವು ನರಳಿಕೆಗಳನ್ನು ನಿವಾರಿಸುವ, ಹಾಗೆಯೇ ಅವರನ್ನು ಸಾವಿನ ದವಡೆಯಿಂದ ರಕ್ಷಿಸುವ ವೈದ್ಯರನ್ನು ಜನ, ದೇವರಿಗೆ ಸಮ ಎಂದು ತಿಳಿಯುತ್ತಾರೆ. ವೈದ್ಯರ ಬಗ್ಗೆ, ವೈದ್ಯ ವೃತ್ತಿಯ ಬಗ್ಗೆ ಅವರಿಗೆ ಅಪಾರ ಗೌರವ ಇರುವುದು ಸಹಜ. ನಮ್ಮಲ್ಲಿ ವೈದ್ಯರ ಬಗ್ಗೆ ಅನೇಕ ಜನಪ್ರಿಯ ನಂಬಿಕೆಗಳು, ನಿರೀಕ್ಷೆಗಳು ಮತ್ತು ಭ್ರಮೆಗಳು ಇವೆ. ಉದಾಹರಣೆಗೆ :

"ವೈದ್ಯರಿಗೆ ಎಂದೂ ಕಾಯಿಲೆ ಬರುವುದಿಲ್ಲ. ಅವರು ಸದಾ ಆರೋಗ್ಯವಾಗೇ ಇರುತ್ತಾರೆ. ಏಕೆಂದರೆ ಅವರಿಗೆ ಕಾಯಿಲೆ ಬರದಂತೆ ನಿವಾರಣೋಪಾಯಗಳು ಗೊತ್ತಿರುತ್ತವೆ. ಕಾಯಿಲೆಯ ಪ್ರಾರಂಭಿಕ ಲಕ್ಷಣಗಳನ್ನು ಬೇಗ ಗುರುತಿಸಿ, ಔಷಧಿ ಸೇವಿಸಿ, ಕಾಯಿಲೆ ಪ್ರಕಟವಾಗದಂತೆ ನೋಡಿಕೊಳ್ಳುತ್ತಾರೆ".

ಕಾಯಿಲೆಯಿಂದ ನರಳುವ ವೈದ್ಯರನ್ನು ಕಂಡು ಹಾಸ್ಯ ಮಾಡುತ್ತಾರೆ. 'ಏನು ಡಾಕ್ಟರೇ, ನಿಮಗೂ ಕಾಯಿಲೆಯೇ' ಎಂದು ಗೇಲಿ ಮಾಡುತ್ತಾರೆ. 'ವೈದ್ಯನ ವ್ಯಾಧಿ' ಎಂಬುದು ಪರಿಹಾಸ್ಯದ ಮಾತು!

"ವೈದ್ಯರು ಮತ್ತು ಅವರ ಮನೆ ಅತ್ಯಂತ ಚೊಕ್ಕಟವಾಗಿರುತ್ತದೆ. ವೈಯಕ್ತಿಕ ಮತ್ತು ಪರಿಸರ ನೈರ್ಮಲ್ಯವನ್ನು ಅವರು ಚೆನ್ನಾಗಿ ಕಾಪಾಡುತ್ತಾರೆ".

ಕೊಳಕಾದ ವೈದ್ಯ, ಕೊಳಕಾದ ಅವನ ಮನೆ ಮಕ್ಕಳನ್ನು ಕಂಡರೆ ಜನ ಆಶ್ಚರ್ಯ ಪಡುತ್ತಾರೆ. 'ಇದು ಹೇಗೆ ಸಾಧ್ಯ' ಎನ್ನುತ್ತಾರೆ.

"ವೈದ್ಯರು ನಿಸ್ವಾರ್ಥಿಗಳಾಗಿರಬೇಕು. ಅವರಲ್ಲಿ ಸ್ವಲ್ಪವೂ ಸ್ವಾರ್ಥವಿರಬಾರದು; ಅವರು ಬಿಳಿವಸ್ತ್ರ ತೊಟ್ಟ ಸನ್ಯಾಸಿಗಳಂತಿರಬೇಕು". ಸ್ವಾರ್ಥಿ, ಆಸೆಬುರುಕ ವೈದ್ಯ ಅವರಿಗೆ 'ವಿಲನ್' ರೀತಿ ಕಾಣುತ್ತಾನೆ.

"ವೈದ್ಯರಿಗೆ ವೈಯಕ್ತಿಕವಾದ ಯಾವುದೇ ಆದ್ಯತೆ ಇರಬಾರದು. ರೋಗಿಗಳ ಸೇವೆಯೇ ಅವರ ಪರಮ ಕರ್ತವ್ಯ; ದಿನದ ಇಪ್ಪತ್ತನಾಲ್ಕು ಗಂಟೆಗಳೂ ಅವರು ಈ ಕರ್ತವ್ಯ ನಿರ್ವಹಣೆಗೆ ಸಿದ್ಧರಾಗಿರಬೇಕು; ಊಟ, ನಿದ್ರೆ, ಮನರಂಜನೆಯನ್ನು ಅವರು ತ್ಯಾಗ ಮಾಡಬೇಕು; ಮಾಡದಿದ್ದರೆ ಆತ ಒಬ್ಬ ಕೆಟ್ಟ ವೈದ್ಯ".

"ವೈದ್ಯರಿಗೆ ಭಯ, ನಾಚಿಕೆಗಳಿರುವುದಿಲ್ಲ, ಅವರಿಗೆ ಇತರ ಭಾವನೆಗಳೂ ಕಡಿಮೆಯೇ; ಅವರು ಒಂದು ಬಗೆಯ ಸ್ಥಿತಪ್ರಜ್ಞರು; ದುಃಖದ ಸನ್ನಿವೇಶಗಳಲ್ಲಿ ಅವರು ಅಳುವುದಿಲ್ಲ; ನಿತ್ಯ ಸಾವು-ನೋವುಗಳನ್ನು ನೋಡಿ ಅವರ ಹೃದಯ ಕಲ್ಲಾಗಿರುತ್ತದೆ".

"ವೈದ್ಯರಿಗೆ ಬುದ್ಧಿ ಹೆಚ್ಚಿರುತ್ತದೆ. ಆದರೆ ರೋಗಿಗಳಿಗೆ ಅವರ ಬುದ್ಧಿಗಿಂತ 'ಕೈ ಗುಣ'ವೇ ಹೆಚ್ಚು ಮುಖ್ಯ. ಒಳ್ಳೆಯ ಕೈಗುಣವಿರುವ ವೈದ್ಯರು ಕೊಟ್ಟ ನೀರೂ ಅಮೃತವಾಗುತ್ತದೆ; ನಿರುಪಯೋಗಿ ಔಷಧವೂ ಸಂಜೀವಿನಿಯಾಗುತ್ತದೆ".

ವೈದ್ಯರ ಬಗ್ಗೆ ಜನರಲ್ಲಿರುವ ಈ ಬಗೆಯ ಕಲ್ಪನೆ, ನಿರೀಕ್ಷೆಗಳಿಂದ, ವೈದ್ಯರು ಮತ್ತು ಅವರ ಜೀವನ ಜನಸಾಮಾನ್ಯರ ಪಾಲಿಗೆ ನಿಗೂಢವಾಗಿ ಬಿಡುತ್ತದೆ. ನಾನು ಚಿಕ್ಕವನಾಗಿದ್ದಾಗ, ನನ್ನ ತಾಯಿಗೆ ಆಗಾಗ ವಿಪರೀತ ಹೊಟ್ಟೆನೋವು ಬರುತ್ತಿತ್ತು. ನಮ್ಮ ಫ್ಯಾಮಿಲಿ ಡಾಕ್ಟರ್ ಆದ ಡಾ|| ರಾಮಯ್ಯನವರು ಕೊಟ್ಟ ಚಿಕಿತ್ಸೆ, ಔಷಧಿ ಕೆಲಸ ಮಾಡದಿದ್ದಾಗ, ಅವರೇ ನನ್ನ ತಾಯಿಯನ್ನು ಬೆಂಗಳೂರಿಗೆ ಕರೆದೊಯ್ದರು. ಬೌರಿಂಗ್ ಆಸ್ಪತ್ರೆಯ ಸರ್ಜನ್ ಡಾ|| ಜಯರಾಮ್ ಆಪರೇಷನ್ ಮಾಡುತ್ತಾರೆ ಎಂದಾಗ ನಮ್ಮೆಲ್ಲರಿಗೂ ಮುಂದೇನಾಗುವುದೋ ಎಂಬ ಭಯ ಆವರಿಸಿತು. ಎಂಟು ಇಂಚು ಹೊಟ್ಟೆ ಕೊಯ್ಯುತ್ತಾರಂತೆ; ನನ್ನ ತಾಯಿ ಬದುಕುತ್ತಾರೋ ಇಲ್ಲವೋ ಎಂಬ ದಿಗಿಲು ನಮ್ಮನ್ನು ಮುತ್ತಿತ್ತು. ಒಂದು ದಿನ ನನ್ನ ತಂದೆ ಡಾ|| ಜಯರಾಮ್ ಅವರನ್ನು ಕಾಣಲು ಅವರ ಮನೆಗೆ ಹೊರಟರು; ಜೊತೆಯಲ್ಲಿ ನಾನೂ ಹೋದೆ. ದೊಡ್ಡ ಗೇಟುಳ್ಳ ಭಾರಿ ಬಂಗಲೆ; ಸೂಟುಧಾರಿಯಾಗಿ, ಹಸನ್ಮುಖಿಯಾಗಿ ಡಾ|| ಜಯರಾಮ್ ನಮ್ಮ ತಂದೆಗೆ ಧೈರ್ಯ ಹೇಳಿದರು. ಅವರೇನು ಹೇಳಿದರೆಂದು ನನಗೆ ನೆನಪಿಲ್ಲ; ಅರ್ಥಮಾಡಿಕೊಳ್ಳುವ ವಯಸ್ಸು ನನ್ನದಲ್ಲ. ಆದರೆ ಡಾ|| ಜಯರಾಮ್ ನನ್ನ ಮುಗ್ಧ ಮನಸ್ಸಿಗೆ ಒಬ್ಬ ಮಾಂತ್ರಿಕರಂತೆ, ದೇವಾಂಶ ಸಂಭೂತರಂತೆ ಕಂಡರು. ಇವರು ನನ್ನ ತಾಯಿಯ ಹೊಟ್ಟೆ ಕೊಯ್ದು ಆಕೆಗೆ ವಿಪರೀತ ನೋವನ್ನುಂಟು ಮಾಡುತ್ತಿರುವ ಹುಣ್ಣಿರುವ ಕರುಳನ್ನು ಕತ್ತರಿಸಿ ತೆಗೆಯುತ್ತಾರೆ; ನನ್ನ ತಾಯಿಯನ್ನು ನೋವಿನಿಂದ ಪಾರು ಮಾಡುವವರು ಇವರು ಎಂದು ಬೆರಗುಗಣ್ಣಿನಿಂದ, ಹಾಗೇ ಭಯದಿಂದ ನೋಡಿದ್ದೆ!

ಎಲ್. ಎಂ. ಪಿ. ಮಾಡಿ ಜ್ವರ, ಕೆಮ್ಮು, ವಾಂತಿಬೇಧಿಗಳಿಗೆ ಔಷಧ ಕೊಡುತ್ತಿದ್ದ ಡಾ|| ರಾಮಯ್ಯನವರೂ, ನನ್ನ ಪಾಲಿಗೆ ಕೌತುಕವೇ; ಅವರು ಸ್ಟೆತೋಸ್ಕೋಪಿನಿಂದ ಜನರ ಎದೆ, ಬೆನ್ನುಗಳನ್ನು ಪರೀಕ್ಷಿಸುವುದು; ಆಮೇಲೆ ಯಾವುದೋ ವಿಚಿತ್ರ ಹೆಸರುಗಳನ್ನು ಹೇಳುತ್ತಾ ಕಾಂಪೌಂಡರಿಗೆ, ಬೇರೆ ಬೇರೆ ರೀತಿಯ ಮಾತ್ರೆ- ಮಿಕ್ಶ್ಚರ್‌ಗಳನ್ನು ಕೊಡುವುದು, ಅವುಗಳು ಕಹಿಯಾಗಿದ್ದರೂ ಜ್ವರ ಕೆಮ್ಮು ಕಡಿಮೆಯಾಗುವುದು ನನಗೆ ಸೋಜಿಗವೆನಿಸುತ್ತಿತ್ತು. ಒಂದು ದಿನ ಅವರ ಮನೆಯೊಳಗೆ ಹೋದಾಗ ಅವರ ಮನೆ ಎಲ್ಲರ ಮನೆಯಂತೆಯೇ ಇದ್ದದ್ದನ್ನು ಕಂಡು ನನಗೆ ನಿರಾಶೆಯಾಗಿತ್ತು.

ಮುಂದೆ ನಾನು ವೈದ್ಯಕೀಯ ಕಾಲೇಜು ಸೇರಿ, ಆಗಿನ ಕಾಲಕ್ಕೆ ದೊಡ್ಡ, ಹಿರಿಯ ವೈದ್ಯರುಗಳನ್ನು ಸಮೀಪದಲ್ಲೇ ಕಂಡಾಗ, ಅವರ ಮಾತು, ವರ್ತನೆಗಳನ್ನು ಕಂಡಾಗ, ಅವರಲ್ಲಿ ಕೆಲವರ ಸಣ್ಣತನಗಳನ್ನು ಗಮನಿಸಿದಾಗ, ವೈದ್ಯರುಗಳ ಬಗ್ಗೆ ನನಗಿದ್ದ ಕಲ್ಪನೆ, ಭ್ರಮೆಗಳೆಲ್ಲಾ ಹೋದುವು. ಅವರೂ ಎಲ್ಲರಂತೆಯೇ ದೊಡ್ಡತನ, ಸಣ್ಣತನ, ರಾಗ ದ್ವೇಷಗಳಿಂದ ಕೂಡಿದ ಸಾಮಾನ್ಯರೇ ಎನ್ನುವ ವಾಸ್ತವಿಕ ಸತ್ಯದ ಅರಿವಾಯಿತು.

ಇತ್ತೀಚೆಗೆ ವೈದ್ಯರುಗಳ ಬಗ್ಗೆ ನಕಾರಾತ್ಮಕ ಕಲ್ಪನೆಗಳು, ಹೀನಾಯ ಭಾವನೆ, ಧೋರಣೆಗಳೇ ಹೆಚ್ಚಾಗುತ್ತಿವೆ. ಉದಾಹರಣೆಗೆ :

- ವೈದ್ಯರು, ಧನದಾಹಿಗಳು; ಹಣಕ್ಕಾಗಿ ರೋಗಿಗಳನ್ನು ಶೋಷಿಸುತ್ತಾರೆ. ಹೆಚ್ಚು ಹಣ ಸಂಪಾದನೆಗಾಗಿ ರೋಗಿಗಳಿಗೆ ಮತ್ತು ಅವರ ಮನೆಯವರಿಗೆ ಮೋಸ ಮಾಡುತ್ತಾರೆ.
- ವೈದ್ಯರಲ್ಲಿ ಸೇವಾ ಮನೋಭಾವವಿಲ್ಲ, ರೋಗಿಗಳ ಸೇವೆಗಿಂತ ಅವರಿಗೆ ತಮ್ಮ ಸುಖ-ಸಂತೋಷ, ಮೋಜು, ಮನರಂಜನೆಗಳೇ ಮುಖ್ಯವಾಗುತ್ತವೆ. ಆವೇಳೆಯಲ್ಲಿ ರೋಗಿಯನ್ನು ನೋಡಲು, ಚಿಕಿತ್ಸೆ ನೀಡಲು ಅವರು ಒಪ್ಪುವುದಿಲ್ಲ, ಪೋಲೀಸು, ಕಾನೂನು,

ಕೋರ್ಟುಗಳ ನೆಪ ಒಡ್ಡಿ, ಅಪಘಾತಕ್ಕೆ ಒಳಗಾದ ದುರ್ದೈವಿಗಳಿಗೆ ಅವರು ಪ್ರಥಮ ಚಿಕಿತ್ಸೆ ನೀಡಲು ನಿರಾಕರಿಸುತ್ತಾರೆ, ತಮ್ಮ ನಿರ್ಲಕ್ಷ್ಯ, ಬೇಜವಾಬ್ದಾರಿಗಳಿಂದ ರೋಗಿ ಅಂಗವಿಕಲನಾದರೆ, ಸತ್ತರೆ ಅವರಿಗೆ ಏನೂ ಅನ್ನಿಸುವುದಿಲ್ಲ.

- ರೋಗಿಗಳಿಗೆ ಧೂಮಪಾನ ಮಾಡಬೇಡಿ, ಮದ್ಯ ಸೇವಿಸಬೇಡಿ ಎಂದು ಹೇಳುವ ವೈದ್ಯರೇ ಧೂಮಪಾನ ಮಾಡುತ್ತಾರೆ. ಪಾರ್ಟಿಗಳಲ್ಲಿ, ಮನೆಗಳಲ್ಲಿ ಕುಡಿದು ತೂರಾಡುತ್ತಾರೆ!
- ಸರ್ಕಾರಿ ವೈದ್ಯರು, ಬಡರೋಗಿಗಳಿಗಾಗಿ ಸರ್ಕಾರ ಕೊಡುವ ಔಷಧಿಗಳನ್ನು ಮಾರಿ ಕೊಳ್ಳುತ್ತಾರೆ. ಉಚಿತವಾಗಿ ನೀಡಬೇಕಾದ ಸೇವೆಗೆ ಅಡ್ಮಿಟ್ ಮಾಡಲು, ರೋಗಿಯ ತಪಾಸಣೆ ಮಾಡಲು, ಚಿಕಿತ್ಸೆ ಮಾಡಲು ಅವರಿಗೆ ಹಣ ಕೊಡಲೇಬೇಕು. ಆಸ್ಪತ್ರೆಯಲ್ಲಿ ಪ್ರಾಕ್ಟೀಸ್ ಮಾಡುತ್ತಾರೆ, ಅಥವಾ ತಮ್ಮ ಖಾಸಗಿ ಕ್ಲಿನಿಕ್‌ಗೆ ಬರಲು ರೋಗಿಗೆ ಒತ್ತಾಯ ಮಾಡುತ್ತಾರೆ. ಹೀಗಾಗಿ ಸರ್ಕಾರಿ ಆಸ್ಪತ್ರೆಗಳು, ಭೂಲೋಕದ ನರಕಗಳಾಗಿವೆ. ವೈದ್ಯ ಯಮರಾಜನ ಸೋದರನಾಗಿದ್ದಾನೆ. ಯಮ ಪ್ರಾಣವನ್ನಷ್ಟೇ ಅಪಹರಿಸಿದರೆ, ವೈದ್ಯರು ಹಣ, ಪ್ರಾಣ ಎರಡನ್ನೂ ಅಪಹರಿಸುತ್ತಾರೆ.
- ಖಾಸಗಿ ವೈದ್ಯರು, ಅನಗತ್ಯವಾಗಿ ತಪಾಸಣೆಗಳನ್ನು ಮಾಡಿ ಕಮೀಷನ್ ಪಡೆಯುತ್ತಾರೆ. ಒಂದೇ ಕಂಪನಿಯ ಔಷಧಗಳನ್ನು ಆ ಕಂಪನಿಗಳಿಂದ ಹಣ ಪಡೆದು, ಜನರಿಗೆ ಬರೆದು ಕೊಡುತ್ತಾರೆ. ಅನಗತ್ಯವಾಗಿ ಆಪರೇಷನ್‌ಗಳನ್ನು ಮಾಡುತ್ತಾರೆ. ಒಂದಕ್ಕೆ ಹತ್ತರಷ್ಟು ಚಾರ್ಜ್ ಮಾಡುತ್ತಾರೆ.
- ವೈದ್ಯರು, ನರ್ಸ್‌ಗಳಲ್ಲಿ ಅನೈತಿಕ ಸಂಬಂಧಗಳಿರುತ್ತವೆ, ತಮ್ಮ ಬಳಿಗೆ ಬಂದ ರೋಗಿ ಗಳನ್ನು ಕಾಮುಕ ದೃಷ್ಟಿಯಿಂದ ನೋಡುತ್ತಾರೆ.

ಇಂದಿನ ವೈದ್ಯರು, ಈ ಬಗೆಯ ವೈರುಧ್ಯಗಳ ನಡುವೆ ತಮ್ಮ ವೃತ್ತಿಯನ್ನು ನಡೆಸ ಬೇಕಾಗುತ್ತದೆ. ತಮ್ಮನ್ನು ದೇವರಂತೆ ಕಾಣುವವರನ್ನೂ, ತಮ್ಮ ಬಳಿಗೆ ಬರುತ್ತಿದ್ದಂತೆಯೇ ಕಾಯಿಲೆ ವಾಸಿಯಾಗಿ ಬಿಡಬೇಕು, ಸಾವಿನ ದವಡೆಯಲ್ಲಿರುವ ರೋಗಿಯೂ ಬದುಕಿ ಉಳಿಯಬೇಕು ಎಂದು ನಿರೀಕ್ಷಿಸುವವರನ್ನೂ ನಿಭಾಯಿಸಬೇಕು. ಜೊತೆಗೆ ತಮ್ಮನ್ನು ರಾಕ್ಷಸ, ಮೋಸಗಾರ, ಎಲ್ಲಿ ಹೇಗೆ ಮೋಸ ಮಾಡುತ್ತಾನೋ, ಇವನು ಕೊಡುವ ಚಿಕಿತ್ಸೆಯಿಂದ ತಮ್ಮ ಕಾಯಿಲೆ ವಾಸಿ ಯಾಗುತ್ತದೋ ಇಲ್ಲವೋ, ಇವನು ಯಮರಾಜನ ಸೋದರನೋ ಎಂದು ಶಂಕಿಸುವವರನ್ನೂ ನಿಭಾಯಿಸಬೇಕು. ಕೆಲಸ, ಜವಾಬ್ದಾರಿಗಳ ಒತ್ತಡದ ನಡುವೆಯೂ ಮನಸ್ಸಿನ ಸಮತೋಲನ ವನ್ನು ಕಾಯ್ದುಕೊಳ್ಳಬೇಕು. ಪ್ರತಿನಿತ್ಯ ವಿಸ್ತಾರಗೊಳ್ಳುತ್ತಿರುವ, ಅನೇಕ ಆವಿಷ್ಕಾರಗಳಿಂದ ಅಗಾಧ ವೇಗದಿಂದ ಬೆಳೆಯುತ್ತಿರುವ ವೈದ್ಯ ವಿಜ್ಞಾನವನ್ನು ತಿಳಿದುಕೊಳ್ಳಬೇಕು. ಗಂಡ/ಹೆಂಡತಿ, ಮಕ್ಕಳು ಕುಟುಂಬದವರ ಬೇಕು-ಬೇಡಗಳನ್ನು, ಆಶೆ-ಆಕಾಂಕ್ಷೆಗಳನ್ನು ಭರಿಸಬೇಕು. ಎಲ್ಲಾ ವೃತ್ತಿಗಳಲ್ಲಿ ಇರುವಂತೆ ವೈದ್ಯ ವೃತ್ತಿಯಲ್ಲೂ ವೃತ್ತಿ-ಮಾತ್ಸರ್ಯವಿದೆ. ಸಹವಯಸ್ಕರು, ಅದೇ ಊರಲ್ಲಿ ಪ್ರಾಕ್ಟೀಸ್ ಮಾಡುವವರು, ಅಲೋಪತಿ, ಆಯುರ್ವೇದ, ಹೋಮಿಯೋಪತಿ, ನ್ಯಾಚುರೋಪತಿ, ನಾಟಿ ಮತ್ತು ಡೋಂಗಿ ವೈದ್ಯರುಗಳ ನಡುವೆ ತನ್ನ ಸ್ಥಾನಮಾನಗಳನ್ನು ಕಂಡುಕೊಳ್ಳಬೇಕು. ಹೀಗೆ ವೈದ್ಯನ ಬದುಕು ಹೂವಿನ ಹಾಸಿಗೆಯಲ್ಲ. ವೈದ್ಯನ ಬದುಕನ್ನು ಬಣ್ಣಿಸುವ ಪುಸ್ತಕಗಳು ಕನ್ನಡದಲ್ಲಿ ಬಹಳ ಕಡಿಮೆ. ತಮ್ಮ ಕೃತಿಗಳ ಮೂಲಕ ಡಾ|| ಅನುಪಮ ನಿರಂಜನ, ಡಾ|| ಎಂ. ಶಿವರಾಮ್, ಡಾ|| ಗೋಪಾಲ್, ಡಾ|| ಡಿ. ವಿ. ರಾವ್ ತಮ್ಮ ವೃತ್ತಿ ಜೀವನದ ಪರಿಚಯ ಮಾಡಿಸಿದ್ದಾರೆ.

ಡಾ|| ನರಸಣಗಿ, ಡಾ|| ಎಂ. ಮರಿಯಪ್ಪ ಅವರ ಜೀವನ ಸಾಧನೆಗಳನ್ನು ಪರಿಚಯಿಸುವ ಕೃತಿಗಳೂ ಬಂದಿವೆ.

ಕನ್ನಡ ವೈದ್ಯ ಸಾಹಿತ್ಯ ಪರಿಷತ್ತಿನ ಬೆಂಗಳೂರಿನ ಶಾಖೆಯು ೨೦೦೦ನೇ ಇಸವಿಯಲ್ಲಿ ಕನ್ನಡದಲ್ಲಿ ವಿಶಿಷ್ಟವಾದ ಒಂದು ಪುಸ್ತಕವನ್ನು ಪ್ರಕಟಿಸಿತು. ಅದರಲ್ಲಿ ನಮ್ಮ ರಾಜ್ಯದ ೨೭ ಜನ ಹಿರಿಯ-ಕಿರಿಯ ವೈದ್ಯರು ತಮ್ಮ ವೃತ್ತಿ ಜೀವನದಲ್ಲಿ ಮರೆಯಲಾಗದ ರೋಗಿಗಳ ಪ್ರಕರಣ ಗಳನ್ನು ದಾಖಲಿಸಿದ್ದಾರೆ. ('ವೈದ್ಯರು ಮರೆಯಲಾಗದ ರೋಗಿಗಳು' - ಪುಟ ೧೫೬; ಬೆಲೆ ರೂ. ೨೫). ಒಬ್ಬೊಬ್ಬ ವೈದ್ಯರ ಅನುಭವವೂ ಇಲ್ಲಿ ಅತ್ಯಂತ ರೋಚಕವಾಗಿದೆ. ಓದುಗರಿಗೆ ಮರೆಯಲಾಗದ ಅನುಭವವನ್ನು ನೀಡುತ್ತದೆ.

ಈ ದಿಸೆಯಲ್ಲಿ ನಮ್ಮ ನಾಡು ಹೆಮ್ಮೆ ಪಡಬಹುದಾದಂತಹ ವೈದ್ಯ, ಸರ್ಕಾರಿ ಸೇವೆ ಯಲ್ಲಿ ೨೮ ವರ್ಷಗಳ ಕಾಲ ಶಿಕಾರಿಪುರ, ಕೆ.ಜಿ.ಎಫ್, ಮೈಸೂರು, ಮಂಗಳೂರು (ಎರಡು ಸಲ) ಕೊಳ್ಳೇಗಾಲ, ಚಿಕ್ಕಮಗಳೂರು (ಎರಡು ಸಲ) ಶಿವಮೊಗ್ಗಾ ಮುಂತಾದ ಕಡೆಗಳಲ್ಲಿ ವೈದ್ಯರಾಗಿ, ಶಸ್ತ್ರವೈದ್ಯರಾಗಿ, ಜಿಲ್ಲಾ ಸರ್ಜನ್ ಆಗಿ ಕೆಲಸ ಮಾಡಿ ನಿವೃತ್ತಿ ಹೊಂದಿ, ಅನಂತರವೂ ವೈದ್ಯ ವೃತ್ತಿಯನ್ನು ಮುಂದುವರಿಸಿ, ಈಗ ವಿಶ್ರಾಂತ ಜೀವನ ನಡೆಸುತ್ತಿರುವ ಡಾ|| ಎಚ್. ಡಿ. ಚಂದ್ರಪ್ಪಗೌಡರು ತಮ್ಮ ಆತ್ಮಚರಿತ್ರೆಯನ್ನು ಬರೆದಿದ್ದಾರೆ. ಶಿವಮೊಗ್ಗ ಜಿಲ್ಲೆಯ ಮಲೆನಾಡಿನ ಒಂದು ಪುಟ್ಟ ಗ್ರಾಮದಲ್ಲಿ ಹುಟ್ಟಿದ ಅವರು, ಬಾಲ್ಯದಲ್ಲೇ ತಂದೆಯನ್ನು ಕಳೆದು ಕೊಂಡು ಅನಾಥರಾದರೂ, ಕಾಲೇಜಿನ ವಿದ್ಯಾಭ್ಯಾಸ, ವೈದ್ಯ ವಿದ್ಯಾಭ್ಯಾಸವೇನು ಎಂದರಿಯದ ನೆಂಟರಿಷ್ಟರ ನಡುವೆ ಬೆಳೆದರೂ, ಯಾವುದೋ ವಿಧಿವಿಲಾಸದಿಂದ, ಅಚ್ಚರಿಯೆನಿಸುವ ರೀತಿಯಲ್ಲಿ ವಿದ್ಯೆ ಕಲಿತು, ವೈದ್ಯಕೀಯ ಕಾಲೇಜು ಸೇರಿ ವೈದ್ಯರಾದರು; ಆನಂತರ ಶಸ್ತ್ರವೈದ್ಯ ರಾದರು. ಬದುಕಿನುದ್ದಕ್ಕೂ ಪ್ರಾಮಾಣಿಕವಾಗಿ, ಸಜ್ಜನರಾಗಿ ತಮ್ಮ ವೃತ್ತಿ - ತಮ್ಮ ಜನರನ್ನು ಪ್ರೀತಿಸುತ್ತಾ, ಕಾಯಕವೇ ಪೂಜೆ ಎಂದು ತಿಳಿದು, ತಮ್ಮ ವೈದ್ಯ ವೃತ್ತಿಯಲ್ಲಿ ಸಾವಿರಾರು ರೋಗಿಗಳ ಕಣ್ಣೀರನ್ನು ಒರೆಸಿದ್ದಾರೆ; ಅನೇಕರನ್ನು ಸಾವಿನ ಹಿಡಿತದಿಂದ ಪಾರು ಮಾಡಿದ್ದಾರೆ; ಯಮರಾಜನನ್ನು ಸೋಲಿಸಿದ್ದಾರೆ. ಡಾ|| ಚಂದ್ರಪ್ಪಗೌಡರನ್ನು ಕಳೆದ ಇಪ್ಪತ್ತು ವರ್ಷಗಳಿಂದ ಬಲ್ಲೆ. ವೈದ್ಯ ಸಾಹಿತ್ಯ ರಚನೆ, ವೈದ್ಯ ಸಾಹಿತ್ಯ ಪರಿಷತ್ತು ನಮ್ಮ ಸಮಾನ ಅಭಿರುಚಿ ಮತ್ತು ಕಾಳಜಿಗಳು. ತಡವಾಗಿ ಬರೆಯಲು ಪ್ರಾರಂಭಿಸಿದರೂ, ಬರವಣಿಗೆಯಲ್ಲಿ ಪ್ರಭುತ್ವ ಮತ್ತು ಜನಾನುರಾಗವನ್ನು ಅವರು ಸಾಧಿಸುತ್ತಿರುವ ಪರಿಯಿಂದ ನಾನು ಅವರ ಅಭಿಮಾನಿಯಾಗಿದ್ದೇನೆ. ಅವರೂ ನನ್ನಲ್ಲಿ ಪ್ರೀತಿ ಅಭಿಮಾನವಿಟ್ಟು, ತಮ್ಮ ಈ ಕೃತಿಯನ್ನು ಓದಿ, ಮುನ್ನುಡಿ ಬರೆಯಲು ನನಗೆ ಅವಕಾಶ ಕೊಟ್ಟಿದ್ದಾರೆ. ಇದು ನನ್ನಂತಹ ಕಿರಿಯ ಸ್ನೇಹಿತನಿಗೆ ಅವರು ತೋರಿರುವ ವಿಶ್ವಾಸದ ಪರಿ!

ಈ ಕೃತಿಯ ಭಾಷೆ, ಶೈಲಿ, ನೇರವಾಗಿ ಮನಸ್ಸನ್ನು ತಟ್ಟುತ್ತದೆ. ಯಾವುದೇ ಸಂಕೋಚ, ಹಿಂಜರಿಕೆ ಇಲ್ಲದೆ ತಮ್ಮ ಜೀವನದ ಎಲ್ಲಾ ಅನುಭವಗಳನ್ನು ನಮಗಾಗಿ ತೆರೆದಿಟ್ಟಿದ್ದಾರೆ. ತಾವು ಹುಟ್ಟಿದ ಪುಟ್ಟ ಹಳ್ಳಿಯ ಬದುಕನ್ನು, ತಾವು ವಿದ್ಯೆ ಕಲಿಯಲು ಪಟ್ಟ ಕಷ್ಟವನ್ನು, ಆರ್ಥಿಕ ಸಂಕಷ್ಟ ಗಳನ್ನು, ಸೇವಾ ಹಿರಿತನದಲ್ಲಿ ಆದ ಅನ್ಯಾಯದಿಂದ ತಾವು ಪಟ್ಟ ಬವಣೆಯನ್ನು, ವೈದ್ಯ ವೃತ್ತಿಯ ಕಷ್ಟ ನಷ್ಟ ನೋವುಗಳನ್ನೂ, ಹಾಗೆಯೇ ಸಾಧನೆಗಳನ್ನೂ ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ. ಬರವಣಿಗೆ ಎಲ್ಲೂ ನೀರಸವಾಗದೆ, ಸರಾಗವಾಗಿ ಓದಿಸಿಕೊಂಡು ಹೋಗುತ್ತದೆ. ಎಲ್ಲೂ ಬೇಸರ, ನಿರಾಸಕ್ತಿಯನ್ನುಂಟು ಮಾಡುವುದಿಲ್ಲ. ತಮ್ಮ ವೃತ್ತಿ ಜೀವನದಲ್ಲಿ ಕಂಡ, ಅನೇಕ ಜನರ

ಸ್ವಭಾವಗಳನ್ನು, ಸಹಜ-ಅಸಹಜ ವರ್ತನೆಗಳನ್ನು ಹೇಳಿ, ಮನುಷ್ಯ ಸ್ವಭಾವಗಳ, ವಿವಿಧ ವ್ಯಕ್ತಿತ್ವಗಳ ದರ್ಶನವನ್ನೂ ಮಂಡಿಸಿದ್ದಾರೆ. ಇದು ಕೃತಿಯ ಆಕರ್ಷಕ ಅಂಶಗಳಲ್ಲಿ ಒಂದು ಎಂದು ನನ್ನ ಭಾವನೆ.

ಅವರ ನೆನಪಿನ ಬುತ್ತಿಯಲ್ಲಿ ಅದೆಷ್ಟು ರೋಚಕ ಘಟನೆಗಳು, ಅದೆಷ್ಟು ಅಪರೂಪದ ಅನುಭವಗಳು! ಅನೇಕ ಮೆಡಿಕೋಲೀಗಲ್ ಪ್ರಕರಣಗಳನ್ನು ರಂಜನೀಯವಾಗಿ ಬರೆದಿದ್ದಾರೆ. ಆಡಳಿತಾತ್ಮಕ ಸಮಸ್ಯೆಗಳನ್ನು, ಸಮಸ್ಯಾತ್ಮಕ ವ್ಯಕ್ತಿಗಳನ್ನು ತಾವು ನಿಭಾಯಿಸಿದ ರೀತಿಯನ್ನು ವರ್ಣಿಸಿದ್ದಾರೆ. ಇದು ಅನೇಕರಿಗೆ ದಾರಿದೀಪವಾಗಬಲ್ಲದು.

ಕನ್ನಡದಲ್ಲಿ ವೃತ್ತಿ ಅನುಭವಗಳನ್ನು ಚಿತ್ರಿಸುವ ಸಾಹಿತ್ಯ ಬಹಳ ಕಡಿಮೆ. ನಾನು ಭೇಟಿ ಮಾಡಿದ ಅಥವಾ ನನಗೆ ಪರಿಚಯವಿರುವ ಅನೇಕ ಹಿರಿಯ ವೃತ್ತಿಬಾಂಧವರನ್ನು 'ನೀವು ನಿಮ್ಮ ಅನುಭವಗಳನ್ನು ಬರೆಯಿರಿ. ನಮ್ಮ ಜನ ಅದನ್ನು ಓದಬೇಕು. ಇದರಿಂದ ನಮ್ಮ ಜೀವನಾನುಭವ ಶ್ರೀಮಂತವಾಗುತ್ತದೆ. ಕಿರಿಯರಿಗೆ ಇದು ಮಾರ್ಗದರ್ಶನವಾಗುತ್ತದೆ'. ಎಂದು ಅಗ್ರಹ ಪಡಿಸುತ್ತೇನೆ. ತಜ್ಞರೂ, ಸಜ್ಜನರೂ, ಮಾನವೀಯ ಗುಣಗಳಿಂದ ಶೋಭಿತರೂ ಆಗಿರುವ ಚಂದ್ರಪ್ಪ ಗೌಡರ ಈ ಕೃತಿ, ಕನ್ನಡ ಸಾಹಿತ್ಯಕ್ಕೆ ಒಂದು ವಿಶೇಷ ಸೇರ್ಪಡೆ ಎಂದೇ ನನ್ನ ಪ್ರಾಮಾಣಿಕ ಅನಿಸಿಕೆ. ಈ ಕೃತಿ ಎಲ್ಲಾ ಸಹೃದಯ ಓದುಗರನ್ನು ಮುಟ್ಟಲಿ. ಎಲ್ಲಾ ವೈದ್ಯ ವೃತ್ತಿಬಾಂಧವರು, ವೈದ್ಯ ವಿದ್ಯಾರ್ಥಿಗಳು ಅವಶ್ಯಕವಾಗಿ ಇದನ್ನು ಓದಬೇಕು. ಎಂಬುದೇ ನನ್ನ ಮನದಾಳದ ಹಾರೈಕೆ.

ಅನುಭವಗಳಿಂದ ಪಕ್ವವಾಗಿರುವ ಅನುಪಮ ವ್ಯಕ್ತಿ ಡಾ॥ ಚಂದ್ರಪ್ಪಗೌಡರು. ಅವರ ಲೇಖನಿಯಿಂದ ಇನ್ನೂ ಹಲವಾರು ಲೇಖನಗಳು, ಪುಸ್ತಕಗಳೂ ಹೊರಬರಲಿ. ದೇವರು ಅವರಿಗೆ ಆಯಸ್ಸು, ಆರೋಗ್ಯ ಮತ್ತು ನೆಮ್ಮದಿಗಳನ್ನು ಸಮೃದ್ಧಿಯಾಗಿ ನೀಡಲಿ ಎಂದು ಹೃತ್ಪೂರ್ವಕವಾಗಿ ಹಾರೈಸುತ್ತೇನೆ.

**ಡಾ॥ ಸಿ. ಆರ್. ಚಂದ್ರಶೇಖರ್**
ಪ್ರಾಧ್ಯಾಪಕರು,
ಮನೋವೈದ್ಯ ವಿಭಾಗ,
**ನಿಮ್ಹಾನ್ಸ್, ಬೆಂಗಳೂರು -೨೯.**

ನವೆಂಬರ್ ೨೦೦೧

# ಅರಿಕೆ

ಇದೊಂದು ನನ್ನ ಜೀವನದ ಅನುಭವಗಳನ್ನು ದಾಖಲಿಸುವ ಪ್ರಯತ್ನ; ಆದರೆ 'ಆತ್ಮ ಚರಿತ್ರೆ' ಎಂಬ ವಿಶಾಲ ಅರ್ಥದಲ್ಲಲ್ಲ. ಅಂತಹದೊಂದನ್ನು ಬರೆಯುವಷ್ಟು ಶಕ್ತ ನಾನಲ್ಲ; ಆದರೂ ಈ ಅನುಭವಗಳನ್ನು ಬರೆಯುವಲ್ಲಿ ಕೆಲವು ಪ್ರೇರಣೆಗಳಿರುವುದರಿಂದ ಈ ಸಾಹಸಕ್ಕಿಳಿದಿರುವೆನೆಂದು ಹೇಳಬಯಸುತ್ತೇನೆ.

ಮಲೆನಾಡಿನ ಪುಟ್ಟ ಹಳ್ಳಿಯೊಂದರಲ್ಲಿ ಜನಿಸಿದ ನಾನು ಶೈಶಾವಸ್ಥೆಯಲ್ಲೇ ತಂದೆಯನ್ನು ಕಳೆದುಕೊಂಡು ಅನಾಥನಾದೆ; ಕೇವಲ ಅಕ್ಷರ ಕಲಿಕೆಯೇ ಅಸಾಧ್ಯವೆಂಬ ಸನ್ನಿವೇಶದಲ್ಲೇ ಸಹೃದಯ ಬಂಧುಬಾಂಧವರ ನೆರವಿನ ಫಲವಾಗಿ ವೈದ್ಯ ಪದವೀಧರನಾದೆ; ಶಸ್ತ್ರವೈದ್ಯ-ವಿದ್ಯಾ ಪಾರಂಗತನಾದೆ. ಇಂದಿಗೆ ಅರ್ಧ ಶತಮಾನದಷ್ಟು ಹಿಂದೆ ಸರ್ಕಾರಿ ವೈದ್ಯನಾಗಿ ನೆಲೆಯಾಗಲು ಅತೀವ ಶ್ರಮ ಪಡಬೇಕಾಯಿತು. ರೋಗಗ್ರಸ್ತರ ಚಿಕಿತ್ಸಾ ಕರ್ತವ್ಯಗಳ ಜೊತೆ ಜೊತೆಗೇ ಆಸ್ಪತ್ರೆಗಳ ಆಡಳಿತ ನಿರ್ವಹಣಾ ಜವಾಬ್ದಾರಿಗಳೂ ನನ್ನ ಹೆಗಲನ್ನೇರುತ್ತಿದ್ದವು. ಆಸ್ಪತ್ರೆಗಳ ಸ್ಥಿತಿಗತಿಗಳನ್ನು ಉತ್ತಮಪಡಿಸಲು ಹೆಣಗಾಡುವುದು ನನ್ನ ಜಾಯಮಾನವೋ ಎಂಬಂತಾಯಿತು; ಅಧಿಕಾರಾರೂಢರ ದಿವ್ಯ ನಿರ್ಲಕ್ಷ್ಯದಿಂದ ಸರ್ಕಾರಿ ವೈದ್ಯ ಸಮೂಹದವರ ಸೇವಾ ನಿಯಮಗಳ ಕುಂದುಕೊರತೆಗಳನ್ನು ಸುಧಾರಿಸುವ ಅನೇಕ ಕಾರ್ಯ ಚಟುವಟಿಕೆಗಳಲ್ಲೂ ನಾನು ಸಕ್ರಿಯವಾಗಿ ಭಾಗವಹಿಸುತ್ತಲೂ ಇದ್ದೆ. ಇವೆಲ್ಲದರ ಜೊತೆಯಲ್ಲಿ ಕಾಯಿಲೆ ಕಸಾಲೆಗಳ ಬಗೆಗೆ ಜನಸಾಮಾನ್ಯರಲ್ಲಿ ಜಾಗೃತಿಯುಂಟು ಮಾಡುವುದಕ್ಕಾಗಿ ಕನ್ನಡದಲ್ಲಿ ವೈದ್ಯಕೀಯ ಸಾಹಿತ್ಯ ರಚನೆಯಲ್ಲಿ ತೊಡಗಿಸಿಕೊಂಡಿರುತ್ತಿದ್ದೆ.

ಸುಮಾರು ನಾಲ್ಕು ದಶಕಗಳ ಕಾಲ ವೈದ್ಯಕೀಯ ವೃತ್ತಿಯಲ್ಲಿ ಕಾರ್ಯನಿರತನಾಗಿದ್ದೆ. ನಾನಾ ಬಗೆಯ ರೋಗಿಗಳು, ರೋಗ ಸಮಸ್ಯೆಗಳು, ಅಸಂಖ್ಯಾತ ರೋಚಕ ಹಾಗೂ ಮನ ಮಿಡಿಯುವ ಪ್ರಸಂಗಗಳು ಎದುರಾಗುತ್ತಿದ್ದವು. ಸಾವು - ಬದುಕಿನ ನಡುವೆ ತೊಳಲಾಡುತ್ತಿದ್ದವರನ್ನು ರಕ್ಷಿಸುವಾಗಿನ ಉದ್ವಿಗ್ನತೆಗಳು; ಅಸು ನೀಗುತ್ತಿರುವವರ ಅಂತಿಮ ಕ್ಷಣಗಳ ಅಸಹಾಯಕತೆ; ಸಾವಿನ ಚಿರ ನಿದ್ರಾ ಪರವಶತೆ ಆವರಿಸಿದಾಗಿನ ಬಂಧು-ಬಾಂಧವರ ನೋವು ನರಳಾಟದ ಪ್ರತ್ಯಕ್ಷದರ್ಶಿ ನಾನದೆಷ್ಟು ಸಾರಿ ಆಗಿರುತ್ತಿದ್ದೆನೋ! ಅವೆಲ್ಲಾ ಬದುಕಿನ ಅವಿಭಾಜ್ಯ ಅಂಗಗಳಾಗಿ, ಮರೆಯಲಾಗದ ನೆನಪುಗಳಾಗಿ ನನ್ನಲ್ಲುಳಿದುಕೊಂಡಿವೆ. ಅದೆಷ್ಟು ಅಪರೂಪದ ಹಾಗೂ ರೋಚಕ ಅನುಭವಗಳು, ವೈದ್ಯ-ನ್ಯಾಯಶಾಸ್ತ್ರದ ಪ್ರಕರಣಗಳು, ಆಡಳಿತಾತ್ಮಕ ಸಮಸ್ಯೆಗಳು ನನ್ನ ಮನದಾಳದಲ್ಲಿ ಮಡುಗಟ್ಟಿ ನಿಂತಿರಬಹುದೋ? ಅವುಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ದಾಖಲಿಸುವ ಪ್ರಯತ್ನ ಮಾಡಿದ್ದೇನೆ.

ಸರ್ಕಾರದ ಸೇವೆಯಲ್ಲಿದ್ದ ಸಮಯ ನನಗೆ ಹೂವಿನ ಹಾಸಿಗೆಯಾಗಿರಲಿಲ್ಲ. ಅನೇಕ ಅಹಿತಕರ ಸನ್ನಿವೇಶಗಳು ಬೆಂಬತ್ತಿ ಬರುತ್ತಿದ್ದು ಕಲ್ಲು ಮುಳ್ಳಿನ ಹಾದಿಯಲ್ಲಿ ನಾನು ಪಯಣಿಸುವಂತಾಗುತ್ತಿತ್ತು. ಒಂದು ಸಾರಿ ಪರಿಸ್ಥಿತಿ ವಿಕೋಪಕ್ಕೆ ಹೋಗಿ ಅತಿ ಪ್ರಯಾಸದಿಂದ ಗಳಿಸಿಕೊಂಡಿದ್ದ ಸರ್ಕಾರಿ ಹುದ್ದೆಗೇ ರಾಜೀನಾಮೆ ನೀಡುವಂತಾಗಿತ್ತು! ಸರ್ಕಾರದ ಕೆಲಸ ಪಡೆಯುವ ಎಲ್ಲಾ ಅರ್ಹತೆಗಳಿದ್ದರೂ ಆ ಕಾಲದ ಆಯ್ಕೆಯ ಅಸಮಂಜಸ ಪ್ರಕ್ರಿಯೆಯಿಂದಾಗಿ ಮೊದಲ

ಸಾರಿ ನಾನು ಆಯ್ಕೆ ಆಗಲೇ ಇಲ್ಲ; ಮುಂದಿನ ಸಲ ಆಯ್ಕೆಯಾದರೂ, ಆಯ್ಕೆಯಾದವರ ಶ್ರೇಣಿಯಲ್ಲಿ ಅತ್ಯಂತ ಕೆಳಮಟ್ಟದ ಸ್ಥಾನ ನನ್ನದಾಯಿತು. ಅದರಿಂದುಂಟಾದ 'ಸೇವಾ ಕಿರಿತನ'ದ ವರ್ಗೀಕರಣದಲ್ಲಿ ಕಾಯಂ ಆಗಿ ಸೇರಿ ಹೋದೆ! ಅದು ನನ್ನ ಸೇವಾ ಅವಧಿಯುದ್ದಕ್ಕೂ ಬೆಂಬಿಡದೆ ಸತಾಯಿಸಿತು. ಆದರೂ ನಿರಾಶನಾಗಲಿಲ್ಲ; ನಿರುತ್ಸಾಹಿಯಾಗಲಿಲ್ಲ. 'ಪಾಲಿಗೆ ಬಂದದ್ದು ಪರಮಾನ್ನ'ವೆಂದು ಆಸಕ್ತಿಯಿಂದ ಕಾರ್ಯನಿರತನಾದೆ; ಜನಸಾಮಾನ್ಯರ ಹಾಗೂ ಆಸ್ಪತ್ರೆಗಳ ಒಳಿತಿಗಾಗಿ ಪ್ರಾಮಾಣಿಕವಾಗಿ, ಶಕ್ತಿ ಮೀರಿ ಕಾರ್ಯ ನಿರ್ವಹಿಸಿದ ಸಂತೃಪ್ತಿ ನನಗಿದೆ.

ಈ ರೀತಿಯ ಅನುಭವಗಳನ್ನು ಬರೆಯುವುದನ್ನು ಕುರಿತು (ಅಕ್ಷರ ಮಟ್ಟಿಗೆ ಇದನ್ನೂ 'ಆತ್ಮಚರಿತ್ರೆ', ಎಂದುಕೊಳ್ಳಬಹುದೇನೋ!) ಪ್ರಖ್ಯಾತ ಸಾಹಿತಿಗಳಿಬ್ಬರ ಅಭಿಪ್ರಾಯಗಳ ಉಲ್ಲೇಖ ಪ್ರಸ್ತುತವೆನಿಸುತ್ತದೆ. ಇಂಗ್ಲಿಷ್ ಭಾಷೆಯ ಜನಪ್ರಿಯ ವೈದ್ಯ ಬರಹಗಾರ ಡಾ॥ ಜಾರ್ಜ್ ಸಾವ* (George Sava) "ಆತ್ಮ ವೃತ್ತಾಂತಗಳನ್ನು ಬರೆಯುವವರು ತಮ್ಮ ಕಾಲ ಮತ್ತು ಅಂದಿನ ಘಟನೆಗಳ ಬಗೆಗೆ ಸ್ವತಃ ಅವರೇ ತೀರ್ಪುಗಾರರೂ ಆಗಲಾರರು" ಎಂದಿದ್ದರೆ, ಮತ್ತೊಬ್ಬ ಹೆಸರಾಂತ ಸಾಹಿತಿ ಡಾ॥ ಸ್ಯಾಮ್ಯುಯೆಲ್ ಜಾನ್ಸನ್ "ಜೀವನ ಪರಿಚಯ ಒಂದು ಒಳ್ಳೆಯ ದಾಖಲೆಯಾಗಬೇಕಾದರೆ ಅದನ್ನು ಸಂಬಂಧಿಸಿದವರೇ ಬರೆಯುವುದು ಒಳಿತು" ಎಂದು ಹೇಳಿದ್ದಾರೆ. ಈ ಎರಡೂ ಹೇಳಿಕೆಗಳು ಪರಸ್ಪರ ವಿರೋಧಾಭಾಸಗಳಂತಿರುವುದಾದರೂ, ಅವುಗಳನ್ನು ಸಾರಾಸಗಟಾಗಿ ಅಲ್ಲಗಳೆಯುವಂತೆಯೂ ಇಲ್ಲ. ಅವೆರಡು ಅಭಿಪ್ರಾಯಗಳ ಇತಿಮಿತಿಯಲ್ಲೇ ನನ್ನ ಅನುಭವಗಳನ್ನು ಪ್ರಾಮಾಣಿಕವಾಗಿ ತೆರೆದಿಡುವ ಪ್ರಯತ್ನವನ್ನು ಮಾಡಿದ್ದೇನೆಂದು ಹೇಳಬಯಸುತ್ತೇನೆ. ಅವುಗಳ ಸತ್ಯಾಸತ್ಯತೆ ಹಾಗೂ ವಿಶ್ವಾಸಾರ್ಹತೆಗಳನ್ನು ಸಹೃದಯ ಓದುಗರ ವಿವೇಚನೆಗೆ ಬಿಡುತ್ತೇನೆ. ಇಲ್ಲಿ ತೆರೆದಿಟ್ಟ ಅನುಭವಗಳು/ಘಟನೆಗಳು ಜನಸಾಮಾನ್ಯರ ಸ್ವಾಸ್ಥ್ಯ ಸಮಸ್ಯೆಗಳ ಬಗೆಗೆ ಆಸಕ್ತಿ ಹೊಂದಿರುವ ಕೆಲವರಾದರೂ ಮರುಚಿಂತನೆ ಮಾಡುವುದಕ್ಕೆ ಪ್ರಚೋದನೆ ನೀಡುವಂತಾದರೆ ನನ್ನ ಈ ಪ್ರಯತ್ನ ಸಾರ್ಥಕವೆಂದು ಭಾವಿಸುತ್ತೇನೆ.

ಈ ಬರವಣಿಗೆಯಲ್ಲಿ ನನ್ನ ಅನೇಕ ಸಂಬಂಧಿಗಳು, ಒಡನಾಡಿಗಳು, ಸಹೋದ್ಯೋಗಿಗಳು, ಅಧಿಕಾರಿ ವರ್ಗದವರು ಮತ್ತು ರೋಗಿಗಳ ಪರಸ್ಪರ ವರ್ತನೆಗಳ ಬಗೆಗೆ ಸಾಧ್ಯವಾದಷ್ಟು ಯಥಾವತ್ತಾಗಿ ದಾಖಲಿಸುವ ಪ್ರಯತ್ನ ಮಾಡಿರುವೆ. ಈ ರೀತಿಯ ಅನುಭವ ಕಥನಗಳಲ್ಲಿ ಅಂತಹ ಪ್ರಸ್ತಾಪಗಳು ಬರುವುದು ಅನಿವಾರ್ಯವೆಂಬುದನ್ನು ಸಂಬಂಧಿಸಿದವರು ಗ್ರಹಿಸುತ್ತಾರೆಂದು ಭಾವಿಸುತ್ತೇನೆ. ಆ ರೀತಿಯ ಪ್ರಸ್ತಾಪ/ಘಟನೆಗಳನ್ನು ಯಾರ ಮನಸ್ಸನ್ನೂ ನೋಯಿಸುವ ಇರಾದೆಯಿಂದ ಮಾಡಿಲ್ಲವೆಂದು ವಿನಮ್ರತೆಯಿಂದ ನಿವೇದಿಸುತ್ತೇನೆ. ಆದರೂ ಯಾರಿಗಾದರೂ ಅಸಮಾಧಾನ ಇಲ್ಲವೆ ಇರಿಸು-ಮುರುಸಾದರೆ ಅವರ ಕ್ಷಮೆ ಯಾಚಿಸುತ್ತೇನೆ.

ಯಾವನೇ ಒಬ್ಬ ವ್ಯಕ್ತಿಯ ಜೀವನ ವಿಧಾನ ವಿಕಾಸವಾಗುವಲ್ಲಿ ಹಲವಾರು ಮನಸ್ಸು-ಹೃದಯ ಹಾಗೂ ಹಸ್ತಗಳು ಪ್ರತ್ಯಕ್ಷ ಇಲ್ಲವೆ ಪರೋಕ್ಷವಾಗಿ ಕಾರ್ಯವೆಸಗಿ ಪ್ರಭಾವ ಬೀರುವುದು ಸರ್ವೇಸಾಮಾನ್ಯ. ಯಾವುದೇ ಆಕಾರವಿರದ ಕಲ್ಲಿನಿಂದ ಕಣ್ಮನ ಸೆಳೆಯುವ ಸುಂದರ, ದೈವೀಸ್ವರೂಪದ ಮೂರ್ತಿಯನ್ನು ಕೆತ್ತನೆ ಮಾಡುವಲ್ಲಿ ಉಳಿ, ಚಾಣ, ಸುತ್ತಿಗೆಗಳು ನೆರವಾಗುವಂತೆ ನನ್ನ ಜೀವನ ವಿಧಾನವನ್ನು ರೂಪಿಸುವಲ್ಲಿ ಹಲವಾರು ಜನ ಪಾತ್ರ

*THE HEALING KNIFE ಹಾಗೂ THE KNIFE HEALS AGAIN ಎಂಬ ವೃತ್ತಿ ಅನುಭವದ ಎರಡು ಜನಪ್ರಿಯ ಕೃತಿಗಳ ಲೇಖಕ.

ವಹಿಸಿದ್ದಾರೆಂದರೆ ಅತಿಶಯೋಕ್ತಿಯಲ್ಲ. ಅವರೆಲ್ಲರಿಗೂ ಸದಾ ಕೃತಜ್ಞನಾಗಿರುವುದು ನನ್ನ ಆದ್ಯ ಕರ್ತವ್ಯವೆಂದು ಪರಿಗಣಿಸುತ್ತೇನೆ. ಅಂತಹ ಎಲ್ಲರನ್ನೂ ಇಲ್ಲಿ ಹೆಸರಿಸಲಾಗದಿದ್ದರೂ ಕೆಲವರನ್ನಾದರೂ ಈ ಸಂದರ್ಭದಲ್ಲಿ ಸ್ಮರಿಸದಿರಲಾರೆ.

ಅವಿಭಾಜ್ಯ ಕುಟುಂಬದ ಅನಾಥ ಶಿಶುವಾದ ನನ್ನನ್ನು ಅಕ್ಕರೆಯಿಂದ ಸಾಕಿ, ಸಲಹಿ, ವಿದ್ಯೆ ಕಲಿಸುವಲ್ಲಿ ನೆರವಾದ ನನ್ನ ಕುಟುಂಬದ ಎಲ್ಲಾ ಸದಸ್ಯರ ಪ್ರೀತಿ, ವಾತ್ಸಲ್ಯ ಮತ್ತು ತ್ಯಾಗ ಗಳನ್ನು ಮರೆಯಲಾರೆ. ಅವರೆಲ್ಲರಿಗೂ ಚಿರಋಣಿಯಾಗಿರುವೆ. ವೈದ್ಯ ಪದವೀಧರನಾಗುವ ಅವಕಾಶ ಒದಗಿ ಬಂದು ಆರ್ಥಿಕ ತೊಂದರೆಯಿಂದಾಗಿ ಅದು ಕೈ ತಪ್ಪುವ ಸಂದರ್ಭ ಉಂಟಾದಾಗ ತಮ್ಮ ಪಾಲಿನ ಆಸ್ತಿಯನ್ನಾದರೂ ಮಾರಾಟ ಮಾಡಲು ಮುಂದಾದ ಚಿಕ್ಕಪ್ಪ ಸಣ್ಣ ಶಿದ್ದಪ್ಪಗೌಡರು ಮುಂದಿನ ಆರು ತಿಂಗಳಲ್ಲೇ ಅಕಾಲ ಸಾವಿಗೀಡಾದುದು ನನ್ನನ್ನು ಸದಾ ಬಾಧಿಸುತ್ತಿದೆ. ಅವರಿಗೆ ನನ್ನ ಅಶ್ರು ನಮನಗಳು.

ವಿದ್ಯಾಭ್ಯಾಸದ ಮೊದಲ ಎಂಟು ವರ್ಷಗಳ ಕಾಲ ತಮ್ಮ ಮನೆಯಲ್ಲಿರಿಸಿಕೊಂಡು, ಸಲಹಿ ನನ್ನ ಮುಂದಿನ ಅಭ್ಯುದಯಕ್ಕೆ ಬುನಾದಿ ಹಾಕಿದ ಮೇಗರವಳ್ಳಿ ಸಂ. ಲಿಂಗಪ್ಪ ಹೆಗ್ಗಡೆ ಯವರು ಮತ್ತು ಅವರ ಕುಟುಂಬದವರಿಗೆ ನಾನೆಷ್ಟು ಋಣಿಯಾಗಿದ್ದರೂ ಸಾಲದು.

ಅನಂತರದ ದಿನಗಳಲ್ಲಿ ಉಂಟಾಗುತ್ತಿದ್ದ ಅಡೆತಡೆಗಳನ್ನು ನಿವಾರಿಸುವಲ್ಲಿ ಸಂಬಂಧಿ ಗಳಾದ ಮೂಡುವಳ್ಳಿ ಮಂಜಪ್ಪ ಹೆಗ್ಗಡೆಯವರು ಮತ್ತು ಬೈಸೆ ತಮ್ಮಯ್ಯಗೌಡರ ಸಹಾಯ ಸಹಕಾರಗಳನ್ನು ಸ್ಮರಿಸುತ್ತೇನೆ.

ವಿದ್ಯಾಭ್ಯಾಸಕ್ಕಾಗಿ ಶಿವಮೊಗ್ಗೆಗೆ ಬಂದ ನಂತರ ತೊಂದರೆಗಳು ಎದುರಾದಾಗ ಸಹಾಯ ಹಸ್ತ ನೀಡಿ ಪ್ರೋತ್ಸಾಹಿಸುತ್ತಿದ್ದ ಎಂ.ಬಿ. ಮಂಜಪ್ಪ ನಾಯಕರು ಹಾಗೂ ಅವರ ಪತ್ನಿ ಸುಬ್ಬಮ್ಮ ನವರಿಗೆ ನನ್ನ ಕೃತಜ್ಞತೆಗಳು.

ಮುಂದೆ ವಿದ್ಯಾಭ್ಯಾಸಕ್ಕೆ ಸಹಾಯ ಮಾಡಿ, ನಮ್ಮ ಸಂಸಾರದ ಆಗು-ಹೋಗುಗಳನ್ನು ನಿರ್ವಹಿಸುತ್ತಿದ್ದ ಮಾವ - ಅತ್ತೆಯವರಾದ ಮೇಗರವಳ್ಳಿ ಆರ್. ಅಪ್ಪಣ್ಣ ಹೆಗ್ಗಡೆ ಮತ್ತು ನಾಗಮ್ಮ ನವರ ಕುಟುಂಬದವರ ಸಹಾಯ-ಸಹಕಾರಗಳನ್ನು ಕೃತಜ್ಞತೆಯಿಂದ ಸ್ಮರಿಸುತ್ತೇನೆ.

ನನ್ನ ಸರ್ಕಾರೀ ಸೇವಾ ಅವಧಿಯಲ್ಲಿ ಉದ್ಭವಿಸುತ್ತಿದ್ದ ಸಮಸ್ಯೆಗಳ ಪರಿಹಾರಕ್ಕೆ ನೆರವಾಗುತ್ತಿದ್ದ ಕೊಳವಾರದ ಕೆ. ಟಿ. ಕೃಷ್ಣಪ್ಪನವರಿಗೆ ಹಾರ್ದಿಕ ಕೃತಜ್ಞತೆಗಳು.

ಇಂತಹ ನೆನವರಿಕೆಯೊಂದನ್ನು ಬರೆಯುವ ಹಂಬಲ ನನ್ನಲ್ಲಿ ಬಹಳ ಕಾಲದಿಂದಿತ್ತು; ಆ ದಿಸೆಯಲ್ಲಿ ತಯಾರಿಸುತ್ತಿದ್ದ ಕರಡು ಪ್ರತಿಗಳನ್ನು ಆಗಾಗ್ಗೆ ಪರಾಮರ್ಶಿಸಿ ಪ್ರಕಟಣೆಗೆ ಒತ್ತಾಯ ಮಾಡುತ್ತಿದ್ದ ಶಿವಮೊಗ್ಗೆಯ ಪ್ರೊ|| ಎನ್. ಶ್ರೀನಿವಾಸ ಉಡುಪ ಹಾಗೂ ತೀರ್ಥಹಳ್ಳಿಯ ಪ್ರೊ: ಜೆ. ಕೆ. ರಮೇಶ್ ಇಬ್ಬರಿಗೂ ತುಂಬಾ ಆಭಾರಿಯಾಗಿರುವೆ.

ಹಸ್ತಪ್ರತಿಯನ್ನು ಆಮೂಲಾಗ್ರವಾಗಿ ಪರಿಶೀಲಿಸಿ ವೈದ್ಯಕೀಯ ಹಾಗೂ ಸಾಹಿತ್ಯಿಕ ಮೌಲ್ಯಗಳ ಪ್ರಸಕ್ತತೆ ಬಗೆಗೆ ಹಲವು ಸಲಹೆ ಸೂಚನೆಗಳನ್ನಿತ್ತು, ಅರ್ಥಪೂರ್ಣವಾದ ಮುನ್ನುಡಿಯನ್ನು ಬರೆದುಕೊಟ್ಟ ಖ್ಯಾತ ವೈದ್ಯ ಸಾಹಿತಿ ಹಾಗೂ ಮನೋರೋಗ ತಜ್ಞ ಡಾ|| ಸಿ. ಆರ್. ಚಂದ್ರಶೇಖರ್ ಅವರಿಗೆ ತುಂಬಾ ಕೃತಜ್ಞನಾಗಿರುವೆ.

ಸುಮಾರು ಮೂರು ದಶಕಗಳ ಹಿಂದೆ ಬಿಳಿಗಿರಿ ರಂಗನಬೆಟ್ಟದಲ್ಲಿ ವಿವೇಕಾನಂದ ಗಿರಿಜನ ಕಲ್ಯಾಣ ಕೇಂದ್ರವನ್ನು ಸ್ಥಾಪಿಸಿ ಗಿರಿಜನ ಸಮೂಹದವರ ಸ್ವಾಸ್ಥ್ಯ ಸಮಸ್ಯೆಗಳೇ ಅಲ್ಲದೆ ಅವರ ಸರ್ವತೋಮುಖ ಏಳಿಗೆಗೆ ತಮ್ಮ ಜೀವಮಾನವನ್ನೇ ಮುಡಿಪಾಗಿಟ್ಟು ಸಮರ್ಪಣಾ

ಭಾವದಿಂದ ನಿಸ್ವಾರ್ಥ ಸೇವೆಯಲ್ಲಿ ತೊಡಗಿರುವ ಡಾ|| ಎಚ್. ಸುದರ್ಶನ್ (ಪ್ರಸ್ತುತ ಕರ್ನಾಟಕ ಆರೋಗ್ಯ ಸೇವಾ ವ್ಯವಸ್ಥೆಯ ಟಾಸ್ಕ್ ಫೋರ್ಸ್‌ನ ಅಧ್ಯಕ್ಷರು) ಈ ಕೃತಿಯನ್ನು ಪರಾಮರ್ಶಿಸಿ 'ಹಿನ್ನುಡಿ'ಯಾಗಿ ಪ್ರಶಂಸೆಯ ಮಾತುಗಳನ್ನು ಬರೆದುಕೊಟ್ಟಿದ್ದಾರೆ. ಎಡೆಬಿಡದೆ ಕಾರ್ಯ ಪ್ರವೃತ್ತರಾದರೂ ನಡುವೆ ಕೃತಿಯನ್ನು ಓದಿ ಹಿನ್ನುಡಿ ಬರೆದು ಕೊಡಲು ಸಾಧ್ಯ ಮಾಡಿಕೊಂಡುದಕ್ಕಾಗಿ ಅವರಿಗೆ ತುಂಬಾ ಆಭಾರಿಯಾಗಿರುವೆ.

ಈ ಕೃತಿಯನ್ನು ವಿವರವಾಗಿ ಪರಿಶೀಲಿಸಿ ಆಡಳಿತಾತ್ಮಕ ಹಾಗೂ ಕಾನೂನು ವಿಷಯಗಳ ಬಗೆಗೆ ಸೂಕ್ತ ಸಲಹೆಗಳನ್ನು ನೀಡಿದ ಶಿವಮೊಗ್ಗಾದ ಖ್ಯಾತ ವಕೀಲರೂ ಮತ್ತು ಸಾಹಿತ್ಯಾಸಕ್ತರಾದ ಶ್ರೀ ಡಿ. ಪಿ. ಒಡೆಯರ್ ಅವರಿಗೆ ತುಂಬಾ ಆಭಾರಿಯಾಗಿದ್ದೇನೆ.

ಹಸ್ತಪ್ರತಿಯು ಅಂತಿಮವಾಗಿ ಅಚ್ಚಿನ ಮನೆಗೆ ಹೋಗುವ ಮುನ್ನ, ಸಮಗ್ರವಾಗಿ ಪರಿಶೀಲಿಸಿ ಅಳಿದುಳಿದ ಓರೆಕೋರೆಗಳನ್ನು ಸರಿಪಡಿಸಲು ನೆರವಾದ, ಹಿಂದೆ ಸೋವಿಯೆಟ್ ರಷ್ಯಾದ ಸಾಹಿತ್ಯಿಕ ಪ್ರಕಟಣೆಗಳ ಕನ್ನಡ ಅನುವಾದಕರಾಗಿದ್ದ ಶ್ರೀ ಕೆ. ಎಲ್. ಗೋಪಾಲ ಕೃಷ್ಣರಾವ್ ಅವರಿಗೆ ನನ್ನ ಆಭಾರ ಮನ್ನಣೆಗಳನ್ನು ಸಲ್ಲಿಸುತ್ತೇನೆ.

ಹಿಂದಿನಿಂದಲೂ ನನ್ನ ಮೇಲಿರಿಸಿಕೊಂಡಿರುವ ವಿಶ್ವಾಸ, ಆದರಗಳ ಸಂಕೇತದ ದ್ಯೋತಕವೆಂಬಂತೆ ಈ ಕೃತಿಯನ್ನು ಅತ್ಯಂತ ಕಡಿಮೆ ಸಮಯದಲ್ಲಿ ಸುಂದರವಾಗಿ ಮುದ್ರಿಸಿ ಪ್ರಕಟಿಸಲು ನೆರವಾದ ಶಿವಮೊಗ್ಗಾದ ಪ್ರಗತಿ ಪ್ರಿಂಟರ್ಸ್‌ನ ಮಾಲೀಕರಾದ ಶ್ರೀ ಎಸ್. ನಾರಾಯಣರಾಯರು ಮತ್ತು ಅವರು ಸಿಬ್ಬಂದಿ ವರ್ಗದವರಿಗೆ ನನ್ನ ಹಾರ್ದಿಕ ಕೃತಜ್ಞತೆಗಳು ಸಲ್ಲುತ್ತವೆ.

೨೬-೦೯-೨೦೦೨ **ಎಚ್. ಡಿ. ಚಂದ್ರಪ್ಪಗೌಡ**
೬೪ ಮಿಷನ್ ಕಾಂಪೌಂಡ್
ಶಿವಮೊಗ್ಗ - ೫೭೭ ೨೦೧.



ಬಾಲ್ಯದ ವಿದ್ಯಾಭ್ಯಾಸಕ್ಕೆ ಆಸರೆ ನೀಡಿದ
ಮೇಗರವಳ್ಳಿ ಲಿಂಗಪ್ಪ ಹೆಗ್ಗಡೆಯವರು

# ೧. ಊರು ಮನೆ

ಶಿವಮೊಗ್ಗ ಜಿಲ್ಲೆಯ ಹೊಸನಗರ ತಾಲ್ಲೂಕಿನಲ್ಲಿ **ನಗರ** ಎಂಬ ಹೋಬಳಿ ಕೇಂದ್ರದ ಪುಟ್ಟ ಊರೊಂದಿದೆ. ಅದೇ ಇತಿಹಾಸ ಪ್ರಸಿದ್ಧ **ಬಿದನೂರು.** ಶಿಸ್ತುಗಾರನೆಂದು ಹೆಸರು ಗಳಿಸಿದ್ದ ಶಿವಪ್ಪ ನಾಯಕನ ವಂಶಸ್ಥರು ಕಾರಣಾಂತರದಿಂದ ೧೬೩೯ರಲ್ಲಿ **ಇಕ್ಕೇರಿ**ಯಿಂದ ತಮ್ಮ ರಾಜಧಾನಿಯನ್ನು ಬಿದನೂರಿಗೆ ಬದಲಾಯಿಸಬೇಕಾಯಿತು. ಬಿದನೂರನ್ನು ಮುಂದೆ ವಶಪಡಿಸಿಕೊಂಡ ಹೈದರಾಲಿಯು ಅದರ ಹೆಸರನ್ನು **ನಗರ** ಎಂದು ಬದಲಾಯಿಸಿದ. ನಗರ ಸಂಸ್ಥಾನ ಮುಂದೆ ಕೆಲಕಾಲ ವ್ಯಾಪಕವಾಗಿ ವಿಸ್ತರಿಸಿ ಪ್ರಸಿದ್ಧಿ ಪಡೆದ ನಾಡಾಗಿ ವಿಜೃಂಭಿಸಿತ್ತು. ಆದರೆ ಆನಂತರದ ಸ್ಥಿತ್ಯಂತರಗಳಿಂದ ಅದು ತನ್ನ ವೈಭವವನ್ನು ಕಳೆದುಕೊಂಡು ಪ್ರಸ್ತುತ ಕುಗ್ರಾಮದಂತಾಗಿದೆ. ಕಳೆದ ಶತಮಾನದಲ್ಲಿ ಈ ಪ್ರದೇಶದಲ್ಲಿ ನಿರ್ಮಿತವಾದ ಶರಾವತಿ, ವರಾಹಿ ಮುಂತಾದ ಜಲವಿದ್ಯುತ್ ಯೋಜನೆಗಳ ದೆಸೆಯಿಂದಾಗಿ ಈ ವಲಯದ ಅಪಾರ ಭೂಪ್ರದೇಶ, ಅರಣ್ಯ ಸಂಪತ್ತುಗಳೆಲ್ಲಾ ಮುಳುಗಡೆಯಾದವು. ದ್ವೀಪ ಸದೃಶವಾದ ಕೆಲವು ಭೂಭಾಗಗಳು ಪಳೆಯುಳಿಕೆಯಂತೆ ಉಳಿದು ಕೊಂಡಿವೆ.

ವರಾಹಿ ಯೋಜನೆಯಲ್ಲಿ ಜಲಾವೃತವಾಗಿ ಮುಳುಗಿ ಹೋಗಿರುವ ಒಂದು ಪುಟ್ಟ ಹಳ್ಳಿ **ಹೊಳೆಗದ್ದೆ,** ನನ್ನೂರಾಗಿತ್ತು. ಶಿವಮೊಗ್ಗಾದಿಂದ ಕುಂದಾಪುರಕ್ಕೆ ಸಾಗುವ ರಸ್ತೆಯಲ್ಲಿ **ಯಡೂರು** ಯೆಂಬ ಗ್ರಾಮವಿದೆ. ಅಲ್ಲಿಂದ ಎಡಗಡೆ ಗುಡ್ಡಬೆಟ್ಟ, ಗದ್ದೆಕೋಗುಗಳ ಕಾಲುದಾರಿಯಲ್ಲಿ ಸಾಗಿದರೆ ನಮ್ಮೂರು ಸಿಗುತ್ತದೆ. ಮನೆ ಹತ್ತಿರವೇ ಇರುವ ಪುಟ್ಟ ಹೊಳೆಯನ್ನು ದಾಟಿ ಒಂದೆರಡು ಗದ್ದೆಗಳ ಮೂಲಕ ನಡೆದರೆ ನಮ್ಮ ಮನೆ ಎದುರಾಗುತ್ತದೆ. ಹೊಳೆ ಮತ್ತು ಗದ್ದೆಗಳು ಅಕ್ಕಪಕ್ಕದಲ್ಲೇ ಇರುವುದರಿಂದಲೇನೋ '**ಹೊಳೆಗದ್ದೆ**' ಎಂಬ ಅನ್ವರ್ಥ ನಮ್ಮೂರಿಗೆ ಬಂದಿರಬಹುದು.

ಮಳೆಗಾಲದಲ್ಲಿ ತುಂಬಿ ಭೋರ್ಗರೆವ ನಮ್ಮ ಹೊಳೆ ಬೇಸಿಗೆಯಲ್ಲಿ ಬಹುಪಾಲು ಬತ್ತಿ ಹೋಗಿರುತ್ತದೆ. ಮಳೆಗಾಲವಿಡೀ ನಮ್ಮನ್ನು ಇತರ ಊರುಗಳಿಂದ ಬೇರ್ಪಡಿಸುತ್ತಿದ್ದ ಪರಿಸ್ಥಿತಿಯನ್ನು ನಿವಾರಿಸಲು ಕಡಿದಾಳು ಮಂಜಪ್ಪನವರು ಮಂತ್ರಿಗಳಾಗಿದ್ದಾಗ ಕಾಲು-ಸೇತುವೆ ನಿರ್ಮಾಣ ಮಾಡಿಸಿ ಆ ಭಾಗದ ಜನರಿಗೆಲ್ಲಾ ಅನುಕೂಲವಾಗುವಂತೆ ಮಾಡಿದರು.

ಇದಿಷ್ಟು ನಮ್ಮ ಪ್ರದೇಶದ ಸಂಕ್ಷಿಪ್ತ ಇತಿಹಾಸ. ಬಾಲ್ಯದಿಂದಲೂ ನನಗೆ ನೆನಪಿರುವಂತೆ ಅಲ್ಲಿ ಮೂರು ಮನೆಗಳು ಇದ್ದವು. ಕಾಲಾಂತರದಲ್ಲಿ ನಮ್ಮ ದಾಯಾದಿಗಳಿಬ್ಬರ ಕುಟುಂಬಗಳಲ್ಲಿ ಗಂಡು ಸಂತಾನಗಳಿರಲಿಲ್ಲವಾಗಿ ಎರಡು ಮನೆಗಳು ಇಲ್ಲವಾದವು. ಮಲೆನಾಡಿನ ವೈಶಿಷ್ಟ್ಯವಾದ 'ಊರೆಂದರೊಂದೇ ಮನೆ' ಯೆಂಬಂತೆ ಮುಂದೆ ನಮ್ಮದೊಂದೇ 'ಹಳೇಮನೆ' ಉಳಿದು ಕೊಂಡಿದ್ದು. ಹಾಗಿದ್ದರೂ ನಮ್ಮ ಜಮೀನು ಕೆಲಸ ಕಾರ್ಯಗಳಿಗೆ ನೆರವಾಗುತ್ತಿದ್ದ ಕೆಲವು ಕಾಯಂ ಇಲ್ಲವೆ ಹಂಗಾಮಿ ಕಾರ್ಮಿಕರ ಸಣ್ಣ ಪುಟ್ಟ ಮನೆ, ಗುಡಿಸಲುಗಳು ನಮ್ಮ ಮನೆಯಿಂದ ಸ್ವಲ್ಪ ದೂರದಲ್ಲಿರುತ್ತಿದ್ದವು. ಇವಲ್ಲದೆ ನಮ್ಮ ಗದ್ದೆ ಕೋಗಿನ ಆಚೆ ಕಡೆ ಅಡಿಕೆ ತೋಟದ ಹತ್ತಿರ ಒಂದು ಪುಟ್ಟ ದೇವಸ್ಥಾನವೂ ಇತ್ತು. 'ಚಿಕ್ಕಮ್ಮ ದೇವಿ' ಎಂದು ಕರೆಯಲಾಗುತ್ತಿದ್ದ ಆ ದೇವಸ್ಥಾನ ಸುತ್ತಮುತ್ತಲ ಹಳ್ಳಿಯವರ ಆರಾಧನಾ ಆಲಯವಾಗಿ ಹೆಸರು ಗಳಿಸಿತ್ತು. ದೇವಸ್ಥಾನದ ಪೂಜಾರಿ

'ಗಣಮಗ' ಬಚ್ಚ ತುಂಬಾ ಸಾತ್ವಿಕ ಗುಣದ ವ್ಯಕ್ತಿಯೆಂಬ ಖ್ಯಾತಿ ಗಳಿಸಿದ್ದ. ಬಾಲ್ಯದಲ್ಲಿ ನಾನು ನೋಡುವಾಗಲೇ ಮುದುಕನಾಗಿದ್ದರೂ ಚಟುವಟಿಕೆಯ ಬುಗ್ಗೆಯಂತಿದ್ದ. ಪ್ರತಿ ಶನಿವಾರ ಸಾಯಂಕಾಲ ದೇವಸ್ಥಾನದಲ್ಲಿ ಅವನ ಮೇಲೆ 'ಗಣ' ಬರುತ್ತಿತ್ತು. ಅದಲ್ಲದೆ 'ನಿಮಿತ್ತ' ನೋಡು ವುದರಿಂದಲೂ, ಅಲ್ಲಿಯ ಮೂಢ ನಂಬಿಕೆಯ ಮುಗ್ಧ ಜನರ ಸಮಸ್ಯೆಗಳಿಗೆ ಸಮರ್ಪಕ ವೆನ್ನಬಹುದಾದ ಪರಿಹಾರ ಒದಗಿಸುತ್ತಿದ್ದುದರಿಂದಲೂ ಜನಪ್ರಿಯತೆ ಗಳಿಸಿದ್ದ. ನಮ್ಮದೇ ಸ್ವಲ್ಪ ಜಮೀನನ್ನು ಗೇಣಿಗಾಗಿ ಕೃಷಿ ಮಾಡುತ್ತಿದ್ದು ಅಲ್ಲಿಯ ಆಜುಬಾಜಿನಲ್ಲಿ ಆದರ್ಶ ಬೇಸಾಯ ಗಾರನೆಂದೂ ಹೆಸರು ಗಳಿಸಿದ್ದ. ಬಾಲ್ಯದ ದಿನಗಳಲ್ಲಿ ನಾನೂ ಸಹ ಬಚ್ಚನ ಬಗೆಗೂ ಮತ್ತು ಅಲ್ಲಿಯ ದೇವಸ್ಥಾನದ ಬಗೆಗೆ ಭಕ್ತಿಭಾವದಿಂದ ನಡೆದುಕೊಳ್ಳುತ್ತಿದ್ದೆ. ದಕ್ಷಿಣ ಕನ್ನಡ ಜಿಲ್ಲೆಯ ಮೂಲದವನಾದ ಬಚ್ಚನ ಮನೆ ಸುತ್ತ ನಮ್ಮ ಕೆಲಸ ಕಾರ್ಯಗಳಿಗೆ ಆಳುಗಳನ್ನು ಕರೆದು ತರುತ್ತಿದ್ದ ಕೆಲವು ಸೇರೇಗಾರರು ಸಹಾ ಗುಡಿಸಲುಗಳನ್ನು ಕಟ್ಟಿಕೊಂಡಿದ್ದರು. ಮುಂದೆ ಅಲ್ಲಿ ಕೆಲವು ಅಂಗಡಿ ಮುಂಗಟ್ಟು, ಹೋಟೆಲು ಸಹ ತಲೆ ಎತ್ತಿದುದು ಅಪರೂಪವೇನಲ್ಲ. ಅದೊಂದು ನಮ್ಮ ಊರಿನ ಪೇಟೆ ಬಡಾವಣೆಯಾಗಿ ಬಿಟ್ಟಿತ್ತು!

ಹೊಳೆಗದ್ದೆಯವರ ಮನೆತನ ಎಷ್ಟು ಕಾಲದಿಂದ ಅಲ್ಲಿ ನೆಲಸಿತ್ತು ಎಂಬುದರ ಬಗೆಗೆ ಪುರಾವೆಗಳು ಲಭ್ಯವಿಲ್ಲ. ಅಲ್ಲಿ ಸದಾ ಹರಿಯುತ್ತಿದ್ದ ಹೊಳೆ, ಗದ್ದೆ ತೋಟಗಳ ಕೃಷಿ ಮಾಡಲು ಅನುಕೂಲದ ಪರಿಸರಗಳ ಆಕರ್ಷಣೆಯಿಂದ ನೂರಾರು ವರ್ಷಗಳ ಹಿಂದೆ ನಮ್ಮ ಪೂರ್ವಿಕರು ಅಲ್ಲಿ ನೆಲಸಿರಬೇಕು. ಹಾಗೆ ನೋಡಿದರೆ ನಮ್ಮ ಜಮೀನು ಅಲ್ಲಿ ಆಜುಬಾಜು ಇದ್ದ ಊರುಗಳ ಜಮೀನುಗಳಿಗಿಂತ ತುಂಬಾ ಉತ್ಕೃಷ್ಟವಾದುದೆಂದು ಹೆಸರುವಾಸಿಯಾದ ಐತಿಹ್ಯವೇ ಇದೆ. ನಮ್ಮ ಗದ್ದೆಗಳಲ್ಲಿ ಬೆಳೆಯುತ್ತಿದ್ದ ಭತ್ತದ ಸಸಿಗಳ ಕಾಂಡ ಸಾಮಾನ್ಯ ಬಿದಿರಿನ ಕಾಂಡದಷ್ಟು ಗಾತ್ರದಲ್ಲಿ ಹಿರಿದಾಗಿರುತ್ತಿದ್ದುವಂತೆ. ಅಂತಹ ಒಂದು ಕಾಂಡದಲ್ಲಿ ಒಂದು ಸೇರಿನಷ್ಟು ತುಪ್ಪವನ್ನು ತುಂಬಿ ತಾಲ್ಲೂಕಿನ ದಣಿಯೆನಿಸಿದ ಅಮಲ್ದಾರರಿಗೆ ನಮ್ಮ ಹಿರಿಯರೊಬ್ಬರು ಗೌರವಾರ್ಥವಾಗಿ ಒಂದು ಸಾರಿ ಕೊಟ್ಟರಂತೆ. ಅವರಿಗೆ ಅದೇನು ಸಂತಸವಾಯಿತೋ, ಅಸಮಾಧಾನವಾಯಿತೋ ತಿಳಿಯದು. ಅಂದಿನಿಂದ ನಮ್ಮ ಜಮೀನಿನ ಕಂದಾಯವನ್ನು ಏರಿಸಿ ಬಿಟ್ಟರಂತೆ! ಮುಂದೆ ನಮ್ಮ ಊರು ಮನೆಗಳೆಲ್ಲಾ ಮುಳುಗಡೆಯಾಗುವ ಸಂದರ್ಭದಲ್ಲಿ ನಮ್ಮ ಜಮೀನಿನ ಬಗೆಗೆ ಆಜುಬಾಜಿ ನವರು ಮರುಕ ವ್ಯಕ್ತಪಡಿಸುತ್ತಿದ್ದುದನ್ನು ಕೇಳಿದ್ದೆ.

ಅಷ್ಟೇನೂ ಶ್ರೀಮಂತರೂ ಅಲ್ಲದ, ಅಥವಾ ಬಡವರೂ ಆಗಿರದ ಮಲೆನಾಡಿನ ಒಕ್ಕಲಿಗರ ಕುಟುಂಬ ನಮ್ಮದು. ಸುಮಾರು ೪೦-೪೫ ಜನರಿರುತ್ತಿದ್ದ ದೊಡ್ಡ ಅವಿಭಕ್ತ ಕುಟುಂಬ; ಆಗಿನ ಕಾಲದಲ್ಲಿ ಸುಮಾರು ೫೦-೬೦ ಎಕರೆಗಳಷ್ಟು ಜಮೀನು ಸಹಾ ಇತ್ತು. ಅಂತಹ ಒಂದು ಹಿರಿದಾದ ಕುಟುಂಬ ವ್ಯವಸ್ಥೆ ಇರುವುದು ಈಗ ತೀರ ಅಪರೂಪವೇ ಸರಿ. ಆದರೂ ಕುಟುಂಬದ ಸದಸ್ಯರೆಲ್ಲರ ಪ್ರೀತಿ ವಿಶ್ವಾಸ ಸಹಕಾರಗಳಿಂದ ಕುಟುಂಬದ ನಿರ್ವಹಣೆ ಮತ್ತು ಜಮೀನಿನ ಕೆಲಸ ಕಾರ್ಯಗಳು ಸುಸೂತ್ರವಾಗಿ ನಡೆದುಕೊಂಡು ಹೋಗುತ್ತಿದ್ದವು. ಆ ಕಾಲದಲ್ಲಿ ಆ ರೀತಿಯ ಅವಿಭಕ್ತ ಕುಟುಂಬಗಳು ನಮ್ಮ ಕಡೆ ಬಹಳಷ್ಟಿರುತ್ತಿದ್ದವಾದರೂ ಅವು ಹೆಚ್ಚು ಸಮಯ ಮುಂದು ವರಿಯುತ್ತಿರಲಿಲ್ಲ. ಕುಟುಂಬದ ಸದಸ್ಯರ ನಡುವೆ ಉದ್ಭವಿಸುತ್ತಿದ್ದ ವೈಮನಸ್ಯಗಳಿಂದ ಪದೇ ಪದೇ ಹರಿದು ಹಂಚಿ ಹೋಗಿ ಬಿಡುತ್ತಿದ್ದವು. ಆದರೆ ನಮ್ಮ ಕುಟುಂಬ ಸುಮಾರು ೧೯೫೦ರ ದಶಕದವರೆಗೂ ಸಮಷ್ಟಿ ಕುಟುಂಬವಾಗಿ ಮುಂದುವರಿದುಕೊಂಡಿದ್ದು ಒಂದು ವೈಶಿಷ್ಟ್ಯವೆಂದೇ ಹೇಳಬೇಕು. ಅಂತಹ ಪರಿಸ್ಥಿತಿಗೆ ಹಲವಾರು ಕಾರಣಗಳಿದ್ದವೆನಿಸುತ್ತದೆ. ಸಮಾಧಾನ, ಸೌಮ್ಯ

ಭಾವನೆ, ಸಹಕಾರ, ಸತ್ಯಸಂಧತೆಗಳಿಗೆ ನಮ್ಮ ಮನೆತನದವರು ಹೆಸರಾಗಿದ್ದರೆಂಬುದನ್ನು ಇತರರು ಹೇಳುವುದನ್ನು ನಾನು ಕೇಳಿದ್ದುಂಟು. ಸಾಧು ಪ್ರವೃತ್ತಿ ಪರೋಪಕಾರ, ದಾನಧರ್ಮ ಔದಾರ್ಯ ಗಳಿಗೆ ನಮ್ಮವರು ಹೆಸರಾಗಿದ್ದರು. ಕೈಕಾಲು ಮುರಿದ ಜನರ ಹಾಗೂ ಜಾನುವಾರುಗಳ ಚಿಕಿತ್ಸೆ ಯಲ್ಲಿ ನಮ್ಮಲ್ಲಿ ಕೆಲವರು ನಿಷ್ಣಾತರೆನಿಸಿಕೊಂಡಿದ್ದರು. ಯಾರಿಗಾದರೂ ಅವಶ್ಯಕತೆಯಿದ್ದರೆ ಅವರ ಊರುಗಳಿಗೇ ಹೋಗಿ ಮುರಿದ ಮೂಳೆಗಳನ್ನು ಸರಿಪಡಿಸಿ ಗಿಡಮೂಲಿಕೆ ಔಷಧಗಳನ್ನು ತಯಾರಿಸಿ ಕೊಡುತ್ತಿದ್ದರು. ನನ್ನ ಚಿಕ್ಕಪ್ಪಂದಿರಲ್ಲೊಬ್ಬರಾದ ದೊಡ್ಡ ಶಿದ್ದಪ್ಪಗೌಡರು ಈ ಚಿಕಿತ್ಸಾ ವಿಧಾನದಲ್ಲಿ ಪರಿಣಿತಿ ಪಡೆದವರಾಗಿದ್ದರು. ತೀರಾ ವೃದ್ಧರಾದಾಗಲೂ ತಮ್ಮ ಈ ಪುಣ್ಯಕಾರ್ಯ ವನ್ನು ನಡೆಸಿಕೊಂಡು ಬಂದಿದ್ದರು. ಆದರೂ ಅವರೆಂದೂ ಈ ಬಗೆಗೆ ಶುಲ್ಕವನ್ನು ಪಡೆಯು ತ್ತಿರಲಿಲ್ಲ.

ಮನೆಯ ಯಜಮಾನಿಕೆಯನ್ನು ನಡೆಸುತ್ತಿದ್ದವರು ಇನ್ನೊಬ್ಬ ಚಿಕ್ಕಪ್ಪ ಮಂಜಪ್ಪಗೌಡರು; ಸತ್ಯಸಂಧರು. ಭೇದಭಾವ, ಮೋಸ ವಂಚನೆಯಂಥ ಪ್ರವೃತ್ತಿಗಳೆಂದೂ ಅವರ ಹತ್ತಿರ ಸುಳಿದಿರ ಲಿಲ್ಲ. ಕುಟುಂಬದ ಎಲ್ಲರನ್ನೂ ಒಂದೇ ರೀತಿ ನೋಡಿಕೊಳ್ಳುವುದು ಅವರ ಧರ್ಮವೆನಿಸಿತ್ತು. ಅನಕ್ಷರಸ್ಥರಾಗಿದ್ದರೂ ಕೆಲಸ ಕಾರ್ಯಗಳಿಗೆ ತಗಲುವ ಖರ್ಚುವೆಚ್ಚ ಮುಂತಾದವನ್ನು ಬೇರೆಯವರ ಮೂಲಕ ಬರೆಸಿಟ್ಟು ವರ್ಷದ ಅಂತ್ಯದಲ್ಲಿ ತಾಳೆ ನೋಡಿಸುತ್ತಿದ್ದರು.

ಜಮೀನುಗಳಿಗೆ ಸಂಬಂಧಿಸಿದ ಕೆಲಸ ಕಾರ್ಯಗಳೆಲ್ಲಾ ಕುಟುಂಬದ ಇತರ ಸದಸ್ಯರ ನಡುವೆ ಹಂಚಿಕೆಯಾಗಿರುತ್ತಿದ್ದವು. ಅವುಗಳ ಸುಸೂತ್ರ ನಿರ್ವಹಣೆ ಜವಾಬ್ದಾರಿ ಒಬ್ಬರದಾಗಿರು ತ್ತಿದ್ದರೂ ಸಮಯ ಬಿದ್ದಾಗ ಇತರರೂ ಅವುಗಳಲ್ಲಿ ಭಾಗವಹಿಸಿ ಸಹಕರಿಸುವುದು ಒಂದು ರೀತಿಯ ಅಲಿಖಿತ ಶಾಸನವೆಂಬಂತಾಗಿರುತ್ತಿತ್ತು. ಅಷ್ಟು ದೊಡ್ಡ ಅವಿಭಕ್ತ ಕುಟುಂಬದ ಸದಸ್ಯರು ಹಾಗೂ ಕೆಲಸ ಕಾರ್ಯಗಳಿಗೆ ಬರುತ್ತಿದ್ದ ಆಳುಗಳಿಗೂ ಸಹ ಅಡುಗೆ ಮಾಡಿ ಬಡಿಸುವುದೆಂದರೆ ಸುಲಭದ ಕೆಲಸವಲ್ಲ. ಆದರೆ ಮನೆಯಲ್ಲಿದ್ದ ವಯಸ್ಕ ಮಹಿಳೆಯರೆಲ್ಲಾ ವಾರದ ಸರದಿಯಂತೆ ಕೆಲಸಗಳನ್ನು ಹಂಚಿಕೊಂಡು ಕಾರ್ಯ ನಿರ್ವಹಿಸುತ್ತಿದ್ದರು; ಸರದಿ ಇಲ್ಲದವರು ತಮ್ಮೆಲ್ಲಾ ಸಹಕಾರ ನೀಡುತ್ತಿದ್ದರು. ಇದಲ್ಲದೆ ಜಮೀನು ಕೆಲಸಗಳ ಶ್ರಾಯಗಳಾದ ಸಸಿನಟ್ಟಿ, ಗದ್ದೆ ಕೊಯಿಲು, ಒಕ್ಕಲಾಟ, ಅಡಿಕೆ ಸುಲಿತ ಮುಂತಾದ ಕೆಲಸಗಳಲ್ಲೂ ಮಹಿಳೆಯರು ಸಕ್ರಿಯವಾಗಿ ಪಾಲ್ಗೊಳ್ಳು ತ್ತಿದ್ದರು. ಈ ತರಹೆಯ ಸಹಕಾರ ಮನೋಭಾವ ನಮ್ಮವರಲ್ಲಿ ಬಹಳ ಕಾಲ ಮುಂದುವರಿದು ಬಂದಿದ್ದರೂ, ಕಾಲಾಂತರದಲ್ಲಿ ಸುತ್ತಲ ಪರಿಸರದ ಬದಲಾವಣೆಯ ಗಾಳಿ ನಮಗೂ ಹರಡು ವಂತಾದುದು ಅಚ್ಚರಿಯಲ್ಲ. ಮುಂದೆ ನಮ್ಮ ಸಂಸಾರವೂ ಹೇಗೆ ಒಂದಲ್ಲ ಎರಡು ಸಾರಿ ಹಿಸ್ಸೆ ಯಾಗಲು ಒದಗಿದ ಸಂದರ್ಭಗಳ ವಿವರಣೆ ಮುಂದೆ ಮಾಡಲಿದ್ದೇನೆ.

ನಮ್ಮ ಮನೆತನ ಅಲ್ಲಿನ ಇತರರಿಗಿಂತ ಒಂದು ರೀತಿಯ ವೈಶಿಷ್ಟ್ಯ ಪಡೆದಿತ್ತೆನ್ನುವುದರ ಬಗೆಗೆ ಒಂದು ನಿದರ್ಶನವನ್ನು ದಾಖಲಿಸಬೇಕೆನಿಸುತ್ತದೆ. ನಮ್ಮ ಮನೆಯವರು ೧೯೩೦ರ ದಶಕದಲ್ಲಿ ಆ ಕಾಲಕ್ಕೆ ಸ್ವಲ್ಪ ಹೆಚ್ಚು ಎನ್ನುವಷ್ಟು ಮೊತ್ತದ ಸಾಲ ಮಾಡಬೇಕಾಯಿತಂತೆ. ಗಂಡು ಸಂತತಿ ಇಲ್ಲದ ನಮ್ಮ ದಾಯಾದಿ ಕುಟುಂಬದವರೊಬ್ಬರ ಆಸ್ತಿ ಮನೆಗಳು ಸಾಲದ ಭಾರದಿಂದ ಬೇರೆಯವರ ಕೈವಶವಾಗುವ ಹಂತ ತಲುಪಿತ್ತು. ಅವರ ಸಾಲವನ್ನು ತೀರಿಸಿ ದಾಯಾದಿ ಮಹಿಳೆ ಯರಿಗೂ ಅವರ ಜೀವನ ಪರ್ಯಂತ ಬಾಳ್ವೆಯ ವ್ಯವಸ್ಥೆ ಮಾಡಲು ಈ ಸಾಲ ಮಾಡ ಬೇಕಾಯಿತು. ಆ ಸಲುವಾಗಿ ಯಡೂರು ಸಾಹುಕಾರ ಶ್ರೀನಿವಾಸ ಜೋಯಿಸರಲ್ಲಿ ನಮ್ಮವರು ಸಾಲ ತೆಗೆದರು. ಮುಂದಿನ ಕೆಲವು ವರ್ಷಗಳಲ್ಲಿ ನಮ್ಮ ಜಮೀನಿನ ಕೆಲಸ ಕಾರ್ಯಗಳು ಕಾಲ

ಕಾಲಕ್ಕೆ ಜರುಗದೆ ಸಾಲ ತೀರಿಸುವುದು ಕಷ್ಟವಾಯಿತಂತೆ. ಅಂತಿಮವಾಗಿ ನಮ್ಮ ಜಮೀನು ಮನೆಗಳನ್ನು ಆ ಸಲುವಾಗಿ ಅವರಿಗೆ ದೀಡು ಮಾಡಿಕೊಡಬೇಕಾಯಿತಂತೆ. ಮುಂದೆ ಸಾಲ ಬೆಳೆಯುತ್ತಾ ಹೋಗಿ ಸಾಹುಕಾರರು ನಮ್ಮ ಆಸ್ತಿಮನೆಯನ್ನೆಲ್ಲಾ ಮುಟ್ಟುಗೋಲು ಹಾಕಬಹುದಾದ ಹಂತವನ್ನು ತಲುಪಿದ್ದಿತು. ಹಲವರ ಜಮೀನುಗಳು ಕೆಲವು ಸಾಹುಕಾರರ ವಶವಾದ ನಿದರ್ಶನಗಳೂ ಇದ್ದವು. ಆದರೆ ನಮ್ಮ ಸಾಹುಕಾರರ ತಂದೆ ಕೆಲವು ವರ್ಷಗಳ ಹಿಂದೆ ಸಾಯುವ ಮುನ್ನ ನಮ್ಮ ಮನೆಯವರ ಆಸ್ತಿಯನ್ನು ಯಾವುದೇ ಕಾರಣದಿಂದಲೂ ಮುಟ್ಟುಗೋಲು ಹಾಕಬಾರದೆಂದು ಹೇಳಿದ್ದರಂತೆ. ಪರೋಪಕಾರಿಗಳು, ನ್ಯಾಯ ನಿಷ್ಠರು, ಸತ್ಯಸಂಧರಾದ ನಮ್ಮ ಮನೆತನಕ್ಕೆ ಕೇಡಾಗಬಾರದೆಂಬುದು ಅವರ ಆಶಯವಾಗಿತ್ತಂತೆ. ಅದರಂತೆ ಅಂತಿಮವಾಗಿ ಸಾಹುಕಾರರು ನಮ್ಮ ಸಾಲವನ್ನು ನಮ್ಮ ಕೆಲವು ಶ್ರೀಮಂತ ಸಂಬಂಧಿಕರ ಸಹಾಯದಿಂದ ಕೆಲವು ಕಂತುಗಳಲ್ಲಿ ತೀರಿಸುವ ಏರ್ಪಾಡು ಮಾಡಿದರೆ, ನಮ್ಮ ದೀಡು ಪತ್ರವನ್ನು ಖುಲಾಸೆ ಮಾಡಿಕೊಡುವುದಾಗಿ ಹೇಳಿದರಂತೆ. ಮುಂದೆ ಮೇಗರವಳ್ಳಿಯಲ್ಲಿ ನಮ್ಮ ಸಂಬಂಧಿಕರಾದ ಸಂ. ಲಿಂಗಪ್ಪ ಹೆಗ್ಗಡೆಯವರಲ್ಲಿ ಆ ಬಾಬ್ತು ಸಾಲ ಮಾಡಿ ಯಡೂರು ಸಾಹುಕಾರರಲ್ಲಿದ್ದ ಸಾಲವನ್ನು ತೀರ್ಮಾನ ಮಾಡಿದರು; ದೀಡುಪತ್ರ ಖುಲಾಸೆಯಾಯಿತು.

## ಕುಟುಂಬದ ಇತಿಹಾಸ

ನಮ್ಮದೊಂದು ದೊಡ್ಡ ಅವಿಭಕ್ತ ಕುಟುಂಬವಾಗಿತ್ತೆಂಬುದನ್ನು ಹೇಳಿರುವೆನಾದರೂ ಅದರ ಬಗೆಗೆ ಹೆಚ್ಚಿನ ವಿವರಗಳನ್ನು ಈ ತನಕ ಹೇಳಲಾಗಿಲ್ಲ. ಪ್ರಸ್ತುತ ಹಿರಿಯ ತಲೆಮಾರಿನವರಾರೂ ಇಲ್ಲದಿರುವುದರಿಂದ ನಾನು ಬಾಲಕನಾದ ಸಮಯದಲ್ಲಿನ ವಿವರಗಳನ್ನು ನೆನಪಿಸಿಕೊಂಡು ದಾಖಲಿಸುತ್ತಿದ್ದೇನೆ. ಮೂರು ತಲೆಮಾರುಗಳ ಹಿಂದೆ ಸಂಣ ದುಗ್ಗಣ್ಣಗೌಡರು ಎಂಬವರಿದ್ದ ವಿಷಯ ನನಗೆ ತಿಳಿದಿದೆ. ಅವರಿಗೆ ಅಣ್ಣಪ್ಪಗೌಡರು, ತಿಮ್ಮಪ್ಪಗೌಡರು ಮತ್ತು ದೇವಪ್ಪಗೌಡರು ಎಂಬ ಮೂರು ಗಂಡು ಮಕ್ಕಳು ಮತ್ತು ಇನ್ನೂ ಎರಡು-ಮೂರು ಹೆಣ್ಣು ಮಕ್ಕಳು ಇದ್ದರೆಂದು ತಿಳಿಯುತ್ತದೆ. ಅವರಲ್ಲಿ ಹಿರಿಯರಾಗಿದ್ದ ಅಣ್ಣಪ್ಪಗೌಡರಿಗೆ ಶೇಷಪ್ಪಗೌಡರು, ದುಗ್ಗಪ್ಪಗೌಡರು (ನನ್ನ ತಂದೆ), ಮಂಜಪ್ಪಗೌಡರು ಹಾಗೂ ಶಿದ್ದಪ್ಪಗೌಡರು ಎಂಬ ನಾಲ್ಕು ಜನ ಗಂಡು ಮಕ್ಕಳು; ಶೇಷಪ್ಪಗೌಡರು ಮದುವೆಯಾದ ಒಂದೆರಡು ವರ್ಷಗಳಲ್ಲೇ ತೀರಿಕೊಂಡರಂತೆ. ಅವರ ವಿಧವೆ ಮಂಜಮ್ಮನವರು ಬಹಳ ವರ್ಷಗಳು ಬದುಕಿದ್ದು ವೃದ್ಧಾಪ್ಯದಲ್ಲಿ



ಚಿಕ್ಕಪ್ಪ
ಮಂಜಪ್ಪಗೌಡರು



ಚಿಕ್ಕಪ್ಪ
ದೊಡ್ಡ ಶಿದ್ದಪ್ಪಗೌಡರು

ತೀರಿಕೊಂಡರು. ನನ್ನ ತಂದೆ ದುಗ್ಗಪ್ಪಗೌಡರು ನಾನು ಜನಿಸಿದ ಒಂದೂವರೆ ವರ್ಷದಲ್ಲೇ ತೀರಿಕೊಂಡರಂತೆ. ಇನ್ನುಳಿದ ಇಬ್ಬರಲ್ಲಿ ಮಂಜಪ್ಪಗೌಡರು ಮುಂದೆ ಮನೆಯ ಯಜಮಾನರಾಗಿ ಸಾತ್ವಿಕ ಜೀವನ ನಡೆಸಿ, ವೃದ್ಧಾಪ್ಯದಲ್ಲಿ ತೀರಿಕೊಂಡರು. ಕಿರಿಯರಾದ ದೊಡ್ಡ ಶಿದ್ದಪ್ಪಗೌಡರು ತೋಟದ ಕೆಲಸ ಕಾರ್ಯಗಳ ಬಗೆಗೆ ಒಳ್ಳೆಯ ಅನುಭವ ಗಳಿಸಿದ್ದರಲ್ಲದೆ, ಕೈಕಾಲು ಮುರಿದ ವರಿಗೆ ಚಿಕಿತ್ಸೆ ನೀಡುವುದರಲ್ಲೂ ನಿಷ್ಣಾತರಾಗಿದ್ದರು. ತುಂಬಾ ವಯಸ್ಸಾದನಂತರ ಅವರೂ ತೀರಿ ಕೊಂಡಿದ್ದಾರೆ.

ಎರಡನೆಯವರಾದ ತಿಮ್ಮಪ್ಪಗೌಡರು ಬಹಳ ಸಮಯ ಜೀವಿಸಿದ್ದರು. ಬಾಲಕನಾಗಿದ್ದಾಗ ಅವರನ್ನು ನೋಡಿದ್ದ ನೆನಪಿದೆ. ಅವರಿಗೆ ಶೇಷಪ್ಪಗೌಡರು, ಪುಟ್ಟಯ್ಯ ಗೌಡರು ಮತ್ತು ಬಾಲಪ್ಪ ಗೌಡರು ಎಂಬ ಮೂವರು ಮಕ್ಕಳು. ಹೆಚ್ಚು ಕಡಿಮೆ ನನ್ನ ಓರಗೆಯವನೇ ಆದ ಪುಟ್ಟಯ್ಯ ಕೆಲವು ವರ್ಷಗಳ ಹಿಂದೆ ಕಾಯಿಲೆಯಿಂದ ತೀರಿಕೊಂಡ.

ಕಡೆಯವರಾದ ದೇವಪ್ಪ ಗೌಡರಿಗೆ (ಸಣ್ಣ) ಶಿದ್ದಪ್ಪಗೌಡರು, ಮತ್ತು ರಾಮಪ್ಪಗೌಡರು ಎಂಬಿಬ್ಬರು ಮಕ್ಕಳು. ಅವರಿಬ್ಬರೂ ನಡುವಯಸ್ಸಿನ ನಂತರ ಕಾಯಿಲೆಗಳಿಂದ ತೀರಿ ಕೊಂಡಿದ್ದಾರೆ.

ಮಲೆನಾಡಿನ ಬಹುತೇಕ ಮನೆಗಳಲ್ಲಿ ಮಲೇರಿಯಾ ಮುಂತಾದ ಕಾಯಿಲೆಗಳಿಂದ ಬಹಳಷ್ಟು ಜನರು ಎಳೆಯ ಇಲ್ಲವೆ ಮಧ್ಯವಯಸ್ಸು ತಲುಪುವಷ್ಟರಲ್ಲೇ ಸಾಯುತ್ತಿದ್ದುದು ಮಾಮೂಲು ಸಂಗತಿಯಾಗಿತ್ತು. ಯಾವುದೇ ರೀತಿಯ ವೈದ್ಯಕೀಯ ನೆರವು ಲಭ್ಯವಿರದ ಆ ಕಾಲದಲ್ಲಿ ಹೀಗೆ ಸಾಯುತ್ತಿದ್ದುದೇ ಅಲ್ಲದೆ ಮಲೇರಿಯಾ ಗೆಡ್ಡೆಯಿಂದ ಹೊಟ್ಟೆ ಊದಿಕೊಂಡು ಕೆಲಸ ಕಾರ್ಯಗಳನ್ನು ಮುಂದುವರಿಸದ ಅಸಹಾಯಕ ಸ್ಥಿತಿಯಲ್ಲಿರುತ್ತಿದ್ದುದು ಅಪರೂಪ ವಾಗಿರಲಿಲ್ಲ. ಗರ್ಭಾವಸ್ಥೆ ಮತ್ತು ಹೆರಿಗೆ ಸಮಯದಲ್ಲಿ ವೈದ್ಯಕೀಯ ನೆರವು ಸಿಗುತ್ತಿರಲಿಲ್ಲ ವಾದುದರಿಂದ ಬಹುಪಾಲು ಮಹಿಳೆಯರು ಅಕಾಲ ಮರಣಕ್ಕೀಡಾಗುವುದು ಸರ್ವೇಸಾಮಾನ್ಯ ವಾಗಿತ್ತು. ಅದರಿಂದಾಗಿ ನಮ್ಮ ಅಜ್ಜಂದಿರಿದ್ದ ಒಂದು ಸಮಯದಲ್ಲಿ ನಮ್ಮ ಕುಟುಂಬದಲ್ಲಿ ಮಹಿಳೆಯರೇ ಇರಲಿಲ್ಲವಂತೆ! ಬಹುಶಃ ಮುಂದೆ ಹತ್ತಿರದ ಊರುಗಳಲ್ಲಿ ವೈದ್ಯಕೀಯ ಸೌಲಭ್ಯ ಗಳು ಲಭ್ಯವಾಗುತ್ತಿದ್ದುದರಿಂದಲೋ ಏನೋ ನನ್ನ ಬಾಲ್ಯದ ಸಮಯದಲ್ಲಿ ಚಿಕ್ಕಪ್ಪಂದಿರಿಗೆಲ್ಲಾ ಮದುವೆಯಾಗಿ ಮನೆತುಂಬಾ ಹೆಂಗಸರು, ಮಕ್ಕಳು ತುಂಬಿರುತ್ತಿದ್ದರು.

ನಮ್ಮ ಸಮಷ್ಟಿ ಕುಟುಂಬ ಬಹಳ ಸಮಯ ಒಂದು ವ್ಯವಸ್ಥಿತ ರೀತಿಯಲ್ಲಿ ಮುಂದು ವರಿದುಕೊಂಡು ಬರುತ್ತಿದ್ದರೂ, ಅದರಲ್ಲಿ ಯಾವತ್ತೂ ಮನಸ್ತಾಪ, ಒಡಕುಗಳುಂಟಾಗುತ್ತಿರಲಿಲ್ಲ ವೆಂದು ಹೇಳಲಾಗದು. ಕೆಲವು ಸಾರಿ ಯಾವಯಾವುದೋ ಕ್ಷುಲ್ಲಕ ಕಾರಣಗಳಿಂದ ಮನಸ್ತಾಪ ಗಳು ಉದ್ಭವಿಸುತ್ತಿದ್ದವು. ಅದರಿಂದ ಮನೆ ಕೆಲಸ ಕಾರ್ಯಗಳು ಸುಸೂತ್ರವಾಗಿ ಜರುಗುತ್ತಿರ ಲಿಲ್ಲ. ಹತ್ತಿರದ ನೆಂಟರಿಷ್ಟರು ಅಂತಹ ಸಂದರ್ಭಗಳಲ್ಲಿ ಮಧ್ಯಸ್ಥಿಕೆ ವಹಿಸಿ ಪರಿಸ್ಥಿತಿ ಸುಧಾರಿಸು ವಂತೆ ಮಾಡುತ್ತಿದ್ದುದುಂಟು. ನಮ್ಮ ಬಗೆಗೆ ವಿಶೇಷ ಆಸ್ಥೆ ವಹಿಸುತ್ತಿದ್ದ ಯಡೂರು ಸಾಹುಕಾರರೂ ನಮ್ಮವರನ್ನು ಅವರಲ್ಲಿಗೇ ಕರೆಸಿಕೊಂಡು ಬುದ್ಧಿವಾದ ಹೇಳಿ ಸಮಸ್ಯೆಗಳನ್ನು ಪರಿಹರಿಸುವಲ್ಲಿ ಯಶಸ್ವಿಯಾಗುತ್ತಿದ್ದರು. ಆದರೂ ಸುಮಾರು ೧೯೫೦ರ ದಶಕದಲ್ಲಿ ಇಂತಹ ತೇಪೆ ಹಾಕುವ ಪ್ರಯತ್ನಗಳು ನಿರೀಕ್ಷಿಸಿದಷ್ಟು ಯಶಸ್ವಿಯಾಗುತ್ತಿರಲಿಲ್ಲ. ಜಮೀನು ಕೆಲಸ ಕಾರ್ಯಗಳಲ್ಲಿ ಅನಾದರ ವುಂಟಾಗಿ ಕುಟುಂಬ ನಿರ್ವಹಣೆ ಕಷ್ಟವಾಗತೊಡಗಿತು. ಸಾಹುಕಾರರಲ್ಲಿದ್ದ ಸಾಲ ಬಾಕಿಯೂ ಏರುತ್ತಿತ್ತು. ಅವರಿಗೆ ಬರೆದುಕೊಟ್ಟ ದೀಡು ಪತ್ರ ಖುಲಾಸೆ ಬಗೆಗೆ ಜರುಗಿಸಿದ ವಿಷಯ

ಈಗಾಗಲೇ ಪ್ರಸ್ತಾಪವಾಗಿದೆ. ಹೀಗೆ ನಾಲ್ಕೈದು ವರ್ಷ ಸಮಸ್ಯೆ ಮುಂದುವರಿದಾಗ ನಮ್ಮ ಆಸ್ತಿಪಾಸ್ತಿಗಳನ್ನು ಹಿಸ್ಸೆ ಮಾಡಿ ಹಂಚಿಕೊಳ್ಳುವುದೇ ಸೂಕ್ತವೆನಿಸಿತು. ಕುಟುಂಬದ ಮೂವರು ಅಜ್ಜಂದಿರ ಮಕ್ಕಳ ಸಮೂಹದ ಮೂರು ಬುಡಕಟ್ಟಿನವರಿಗೆ ಮೂರು ಪಾಲು ಮಾಡಿ ೧೯೫೫ರ ಆದಿಯಲ್ಲಿ ಹಿಸ್ಸಾಪತ್ರ ರಿಜಿಸ್ಟರಾಯಿತು. ಅಣ್ಣಪ್ಪಗೌಡರ ಮಕ್ಕಳಾದ ಮಂಜಪ್ಪಗೌಡರು, ದೊಡ್ಡ ಶಿದ್ದಪ್ಪಗೌಡರು ಹಾಗೂ ಮೊಮ್ಮಗ ನಾನು ಸೇರಿ ಒಂದು ಹಿಸ್ಸೆಯ ಪಾಲುದಾರರಾದೆವು.

ನಮ್ಮ ಕುಟುಂಬ ಹಿಸ್ಸೆಯಾದುದರಲ್ಲೂ ಒಂದು ವೈಶಿಷ್ಟ್ಯವಿರುವುದನ್ನು ದಾಖಲಿಸುವುದು ನನ್ನ ಕರ್ತವ್ಯವೆನಿಸುತ್ತದೆ. ಬಹುಪಾಲು ಸಮಷ್ಟಿ ಕುಟುಂಬಗಳು ಮನೆಯಲ್ಲಿನ ಮಹಿಳೆಯರ ಮನಸ್ತಾಪ, ಒಳ ಜಗಳಗಳ ಮೂಲದಿಂದ ಒಡೆಯುತ್ತವೆ. ಆದರೆ ನಮ್ಮ ಕುಟುಂಬದಲ್ಲಿ ಅಂತಹ ವಾತಾವರಣವಿರದೆ ಅವರಲ್ಲಿ ಒಳ್ಳೆಯ ಸೌಹಾರ್ದ, ಸಹಕಾರಗಳಿದ್ದುದೊಂದು ವಿಶೇಷವೆಂದೇ ಹೇಳಬಹುದು. ಹಿಸ್ಸೆಯಾದಾಗ ಮನೆಯಲ್ಲಿ ಜಾಗ ಸಾಲದೆ ಕೆಲವರು ಬೇರೆ ಕಡೆ ಮನೆ ಮಾಡಿಕೊಳ್ಳುವುದು ಅನಿವಾರ್ಯವಾಯಿತು. ಇನ್ನುಳಿದವರ ಅಡಿಗೆ ಬೇರೆ ಬೇರೆಯಾಗುತ್ತಿದ್ದರೂ ಹಿಂದಿನ ವಾತಾವರಣ ಮುಂದುವರಿಯುತ್ತಲೇ ಇತ್ತು. ಮುಂದೆ ವರಾಹಿ ಯೋಜನೆಯಲ್ಲಿ ನಮ್ಮೆಲ್ಲರ ಆಸ್ತಿಪಾಸ್ತಿಗಳು ಮುಳುಗಡೆಯಾಗಿ ಒಬ್ಬೊಬ್ಬರೂ ಬೇರೆ ಬೇರೆ ತಾಲ್ಲೂಕು, ಜಿಲ್ಲೆಗಳಿಗೆ ವಲಸೆ ಹೋಗುವಂತಾಯಿತು. ಕೆಲವರು ತಮಗೆ ದೊರೆತ ಪರಿಹಾರದ ಹಣದಲ್ಲಿ ಜಮೀನು ಖರೀದಿಸಿ ತಮ್ಮ ಹಿಂದಿನ ಬದುಕನ್ನು ಮುಂದುವರಿಸಲು ಸಾಧ್ಯವಾಗಿದೆ; ಮತ್ತೆ ಕೆಲವರು ಪರಿಹಾರ ಪಡೆಯುವಲ್ಲಿ ಹಲವು ಕಾನೂನುಗಳ ತೊಡಕುಗಳಲ್ಲಿ ಸಿಲುಕಿ ಹಾಕಿಕೊಂಡು ಇನ್ನೂ ತೊಳಲಾಡುತ್ತಿರುವುದನ್ನು ನೋಡಿದಾಗ ಅಯ್ಯೋ ಹೀಗೇಕಾಯಿತು ಎನಿಸುತ್ತದೆ. ಅನಾದಿ ಕಾಲದಿಂದಲೂ ಮಲೆನಾಡಿನ ಮೂಲೆಯೊಂದರಲ್ಲಿ ಪ್ರಾಮಾಣಿಕ ಹಾಗೂ ನೆಮ್ಮದಿಯ ಜೀವನ ಸಾಗಿಸುತ್ತಿದ್ದ ಬಡಪಾಯಿ ಮುಗ್ಧ ಜನರನ್ನು 'ಮುಳುಗಡೆ' ಭೂತ ಅಕ್ಷರಶಃ ಮುಳುಗಿಸಿಯೇ ಬಿಟ್ಟಿತು.*

---

*ವಿ.ಸೂ.: ನಮ್ಮೂರು ಮುಳುಗಡೆಯಾದಾಗ ನನ್ನ ಮನದ ಅಂತರಾಳದಿಂದ ಹೊರಹೊಮ್ಮಿದ ನಮ್ಮೂರಿನ ಜನಜೀವನದ ನೆನಪುಗಳನ್ನು ಸಣ್ಣ ಪುಸ್ತಕ ರೂಪದಲ್ಲಿ ಪ್ರಕಟಿಸಿರುವೆ. **"ನಮ್ಮೂರಿನ ನೆನಪುಗಳು"** ಎಂಬ ಸುಮಾರು ೮೦ ಪುಟಗಳ ಪುಸ್ತಕ (೧೯೯೯) ಬೆಲೆ ರೂ. ೪೦-೦೦ ಪ್ರಕಾಶಕರು : ನೆಲಮನೆ ಪ್ರಕಾಶನ, ರಂಗನಾಥ ನಗರ, ಶ್ರೀರಂಗಪಟ್ಟಣ.

# ೨. ಬಾಲ್ಯ, ವಿದ್ಯಾಭ್ಯಾಸ

ನಮ್ಮ ಆದಿ ಬುಡಕಟ್ಟಿನ ಹಿರಿಯರಾಗಿದ್ದ ಅಣ್ಣಪ್ಪಗೌಡರ ಎರಡನೇ ಮಗ ದುಗ್ಗಪ್ಪ ಗೌಡರು ನನ್ನ ತಂದೆ; ತಾಯಿ ಹಾಲಮ್ಮ. ಯಡೂರಿನಿಂದಾಚೆಯ ಪಶ್ಚಿಮ ಘಟ್ಟದ ಇಳಿಜಾರಿನ ಮೇಲೆ ಕಾಡಿನಿಂದ ತೆರಪಾದ ವಲಯದ ಮಾನಿಯೆಂಬ ಪುಟ್ಟ ಹಳ್ಳಿ ನನ್ನ ತಾಯಿಯ ತವರು ಮನೆ; ದಟ್ಟವಾದ ಸಾಲು ಸಾಲು ಮರಗಳಿಂದ ಸುತ್ತುವರಿದ ವಿಶಾಲವಾದ ಗದ್ದೆಕೋಗು ಮತ್ತು ಅಡಿಕೆ ತೋಟ ಹಾಗೂ ಕೇವಲ ೨-೩ ಮನೆಗಳಿದ್ದ ಪ್ರಶಾಂತ ತಾಣ ಮಾನಿ* ಅಲ್ಲಿಯ ತಮ್ಮಯ್ಯ ಗೌಡರೆಂಬವರ ಕಡೇ ಮಗಳು ನನ್ನ ತಾಯಿ. ನನ್ನ ತಂದೆ ತಾಯಿಯವರ ವಿವಾಹ ೧೯೨೭ರ ಜೂನ್ ೬ ರಂದು ಜರುಗಿತು.



॥ ಶ್ರೀ ಲಕ್ಷ್ಮೀವೆಂಕಟೇಶ ಪ್ರಸನ್ನ ॥

ಸ್ವಸ್ತಿ! ಶ್ರೀಪ್ರಭವನಾಮ ಸಂ। ದ ಜೇಷ್ಠ ಶು. ೬ ಯು ಭಾನುವಾರ.
( ತಾ 5-6-27 ) ನೇ ರಾತ್ರೆ ಘಟ ೭ ಕ್ಕೆ ಸಲುವ ಮಕರ ಲಗ್ನದಲ್ಲಿ

| | |
|---|---|
| ಹೊಳೇಗದ್ದೆ ಅಣ್ಣಪ್ಪಗೌಡರ | ಮಾನಿ ತಮ್ಮಯ್ಯಗೌಡರ |
| ದ್ವಿತೀಯ ಪುತ್ರ | ತೃತೀಯ ಪುತ್ರಿ |
| **ಚಿ॥ ದುಗ್ಗಪ್ಪನೆಂಬ** | **ಚಿ॥ ಸೌ॥ ಹಾಲಮ್ಮ** |
| ವರನು | ಎಂಬ ಕನ್ನಿಕೆಯನ್ನು |

ಪಾಣಿಗ್ರಹಣವಾಗುವುದೆಂದು ಗುರುಹಿರಿಯರು ನಿಶ್ಚಯಿಸಿರುವುದರಿಂದ ಶ್ರೀ ದೇವತಾನುಗ್ರಹದಿಂದ ಮಾನಿಯಲ್ಲಿ ನಡೆಯುವ ಈ ಶುಭಕಾರ್ಯಕ್ಕೆ ತಾವು ಸರ್ವರೂ ಇಷ್ಟಮಿತ್ರರೊಡಗೂಡಿ ಬಂದು ನಮ್ಮ ಮನಸ್ಸಂತೋಷಪಡಿಸಬೇಕಾಗಿ ಸಾದರದಿಂದ ಅಪೇಕ್ಷಿಸುವ ತಮ್ಮ ಕೃಪಾಭಿಲಾಷಿ.

ಕ್ರೌನ್‌ಪ್ರೆಸ್, ತೀರ್ಥಹಳ್ಳಿ. ಪೊತ್ತಯ್ಯಗೌಡ ಮಾನಿ

ತಂದೆ ತಾಯಿಯರ ಮದುವೆ ಪತ್ರಿಕೆ

ಮಾನಿ ಕುಟುಂಬದವರೂ ಒಂದು ಕಾಲದಲ್ಲಿ ಒಳ್ಳೆಯ ಸ್ಥಿತಿವಂತರಾಗಿದ್ದರಂತೆ. ಆ ಕಾಲದ ಹಲವು ಸಮಷ್ಟಿ ಕುಟುಂಬಗಳಂತೆ ಸದಸ್ಯರ ಅಸಹಕಾರ, ಕೆಲಸ ಕಾರ್ಯಗಳಲ್ಲಿ

---

*ವರಾಹಿ ಜಲವಿದ್ಯುತ್ ಯೋಜನೆಯ ಪ್ರಮುಖ ಆಣೆಕಟ್ಟು 'ಮಾನಿಡ್ಯಾಮ್' (MANI DAM). ಅಚ್ಚ ಕನ್ನಡ ಪದ 'ಮಾನಿ' ಇಂಗ್ಲಿಷ್‌ನಲ್ಲಿ ಬಳಕೆಯಾದಾಗ MANIಯೇ ಆಗಿದ್ದರೂ ಮತ್ತೆ ಕನ್ನಡದಲ್ಲಿ ಮರುಬಳಕೆಯ ಸಂದರ್ಭದಲ್ಲಿ 'ಮಾಣಿ' ಎಂದು ಪರಿವರ್ತನೆಯ ಅಪಭ್ರಂಶ ನುಡಿಯಾಗಿ ಬಿಟ್ಟಿದೆ! ಇತ್ತೀಚೆಗೆ ಲಭ್ಯವಾದ ನನ್ನ ತಂದೆ ತಾಯಿಯರ ವಿವಾಹದ ಆಮಂತ್ರಣ ಪತ್ರಿಕೆ (೧೯೨೭) ಯಲ್ಲೂ ಮಾನಿ ಯೆಂತಲೇ ಇದೆ; ಸ್ಥಳೀಯರೂ ಹಾಗೆಯೇ ಉಚ್ಚರಿಸುತ್ತಾರೆ.

ನಿರ್ಲಕ್ಷ್ಯ. ಅದರಿಂದ ಸಾಲ ಸೋಲಗಳಾಗಿ ಅವರ ಆಸ್ತಿಪಾಸ್ತಿಗಳೂ ಸಾಲ ನೀಡಿದವರ ಪಾಲಾದವಂತೆ. ನನ್ನ ಸೋದರ ಮಾವಂದಿರೂ ವಾಸಿಸುತ್ತಿದ್ದ ಪುಟ್ಟ ಮನೆಗಳ ಹಿಂಭಾಗದಲ್ಲಿ ಹಿಂದೆ ವಿಶಾಲವಾದ ಚೌಕಿ ಮನೆ ಇದ್ದುದರ ನೆಲಗಟ್ಟು ಕಾಡು ಬೆಳೆದು ಮುಚ್ಚಿ ಹೋಗಿತ್ತು. ಅದನ್ನು ತೋರಿಸಿ ಹಿಂದಿನ ವೈಭವದ ಬಗೆಗೆ ನನ್ನ ತಾಯಿ ಮರುಗುತ್ತಿದ್ದುದನ್ನು ಗಮನಿಸಿದ ಜ್ಞಾಪಕವಿದೆ.

ತಂದೆ ತಾಯಿಯರ ಮದುವೆಯಾದ ಸುಮಾರು ಎರಡೂವರೆ ವರ್ಷಗಳ ನಂತರ ೨೬ ಸೆಪ್ಟೆಂಬರ್ ೧೯೩೯ರಲ್ಲಿ ನನ್ನ ಜನನವಾಯಿತು. ಗರ್ಭಿಣಿಯಾದ ನನ್ನ ತಾಯಿಯನ್ನು ತವರು ಮನೆಗೆ ಹೆರಿಗೆಗೆ ಕಳುಹಿಸಿದ್ದರಂತೆ. ನಿರೀಕ್ಷಿಸಿದ ಸಮಯ ಮೀರಿದರೂ ಹೆರಿಗೆಯಾಗದಿದ್ದಾಗ ಅವರನ್ನು ಹೊಳೆಗದ್ದೆಗೆ ಕರೆ ತರುವ ನಿರ್ಧಾರ ಮಾಡಿದರಂತೆ; ದಿನ ತುಂಬಿದ ಗರ್ಭಿಣಿ ಅದು ಹೇಗೆ ಘಾಟಿ ದಾರಿಯ ಉಬ್ಬು ತಗ್ಗುಗಳಲ್ಲಿ ನಡೆದರೋ! ದಾರಿಯಲ್ಲೇ ಹೆರಿಗೆ ನೋವು ಕಾಣಿಸಿಕೊಂಡಿತಂತೆ. ಮನೆಗೆ ಬಂದ ಒಂದೆರಡು ದಿನಗಳಲ್ಲಿ ಹೆರಿಗೆಯಾಯಿತು. ಅವರ ಜೊತೆಯಲ್ಲಿ ಎಳೆಯ ವಯಸ್ಸಿನಲ್ಲಿ ಮಾನಿಗೆ ನಡೆದುಕೊಂಡು ಹೋಗುತ್ತಿದ್ದ ಒಂದು ಸಂದರ್ಭದಲ್ಲಿ ನನ್ನ ತಾಯಿ ಹೆರಿಗೆ ನೋವು ಶುರುವಾದ ತಾಣವನ್ನು ಗುರುತಿಸಿ ನಿಟ್ಟುಸಿರು ಬಿಟ್ಟಿದ್ದು ಜ್ಞಾಪಕಕ್ಕೆ ಬರುತ್ತದೆ. ಆ ಕಾಲದ ನಮ್ಮ ಜನರ ಮೌಢ್ಯದ ಹಾಗೂ ವೈದ್ಯಕೀಯ ಸೌಲಭ್ಯಗಳ ಅಭಾವದ ಪರಿಸ್ಥಿತಿಗಳೆರಡರ ಪ್ರತೀಕ ಈ ಘಟನೆಯೆನ್ನಬಹುದು.

ನನ್ನ ಜನನ ತಂದೆಯವರಲ್ಲಿ ಅಪಾರ ಸಂತೋಷವನ್ನುಂಟು ಮಾಡಿತ್ತಂತೆ. ನನ್ನ ಏಳಿಗೆ ಹಾಗೂ ಭವಿಷ್ಯದ ಬಗೆಗೆ ಅಪಾರ ನಿರೀಕ್ಷೆ ಅವರಿಗಿತ್ತೆನಿಸುತ್ತದೆ. ದಕ್ಷಿಣ ಕನ್ನಡ ಜಿಲ್ಲೆಯ ಗರ್ಕಿ ಮಠ ಎಂಬ ಊರಿನ ಹೆಸರಾಂತ ಅಡಿಗರೆಂಬ ಜ್ಯೋತಿಷಿಯೊಬ್ಬರನ್ನು ಮನೆಗೇ ಕರಿಸಿ ಜಾತಕ ಬರೆಸಿದರಂತೆ. ಜ್ಯೋತಿಷಿ ನಾನು ಹುಟ್ಟಿದ ಘಳಿಗೆ (ಕಾಲ) ಅಷ್ಟೇನೂ ಪ್ರಶಸ್ತವಾದುದಲ್ಲವೆಂತಲೂ ಅದರಿಂದಾಗಿ ತಂದೆ ಅಥವಾ ತಾಯಿ ಯಾರಾದರೊಬ್ಬರಿಗೆ ಮರಣಾಂತಿಕ ಕಂಟಕವಿದೆ ಎಂದೂ ಭವಿಷ್ಯ ನುಡಿದಿದ್ದರಂತೆ; ಶಿಶುವನ್ನು ಯಾರಿಗಾದರೂ ದತ್ತು ನೀಡುವುದರಿಂದ ಆ ದೋಷ ಪರಿಹಾರವಾಗುತ್ತದೆಂದು ಸೂಚಿಸಿದ್ದರಂತೆ. ಮಕ್ಕಳಿಲ್ಲದ ನಮ್ಮ ದಾಯಾದಿಯೊಬ್ಬರಿಗೆ ನನ್ನನ್ನು ದತ್ತು ಕೊಡುವುದರ ಬಗೆಗೆ ಮಾತುಕತೆಗಳೂ ಆಗಿದ್ದವಂತೆ. ಆದರೆ ತಂದೆಗೆ ನನ್ನ ಮೇಲಿದ್ದ ಅತಿಯಾದ ವ್ಯಾಮೋಹ ಹಾಗೆ ಮಾಡಲು ಬಿಡಲಿಲ್ಲವಂತೆ; ಅವರೇ ಸಾವಿಗೀಡಾಗುವುದಾದರೂ ಆ ರೀತಿ ಮಾಡೆನೆಂದು ಪಟ್ಟು ಹಿಡಿದರು. ನನ್ನ ಬಗೆಗೆ ಅವರಿಗೆಷ್ಟು ಪ್ರೀತಿ ಆಶೋತ್ತರಗಳಿದ್ದವೆಂದರೆ ನಕ್ಷತ್ರ ಫಲದನುಸಾರ ಜ್ಯೋತಿಷಿ ಇಟ್ಟಿದ್ದ ಆ ಕಾಲದ ಹಳ್ಳಿಗಾಡಿನಲ್ಲಿ ಪ್ರಚಲವಿರುತ್ತಿದ್ದ ಹೆಸರನ್ನು ನಿರಾಕರಿಸಿ **ಚಂದ್ರಶೇಖರ** ಎಂದು ತಾವೇ ನಾಮಕರಣ ಮಾಡಿದ್ದರಂತೆ. ನಮ್ಮ ಸುತ್ತಮುತ್ತಲ ಊರುಗಳಲ್ಲಿ ಆ ಸಮಯದಲ್ಲಿ ಚಂದ್ರಶೇಖರಯೆಂಬ ಹೆಸರಿನವರಾರೂ ಇದ್ದಂತಿರಲಿಲ್ಲ. ಮುಂದೆ ನಾನು ಸ್ಕೂಲಿಗೆ ಸೇರುವಾಗ ಅದು ಚಂದ್ರಪ್ಪ, **ಚಂದ್ರಪ್ಪಗೌಡ** ಎಂದು ಮುಂತಾಗಿ ರೂಪಾಂತರಗೊಂಡಿದೆ. ಮುಂದೆ ವಿದ್ಯಾಭ್ಯಾಸದಲ್ಲಿ ಮುಂದುವರಿದು ಆ ಪ್ರಾಂತ್ಯದಲ್ಲೆಲ್ಲಾ ತುಂಬಾ ಚಾಲಾಕಿನವನೆಂದು ಗುರುತಿಸಲ್ಪಟ್ಟಾಗ ಸುತ್ತಮುತ್ತಲ ಊರುಗಳಲ್ಲಿ ಹಲವಾರು 'ಚಂದ್ರ'ಗಳು ಉದಯವಾದವು!

ನಾನು ಜನಿಸಿದ ಒಂದು ವರ್ಷದಲ್ಲೇ ನಮ್ಮ ಕುಟುಂಬದವರು ತಿರುಪತಿ ಯಾತ್ರೆ ಮಾಡಿದರು. ನನ್ನ ತಂದೆಯವರಿಗೆ ಸ್ವಲ್ಪ ಸಮಯದಿಂದಲೂ ದೇಹಾರೋಗ್ಯ ಸರಿಯಿರಲಿಲ್ಲ. ಆಗಾಗ್ಗೆ ಜ್ವರ ಬರುತ್ತಿದ್ದು ಹೊಟ್ಟೆ ಊದಿಕೊಳ್ಳಲಾರಂಭಿಸಿತ್ತು. ಮಲೆನಾಡಿನಲ್ಲಿ ಕೆಲವರಿಗೆ 'ಕೈಮಸಕು' ಅಥವಾ 'ಮದ್ದೀಡು'ವುದರಿಂದ ಹಾಗಾಗುತ್ತಿರಬಹುದೆಂದು ಹಲವು ರೀತಿಯ ಚಿಕಿತ್ಸೆ

ಗಳನ್ನು ಜರುಗಿಸಿದರಂತೆ. ಆದರೂ ಪರಿಣಾಮಕಾರಿಯಾಗದೆ ಇನ್ನೊಂದು ಆರು ತಿಂಗಳಲ್ಲಿ ತೀರಿಕೊಂಡರಂತೆ. ಆದರೆ ಆ ಕಾಲದಲ್ಲಿ ಮಲೆನಾಡಿನ ಜನರನ್ನು ಬೆನ್ನು ಹತ್ತಿದ್ದ ಮಲೇರಿಯಾ ರೋಗದ ಪರಿಣಾಮಗಳಿಂದಲೇ ನರಳಿ ಅವರು ಸಾವಿಗೀಡಾಗಿರಬಹುದೆಂದು ನಾವೀಗ ಅರ್ಥೈಸಬಹುದು.

ಕೇವಲ ಇಪ್ಪತ್ತೈದು ವರ್ಷಗಳಷ್ಟು ಎಳೆಯ ವಯಸ್ಸಿನಲ್ಲಿ ತೀರಿಕೊಂಡ ನನ್ನ ತಂದೆಯವರು ಚುರುಕು ಬುದ್ಧಿಯ ಸೌಮ್ಯ ಸ್ವಭಾವದವರಾಗಿದ್ದರೆಂದು ಅವರಿವರು ಹೇಳುವುದನ್ನು ಕೇಳಿದ್ದೇನೆ. ನಮ್ಮ ಮನೆಯಲ್ಲಿ ಆಗ ಅವರೊಬ್ಬರಿಗೆ ಸ್ವಲ್ಪ ಓದು ಬರೆಯಲು ಬರುತ್ತಿತ್ತಂತೆ. ಅವರ ಅಣ್ಣ ಶೇಷಪ್ಪಗೌಡರೂ ಸಹ ಎಳೆಯ ವಯಸ್ಸಿನಲ್ಲೇ ತೀರಿಕೊಂಡಿದ್ದು ತಂದೆಯವರು ಜೀವಿಸಿದ್ದ ಅಲ್ಪ ಸಮಯ ಮನೆಯ ಯಜಮಾನಿಕೆಯನ್ನೂ ನಿರ್ವಹಿಸಿದ್ದರಂತೆ. ನಮ್ಮ ಊರಿನಲ್ಲಿದ್ದ "ಚಿಕ್ಕಮ್ಮದೇವಿ" ದೇವಸ್ಥಾನದ ನಿರ್ಮಾಣ ಕಾರ್ಯ ಅವರ ಕಾಲದಲ್ಲೇ ಆಗಿದ್ದು; ಅದರ ಪೂಜಾರಿ ಗಣಮಗ ಬಚ್ಚನನ್ನೂ ದಕ್ಷಿಣ ಕನ್ನಡ ಜಿಲ್ಲೆಯಿಂದ ಕರೆಸಿ, ದೇವಸ್ಥಾನದ ಇತರ ವ್ಯವಸ್ಥೆಗಳನ್ನೂ ಅವರಿದ್ದಾಗಲೇ ಮಾಡಿಸಿದ್ದರು. ಎಳೆಯ ವಯಸ್ಸಿನಲ್ಲಿ ಅಷ್ಟೆಲ್ಲಾ ಸಾಧನೆ ಮಾಡಿದ್ದ ತಂದೆಯವರ ಮುಖಚರ್ಯೆಯನ್ನು ನೆನಪಿಟ್ಟುಕೊಳ್ಳುವ ಮೊದಲೇ ಅವರು ಗತಿಸಿದ್ದು ನನ್ನ ಜೀವಮಾನದ ವ್ಯಥೆಯಾಗಿ ಉಳಿದುಕೊಂಡಿದೆ.

ತಂದೆಯವರು ಕಾಲವಾದ ನಂತರ ದುಃಖತಪ್ತ ತಾಯಿಯ ಪರಿಸ್ಥಿತಿ ದೋಲಾಯಮಾನವಾಯಿತು. ದೊಡ್ಡ ಸಮಷ್ಟಿ ಕುಟುಂಬವೊಂದರಲ್ಲಿ ಅನಾಥ ಸದಸ್ಯೆಯಾಗಿ ಜೀವನ ಸಾಗಿಸುವುದು ಅಷ್ಟೊಂದು ಸುಲಭದ ಸಂಗತಿಯಾಗಿರಲಾರದು. ಅದರಿಂದ ತವರುಮನೆಯಲ್ಲೇ ನೆಲಸಬಹುದೆಂಬುದು ಹಲವರ ಭಾವನೆಯಾಗಿತ್ತಂತೆ. ಆದರೆ ಗಂಡು ಮಗನಿದ್ದುದು ಅವರ ಪಾಲಿನ ಆಶಾಕಿರಣವಾಗಿರಬೇಕು. ಅದರಿಂದ ಹೊಳೆಗದ್ದೆ ಮನೆಯಲ್ಲೇ ಇದ್ದುಕೊಂಡು ಜೀವನ ಸಾಗಿಸುವ ಗಟ್ಟಿ ನಿರ್ಧಾರ ಮಾಡಿದರು. ಪತಿ ತೀರಿಕೊಂಡಾಗ ಕೆಲವು ತಿಂಗಳು ಸಾಂತ್ವನಕ್ಕಾಗಿ ತವರು ಮನೆಯಲ್ಲಿ ಇದ್ದರಂತೆ. ಆ ನಂತರದ ದಿನಗಳಲ್ಲಿ ವರ್ಷದಲ್ಲಿ ಒಂದೆರಡು ಸಾರಿ ಮಾನಿಗೆ ಹೋಗಿ ಇದ್ದು ಬರುತ್ತಿದ್ದರಂತೆ. ಕ್ರಮೇಣ ಸಮಷ್ಟಿ ಕುಟುಂಬದ ಇತರ ಎಲ್ಲಾ ಸದಸ್ಯರಂತೆ ಅವರೂ ಒಬ್ಬರಾಗಿ ಬಿಟ್ಟರು. ನನ್ನ ಚಿಕ್ಕಪ್ಪಂದಿಗರಿಗೆಲ್ಲಾ ಮುಂದೆ ಮದುವೆಗಳಾಗಿ ಹೊಸದಾಗಿ ಮನೆಗೆ ಬಂದ ಕಿರಿಯರಿಗೆಲ್ಲಾ ಅಕ್ಕರೆಯ 'ಮಾನಿ ಅಕ್ಕಯ್ಯ' ಆದರು; ಅವರ ಮಕ್ಕಳು ಮರಿಗಳಿಗೆಲ್ಲಾ ಪ್ರೀತಿಯ 'ಮಾನಿ ದೊಡ್ಡವ್ವ' ಇಲ್ಲವೆ 'ಮಾನಿ ಅಜ್ಜಿ'ಯಾಗಿ ಬಿಡುತ್ತಿದ್ದರು; ವಯಸ್ಸಾಗಿ ಹಿರಿತನ ಉಂಟಾದಂತೆಲ್ಲಾ ಕುಟುಂಬದ ಕೆಲಸ ಕಾರ್ಯಗಳು ಮತ್ತಿತರ ಆಗುಹೋಗುಗಳಲ್ಲಿ ನಿರ್ಣಾಯಕ ಪಾತ್ರ ವಹಿಸುವ ಗೌರವಾನ್ವಿತ 'ಮಾನಿ ಹೆಗ್ಗಡ್ತಿ'ಯೆನಿಸಿಕೊಳ್ಳುವಂತೆಯೂ ಆಯಿತು. ಮನೆಯ ಪ್ರಮುಖ ನಿರ್ಧಾರಗಳಿಗೆ ಅವರ ಮಾರ್ಗದರ್ಶನ ಅವಶ್ಯಕವೆನಿಸುತ್ತಿತ್ತು. ಎಲ್ಲರೊಡನೆಯೂ ಹೊಂದಿಕೊಂಡು ಹೋಗುವ ಸ್ವಭಾವದ ನನ್ನವ್ವನನ್ನು ಯಾರೂ ಕಡೆಗಣಿಸುವಂತಿರಲಿಲ್ಲ.

ಎಳೆಯ ವಯಸ್ಸಿನಲ್ಲೇ ಪತಿಯನ್ನು ಕಳೆದುಕೊಂಡ ಅವರಿಗೆ ಭವಿಷ್ಯದ ಆಶಾದೀಪವೆನ್ನಬಹುದಾದ ನಾನೇ ಸರ್ವಸ್ವವಾದೆ. ಅವರ ಮಡಿಲಿನಲ್ಲಿ ನನ್ನನ್ನು ಜೋಪಾನವಾಗಿ ಸಾಕಿ ಸಲುಹಿದರು. ಒಂದರಘಳಿಗೆ ಒಬ್ಬರನ್ನೊಬ್ಬರು ಬಿಟ್ಟಿರದ ನಂಟು ಬೆಳೆದಿತ್ತು. ಮೂರ್‍ನಾಲ್ಕು ವರ್ಷಗಳು ಅವರ ಎದೆಹಾಲು ಕುಡಿದೆ. ಕುಟುಂಬದಲ್ಲಿ ಆ ಸಮಯದಲ್ಲಿ ತೀರಾ ಎಳೆಯ ಕಂದನಾಗಿದ್ದು, ತಂದೆಯಿಲ್ಲದ ತಬ್ಬಲಿಯಾಗಿದ್ದ ನಾನು ಎಲ್ಲರ ಪ್ರೀತ್ಯಾದರಗಳ ಕೇಂದ್ರವಾಗಿ

ಇರುತ್ತಿದ್ದೆ. ನನ್ನನ್ನು ಅಕ್ಕರೆಯಿಂದ ಓಲೈಸಿ ನೋಡಿಕೊಳ್ಳುವ ಚಿಕ್ಕಮ್ಮಂದಿರ ದಂಡೇ ಆಗ ನಮ್ಮ ಮನೆಯಲ್ಲಿತ್ತು. ಆದರೆ ಯಾರು ಎಷ್ಟೇ ಪ್ರೀತಿ ವಿಶ್ವಾಸದಿಂದ ನೋಡಿಕೊಂಡರೂ ನನ್ನೆಲ್ಲಾ ಕೆಲಸ ಕಾರ್ಯಗಳನ್ನು ಅವ್ವನೇ ಮಾಡಬೇಕೆಂದು ಹಠ ಮಾಡುತ್ತಿದ್ದೆ. ಬೆಳಿಗ್ಗೆ ಎದ್ದಾಗಿನಿಂದ ನನ್ನೆಲ್ಲಾ ನಿತ್ಯಕರ್ಮಗಳನ್ನು ಅವ್ವನೇ ಮಾಡಿಸಬೇಕು; ಅವ್ವನ ಕೈತುತ್ತಿನ ಸವಿ ಬೇರೆ ಯಾರೂ ನೀಡ ಲಾರರೆಂಬುದು ನನ್ನ ನಂಬಿಕೆಯಾಗಿತ್ತು. ಮುಂದೆ ವಿದ್ಯಾಭ್ಯಾಸದ ಸಲುವಾಗಿ ಬೇರೆ ಊರು ಗಳಲ್ಲಿ ನೆಲಸುವವರೆಗೂ ಅವ್ವನ ಮಗ್ಗುಲಲ್ಲೇ ಮಲಗುವ ಅಭ್ಯಾಸವಾಗಿ ಹೋಗಿತ್ತು. ರಜೆಗೆ ಮನೆಗೆ ಬಂದಾಗ ಅವ್ವನ ಸನಿಹ ಮಲಗಬೇಕೆಂಬ ಹಂಬಲವಾಗುತ್ತಿದ್ದರೂ ಚಿಕ್ಕಪ್ಪಂದಿರ ಮಕ್ಕಳು ಆ ಸ್ಥಾನ ಆಕ್ರಮಿಸಿಕೊಂಡಿರುತ್ತಿದ್ದುದು ಕಸಿವಿಸಿಯುಂಟು ಮಾಡುತ್ತಿತ್ತು.

ಅವ್ವ ಮತ್ತು ಮನೆಯವರೆಲ್ಲರೂ ಅದೆಷ್ಟು ಜೋಪಾನ ಮತ್ತು ಎಚ್ಚರಿಕೆಯಿಂದ ಸಾಕಿ ಸಲಹಲು ಪ್ರಯತ್ನಿಸುತ್ತಿದ್ದರೂ ಬಾಲ್ಯದ ದಿನಗಳಲ್ಲಿ ಹಲವು ಕಂಟಕಗಳಿಗೆ ಸಿಲುಕಿ ಬೀಳುತ್ತಿದ್ದೆ. ಅವೆಲ್ಲದರ ಪೂರ್ಣ ವಿವರಗಳು ಈ ಮೊದಲೇ ಪ್ರಸ್ತಾಪಿಸಿದ '**ನಮ್ಮೂರಿನ ನೆನಪುಗಳು**' ಕೃತಿಯಲ್ಲಿ ದಾಖಲಾಗಿವೆ. ಆದರೂ ಬಾಲ್ಯದ ದಿನಗಳ ಅನುಭವಗಳನ್ನು ನೆನಪಿಸಿಕೊಳ್ಳಲು ಸಂಕ್ಷಿಪ್ತವಾಗಿ ಇಲ್ಲಿ ಪ್ರಸ್ತಾಪಿಸುತ್ತೇನೆ:

## ಎಲೆ ಅಡಿಕೆ ಪ್ರಸಂಗ

ಅದೊಂದು ಮಳೆಗಾಲದ ಸಮಯ. ನನಗಾಗ ೩-೪ ವರ್ಷಗಳಾಗಿರಬಹುದು. ದಿನವೆಲ್ಲಾ ಗದ್ದೆಯಲ್ಲಿ ಕೆಲಸಮಾಡಿ ಬೇರೆಲ್ಲಾ ಹೆಂಗಸರ ಜೊತೆ ಅವ್ವನೂ ಊಟ ಮಾಡುತ್ತಿದ್ದಳು. ಅಂದು ಮನೆಗೆ ಹಿಂದಿರುಗಿದಾಗಿನಿಂದಲೂ ಯಾವುದೋ ಕಾರಣದಿಂದ ಅವ್ವನನ್ನು ಪೀಡಿಸುತ್ತಾ ರಚ್ಚೆ ಮಾಡುತ್ತಲೇ ಇದ್ದೆ. ಪಕ್ಕದ ಕೋಣೆಯಲ್ಲಿದ್ದ ಚಿಕ್ಕಪ್ಪ ಒಬ್ಬರು ನನ್ನ ಹಗರಣವನ್ನು ಬೇರೆಡೆಗೆ ಎಳೆಯುವ ಸಲುವಾಗಿ ಅವರಿದ್ದಲ್ಲಿಗೆ ಬಂದು ಎಲೆ ಅಡಿಕೆ ಹಾಕಲು ಕೊಡುವ ಆಮಿಷ ಒಡ್ಡಿದರು. ಅವ್ವನ ಜೊತೆ ಹಿಂದೆ ಎಲೆ ಅಡಿಕೆ ಹಾಕುವ ಅಭ್ಯಾಸವಿದ್ದುದರಿಂದ ಕೂಡಲೇ ಅವರಲ್ಲಿಗೆ ಹೋದೆ. ಅವರ ಚೀಲದಿಂದ ಅಡಿಕೆ, ಎಲೆ, ಸುಣ್ಣ ಬೆರೆಸಿ, ಬಾಯಲಿಟ್ಟು ಜಗಿದೆ. ಸ್ವಲ್ಪ ಸಮಯದಲ್ಲೇ ತಲೆ ಸುತ್ತಿ ಬಂದು ಅಲ್ಲೇ ಒರಗಿ ಮಲಗಿದೆ. ನನಗೆ ನಿದ್ದೆ ಬಂದು ಮಲಗಿರ ಬಹುದೆಂದು ಚಿಕ್ಕಪ್ಪ ಭಾವಿಸಿದರಂತೆ. ಊಟ ಮುಗಿಸಿದ ನಂತರ ನನ್ನನ್ನು ಕರೆದುಕೊಂಡು ಹೋಗಲು ಅವ್ವ ಅಲ್ಲಿಗೆ ಬಂದಳು. ನಿದ್ದೆಯಿಂದ ಮಲಗಿರಬಹುದೆಂದು ಮೇಲೆತ್ತಲು ಪ್ರಯತ್ನಿ ಸಿದಳು. ಮೈ ಕೈಕಾಲುಗಳೆಲ್ಲಾ ತಣ್ಣಗಾಗಿ, ಬಾಯಿಯಲ್ಲಿ ನೊರೆ ಬರುತ್ತಿತ್ತು; ಕ್ಷೀಣವಾಗಿ ಉಸಿರಾಡುತ್ತಿತ್ತು. ಇನ್ನೇನು ಜೀವವೇ ಹೋಗಿರಬೇಕೆಂದು ಅವ್ವ ರೋದನ ಮಾಡಲಾರಂಭಿ ಸಿದಳು. ಮನೆಯವರೆಲ್ಲಾ ಬಂದು ನೋಡಿದರು ಒಲೆಯಿಂದ ಬಿಸಿ ಬೂದಿ ತಂದು ಮೈಯೆಲ್ಲಾ ತೀಡಿದರು. ಮತ್ತೆ ಕೆಲವರು ದೇವಸ್ಥಾನದಲ್ಲಿ ಅಂದು ಬಚ್ಚನ ಮೇಲೆ ಗಣ ಬಂದಿರುತ್ತಿದ್ದುದ ರಿಂದ ಅಲ್ಲಿಗೆ ಓಡಿದರು. ಅವರು ಹಿಂತಿರುಗಿ ಬರುವಷ್ಟರಲ್ಲೇ ವಾಂತಿಯಾಗಿ ಸ್ವಲ್ಪ ಪ್ರಜ್ಞೆ ಬಂದಂತಾಗಿತ್ತಂತೆ. ಆ ದಿನ 'ರಣದ ಸುಳಿಗೆ' ಸಿಕ್ಕಿದ್ದರಿಂದ ಹಾಗಾಗಿತ್ತೆಂದು ಗಣ ತನ್ನ ಅಭಿಪ್ರಾಯ ಹೇಳಿತ್ತಂತೆ ಅದರ ನಿವಾರಣೆಗೆ ವಿಭೂತಿ ಕೊಟ್ಟಿದ್ದಲ್ಲದೆ, ಮುಂದಿನ ವಾರ 'ರಾವು' ತೆಗೆಸಬೇಕೆಂದು ವಿಧಿಸಿತ್ತು. ಕೆಲವು ತರಹದ ವೀಳ್ಯದೆಲೆ ಹಾಕಿದಾಗ ಒಂದು ರೀತಿಯ ಸಂಕಟವಾಗುವುದು ಸ್ವಾಭಾವಿಕ. ಈಗಲೂ ಕೆಲ ಸಾರಿ ನನಗೆ ಹಾಗಾಗುತ್ತದೆ. ಚಿಕ್ಕವನಾಗಿದ್ದರಿಂದ ಅದು ಪ್ರಕೋಪಕ್ಕೆ ಹೋಗಿರಬೇಕು. ಮುಂದಿನ ವಾರದ ಒಂದು ರಾತ್ರಿ ನನಗೆ 'ರಾವು' ತೆಗೆಯುವ ಕಾರ್ಯಕ್ರಮ ಜರುಗಿಸಿದರು. ಅಂದು ಗಣಮಗ ಬಚ್ಚನನ್ನು ಮನೆಗೇ ಕರೆಸಿ ಶುದ್ಧ 'ಮಡಿಯ' ವಾತಾವರಣ

ದಲ್ಲಿ ಗಣ ಬರಿಸಿದರು. ಕಲಶ ಸ್ಥಾಪನೆ ಮಾಡಿ, ಒಂದು ಹರಿವಾಣದ ತುಂಬ ಅನ್ನ ಇರಿಸಿ, ಅದಕ್ಕೆ ಯಥೇಚ್ಛವಾಗಿ ಕುಂಕುಮ ಬೆರೆಸಿ 'ಚೆರು' ತಯಾರಿಸಿದರು. ಅಷ್ಟರಲ್ಲೇ ಆಹ್ವಾನವಾದ ಗಣ ಬೆಂಕಿಯ ಕೋಲಿನಿಂದ ನನ್ನನ್ನೂ ಸೇರಿದಂತೆ ಕಲಶಕ್ಕೆ ಸುತ್ತು ಬರಿಸಿತು. ಆಗ ಕೆಂಪು ಕೋಳಿ ಹುಂಜವನ್ನು ಸಹ ಸುತ್ತು ಬರಿಸಿ ಬಲಿಕೊಡಲಾಯಿತು. ಮುಂದೆ ಇಂತಹುದೇ ರಾವು ತೆಗೆಯುವ ಕಾರ್ಯ ಬಹಳ ವರ್ಷಗಳವರೆಗೂ ಜರುಗುತ್ತಿದ್ದವು.

## ಗೂಳಿಯೊಂದು ಮೈ ಮೇಲೆ ಹಾರಿದ್ದು

ಇನ್ನೊಂದು ಪ್ರಕರಣದಲ್ಲಿ ಗೂಳಿಯೊಂದು ನನ್ನ ಮೈಮೇಲೆ ಹರಿಹಾಯ್ದು, ನನ್ನ ಜೀವಕ್ಕೇ ಅಪಾಯ ಒದಗುವಂತಾಗಿದ್ದನ್ನು ನೆನಪಿಸಿಕೊಂಡರೆ ಈಗಲೂ ಮೈ ನಡುಕ ಉಂಟಾಗುತ್ತದೆ. ಹಳ್ಳಿಗಳಲ್ಲಿ ಎಳೆಯ ಗೂಳಿಗಳ ಬೀಜ ಮರ್ದನ ಮಾಡಿ, ಅವುಗಳ ಲೈಂಗಿಕಾಸಕ್ತಿಯನ್ನು ಕುಂದಿಸುವ ಕಾರ್ಯ ಬಹಿರಂಗವಾಗಿಯೇ ಜರುಗುತ್ತದೆ. ಅನಂತರ ಅವು ಕೇವಲ ದುಡಿಮೆಯ ಪಶುಗಳಾಗಿ ಜೀವನ ಸಾಗಿಸುವಂತಾಗುತ್ತವೆ. ಅಂತಹ ಕಾರ್ಯಕ್ರಮ ನಮ್ಮ ಮನೆಯ ಅಂಗಳದಲ್ಲೇ ಒಂದು ಸಾರಿ ಜರುಗಿತು. ಗೂಳಿಗಳ ಕಾಲುಗಳಿಗೆ ಹಗ್ಗ ಹಾಕಿ ನೆಲದಲ್ಲಿ ಕೆಡವಿ ನಾಲ್ಕಾರು ಜನ ಒತ್ತಿ ಹಿಡಿದು ಕೊಳ್ಳುತ್ತಾರೆ. ಅನಂತರ ಎರಡು ಕವಣೆ ಕೋಲುಗಳ ನಡುವೆ ವೃಷಣ ಚೀಲವನ್ನು ಸಿಕ್ಕಿಸಿ ಒತ್ತುತ್ತಾ ಬೀಜಗಳು ನಾಶವಾಗುವಂತೆ ಮಾಡುತ್ತಾರೆ. ಹೆಂಗಸರು, ಹುಡುಗರು, ಮಕ್ಕಳು ಅದನ್ನು ವೀಕ್ಷಿಸದಂತೆ ಮನೆಯೊಳಗೆ ಕಳುಹಿಸಿದ್ದರು. ನನಗಾಗ ಐದು ವರ್ಷಗಳಾಗಿದ್ದಿರಬಹುದು. ಅದನ್ನು ವೀಕ್ಷಿಸಬೇಕೆಂಬ ಕೆಟ್ಟ ಕುತೂಹಲ ನನಗುಂಟಾಯಿತು. ಬೇರೆ ಯಾರಿಗೂ ಕಾಣದಂತೆ ಮನೆಯ ಪಕ್ಕದ ಓಣಿಯಲ್ಲಿ ಅವಿತುಕೊಂಡು ನೋಡಲಾರಂಭಿಸಿದೆ. ಒಂದು ಬಲಿಷ್ಠ ಹೋರಿಗೆ ಕಾರ್ಯಾಚರಣೆ ಆರಂಭವಾಗುತ್ತಲೇ ಒತ್ತಿ ಹಿಡಿದವರಿಂದಲೂ ಮತ್ತು ಹಗ್ಗದಿಂದಲೂ ಬಿಡಿಸಿಕೊಂಡು ಗೂಳಿ ಮೇಲೆ ಎದ್ದು ಬಿಟ್ಟಿತು. ಸುತ್ತಲೂ ಇದ್ದ ಜನರಿಂದ ತಪ್ಪಿಸಿಕೊಳ್ಳಲು ಸ್ವಲ್ಪ ತೆರಪಾದ ಜಾಗವನ್ನು ನೋಡಿ ಅತ್ತ ಓಡಲಾರಂಭಿಸಿತು. ಆ ಜಾಗ ನಾನು ಅವಿತುಕುಳಿತ ಓಣಿಯೇ. ಅದು ಅತ್ತ ಬರುವಾಗಲೇ ನಾನಲ್ಲಿದ್ದಿದ್ದನ್ನು ಇತರರು ನೋಡಿ ಹಾಹಾಕಾರ ಮಾಡಿದರು. ಇನ್ನೇನು ಅದು ನನ್ನ ಮೇಲೆ ಹರಿಹಾಯಬೇಕು. ಅಷ್ಟರಲ್ಲೇ ಅದಾವ ಸಮಯ ಸ್ಫೂರ್ತಿಯಿಂದಲೋ ಒಂದು ಕಡೆ ಮನೆಯ ಗೋಡೆ, ಮತ್ತೊಂದು ಕಡೆ ಇದ್ದ ಬೇಲಿಯ ಮೇಲೆ ಎರಡು ಕಾಲುಗಳನ್ನಿಟ್ಟು ನಿಂತುಕೊಂಡು ಬಿಟ್ಟೆ; ಗೂಳಿ ನನ್ನ ಕಾಲುಗಳ ಸಂದಿನಲ್ಲೇ ರಭಸದಿಂದ ನುಗ್ಗಿ ಓಡಿ ಹೋಯಿತು. ನನಗೇನೂ ಆಗದಿದ್ದರೂ ಅಪಾಯದ ಹೆದರಿಕೆಯಿಂದ ಗಡಗಡ ನಡುಗುತ್ತಿದ್ದೆ. ಕೆಲವರು ನನ್ನನ್ನು ಕೆಳಗಿಳಿಸಿದರು. ಗಲಾಟೆಯ ಶಬ್ದ ತಿಳಿದ ನನ್ನ ತಾಯಿ ಮತ್ತಿತರ ಹೆಂಗಸರು ಹೊರಗೆ ಬಂದು ನೋಡಿದಾಗ ನನ್ನ ಪರಿಸ್ಥಿತಿಯ ಅರಿವಾಯಿತು. ಅವ್ವ ಅಲ್ಲಿದ್ದವರನ್ನೆಲ್ಲಾ ಬೈದು ಶಪಿಸಿದಳು. ಮುಂದಿನ ವಾರ ಇನ್ನೂ ಒಂದು ಸಾರಿ 'ರಾವು' ತೆಗೆಸಿದರು!

## ದೈವಭಕ್ತಿ, ಪೂಜೆ, ಹರಕೆ ಇತ್ಯಾದಿ

ಮನೆಯ ಹತ್ತಿರದಲ್ಲೇ ಹೊಳೆ ಇದ್ದುದರಿಂದ ನಾವು ಹುಡುಗರೆಲ್ಲಾ ಬಹುಪಾಲು ಅದರಲ್ಲಿ ಮುಳುಗೇಳುವುದರಲ್ಲೇ ಕಾಲ ಕಳೆಯುತ್ತಿದ್ದೆವು. ಅವ್ವನಿಗೆ ಆ ದಿಸೆಯಲ್ಲಿ ನನ್ನ ಚಲನವಲನದ ಮೇಲೆ ಸದಾ ನಿಗಾ ಇಡುವುದೇ ಪ್ರಮುಖ ಕೆಲಸವಾಗಿರುತ್ತಿತ್ತು. ದೇವರು ದಿಂಡರುಗಳಲ್ಲಿ ಅಪಾರ ಭಕ್ತಿ ವಿಶ್ವಾಸವಿದ್ದ ಅವ್ವ ನನಗಾಗಿ ಅದೆಷ್ಟು ಹರಕೆ ಹೊತ್ತಿದ್ದಳೋ; ಅದೆಷ್ಟು

ಪೂಜೆ ಮಾಡಿಸುತ್ತಿದ್ದಳೋ ಲೆಕ್ಕವಿರಲಾರದು. ಇರುವೆಗಳ ಬಿಲಗಳ ಸುತ್ತ ಸಕ್ಕರೆ ಹಾಕುವುದು, ಸ್ವಲ್ಪ ದೂರದಲ್ಲಿದ್ದ ಅಶ್ವತ್ಥ ಮರ ಪ್ರದಕ್ಷಿಣೆ ಮುಂತಾದವೆಲ್ಲಾ ಆಗಿಂದಾಗ ಮಾಡಲೇಬೇಕಾಗಿತ್ತು. ವರ್ಷಕ್ಕೊಂದು ಸಾರಿಯಾದರೂ ಸತ್ಯನಾರಾಯಣ ವ್ರತ, ರಾವು ತೆಗೆಸುವಂಥ ಕಾರ್ಯಕ್ರಮಗಳು ಕಡ್ಡಾಯವಾಗಿ ಜರುಗುತ್ತಿದ್ದವು. ಧರ್ಮಸ್ಥಳ, ಕೊಲ್ಲೂರು, ಉಡುಪಿ, ಮಂದರ್ತಿ, ಕಮಲ ಶಿಲೆ, ಮುಂತಾದ ಕಡೆಯ ದೇವಾಲಯಗಳಿಗೆ ಹರಕೆಯ ಪ್ರಾರ್ಥನೆಗಳು ಅವ್ಯಾಹತವಾಗಿ ಜರುಗುತ್ತಲೇ ಇದ್ದವು. ಹಿಂದುಗಳ ದೇವರು ದಿಂಡರುಗಳ ರಕ್ಷಣೆ ಸಾಲದೋ ಎಂದು ಮುಸ್ಲಿಮರ 'ಅಲ್ಲಾದಿ' ದೇವರಿಗೆ ಕೆಂಡಾರ್ಚನೆಯ ಹರಕೆಯನ್ನು ಸಹಾ ಇಟ್ಟು ಕೊಂಡಿದ್ದರು! ಎಳೆತನದ ಮುಗ್ಧತೆ ಯಿಂದಲೋ, ಆ ಕಾಲದಲ್ಲಿ ಮನೆ ಮತ್ತು ಸುತ್ತಲ ಪರಿಸರದಲ್ಲಿ ದೈವ-ದೇವರುಗಳ ಬಗೆಗೆ ಜನ ಸಮೂಹದವರಲ್ಲಿದ್ದ ನಂಬಿಕೆಯಿಂದಲೋ, ಅವೆಲ್ಲಕ್ಕಿಂತ ಅವ್ವ ನನ್ನ ಒಳಿತಿಗಾಗಿ ಜರುಗಿ ಸುತ್ತಿದ್ದ ಪೂಜೆ ಪುನಸ್ಕಾರಗಳ ಪ್ರಭಾವದಿಂದಲೋ ಏನೋ ನಾನೊಬ್ಬ ಶ್ರದ್ಧಾವಂತ ದೈವಭಕ್ತ ನಾಗಿದ್ದೆ. ಮನೆಯಲ್ಲಿ ಆಗಾಗ್ಗೆ ಜರುಗುತ್ತಿದ್ದ ಹಬ್ಬ ಹರಿದಿನ ಮತ್ತಿತರ ದೈವೀಕ ಕಾರ್ಯಾಚರಣೆ ಗಳಲ್ಲಿ - ತುಳಸಿಪೂಜೆ, ಗೋ ಪೂಜೆ, ಭೂಮಿ ಪೂಜೆ, ಬೇಟೆ ದೇವರ ಪೂಜೆ - ನಾನೇ ಪೂಜಾ ಕೈಂಕರ್ಯ ಮಾಡುವಂತೆ ಪುಸಲಾಯಿಸುತ್ತಿದ್ದಳು. ಗಣಮಗ ಬಚ್ಚ ಊರಲ್ಲಿರದಿದ್ದ ಸಮಯಗಳಲ್ಲಿ ದೇವಸ್ಥಾನದ ಪೂಜೆಯನ್ನು ಸಹಾ ನಾನೇ ಮಾಡಬೇಕಾಗುತ್ತಿತ್ತು! ಮುಂದೆ ವಿದ್ಯಾಭ್ಯಾಸದಲ್ಲಿ ನಿರತನಾದ ಸಮಯದಲ್ಲಿ ಅದೇ ಮೊದಲ ಬಾರಿಗೆ ದಸರಾದ ಕೊನೆಯ ಮೂರು ದಿನ ಸರಸ್ವತೀ ಪೂಜೆಯನ್ನು ಆಚರಿಸುವ ಪದ್ಧತಿಯನ್ನು ಆರಂಭಿಸಿದ್ದೆ.

ವಿದ್ಯಾಭ್ಯಾಸದಲ್ಲಿ ಮುಂದುವರಿದು ನನ್ನಲ್ಲಿ ವೈಚಾರಿಕ ಚಿಂತನೆಗಳು ಉಂಟಾಗುತ್ತಿದ್ದಂತೆ ವ್ರತ, ಪೂಜೆ ಪುನಸ್ಕಾರ ಹರಕೆಗಳಲ್ಲಿ ನಂಬಿಕೆ ಕಳಚಲಾರಂಭಿಸಿತು. ಹಲವಾರು ಹರಕೆಗಳನ್ನು ದೊಡ್ಡವನಾಗುವವರೆಗೂ ತೀರಿಸಲಾಗಲಿಲ್ಲ. ಮದುವೆಗೆ ಕೆಲವು ದಿನಗಳ ಹಿಂದಿನ ಶಿವರಾತ್ರಿಯ ರಾತ್ರಿ ಧರ್ಮಸ್ಥಳದ ಹರಕೆ ತೀರಿಸಲು ಹೋದೆವು. ತಂಗಲು ಸ್ಥಳಾವಕಾಶವಿಲ್ಲದೆ ಬಸ್ ನಿಲ್ದಾಣದಲ್ಲಿ ರಾತ್ರಿ ಕಳೆದೆವು! ಮುಂದೆ ಕೊಳ್ಳೇಗಾಲದಲ್ಲಿದ್ದಾಗ 'ಅಲ್ಲಾದಿ' ದೇವರ ಹರಕೆ ತೀರುವಂತೆ ಮಾಡಿದಳು. ಹಿಂದೆ ಪ್ರಾರ್ಥಿಸಿಕೊಂಡಿದ್ದ ಹರಕೆಗಳೆಲ್ಲಾ ತೀರಿದ ನಂತರ, ಮತ್ತೆ ಹರಕೆ, ಪೂಜೆ ಪುನಸ್ಕಾರಗಳಿಗೆ ನನ್ನನ್ನು ಈಡು ಮಾಡಬಾರದೆಂದು ಅವ್ವನ ಮನ ಒಲಿಸುವಲ್ಲಿ ಯಶಸ್ವಿಯಾದೆನೆಂದೇ ಹೇಳಬೇಕು.

ದೈವಭಕ್ತಿ ಪರಾಯಣತೆ ಬಹಳ ಕಾಲ ನನ್ನಲ್ಲಿ ಉಳಿದು ಕೊಂಡಿರದಿದ್ದರೂ ಕಲಿಕೆಯ ವಿವಿಧ ಹಂತಗಳಲ್ಲಿ ರಾಮಕೃಷ್ಣ ಪರಮಹಂಸ, ವಿವೇಕಾನಂದ, ದಯಾನಂದ ಸರಸ್ವತಿ, ಮಹಾತ್ಮಾಗಾಂಧಿ ಮುಂತಾದವರ ಆಧ್ಯಾತ್ಮಿಕ ಚಿಂತನೆಗಳು ನನ್ನ ಮೇಲೆ ಪ್ರಭಾವ ಬೀರತೊಡಗಿದವು. ಮೂಢನಂಬಿಕೆ ಅಂಧಶ್ರದ್ಧಾರಿತ ಆಚರಣೆಗಳ ಬಗೆಗೆ ನಂಬಿಕೆ ಕುಸಿಯಲಾರಂಭಿಸಿತು. ಭಕ್ತರಿಗೂ ದೇವರಿಗೂ ಮಧ್ಯವರ್ತಿಗಳಂತೆ ವರ್ತಿಸುವ ಪೂಜಾರಿಗಳು ನಡೆಸುವ ಅವ್ಯವಹಾರ, ಮೋಸದ ಪ್ರಕರಣಗಳು ಅವರ ಬಗೆಗೆ ಜುಗುಪ್ಸೆಯುಂಟು ಮಾಡುತ್ತಿತ್ತು. ಮಹದೇಶ್ವರ ಬೆಟ್ಟದ ದೇವಸ್ಥಾನದ 'ತಮ್ಮಡಿ' (ಪೂಜಾರಿ)ಯೊಬ್ಬ ಭಕ್ತರು ತಂದು ಸುರಿಯುತ್ತಿದ್ದ ಕಾಣಿಕೆಯ ನೋಟುಗಳನ್ನು ಎಣಿಸುತ್ತಿರುವಾಗಲೇ ಕದಿಯುತ್ತಿದ್ದ ಪ್ರಕರಣ ನನ್ನ ಗಮನಕ್ಕೆ ಬಂದಿತ್ತು. ಕೆಲವು ವರ್ಷಗಳ ಹಿಂದೆ ತಿರುಪತಿ ದೇವಸ್ಥಾನದ ಪೂಜಾರಿಗಳ ಮನೆಯಲ್ಲಿ ಕೋಟಿಗಟ್ಟಲೆ ಹಣ ಪತ್ತೆಯಾಯಿತೆಂದು ವರದಿಯಾಗಿತ್ತು. ಮೂಢ ನಂಬಿಕೆಗಳ ವಿರುದ್ಧ ಡಾ|| ಎಚ್. ನರಸಿಂಹಯ್ಯ, ಕುವೆಂಪು, ಡಾ|| ಶಿವರಾಮ ಕಾರಂತರಂಥರವರ ಬರವಣಿಗೆ ಹಾಗೂ ಅವರ

ಜೀವನಾದರ್ಶಗಳು ನನ್ನಲ್ಲಿ ಬಹಳಷ್ಟು ಪ್ರಭಾವ ಬೀರಿವೆ. ಇವೆಲ್ಲದರಿಂದ ನಾನೀಗ ಒಂದು ರೀತಿಯ ನಿರೀಶ್ವರವಾದಿಯೇ ಆಗಿದ್ದೇನೆನ್ನಬಹುದು.

ಬಾಲ್ಯದ ದಿನಗಳಲ್ಲಿ ಇತರ ಹುಡುಗರ ಜೊತೆಯಲ್ಲಿ ಜಾತಿಯ ಮೇಲು ಕೀಳುಗಳನ್ನು ಗಣನೆಗೆ ತೆಗೆದುಕೊಳ್ಳದೆ ಹಳ್ಳಿಯ ಆಟೋಟ, ಹೊಳೆಯಲ್ಲಿ ಈಜಾಟಗಳಂಥ ನಾನಾ ಬಗೆಯ ತುಂಟಾಟಗಳ ಮುಂಚೂಣಿಯಲ್ಲೂ ಇರುತ್ತಿದ್ದೆ. (ನನ್ನ ಏಳಿಗೆ, ಸುಖ ಸಂತೋಷ ಹಾಗೂ ಭವಿಷ್ಯದ ಬಗೆಗೆ ಸದಾ ಯೋಚನಾಮಗ್ನಳಾಗಿರುತ್ತಿದ್ದ ತಾಯಿಗೆ ನನ್ನ ಚಟುವಟಿಕೆಗಳ ಬಗೆಗೆ ನಿಗಾ ಇಟ್ಟುಕೊಳ್ಳುವುದೇ ಬಹಳ ತ್ರಾಸಿನ ಕೆಲಸವಾಗುತ್ತಿತ್ತು.) ಆ ದನಗಾಹಿ ಹುಡುಗರ ಜೊತೆ ಸೇರಿಕೊಂಡು ಹಕ್ಕಿ ಪಕ್ಷಿಗಳ ಶಿಕಾರಿ, ಹಣ್ಣು ಹಂಪಲುಗಳ ಹುಡುಕಾಟಗಳಲ್ಲಿ ಭಾಗವಹಿಸುತ್ತಲೂ ಇದ್ದೆ. ಆದರೆ ಶಾಲಾ ಕಾಲೇಜುಗಳಲ್ಲಿ ಅಭ್ಯಾಸ ನಿರತನಾದ ಸಮಯದಲ್ಲಿ ಕಲಿಕೆಯಲ್ಲೇ ಬಹುಪಾಲು ನಿರತನಾಗಿರುತ್ತಿದ್ದು ಆಗ ಲಭ್ಯವಿರುತ್ತಿದ್ದ ಆಟೋಟಗಳ ಅಲ್ಪ ಅವಕಾಶಗಳಲ್ಲಿ ಭಾಗಿಯಾಗಲು ಸಾಧ್ಯವಾಗದಿರುವುದಕ್ಕೆ ಈಗ ವ್ಯಥೆ ಪಟ್ಟುಕೊಳ್ಳುವಂತಾಗುತ್ತದೆ.

## ಅಕ್ಷರ ಕಲಿಕೆಯ ಅವಾಂತರಗಳು

ನನ್ನ ಭವಿಷ್ಯವನ್ನು ರೂಪಿಸುವಲ್ಲಿ ವಿದ್ಯಾವಂತನನ್ನಾಗಿ ಮಾಡಬೇಕೆಂಬ ಹಂಬಲ ಅವ್ವನ ಮನದಾಳದಲ್ಲಿ ಹುದುಗಿಕೊಂಡಿತ್ತು. ಅಂತಹ ಒಂದು ಯೋಚನೆ ಹೇಗೆ ಆ ಕಾಲದಲ್ಲಿ ಮೂಡಿ ಬಂದಿತ್ತೆಂಬುದು ಅಚ್ಚರಿಯುಂಟುಮಾಡುತ್ತದೆ. ರೈತಾಪಿ ಕೆಲಸದವರು ವಿದ್ಯೆ ಕಲಿತು ಮಾಡ ಬೇಕಾದದ್ದೇನು ಎಂಬ ಮನೋಭಾವ ಮಲೆನಾಡಿನ ಮುಗ್ಧ ಜನರದ್ದಾಗಿದ್ದಿತು. ಇಪ್ಪತ್ತನೇ ಶತಮಾನದ ಮಲೆನಾಡಿನ ಕಾಡುಗುಡ್ಡಗಳ ನಡುವೆ ಅಲ್ಲಲ್ಲೇ ಇರುತ್ತಿದ್ದ ಸಣ್ಣಪುಟ್ಟ ಹಳ್ಳಿಗಳಲ್ಲಿ ಶಾಲೆಗಳ ಹೆಸರು ಕೇಳಿದವರೇ ಇರುತ್ತಿರಲಿಲ್ಲವೆನ್ನಬಹುದು. ನಮ್ಮೂರಿಗೆ ಹತ್ತಿರವೆನ್ನಬಹುದಾದ ಯಡೂರು, ಮೇಗರವಳ್ಳಿ, ತೀರ್ಥಹಳ್ಳಿಗಳಂಥ ಊರುಗಳಲ್ಲಿ ಶಾಲೆಗಳಿದ್ದರೂ ಮಕ್ಕಳನ್ನು ಅಷ್ಟು ದೂರ ಕಳುಹಿಸುವುದು ಅಸಾಧ್ಯವೇ. ಅಂತಹ ಊರುಗಳಲ್ಲಿ ವಿದ್ಯಾರ್ಥಿಗಳಿಗೆ ವಸತಿ ಸೌಕರ್ಯ ಗಳೂ ಇರುತ್ತಿರಲಿಲ್ಲ. ಅಂತಹ ಪರಿಸರದಲ್ಲಿ ಅಪರೂಪಕ್ಕೋ ಎಂಬಂತೆ ಒಬ್ಬ ಪುಟ್ಟಪ್ಪ, ಇನ್ನೊಬ್ಬ ಮಂಜಪ್ಪ, ಮತ್ತೊಬ್ಬ ಗೋಪಾಲ, ಮಗದೊಬ್ಬ ಮಾನಪ್ಪ* ರಂಥವರು ತೀರ್ಥಹಳ್ಳಿ, ಶಿವಮೊಗ್ಗ ಮೈಸೂರು, ಬೆಂಗಳೂರುಗಳಿಗೆ ಹೋಗಿ ವಿದ್ಯಾಭ್ಯಾಸ ನಿರತರಾಗಿ ಮುಂದೆ ಗಣ್ಯವ್ಯಕ್ತಿಗಳಾದದ್ದು ಪವಾಡವೇ ಸರಿ!

ಈ ಹಿನ್ನೆಲೆಯಲ್ಲಿ ನನಗೆ ನಾಲ್ಕು ಅಕ್ಷರ ಕಲಿಸಲು ನನ್ನವ್ವ ಮಾಡಿದ ಹರಸಾಹಸ ಗಾಥೆಯನ್ನು ಅತ್ಯಂತ ಕೃತಜ್ಞತಾಪೂರ್ವಕವಾಗಿ ದಾಖಲಿಸುವುದು ನನ್ನ ಕರ್ತವ್ಯವೆಂದು ಭಾವಿಸುತ್ತೇನೆ. ಈ ಪ್ರಪಂಚಕ್ಕೆ ಕಾಲಿಟ್ಟು ಕಣ್ಣು ಬಿಟ್ಟು ನೋಡುವಷ್ಟರಲ್ಲೇ ತಂದೆಯನ್ನು ಕಳೆದು ಕೊಂಡು ತಬ್ಬಲಿಯಾದವನನ್ನು ವಿಧವೆ ತಾಯಿ ಗೊಮ್ಮಟ ಸದೃಶ ವಿಗ್ರಹವಾಗಿ ರೂಪಿಸುವಲ್ಲಿ ಅನುಭವಿಸಿರಬಹುದಾದ ಕಷ್ಟಕಾರ್ಪಣ್ಯಗಳಿಗೆ ಸರಿಸಾಟಿ ಇಲ್ಲವೆಂದರೆ ಉತ್ಪ್ರೇಕ್ಷೆಯಲ್ಲ.

ನನ್ನ ಬಾಲ್ಯದ ಸಮಯದಲ್ಲಿ ನಮ್ಮ ಮನೆ ಅಥವಾ ಸುತ್ತಮುತ್ತಲ ಊರುಗಳಲ್ಲಿ ಶಾಲೆ ಗಳಿರಲಿಲ್ಲ; ವಿದ್ಯಾಭ್ಯಾಸದ ಪರಿಸರ/ವಾತಾವರಣವೇ ಇರಲಿಲ್ಲವೆನ್ನಬಹುದು. ಯುವ

---

*ಕುಪ್ಪಳಿ ಪುಟ್ಟಪ್ಪ (ಕುವೆಂಪು) ಕಡಿದಾಳ್ ಮಂಜಪ್ಪ, ಶಾಂತವೇರಿ ಗೋಪಾಲಗೌಡ, ಹಾರೋಗದ್ದೆ ಮಾನಪ್ಪ ನಾಯಕ (ಹಾಮಾನಾ).

ವಯಸ್ಸಿನಲ್ಲಿ ಇಹಲೋಕ ಯಾತ್ರೆಯನ್ನು ಮುಗಿಸಿದ ನನ್ನ ತಂದೆಯವರು ಹೇಗೋ ನಾಲ್ಕಕ್ಷರ ಕಲಿತುಕೊಂಡಿದ್ದರಂತೆ. ನನ್ನ ಚಿಕ್ಕಪ್ಪಂದಿರಲ್ಲಿ ಒಬ್ಬರಾದ ಸಣ್ಣ ಶಿದ್ದಪ್ಪಗೌಡರು (ಮನೆಯಲ್ಲಿ ಅವರನ್ನು ಬಿಳಿ ಅಣ್ಣಯ್ಯ ಎಂದು ಕರೆಯುವುದು ವಾಡಿಕೆ) ಸ್ವಲ್ಪ ಓದು ಬರಹ ಕಲಿತಿದ್ದರು. ಕಾಗದ ಪತ್ರಗಳನ್ನು ಓದುತ್ತಿದ್ದರು. ಯಕ್ಷಗಾನದ ಪದಗಳ ಸಾಲುಗಳನ್ನು ಗುನುಗುತ್ತಿದ್ದರು. ಎಲ್ಲಕ್ಕಿಂತ ಮಿಗಿಲಾಗಿ ಬೆಳಗಿನ ಜಾವಗಳಲ್ಲಿ "ಏಳು ನಾರಾಯಣನೆ ಏಳು, ಏಳು ಲಕ್ಷ್ಮೀರಮಣ ಬೆಳಗಾಯಿತೋ...." ಎಂದು ಉದಯ ರಾಗವನ್ನು ಹಾಡುತ್ತಿದ್ದರು. ಅಂತಹ ಪದ್ಧತಿಯೇ ಈ ಕಾಲದ "ಸುಪ್ರಭಾತ"ಗಳ ಹುಟ್ಟಿಗೆ ನಾಂದಿಯಾಗಿರಬೇಕು. ಆದರೆ ಅವ್ವನ ತವರುಮನೆ ಮಾನಿಯಲ್ಲಿ ಹೆಚ್ಚಿನ ವಿದ್ಯಾಭ್ಯಾಸ ಮಾಡಿದ ಕೆಲವರಿದ್ದರಂತೆ. ಕಳೂರುಕಟ್ಟೆ (ನಗರ), ಸಾಗರಗಳಂಥ ತಾಲ್ಲೂಕು ಕಛೇರಿ ಕೋರ್ಟುಗಳ ವ್ಯವಹಾರಗಳಲ್ಲಿ ತೊಡಗಿರುತ್ತಿದ್ದರಂತೆ. ಸಣ್ಣವನಾಗಿದ್ದಾಗ ಮಾನಿಗೆ ಹೋದಾಗ ಕಿವಿ ಕೇಳಿಸದ ತೀರಾ ಮುದುಕರಾದವರೊಬ್ಬರಿದ್ದು ಅವರು ಓದುತ್ತಿದ್ದುದನ್ನು ನೋಡಿದ್ದೆ. ಅವರ ಮನೆಯಲ್ಲಿ ಅಟ್ಟದಲ್ಲಿ **ಯವನ ಯಾಮಿನೀ ವಿನೋದಗಳು** (ಅರೇಬಿಯನ್ ನೈಟ್ಸ್?) ಎಂಬ ಸಾವಿರಾರು ಪುಟಗಳ ಬೃಹತ್ ಪುಸ್ತಕ ಇತ್ತು. ಮುಂದೆ ಅದನ್ನು ಆಮೂಲಾಗ್ರವಾಗಿ ಓದಿದ್ದೆ. ಬಹುಶಃ ಇಂತಹ ಹಿನ್ನೆಲೆಯಿಂದ ಪ್ರಭಾವಿತಳಾಗಿ ಅವ್ವ ನನಗೂ ನಾಲ್ಕಕ್ಷರ ಕಲಿಸುವ ಸಾಹಸಕ್ಕೆ ಕೈ ಹಾಕಿರಬೇಕು.

## ಓಂ ಶ್ರೀ ಗಣಾಧಿಪತಯೇ ನಮಃ

ನನಗೆ ನಾಲ್ಕೈದು ವರ್ಷಗಳಾಗುತ್ತಲೇ ಅವ್ವ ಅಕ್ಷರಾಭ್ಯಾಸ ಮಾಡಿಸುವ ಹುನ್ನಾರ ಮಾಡಿದಳು. ಒಂದು ದಸರಾ ಸಮಯದ ಸರಸ್ವತಿ ಪೂಜೆಯ ದಿನವೋ, ವಿಜಯದಶಮಿಯ ದಿನವೋ ಅದಕ್ಕೆ ಮುಹೂರ್ತ ನಿಗದಿಯಾಗಿರಬೇಕು. ಹಿಂದಿನ ದಿನವೇ ಬಿಳಿ ಅಣ್ಣಯ್ಯ ಹೊಳೆಯಿಂದ ಒಂದೆರಡು ಬುಟ್ಟಿಗಳಲ್ಲಿ ಮರಳನ್ನು ತಂದು ಜಗುಲಿಯಲ್ಲಿ ರಾಶಿ ಹಾಕಿದ್ದರು. ಮರುದಿನ ಅವ್ವ ನನಗೆ ಸ್ನಾನ ಮಾಡಿಸಿ, ತುಳಸಿ ಪೂಜೆ ಮಾಡಿಸಿದಳು. ಅಷ್ಟರಲ್ಲೇ ಬಿಳಿ ಅಣ್ಣಯ್ಯ ಜಗುಲಿಯ ಮರಳನ್ನು ವಿಶಾಲವಾಗಿ ಹರಡಿ ಕುಳಿತು ಕೊಂಡಿದ್ದರು. ತುಳಸಿ ಪೂಜೆಯ ನಂತರ ಅವ್ವ ನನ್ನನ್ನು ದರದರನೆ ಎಳೆದು ತಂದು ಬಿಳಿ ಅಣ್ಣಯ್ಯನ ಹತ್ತಿರ ನಿಲ್ಲಿಸಿದಳು. ಅವರು ತಮ್ಮ ಪಕ್ಕದಲ್ಲಿ ಕೂರಿಸಿಕೊಂಡು ಬರೆಯುವುದನ್ನು ಕಲಿಸುವುದಾಗಿ ವಿಧವಿಧವಾಗಿ ಓಲೈಸ ತೊಡಗಿದರು. ಅಷ್ಟರಲ್ಲೇ ವಿಷಯ ತಿಳಿದ ನಾನು ಪ್ರತಿಭಟಿಸತೊಡಗಿದ್ದೆ. ಅವರು ಬಲಗೈನ ತೋರು ಬೆರಳನ್ನು ಹಿಡಿದುಕೊಂಡು ಮರಳಿನ ಮೇಲೆ "ಓಂ ಶ್ರೀ ಗಣಾಧಿಪತಯೇ ನಮಃ" ಎಂದು ಹೇಳುತ್ತಾ ಒತ್ತಿ ಬರೆಸಲಾರಂಭಿಸಿದರು. ಬೆರಳಿನ ತುದಿಯಲ್ಲಿ ಉರಿಯಾಗುತ್ತಿದ್ದು ಅವರಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸುತ್ತಿದ್ದೆ. ಬರವಣಿಗೆ ಮುಂದುವರಿದಂತೆಲ್ಲಾ ನನ್ನ ಅಳು ರೋದನ ಶುರುವಾಯಿತು. ಸ್ವಲ್ಪ ಸಮಯದಲ್ಲೇ ಅವೊತ್ತಿಗೆ ಅಷ್ಟೇ ಸಾಕು ಎಂದು ಬಿಳಿ ಅಣ್ಣಯ್ಯ ನನ್ನನ್ನು ಬಿಡುಗಡೆ ಮಾಡಿದರು. ಮರುದಿನವೂ ಅವ್ವ ನನ್ನನ್ನು ಜಗುಲಿಗೆ ಎಳೆದು ಕೊಂಡು ಬರುವ ಪ್ರಯತ್ನ ಮಾಡಿದಳು. ಅಂಗಳದಲ್ಲಿ ಓಡೋಡಿ ತಪ್ಪಿಸಿಕೊಳ್ಳುವ ಪ್ರಯತ್ನ ಮಾಡಿದೆ. ಆದರೂ ಕೆಲವರ ಸಹಾಯದಿಂದ ನನ್ನನ್ನು ಹಿಡಿದು ಜಗುಲಿಗೆ ತಂದು ಬಿಳಿ ಅಣ್ಣಯ್ಯನ ಹತ್ತಿರ ನಿಲ್ಲಿಸಿದಳು. ಅವರು ಹಿಂದಿನ ದಿನ ಜರುಗಿಸಿದಂತೆ ಬೆರಳಿಗೆ ಕಸರತ್ತು ಮಾಡಿಸಲಾರಂಭಿಸಿದರು. ಆದರೆ ನಾನು ಸಹಕರಿಸಲೇ ಇಲ್ಲ. ಪದೇ ಪದೇ ಕೈ ತಪ್ಪಿಸಿಕೊಂಡು ಓಡುವ ಪ್ರಯತ್ನ ನಡೆಸುತ್ತಲೇ ಇದ್ದೆ. ಮುಂದೆಯೂ ಒಂದೆರಡು ದಿನ ಇಂತಹ ಪ್ರಯೋಗಗಳು ನಡೆದವು. ಪ್ರತಿ ಸಾರಿ ನನ್ನ

ರಾದ್ಧಾಂತಗಳು ಹೆಚ್ಚಾಗುತ್ತಲೇ ಹೋದವು. ಮುಂದೆ ಮರಳ ರಾಶಿಯ ಮೇಲೆ ಅಕ್ಷರ ಬರೆಸುವ ಪ್ರಯೋಗ ನಿಂತು ಹೋಯಿತು. ಇದರಿಂದ ಅವ್ವನಿಗೆ ಅದೆಷ್ಟು ನಿರಾಶೆಯುಂಟಾಯಿತೋ; ಆದರೆ ಶುಭದಿನ, ಶುಭಮುಹೂರ್ತದಲ್ಲಿ ಅಕ್ಷರಾಭ್ಯಾಸಕ್ಕೆ ನಾಂದಿಯಾಗಿದ್ದು ಸಂತಸ ಉಂಟು ಮಾಡಿರಬೇಕು!

## ಐಗಳ ಮಠ

ಆಧುನಿಕ ನಾಗರಿಕತೆಯ ಪ್ರಭಾವ ಸ್ವಲ್ಪ ತಡವಾದರೂ ಕಳೆದ ಶತಮಾನದ ಆದಿಯಲ್ಲಿ ಮಲೆನಾಡಿನ ರೈತಾಪಿ ವರ್ಗದವರಲ್ಲೂ ಜ್ಞಾನೋದಯ ಉಂಟು ಮಾಡಿರಬೇಕು. ಅವರು ಸೀಮಿತವಾಗಿ ನಡೆಸುತ್ತಿದ್ದ ಹಣಕಾಸಿನ ಲೇವಾದೇವಿ, ಕೋರ್ಟು ಕಛೇರಿಗಳ ವ್ಯವಹಾರಗಳಿಗೆ ಅಕ್ಷರಜ್ಞಾನ ಅವಶ್ಯಕವೆನ್ನುವ ಅರಿವು ಮೂಡತೊಡಗಿತು. ಅದರಿಂದ ಕೆಲವು ಸ್ಥಿತಿವಂತರು ತಮ್ಮ ಮಕ್ಕಳಿಗೆ ಮನೆಯಲ್ಲೇ ಅಕ್ಷರಾಭ್ಯಾಸ ಮಾಡಿಸುವ ಏರ್ಪಾಡುಗಳನ್ನು ಮಾಡಿಕೊಳ್ಳ ಲಾರಂಭಿಸಿದರು. ಸಾಮಾನ್ಯವಾಗಿ ಸ್ವಲ್ಪ ಓದು, ಬರಹ ಕಲಿತಿದ್ದ ದಕ್ಷಿಣ ಕನ್ನಡ ಜಿಲ್ಲೆಯ ಶೆಟ್ಟರು, ಬ್ರಾಂಬರು ಅಥವಾ ಕಿಲಿಸ್ಥಾನರನ್ನು ತಮ್ಮ ಮನೆಗಳಲ್ಲೇ ನೆಲಸಿ ಮಕ್ಕಳಿಗೆ ಅಕ್ಷರ ಕಲಿಸುವ ಏರ್ಪಾಡು ಮಾಡುತ್ತಿದ್ದರು. ಇವುಗಳೇ ಮುಂದೆ 'ಐಗಳ ಮಠ'ಗಳೆಂದು ಹೆಸರಾದವು. ಮುಂದೆ ರಾಷ್ಟ್ರಕವಿಯಾಗಿ ರೂಪುಗೊಂಡ ಕುವೆಂಪು ಅವರ ಕುಪ್ಪಳಿ ಮನೆಯಲ್ಲಿ ಅಸ್ತಿತ್ವದಲ್ಲಿದ್ದ ಐಗಳ ಮಠದ ನೈಜ ಹಾಗೂ ಸೊಗಸಾದ ವಿವರಣೆ ಅವರ ಸಾಹಿತ್ಯದಲ್ಲಿ ಮೂಡಿ ಬಂದಿದೆ. ಅವುಗಳ ಕಾರ್ಯ ವಿಧಾನಗಳ ಬಗೆಗೆ ಹೆಚ್ಚಿನ ವಿವರಣೆಗಳನ್ನು ನಾನು ಕೊಡಲಾರೆ; ಆದರೆ ಮಲೆನಾಡಿನ ಹಲವಾರು ಕಡೆ ಅಂತಹ ಐಗಳ ಮಠಗಳು ಆಗಾಗ್ಗೆ ತಲೆ ಎತ್ತುತ್ತಿದ್ದವೆಂದು ಮಾತ್ರ ಹೇಳಬಲ್ಲೆ.

ಮರಳಿನ ಮೇಲೆ ನನ್ನ ಅಕ್ಷರಾಭ್ಯಾಸದ ಪ್ರಯೋಗ ವಿಫಲವಾದಾಗ ನನ್ನವ್ವ ಇಂತಹ ಒಂದು ಮಾರ್ಗದ ಬಗೆಗೆ ಯೋಚಿಸಿರಬೇಕು. ನಮ್ಮೂರಿಗೆ ೨-೩ ಮೈಲಿಗಳ ದೂರದಲ್ಲಿದ್ದ ನಮ್ಮ ಸಂಬಂಧಿಕರಾದ ಬೈಸೆ ತಮ್ಮಯ್ಯಗೌಡರ ಮನೆಯಲ್ಲಿ ಐಗಳ ಮಠವೊಂದು ಕೆಲವು ತಿಂಗಳಿಂದ ಏರ್ಪಾಡಾಗಿತ್ತು. ತಮ್ಮಯ್ಯಗೌಡರ ಪತ್ನಿ ಪುಟ್ಟಮ್ಮ ನಮ್ಮ ದಾಯಾದಿ ಕುಟುಂಬದವರೇ. ಅವರ ಅಕ್ಕ ಚಿನ್ನಮ್ಮನವರು ಮಾನಿಯಲ್ಲಿ ನನ್ನ ತಾಯಿಯ ಅಣ್ಣ ಒಬ್ಬರ ಪತ್ನಿಯಾಗಿದ್ದು, ಅದಾಗಲೇ ಮಕ್ಕಳಿಲ್ಲದ ವಿಧವೆಯಾಗಿ, ನಮ್ಮಲ್ಲಿಯೇ ಇದ್ದರು. ಅನ್ಯೋನ್ಯ ವಾಗಿದ್ದ ಅವರು ಮತ್ತು ನನ್ನ ತಾಯಿಯವರು ನನ್ನ ಭವಿಷ್ಯದ ಬಗೆಗೆ ಆಗಾಗ್ಗೆ ಒಂದಲ್ಲ ಒಂದು ಯೋಜನೆ ತಯಾರಿಸುತ್ತಲೇ ಇರುತ್ತಿದ್ದರು. ಬೈಸೆಯ ಐಗಳ ಮಠದಲ್ಲಿ ನನ್ನನ್ನು ಸೇರಿಸುವ ನಿರ್ಧಾರವಾಗಿರಬೇಕು. ಆದರೆ ನನಗೆ ವಿಷಯ ತಿಳಿಸಿರಲಿಲ್ಲ. ಬೈಸೆಯ ನೆಂಟರ ಮನೆಗೆ ಒಂದು ದಿನ ಹೋಗಿ ಬರುವ ನಿರ್ಧಾರ ಮಾಡಿ ನನ್ನನ್ನೂ ಬರುವಂತೆ ಪುಸಲಾಯಿಸಿದರು. ಆ ಬಗೆಗೆ ಸ್ವಲ್ಪ ಅನುಮಾನವಿದ್ದರೂ ಆ ದಿನ ಅವರನ್ನು ಹಿಂಬಾಲಿಸಿದೆ. ಬೈಸೆ ಮನೆ ಸಮೀಪಿಸು ತ್ತಿದ್ದಂತೆಯೇ ಅವರ ಮನೆಯ ಮುಂದಿನ ಹಜಾರದಲ್ಲಿ ಐಗಳು ಕೆಲವು ಹುಡುಗರನ್ನು ಕೂರಿಸಿ ಕೊಂಡು ಪಾಠವನ್ನು ರಾಗವಾಗಿ ಹೇಳಿಕೊಡುತ್ತಿದ್ದ ದೃಶ್ಯ ಎದುರಾಯಿತು. ಅಲ್ಲಿ ನಾನು ಬಲಿಪಶು ವಾಗುವ ಬಗೆಗೆ ಅನುಮಾನ ಉಳಿಯಲಿಲ್ಲ.

ಮನೆಗೆ ಬಂದ ನಂತರ ಜೊತೆ ಕುಶಲೋಪರಿಗಳಾಗುತ್ತಿದ್ದಂತೆಯೇ ಔತಣದ ಏರ್ಪಾಡುಗಳು ನಡೆಯುತ್ತಿದ್ದವು. ಮನೆಯವರೆಲ್ಲಾ ನಾನು ಬೈಸೆಯಲ್ಲಿ ಉಳಿದುಕೊಂಡು ಅವರ ಮಕ್ಕಳ ಜೊತೆಯಲ್ಲೇ ಐಗಳ ಮಠದಲ್ಲಿ ಅಕ್ಷರ ಕಲಿತುಕೊಳ್ಳಬೇಕೆಂದು ಪುಸಲಾಯಿಸುತ್ತಿದ್ದರು.

ನನ್ನನ್ನು ಚೆನ್ನಾಗಿ ನೋಡಿಕೊಳ್ಳುವುದಾಗಿ ನಾನಾ ಬಗೆಯ ಆಮಿಷಗಳನ್ನೊಡ್ಡಿದರು, ಊಟೋಪಚಾರಗಳೆಲ್ಲಾ ಮುಗಿದು ಅವ್ವ ಮತ್ತು ಮಾನಿ ಅತ್ತೆ ಊರಿಗೆ ಹಿಂದಿರುಗಲು ಅಣಿಯಾದರು. ನಾನು ಮಾತ್ರ ಅವ್ವನ ಸೆರಗನ್ನು ಹಿಡಿದವನು ಬಿಡಲೇ ಇಲ್ಲ; ಜೋರಾಗಿ ಅತ್ತು ಕರೆದು ರೋದನ ಮಾಡಲಾರಂಭಿಸಿದೆ. ಅದನ್ನೆಲ್ಲಾ ವೀಕ್ಷಿಸುತ್ತಿದ್ದ ತಮ್ಮಯ್ಯಗೌಡರು ಅವ್ವನಿಂದ ನನ್ನನ್ನು ಬಿಡಿಸಿ ಕೊಂಡು ದರದರನೆ ಎಳೆದು ಲತ್ತೆ ಕೊಡುತ್ತಾ ಒಂದು ಕೋಣೆಯೊಳಗೆ ತಳ್ಳಿ ಬಾಗಿಲು ಮುಚ್ಚಿ ಹೊರಗಡೆಯಿಂದ ಚಿಲಕ ಹಾಕಿದರು. ನನ್ನ ರೋದನದ ಸದ್ದು ಏರುತ್ತಿದ್ದರೂ ಯಾರೂ ಕನಿಕರ ತೋರಿಸಲೇ ಇಲ್ಲ. ಅತ್ತಿಗೆ-ನಾದಿನಿಯರು ಊರ ಕಡೆ ಪ್ರಯಾಣ ಬೆಳಸಿದರು. ಸಾಯಂಕಾಲ ಬಾಗಿಲು ತೆರೆದಾಗ ಅತ್ತು ಅತ್ತು ಸುಸ್ತಾಗಿ ನಾನು ನಿದ್ದೆ ಹೋಗಿದ್ದೆನಂತೆ!

ಮರು ದಿನದಿಂದಲೇ ಐಗಳ ಮಠದಲ್ಲಿ ಕುಳಿತು ಕೊಳ್ಳುವುದು ಅನಿವಾರ್ಯವಾಯಿತು. ಹೆಚ್ಚಿನ ತಂಟೆ ತಕರಾರು ಮಾಡದೆ ಅಕ್ಷರಾಭ್ಯಾಸದಲ್ಲಿ ನಿರತನಾದೆ. ಸಂಪೂರ್ಣ ಅಕ್ಷರಮಾಲೆ ಯನ್ನು ಬೈಸೆಯಲ್ಲೆ ಕಲಿತನೆನಿಸುತ್ತದೆ. ಕೆಲವು ತಿಂಗಳ ನಂತರ ಯಾವುದೋ ಹಬ್ಬದ ಸಲುವಾಗಿ ಊರಿಗೆ ಹೋದವನು ಮತ್ತೆ ಬೈಸೆಗೆ ಹಿಂದಿರುಗಲೇ ಇಲ್ಲ!

ಇದರಿಂದ ಅವ್ವನಿಗೆ ತೀವ್ರ ಅಸಮಾಧಾನವಾದರೂ, ತನ್ನ ಪ್ರಯತ್ನವನ್ನು ಕೈ ಬಿಡಲಿಲ್ಲ. ನಮ್ಮೂರಿಗೆ ಕೇವಲ ಎರಡು ಮೈಲಿಗಳ ದೂರದಲ್ಲಿ ಐದೂರು ಎಂಬಲ್ಲಿ ನನ್ನ ದೊಡ್ಡಮ್ಮ (ತಾಯಿಯ ಅಕ್ಕ)ನ ಊರಿತ್ತು. ಒಂದು ದಿನ ಬೆಳಿಗ್ಗೆ ಐದೂರಿಗೆ ಹೋಗುವ ವಿಷಯವನ್ನು ಅತ್ತಿಗೆ ನಾದಿನಿಯರು ನನ್ನ ಎದುರಿಗೇ ಮಾತಾಡುತ್ತಿದ್ದರು. ಆದರೆ ನನ್ನನ್ನೂ ಕರೆದುಕೊಂಡು ಹೋಗುವ ಬಗೆಗೆ ಪ್ರಸ್ತಾಪಿಸಲೇ ಇಲ್ಲ. ವಿಷಯ ತಿಳಿದ ಮೇಲೆ ನಾನೂ ಬರುತ್ತೇನೆಂದು ಪೀಡಿಸಲಾರಂಭಿಸಿದೆ. ಐದೂರಿನ ದೊಡ್ಡಮ್ಮನಿಗೆ ನನ್ನ ಮೇಲೆ ತುಂಬಾ ಆಸೆ, ಅಕ್ಕರೆ. ಹಿಂದೆ ಕೆಲಸಾರಿ ಅಲ್ಲಿ ಹೋಗಿ ಇರುತ್ತಿದ್ದೆ. ಹೆಚ್ಚಿನ ವಿರೋಧ ವ್ಯಕ್ತಪಡಿಸದೇ ನನ್ನನ್ನೂ ಕರೆದುಕೊಂಡು ಹೊರಟರು. ಅವರ ಮನೆ ಸಮೀಪಿಸುತ್ತಿದ್ದಂತೆಯೇ ಉಪ್ಪರಿಗೆ ಕಡೆಯಿಂದ ಮಕ್ಕಳು ಪಾಠ ಕಲಿಯುತ್ತಿದ್ದ ಶಬ್ದ ಬರುತ್ತಿದ್ದುದು ಬರಸಿಡಿಲಿನಂತೆ ಬಡಿಯಿತು. ಅಲ್ಲಿ ಒಂದು ವಾರದ ಹಿಂದೆ ಐಗಳ ಮಠ ಶುರುವಾಗಿದ್ದು ನನ್ನ ಗಮನಕ್ಕೆ ಬಂದಿರಲಿಲ್ಲ. ಮನೆಯೊಳಗೆ ಹೋದ ಮೇಲೆ ಪರಿಸ್ಥಿತಿಯ ಅರ್ಥವಾಯಿತು. ಇಲ್ಲಿಯೂ ಮತ್ತೆ ಬಲಿಪಶುವಾಗುವ ಗಾಬರಿ ನನ್ನನ್ನು ಆವರಿಸಿತು. ಆದರೆ ದೊಡ್ಡಮ್ಮನಾಗಲೀ, ಅವ್ವನಾಗಲೀ ನಾನು ಅಲ್ಲೇ ಇರಬೇಕೆಂಬ ಪ್ರಸ್ತಾವ ಮಾಡಲಿಲ್ಲ. ಬದಲಿಗೆ ತಿಂಡಿ ತೀರ್ಥಗಳನ್ನಿತ್ತು ಹೊರಗಡೆ ನಲಿದಾಡುತ್ತಿದ್ದ ಇತರ ಕೆಲವು ಹುಡುಗರ ಜೊತೆ ಆಟವಾಡಿಕೊಂಡಿರಲು ಪುಸಲಾಯಿಸಿ ಕಳುಹಿಸಿದರು. ಕ್ಷೇಮ ಸಮಾಚಾರದ ಮಾತುಕತೆಗಳಾಗಿ ಊಟೋಪಚಾರಗಳೂ ಆದವು. ಊಟದ ನಂತರ ನಾನು ಮತ್ತೆ ಹೊರಗಡೆ ಆಟ ಆಡುತ್ತಿರು ವಂತೆ ಕಳುಹಿಸಿದರು. ಆದರೆ ಅವರ ಹುನ್ನಾರ ಅದಾಗಲೇ ನನಗೆ ಅರ್ಥವಾಗಿ ಬಿಟ್ಟಿತ್ತು. ಅವರೆಲ್ಲಾ ಮಾತುಕತೆಗಳಲ್ಲಿ ಮಗ್ನರಾಗಿದ್ದ ಸಮಯವನ್ನು ಗಮನಿಸಿ ಜೊತೆ ಆಡುತ್ತಿದ್ದ ಹುಡುಗರ ಕಣ್ತಪ್ಪಿಸಿ, ನಮ್ಮೂರ ಕಡೆ ಕಾಲ್ಕಿತ್ತೆ. ಬೆಳಿಗ್ಗೆ ನಾವು ಗುಡ್ಡ ಬೆಟ್ಟಗಳನ್ನು ಹತ್ತಿ ಐದೂರಿಗೆ ಬಂದ ದಾರಿಯಲ್ಲದೆ ಗದ್ದೆ ಕೋಗುಗಳ ಮೂಲಕ ಊರಿಗೆ ಹೋಗುವ ದಾರಿಯ ಪರಿಚಯವೂ ಇತ್ತು. ಅದರಲ್ಲೇ ಓಡುತ್ತಾ ಮನೆಗೆ ಹಿಂದಿರುಗಿದೆ, ನಾನು ಹೊರಗಡೆ ಆಟವಾಡುತ್ತಿರುವಾಗ ನನ್ನನ್ನು ಅಲ್ಲೇ ಬಿಟ್ಟು ಹಿಂಬಾಗಿಲಿನಿಂದ ಅವರು ಊರಿಗೆ ಹಿಂದಿರುಗುವ ಅಂದಾಜು ಮಾಡಿಕೊಂಡಿರ ಬೇಕು. ಅಕ್ಕರೆಯ ದೊಡ್ಡಮ್ಮನ ಉಪಚಾರದಿಂದ ನಾನು ಅಲ್ಲೇ ಉಳಿದುಕೊಂಡು ಐಗಳ ಮಠದಲ್ಲಿ ಅಕ್ಷರಾಭ್ಯಾಸ ಮುಂದುವರಿಸಬಹುದೆಂಬ ಅಭಿಲಾಷೆ ಅವರದಾಗಿತ್ತು. ಸಾಯಂಕಾಲದ

ಸಮಯಕ್ಕೆ ಅವರು ಹಿಂದಿರುಗಿದರು. ದಾರಿಯಲ್ಲೇ ಸಿಗುವ ಕಬ್ಬಿನ ಗದ್ದೆಯ ಬೇಲಿಯ ಮೇಲೆ ಕುಳಿತುಕೊಂಡು ನಾನು ಕಬ್ಬು ಜಗಿಯುತ್ತಿದ್ದ ದೃಶ್ಯ ಅವರಿಗೇನು ಮಾಡಿರಬೇಕು? ಸಿಟ್ಟು ಅವ್ವನ ನೆತ್ತಿಗೇರಿರಬೇಕು. ನನ್ನ ಹತ್ತಿರ ಬಂದವಳೇ ಬೇಲಿಯಿಂದ ಕೆಳಗಿಳಿಸಿ ಲಕ್ಕೀ ಗಿಡದ ಬರಲುಗಳಿಂದ ಬಾರಿಸತೊಡಗಿದಳು. ಅಲ್ಲಿದ್ದ ಕೆಲವರು ಅವ್ವನಿಂದ ನನ್ನನ್ನು ಬಿಡಿಸಿ ಬಚಾವು ಮಾಡಿದರು!

ಇಷ್ಟೆಲ್ಲಾ ಆದ ಮೇಲೆ ಬೇರೆ ಇನ್ನು ಯಾರೇ ಆಗಿದ್ದರೂ ಬೇಸತ್ತು ಸುಮ್ಮನಾಗಿ ಬಿಡುತ್ತಿದ್ದರೇನೋ. ನನಗೆ ಅಕ್ಷರ ಕಲಿಸಲೇಬೇಕೆಂಬ ಹಠ ತೊಟ್ಟಿದ್ದ ಅವ್ವ ಸುಮ್ಮನಿರಲಿಲ್ಲ. ಮತ್ತೂ ಒಂದು ಪ್ರಯತ್ನ ಮಾಡಿದಳು. ನಮ್ಮ ಹೊಳೆಯಾಚೆ ಎರಡೂವರೆ ಮೈಲಿ ದೂರದಲ್ಲಿ ಮಕ್ರಿಕೊಪ್ಪ ಎಂಬ ಸಂಬಂಧಿಕರ ಊರಿದೆ. ನಮ್ಮ ಚಿಕ್ಕಪ್ಪ ಮಂಜಪ್ಪಗೌಡರ ಮೊದಲ ಹೆಂಡತಿ ಅಲ್ಲಿಯವರೆ ಆಗಿದ್ದರು. ಹೆರಿಗೆ ಸಮಯದಲ್ಲಿ ಅಸು ನೀಗಿದ ಅವರಿಗೆ ನನ್ನ ಓರಗೆಯ ಮಗಳೊಬ್ಬಳಿದ್ದಳು. ಅವಳು ನಮ್ಮ ಮನೆಗೆ ಬಂದಾಗಲ್ಲೆಲ್ಲಾ ಅನ್ಯೋನ್ಯವಾಗಿ ಆಡಿಕೊಳ್ಳುತ್ತಿದ್ದೆವು. ಅವಳನ್ನೊಂದು ಸಾರಿ ನೋಡಿಕೊಂಡು ಬರುವ ನೆಪದಿಂದ ನನ್ನನ್ನು ಕರೆದುಕೊಂಡು ಹೋಗಿದ್ದರು. ಆ ಸಮಯದಲ್ಲಿ ಮಕ್ರಿಕೊಪ್ಪದಿಂದ ಕೆಲವು ಹುಡುಗರು ಯಡೂರಿನ ಸ್ಕೂಲಿಗೆ ಹೋಗಿ ಬರುತ್ತಿದ್ದರು. ನಾವಿದ್ದ ಕೆಲವು ದಿನಗಳಲ್ಲಿ ಅವರೆಲ್ಲರ ಜೊತೆ ನನಗೆ ಸ್ನೇಹ ಉಂಟಾಯಿತು. ನಾನು ಅಲ್ಲೇ ಇದ್ದುಕೊಂಡು ಯಡೂರು ಸ್ಕೂಲಿಗೆ ಹೋಗಿ ಬರುವಂತೆ ಪುಸಲಾಯಿಸಲು ಆರಂಭಿಸಿದಳು. ಅವರ ಮನೆಯವರೂ ಸಹ ಅಕ್ಕರೆಯಿಂದ ನೋಡಿಕೊಳ್ಳುತ್ತಿದ್ದರು. ಅದ್ಹೇಗೂ ನಾನು ಒಪ್ಪಿಕೊಂಡು ಅವರ ಜೊತೆ ಯಡೂರು ಸ್ಕೂಲಿಗೆ ಹೋಗಿ ಬರಲಾರಂಭಿಸಿದೆ. ಅಲ್ಲಿದ್ದ ಆರು ತಿಂಗಳ ಸಮಯದಲ್ಲಿ ಕಲಿಕೆಯಲ್ಲಿ ಒಳ್ಳೆಯ ಪ್ರಗತಿಯೂ ಆದಂತಿತ್ತು. ಆ ಮನೆಯ ಯಜಮಾನರಾದ ದೇವಪ್ಪನಾಯ್ಕರು ವಯಸ್ಸಾದ ಮುದುಕರಾಗಿದ್ದರಲ್ಲದೆ ಸ್ವಲ್ಪ ಓದು ಬರಹ ಕಲಿತಿದ್ದವರು. ಒಂದು ಕಾಲು ಊನವಾಗಿದ್ದು ಕುಂಟುತ್ತಾ ನಡೆದಾಡ ಬೇಕಾಗುತ್ತಿತ್ತು. ಸೌಮ್ಯ ಸ್ವಭಾವದ ಅವರು, ಅದಾಗಲೇ ಅಕ್ಷರಗಳ ಪರಿಚಯವಿದ್ದ ನನಗೆ ಅಂಕಿ ಸಂಖ್ಯೆಗಳನ್ನು ಸುಲಭವಾಗಿ ಕಲಿಯುವ ವಿಧಾನ ಅಭ್ಯಾಸ ಮಾಡಿಸಿದ್ದರು. ೧ ರಿಂದ ೧೦, ನಂತರ ೨೦, ೨೧, ೨೨ ಹೀಗೆ ಮುಂದುವರಿದು ೧೦೦ರ ತನಕ ಬರೆಯುವುದನ್ನು ಕಲಿಸಿದ್ದು ಜ್ಞಾಪಕವಿದೆ. ಆದರೆ ಮುಂದೊಂದು ಸಾರಿ ಯಾವುದೋ ಕಾರಣದಿಂದ ಮನೆಗೆ ಬಂದವನು ಮತ್ತೆ ಅಲ್ಲಿಗೆ ಹೋಗಲೇ ಇಲ್ಲ! ತಾಯಿಯನ್ನು ಬಿಟ್ಟಿರದ ನನ್ನ ಸ್ವಭಾವವೇ ಅಂತಹ ನಡವಳಿಕೆಗೆ ಕಾರಣವಾಗಿತ್ತೆನಿಸುತ್ತದೆ.

## ಮೇಗರವಳ್ಳಿಯ ಪ್ರಭಾವ

ನನ್ನನ್ನು ವಿದ್ಯಾವಂತನನ್ನಾಗಿ ಮಾಡುವ ಅಭಿಲಾಷೆಯಿಂದ ಅವ್ವ ರೂಪಿಸಿದ ಯೋಜನೆಗಳನ್ನೆಲ್ಲಾ ಹೀಗೆ ನಾನು ವಿಫಲಗೊಳಿಸುತ್ತಲೇ ಇದ್ದೆ. ಆದರೆ ಅವಳೊಬ್ಬ ಉತ್ಕಟ ಆಶಾವಾದಿಯೆಂದು ಹೇಳಬಹುದು; ಜೊತೆಗೆ ಛಲಬಿಡದ ತ್ರಿವಿಕ್ರಮನ ಅವತಾರವೇ ಆಗಿದ್ದಳೆನಿಸುತ್ತದೆ. ನಿರಂತರವಾಗಿ ಮರುಕಳಿಸುತ್ತಿದ್ದ ನನ್ನ ರಂಪಾಟಗಳನ್ನು ಗಣನೆಗೆ ತೆಗೆದುಕೊಳ್ಳದೆ ಹೊಸ ಹೊಸ ಯೋಜನೆಗಳನ್ನು ರೂಪಿಸುತ್ತಲೇ ಇದ್ದಳು. ನಮ್ಮೂರಿನಿಂದ ೬-೭ ಮೈಲಿಗಳ ದೂರದಲ್ಲಿದ್ದ ಮೇಗರವಳ್ಳಿಯ ಸಂಬಂಧಿಕರ ಮನೆಯಲ್ಲಿ ನನ್ನನ್ನು ಬಿಟ್ಟು ಓದಿಸುವ ಸಂಚು ನನಗರಿವಾಗದಂತೆಯೇ ತಯಾರಾಗುತ್ತಿತ್ತು. ಮೇಗರವಳ್ಳಿಯ ಸಂ. ಲಿಂಗಪ್ಪ ಹೆಗ್ಗಡೆಯವರ ಮನೆಯಲ್ಲಿ ನನ್ನ ಅಜ್ಜಿಯೊಬ್ಬರಿದ್ದರು. ಬಹುಶಃ ರಾಮಮ್ಮ ಎಂಬ ಹೆಸರಿದ್ದ ಅವರು ನನ್ನ ತಂದೆಯ ತಾಯಿಯ ತಂಗಿಯಾಗಿದ್ದರು. ಎಳೆಯ ವಯಸ್ಸಿನಲ್ಲೇ ವಿಧವೆಯಾದ ಅವರಿಗೆ ಮಕ್ಕಳಿರಲಿಲ್ಲ;

ದಾಯಾದಿಗಳಾದ ಲಿಂಗಪ್ಪ ಹೆಗ್ಗಡೆಯವರ ಮನೆಯಲ್ಲೇ ಇರುತ್ತಿದ್ದರು. ಬಾಲ್ಯದಲ್ಲೇ ತಾಯಿಯನ್ನು ಕಳೆದುಕೊಂಡಿದ್ದ ಲಿಂಗಪ್ಪ ಹೆಗ್ಗಡೆಯವರ ಮಗ ಅಪ್ಪಣ್ಣ ಹೆಗ್ಗಡೆಯವರಿಗೆ ಸಾಕು ತಾಯಿಯಂತಾಗಿದ್ದರು. ಇಂತಹ ಹಳೇ ಸಂಬಂಧದ ಎಳೆಯನ್ನು ಗುರುತಿಸಿಕೊಂಡ ಅವ್ವ ಅವರೊಡನೆ ಯಾರ ಮುಖಾಂತರವೋ ನನ್ನನ್ನು ಅಲ್ಲಿ ಬಿಡುವ ಬಗೆಗೆ ಸಮಾಲೋಚನೆ ನಡೆಸಿರ ಬೇಕು. ಎಂದಿನಂತೆ ಅತ್ತಿಗೆ-ನಾದಿನಿಯರಿಬ್ಬರೂ ಈ ಬಗೆಗೆ ನಿರ್ಧಾರ ಮಾಡಿ ಮೇಗರವಳ್ಳಿಯ ಅಜ್ಜಿ ಮನೆಗೆ ಹೋಗಿ ಬರುವ ವಿಷಯವನ್ನು ನನಗೂ ತಿಳಿಸಿದರು. ಅದೊಂದು ಸಣ್ಣ ಪಟ್ಟಣ ವೆಂದು ಮೊದಲೇ ತಿಳಿದಿದ್ದ ನಾನೂ ಸಹ ಅವರೊಡನೆ ಅಲ್ಲಿಗೆ ಹೋಗಲು ಸಮ್ಮತಿಸಿದೆ.

ಆ ಕಾಲದಲ್ಲಿ ದೂರದ ಊರು ಎಂದು ಹೇಳಬಹುದಾದ ಮೇಗರವಳ್ಳಿಗೆ ಕಾಲು ದಾರಿಯಲ್ಲಿ ನಡೆದು ಹೋಗುವುದಲ್ಲದೆ ಅನ್ಯ ಸೌಕರ್ಯಗಳಿರಲಿಲ್ಲ. ಒಂದು ದಿನ ಬೆಳಿಗ್ಗೆ ಬೇಗನೆ ಊಟ ಮುಗಿಸಿಕೊಂಡು ಪ್ರಯಾಣ ಶುರುಮಾಡಿದೆವು. ವಿಶಾಲವಾಗಿ ಹರಡಿಕೊಂಡಿರುವ ಹಲವು ಊರುಗಳ ಗದ್ದೆ ಕೋಗು, ಹುರುಳಿಕೊಡಿಗೆ ಕಾಡು, ಮುಂದೆ ಗಾಡಿರಸ್ತೆ ಮುಖಾಂತರ ದಾರಿ ಸಾಗುತ್ತಿತ್ತು. ನಾನೆಂದೂ ಅಷ್ಟು ದೂರ ನಡೆದ ಅನುಭವವಿರಲಿಲ್ಲ. ಅಲ್ಲಲ್ಲೇ ಕುಳಿತು ವಿಶ್ರಾಂತಿ ಪಡೆದುಕೊಳ್ಳುತ್ತಾ ಮಧ್ಯಾಹ್ನದ ನಂತರ ಮೇಗರವಳ್ಳಿಯ ಮನೆ ಸೇರಿದೆವು.

ಶಿವಮೊಗ್ಗೆಯಿಂದ ಆಗುಂಬೆಗೆ ಹೋಗುವ ರಸ್ತೆಯಲ್ಲಿ ತೀರ್ಥಹಳ್ಳಿಯಿಂದಾಚೆ ಮೇಗರವಳ್ಳಿ ಇದೆ. ದಕ್ಷಿಣ ಕನ್ನಡ ಜಿಲ್ಲೆಯವರು ಮುಂಬಯಿಗೆ ಹೋಗಲು ಹರಿಹರದಲ್ಲಿ ರೈಲನ್ನೇರುವುದು ಆ ಕಾಲದ ರೂಢಿ. ಅದರಿಂದಾಗಿ ಅಲ್ಲಿ ಎಡೆಬಿಡದೆ ಬಸ್ಸುಗಳು ಸಂಚರಿಸು ತ್ತಿದ್ದವು. ಹಲವಾರು ಅಂಗಡಿ ಮುಂಗಟ್ಟುಗಳು, ಹೋಟೆಲುಗಳು ಅಲ್ಲಿದ್ದು ಅದೊಂದು ವ್ಯಾಪಾರ ಕೇಂದ್ರವೂ ಆಗಿತ್ತು. ಪೇಟೆ ರಸ್ತೆಯ ಎಡಭಾಗದ ಗದ್ದೆ ಕೋಗಿನಾಚೆ 'ಹೆಗ್ಗಡೇರ ಕೇರಿ' ಎಂಬ ಬಡಾವಣೆಯಿದ್ದು ಅದರಲ್ಲಿ ಒಕ್ಕಲಿಗ ಕೋಮಿನ ಉಪನಾಮವಾದ 'ಹೆಗ್ಗಡೆ' ಮನೆತನದವರೇ ಹೆಚ್ಚಾಗಿದ್ದ ಕೇರಿ ಅದು. ಅವರಿಗೆಲ್ಲಾ ಸಾಕಷ್ಟು ಜಮೀನು ಮನೆಯ ಆಸ್ತಿಗಳಿದ್ದು ಸಿರಿವಂತ ರಾದವರು. ಕೆಲವರು ವ್ಯಾಪಾರ ಲೇವಾದೇವಿ ವ್ಯವಹಾರಗಳಲ್ಲೂ ತೊಡಗಿಕೊಂಡಿರುತ್ತಿದ್ದರು.

ಮನೆಗೆ ತಲುಪಿದಾಗ ಮನೆಯವರು ನಮ್ಮನ್ನು ಆದರಾತಿಥ್ಯದಿಂದ ಸತ್ಕರಿಸಿದರು. ತನ್ನ ಅಕ್ಕನ ಮೊಮ್ಮಗನನ್ನು ನೋಡಿದಾಗ ಅಜ್ಜಿಗೆ ಹರ್ಷವಾಗಿರಬೇಕು. (ಅವರ ಇನ್ನೊಬ್ಬ ತಂಗಿ - ಬೆಲಚಿಕಟ್ಟೆ ಅಜ್ಜಿಯವರೂ ಸಹ ಮಕ್ಕಳಿಲ್ಲದ ವಿಧವೆಯಾಗಿದ್ದು, ಅವರ ಅಕ್ಕತಂಗಿಯರ ಪೈಕಿ ನಾನೊಬ್ಬನೇ ಮೊಮ್ಮಗ ಆಗಿದ್ದುದು!) ಲಿಂಗಪ್ಪ ಹೆಗ್ಗಡೆಯವರೂ ಮನೆಯಲ್ಲಿದ್ದರು. ಅವರು ಆಗಲೇ ಮುದುಕರಾಗಿದ್ದು ನಮ್ಮ ಮೊದಲ ರಾಷ್ಟ್ರಪತಿ ರಾಜೇಂದ್ರ ಪ್ರಸಾದರಂತೆ ಕಾಣಿಸುತ್ತಿದ್ದರು. ಅವರಿಗೆ ನಾಲ್ಕು ಗಂಡು ಮಕ್ಕಳು, ಮೂವರು ಹೆಣ್ಣು ಮಕ್ಕಳಿದ್ದರು, ಅವರ ಮನೆಯಲ್ಲಿ ಆಗ ನೂರಾರು ಮಣ ಅಡಿಕೆ ಬೆಳೆಯುತ್ತಿದ್ದರೆನಿಸುತ್ತದೆ. ಅವರಿಗೆ ವಯಸ್ಸಾಗಿದ್ದುದರಿಂದ ಹಿರಿಯ ಮಗ ಅಪ್ಪಣ್ಣ ಹೆಗ್ಗಡೆಯವರೇ ಮನೆಯ ವಹಿವಾಟುಗಳನ್ನು ನೋಡಿಕೊಳ್ಳುತ್ತಿದ್ದರು. ಮಿತಭಾಷಿ ಮತ್ತು ಗಂಭೀರ ಸ್ವರೂಪದ ಅಪ್ಪಣ್ಣ ಹೆಗ್ಗಡೆಯವರು ಅಡಿಕೆ ವ್ಯಾಪಾರ ಮತ್ತು ಹಣಕಾಸಿನ ವ್ಯವಹಾರದಲ್ಲಿ ಪಳಗಿದವರಾಗಿದ್ದರು.

ಮೇಗರವಳ್ಳಿಯ ಮನೆಯಲ್ಲಿ ಒಂದೆರಡು ದಿನ ಹಾಯಾಗಿದ್ದೆವು. ಲಿಂಗಪ್ಪ ಹೆಗ್ಗಡೆಯವರ ಇಬ್ಬರು ಮಕ್ಕಳು ಸ್ಕೂಲಿಗೆ ಹೋಗುತ್ತಿದ್ದರು. ಒಂದಿಬ್ಬರು ಸಂಬಂಧಿಕರ ಮಕ್ಕಳೂ ಸಹ ಅವರ ಮನೆಯಲ್ಲಿದ್ದುಕೊಂಡು ವಿದ್ಯಾಭ್ಯಾಸ ಮಾಡುತ್ತಿದ್ದರು. ನನ್ನನ್ನೂ ಅಲ್ಲಿಯ ಶಾಲೆಗೆ ಸೇರಿಸುವ ವಿಷಯ ನನ್ನ ಎದುರೇ ಪ್ರಸ್ತಾಪವಾಗುತ್ತಿತ್ತು. ಅಲ್ಲಿಯ ಇತರ ಹುಡುಗರು ನಾಳೆಗೆ

ಹೋಗುತ್ತಿದ್ದು ಒಂದು ರೀತಿಯ ವಿದ್ಯಾಭ್ಯಾಸದ ಪರಿಸರವೇರ್ಪಟ್ಟಿತೆನಿಸುತ್ತದೆ. ಅದರಿಂದ ಬಹುಶಃ ಶಾಲೆಗೆ ಸೇರುವ ವಿಷಯದಲ್ಲಿ ತಕರಾರು ಎತ್ತಲಿಲ್ಲ. ಅಲ್ಲಿಯ ತೀರಾ ಅಪರಿಚಿತ ಪರಿಸರದಲ್ಲಿ ಅದೆಷ್ಟು ಸುಲಭವಾಗಿ ಸಮ್ಮತಿಸಿದೆನೆಂಬುದು ಈಗಲೂ ಅಚ್ಚರಿಯುಂಟು ಮಾಡುತ್ತದೆ. ಅಂತಿಮವಾಗಿ ಅಪ್ಪ ಏರ್ಪಡಿಸಿದ 'ಖೆಡ್ಡಾ' ಕಾರ್ಯಾಚರಣೆ ಯಶಸ್ವಿಯಾಗಿತ್ತು!

ಮುಂದಿನ ಒಂದೆರಡು ದಿನಗಳಲ್ಲಿ ಮೇಗರವಳ್ಳಿಯ ಪ್ರಾಥಮಿಕ ಶಾಲೆಗೆ ಸೇರಿಸಲಾಯಿತು. ಮೇಗರವಳ್ಳಿಯಲ್ಲಿದ್ದ ಮತ್ತೊಬ್ಬ ಸಂಬಂಧಿಗಳಾದ ಎಂ. ಎಚ್. ಶೇಷಪ್ಪ ಹೆಗ್ಗಡೆಯವರು (ಚಿಕ್ಕಪ್ಪ ಮಂಜಪ್ಪಗೌಡರ ಹೆಂಡತಿ ಲಕ್ಷ್ಮಮ್ಮನವರ ಅಣ್ಣ) ಶಾಲೆಗೆ ದಾಖಲು ಮಾಡಿಸಿದರು. ಆಗಲೇ ನನ್ನ ತಂದೆ ಅಕ್ಕರೆಯಿಂದ ನನಗಿಟ್ಟಿದ್ದ ಚಂದ್ರಶೇಖರ ಎಂಬ ಹೆಸರು **ಚಂದ್ರಪ್ಪಗೌಡ** ಎಂದು ರೂಪಾಂತರಗೊಂಡಿದ್ದು. ಮನೆಗೇ ಜ್ಯೋತಿಷಿಯನ್ನು ಕರೆಸಿ ಜಾತಕ ಬರೆಸಿದ್ದರೂ, ಆ ಸಮಯದಲ್ಲಿ ಲಭ್ಯವಿರಲಿಲ್ಲವಾದುದರಿಂದ ಹುಟ್ಟಿದ ತಾರೀಕು ೩-೫-೧೯೨೯ ಎಂದು ದಾಖಲಾಯಿತು. ಕೇವಲ ನಾಲ್ಕೈದು ತಿಂಗಳ ವ್ಯತ್ಯಾಸ ಅಷ್ಟೇ!

ಮರು ದಿನದಿಂದಲೇ ಇತರ ಹುಡುಗರೊಡನೆ ಸ್ಲೇಟು, ಬಳಪ, ಛತ್ರಿ ಹಿಡಿದು ಶಾಲೆಗೆ ಹೋಗಲಾರಂಭಿಸಿದೆ. ಮೊದಲೇ ಸ್ವಲ್ಪ ಮಟ್ಟಿಗೆ ಅಕ್ಷರಾಭ್ಯಾಸವಾಗಿದ್ದರಿಂದ ಮೊದಲನೇ ತರಗತಿಗೆ ಹೊಂದಿಕೊಳ್ಳುವಲ್ಲಿ ಅಷ್ಟೇನೂ ಕಷ್ಟವೆನಿಸಲಿಲ್ಲ. ಕಲಿಕೆಯ ಪ್ರಗತಿಯೂ ಚೆನ್ನಾಗಿ ಮುಂದುವರಿಯಿತು.

ಹಾಗೂ ಹೀಗೂ ಒಂದು ವರ್ಷ ಕಳೆಯುತ್ತಾ ಬಂದಿತು. ವರ್ಷದ ಕೊನೆಯ ಸಮಯದಲ್ಲಿ ಯಾವುದೋ ಕಾರಣದಿಂದ ಊರಿಂದ ಬಂದವರೊಬ್ಬರ ಜೊತೆ ಒಂದು ವಾರ ಹೊಳೆಗದ್ದೆಗೆ ಬಂದಿದ್ದೆ. ಅಷ್ಟರಲ್ಲೇ ಬೇಸಿಗೆ ರಜೆ ಬಂದಿದೆಯೆಂದು ತಿಳಿಯಿತು. ಒಂದೂವರೆ ತಿಂಗಳು ಬೇಸಿಗೆ ರಜೆ ಮುಗಿಯಿತೆಂದು ತಿಳಿದಾಗ ಮೇಗರವಳ್ಳಿಗೆ ಹಿಂತಿರುಗಿದೆ.

ಶಾಲೆ ಆರಂಭವಾದ ದಿನ ನಾವೆಲ್ಲಾ ಒಂದನೆ ತರಗತಿಯ ಕೊಠಡಿಯಲ್ಲಿ ಕುಳಿತಿದ್ದೆವು. ಮುಖ್ಯೋಪಾಧ್ಯಾಯ ಶಾಮಭಟ್ಟರು ಆ ವರ್ಷ ಒಂದನೇ ತರಗತಿಯಿಂದ ತೇರ್ಗಡೆಯಾಗಿ ಎರಡನೇ ತರಗತಿಗೆ ಹೋಗಲು ಅರ್ಹರಾದವರ ಹೆಸರುಗಳನ್ನು ಓದಿ ಹೇಳಲಾರಂಭಿಸಿದರು; ಹಾಗೂ ಅವರೆಲ್ಲಾ ಪಕ್ಕದ ಇನ್ನೊಂದು ಕೊಠಡಿಯಲ್ಲಿ ಕುಳಿತುಕೊಳ್ಳುವಂತೆ ಸೂಚಿಸಿದರು. ಆದರೆ ಅವರು ಓದಿ ಹೇಳಿದವರ ಪಟ್ಟಿಯಲ್ಲಿ ನನ್ನ ಮತ್ತು ಇನ್ನೊಬ್ಬನ ಹೆಸರು ಇರಲಿಲ್ಲ. ನನಗೆ ದುಃಖ ಉಮ್ಮಳಿಸಿ ಬಂತು; ಕಣ್ಣುಗಳಲ್ಲಿ ನೀರಿಳಿಯಲಾರಂಭಿಸಿತು. ಮುಖ್ಯೋಪಾಧ್ಯಾಯರು ನನ್ನ ಹತ್ತಿರ ಬಂದು ನಾನ್ಯಾಕೆ ಪರೀಕ್ಷೆಗೆ ಹಾಜರಾಗಿರಲಿಲ್ಲವೆಂದು ವಿಚಾರಿಸಿದರು. ಪರೀಕ್ಷೆ ನಡೆಯುವ ವಿಷಯ ತಿಳಿಯದೆ ನಾನು ಊರಿಗೆ ಹೋಗಿದ್ದರಿಂದ ಆಗಲಿಲ್ಲವೆಂದು ಬಿಕ್ಕಳಿಸುತ್ತಾ ಹೇಳಿದೆ. ಅವರು ಕನಿಕರದಿಂದ ನಸು ನಕ್ಕು, ನನ್ನ ಕೈ ಹಿಡಿದೆತ್ತಿ ಸಂತೈಸಿ ಮುಂದಿನ ತರಗತಿಯಲ್ಲಿ ಕುಳಿತುಕೋ ಎಂದು ಕಳುಹಿಸಿದರು! ಇನ್ನೊಬ್ಬ ವಿದ್ಯಾರ್ಥಿ ವರ್ಷದ ಕೊನೆಯಲ್ಲಿ ಬೇರೊಂದು ಶಾಲೆಯಿಂದ ಬಂದು ಸೇರಿದವನು. ಅವನನ್ನು ಮುಂದಿನ ತರಗತಿಯಲ್ಲಿ ಕೂರುವಂತೆ ಹೇಳಿದರು. ಆದರೆ ಎರಡನೇ ತರಗತಿಯಲ್ಲಿ ಮುಂದುವರಿಯುವ ಅರ್ಹತೆ ಅವನಿಗಿಲ್ಲವೆಂದು ಕಂಡು ಬಂದಿದ್ದರಿಂದ ಒಂದು ವಾರದನಂತರ ಹಿಂದಿನ ತರಗತಿಗೆ ಕಳುಹಿಸಿದರು.

ಮುಂದಿನ ನಾಲ್ಕು ವರ್ಷ ಆ ಶಾಲೆಯಲ್ಲಿ ನನ್ನ ಕಲಿಕೆ ಯಾವುದೇ ಅಡೆತಡೆಗಳಿಲ್ಲದೆ ಮುಂದುವರಿಯಿತು. ನಾಲ್ಕನೆಯ ತರಗತಿಯವರೆಗೂ ನನ್ನ ಕಲಿಕೆ ತುಂಬಾ ತೃಪ್ತಿಕರವಾಗಿಯೇ ಇತ್ತು. ಪ್ರತಿ ಪರೀಕ್ಷೆಗಳಲ್ಲೂ ನಾನು ಮತ್ತು ನನ್ನ ಸ್ನೇಹಿತ ಎಂ. ಜಿ. ಕೃಷ್ಣಪ್ಪನೊಡನೆ ಪೈಪೋಟಿ

ನಡೆಯುವಂತಿತ್ತು; ಅವನು ಇಲ್ಲವೆ ನಾನು ಮೊದಲ ಇಲ್ಲವೆ ಎರಡನೇ ಸ್ಥಾನದಲ್ಲಿರುತ್ತಿದ್ದವು. ಮುಖ್ಯೋಪಾಧ್ಯಾಯ ಶಾಮಭಟ್ಟರೇ ಅಲ್ಲದೆ ಮಂಜಭಟ್ಟರು, ನಾಗಾಶಾಸ್ತ್ರಿಗಳು, ಪದ್ಮನಾಭಯ್ಯ ನವರಂಥ ಸಹೃದಯಿ ಮತ್ತು ನಿಸ್ವಾರ್ಥ ಗುರುಗಳಿದ್ದುದು ನಮ್ಮ ಸುಯೋಗವೆಂದೇ ಭಾವಿಸುತ್ತೇನೆ. ನಾನಾಕಾರಣಗಳಿಂದ ಕಲುಷಿತವಾಗಿರುವ ಇಂದಿನ ಶಾಲಾ ಕಾಲೇಜುಗಳ ಪರಿಸ್ಥಿತಿಯನ್ನು ನೋಡಿದಾಗ ಅದೊಂದು ಸುವರ್ಣಯುಗವೆಂದೇ ಹೇಳಬೇಕು. ಪಾಠ ಪ್ರವಚನ ಗಳಲ್ಲಿ ಮುಂದಿರುತ್ತಿದ್ದು ಒಳ್ಳೆಯ ನಡವಳಿಕೆಯುವನೆಂದು ಗುರುತಿಸಲ್ಪಟ್ಟ ನನ್ನನ್ನು ಮಂಜಭಟ್ಟರು ಪ್ರೀತಿವಿಶ್ವಾಸದಿಂದ ನೋಡುತ್ತಿದ್ದುದು ನೆನಪಿದೆ. ಅವರ ಎಂದಿನ ಪಾಠಗಳ ಜೊತೆ ವಾರಕ್ಕೊಂದು ಸಾರಿ ಸಂಗೀತ ಕಲಿಸುತ್ತಿದ್ದರು. ಅವರ ಆಗಾಗ್ಗೆ ಹೇಳಿಕೊಡುತ್ತಿದ್ದ "ಯಾರು ಬದುಕಿದರಯ್ಯ ಹರಿ ನಿನ್ನ ನಂಬಿ..." ಎಂಬ ಕನಕದಾಸರ ಪದ ನನಗೆ ತುಂಬಾ ಹಿಡಿಸಿತ್ತು. ಅದನ್ನು ಈಗಲೂ ಕೆಲಸಾರಿ ಗುನುಗಿ ಕೊಳ್ಳುತ್ತಿರುತ್ತೇನೆ! ನಾಲ್ಕನೇ ತರಗತಿಯುಲ್ಲಿ ಎಲ್ಲರಿಗಿಂತ ಅತಿ ಹೆಚ್ಚಾದ ೧೪೪ ಅಂಕಗಳನ್ನು ಗಳಿಸಿದ್ದನ್ನು ನೋಡಿ ಖುಷಿ ಪಟ್ಟಿದ್ದರು. ಮುಂದಿನ ಮಾಧ್ಯಮಿಕ ಶಾಲೆಗೆ ತೆರಳುವ ಮುನ್ನ ಅವರ ಪಾದಮುಟ್ಟಿ ನಮಸ್ಕರಿಸಿದಾಗ ನನ್ನ ಕಣ್ಣುಗಳಲ್ಲಿ ಆನಂದಬಾಷ್ಪಗಳಾಗಿದ್ದವು. ಅವರಾಗ "ಚೆನ್ನಾಗಿ ಓದಿಕೋ, ನಿನಗೆ ಒಳ್ಳೆಯ ಭವಿಷ್ಯವಿದೆ ಕಣೋ" ಎಂದು ಹರಸಿದ್ದನ್ನು ನಾನೆಂದೂ ಮರೆಯಲಾರೆ. ಅಂತಹ ಗುರುಪರಂಪರೆಯನ್ನು ಈಗೆಲ್ಲಿಂದ ತರೋಣ?

ಮುಂದಿನ ವಿದ್ಯಾಭ್ಯಾಸ ಮೇಗರವಳ್ಳಿಯ ಮಾಧ್ಯಮಿಕ ಶಾಲೆಯಲ್ಲಿ ಮುಂದುವರಿಯಿತು. ವಿಶ್ವನಾಥರಾಯರೆಂಬವರು ಮುಖ್ಯೋಪಾಧ್ಯಾಯರಾಗಿದ್ದರು. ಅಲ್ಲಿಯೂ ತುಂಬಾ ಒಳ್ಳೆಯ ಉಪಾಧ್ಯಾಯ ವರ್ಗವಿದ್ದುದು ನಮ್ಮ ಸುಯೋಗವೆನ್ನಬೇಕು. ಅಲ್ಲಿ ನಾಲ್ಕು ತರಗತಿಗಳಲ್ಲಿ ನನ್ನ ಕಲಿಕೆ ತೃಪ್ತಿಕರವಾಗಿಯೇ ಮುಂದುವರಿಯಿತು. (ಮೊಟ್ಟ ಮೊದಲ ಇಂಗ್ಲೀಷ್ ಅಕ್ಷರಾಭ್ಯಾಸ ಶುರುವಾಗಿದ್ದೂ ಈ ಶಾಲೆಯಲ್ಲೇ). ಪ್ರತಿ ತರಗತಿಗಳಲ್ಲೂ ಉತ್ತಮ ಅಂಕಗಳನ್ನು ಗಳಿಸುತ್ತಿದ್ದೆ. ಇಲ್ಲಿಯ ನಾಲ್ಕನೇ ತರಗತಿಯ ಪರೀಕ್ಷೆ ಲೋಯರ್ ಸೆಕೆಂಡರಿ ಪರೀಕ್ಷೆಯು ವಿದ್ಯಾರ್ಥಿ ಜೀವನದಲ್ಲಿ ಒಂದು ನಿರ್ಣಾಯಕ ಹಂತವೆಂದು ಪರಿಗಣಿಸಲಾಗುತ್ತಿತ್ತು. "ಐದು ರೂಪಾಯಿ ಪರೀಕ್ಷೆ" (ಆಗಿನ ಕಾಲದಲ್ಲಿ ಹೆಚ್ಚಿನ ಮೊತ್ತವೆ ಸರಿ) ಎಂಬ ಖ್ಯಾತಿಯೂ ಇತ್ತು. ಅದರಲ್ಲಿ ತೇರ್ಗಡೆ ಯಾಗುವವರ ಸಂಖ್ಯೆಯೂ ತೀರಾ ಕಡಿಮೆ. ಅದರಲ್ಲಿ ತೇರ್ಗಡೆಯಾದವರನ್ನು ಒಳ್ಳೆಯ ವಿದ್ಯಾವಂತರೆನ್ನಲಾಗುತ್ತಿತ್ತು. ತೀರ್ಥಹಳ್ಳಿಯ ಹೈಸ್ಕೂಲಿನಲ್ಲಿ ಪರೀಕ್ಷೆ ನಡೆಯುತ್ತಿದ್ದು ತಾಲ್ಲೂಕಿನಾದ್ಯಂತದ ಮಾಧ್ಯಮಿಕ ಶಾಲಾ ವಿದ್ಯಾರ್ಥಿಗಳು ಅಲ್ಲಿಗೆ ಹೋಗಬೇಕಾಗುತ್ತಿದ್ದು ಅದೊಂದು ಆತಂಕದ ಕಾರಣವಾಗುತ್ತಿತ್ತು.

ಈ ಪರೀಕ್ಷೆಯ ಫಲಿತಾಂಶಗಳು ತಾಲ್ಲೂಕಿನ ಇತರ ಮಾಧ್ಯಮಿಕ ಶಾಲೆಗಳ ಫಲಿತಾಂಶ ಗಳೊಡನೆ ಹೋಲಿಕೆಯಾಗುತ್ತಿದ್ದುದರಿಂದ ಶಾಲೆ-ಶಾಲೆಗಳ ನಡುವೆ ಆ ಬಗೆಗೆ ಒಂದು ರೀತಿಯ ಪೈಪೋಟಿ ನಡೆಯುತ್ತಿತ್ತೆಂದೇ ಹೇಳಬಹುದು. ನಮ್ಮ ಶಾಲೆಯಲ್ಲಿ ವರ್ಷವೆಲ್ಲಾ ತುಂಬಾ ಆಸ್ಥೆ ವಹಿಸಿ ಪಾಠಪ್ರವಚನಗಳನ್ನು ನಡೆಸುತ್ತಿದ್ದರೂ, ಕಡೆಯ ಒಂದೆರಡು ತಿಂಗಳು ರಾತ್ರಿಹೊತ್ತು ಸಹ ವಿಶೇಷವಾಗಿ ತರಗತಿಗಳನ್ನು ನಡೆಸುತ್ತಿದ್ದರು. ಹಾಸಿಗೆ, ಲಾಟೀನುಗಳನ್ನು ಹಿಡಿದುಕೊಂಡು ರಾತ್ರಿ ಶಾಲೆಯಲ್ಲಿ ಪಾಠ ಕೇಳಿ, ಅಲ್ಲೇ ಮಲಗಿದ್ದು ಬೆಳಿಗ್ಗೆ ಮನೆಗೆ ಬರುತ್ತಿದ್ದೆವು. ಯಾವ ಪ್ರತಿಫಲಾಪೇಕ್ಷೆಯನ್ನೂ ಬಯುಸದೆ ಇಂತಹ ಕಾರ್ಯಕ್ರಮಗಳು ಅಂದು ನಡೆಯುತ್ತಿದ್ದ ವೆಂಬುದನ್ನು ಇಂದು ಯೋಚಿಸಲೂ ಆಗದು!

ಪರೀಕ್ಷೆ ಇನ್ನೂ ಒಂದೆರಡು ದಿನಗಳಿರುವಾಗಲೇ ಮುಖ್ಯೋಪಾಧ್ಯಾಯ ವಿಶ್ವನಾಥ ರಾಯರು ನಮ್ಮನ್ನೆಲ್ಲಾ ತೀರ್ಥಹಳ್ಳಿಗೆ ಕರೆದುಕೊಂಡು ಹೋದರು. ಅಲ್ಲಿಯ ಒಕ್ಕಲಿಗರ ವಿದ್ಯಾರ್ಥಿ ನಿಲಯದಲ್ಲಿ ನಾವು ಉಳಿದುಕೊಳ್ಳುವ ಏರ್ಪಾಡಾಗಿತ್ತು. ಮರುದಿನವೇ ನನಗೆ ವಿಪರೀತ ಜ್ವರ ಬಂದಿತು. ಅಲ್ಲಿಯ ಆಸ್ಪತ್ರೆಯ ಕಾಂಪೌಂಡರ್ ಅವರ ಹಳೆಯ ಶಿಷ್ಯನಾಗಿದ್ದು, ನನಗೆ ಔಷಧ ಕೊಡಿಸಿದರು. ವಿದ್ಯಾರ್ಥಿಗಳೆಲ್ಲರ ಯೋಗಕ್ಷೇಮ ತಮ್ಮ ಸ್ವಂತ ಜವಾಬ್ದಾರಿಯೆಂದು ಅವರು ಭಾವಿಸಿದ್ದರು. ಪ್ರತಿದಿನ ಪರೀಕ್ಷೆಗೆ ನಮ್ಮನ್ನು ಹುರಿದುಂಬಿಸಿ ಕಳುಹಿಸಿ ಕೊಡುತ್ತಿದ್ದರಲ್ಲದೆ, ಪರೀಕ್ಷೆ ಮುಗಿಸಿ ಹೊರಬಂದಾಕ್ಷಣ ನಾವು ಹೇಗೆ ಉತ್ತರಿಸಿದ್ದೇವೆಂದು ವಿಚಾರಿಸಿ, ಸಾಂತ್ವನ ಹೇಳುತ್ತಿದ್ದರು.

ಮೇಗರವಳ್ಳಿಯ ಮಾಧ್ಯಮಿಕ ಶಾಲೆಯಿಂದ ಆ ವರ್ಷ ೧೫-೨೦ ವಿದ್ಯಾರ್ಥಿಗಳು ಲೋಯರ್ ಸೆಕೆಂಡರಿ ಪರೀಕ್ಷೆಗೆ ಕುಳಿತ ನೆನಪು. ಅವರಲ್ಲಿ ಆರು ಜನ ಮಾತ್ರ ತೇರ್ಗಡೆ ಯಾಗಿದ್ದರು. ಅವರ ಪೈಕಿ ಮೂರನೆ ಬಾರಿಗೆ ಪರೀಕ್ಷೆಗೆ ಕುಳಿತ ಎರಡು ಜನ, ಎರಡನೆ ಬಾರಿಗೆ ಕುಳಿತ ಎರಡು ಜನ, ಅದೇ ಮೊದಲ ಬಾರಿಗೆ ಕುಳಿತ ಎರಡು ಜನರಂತೆ ತೇರ್ಗಡೆಯಾಗಿದ್ದರು. ಮೊದಲನೇ ಸಾರಿಯೇ ಕುಳಿತು ತೇರ್ಗಡೆಯಾದವರಲ್ಲಿ ಮುಖ್ಯೋಪಾಧ್ಯಾಯರ ಮಗ ನಾಗರಾಜ (ರಾಮಚಂದ್ರ) ಮತ್ತು ನಾನು!

ಈ ಗರಿಮೆಯಿಂದ ಮೇಗರವಳ್ಳಿಯವರೆಲ್ಲರ ಗಮನ ನನ್ನ ಕಡೆ ಹರಿಯುವಂತಾಯಿತು. ಹೊರ ಊರಿಂದ ಬಂದು ಹೆಗ್ಗಡೆಯವರ ಮನೆಯಲ್ಲಿ ಊಟ ಮಾಡಿಕೊಂಡಿದ್ದು ಬಹುಪಾಲು ಯಾರ ಗಮನಕ್ಕೂ ಬಾರದವನೊಬ್ಬ ಆ ಕಾಲದಲ್ಲಿ ಲೋಯರ್ ಸೆಕೆಂಡರಿ ಪರೀಕ್ಷೆಯನ್ನು ಮೊದಲನೇ ಪ್ರಯತ್ನದಲ್ಲೇ ತೇರ್ಗಡೆಯಾಗಿದ್ದೆಂದರೆ ಅಚ್ಚರಿ ಪಡುವಂತಹದ್ದೇ.

ಮೊವಲಿಗೆ ಅಕ್ಷರ ಕಲಿಯಲು ಶಾಲೆಗಳಿಗೆ ಹೋಗಲು ರಂಪಾಟ ಮಾಡುತ್ತಿದ್ದ ನಾನು ಮೇಗರವಳ್ಳಿಯಲ್ಲಿ ಸತತ ಎಂಟು ವರ್ಷಗಳು ಶಾಲೆಗೆ ಹೋಗಿ ಅಂತಿಮವಾಗಿ ಅತ್ಯುತ್ತಮ ಫಲಿತಾಂಶ ಗಳಿಸಿದ್ದೆ; ಹಿಂದಿರುಗಿ ನೋಡಿದರೆ ನನಗೇ ಈಗ ಅಚ್ಚರಿಯಾಗುತ್ತದೆ. ಅಷ್ಟು ಕಾಲ ನನಗೆ ಆಶ್ರಯ ನೀಡಿದ ಲಿಂಗಪ್ಪ ಹೆಗ್ಗಡೆಯವರ ಮನೆಯ ಪರಿಸರ ನನ್ನ ಇರುವಿಕೆಗೆ ಅನುಕೂಲ ಕರವಾಗಿಯೇ ಇದ್ದವು. ಅಜ್ಜಿಗೆ ಅವರ ಅಕ್ಕನ ಮೊಮ್ಮಗನೆಂಬ ಅಕ್ಕರೆ ಇದ್ದಿರಬಹುದಾದರೂ ಅದನ್ನು ಬಹಿರಂಗವಾಗಿ ತೋರ್ಪಡಿಸುತ್ತಿರಲಿಲ್ಲ. ತಮ್ಮ ಅಕ್ಕನ ವಿಧವೆ ಸೊಸೆಯ ಒಬ್ಬನೇ ಮಗನ ಮುಂದಿನ ಆಗುಹೋಗುಗಳ ಭವಿಷ್ಯದ ಗುರುತರ ಜವಾಬ್ದಾರಿ ತಮ್ಮ ಮೇಲಿರುವುದನ್ನು ಅವರು ಅರಿತವರಾಗಿದ್ದರೆನಿಸುತ್ತದೆ. ನನ್ನ ಚಲನವಲನಗಳು, ಭಾಗವಹಿಸುತ್ತಿದ್ದ ಆಟೋಟ ಗಳನ್ನು ದೂರದಿಂದಲೇ ವೀಕ್ಷಿಸುತ್ತಲೋ, ಇಲ್ಲವೆ ಬೇರೆಯವರಿಂದ ತಿಳಿದುಕೊಳ್ಳುತ್ತಲೋ ಆಗಾಗ್ಗೆ ಎಚ್ಚರಿಕೆಯ ಹಿತನುಡಿಗಳನ್ನು ಹೇಳುವುದಕ್ಕೆ ಹಿಂಜರಿಯುತ್ತಿರಲಿಲ್ಲ. ಪ್ರತಿ ತರಗತಿಗಳಲ್ಲೂ ತೇರ್ಗಡೆಯಾಗುತ್ತಿದ್ದ ನನ್ನ ಪ್ರಗತಿ ಅವರ ಮನಸ್ಸಿಗೆ ಮುದ ನೀಡುತ್ತಿದ್ದಿರಬೇಕು. ಅಪ್ಪಣ್ಣ ಹೆಗ್ಗಡೆ ಯವರ ಹೆಂಡತಿ ವೆಂಕಮ್ಮನವರಿಗೂ ನನ್ನ ಮೇಲೆ ಸಹಾನುಭೂತಿಯಿದ್ದು ಅವರ ಮಕ್ಕಳಂತೆಯೇ ನನ್ನನ್ನು ನೋಡಿಕೊಳ್ಳುತ್ತಿದ್ದರು.

ಇನ್ನು ಅಜ್ಜ ಲಿಂಗಪ್ಪ ಹೆಗ್ಗಡೆಯವರಂತೂ ಯಾರ ವಿಷಯದಲ್ಲೂ ಹೆಚ್ಚಿನ ಆಸಕ್ತಿ ವಹಿ ಸದೆ ನಿರ್ಲಿಪ್ತರಾಗಿರುತ್ತಿದ್ದರು. ಪ್ರತಿದಿನ ಅವರು ಓದುತ್ತಿದ್ದ "ತಾಯಿ ನಾಡು" ಪತ್ರಿಕೆಯನ್ನು ಅಂಚೆ ಕಛೇರಿಯಿಂದ ತಂದುಕೊಡುವುದು ನನ್ನ ಕರ್ತವ್ಯದಂತಾಗಿತ್ತು. ಅದನ್ನು ಅತ್ಯಂತ ಖುಷಿ ಯಿಂದ ಮಾಡುತ್ತಿದ್ದೆ. ಮುಂದೆ ಪತ್ರಿಕೆ ಮತ್ತು ಪುಸ್ತಕಗಳನ್ನು ಓದುವ ಅಭ್ಯಾಸ ಅವರ ಅನುಕರಣೆ

ಯಿಂದಲೇ ಉಂಟಾಯಿತೆನ್ನಬಹುದು. ಅವರ ಹಿರಿಯ ಮಗ ಅಪ್ಪಣ್ಣ ಹೆಗ್ಗಡೆಯವರು ಸದಾ ವ್ಯಾಪಾರ ವಹಿವಾಟುಗಳಲ್ಲಿ ತೊಡಗಿಕೊಂಡು ಪುರುಸೊತ್ತಿಲ್ಲದವರಾಗಿರುತ್ತಿದ್ದರು. ಮಿತಭಾಷಿಗಳಾದ ಇತರರೊಡನೆ ಸಲಿಗೆಯಿಂದ ವರ್ತಿಸದ ಅವರಲ್ಲಿ ನನಗೆ ತುಂಬಾ ಗೌರವವಿತ್ತು. ನನ್ನ ಏಳಿಗೆಯ ಬಗೆಗೆ ತೃಪ್ತಿ ಇದ್ದು ನನ್ನ ಮೇಲೆ ಆಸಕ್ತಿ ಇದ್ದಂತಿತ್ತು.

ಲಿಂಗಪ್ಪ ಹೆಗ್ಗಡೆಯವರ ಇನ್ನಿಬ್ಬರು ಮಕ್ಕಳಾದ ಗಿಡ್ಡಪ್ಪ ಹೆಗ್ಗಡೆ ಮತ್ತು ಕೃಷ್ಣಪ್ಪ ಹೆಗ್ಗಡೆಯವರು ನನಗಿಂತಲೂ ಮುಂದಿನ ತರಗತಿಗಳಲ್ಲಿ ಓದುತ್ತಿದ್ದವರು. ಅವರ ಜೊತೆ ಜೊತೆಯಲ್ಲೇ ಬೆಳೆಯುತ್ತಿದ್ದು ಅವರು ಭಾಗಿಗಳಾಗುತ್ತಿದ್ದ ಸಣ್ಣ ಪುಟ್ಟ ಕೆಲಸ ಕಾರ್ಯಗಳಲ್ಲಿ ನಾನೂ ಭಾಗಿಯಾಗುತ್ತಿದ್ದೆ. ಒಟ್ಟಿನಲ್ಲಿ ಹೇಳುವುದಾದರೆ ಅದೊಂದು ಬೇರೆಯವರ ಮನೆ ಎಂದೆನಿಸಲೇ ಇಲ್ಲ. ಬಹುಶಃ ಅದರಿಂದಲೇ ರಜೆ ಸಮಯಗಳಲ್ಲಿ ಊರಿಗೆ ಹೋಗುತ್ತಿದ್ದರೂ ತರಗತಿಗಳು ತೆರೆಯುವ ಸಮಯಕ್ಕೆ ತಪ್ಪದೇ ಹಾಜರಾಗುತ್ತಿದ್ದೆ. ಸ್ಕೂಲಿಗೆ ತಪ್ಪಿಸಿಕೊಳ್ಳುವ ಹಿಂದಿನ ಚಾಳಿ ಮಾಯವಾಗಿ ನಾನೊಬ್ಬ ಸಭ್ಯ ಹಾಗೂ ಜಾಣ ವಿದ್ಯಾರ್ಥಿಯಾಗಿದ್ದೆನೆಂದೇ ಹೇಳಬಹುದು.

ಇಷ್ಟೆಲ್ಲಾ ಹೇಳಿದರೂ ಆ ಮನೆಯಲ್ಲಿ ಮರೆಯಲಾಗದ ಮತ್ತೊಬ್ಬರ ಪ್ರಸ್ತಾಪ ಮಾಡಲೇ ಇಲ್ಲ. ಅವರ ವಿಚಾರಗಳನ್ನು ಪ್ರತ್ಯೇಕವಾಗಿ ಹೇಳಬೇಕೆಂದೆ ಹಾಗೆ ಮಾಡಬೇಕಾಯಿತು. ಲಿಂಗಪ್ಪ ಹೆಗ್ಗಡೆಯವರ ಮೂರನೇ ಮಗ ಎಂ. ಎಲ್. ಅಪ್ಪಯ್ಯ ಹೆಗ್ಗಡೆ ಅವರು. ಅವರಾಗ ತೀರ್ಥಹಳ್ಳಿಯ ಹೈಸ್ಕೂಲಿನಲ್ಲಿ ವಿದ್ಯಾಭ್ಯಾಸ ನಿರತರಾಗಿದ್ದರು. ಆ ವರ್ಷ ರಜೆಯಲ್ಲಿ ಮನೆಗೆ ಬಂದಾಗ ಅವರು ನನ್ನನ್ನು ಗಮನಿಸಿದರು; ಅದು ಹೇಗೋ ನಾನೂ ಅವರಲ್ಲಿ ಆಕರ್ಷಿತನಾದೆ. ನನ್ನ ಓದಿನ ಪ್ರಗತಿಯ ಬಗೆಗೆ ಅವರಿಗೆ ತುಂಬಾ ಆಸಕ್ತಿ ಇರುವಂತಿತ್ತು. ನನ್ನ ಯೋಗಕ್ಷೇಮದ ಬಗೆಗೂ ಕಾಳಜಿ ತೋರಿಸುತ್ತಿದ್ದರು. ಅವರ ಕಾಳಜಿಯ ಒಂದು ಪ್ರಸಂಗ ಉಲ್ಲೇಖಸೀಯ.

ಆ ವರ್ಷ ಯುಗಾದಿ ಹಬ್ಬದ ಪ್ರಯುಕ್ತ ಎಂದಿನ ರೂಢಿಯಂತೆ ಮನೆಮಂದಿಯೆಲ್ಲಾ ಹೊಸ ಉಡುಗೆ ತೊಡಿಗೆಗಳನ್ನು ಧರಿಸಿದ್ದರು. ನಾನು ಹೊಸಬಟ್ಟೆ ಧರಿಸದಿರುವುದು ಅವರ ಗಮನ ಸೆಳೆದಿರಬೇಕು. ನಿಜ, ಅವರ ಕುಟುಂಬದ ಸದಸ್ಯನಾಗಿರದ ನನಗೆ ಹೊಸ ಬಟ್ಟೆ ಕೊಡಿಸುವುದು ಅವರ ಕರ್ತವ್ಯವೇನೂ ಆಗಿರಲಿಲ್ಲ. ವರ್ಷಗಟ್ಟಲೇ ಊಟ ಹಾಕಿ ಸಲಹುತ್ತಿದ್ದುದೇನು ಕಡಿಮೆ ಉಪಕಾರವಾಗಿರಲಿಲ್ಲ. ಆದರೂ ಸುಮ್ಮನಿರಲಾಗದೆ ತಂದೆಯವರ ಹತ್ತಿರ ನನಗೇಕೆ ಬಟ್ಟೆ ಕೊಡಿಸಲಿಲ್ಲವೆಂದು ಕೇಳಿಯೇ ಬಿಟ್ಟರು. ತಂದೆಯವರಿಗೂ ಅದೊಂದು ಅನಿರೀಕ್ಷಿತ ವಿಷಯವೇ ಆಗಿರಬೇಕು. ಅಜ್ಜಯ್ಯ "ಹೌದು ಕಣೋ ನನಗೂ ಅದು ಹೊಳೆಯಲೇ ಇಲ್ಲ. ಇಗೋ ಚಂದ್ರು ನನ್ನ ಹೊಸ ಟವಲನ್ನು ನೀನೇ ಇಟ್ಟುಕೋ" ಎಂದು ನನ್ನ ಹೆಗಲ ಮೇಲೆ ಇಟ್ಟರು. ಎಂತಹ ಔದಾರ್ಯ! ಆ ದೃಶ್ಯ ಇನ್ನೂ ಕಣ್ಣಿಗೆ ಕಟ್ಟಿದಂತೆ ಎದುರಿಗಿದೆ.

ಮಾಧ್ಯಮಿಕ ಶಾಲಾ ವಿದ್ಯಾರ್ಥಿಯಾಗಿದ್ದಾಗ ತೀರ್ಥಹಳ್ಳಿಯ ಒಕ್ಕಲಿಗರ ಸಂಘದವರು ನಮ್ಮ ಕೋಮಿನ ಬಡ ವಿದ್ಯಾರ್ಥಿಗಳಿಗೆ ಪ್ರತಿ ತಿಂಗಳೂ ನೀಡುತ್ತಿದ್ದ ಮೂರು ರೂಪಾಯಿಗಳ ವಿದ್ಯಾರ್ಥಿ ವೇತನ ನನಗೆ ದೊರಕುವಂತೆ ಮಾಡಿದ್ದರು. ಊರಿಗೆ ಬಂದಾಗಲೆಲ್ಲಾ ನನಗೆ ಪಾಠ ಹೇಳಿ ಪ್ರಶ್ನೆಗಳನ್ನು ಕೇಳಿ ಮಾರ್ಗದರ್ಶನ ನೀಡುತ್ತಿದ್ದುದನ್ನು ಮರೆಯಲಾರೆ.

ಉಜ್ವಲ ರಾಷ್ಟ್ರಭಕ್ತರಾಗಿದ್ದ ಅವರು ೧೯೪೨ರ **"ಭಾರತ ಬಿಟ್ಟು ತೊಲಗಿ"** ಚಳುವಳಿಯಲ್ಲಿ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡರು. ಮೇಗರವಳ್ಳಿಗೆ ಬಂದು ಆಂದೋಲನದ ಮುಂದಾಳತ್ವ ವಹಿಸಿಕೊಂಡರು. ಮಾಧ್ಯಮಿಕ ಶಾಲೆಯೊಳಗೆ ಯಾರೂ ಪ್ರವೇಶಿಸದಂತೆ ಮೆಟ್ಟಲುಗಳ ಮೇಲೆ ಅಡ್ಡ ಮಲಗಿ ಪ್ರತಿಭಟಿಸಿದ್ದನ್ನು ಕಣ್ಣಾರೆ ನೋಡಿದ್ದೆ. ಚಳುವಳಿ ಉಗ್ರವಾದಂತೆ

ಅಪ್ಪಯ್ಯ ಹೆಗ್ಗಡೆಯವರನ್ನು ದಸ್ತಗಿರಿ ಮಾಡಿದರು. ಕೆಲವು ತಿಂಗಳು ಶಿವಮೊಗ್ಗ ಜೈಲಿನಲ್ಲಿದ್ದರು. ಆ ಸಮಯದಲ್ಲೇ ಅವರಿಗೆ ಜ್ವರ ಕೆಮ್ಮು ಬರಲಾರಂಭಿಸಿತಂತೆ. ಮುಂದೆ ಕಫದಲ್ಲಿ ರಕ್ತವೂ ಬೀಳತೊಡಗಿತು. ಅವರ ಅಣ್ಣ ಶಿವಮೊಗ್ಗೆಗೆ ಹೋಗಿ ಬಿಡಿಸಿಕೊಂಡು ಬರುವ ಪ್ರಯತ್ನ ಮಾಡಿದರು; ಕ್ಷಮಾಪಣೆ ಬರೆದು ಕೊಡದೆ ಜೈಲಿನಿಂದ ಅವರನ್ನು ಬಿಡುಗಡೆ ಮಾಡಲು ನಿರಾಕರಿಸಿದರಂತೆ. ಅಪ್ರತಿಮ ದೇಶಭಕ್ತರಾಗಿದ್ದ ಅವರು ಆ ನಿಬಂಧನೆಗೆ ಸಮ್ಮತಿಸಲಿಲ್ಲ. ಮತ್ತೆ ಕೆಲವೇ ದಿನಗಳಲ್ಲಿ ಪರಿಸ್ಥಿತಿ ವಿಕೋಪಕ್ಕೆ ಹೋಯಿತು. ಅವರ ಅಣ್ಣ ಮತ್ತೆ ಶಿವಮೊಗ್ಗೆಗೆ ಹೋಗಿ ಬಹಳ ಪ್ರಯತ್ನಪಟ್ಟು ಅನುಕಂಪದ ಪೆರೋಲ್ ಮೇಲೆ ಬಿಡುಗಡೆ ಮಾಡಿಸಿ ಕರೆತಂದರು; ಹಾಗೂ ಉಡುಪಿಯಲ್ಲಿ ವೈದ್ಯರೊಬ್ಬರಿಂದ ಚಿಕಿತ್ಸೆಗೆ ಏರ್ಪಡಿಸಿದರು. ಆದರೆ ಮುಂದಿನ ಒಂದು ವಾರದಲ್ಲೇ ಅಪ್ಪಯ್ಯ ಹೆಗ್ಗಡೆ ಅಸು ನೀಗಿದರು.

ಇತ್ತೀಚೆಗೆ ಸ್ವಾತಂತ್ರ್ಯ ಲಭಿಸಿದ್ದರ ಸುವರ್ಣ ಮಹೋತ್ಸವಗಳು ಮೇಗರವಳ್ಳಿಯೂ ಸೇರಿದಂತೆ ನಾಡಿನಾದ್ಯಂತ ಜರುಗಿದವು. ಆದರೆ ಅಪ್ಪಯ್ಯ ಹೆಗ್ಗಡೆಯವರಂತಹ ಹುತಾತ್ಮರ ಸ್ಮರಣೆಯನ್ನು ಯಾರೂ ಮಾಡಲಿಲ್ಲವಂತೆ!

ಮೆಡಿಕಲ್ ಕಾಲೇಜು ವಿದ್ಯಾರ್ಥಿಯಾಗಿದ್ದಾಗ ಅವರ ಮನೆಯಲ್ಲಿದ್ದ ಮಸುಕಾದ ಫೋಟೋ ಒಂದನ್ನು ಜೀರ್ಣೋದ್ಧಾರ ಮಾಡಿಸಿ ಅವರ ಮನೆಯಲ್ಲಿರಿಸಿದ್ದೆ. ಅದೂ ಸಹ ಮಲೆನಾಡಿನ ವಾತಾವರಣದಲ್ಲಿ ಹೆಚ್ಚುಕಾಲ ಉಳಿಯಲಿಲ್ಲ. ಅಪ್ಪಯ್ಯ ಹೆಗ್ಗಡೆಯವರಂಥ ನಿಸ್ವಾರ್ಥ ಅಪ್ರತಿಮ ದೇಶಾಭಿಮಾನಿಗಳನ್ನು ಇನ್ನೆಲ್ಲಿ ನೋಡಲು ಸಾಧ್ಯ? ಆದರೆ ನನಗೆ ಅವರೊಬ್ಬ ಮರೆಯಲಾಗದ ಮಹಾನುಭಾವ.



ಹೊಳೆಗದ್ದೆ ಮನೆ

# ೩. ಪ್ರೌಢಶಾಲಾ ವ್ಯಾಸಂಗ

ಬಾಲ್ಯದಲ್ಲಿ ಶಾಲೆಗೆ ಹೋಗುವುದಕ್ಕೆ ತಕರಾರು ಎಬ್ಬಿಸಿ ರಂಪಾಟ ಮಾಡುತ್ತಾ ತಾಯಿಯ ನೆರಳಿನಲ್ಲೇ ಬೆಳೆದಿದ್ದ ನಾನು ಮೇಗರವಳ್ಳಿಯ ವಾಸ್ತವ್ಯದ ಸಮಯದಲ್ಲಿ ಬಾಹ್ಯ ಪ್ರಪಂಚದತ್ತ ಕಣ್ಣರಳಿಸಿ ನೋಡುವಂತಾಯಿತು. ಕಾಲಕ್ರಮೇಣ ಎಲ್ಲರೊಡನೆ ಹೊಂದಿಕೊಳ್ಳುವ ಪ್ರವೃತ್ತಿ ಬೆಳೆಯಲಾರಂಭಿಸಿತು. ಅಲ್ಲಿನ ಎಂಟು ವರ್ಷಗಳ ವಿದ್ಯಾಭ್ಯಾಸ ಒಳ್ಳೆಯ ಫಲಿತಾಂಶ ನೀಡಿದ್ದು ನನ್ನಲ್ಲಿ ಆತ್ಮವಿಶ್ವಾಸ ಮೂಡಿಸಿತ್ತು. ತುಂಬಾ ಬಡಕಲು ಶರೀರದ 'ಪರದೇಶಿ'(ಅನಾಥ) ಯಂತ್ತಿದ್ದ ನಾನು ಮುಂದೇನಾಗುವೆನೆಂಬುದರ ಪರಿವೆಯೇ ಇಲ್ಲದೆ ಒಂದು ರೀತಿಯ ಅನಾದರದ ಜೀವನ ನಡೆಸುತ್ತಿದ್ದೆನೆನ್ನಬಹುದು. ಆದರೂ ನನ್ನ ಸುತ್ತ ಮುತ್ತಲ ಕೆಲವರು ನನ್ನನ್ನು 'ಚಂದ್ರ ಡಾಕ್ಟರು' ಎಂಬ ವ್ಯಂಗ್ಯ ಮಿಶ್ರಿತ ತಮಾಷೆಯ ಧಾಟಿಯಲ್ಲಿ ಸಂಬೋಧಿಸುತ್ತಿದ್ದುದು ಈಗಲೂ ಜ್ಞಾಪಕವಿದೆ. (ಆ ಕಾಲದಲ್ಲಿ ತೀರ್ಥಹಳ್ಳಿಯಲ್ಲಿ ಡಾ|| ಚಂದ್ರಶೇಖರ ಎಂಬ ವೈದ್ಯರೊಬ್ಬರಿದ್ದರು) ಆಗ ತಾನೇ ಲೋಯರ್ ಸೆಕೆಂಡರಿ ಪರೀಕ್ಷೆಯಲ್ಲಿ ತೇರ್ಗಡೆಯಾಗಿದ್ದ ನಾನು ಮುಂದೆ ಡಾಕ್ಟರ್ ಆಗುತ್ತೇನೆಂಬುದರ ಕನಸಿರುವುದಿರಲಿ, ಪ್ರಸ್ತುತ ವಿದ್ಯಾಭ್ಯಾಸವನ್ನು ಮುಂದುವರಿಸುವ ಸಾಧ್ಯತೆಯೇ ಇದ್ದಂತಿರಲಿಲ್ಲ. ಅಪ್ಪನಿಗೂ ತನ್ನ ಮಗನ ಹಿರಿಮೆ (ಅದೇನಿದ್ದರೂ ಅದು ಆಕೆಯ ಸಾಧನೆಯ ಫಲತಾನೇ!)ಯ ಬಗೆಗೆ ಸಂತೃಪ್ತಿ ಉಂಟಾಗಿದ್ದಿರಬಹುದು. ಆದರೆ ಮುಂದೆ ಓದಿಸುವ ದಿಕ್ಕಿನಲ್ಲಿದ್ದ ಅಡೆತಡೆಗಳು ಅವಳ ಮನದಾಳವನ್ನು ಕದಡಿಸಿತೆನ್ನುವುದರಲ್ಲಿ ಸಂದೇಹ ವಿರಲಿಲ್ಲ; ಸಂತಸದಿಂದಿರ ಬೇಕಾದವಳ ಮುಖದಲ್ಲಿ ಚಿಂತೆ ಮನೆ ಮಾಡಿದ್ದರ ಛಾಯೆ ಎದ್ದು ಕಾಣುವಂತಿತ್ತು. ಆದಾವುದರ ಪರಿವೆ ಇಲ್ಲದ ನನಗೆ ಮಾತ್ರ ಓದಿನ ಗೀಳು ಹಿಡಿದು, ಹೈಸ್ಕೂಲು ಸೇರಬೇಕೆಂಬ ತವಕ ಉಂಟಾಗಿತ್ತು.

ಆಗ ಹೈಸ್ಕೂಲು ವಿದ್ಯಾಭ್ಯಾಸಕ್ಕೆ ದೂರದ ತೀರ್ಥಹಳ್ಳಿಗೆ ಹೋಗುವುದು ಅನಿವಾರ್ಯ. ಆದರಿಂದ ಅಲ್ಲಿ ಊಟ ವಸತಿಗಳಿಗೆ ಬೇರೆ ಏರ್ಪಾಡುಗಳನ್ನು ಮಾಡಿಕೊಳ್ಳಬೇಕು; ಜೊತೆಗೆ ಶಾಲಾ ಶುಲ್ಕವೂ ಸೇರಿದಂತೆ ಇತರೆ ಖರ್ಚುವೆಚ್ಚಗಳಿಗೆ ಹೆಚ್ಚಿನ ಹಣ ಒದಗಿಸಿಕೊಳ್ಳಬೇಕು. ಆ ಸಮಯದಲ್ಲಿ ಕುಟುಂಬದ ಆರ್ಥಿಕ ಪರಿಸ್ಥಿತಿಯೂ ಅಷ್ಟು ಉತ್ತಮವಾಗಿರಲಿಲ್ಲ. ಜಮೀನಿನ ಬೇಸಾಯ ಮತ್ತಿತರ ಕೆಲಸಕಾರ್ಯಗಳು ಸಂದರ್ಭಕ್ಕೆ ಸರಿಯಾಗಿ ಜರುಗದೆ ಉತ್ಪಾದನೆ ಇಳಿಮುಖವಾಗಿತ್ತು. ಮನೆಯಲ್ಲಿ ಪ್ರತಿವರ್ಷ ಮದುವೆ ಮತ್ತಿತರ ಕಾರ್ಯಗಳಿಗೆ ಅಪಾರ ಹಣದ ಅವಶ್ಯಕತೆಯೂ ಇರುತ್ತಿತ್ತು; ಸಾಹುಕಾರರಲ್ಲಿ ಸಾಲದ ಮೊತ್ತವೂ ಬೆಳೆಯುತ್ತಿದ್ದು ಕೆಲ ಸಾರಿ ಬಡ್ಡಿ ಕಟ್ಟಲೂ ಕಷ್ಟವಾಗುತ್ತಿತ್ತಂತೆ. ಇಂತಹ ಪರಿಸ್ಥಿತಿಯಲ್ಲಿ ಕುಟುಂಬದ ಮೂರು ಬುಡಕಟ್ಟುಗಳ ಪೈಕಿ ಒಂದರ ಸದಸ್ಯನ ಸಲುವಾಗಿ (ನನ್ನ) ಹೆಚ್ಚು ಹಣ ತೊಡಗಿಸುವ ವಿಚಾರದಲ್ಲಿ ಒಮ್ಮತವಿದ್ದಂತಿರಲಿಲ್ಲ. ವೈಯಕ್ತಿಕವಾಗಿ ಎಲ್ಲರೂ ನನ್ನನ್ನು ಪ್ರೀತ್ಯಾದರಗಳಿಂದ ನೋಡುತ್ತಿದ್ದರೂ ಬಹುಶಃ ಹಣಕಾಸಿನ ವಿಚಾರ ಬಂದಾಗ ಅದೆಲ್ಲಾ ಗೌಣವಾಗಿ ಬಿಡುತ್ತಿತ್ತು. ಈ ಹಿನ್ನೆಲೆಯಲ್ಲಿ ನಾನು ಹೈಸ್ಕೂಲು ಸೇರುವ ಗುರಿಸಾಧನೆ ಅಷ್ಟೇನೂ ಸುಲಭವಾಗಿರಲಿಲ್ಲ.

ಆ ಸಮಯದಲ್ಲಿ ನಮ್ಮ ಮನೆಗೆ ಬರುತ್ತಿದ್ದ ಕೆಲವು ಹತ್ತಿರದ ಹಾಗೂ ಪ್ರಭಾವೀ ಬಂಧುಗಳು ಲೋಯರ್ ಸೆಕೆಂಡರಿ ಪರೀಕ್ಷೆಯಲ್ಲಿ ತೇರ್ಗಡೆಯಾದ ಪ್ರತಿಭಾವಂತನೆನ್ನಬಹುದಾದ ನನ್ನನ್ನು ಮುಂದಿನ ವಿದ್ಯಾಭ್ಯಾಸಕ್ಕೆ ತೀರ್ಥಹಳ್ಳಿಗೆ ಕಳುಹಿಸಲೇ ಬೇಕೆಂದು ಕುಟುಂಬದ ಸದಸ್ಯರ ಮನ ಒಲಿಸುವ ಪ್ರಯತ್ನ ಮಾಡುತ್ತಿದ್ದರು. ಅವರನ್ನೆಲ್ಲಾ ಒಂದೆಡೆ ಸೇರಿಸಿ ಪಂಚಾಯಿತಿ ಮಾಡಿ ನಾನು ಎಸ್.ಎಸ್.ಎಲ್.ಸಿ., ಪರೀಕ್ಷೆ ಮುಗಿಸುವ ತನಕ ಹಣ ಒದಗಿಸಲೇಬೇಕೆಂಬ ತೀರ್ಮಾನ ಮಾಡಿಸಿದರು.

ತೀರ್ಥಹಳ್ಳಿಯಲ್ಲಿ ಸಂಬಂಧಿಕರಿಲ್ಲದಿದ್ದುದರಿಂದ ವಸತಿ ಸಮಸ್ಯೆಯೇನೋ ಇತ್ತು. ಆದರೆ ನಮ್ಮ ಜನಾಂಗದವರ ಮುಂದುವರಿದ ವಿದ್ಯಾಭ್ಯಾಸಕ್ಕೆ ಸಹಾಯ ಮಾಡುವ ಸಲುವಾಗಿ ೧೯೩೧ರಷ್ಟು ಹಿಂದೆಯೇ ತೀರ್ಥಹಳ್ಳಿಯಲ್ಲಿ ಒಕ್ಕಲಿಗರ ವಿದ್ಯಾರ್ಥಿ ನಿಲಯವನ್ನು ಸಮಾಜ ಬಾಂಧವರು ಸ್ಥಾಪಿಸಿದ್ದರು. ಹಣಕಾಸಿನ ಏರ್ಪಾಡುಗಳಾದ ನಂತರ ತೀರ್ಥಹಳ್ಳಿಗೆ ಹೋಗಿ ಒಕ್ಕಲಿಗರ ವಿದ್ಯಾರ್ಥಿನಿಲಯವನ್ನು ಸೇರಿಕೊಂಡೆ; ಹಾಗೆಯೇ ಅಲ್ಲಿಯ ಸರ್ಕಾರಿ ಹೈಸ್ಕೂಲಿಗೂ ದಾಖಲಿಸಿಕೊಂಡೆ (೧೯೪೫) ಕೆ. ಶ್ರೀಪಾದಾಚಾರ್ ಎಂಬವರು ಮುಖ್ಯೋಪಾಧ್ಯಾಯರಾಗಿದ್ದ ಕಾಲವದು. ಅಲ್ಲದೆ ಹೆಸರಾಂತ ಕನ್ನಡ ಪಂಡಿತ ಕಮಕೋಡು ನರಸಿಂಹ ಶಾಸ್ತ್ರಿಗಳು ಬಹಳ ಕಾಲದಿಂದ ಅಲ್ಲೇ ತಮ್ಮ ಬೋಧನೆ ಮತ್ತು ಸಾಹಿತ್ಯ ಕೃಷಿಯನ್ನು ಮುಂದುವರಿಸಿಕೊಂಡಿದ್ದರು. ಕನ್ನಡದ ಹೆಸರಾಂತ ಸಾಹಿತಿಗಳಾದ ಎಸ್. ವಿ. ಪರಮೇಶ್ವರ ಭಟ್ಟ, ಹಾ. ಮಾ. ನಾಯಕ, ಯು. ಆರ್. ಅನಂತಮೂರ್ತಿ ಮುಂತಾದವರಿಗೆ ಸ್ಫೂರ್ತಿ ನೀಡಿದ ಗರಿಮೆ ಅವರದಾಗಿತ್ತು. ಅನಂತಮೂರ್ತಿಯವರು ನನಗೆ ಸಹಪಾಠಿಯಾಗಿದ್ದರೆ, ಹಾಮಾನಾ ಅವರು ಒಂದೆರಡು ತರಗತಿ ಹಿಂದೆ ಇದ್ದವರು.

ಬಹುಶಃ ಆ ಕಾಲದಲ್ಲಿ ಹೆಚ್ಚಿನ ಬೇಡಿಕೆ ಇದ್ದ ವಿಜ್ಞಾನ ಮತ್ತು ಗಣಿತದ ವಿಷಯಗಳನ್ನೇ 'ಐಚ್ಛಿಕ' ವಿಷಯಗಳಾಗಿ ಆರಿಸಿಕೊಂಡೆ. ಸಮಯಕ್ಕೆ ಸರಿಯಾಗಿ ತರಗತಿಗಳಿಗೆ ಹಾಜರಾಗುವುದು, ಶಿಸ್ತುಬದ್ಧವಾಗಿ ಪಾಠ ಪ್ರವಚನಗಳನ್ನು ಕೇಳಿ ನಂತರ ಅಭ್ಯಾಸದಲ್ಲಿ ನಿರತನಾಗುವುದು ನನ್ನ ಅಂದಿನ ದಿನಚರಿ. ಆಟೋಟಗಳಂಥ ಪಠ್ಯೇತರ ಚಟುವಟಿಕೆಗಳಲ್ಲಿ ಕೆಲವರು ಭಾಗವಹಿಸುತ್ತಿದ್ದಿರಬಹುದಾದರೂ ಈ ಕಾಲದ ಅಬ್ಬರದ ಪ್ರದರ್ಶನಗಳಿಗವಕಾಶವಿರಲಿಲ್ಲ; ಅಂತಹ ಚಟುವಟಿಕೆಗಳಲ್ಲಿ ಅದೇಕೋ ನನಗೆ ಆಸಕ್ತಿಯುಂಟಾಗಿರಲಿಲ್ಲ. ಸಾಹಿತ್ಯದ ವಿಷಯದಲ್ಲಿ ನನಗೆ ಹೆಚ್ಚಿನ ಆಸಕ್ತಿಯೇನೋ ಇತ್ತು. ವಿದ್ಯಾರ್ಥಿನಿಲಯದ ಪುಸ್ತಕ ಭಂಡಾರವೇ ಅಲ್ಲದೆ ಶಾಲೆಯ ಪುಸ್ತಕ ಭಂಡಾರದಿಂದಲೂ ಪುಸ್ತಕಗಳನ್ನು ಎರವಲು ತಂದು ಓದುವ ಹವ್ಯಾಸವಿತ್ತು. ಆ ಕಾಲದ ಪ್ರಖ್ಯಾತರಾದ ಕುವೆಂಪು, ಬೇಂದ್ರೆ, ಕಾರಂತ, ಕೈಲಾಸಂ, ಅನಕೃ, ಮುಂತಾದವರ ಕೃತಿಗಳನ್ನು ಮುಗಿಬಿದ್ದು ಓದುತ್ತಿದ್ದೆ. ಪ್ರತಿದಿನದ ವರ್ತಮಾನ ಪತ್ರಿಕೆಗಳನ್ನು ತಪ್ಪದೇ ಓದುವ ಅಭ್ಯಾಸ ಮಾಡಿಕೊಂಡಿದ್ದೆ. ಆದರೆ ನಮ್ಮ ಶಾಲೆಯಲ್ಲೇ ಇದ್ದ ಇತರ ಕೆಲವು ವಿದ್ಯಾರ್ಥಿಗಳಂತೆ ಲೇಖನಗಳನ್ನು ಬರೆಯುವುದಾಗಲೀ, ಭಾಷಣ ಮಾಡುವಂತಹ ಪ್ರವೃತ್ತಿ ನನ್ನಲ್ಲಿ ಮೂಡಿ ಬರಲೇ ಇಲ್ಲ. ಬಹುಶಃ ನನ್ನಲ್ಲಿ ಮೊದಲಿನಿಂದಲೂ ಮನೆ ಮಾಡಿದ್ದ ಸಂಕೋಚದ ಸ್ವಭಾವ ಈ ವರ್ತನೆಗೆ ಕಾರಣವಾಗಿತ್ತೆನಿಸುತ್ತದೆ.

ಆದರೂ ಆಗ ನನ್ನಲ್ಲಿ ಇತರರಿಗಿಂತಲೂ ಮುಂದುವರಿದ ರಾಜಕೀಯ ಪ್ರಜ್ಞೆಯುಂಟಾಗಿತ್ತು. ಬಹುಶಃ ಮೇಗರವಳ್ಳಿಯಲ್ಲಿದ್ದಾಗ ಜರುಗಿದ ೧೯೪೨ರ 'ಭಾರತ ಬಿಟ್ಟು ತೊಲಗಿ' ಚಳುವಳಿಯ ಪ್ರಭಾವ ಮನದಾಳದಲ್ಲಿ ಅಂತರ್ಗತವಾಗಿತ್ತೆನಿಸುತ್ತದೆ. ಅದರಲ್ಲೂ

ಮಹಾತ್ಮಾಗಾಂಧಿಯವರ ಜೀವನ ಹಾಗೂ ತತ್ವಾದರ್ಶಗಳು ನನ್ನನ್ನು ಅತ್ತ ಕಡೆ ಸೆಳೆದಿತ್ತು. ಅವರ ಬಗೆಗೆ ಪ್ರಕಟ ವಾಗುತ್ತಿದ್ದ ಪತ್ರಿಕಾ ಲೇಖನಗಳನ್ನು ತಪ್ಪದೇ ಓದುತ್ತಿದ್ದೆ. ಅವರು ಬರೆದಿದ್ದ ಕೆಲವು ಇಂಗ್ಲಿಷ್ ಕಿರು ಹೊತ್ತಗೆಗಳನ್ನು ತರಿಸಿಕೊಂಡು ಶ್ರದ್ಧೆಯಿಂದ ಅಭ್ಯಾಸ ಮಾಡುತ್ತಿದ್ದೆ. From Yerawada Mandir (ಬೆಲೆ ಹತ್ತು ಆಣೆ), Ashram Bajanavali (ಬೆಲೆ ಎರಡು ಆಣೆ), ಪುಸ್ತಕಗಳನ್ನು ಅಹಮದಾಬಾದಿನ ನವಜೀವನ ಪ್ರಕಾಶನದವರಿಂದಲೇ ತರಿಸಿಕೊಂಡಿದ್ದರ ದಾಖಲೆ ಇನ್ನೂ ಇದೆ. ಅಲ್ಲದೆ ರಂಗನಾಥ ದಿವಾಕರ್ ಬರೆದ Glimpses of Gandhiji ಎಂಬ ಕೃತಿ ಪ್ರಕಟವಾದಾಕ್ಷಣ ತರಿಸಿಕೊಂಡಿದ್ದೆ. ಗಾಂಧೀಜಿಯವರ ಕೊಲೆಯಾದ ನಂತರ ದಿವಾಕರರೇ ಪ್ರಕಟಿಸಿದ The Last Glimpses of Gandhiji ಕೃತಿಯನ್ನು ತರಿಸಿಕೊಂಡಿದ್ದೆ. Harijan ಪತ್ರಿಕೆಗೆ ಒಂದು ವರ್ಷ ಚಂದಾದಾರನೂ ಆಗಿದ್ದೆ. ಇವಲ್ಲದೆ ಮುಂಬಯಿಯಿಂದ ಪ್ರಕಟ ವಾಗುತ್ತಿದ್ದ ಉಜ್ವಲ ರಾಷ್ಟ್ರೀಯ ಪತ್ರಿಕೆಗಳಾದ India ಮತ್ತು Forum ಮಾಸಿಕ ಪತ್ರಿಕೆಗಳನ್ನು ಕೆಲ ಸಮಯ ತರಿಸಿ ಓದುತ್ತಿದ್ದೆ. ಇವೆಲ್ಲದರ ಪರಿಣಾಮವಾಗಿ ಗಾಂಧೀಜಿ ಮತ್ತು ಕಾಂಗ್ರೆಸ್ ಪಕ್ಷದ ಬಗೆಗೆ ತುಂಬಾ ಆಕರ್ಷಣೆ ನನಗುಂಟಾಗಿತ್ತು. ಉಜ್ವಲ ರಾಷ್ಟ್ರಭಕ್ತಿ ನೆಲೆಯೂರಿದ್ದ ನಾನು ಕಾಂಗ್ರೆಸ್ಸಿನ ನಾಲ್ಕಾಣೆ ಸದಸ್ಯನೂ ಆಗಿದ್ದೆ.

## ಸ್ವಾತಂತ್ರ್ಯದ ಸಂಭ್ರಮ - ಮೈಸೂರು ಚಲೋ!

ಸಾವಿರದೊಂಬೈನೂರ ನಲವತ್ತೇಳರ ಆಗಸ್ಟ್‌ನಲ್ಲಿ ದೇಶಕ್ಕೆ ಸ್ವಾತಂತ್ರ್ಯದ ಅರುಣೋದಯದ ಸೂಚನೆಗಳು ಕಂಡು ಬರುತ್ತಿದ್ದಂತೆಯೇ ಪುಲಕಿತನಾಗಿ ಭಾವಾವೇಶಕ್ಕೊಳ ಗಾಗಿದ್ದೆ. ಆಗಸ್ಟ್ ೧೫ ಸಮೀಪಿಸುತ್ತಿದ್ದಂತೆಯೆ ಆ ದಿನವನ್ನು ಸಂಭ್ರಮದಿಂದ ಆಚರಿಸಲು ಒಂದೆರಡು ತಿಂಗಳುಗಳಿಂದಲೇ ತೀರ್ಥಹಳ್ಳಿಯಲ್ಲಿ ಚಟುವಟಿಕೆಗಳು ಶುರುವಾಗಿದ್ದವು. ಆ ದಿನ ಬೃಹತ್ ಮೆರವಣಿಗೆ ಹೊರಡಿಸುವುದು ಪ್ರಮುಖ ಕಾರ್ಯಗಳಲ್ಲೊಂದಾಗಿತ್ತು. ಮೆರವಣಿಗೆಯ ಮುಂಭಾಗದಲ್ಲಿ ಶಿಸ್ತುಬದ್ಧವಾಗಿ ಕವಾಯಿತಿನಿಂದ ಸಾಗಲು ಸ್ವಯಂ ಸೇವಕದಳವೊಂದರ ತರಬೇತಿ ಕಾರ್ಯವನ್ನು ಕಾಂಗ್ರೆಸ್ ಪಕ್ಷದವರು ರೂಪಿಸಿದರು. ಮಹಾತ್ಮಾಗಾಂಧಿಯವರ ಸಾಬರಮತಿ ಆಶ್ರಮದಲ್ಲಿ ಅಂತಹ ದಳವೊಂದರಲ್ಲಿ ಹಿಂದೆ ತರಬೇತಿಯ ಅನುಭವವಿದ್ದ ಗೋವಿಂದ ಭಟ್ ಎಂಬವರಿಗೆ ಆ ಜವಾಬ್ದಾರಿಯನ್ನು ವಹಿಸಿದರು. ಸುಮಾರು ೫೦ ಜನ ಶಾಲಾ ಬಾಲಕರಿಗೆ ಎರಡು ವಾರಗಳ ತರಬೇತಿ ನೀಡಿದರು. ಆ ದಳದಲ್ಲಿ ನಾನೂ ಒಬ್ಬ ಸ್ವಯಂಸೇವಕ ನಾಗಿ ಸೇರ್ಪಡೆಯಾದೆ. ಜೊತೆಗೆ ರಾಷ್ಟ್ರಗೀತೆ ಹಾಗೂ ಹಲವು ಹಿಂದೀ ದೇಶಭಕ್ತಿ ಗೀತೆಗಳನ್ನು ಸುಶ್ರಾವ್ಯವಾಗಿ ಹಾಡುವ ಅಭ್ಯಾಸವನ್ನು ಮಾಡಿಸಿದ್ದರು. ಆಗಸ್ಟ್ ೧೫ರ ಭವ್ಯ ಹಾಗೂ ಸ್ಮರಣೀಯ ಬೃಹತ್ ಮೆರವಣಿಗೆಯ ಮಂಚೂಣಿಯಲ್ಲಿ ನಮ್ಮ ದಳ ಶಿಸ್ತುಬದ್ಧವಾಗಿ ಕವಾಯಿತು ನಡೆಸುತ್ತಾ ಸಾಗಿತ್ತು. ಅಂದಿನ ಪುಟ್ಟ ತೀರ್ಥಹಳ್ಳಿಯ ಜನರ ಉತ್ಸಾಹ, ಸಂತೋಷ, ಸಂಭ್ರಮಗಳಿಗೆ ಪಾರವಿರಲಿಲ್ಲ, ಮೆರವಣಿಗೆ ಸಾಗುತ್ತಿರುವಾಗ ಗುಡುಗು ಸಿಡಿಲು ಮಿಂಚು ಹಾಗೂ ಧಾರಾಕಾರ ಮಳೆ ಸುರಿದರೂ ಕಡೆಗಣಿಸದೆ ಮೆರವಣಿಗೆಯನ್ನು ಪೂರ್ಣಗೊಳಿಸಿದ್ದೆವು!

ಸಮಗ್ರ ಭರತ ಖಂಡವು ೧೯೪೭ರ ಆಗಸ್ಟ್ ೧೫ರಂದು ಬ್ರಿಟಿಷರ ದಾಸ್ಯದಿಂದ ಮುಕ್ತಿ ಪಡೆಯಿತೆಂಬುದು ಒಂದು ರೀತಿಯಲ್ಲಿ ತಪ್ಪು ಕಲ್ಪನೆಯೇ ಸರಿ. ಹಾಗೆ ಸ್ವಾತಂತ್ರ್ಯ ಲಭಿಸಿದ್ದು ನೇರವಾಗಿ ಬ್ರಿಟಿಷರ ಆಳ್ವಿಕೆಯಲ್ಲಿದ್ದ ಮದ್ರಾಸು, ಬೊಂಬಾಯಿ, ಬಂಗಾಳ, ಸಂಯುಕ್ತ ಪ್ರಾಂತ್ಯ (ಉತ್ತರ ಪ್ರದೇಶ) ಮುಂತಾದ ಪ್ರದೇಶಗಳಿಗೆ ಮಾತ್ರ. ಮೈಸೂರು, ತಿರುವಾಂಕೂರು,

ಹೈದರಾಬಾದು, ಕಾಶ್ಮೀರ ಮುಂತಾದ ಸುಮಾರು ೫೬೦ ಆಶ್ರಿತ ಸಂಸ್ಥಾನಗಳು ದೇಶೀಯ ರಾಜ-ಮಹಾರಾಜರ ಆಳ್ವಿಕೆಯಲ್ಲಿದ್ದರೂ ಅವೆಲ್ಲಾ ಬ್ರಿಟಿಷರ ಭಾರತ ಚಕ್ರಾಧಿಪತ್ಯದ ಒಟ್ಟಾರೆ ಆಡಳಿತ ಕ್ಕೊಳಪಟ್ಟಿದ್ದವು. ಬ್ರಿಟಿಷರು ತಮ್ಮ ಆಡಳಿತದಿಂದ ಭಾರತವನ್ನು ಮುಕ್ತಗೊಳಿಸುವಾಗ ಇಂತಹ ದೇಶೀಯ ಸಂಸ್ಥಾನಗಳ ರಾಜರು ಸ್ವತಂತ್ರವಾಗಿ ಮುಂದುವರಿಯುವ ಇಲ್ಲವೇ ಇತರ ಪ್ರಾಂತ್ಯ ಗಳೊಡನೆ ವಿಲೀನವಾಗಬಹುದಾದ ಆಯ್ಕೆಯನ್ನು ಅವರಿಗೇ ಬಿಟ್ಟಿದ್ದರು. ಅಂದರೆ ಮೈಸೂರು, ಹೈದರಾಬಾದು, ಕಾಶ್ಮೀರಗಳಂಥ ಸಂಸ್ಥಾನಗಳು ಅಖಂಡ ಭಾರತದ ಆಡಳಿತಕ್ಕೊಳಪಡದೇ ಸರ್ವ ಸ್ವತಂತ್ರ ದೇಶಗಳಾಗಿ ಜನ್ಮತಾಳ ಬಹುದಾಗಿತ್ತು! ಬಹುಪಾಲು ರಾಜರು ತಮ್ಮ ಸಂಸ್ಥಾನಗಳು ಸ್ವತಂತ್ರ ದೇಶಗಳಾಗಿ ಮುಂದುವರಿಯುವ ಅಭಿಲಾಷೆಯುಳ್ಳವರಾಗಿದ್ದರು. ಅಂತಹ ಪರಿಸ್ಥಿತಿ ಮುಂದುವರಿಯುವುದಾದರೆ ಭಾರತಕ್ಕೆ ಸ್ವಾತಂತ್ರ್ಯ ಲಭಿಸಿದ್ದಕ್ಕೆ ಅರ್ಥವಿರುತ್ತಿರಲಿಲ್ಲ. ಹಾಗಾಗಿ ಆ ಸಂಸ್ಥಾನಗಳ ಪ್ರಜೆಗಳು ತಾವೆಲ್ಲಾ ಭಾರತ ಒಕ್ಕೂಟದೊಳಗೆ ವಿಲೀನವಾಗುವುದಲ್ಲದೆ, ತಮ್ಮ ರಾಜ್ಯಗಳಲ್ಲಿ ಜವಾಬ್ದಾರಿಯುತ ಪ್ರಜಾಪ್ರಭುತ್ವದ ಸರ್ಕಾರಗಳು ರಚನೆಯಾಗಬೇಕೆಂದು ಚಳುವಳಿ ಮಾಡಲಾರಂಭಿಸಿದರು.

ಮೈಸೂರು ಸಂಸ್ಥಾನದಲ್ಲಿ ಜಯಚಾಮರಾಜ ಒಡೆಯರು ಮಹಾರಾಜರಾಗಿದ್ದರು. ನೆರೆಯ ಮದ್ರಾಸು ಪ್ರಾಂತ್ಯದ ಉತ್ತಮ ಆಡಳಿತಪಟುವೆನಿಸಿದ ಸರ್ ಆರ್ಕಾಟ್ ರಾಮಸ್ವಾಮಿ ಮೊದಲಿಯಾರ್ ಎಂಬವರು ದಿವಾನರಾಗಿದ್ದರು. ಅವರಿಗೂ ಸಹ ಮೈಸೂರು ಸ್ವತಂತ್ರ ರಾಜ್ಯವಾಗಿ ರೂಪುಗೊಳ್ಳಬೇಕೆಂಬ ಇಚ್ಛೆ ಇದ್ದಂತಿದ್ದು ಆ ದಿಸೆಯಲ್ಲಿ ಕಾರ್ಯೋನ್ಮುಖರಾಗುವ ಲಕ್ಷಣಗಳು ಕಂಡು ಬರಲಾರಂಭಿಸಿದ್ದವು. ಅದನ್ನೊಪ್ಪದ ಆಗಿನ ಮೈಸೂರು ಕಾಂಗ್ರೆಸ್ ಪಕ್ಷದವರು ಅದರ ಅಧ್ಯಕ್ಷರಾಗಿದ್ದ ಕೆ. ಸಿ. (ಚಂಗಲರಾಯ) ರೆಡ್ಡಿಯವರ ನೇತೃತ್ವದಲ್ಲಿ ಮಹಾರಾಜರೊಡನೆ ಸಂಧಾನಕ್ಕಿಳಿದರು; ಮೈಸೂರನ್ನು ಇತರ ಪ್ರಾಂತ್ಯಗಳಂತೆ ಭಾರತ ಒಕ್ಕೂಟದೊಡನೆ ವಿಲೀನ ಗೊಳಿಸಿ ಜವಾಬ್ದಾರಿ ಸರ್ಕಾರ ಸ್ಥಾಪನೆ ಮಾಡಬೇಕೆಂದು ಒತ್ತಾಯಿಸಿದರು; ಮಹಾರಾಜರು ಅದಕ್ಕೊಪ್ಪಲಿಲ್ಲ; ಕಾಂಗ್ರೆಸ್‌ನವರು ಚಳುವಳಿಯ ಹಾದಿ ಹಿಡಿಯುವುದು ಅನಿವಾರ್ಯವಾಯಿತು. ಅದೇ ಹೆಸರಾಂತ "**ಮೈಸೂರು ಚಲೋ**" ಚಳುವಳಿ. ಕಾಂಗ್ರೆಸ್ಸಿಗರೇ ಅಲ್ಲದೆ ಇಡೀ ಸಂಸ್ಥಾನದ ಜನ ಸಮುದಾಯ ಆಂದೋಳನಕ್ಕಿಳಿಯಿತು. ಸಂಸ್ಥಾನದ ವಿವಿಧ ಭಾಗಗಳಿಂದ ಸಹಸ್ರಾರು ಜನ ಗುಂಪು ಗುಂಪುಗಳಾಗಿ ರಾಜರ ರಾಜಧಾನಿಯಾದ ಮೈಸೂರಿನತ್ತ ಸಾಗಲಾರಂಭಿಸಿದರು. ಮಹಾರಾಜರೆದುರು ಪ್ರತಿಭಟನೆ ಮಾಡಿ, ತಮ್ಮ ಬಲಪ್ರದರ್ಶನ ಮಾಡುವುದು ಈ ಚಳುವಳಿಯ ಉದ್ದೇಶ. ಕಾಂಗ್ರೆಸ್ಸಿನ ಕರೆಗೆ ಓಗೊಟ್ಟು ಇಡೀ ಮೈಸೂರಿನ ಜನತೆ ಚಳುವಳಿಗೆ ಧುಮುಕಿದರು; ನಮಗೆ ಬೆಂಬಲ ನೀಡಲು ಅಕ್ಕಪಕ್ಕದ ಪ್ರಾಂತ್ಯಗಳ ಜನರೂ ಹಿಂದು ಹಿಂದಾಗಿ ಮೈಸೂರಿಗೆ ನುಗ್ಗಿ ಬರಲಾರಂಭಿಸಿದರು. ಕಾಂಗ್ರೆಸ್ ಮುಖಂಡರನ್ನೇ ಅಲ್ಲದೆ ಲೆಕ್ಕವಿಲ್ಲದಷ್ಟು ಸಾರ್ವಜನಿಕರನ್ನು ದಸ್ತಗಿರಿ ಮಾಡಿ ಜೈಲು ತುಂಬಿಸಲಾರಂಭಿಸಿದರು. ನಾಡಿನಾದ್ಯಂತ ಪ್ರತಿದಿನ ಲಾಠಿಚಾರ್ಜು, ಗೋಲಿಬಾರುಗಳು ನಡೆಯುತ್ತಿದ್ದವು. ಆ ಆಂದೋಳನದಲ್ಲಿ ವಿದ್ಯಾರ್ಥಿ ಸಮೂಹದ ಪಾತ್ರ ಗಣನೀಯವಾಗಿತ್ತು.

ಮಲೆನಾಡಿನ ಮೂಲೆಯ ಪ್ರಶಾಂತ ವಾತಾವರಣದಲ್ಲಿ ಅಡಗಿ ಕುಳಿತಿದ್ದ ತೀರ್ಥಹಳ್ಳಿಯ ಜನ ಸಮುದಾಯ ಸ್ಪಂದಿಸಿದ್ದು ವಿಶಿಷ್ಟವಾಗಿತ್ತು. ಕಾಳಿಂಗೈನ ರಾಘವೇಂದ್ರರಾವ್ ಎಂಬ ವಯೋವೃದ್ಧ ಕಾಂಗ್ರೆಸ್ ನಾಯಕರು ಮುಂದಾಳತ್ವ ವಹಿಸಿ, ಜನರನ್ನು ಬಡಿದೆಬ್ಬಿಸಿದರು. ಚಳುವಳಿಯ ದಿಕ್ಕುದೆಸೆಗಳನ್ನು ನಿರ್ದೇಶಿಸುವ ಮೊದಲ "ಸರ್ವಾಧಿಕಾರಿ" (ಡಿಕ್ಟೇಟರ್)

ಅವರೆಂದು ಘೋಷಣೆಯಾಯಿತು. ವೀರಾವೇಶದಿಂದ ಅವರು ಮಾಡುತ್ತಿದ್ದ ಭಾಷಣಗಳು ಜನಸಾಮಾನ್ಯರೇ ಅಲ್ಲದೆ ವಿದ್ಯಾರ್ಥಿ ಸಮೂಹವೂ ಆಂದೋಳನದಲ್ಲಿ ಧುಮುಕುವಂತೆ ಮಾಡಿತು. ನಾವೆಲ್ಲಾ ಶಾಲೆಗಳನ್ನು ಬಹಿಷ್ಕರಿಸಿದೆವು. ಪ್ರತಿದಿನ ಬೆಳಿಗ್ಗೆ 'ಪ್ರಭಾತ ಫೇರಿ' ಮೆರವಣಿಗೆ ಮಾಡುವುದು, ಸರ್ಕಾರಿ ಕಟ್ಟಡಗಳ ಮೇಲೆ ರಾಷ್ಟ್ರಧ್ವಜ ಹಾರಿಸುವುದು, ಸಾಯಂಕಾಲ ಮುಖಂಡರ ಸಭೆ, ಭಾಷಣಗಳನ್ನೇರ್ಪಡಿಸುವುದು ಮುಂತಾದ ಕಾರ್ಯಕ್ರಮ ಗಳಲ್ಲಿ ವಿದ್ಯಾರ್ಥಿಗಳು ಸಕ್ರಿಯ ಪಾತ್ರ ವಹಿಸುತ್ತಿದ್ದೆವು.

ಚಳುವಳಿಯ ಸಂದರ್ಭದಲ್ಲಿ ನಾನೇನು ಮುಖಂಡನೆನಿಸಿಕೊಳ್ಳಲಿಲ್ಲ; ಎಲ್ಲಾ ಕಾರ್ಯ ಕ್ರಮಗಳಲ್ಲಿ ಅತೀ ಉತ್ಸಾಹದಿಂದ ಭಾಗವಹಿಸುತ್ತಿದ್ದೆ. ಪ್ರತಿದಿನ ಚಳುವಳಿಗೆ ಸಂಬಂಧಿಸಿದ ಕಾರ್ಯಕ್ರಮಗಳನ್ನು ಪ್ರಚಾರ ಮಾಡುವ ಸಲುವಾಗಿ ಇತರ ಕೆಲವರೊಡನೆ ಬೀದಿ ಬೀದಿಗಳಲ್ಲಿ ಜಾಗಟೆ ಬಾರಿಸಿ ಘೋಷಣೆ ಮಾಡುವ ತಂಡದಲ್ಲಿ ನಾನಿರುತ್ತಿದ್ದೆ. ಚಳುವಳಿ ಉಗ್ರವಾದಂತೆಲ್ಲಾ ಶಾಲೆಗಳನ್ನು ಮುಚ್ಚಿದರು; ಹಾಗೆಯೇ ನಮ್ಮ ವಿದ್ಯಾರ್ಥಿ ನಿಲಯವೂ ಮುಚ್ಚಲ್ಪಟ್ಟಿತು. ಊರವರಲ್ಲದ ನನ್ನಂತಹ ಹಲವು ವಿದ್ಯಾರ್ಥಿ ಕಾರ್ಯಕರ್ತರಿಗೆ ಅನಾನುಕೂಲವಾಗ ತೊಡಗಿತು. ಆದರೆ ಮುಂದಾಳುಗಳು ನಮ್ಮಂಥವರಿಗೆ ಕೆಲವು ಹೋಟೆಲುಗಳಲ್ಲಿ ಗುಟ್ಟಾಗಿ ಊಟೋಪಚಾರಗಳು ಸಿಗುವಂತೆ ಮಾಡಿದರು. ಆ ಕಾಲದಲ್ಲಿ ಹೆಸರಾಂತ ರಥಬೀದಿಯ ಕೃಷ್ಣಪ್ಪಯ್ಯನವರ ಹೋಟೆಲಿಗೆ ನಮ್ಮಲ್ಲಿ ಕೆಲವರು ಹಿಂಬಾಗಿಲಿನಿಂದ ಹೋಗಿ ಪುಕ್ಕಟೆ ಕಾಫಿ, ತಿಂಡಿ, ಊಟೋಪಚಾರಗಳನ್ನು ಮಾಡಿಕೊಂಡು ಬರುತ್ತಿದ್ದೆವು.

ಆ ಸಮಯದಲ್ಲಿ ಎಚ್. ಯೋಗಾನರಸಿಂಹಂ ಎಂಬವರು ನಮ್ಮ ಹೈಸ್ಕೂಲ್ ಹೆಡ್ಮಾಸ್ಟರ ರಾಗಿದ್ದರು. ಹೆಸರಾಂತ ಪತ್ರಕರ್ತ ಹಾಗೂ ಪ್ರಧಾನಮಂತ್ರಿ ಇಂದಿರಾಗಾಂಧಿಯವರ ಪತ್ರಿಕಾ ಸಲಹೆಗಾರರಾಗಿದ್ದ ಎಚ್. ವೈ. ಶಾರದಾಪ್ರಸಾದ್‌ರವರು ಅವರ ಮಗ; ಶಾರದಾ ಪ್ರಸಾದ್ ೧೯೪೨ರ ಚಳುವಳಿಯಲ್ಲಿ ವಿದ್ಯಾರ್ಥಿ ನಾಯಕರಾಗಿ ಮುಂಚೂಣಿಯ ಪಾತ್ರ ವಹಿಸಿದ್ದರೆಂಬ ವಿಷಯ ನಮಗೆಲ್ಲಾ ತಿಳಿದು ಹೋಗಿತ್ತು. ನಮ್ಮ ಹೆಡ್ಮಾಸ್ಟರವರೂ ಸಹ ದೇಶಭಕ್ತರೇ, ಆದರೆ ಮೈಸೂರಿನ ರಾಜರ ಮೇಲೆ ತುಂಬಾ ಗೌರವ ಭಾವನೆ ಹೊಂದಿದ್ದವರು. ಅದರಿಂದ ನಾವು ಮಹಾರಾಜರ ಆಡಳಿತದ ವಿರುದ್ಧ ಜರುಗಿಸುತ್ತಿದ್ದ ಚಳುವಳಿಯನ್ನು ಉಗ್ರವಾಗಿ ವಿರೋಧಿಸು ತ್ತಿದ್ದರು. ಅವರ ಮನವೊಲಿಸಲು ಅವರ ಮಗ ಶಾರದಾ ಪ್ರಸಾದರಿಗೆ ಜೈಕಾರ ಹಾಕುತ್ತಿದ್ದರೂ ಅದನ್ನವರು ಗಮನಿಸುತ್ತಲೇ ಇರಲಿಲ್ಲ. ಹೈಸ್ಕೂಲನ್ನು ಬಂದು ಮಾಡುವ ಸಲುವಾಗಿ ವಿದ್ಯಾರ್ಥಿ ಗಳೆಲ್ಲಾ ಒಂದು ದಿನ ಗೇಟಿನ ಎದುರಿಗೆ ಜಮಾಯಿಸಿ ಪಿಕೆಟಿಂಗ್ ಮಾಡಲಾರಂಭಿಸಿದೆವು. ಹೊರಗೆ ವಿದ್ಯಾರ್ಥಿಗಳ ದಂಡು, ಒಳಭಾಗದಲ್ಲಿ ಹೆಡ್ಮಾಸ್ಟರು ಹಾಗೂ ಇತರ ಉಪಾಧ್ಯಾಯರ ಸಮೂಹ ಎದುರು ಬದರಾಗಿ ನಿಂತಿದ್ದ ದೃಶ್ಯ ನನಗಿನ್ನೂ ಕಣ್ಣಿಗೆ ಕಟ್ಟಿದಂತಿದೆ. ಯಾರೊಬ್ಬರೂ ಒಳಗೆ ಹೋಗದಂತೆ ತಡೆಯುತ್ತಿದ್ದರೂ ಹೆಡ್ಮಾಸ್ಟರು ತಮ್ಮ ನೆಚ್ಚಿನ ವಿದ್ಯಾರ್ಥಿಯೊಬ್ಬನನ್ನು ಕೈ ಹಿಡಿದು ಒಳಗಡೆ ಎಳೆದುಕೊಂಡು ಬಿಟ್ಟರು. ವಿದ್ಯಾರ್ಥಿ ಸಮೂಹಕ್ಕೆ ಅದನ್ನು ಸಹಿಸಲಾಗಲಿಲ್ಲ. ಸುರಿಯುತ್ತಿದ್ದ ಜಿಟಿ ಜಿಟಿ ಮಳೆ ಕೆಸರು ಉಕ್ಕುತ್ತಿದ್ದ ನೆಲವನ್ನೂ ಲೆಕ್ಕಿಸದೇ ನಾನೂ ಸೇರಿದಂತೆ ಐದಾರು ಜನ ವಿದ್ಯಾರ್ಥಿಗಳು ಗೇಟಿಗೆ ಅಡ್ಡಲಾಗಿ ಮಲಗಿಯೇ ಬಿಟ್ಟೆವು! ಅದೊಂದು ಅತ್ಯಂತ ಹೃದಯವಿದ್ರಾವಕ ದೃಶ್ಯವನ್ನುಂಟು ಮಾಡಿತು. ಉಜ್ವಲ ರಾಷ್ಟ್ರೀಯ ವಾದಿಗಳೂ, ವಿದ್ಯಾರ್ಥಿಗಳ ಪ್ರೀತ್ಯಾದರಗಳ ಪ್ರತೀಕರಾಗಿದ್ದ ಕನ್ನಡ ಪಂಡಿತ ನರಸಿಂಹ ಶಾಸ್ತ್ರಿಗಳಿಗೆ ಆ ದೃಶ್ಯ ದುಃಖ ಉಮ್ಮಳಿಸಿ ಬರುವಂತೆ ಮಾಡಿರಬೇಕು; ಕೆನ್ನೆಯ ಮೇಲೆ ಅಶ್ರುಧಾರೆ ಹರಿಯಲಾರಂಭಿಸಿತು; ಅದನ್ನು

ತಡೆಯಲಾರದೆ ಕಣ್ಣು ಒರೆಸಿಕೊಳ್ಳುತ್ತಾ ಹಿಂದಿರುಗಿ ಶಾಲೆಯ ಒಳಗಡೆ ನಡೆದು ಬಿಟ್ಟರು. ಮರು ದಿನವೇ ಕನ್ನಡ ಪಂಡಿತರು ಚಳುವಳಿಗೆ ಕುಮ್ಮಕ್ಕು ನೀಡುತ್ತಿದ್ದಾರೆಂಬ ವರದಿ ಸರ್ಕಾರಕ್ಕೆ ಹೋಯಿತು. ಸುಮಾರು ಇಪ್ಪತ್ತೈದು ವರ್ಷಗಳ ಕಾಲ ಆ ಶಾಲೆಯಲ್ಲೇ ಕಾರ್ಯನಿರತರಾಗಿದ್ದ ಅವರು ಇನ್ನೊಂದು ವಾರದಲ್ಲೇ ದೂರದ ಮಂಡ್ಯಕ್ಕೆ ಹೋಗುವಂತಾಯಿತು!

ಈ ಘಟನೆಯಿಂದ ಮತ್ತಷ್ಟು ಕುಪಿತರಾದ ವಿದ್ಯಾರ್ಥಿಗಳು ಇನ್ನೆರಡು ದಿನಗಳಲ್ಲೇ ರಾತ್ರಿ ಸಮಯದಲ್ಲಿ ಹೈಸ್ಕೂಲು ಕಟ್ಟಡದ ಮೇಲೆ ರಾಷ್ಟ್ರಧ್ವಜ ಹಾರಿಸಿಬಿಟ್ಟರು. ಮರುದಿನ ಬೆಳಿಗ್ಗೆ ಅದನ್ನು ಗಮನಿಸಿದ ಹೆಡ್ಮಾಸ್ಟರು ಅದನ್ನು ಕೆಳಗಿಳಿಸಿ ಬಿಟ್ಟರು. ಮತ್ತಷ್ಟು ರೇಗಿದ ವಿದ್ಯಾರ್ಥಿ ಸಮೂಹ ಕೂಡಲೇ ಹೆಡ್ಮಾಸ್ಟರ ಮನೆಗೆ ಮುತ್ತಿಗೆ ಹಾಕಿದೆವು. ಆ ದಿನವೆಲ್ಲಾ ಅವರು ಮನೆಯಿಂದ ಹೊರಗೆ ಬಾರದಂತೆ ತಡೆದು ಬಿಟ್ಟೆವು. ಸಾಯಂಕಾಲದ ಹೊತ್ತಿಗೆ ಪೋಲಿಸರ ಮಧ್ಯಸ್ಥಿಕೆಯಿಂದ ಮುತ್ತಿಗೆಯನ್ನು ತೆರವು ಮಾಡಿದೆವು.

ತೀರ್ಥಹಳ್ಳಿಯಲ್ಲಿ ಜರುಗಿದ ಚಳುವಳಿಯ ಸಮಯದಲ್ಲಿ ತಾಲ್ಲೂಕು ಕಛೇರಿಯನ್ನು ಒಂದು ದಿನ ಸಂಪೂರ್ಣ ತೆರೆಯದಂತೆ ಮಾಡಿದ ಪ್ರಕರಣ ಇನ್ನೂ ರೋಚಕ. ಸರ್ವಾಧಿಕಾರಿ ಕಾಳಿಂಗೈನ ರಾಘವೇಂದ್ರ ರಾಯರ ಘೋಷಣೆಗನುಸಾರ ಒಂದು ದಿನ ಮುಂಜಾನೆಯಿಂದಲೇ ಬಸವಾನಿ ಸಾವಿತ್ರಮ್ಮ ರಾಮಶರ್ಮರ ನೇತೃತ್ವದಲ್ಲಿ ಸಾವಿರಾರು ಜನ ಮಹಿಳೆಯರು ತಾಲ್ಲೂಕು ಕಛೇರಿಯ ಮೆಟ್ಟಿಲುಗಳ ಮೇಲೆ ಜಮಾಯಿಸಿ ಕುಳಿತು ಬಿಟ್ಟರು; ಯಾವೊಬ್ಬ ಅಧಿಕಾರಿಯೂ ಒಳಗೆ ಹೋಗದಂತೆ ತಡೆಯುತ್ತಿದ್ದರು. ಅದರಿಂದ ಕುಪಿತರಾದ ತಾಲ್ಲೂಕು ದಂಡಾಧಿಕಾರಿಗಳು ಅವರನ್ನು ಚದುರಿಸಲು ಪೋಲಿಸರಿಗೆ ಲಾಠಿಛಾರ್ಜು ಮಾಡಲು ಆದೇಶ ಜಾರಿ ಮಾಡಿದರಂತೆ. ಆದರೆ ಮಹಿಳೆಯರ ಮೇಲೆ ಆ ರೀತಿ ಲಾಠಿ ಚಾರ್ಜು ಮಾಡಲು ಪೋಲಿಸರು ನಿರಾಕರಿಸಿದ ರಂತೆ! ಮೈಸೂರು ಸಂಸ್ಥಾನದಾದ್ಯಂತ ಪತ್ರಿಕೆಗಳನ್ನು ಸರ್ಕಾರ ಮುಟ್ಟುಗೋಲು ಹಾಕಿಕೊಂಡಿದ್ದ ರಿಂದ ಈ ಸುದ್ದಿ ಒಂದೆರಡು ದಿನ ಬಹಿರಂಗವಾಗಲೇ ಇಲ್ಲ. ಅಂಚೆ ಇಲಾಖೆಯ ಟೆಲಿಗ್ರಾಫ್ ಮಾಸ್ಟರ್‌ಗೆ ಮದ್ರಾಸಿನಿಂದ ಪೋಸ್ಟ್ ಮುಖಾಂತರ ಬರುತ್ತಿದ್ದ Indian Express ಪತ್ರಿಕೆಯಲ್ಲಿ ದಪ್ಪಕ್ಷರಗಳ ತಲೇ ಬರಹದಲ್ಲಿ ಸುದ್ದಿ ಮುದ್ರಿತವಾಗಿತ್ತು.

## ದಸ್ತಗಿರಿಯಾಯಿತು

ಚಳುವಳಿ ಮುಂದುವರಿದಂತೆಲ್ಲಾ ತಾಲ್ಲೂಕಿನ ಪ್ರಮುಖ ಮುಖಂಡರನ್ನೆಲ್ಲಾ ದಸ್ತಗಿರಿ ಮಾಡಿ ಶಿವಮೊಗ್ಗಾ ಜೈಲಿಗೆ ಕಳುಹಿಸುತ್ತಿದ್ದರು. ಚಳುವಳಿಗಳಲ್ಲಿ ತೊಡಗಿರುತ್ತಿದ್ದ ಬಹುಪಾಲು ವಿದ್ಯಾರ್ಥಿಗಳನ್ನು ಲಾರಿಗಳಲ್ಲಿ ತುಂಬಿಕೊಂಡು ದೂರದ ಕಾಡುಗಳಲ್ಲಿ ಬಿಟ್ಟು ಬರುತ್ತಿದ್ದುದುಂಟು. ಈ ನಡುವೆ ನನಗೂ ದಸ್ತಗಿರಿಯಾಗುವ ಅವಕಾಶ ಒದಗಿ ಬಂದಿತು. ಪುರಸಭೆ ಅಧ್ಯಕ್ಷ ಕಟ್ಟೆ ಭಾಸ್ಕರ್‌ರವರ ನೇತೃತ್ವದಲ್ಲಿ ಪೋಲಿಸ್ ಸ್ಟೇಷನ್ ಮೇಲೆ ರಾಷ್ಟ್ರಧ್ವಜ ಹಾರಿಸಲು ಒಂದು ತಂಡವನ್ನು ಸಜ್ಜುಗೊಳಿಸಲಾಯಿತು. ಆ ಸಲುವಾಗಿ ಆಯ್ಕೆಯಾದ ಏಳೆಂಟು ಜನರಲ್ಲಿ ನಾನೂ ಸೇರ್ಪಡೆಯಾಗಿದ್ದೆ. ಅಕ್ಟೋಬರ್ ಒಂದರ ಮಧ್ಯಾಹ್ನ ನಮ್ಮ ತಂಡ ರಾಷ್ಟ್ರಧ್ವಜವನ್ನು ಹಿಡಿದು ಮೆರವಣಿಗೆಯಲ್ಲಿ ಶ್ರೀರಾಮ ಮಂದಿರದಿಂದ ಪೋಲಿಸ್ ಸ್ಟೇಷನ್‌ಗೆ ಹೊರಟಿತು. ಸ್ಟೇಷನ್ ತಲುಪುತ್ತಲೇ ನಮ್ಮನ್ನೆಲ್ಲಾ ದಸ್ತಗಿರಿ ಮಾಡುವುದಾಗಿ ಹೇಳಿ ಒಳಗೆ ಕರೆದೊಯ್ದರು; ಒಂದು ಕೊಠಡಿಯಲ್ಲಿ ನಮ್ಮನ್ನೆಲ್ಲಾ ಕೂಡಿ ಹಾಕಿದರು.

ಮರುದಿನ ಗಾಂಧೀ ಜಯಂತಿಯ ರಜೆಯಾದ್ದರಿಂದ ನಮ್ಮನ್ನು ಶಿವಮೊಗ್ಗಕ್ಕೆ ಕೊಂಡೊಯ್ಯಲಿಲ್ಲ. ಆದಾದ ಮರುದಿನ ಸಬ್‌ಇನ್ಸ್‌ಪೆಕ್ಟರ್ ಒಬ್ಬರು ನಮ್ಮನ್ನೆಲ್ಲಾ ಬಸ್ಸಿನಲ್ಲಿ ಶಿವಮೊಗ್ಗೆಗೆ ಕರೆದುಕೊಂಡು ಹೊರಟರು. ದಾರಿಯುದ್ದಕ್ಕೂ ನಾವು ಜೈಕಾರ ಹಾಕುತ್ತಿದ್ದುದು, ಮಲೆಯಾಳಿ ಸಹಪ್ರಯಾಣಿಕನೊಬ್ಬನಿಗೆ ಕುತೂಹಲ ಹುಟ್ಟಿಸಿರಬೇಕು. ವಿಷಯ ತಿಳಿದು ಅವರಿಗೆ ತುಂಬಾ ಹರ್ಷವಾಯಿತಂತೆ. ಶಿವಮೊಗ್ಗೆಯನ್ನು ತಲುಪುತ್ತಲೇ ಸಬ್ ಇನ್ಸ್‌ಪೆಕ್ಟರ ಅನುಮತಿ ಪಡೆದು ಅಲ್ಲಿಯ ಹೆಸರಾಂತ ನ್ಯಾಷನಲ್ ಲಾಡ್ಜ್ ಹೋಟೆಲಿಗೆ ಕರೆದುಕೊಂಡು ಹೋದರು. ಅಲ್ಲಿ ಮೈಸೂರು ಪಾಕ್, ಮಸಾಲೆ ದೋಸೆ, ಕಾಫಿ ಸಮಾರಾಧನೆ ಮಾಡಿಸಿ, ಒಳ್ಳೆಯದಾಗಲೆಂದು ಹರಸಿ ಮತ್ತೆ ಬಸ್ಸಿಗೆ ಕಳುಹಿಸಿದರು.

ನಾವು ದಸ್ತಗಿರಿಯಾಗುವ ಮೊದಲೇ ನಮ್ಮ ಮುಂದಾಳು ಕಾಳಿಂಗೈನ ರಾಘವೇಂದ್ರ ರಾಯರು ಜೈಲು ಸೇರಿಯಾಗಿತ್ತು. ಅವರು ನಮ್ಮ ಕಡೆಯ ಇತರ ಬಂಧಿಗಳೊಡನೆ ಒಂದು ವಿಶಾಲವಾದ ಬ್ಯಾರೆಕ್ಕಿನಲ್ಲಿ ಬೀಡು ಬಿಟ್ಟಿದ್ದರು. ನಾವೂ ಅದರಲ್ಲೇ ಸೇರಿಕೊಂಡೆವು. ಒಳ್ಳೆಯ ಹಾಸ್ಯ ಪ್ರವೃತ್ತಿಯ ರಾಯರು ತಾವೇ ನಾಮಕರಣ ಮಾಡಿ ಗೋಡೆಯ ಮೇಲೆ ಬರೆದುಕೊಂಡಿದ್ದ 'ಸೋಮಾರಿ ಮಠಕ್ಕೆ' ಹಾರ್ದಿಕವಾಗಿ ಸ್ವಾಗತಿಸಿದರು. ಇನ್ನೊಂದೆರಡು ದಿನಗಳಲ್ಲಿ ನಮ್ಮನ್ನು ಕೋರ್ಟಿಗೆ ಹಾಜರು ಪಡಿಸಿದರು. ಕಾನೂನು ಉಲ್ಲಂಘನೆ ಮಾಡಿದ್ದನ್ನು ಯಾವುದೇ ತಕರಾರು ಮಾಡದೆ ಒಪ್ಪಿಕೊಂಡೆವು. ಎಲ್ಲರಿಗೂ ಎರಡು ತಿಂಗಳ ಸಾದಾ ಶಿಕ್ಷೆ ವಿಧಿಸಿದರು. ಜೈಲಿನಲ್ಲಿ ನಾವಿದ್ದ ಸಮಯದಲ್ಲಿ ಯಾವುದೇ ರೀತಿಯ ತೊಂದರೆ ಕೊಡಲಿಲ್ಲ. ಮೈಸೂರು ಸಂಸ್ಥಾನದ ಇತರ ಕಡೆಗಳಿಂದ ಹಲವು ಹೆಸರಾಂತ ಮುಖಂಡರೂ ಅಲ್ಲಿದ್ದು ಅವರ ನಿಕಟ ಪರಿಚಯವೂ ಸಾಧ್ಯವಾಯಿತು.

ನಾನು ಜೈಲು ಸೇರಿದ ವಿಷಯ ಊರಿಗೆ ಬಹಳ ತಡವಾಗಿ ತಿಳಿದಿರಬೇಕು. ಸುದ್ದಿ ತಿಳಿದಾಕ್ಷಣ ಅವ್ವನ ರೋದನ ಮುಗಿಲು ಮುಟ್ಟುವಂತಿತ್ತಂತೆ. ಮೋಸ, ಕಳ್ಳತನ, ದೊಂಬಿ ಯಂತಹ ಪ್ರಕರಣಗಳಲ್ಲಿ ತನ್ನ ಮಗ ಭಾಗಿಯಾಗಿರಲಾರನೆಂಬ ದೃಢ ನಂಬಿಕೆಯಿದ್ದ ಆಕೆಗೆ ನನ್ನನ್ನು ಯಾಕಾಗಿ ಜೈಲಿಗೆ ಕಳುಹಿಸಿರಬಹುದೆಂಬುದರ ಅರಿವೆ ಆಗಿರಲಿಲ್ಲವಂತೆ. ಕೂಡಲೇ ನನ್ನ ಸೋದರಭಾವ ಮಾನಿ ಚೆನ್ನಯ್ಯ ಎಂಬವರನ್ನು ವಿಷಯ ತಿಳಿಯಲು ಶಿವಮೊಗ್ಗೆಗೆ ಕಳುಹಿಸಿದಳು. ಅವರು ಜೈಲಿನ ಅಧಿಕಾರಿಗಳ ಅಪ್ಪಣೆ ಪಡೆದು ನನ್ನನ್ನು ನೋಡಿ ಮಾತನಾಡಿಸಿ ಕೊಂಡು ಹೋದರು. ಮನೆಯಲ್ಲಿ ತಾಯಿಯ ಹತ್ತಿರ ಆಕೆಯ ಮಗ ಯಾವುದೇ ಕೆಟ್ಟ ಕಾರ್ಯ ವೆಸಗಿಲ್ಲ; ಗಾಂಧೀ ಚಳುವಳಿಯಲ್ಲಿ ಭಾಗವಹಿಸಿದ್ದರಿಂದ ದಸ್ತಗಿರಿ ಮಾಡಿ ಜೈಲು ಸೇರಿಸಿದ್ದಾರೆ. ಅಲ್ಲಿ ನೂರಾರು ಜನರೊಡನೆ ಚೆನ್ನಾಗಿ ಕಾಲ ಕಳೆಯುತ್ತಿದ್ದಾನೆ; ಹಾಗೂ ಕೆಲವೇ ದಿನಗಳಲ್ಲಿ ಬಿಡುಗಡೆಯೂ ಆಗಬಹುದೆಂದು ಭರವಸೆ ಇತ್ತರಂತೆ. ಅವ್ವಗೆ ಹೋದ ಜೀವ ಬಂದಂತಾಯಿತು.

ಮುಂದಿನ ಕೆಲವೇ ದಿನಗಳಲ್ಲಿ ಮಹಾರಾಜರು ಮತ್ತು ಕಾಂಗ್ರೆಸ್ ಮುಖಂಡರ ನಡುವೆ ಸಂಧಾನಗಳು ಜರುಗಿದವು. ಮಹಾರಾಜರು ಮುಖಂಡರ ಷರತ್ತುಗಳಿಗೆಲ್ಲಾ ಒಪ್ಪಿ ಭಾರತ ಒಕ್ಕೂಟದೊಡನೆ ಸೇರ್ಪಡೆಯಾಗುವುದಲ್ಲದೆ, ಜವಾಬ್ದಾರಿ ಸರ್ಕಾರ ರಚನೆಗೂ ಸಮ್ಮತಿಸಿದರು. ನಮ್ಮೆಲ್ಲರಿಗೂ ಬಿಡುಗಡೆಯಾಯಿತು. ಆ ವರ್ಷ ವಿಜಯದಶಮಿಯ ದಿನ ಕೆ. ಸಿ. ರೆಡ್ಡಿಯವರ ನೇತೃತ್ವದಲ್ಲಿ ಪ್ರಜಾಸತ್ತಾತ್ಮಕ ಸರ್ಕಾರದ ರಚನೆಯೂ ಆಯಿತು.

ತೀರ್ಥಹಳ್ಳಿಯಲ್ಲಿ ಜರುಗಿದ 'ಮೈಸೂರು ಚಲೋ' ಚಳುವಳಿ ಇಡೀ ಮೈಸೂರು ಸಂಸ್ಥಾನದ ಗಮನ ಸೆಳೆದದ್ದೇ ಅಲ್ಲದೆ ಅಖಿಲ ಭಾರತ ಮಟ್ಟದಲ್ಲಿ ಹೆಸರು ಗಳಿಸಿತ್ತು. ಅದರಲ್ಲೂ ಇಲ್ಲಿ ವಿದ್ಯಾರ್ಥಿಗಳು ವಹಿಸಿದ್ದ ಪಾತ್ರ ಅಖಿಲ ಭಾರತ ವಿದ್ಯಾರ್ಥಿ ಕಾಂಗ್ರೆಸ್ ಮುಖಂಡರ ಪ್ರಶಂಸೆಗಳಿಗೂ ಪಾತ್ರವಾಗಿತ್ತು. ವಿದ್ಯಾರ್ಥಿ ಕಾಂಗ್ರೆಸ್‌ನ ಅಧ್ಯಕ್ಷ ರವೀಂದ್ರ ವರ್ಮ (ಮುಂದೆ ಕೇಂದ್ರ ಸರ್ಕಾರದಲ್ಲಿ ಮಂತ್ರಿಗಳಾಗಿದ್ದರು) ಅವರನ್ನು ಕರ್ನಾಟಕ ಪ್ರಾಂತ್ಯ ಕಾಂಗ್ರೆಸ್ ಅಧ್ಯಕ್ಷ ಎಸ್. ನಿಜಲಿಂಗಪ್ಪನವರೇ ತೀರ್ಥಹಳ್ಳಿಗೆ ಕರೆತಂದಿದ್ದರು. ರಾಮ ಮಂದಿರದಲ್ಲಿ ನಾವು ವಿದ್ಯಾರ್ಥಿಗಳು ವಹಿಸಿದ ಪಾತ್ರವನ್ನು ಶ್ಲಾಘಿಸಿ ಮಾತಾಡಿದ್ದು ಮನಸ್ಸಿನಲ್ಲಿ ಹಚ್ಚ ಹಸುರಾಗಿ ಉಳಿದುಕೊಂಡಿದೆ.

ನಮ್ಮ ಚಳುವಳಿ ಮುಗಿದ ಕೆಲವೇ ದಿನಗಳಲ್ಲಿ ಗುಜರಾತಿನಲ್ಲಿ ಭೀಕರ ಬರಗಾಲ ತಲೆದೋರಿತು. ಮಹಾತ್ಮಾಗಾಂಧಿಯವರೇ ಜನರು ಉದಾರವಾಗಿ ಸಹಾಯ ಮಾಡಲು ಮುಂದೆ ಬರಬೇಕೆಂದು ಮನವಿ ಮಾಡಿಕೊಂಡಿದ್ದರು. ಅವರ ಕರೆಗೆ ಓಗೊಟ್ಟು ನಮ್ಮ ಊರ ಕಡೆ ಜನರಿಂದ ಸುಮಾರು ಎಂಭತ್ತು ರೂಪಾಯಿಗಳ ದೇಣಿಗೆ ಎತ್ತಿ ಸಾಬರಮತಿ ಆಶ್ರಮಕ್ಕೆ ಕಳುಹಿಸಿ ಕೊಟ್ಟಿದ್ದೆ. ಗಾಂಧೀಜಿಯವರ ಆಪ್ತ ಕಾರ್ಯದರ್ಶಿಯವರಿಂದ ಕೃತಜ್ಞತಾಪೂರ್ವಕ ಪೋಸ್ಟ್ ಕಾರ್ಡ್ (ಗುಜರಾತಿ ಭಾಷೆಯಲ್ಲಿ) ಬಂದಿದ್ದಿತು.

ಜೈಲಿನಿಂದ ಹೊರಬಂದ ಮೇಲೆ ಖಾದಿಬಟ್ಟೆ ಧರಿಸುವುದು ಮುಂದುವರಿಯಿತು; ಉಳಿದಂತೆ ನನ್ನ ಜೀವನ ಕ್ರಮದಲ್ಲಿ ಯಾವುದೇ ಬದಲಾವಣೆಗಳಾಗಲಿಲ್ಲ. ತರಗತಿಗಳಿಗೆ ತಪ್ಪದೇ ಹಾಜರಾಗಿ, ಶ್ರದ್ಧೆಯಿಂದ ಅಭ್ಯಾಸ ಮಾಡತೊಡಗಿದೆ. ಆ ವರ್ಷವೇ ಎಸ್.ಎಸ್.ಎಲ್.ಸಿ., ಪಬ್ಲಿಕ್ ಪರೀಕ್ಷೆಗೆ ಕುಳಿತುಕೊಳ್ಳಬೇಕಾದುದರಿಂದ ಸ್ವಲ್ಪ ಹೆಚ್ಚಾಗಿಯೇ ಕಷ್ಟಪಟ್ಟು ಅಭ್ಯಾಸ ಮಾಡಿದೆ.

ಜೈಲಿನಿಂದ ಬಿಡುಗಡೆಯಾದ ಕೆಲವೇ ದಿನಗಳಲ್ಲಿ ತೀರ್ಥಹಳ್ಳಿಯಲ್ಲಿ ಸ್ವಯಂ ಸೇವಕ ದಳವೊಂದು ಆರಂಭವಾಗಿ ಯುವಕರಿಗೆ ತರಬೇತಿ ನೀಡುತ್ತಿರುವುದು ನನ್ನ ಗಮನಕ್ಕೆ ಬಂದಿತು. ಜೈಲಿನಲ್ಲಿದ್ದಾಗ ಡಾ|| ನಾ. ಸು. ಹರ್ಡೀಕರ್ ಸ್ಥಾಪಿಸಿದ ಕಾಂಗ್ರೆಸ್ ಸೇವಾದಳದ ಬಗೆಗೆ ಮಾಹಿತಿಗಳು ಲಭ್ಯವಾಗಿದ್ದವು; ಅದರ ಬಗೆಗೆ ಆಕರ್ಷಿತನೂ ಆಗಿದ್ದೆ. ಈಗ ಆರಂಭವಾಗಿರುವುದು ಬಹುಶಃ ಅದರ ಶಾಖೆಯೇ ಆಗಿರಬಹುದೆಂದು, ಸ್ವಪ್ರೇರಿತನಾಗಿ ಅದನ್ನು ಸೇರಿದೆ. ಪ್ರತಿದಿನ ಸಂಜೆ ಹೈಸ್ಕೂಲಿನ ಮೈದಾನದಲ್ಲಿ ತರಬೇತಿಯ ಕವಾಯಿತು ನಡೆಯುತ್ತಿದ್ದು, ನಾನೂ ತಪ್ಪದೇ ಭಾಗವಹಿಸುತ್ತಿದ್ದೆ. ಕವಾಯಿತು ಮುಗಿದ ನಂತರ ಕೆಲ ಸಮಯ ಹಿಂದೂಧರ್ಮ ಮತ್ತು ಅದರ ಮುಖಂಡರ ಬಗೆಗೆ ವಿಚಾರ ವಿನಿಮಯದ ಮಾತುಕತೆಗಳು ಜರುಗುತ್ತಿದ್ದವು. ಆದರೂ ಅದೊಂದು ಕೇವಲ ಹಿಂದೂಧರ್ಮ ಪ್ರಚಾರಕ ಸಂಘಟನೆಯಾಗಿರಬಹುದೇ ಎಂಬುದನ್ನು ಖಚಿತ ಪಡಿಸಿಕೊಳ್ಳಲು ಕೆಲವು ವಾರಗಳೇ ಹಿಡಿಯಿತು. ಕ್ರಿಶ್ಚಿಯನ್ ಸಹಪಾಠಿಯೊಬ್ಬನನ್ನು ಒಂದು ದಿನ ದಳಕ್ಕೆ ಕರೆದುಕೊಂಡು ಹೋದೆ. ಅಂದಿನ ಕಾರ್ಯಕ್ರಮಗಳೆಲ್ಲ ಅವನನ್ನು ಸೇರಿಸಿಕೊಂಡೇ ಜರುಗಿದವು. ಅನಂತರ ದಳದ ಸಂಚಾಲಕರು ನನ್ನನ್ನು ಒಂದು ಪಕ್ಕಕ್ಕೆ ಕರೆದು ಹಿಂದುಗಳಲ್ಲದೆ ಬೇರೆ ಮತದವರನ್ನು ದಳಕ್ಕೆ ಸೇರಿಸುವಂತಿಲ್ಲವೆಂತಲೂ, ನಾಳೆಯಿಂದ ನನ್ನ ಸ್ನೇಹಿತನನ್ನು ಕರೆತರಬಾರದೆಂದು ತಿಳಿಸಿದರು. ದಳದ ಧ್ಯೇಯೋದ್ದೇಶಗಳ ಬಗೆಗೆ ಆಗಲೇ ನನಗೆ ಜ್ಞಾನೋದಯವಾಗಿದ್ದು, ಆದರೆ ಹಠಾತ್ತಾಗಿ ದಳದ ಸಂಪರ್ಕವನ್ನು ಕಳೆದು ಕೊಳ್ಳುವುದೂ ಕಷ್ಟವೆನಿಸಿತು. ಅಷ್ಟರಲ್ಲೇ ಮಹಾತ್ಮಾಗಾಂಧಿಯವರ ಹತ್ಯೆ ಜರುಗಿತು; ಆ ಸಂಚಿನಲ್ಲಿ ಈ

ಸಂಘಟನೆಯವರ ಪಾತ್ರವೂ ಇದೆಯೆಂಬ ಪ್ರಚಾರವಾಯಿತು. ಅದೇ ಕಾರಣದಿಂದ ದಳದ ಸಂಪರ್ಕ ಕಡಿದು ಹಾಕಿದೆ.

ಒಕ್ಕಲಿಗರ ಸಂಘದವರು ನಡೆಸುತ್ತಿದ್ದ ವಿದ್ಯಾರ್ಥಿ ನಿಲಯದ ಸಹಾಯಾರ್ಥ ಪ್ರತಿ ಬೇಸಗೆ ರಜೆಯಲ್ಲಿ ದಾನಿಗಳಿಂದ ದೇಣಿಗೆ ಎತ್ತುವ ಕಾರ್ಯಕ್ರಮವೊಂದಿತ್ತು. ಜನಾಂಗದವರಲ್ಲಿ ಜರುಗುವ ಮದುವೆ ಮಹೋತ್ಸವಗಳ ಸಂದರ್ಭದಲ್ಲಿ ಆಯಾ ಸೀಮೆಯ (ವಲಯ) ಜನರ ಸಹಾಯಕ್ಕೆ ಎಂಬ ನೆಪದಲ್ಲಿ ಎರಡೂ ಕಡೆಯಿಂದ 'ಸೀಮೆಹಣ' ಎಂಬ ನಿಧಿಯನ್ನು ಶೇಖರಿಸುವ ಪರಿಪಾಟವಿತ್ತು. ಅನಂತರದ ವರ್ಷಗಳಲ್ಲಿ ಆ ಮೊಬಲಗನ್ನು ಒಕ್ಕಲಿಗರ ಸಂಘಕ್ಕೆ ಕೊಡುವ ನಿರ್ಧಾರವಾಗಿತ್ತು. ಆ ಸಲುವಾಗಿ ಪ್ರತಿ ಬೇಸಗೆ ರಜಾ ದಿನಗಳಲ್ಲಿ ಒಂದೊಂದು ವಲಯಕ್ಕೆ ನಿಲಯದ ವಿದ್ಯಾರ್ಥಿಗಳಲ್ಲಿ ಕೆಲವರನ್ನು ಸ್ವಯಂಸೇವಕರಾಗಿ ನೇಮಿಸುತ್ತಿದ್ದರು. ನಾನಲ್ಲಿದ್ದ ಮೂರು ವರ್ಷಗಳೂ ಆ ಕೆಲಸವನ್ನು ಉತ್ಸಾಹದಿಂದ ಮಾಡಲು ಮುಂದಾಗುತ್ತಿದ್ದೆ. ಒಂದು ವರ್ಷ ಇತರ ಎಲ್ಲಾ ಸ್ವಯಂಸೇವಕರಿಗಿಂತಲೂ ಅತಿ ಹೆಚ್ಚಿನ ಮೊತ್ತವನ್ನು ಶೇಖರಿಸಿ ಸಂಘದ ವರಿಷ್ಠರಿಂದ ಶಹಭಾಷ್‌ಗಿರಿ ಪಡೆದುಕೊಂಡ ನೆನಪಿದೆ.

ತೀರ್ಥಹಳ್ಳಿಯಲ್ಲಿದ್ದ ಮೂರು ವರ್ಷಗಳು ವಿದ್ಯಾರ್ಥಿ ನಿಲಯದಲ್ಲೇ ವಾಸವಾಗಿರುತ್ತಿದ್ದರೂ ನಡುವೆ ಕೆಲ ಸಮಯ ಹತ್ತಿರದ ಒಂದು ಕೊಠಡಿಯಲ್ಲಿ ಇರುತ್ತಿದ್ದುದೂ ಉಂಟು. ಅಲ್ಲಿಯ ಪೋಸ್ಟ್ ಆಫೀಸಿನಲ್ಲಿ ತಂತಿ ಮಾಸ್ಟರ್ ಹುದ್ದೆಯಲ್ಲಿದ್ದ ರಾಘವನ್ ನಂಬಿಯಾರ್ ಎಂಬ ಮಲೆಯಾಳಿ ಅಧಿಕಾರಿಯೊಬ್ಬರು ನಮ್ಮ ನಿಲಯಕ್ಕೆ ಊಟಕ್ಕೆ ಬರುತ್ತಿದ್ದರು. ಇಂಗ್ಲಿಷ್ ಭಾಷೆಯಲ್ಲಿದ್ದ ಪಾಂಡಿತ್ಯ ಹಾಗೂ ಅವರಲ್ಲಿದ್ದ ಸಾಮಾನ್ಯಜ್ಞಾನ ನಮ್ಮನ್ನು ಬೆರಗುಗೊಳಿಸುವಂತಿತ್ತು. ನಾನು ಮತ್ತು ನನ್ನ ಸ್ನೇಹಿತ ಬಿ. ವಿ. ಶಾಮಯ್ಯ ಅವರತ್ತ ಆಕರ್ಷಿತರಾಗಿ ಕೆಲ ಸಮಯ ಅವರೊಡನೆ ವಾಸಿಸುತ್ತಿದ್ದೆವು. ನಮ್ಮ ಇಂಗ್ಲಿಷ್ ಪಾಠಗಳ ಕಲಿಕೆಗೆ ಅವರಿಂದ ಬಹಳಷ್ಟು ಸಹಾಯವಾಗುತ್ತಿತ್ತು.

ರಾಘವನ್ ನಂಬಿಯಾರ್ ಜೊತೆಯಲ್ಲಿದ್ದ ಸಮಯದಲ್ಲಿ ಜರುಗಿದ ಪ್ರಕರಣವೊಂದು ಉಲ್ಲೇಖಾರ್ಹ. 'ಬಾಲ್‌ಪೆನ್' (Ball point pen) ಇಂದಿನ ದಿನಗಳಲ್ಲಿ ಸರ್ವಾಂತರ್ಯಾಮಿಯಂತಾಗಿದೆಯಷ್ಟೆ. ಬಹುಶಃ ಹೆಸ್ಕೂಲಿನ ಎರಡನೆ ತರಗತಿಯಲ್ಲಿದ್ದಾಗ ಒಂದು ಹೊಸ ಬಗೆಯ ಪೆನ್ ಬಗೆಗೆ ಪತ್ರಿಕೆಗಳಲ್ಲಿ ಜಾಹೀರಾತು ಪ್ರಕಟವಾಗಿತ್ತು. ವ್ಯಕ್ತಿಯೊಬ್ಬ ಜೀವಮಾನವೆಲ್ಲಾ ಬರೆಯಲು ಅದರಿಂದ ಸಾಧ್ಯವಾಗುತ್ತದೆಂದು ಅದರ ಬಗೆಗೆ ಪ್ರಚಾರ ಮಾಡಿದ್ದರು. ಅಂತಹ ಒಂದು ಪೆನ್ ಪಡೆದುಕೊಳ್ಳುವ ಅಭಿಲಾಷೆ ನನಗುಂಟಾಯಿತು. ನಂಬಿಯಾರ್‌ರೊಡನೆ ಆ ಬಗೆಗೆ ಪ್ರಸ್ತಾಪಿಸಿದೆ. ಕಲ್ಕತ್ತೆಯಲ್ಲಿದ್ದ ಕಂಪನಿಗೆ ಪತ್ರ ಬರೆದು ಅದನ್ನು ತರಿಸಿಕೊಟ್ಟರು. ಸುಮಾರು ಅರ್ಧ ಮುಕ್ಕಾಲು ಅಡಿಯಷ್ಟು ಉದ್ದವಿದ್ದ ಪೆನ್ನಿಗೆ ಆರು ರೂಪಾಯಿ ಬೆಲೆ ಇದ್ದಿತ್ತೆಂಬ ನೆನಪು. ಅದರ ತುದಿಯಲ್ಲಿ ಅತೀ ಚಿಕ್ಕದಾದ 'ಬಾಲ್'ನ್ನು ಅಳವಡಿಸಿದ್ದು ಅದರ ಸಂದಿಯಿಂದ ಒಸರುತ್ತಿದ್ದ ಶಾಯಿಯಿಂದ ಒಂದು ಬಗೆಯ ಸಿನುಗಿನ ವಾಸನೆ ಹರಡುವಂತಿತ್ತು. ಅಕ್ಷರಗಳು ಅತಿ ಸುಲಭವಾಗಿಯೂ, ಸ್ಫುಟವಾಗಿಯೂ ಮೂಡಿ ಬರುತ್ತಿದ್ದುದು ಅದರ ವಿಶೇಷವೆಂದೇ ಹೇಳಬೇಕು. ಬಹಳ ಜನ ವಿದ್ಯಾರ್ಥಿಗಳ ಆಕರ್ಷಣೆಯ ವಸ್ತುವಾದ ಅದು ಒಬ್ಬರಿಂದೊಬ್ಬರ ಕೈಗಳಲ್ಲಿ ನಲಿದಾಡತೊಡಗಿತು. ಕೆಲವೇ ದಿನಗಳಲ್ಲಿ ಒಬ್ಬರ ಕೈ ತಪ್ಪಿ ಕೆಳಗೆ ಬಿದ್ದಾಗ ತುದಿಯಲ್ಲಿದ್ದ ಬಾಲ್, ಪೆನ್ನಿನ ಒಳಗಡೆ ಸರಿದುಕೊಂಡಿತು. ಎಷ್ಟೇ ಪ್ರಯತ್ನ ಮಾಡಿದರೂ ಅದು ಹೊರಗೆ ಬರಲಿಲ್ಲ; ಮುಂದೆ ಅದರಿಂದ ಬರೆಯಲೂ ಆಗಲಿಲ್ಲ. ನಂಬಿಯಾರರು ಅದನ್ನು ಕಂಪನಿಗೆ ಹಿಂದಿರುಗಿಸಿ

ಬದಲಿಗೆ ಇನ್ನೊಂದು ಕಳುಹಿಸುವಂತೆ ಅಗ್ರಹಿಸಿ ಪತ್ರ ಬರೆದರು. ಮುಂದೆ ಬಹಳ ಸಮಯ ಅವರಿಂದ ಉತ್ತರ ಬರದಿದ್ದಾಗ ಬಂಗಾಳ ಸರ್ಕಾರದಿಂದ ಗೃಹಮಂತ್ರಿಗಳಿಗೂ ದೂರು ಸಲ್ಲಿಸಿದೆವು. ಆದರೆ ಏನೂ ಪ್ರಯೋಜನವಾಗಲಿಲ್ಲ. ಅಂದಿನ ಕಾಲಕ್ಕೆ ದುಬಾರಿಯೆನ್ನಬಹುದಾದ ಪೆನ್ನನ್ನು ತರಿಸಿ, ಅದರ ಪರಿಣಾಮ ವ್ಯರ್ಥವಾದಾಗ ತುಂಬಾ ನಿರಾಶೆಯಾಗಿತ್ತು.

ಹೈಸ್ಕೂಲು ಅಭ್ಯಾಸದ ಅವಧಿಯಲ್ಲಿ ಮನೆಯಿಂದ ಆಗಾಗ್ಗೆ ಸ್ವಲ್ಪ ಹಣ ಕಳುಹಿಸುತ್ತಿದ್ದರೂ ಅದು ನನ್ನ ಎಲ್ಲಾ ಖರ್ಚುಗಳಿಗೆ ಸಾಕಾಗುತ್ತಿರಲಿಲ್ಲ. ಆ ಸಮಯದ ಮೂರೂ ವರ್ಷಗಳಲ್ಲಿ ನನ್ನ ಆರ್ಥಿಕ ಪರಿಸ್ಥಿತಿಯನ್ನು ಪರಿಗಣಿಸಿ ಸರ್ಕಾರದಿಂದ ವಿದ್ಯಾರ್ಥಿವೇತನ (ಸ್ಕಾಲರ್‌ಶಿಪ್) ಇಲ್ಲವೇ ಫೀಜು ಮಾಫಿ ಮಾಡುವ ಸೌಲಭ್ಯ ದೊರೆಯುತ್ತಿದ್ದುದು ನನ್ನ ಸುದೈವವೆಂದೇ ಹೇಳಬೇಕು. ತೀರ್ಥಹಳ್ಳಿಯಲ್ಲಿದ್ದ ಸಮಯದಲ್ಲಿ ನನಗೆ ಮನೆಯಿಂದ ಬರುತ್ತಿದ್ದ ಹಣ ಮತ್ತು ಸ್ಕಾಲರ್‌ಶಿಪ್ ಮೊಬಲಗು ಹಾಗೂ ಖರ್ಚುವೆಚ್ಚಗಳ ಬಗೆಗೆ ಲೆಕ್ಕ ಬರೆದಿಡುತ್ತಿದ್ದೆ; ಆ ದಾಖಲಾತಿ ಪುಸ್ತಕ ಈಗಲೂ ಲಭ್ಯವಿದೆ. ಪ್ರತಿ ತಿಂಗಳೂ ಊಟದ ಮೊಬಲಗು ೧೦-೧೫ ರೂಪಾಯಿಗಳು; ಸ್ಕೂಲು ಫೀಜು ೫ ರೂಪಾಯಿಗಳಾಗಿರುತ್ತಿದ್ದವು. ಸ್ನೇಹಿತರೊಡನೆ ಎಂದಾದರೊಂದು ದಿನ ಸಿನಿಮಾ ನೋಡುವುದು, ಅಪರೂಪಕ್ಕೊಂದು ಸಾರಿ ಹೋಟೆಲಿನಲ್ಲಿ ಕಾಫಿ, ತಿಂಡಿ ತಿನ್ನುವ ಹವ್ಯಾಸಗಳೂ ಇದ್ದವು. ಆ ಕಾಲದಲ್ಲಿ ಒಕ್ಕಲಿಗರ ಸಂಘ ಮತ್ತು ವಿದ್ಯಾರ್ಥಿ ನಿಲಯಗಳು ಅಲ್ಲಿಯ ಹೆಸರಾಂತ ಡಾ|| ಬಿ. ಎಸ್. ರಂಗಪ್ಪನವರು ಮತ್ತು ಎಚ್. ವಿ. ರಾಮಯ್ಯನವರ ನೇತೃತ್ವದಲ್ಲಿ ಒಳ್ಳೆಯ ಶಿಸ್ತು, ಸಂಯಮಗಳಿಂದ ನಡೆಯುತ್ತಿದ್ದವು.

ತೀರ್ಥಹಳ್ಳಿಯಲ್ಲಿದ್ದ ಸಮಯವೇ ನಾನು ತಾಯಿಯಿಂದ ಬಹಳ ದೂರ ಮತ್ತು ಹೆಚ್ಚು ಕಾಲ ಹೊರಗಡೆ ಇರಬೇಕಾದ ಪ್ರಸಂಗ ಒದಗಿದ್ದು. ಅವ್ವನ ಅಗಲಿಕೆಯ ವ್ಯಥೆಯನ್ನು ಓದುವುದರಲ್ಲಿ ತಲ್ಲೀನನಾಗುವುದರಿಂದ ಹಾಗೂ ಸ್ನೇಹಿತರೊಡನೆ ಇದ್ದುಕೊಂಡು ಮರೆತು ಬಿಡಬಹುದಾಗಿತ್ತು. ಆದರೆ ಅವ್ವನಿಗೆ ಹಾಗಾಗುತ್ತಿರಲಿಲ್ಲ. ದೂರದ ಪರವೂರಿನಲ್ಲಿ ಅಪರಿಚಿತರ ನಡುವೆ ಹೇಗೆ ಜೀವನ ನಡೆಸುತ್ತಿರುವನೋ ಎಂಬ ಚಿಂತೆ ಅವಳನ್ನು ಸದಾ ಬಾಧಿಸುತ್ತಿತ್ತಂತೆ. ರಜೆಯಲ್ಲಿ ಊರಿಗೆ ಹೋದಾಗಲಂತೂ ರಾಜೋಪಚಾರ; ವಾರದಲ್ಲಿ ಒಂದು ಸಾರಿಯಾದರೂ ಅಭ್ಯಂಜನ ಸ್ನಾನ; ರಾತ್ರಿ ಮಲಗುವಾಗ ಪಾದಗಳಿಗೆ ಎಣ್ಣೆ ತೀಡುವುದು; ಮೇಗರವಳ್ಳಿ ನಾಟಿ ವೈದ್ಯ ಗೋವಿಂದ ಪಂಡಿತರು ವಿಶೇಷವಾಗಿ ತಯಾರಿಸಿದ ಎಣ್ಣೆಯನ್ನು ತಲೆಗೆ ಉಜ್ಜುವುದು - ಎಲ್ಲಾ ಓದುವವನ ಕಣ್ಣು ತಂಪಾಗಲೆಂದು! ದಿನಂಪ್ರತಿ ಹೊಸ ಹೊಸ ತಿಂಡಿ ತೀರ್ಥಗಳು; ಹಾಲು; ಬೆಣ್ಣೆ, ತುಪ್ಪ ಮೊಸರುಗಳ ಯಥೇಚ್ಛ ಸೇವನೆ; ಹರಕೆ ಹೊತ್ತುಕೊಂಡ ದೇವರು ದಿಂಡರುಗಳಿಗೆ ವಿಶೇಷ ಪೂಜೆ ಪುನಸ್ಕಾರಗಳಂತೂ ನಡೆಯಲೇ ಬೇಕು. ಶಾಲೆಗೆ ವಾಪಸ್ಸು ಹೋಗುವ ದಿನವಂತೂ ಯಥೇಚ್ಛವಾಗಿ ಕಣ್ಣೀರುಧಾರೆ; ಮನೆಯವರೆಲ್ಲಾ ಸ್ವಲ್ಪ ದೂರ ಬಂದು ಬೀಳ್ಕೊಟ್ಟರೆ, ಅವ್ವ ಇನ್ನೂ ಸ್ವಲ್ಪ ದೂರ ಹಿಂಬಾಲಿಸಿ, ರಸ್ತೆಯಲ್ಲಿ ತಿರುಗಾಡುವ ಬಸ್ಸು, ಕಾರು, ಬೈಸಿಕಲ್‌ಗಳಿಂದ ದೂರ ಇರುವಂತೆ ಬುದ್ಧಿವಾದ ಹಾಗೂ ಆ ಬಗೆಗೆ ನನ್ನಿಂದ ಭರವಸೆ ಪಡೆಯದೇ ವಾಪಸಾಗು ತ್ತಿರಲಿಲ್ಲ. ನಮ್ಮಿಬ್ಬರ ನಡುವಿನ ಈ ತರಹದ ಒಲವಿನ ನಂಟಿರುವಾಗ ನಾನು ಜೈಲು ಸೇರಿದ ಸುದ್ದಿ ತಿಳಿದಾಗ ಅವ್ವನ ಪೇಚಾಟ ಹೇಗಿರಬೇಕೆಂಬುದು ಊಹೆಗೆ ನಿಲುಕಲಾರದು. ಕೇವಲ ನನ್ನ ಶ್ರೋಯೋಭಿವೃದ್ಧಿಯೇ ತನ್ನ ಜೀವನದ ಪರಮೋದ್ದೇಶವಾಗಿಟ್ಟು ಕೊಂಡಿದ್ದ ಅವ್ವನಿಗೆ ಯಾವುದೇ ರೀತಿಯಲ್ಲಿ ಬೇಜಾರು ಉಂಟು ಮಾಡದಂತೆ ನಡೆದು ಕೊಳ್ಳುತ್ತಿದ್ದೆನೆಂದು ಹೇಳಬಹುದು. ಅವ್ವನ ಮನಸ್ಸಿಗೆ ಬೇಸರವಾಗುತ್ತದೇನೋ ಎಂಬ

ಗ್ರಹಿಕೆಯಿಂದ ಹೈಸ್ಕೂಲು ಎರಡನೇ ತರಗತಿಯವರೆಗೂ ನಾನು ಜುಟ್ಟು ಬೆಳೆಸಿಕೊಂಡಿದ್ದೆ. (ಆ ಸಮಯದಲ್ಲಿ ತಂದೆ ತಾಯಿಯರು ಜೀವಂತವಾಗಿರುವವರೆಗೂ ಜುಟ್ಟು ತೆಗೆಸಬಾರದೆಂಬ ಸಂಪ್ರದಾಯವಿತ್ತು. ಕೆಲವು ಸಂಪ್ರದಾಯವಾದಿ ಬ್ರಾಹ್ಮಣ ಕುಟುಂಬದ ಮಕ್ಕಳನ್ನು ಹೊರತು ಪಡಿಸಿದರೆ ಹೈಸ್ಕೂಲು ಮಟ್ಟಕ್ಕೆ ಬರುವುದರೊಳಗೇ ಇತರ ವರ್ಗದವವರ ಜುಟ್ಟು ಮಾಯ ವಾಗಿರುತ್ತಿತ್ತು!) ಬರುಬರುತ್ತಾ ಸಹಪಾಠಿಗಳ ತಮಾಷೆಯ ಮಾತುಗಳನ್ನು ಸಹಿಸಲಾಗದೆ ನಾನೂ ಜುಟ್ಟು ತೆಗೆಸಬೇಕಾಯಿತು. ಮುಂದಿನ ಸಾರಿ ಊರಿಗೆ ಹೋದಾಗ ಬದಲಾವಣೆಯನ್ನು ಗಮನಿಸಿದರೂ ಆ ಬಗೆಗೆ ಆಕ್ಷೇಪವೆತ್ತಲಿಲ್ಲ. ಬಹುಶಃ ಆಕೆಗೂ ನನ್ನ ಪರಿಸ್ಥಿತಿ ಅರ್ಥವಾಗಿರ ಬೇಕೆಂದುಕೊಂಡೆ.

## ಗಾಂಧೀಜಿಯವರ ಹತ್ಯೆ

ಸುದ್ದಿ ಸಮಾಚಾರಗಳು ಈಗಿನಂತೆ ತ್ವರಿತ ಗತಿಯಲ್ಲಿ ಹರಡುವ ಪರಿಸ್ಥಿತಿ ಆಗಿರಲಿಲ್ಲ. ಪತ್ರಿಕೆಗಳಲ್ಲಿ ಬರುತ್ತಿದ್ದ ಸುದ್ದಿಗಳು ೩-೪ ದಿನಗಳಷ್ಟು ಹಿಂದಿನವಾಗಿರುತ್ತಿದ್ದವು. ರೇಡಿಯೋ ಆದೇ ತಾನೇ ಲಭ್ಯವಾಗುವಂತಿತ್ತು. ನಮ್ಮ ವಿದ್ಯಾರ್ಥಿ ನಿಲಯದ ಹತ್ತಿರದಲ್ಲಿದ್ದ ಅಬಕಾರಿ ಗುತ್ತಿಗೆದಾರರೊಬ್ಬರ ಮನೆಯಲ್ಲಿ ಒಂದು ವಾರದ ಹಿಂದೆ ರೇಡಿಯೋ ಬಂದಿದ್ದ ವಿಷಯ ತಿಳಿದಿತ್ತು. ಒಂದು ದಿನ ಸಾಯಂಕಾಲ ಅವರ ಮನೆ ಎದಿರು ಅಪಾರ ಜನಸ್ತೋಮ ಸೇರಿರುವುದು ನಮ್ಮೆಲ್ಲರ ಗಮನ ಸೆಳೆಯಿತು. ನಾವೆಲ್ಲರೂ ಅಲ್ಲಿಗೆ ಧಾವಿಸಿದೆವು; ಅಂದೇ ಗಾಂಧೀಜಿಯವರು ಹಂತಕನ ಗುಂಡಿಗೆ ಬಲಿಯಾದ ಸುದ್ದಿ ಬಿತ್ತರವಾಗುತ್ತಿತ್ತು. ಆಗಿನ ಕಾಲದ ರೇಡಿಯೋಗಳಲ್ಲಿ ಮಾತುಗಳು ಅಷ್ಟೊಂದು ಸ್ಫುಟವಾಗಿ ಮೂಡಿ ಬರುತ್ತಿರಲಿಲ್ಲ; ಇತರ ಅಡ್ಡ ಶಬ್ದಗಳ ಭರಾಟೆಯೇ ಹೆಚ್ಚಾಗಿರುತ್ತಿತ್ತು. ಆದರೂ ಜರುಗಿದ ಘಟನೆಯ ಬಗೆಗೆ ಅಷ್ಟಿಷ್ಟು ಅರ್ಥ ಮಾಡಿಕೊಳ್ಳ ಬಹುದಾಗಿತ್ತು. ಮಹಾತ್ಮರ ಜೀವನ ಮತ್ತು ಬೋಧನೆಗಳಿಗೆ ಮಾರು ಹೋಗಿದ್ದ ನನ್ನ ದುಃಖಕ್ಕೆ ಪಾರವೇ ಇರಲಿಲ್ಲ. ನನಗರಿವಿಲ್ಲದಂತೆಯೇ ಅಶ್ರುಧಾರೆ ಹರಿಯುತ್ತಿತ್ತು. ಅದೀಗ ದೇಶಕ್ಕೆ ಸ್ವಾತಂತ್ರ್ಯ ಬಂದಿದ್ದು, ಗಾಂಧೀಜಿಯವರನ್ನು ಎಂದಾದರೊಂದು ಸಲ ಮುಖತಃ ಭೇಟಿಯಾಗ ಬೇಕೆಂಬ ತುಡಿತ ನನ್ನಲ್ಲಿ ನೆಲೆಯೂರಿತ್ತು. ಮರುದಿನ ಅವರ ಪಾರ್ಥಿವ ಶರೀರದ ಅಂತಿಮ ಯಾತ್ರೆಯ ವಿವರಣೆ ಬೆಳಗಿನಿಂದಲೇ ರೇಡಿಯೋದಲ್ಲಿ ಕೇಳಿ ಬರುತ್ತಿತ್ತು. ಅಲ್ಲಿ ಜಮಾಯಿಸಿದ ಅಪಾರ ಜನಸ್ತೋಮದಲ್ಲಿ ನಾನೂ ಸೇರಿದ್ದೆ. ಅವರ ದೇಹವನ್ನು ಚಿತೆಯ ಮೇಲಿಟ್ಟು ಅಗ್ನಿಸ್ಪರ್ಶ ಮಾಡುತ್ತಿದ್ದಾಗಿನ ವಿವರಣೆಯಂತೂ ದುಃಖ ಉಮ್ಮಳಿಸಿ ಬರುವಂತೆ ಮಾಡಿತ್ತು; ಗಳ ಗಳ ಅತ್ತುಬಿಟ್ಟೆ. ಕೆಲವು ದಿನಗಳ ನಂತರ ಮಹಾತ್ಮರ ಚಿತಾಭಸ್ಮ ತೀರ್ಥಹಳ್ಳಿಯ ಪರಶುರಾಮ ತೀರ್ಥದಲ್ಲಿ ವಿಸರ್ಜಿಸುವ ಸಲುವಾಗಿ ತರಲಾಗುತ್ತದೆಂಬ ವಿಷಯ ತಿಳಿಯಿತು. ಮಹಾತ್ಮರು, ಜೀವಂತವಾಗಿದ್ದಾಗ ನೋಡಲು ಆಗದಿದ್ದರೂ, ಅವರ ಚಿತಾಭಸ್ಮವನ್ನಾದರೂ ನೋಡಿ ಗೌರವಪೂರ್ವಕ ನಮನ ಸಲ್ಲಿಸ ಬಹುದೆಂಬ ಆಶೆ ನನ್ನದಾಯಿತು. ಭಸ್ಮವನ್ನು ತರುವ ಹಿಂದಿನ ದಿನವೆಲ್ಲಾ ನೀರನ್ನೂ ಸಹ ಕುಡಿಯದೇ ಉಪವಾಸದಿಂದಿದ್ದೆ. ಆದರೆ ಅಂದಿನ ರಾತ್ರಿ ವಿಪರೀತ ಚಳಿ ನಡುಕದ ಜ್ವರ ನನ್ನಾವರಿಸಿ ಬಿಟ್ಟಿತು; ಹಾಸಿಗೆ ಬಿಟ್ಟು ಮೇಲೇಳಲು ಸಾಧ್ಯವಾಗಲೇ ಇಲ್ಲ. ನಿರಾಶೆಯಿಂದ ಪರಿತಪಿಸಿದೆ. ಗಾಂಧೀಜಿಯವರ ಜೀವನ ಮತ್ತು ಸಾಧನೆಗಳು ನನ್ನ ಮೇಲೆ ಮರೆಯಲಾಗದಂಥ ಪರಿಣಾಮ ಬೀರಿವೆ.

ಒಟ್ಟಿನಲ್ಲಿ ಹೇಳುವುದಾದರೆ ತೀರ್ಥಹಳ್ಳಿಯ ವಾಸ್ತವ್ಯದ ಸಮಯದಲ್ಲಿ ವಿದ್ಯಾಭ್ಯಾಸದ ಪ್ರಗತಿಯ ಜೊತೆಗೆ ಸಾಮಾಜಿಕ ಹಾಗೂ ರಾಜಕೀಯ ಕ್ಷೇತ್ರಗಳಲ್ಲಿ ಅಡಿಯಿಡಲು ಸಹಕಾರಿಯಾಯಿತು. ಆ ತನಕ ಚಿಪ್ಪಿನೊಳಗಿದ್ದ ಮರಿಚಿಟ್ಟೆ ಹೊರಬಂದು ಗರಿಗೆದರಿ ಹಾರಾಡುವಂತಾಯಿತು. ಒಂದು ರೀತಿಯ ಅಂತರ್ಮುಖಿ ಸ್ವಭಾವವನ್ನು ತ್ಯಜಿಸಿ ಸುತ್ತಲ ಪರಿಸರದಲ್ಲಿ ಉಂಟಾಗುತ್ತಿದ್ದ ಪರಿವರ್ತನೆಗಳೊಂದಿಗೆ ಸ್ಪಂದಿಸಿ ಸ್ವಚ್ಛಂದವಾಗಿ ವಿಹರಿಸುವಂತಾದೆ. ಆಗಿನ ರಾಜಕೀಯ ಮತ್ತು ಸಾಮಾಜಿಕ ವಿಚಾರಗಳಲ್ಲಿ ನನ್ನ ಓರಗೆಯ ಇತರರಿಗಿಂತ ನನ್ನಲ್ಲಿ ಹೆಚ್ಚಿನ ಜಾಗೃತಿ ಉಂಟಾಗಿತ್ತೆನ್ನಬಹುದು.

ಹೈಸ್ಕೂಲ್‌ನ ಅಂತಿಮ ವರ್ಷದಲ್ಲಿ ರಾಜಕೀಯ ಚಳುವಳಿಯಲ್ಲಿ ಸಕ್ರಿಯ ಪಾತ್ರ, ಜೈಲುವಾಸ, ಗಾಂಧೀಜಿಯವರ ಕೊಲೆಯಂತಹ ಮಾನಸಿಕ ಆಘಾತಗಳ ನಡುವೆಯೂ ಓದಿನ ಬಗೆಗೆ ಹೆಚ್ಚಿನ ಆಸ್ಥೆವಹಿಸಿ ಅಭ್ಯಾಸ ಮಾಡುವುದನ್ನು ಮುಂದುವರಿಸಿದ್ದೆ. ಆ ವರ್ಷ (೧೯೪೮) ಜರುಗಿದ ಎಸ್.ಎಸ್.ಎಲ್.ಸಿ., ಪರೀಕ್ಷೆಯಲ್ಲಿ ತೇರ್ಗಡೆಯೂ ಆದೆ. ಆ ಕಾಲದಲ್ಲಿ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ತೇರ್ಗಡೆಯಾದವರನ್ನು ಎರಡು ದರ್ಜೆಯಲ್ಲಿ ವಿಂಗಡಿಸುವ ಪರಿಪಾಟವಿತ್ತು. ಅದರಲ್ಲಿ ಇ.ಸಿ. ಅಂಡ್ ಪಿ.ಎಸ್. (E.C. & P.S.) ಅಂದರೆ, ಈ ದರ್ಜೆಯವರು ಮುಂದೆ ಕಾಲೇಜು ವಿದ್ಯಾಭ್ಯಾಸಕ್ಕೆ ಅರ್ಹರಾಗಿರುತ್ತಿದ್ದರಲ್ಲದೆ, ಸರ್ಕಾರಿ ಕೆಲಸಕ್ಕೂ ಸೇರಬಹುದಾಗಿತ್ತು. ಇನ್ನೊಂದು ದರ್ಜೆ, ಇ.ಪಿ.ಎಸ್. (E.P.S.) ಅಂದರೆ, ಅಂತಹವರು ಕೇವಲ ಸರ್ಕಾರಿ ಕೆಲಸ ಸೇರಲು ಅರ್ಹರು; ಕಾಲೇಜು ವಿದ್ಯಾಭ್ಯಾಸಕ್ಕೆ ಅರ್ಹರಾಗಿರುತ್ತಿರಲಿಲ್ಲ. ನಾನು ಇ.ಸಿ. ಅಂಡ್ ಪಿ.ಎಸ್. ದರ್ಜೆಯಲ್ಲಿ ತೇರ್ಗಡೆಯಾದದ್ದು ಹೆಮ್ಮೆಯ ವಿಷಯವಾಗಿತ್ತು. ಆದರೆ ಮುಂದೆ ದೊರೆತ ಅಂಕಪಟ್ಟಿಯಲ್ಲಿನ ನಡತೆಯ ವಿಷಯದಲ್ಲಿನ ಕಾಲಂನಲ್ಲಿ 'ತೃಪ್ತಿಕರ' (Fair) ಎಂದು ನಮೂದಾಗಿದ್ದು ಮಾನಸಿಕವಾಗಿ ನೋವುಂಟು ಮಾಡಿತ್ತು. 'ಮೈಸೂರ್ ಚಲೋ' ಚಳುವಳಿಯಲ್ಲಿ ಭಾಗವಹಿಸಿದ್ದರ ಪ್ರತಿಫಲವೇನೋ ಎನ್ನಿಸಿತು.

---



ಸ್ವಾತಂತ್ರ್ಯ ಹೋರಾಟದ ಸನ್ಮಾನ

# ೪. ಇಂಟರ್‌ಮೀಡಿಯೇಟ್ ಕಾಲೇಜು

ಹೈಸ್ಕೂಲು ಕಲಿಕೆಯ ಸಮಯದಲ್ಲಿ ರಾಜಕೀಯ ಆಂದೋಳನದಲ್ಲಿ ಧುಮುಕಿ ಕೆಲ ಸಮಯ ನನ್ನ ವಿದ್ಯಾಭ್ಯಾಸದ ಏಕಾಗ್ರ ಚಿತ್ತತೆಗೆ ಭಂಗ ಉಂಟಾಗಿದ್ದರೂ ಎಸ್.ಎಸ್.ಎಲ್.ಸಿ., ಯಲ್ಲಿ ಮೊದಲ ಪ್ರಯತ್ನದಲ್ಲೇ ತೇರ್ಗಡೆಯಾಗಿದ್ದು ಆಗಿನ ನನ್ನ ಸಾಧನೆಗಳಲ್ಲಿ ಪ್ರಮುಖವಾದುದೆಂದೇ ಪರಿಗಣಿಸುತ್ತೇನೆ. ಆದರೆ ಮುಂದಿನ ಸಮಸ್ಯೆ ಧುತ್ತೆಂದು ಎದುರಾಯಿತು. ನನ್ನಲ್ಲಾಗ ಹೆಚ್ಚು ಹೆಚ್ಚು ಓದಬೇಕೆಂಬ ಆಕಾಂಕ್ಷೆ ಬಲವಾಗಿ ಬೇರು ಬಿಡಲಾರಂಭಿಸಿತ್ತು. ಹೈಸ್ಕೂಲು ವಿದ್ಯಾಭ್ಯಾಸವೇ ದುಸ್ತರವಾಗಿದ್ದ ಹಿನ್ನೆಲೆಯಲ್ಲಿ ಶಿವಮೊಗ್ಗೆಗೆ ಹೋಗಿ ಇಂಟರ್‌ಮೀಡಿಯೇಟ್ (ಇಂದಿನ ಪಿ.ಯು.ಸಿ.) ಕಲಿಕೆ ಅಸಾಧ್ಯವೆನ್ನುವ ಪರಿಸ್ಥಿತಿಯಿತ್ತು. ಫಲಿತಾಂಶ ಗೊತ್ತಾದ ನಂತರ ಮನೆಗೆ ಹೋದವನು ಅಪ್ಪ ಮತ್ತಿತರ ಕುಟುಂಬದ ಸದಸ್ಯರ ಜೊತೆ ನನ್ನ ಅಭಿಲಾಷೆಯನ್ನು ವ್ಯಕ್ತಪಡಿಸಲಾರಂಭಿಸಿದೆ. ನನ್ನ ಮುಂದುವರಿದ ವಿದ್ಯಾಭ್ಯಾಸದ ಪ್ರಸ್ತಾಪ ಅಪ್ಪನಿಗೆ ಗರಬಡಿಸಿದಂತಾಗಿರಬೇಕು. ಸಂತಸ ಪಡುವ ಬದಲು ಸದಾ ಚಿಂತಾಕ್ರಾಂತಳಾದಳು. ನನ್ನ ಖಾಸಾ ಚಿಕ್ಕಪ್ಪಂದಿರಿಬ್ಬರಿಗೆ ನನ್ನ ಸಾಧನೆ ಮುದ ನೀಡುವಂತಿದ್ದರೂ ನನ್ನ ಆಕಾಂಕ್ಷೆಯನ್ನು ಈಡೇರಿಸಲು ಅವರಾಗಿಯೇ ನೇರ ನಿರ್ಧಾರಕ್ಕೆ ಬರಲು ಸಂಕೋಚವಿರುವಂತಿತ್ತು; ಸಮಷ್ಟಿ ಕುಟುಂಬ ನಿರ್ವಹಣೆಯ ಇತಿಮಿತಿಗಳಲ್ಲಿ ಅವರು ಒಂದು ತರಹದ ಸಂದಿಗ್ಧ ಸ್ಥಿತಿಯಲ್ಲಿದ್ದರು. ಕುಟುಂಬದ ಇತರ ಸದಸ್ಯರಿಗೆ ವಿಷಯ ತಿಳಿದಿದ್ದರೂ ಬಹಿರಂಗವಾಗಿ ಯಾವುದೇ ಭಾವನೆಗಳು ವ್ಯಕ್ತವಾಗುತ್ತಿರಲಿಲ್ಲ. ಮೂರು ವರ್ಷಗಳ ಹಿಂದೆ ತೀರ್ಥಹಳ್ಳಿಗೆ ಕಳುಹಿಸುವಾಗಿನ ಪರಿಸ್ಥಿತಿಯೇ ಈ ಸಮಯದಲ್ಲೂ ಮರುಕಳಿಸಿತು.

ಪರಿಸ್ಥಿತಿಯ ಸೂಕ್ಷ್ಮತೆಯನ್ನು ಅರಿತ ನಾನು ಮತ್ತೆ ಕುಟುಂಬದ ಕೆಲವು ಪ್ರಭಾವೀ ಸಂಬಂಧಿಕರನ್ನು ಭೇಟಿ ಮಾಡಿ ನನ್ನ ಮುಂದಿನ ವಿದ್ಯಾಭ್ಯಾಸದ ಬಗೆಗೆ ಮನೆಯವರ ಹತ್ತಿರ ಪ್ರಯತ್ನಿಸಬೇಕೆಂದು ವಿನಂತಿಸಿಕೊಂಡೆ. ಇಂತಹ ವಿಚಾರಗಳಲ್ಲಿ ಆ ಕಾಲದಲ್ಲಿ ನನ್ನ ನೆರವಿಗೆ ಬರುತ್ತಿದ್ದವರೆಂದರೆ ಮೂಡುವಳ್ಳಿ ಮಂಜಪ್ಪ ಹೆಗ್ಗಡೆಯವರು (ಅವರ ತಾಯಿಯ ತವರು ಮನೆ ನಮ್ಮ ಕುಟುಂಬ) ಹಾಗೂ ಬೈಸೆ ತಮ್ಮಯ್ಯಗೌಡರು (ನಮ್ಮ ದಾಯಾದಿ ಕುಟುಂಬದ ಪುಟ್ಟಮ್ಮ



ಬಂಧು, ಹಿತೈಷಿಗಳಾದ ಮೂಡುವಳ್ಳಿ ಮಂಜಪ್ಪ ಹೆಗ್ಗಡೆಯವರು



ಬಂಧು, ಹಿತೈಷಿಗಳಾದ ಬೈಸೆ ತಮ್ಮಯ್ಯಗೌಡರು

ಎಂಬ ಸೋದರತ್ತೆಯ ಗಂಡ. ಈ ಮೊದಲೇ ಪ್ರಸ್ತಾಪಿಸಿದ ನನ್ನ ಸೋದರತ್ತೆ ಮಾನಿ ಚಿನ್ನಮ್ಮನವರ ತಂಗಿ). ನಮ್ಮ ಕುಟುಂಬದವರು ಸಾಮಾನ್ಯವಾಗಿ ಇವರ ಬಗೆಗೆ ಗೌರವ ವಿಶ್ವಾಸವಿಟ್ಟು ಕೊಂಡಿದ್ದರಲ್ಲದೆ, ಅವರ ಹಿತ ವಚನಗಳಿಗೆ ಮನ್ನಣೆ ಕೊಡುತ್ತಿದ್ದರು. ಅವರಿಬ್ಬರೂ ನಮ್ಮ ಮನೆಗೆ ಬಂದು ಎಲ್ಲರ ಹತ್ತಿರ ನನ್ನ ವಿದ್ಯಾಭ್ಯಾಸವನ್ನು ಮುಂದುವರಿಸುವುದರ ಮಹತ್ವವನ್ನು ವಿವರಿಸಿದರು. ಈ ದಿಸೆಯಲ್ಲಿ ಎಲ್ಲರಲ್ಲೂ ಒಮ್ಮತವಿರದಿದ್ದರೂ, ಒಂದು ಬಗೆಯ ಸಮಾಧಾನಕರ ವಾತಾವರಣ ಮೂಡಿಸಿದರೆನ್ನಬಹುದು. ಆದರಿಂದಾಗಿ ನನ್ನನ್ನು ಸದ್ಯಕ್ಕೆ ಶಿವಮೊಗ್ಗೆಗೆ ಕೂಡಲೇ ಕಳುಹಿಸುವ ಏರ್ಪಾಡು ಮಾಡಬಹುದೆಂತಲೂ, ಮುಂದೆ ಏನಾಗುತ್ತದೆಂಬುದರ ಬಗೆಗೆ ಯೋಚಿಸಬಹುದೆಂಬ ನಿರ್ಧಾರವಾಯಿತು. ಚಿಕ್ಕಪ್ಪಂದಿರು ಶಿವಮೊಗ್ಗಾದಲ್ಲಿ ನನ್ನ ಆರಂಭದ ದಿನಗಳಿಗೆ ಸಾಕಾಗುವ ಹಣವನ್ನು ಒದಗಿಸಿಕೊಟ್ಟರು. ಮುಂದೆ ಅಲ್ಲಿಯ ಅಡಿಕೆ ಮಂಡಿಯವರೊಬ್ಬರಿಂದ ಕಾಯಂ ಏರ್ಪಾಡು ಮಾಡಬಹುದಾಗಿ ಭರವಸೆ ಇತ್ತರು. ಅವ್ವ ಎಂದಿನಂತೆ ಒಲ್ಲದ ಮನಸ್ಸಿನಿಂದ ಅಶ್ರುಧಾರೆ ಸುರಿಸಿ ಬೀಳ್ಕೊಟ್ಟಳು.

ಶಿವಮೊಗ್ಗೆಗೆ ಬಂದವನೇ ಕ್ಲಾರ್ಕ್ ಪೇಟೆಯಲ್ಲಿದ್ದ ಒಕ್ಕಲಿಗರ ವಿದ್ಯಾರ್ಥಿ ನಿಲಯದಲ್ಲಿ ಪ್ರವೇಶ ಪಡಕೊಂಡೆ (೧೯೪೮). ಸಮಾಜವಾದಿ ದುರೀಣರಾಗಿ ಪ್ರಖ್ಯಾತರಾದ ಶಾಂತವೇರಿ ಗೋಪಾಲ ಗೌಡರು ವಿದ್ಯಾರ್ಥಿ ನಿಲಯದ ಮ್ಯಾನೇಜರರಾಗಿದ್ದರು. ಹಾಗೆಯೇ ಶಿವಮೊಗ್ಗದ ಹೊರ ವಲಯದಲ್ಲಿ ಮೂರು ಮೈಲಿ ದೂರದಲ್ಲಿದ್ದ ಇಂಟರ್ ಮೀಡಿಯೇಟ್ ಕಾಲೇಜನ್ನು (ಇಂದಿನ ಸಹ್ಯಾದ್ರಿ ಕಾಲೇಜು) ಸೇರಿಕೊಂಡೆ. ಐಚ್ಚಿಕ ವಿಷಯಗಳಾಗಿ ರಸಾಯನ ಶಾಸ್ತ್ರ ಸಸ್ಯಶಾಸ್ತ್ರ ಮತ್ತು ಪ್ರಾಣಿ ಶಾಸ್ತ್ರ (Chemistry, Botany, Zoology - C.B.Z.) ವಿಭಾಗಗಳನ್ನು ಆರಿಸಿಕೊಂಡಿದ್ದೆ. ಸಾಮಾನ್ಯವಾಗಿ ವೈದ್ಯಕೀಯ ಕಾಲೇಜುಗಳಿಗೆ ಸೇರುವವರು ಇಂತಹ ಐಚ್ಛಿಕ ವಿಭಾಗಗಳನ್ನು ಆರಿಸಿಕೊಳ್ಳುವುದು ರೂಢಿಯಾಗಿತ್ತು. ಆ ದಿಸೆಯಲ್ಲಿ ಮುಂದುವರಿಯುವ ಯಾವುದೇ ಆಕಾಂಕ್ಷೆ ನನಗಿರಲಿಲ್ಲ. ಬಹುಶಃ ಇನ್ನುಳಿದ ಭೌತಶಾಸ್ತ್ರ (Physics), ಗಣಿತ (Mathamatics) ಗಳಂತಹ ವಿಷಯಗಳ ಅಭ್ಯಾಸ ನನಗೆ ಕಷ್ಟಕರವೆನ್ನಿಸುತ್ತಿದ್ದುದರಿಂದ ಹಾಗೆ ಮಾಡಿದೆನೆನ್ನಿಸುತ್ತದೆ.

ಸುಮಾರು ಮೂರು ಮೈಲುಗಳಷ್ಟು ದೂರವಿದ್ದ ಕಾಲೇಜಿಗೆ ಹೋಗಿ ಬರಲು ಈಗಿನಂತೆ ಬಸ್ಸುಗಳ ಸೌಕರ್ಯಗಳಿರಲಿಲ್ಲ. ಕೆಲವು ಶ್ರೀಮಂತರ ಮಕ್ಕಳು ಬೈಸಿಕಲ್ ಇಟ್ಟು ಕೊಂಡಿರುತ್ತಿದ್ದರು. ನನಗೆ ಬೈಸಿಕಲ್ ಕೊಂಡು ಕೊಳ್ಳುವಷ್ಟು ಆರ್ಥಿಕ ಸಂಪನ್ಮೂಲವಿರಲಿಲ್ಲ; ಮೇಲಾಗಿ ಬೈಸಿಕಲ್ ಬಿಡುವುದನ್ನು ಅಭ್ಯಾಸ ಮಾಡಿಕೊಂಡಿರಲಿಲ್ಲ. ಇಂತಹ ವಿಷಯ ಇಂದಿನ ಯುವಕರ ಹುಬ್ಬೇರಿಸಬಹುದು. ಆ ಕಾಲದಲ್ಲಿ ಬೈಸಿಕಲ್ ಅಪರೂಪದ ವಾಹನವೇ. ಜೊತೆಗೆ ಅಂತಹ ವಿಷಯಗಳಲ್ಲಿ ಅವ್ವನ ಎಚ್ಚರಿಕೆಯ ಬುದ್ಧಿವಾದದಿಂದಾಗಿ ಆ ದಿಸೆಯಲ್ಲಿ ಪ್ರಯತ್ನ ಮಾಡಿರಲಿಲ್ಲ. ನಡೆದುಕೊಂಡು ಕಾಲೇಜಿಗೆ ಹೋಗುವವರ ತಂಡಗಳೇ ಇರುತ್ತಿದ್ದು ಅದೊಂದು ರೀತಿಯ ಖುಷಿಯೇ ಆಗಿರುತ್ತಿತ್ತು.

ಶಿವಮೊಗ್ಗೆಯಲ್ಲಿ ನೆಲೆಯಾದ ಒಂದು ವಾರದಲ್ಲೇ ನಮ್ಮ ಸಂಬಂಧಿಕರಾದ ಮಾಘಲು ಮಂಜಪ್ಪ ನಾಯ್ಕರ ಮನೆಯನ್ನು ಹುಡುಕಿಕೊಂಡು ಹೋದೆ. ಮಾಘಲು, ನನ್ನ ಅಜ್ಜಿಯೊಬ್ಬರ (ತಾಯಿಯ ತಾಯಿ) ತವರು ಮನೆ; ಅಲ್ಲದೆ ಮಂಜಪ್ಪ ನಾಯ್ಕರು ನಮ್ಮ ದಾಯಾದಿ ಸೋದರತ್ತೆ ಯವರಾದ ಸುಬ್ಬಮ್ಮನವರನ್ನು (ಮಾನಿ ಚಿನ್ನಮ್ಮನವರ ಇನ್ನೊಬ್ಬ ತಂಗಿ) ಮದುವೆಯಾಗಿದ್ದರು. ಬಡತನದ ಹಿನ್ನೆಲೆಯಿಂದ ಬಂದಿದ್ದ ಮಂಜಪ್ಪ ನಾಯ್ಕರು ಸ್ವಯಂ ಅಕ್ಷರಾಭ್ಯಾಸ ಮಾಡಿ ಒಳ್ಳೆಯ



ಬಂಧು, ಹಿತೈಷಿಗಳಾದ ಎಂ. .ಬಿ. ಮಂಜಪ್ಪನಾಯ್ಕರು, ಶ್ರೀಮತಿ ಸುಬ್ಬಮ್ಮನವರು

ವಿದ್ಯಾವಂತರಾದವರು; ಅಡಿಕೆ ವ್ಯಾಪಾರ ವ್ಯವಹಾರಗಳಲ್ಲಿ ನೈಪುಣ್ಯತೆ ಗಳಿಸಿಕೊಂಡಿದ್ದರು. ಆ ಸಮಯದಲ್ಲಿ ಹೆಸರಾಂತ ಮೇಗರವಳ್ಳಿ ಅಡಿಕೆ ಮಂಡಿಯ ಪಾಲುದಾರರಲ್ಲಿ ಒಬ್ಬರಾಗಿದ್ದರು. ಆ ತನಕ ಅವರು ನನ್ನನ್ನು ನೋಡಿರಲಿಲ್ಲವಾದರೂ ವಿದ್ಯಾಭ್ಯಾಸದಲ್ಲಿ ನಾನು ಮುಂದು ವರಿಯುತ್ತಿದ್ದ ಬಗೆಗೆ ತಿಳಿದುಕೊಂಡಿದ್ದರೆನಿಸುತ್ತದೆ. ನನ್ನ ಆಗಿನ ಆರ್ಥಿಕ ಪರಿಸ್ಥಿತಿಯನ್ನು ಅವರಿಗೆ ಮನದಟ್ಟು ಮಾಡಿಕೊಟ್ಟೆ. ಹೇಗಿದ್ದರೂ ಶಿವಮೊಗ್ಗೆಗೆ ಬಂದು ಕಾಲೇಜೂ ಸೇರಿದ್ದಾಗಿದೆ. ಇನ್ನು ಯಾವ ವಿಷಯದಲ್ಲೂ ಆತಂಕ ಪಡುವ ಅವಶ್ಯಕತೆ ಇಲ್ಲ; ಅಲ್ಲದೆ ಆಗ ತಾನೇ ರಾಜಕೀಯ ವಲಯದಲ್ಲಿ ಉದಯೋನ್ಮುಖ ದುರೀಣರಾಗಿ ಹೆಸರಾಗಿದ್ದ ಕಡಿದಾಳ್ ಮಂಜಪ್ಪನವರೂ ಸಹಾ ಅವರ ಬೀದಿಯಲ್ಲೇ ವಾಸವಾಗಿದ್ದು, ಕಾಲೇಜು ವಿದ್ಯಾರ್ಥಿ ವೇತನ ಸಮಿತಿಯ ಸದಸ್ಯರೂ ಆಗಿರುವರೆಂತಲೂ, ಅವರಿಂದ ನನಗೆ ವಿದ್ಯಾರ್ಥಿ ವೇತನ ದೊರಕುವಂತೆ ಶಿಫಾರಸ್ಸು ಮಾಡುವ ಭರವಸೆಯನ್ನಿತ್ತರು. ನಾನೂ ಸಹ ಅವರನ್ನು ಭೇಟಿಯಾಗಿ ನನ್ನ ಪರಿಸ್ಥಿತಿಯನ್ನು ಮನದಟ್ಟು ಮಾಡುವಂತೆ ಸೂಚಿಸಿದರು. ಮುಂದೆ ವಿದ್ಯಾರ್ಥಿ ವೇತನಕ್ಕೆ ಅರ್ಜಿ ಸಲ್ಲಿಸಿದ ನಂತರ ಕಡಿದಾಳ್ ಮಂಜಪ್ಪನವರನ್ನು ಕಂಡು ನನ್ನ ಸ್ಥಿತಿಗತಿಗಳನ್ನು ನಿವೇದಿಸಿಕೊಂಡಿದ್ದೆ.

ಶಿವಮೊಗ್ಗೆಗೆ ಹೊರಡುವ ಮುನ್ನ ತಾಯಿಯವರ ಮನಸ್ಥಿತಿಯ ಬಗ್ಗೆ ಪ್ರಸ್ತಾಪಿಸಿದ್ದೆ. ಶಿವಮೊಗ್ಗಾದ ಖರ್ಚು ವೆಚ್ಚಗಳ ಬಗೆಗೆ ಮನೆಯವರು ತಾತ್ಕಾಲಿಕವಾಗಿ ಏರ್ಪಾಡು ಮಾಡಿದ್ದ ರಾದರೂ, ಅದರ ಬಗೆಗೆ ತಾಯಿಗೆ ಅನುಮಾನಗಳಿದ್ದವೆನಿಸುತ್ತದೆ. ಮುಂದೆ ನನಗೆ ಯಾವ ಕಷ್ಟಕಾರ್ಪಣ್ಯಗಳು ಕಾದಿವೆಯೋ ಎಂಬ ಯೋಚನೆ ಅವರನ್ನು ಬಾಧಿಸುತ್ತಿದ್ದಿರಬೇಕು. ಮನಸ್ಸಿನ ತಳಮಳವನ್ನು ಸಹಿಸಲಾಗದೆ, ಅತ್ತಿಗೆ ಮಾನಿ ಚಿನ್ನಮ್ಮನವರೊಡನೆ ಶಿವಮೊಗ್ಗೆಗೆ ಬಂದು ಮಂಜಪ್ಪ ನಾಯ್ಕರ ಮನೆಯಲ್ಲಿ ಉಳಿದು ಕೊಂಡರು. ಅವರಿಗೂ ಅತ್ತಿಗೆಯಾದ ಸುಬ್ಬಮ್ಮನವರೊಡನೆ ನನ್ನ ವಿಷಯಗಳನ್ನು ತೆರೆದಿಟ್ಟರು; ನನ್ನ ಭವಿಷ್ಯದ ಬಗೆಗೆ ಅವರಿಗಾಗುತ್ತಿದ್ದ ಗಾಬರಿಯನ್ನು ತೋಡಿಕೊಂಡರು. ಅಲ್ಲದೆ ಮನೆಯವರಿಂದ ಅದೆಷ್ಟು ದಿನ ಹಣ ಒದಗಬಹುದೆಂಬುದರ ಬಗೆಗೆ ಅನುಮಾನವಿರುವುದಾಗಿಯೂ, ಮಗನಿಗೆ ಯಾವ ಕಾರಣದಿಂದಲೂ ತೊಂದರೆಯಾಗ

ಬಾರದೆಂದು ತಮ್ಮಲ್ಲಿದ್ದ 'ಅಡ್ಡಿಕೆ' (ಸಣ್ಣ ಸಣ್ಣ ಬಂಗಾರದ ಗುಂಡುಗಳನ್ನು ಕಲಾತ್ಮಕವಾಗಿ ಪೋಣಿಸಿದ ಅಗಲವಾದ ಅರ್ಧ ಚಂದ್ರಾಕಾರದ ಸರ)ಯನ್ನು ಮಾರಾಟ ಮಾಡುವ ಅವರ ಅಭಿಲಾಷೆಯನ್ನು ವ್ಯಕ್ತಪಡಿಸಿದರಂತೆ. ಅದನ್ನು ಅವರ ಪತಿಯ ಮೂಲಕ ಮಾರಾಟ ಮಾಡಿಸಿ, ದೊರೆಯುವ ಹಣವನ್ನು ಅಡಿಕೆ ಮಂಡಿಯಲ್ಲಿರಿಸಿ, ನನಗೆ ಅವಶ್ಯವಿರುವಾಗ ಕೊಡುವ ಏರ್ಪಾಡು ಮಾಡಬೇಕೆಂದು ಹೇಳಿದರಂತೆ.

ಒಂದು ಬೆಳಿಗ್ಗೆ ತಾಯಿಯವರು ಮಂಜಪ್ಪನಾಯ್ಕರ ಮನೆಯಲ್ಲಿದ್ದಾಗ ನಾನೂ ಅಲ್ಲಿಗೆ ಹೋದೆ. ಮಂಜಪ್ಪನಾಯ್ಕರೇ ಅಡ್ಡಿಕೆಯನ್ನು ಮಾರಾಟ ಮಾಡುವ ವಿಷಯವನ್ನು ಪ್ರಸ್ತಾಪಿಸಿದರು. ಆ ಬಗೆಗೆ ತಾಯಿಯವರು ಮೊದಲೇ ನಿರ್ಧಾರ ಮಾಡಿಯೇ ಬಂದಿದ್ದರೂ ಸಹ ಆ ಸಮಯದಲ್ಲಿ ಸ್ತ್ರೀ ಸಹಜವೆನ್ನಬಹುದಾದ ದುಃಖ ಅವರಿಗೆ ಉಮ್ಮಳಿಸಿ ಬಂದಂತ್ತಿತ್ತು. "ಹಾಲಮ್ಮನವರೇ, ಬೆಲೆ ಬಾಳುವ ಆಭರಣ ಕೈಬಿಟ್ಟು ಹೋಗುವಾಗ ನಿಮಗೆ ವ್ಯಥೆಯಾಗುವುದು ಸಹಜವೆನ್ನುವುದು ನಾ ಬಲ್ಲೆ. ಆದರೆ ನಿಮ್ಮ ಮಗ ಚಂದ್ರುವೇ ಅದಕ್ಕಿಂತ ಶ್ರೇಷ್ಠ ಆಭರಣವಾಗಿಲ್ಲವೆ. ಅದಕ್ಕಾಗಿ ಚಿಂತೆ ಮಾಡಬೇಡಿ" ಎಂದು ಮಂಜಪ್ಪನಾಯ್ಕರು ಸಂತೈಸಿದರು. ಅಂದಿನ ಸನ್ನಿವೇಶ ಇಂದಿಗೂ ನನ್ನ ಕಣ್ಣೆದುರಿಗೆ ಹಿಡಿದಿಟ್ಟಂತಿದೆ. ಅಂದು ನನ್ನ ಕಣ್ಣಂಚಿನಲ್ಲಿ ನೀರೊಡೆದಂತೆ ಆ ಘಟನೆಯ ವಿವರಗಳನ್ನು ದಾಖಲಿಸುತ್ತಿರುವ ಇಂದೂ ನನ್ನ ಕಣ್ಣುಗಳು ತುಂಬಿ ಬರುತ್ತಿವೆ... ನನ್ನ ಶ್ರೇಯೋಭಿವೃದ್ಧಿಗಾಗಿ ಅವ್ವ ಮಾಡಿದ ತ್ಯಾಗಗಳಿಗೆ ಎಣೆಯುಂಟೇ? ಪಡಲಾರದ ಕಷ್ಟಕೋಟಲೆಗಳಿಗೆ ಸರಿಸಾಟಿಯುಂಟೇ? ನಾಯಕರು ಒಂದೆರಡು ದಿನಗಳಲ್ಲಿ ಅಡ್ಡಿಕೆಯನ್ನು ಮಾರಾಟ ಮಾಡಿಸಿದರು. ಐದುನೂರೋ, ಆರುನೂರೋ ರೂಪಾಯಿಗಳು ಅದರಿಂದ ದೊರಕಿತ್ತೆಂಬ ನೆನಪಿದೆ. ಅದನ್ನು ಅವರ ಮಂಡಿಯಲ್ಲಿ ಡಿಪಾಸಿಟ್ ಇರಿಸಿದರು. ಮುಂದೆ ನನಗೆ ಹೆಚ್ಚಿನ ಅವಶ್ಯಕತೆಗಳುಂಟಾದಾಗ ಸ್ವಲ್ಪ ಸ್ವಲ್ಪ ತೆಗೆದುಕೊಳ್ಳುತ್ತಿದ್ದೆ. ಮುಂದೆ ಮನೆಯವರ ನಿಲುವಿನಲ್ಲಿ ಸ್ವಲ್ಪ ಬದಲಾವಣೆಗಳಾಗಿ ನನ್ನ ಖರ್ಚಿಗೆ ಅಡಿಕೆ ಮಂಡಿಯಿಂದಲೇ ಆಗಾಗ್ಗೆ ಹಣ ಒದಗಿಸುವ ಏರ್ಪಾಡು ಮಾಡಿದರು. ಜೊತೆಗೆ ಶಿವಮೊಗ್ಗಾದಲ್ಲಿದ್ದ ಎರಡೂ ವರ್ಷಗಳು ಕಡಿದಾಳ್ ಮಂಜಪ್ಪನವರ ಸಹಾಯದಿಂದ ವಿದ್ಯಾರ್ಥಿ ವೇತನವೂ ದೊರೆಯುತ್ತಿತ್ತು. ಹಾಗಾಗಿ ಅವ್ವನ ಅಡ್ಡಿಕೆಯ ಹಣ ಬಹಳ ಕಾಲ ನನಗೆ ಆಪದ್ಧನವಾಗಿ ಅಡಿಕೆ ಮಂಡಿಯಲ್ಲಿ ಉಳಿದುಕೊಂಡಿತ್ತು.

ತೀರ್ಥಹಳ್ಳಿಯಲ್ಲೇ ಸ್ನೇಹಿತರಾಗಿದ್ದ ಎಚ್. ಕೆ. ಶೀನಪ್ಪನೊಂದಿಗಿನ ನನ್ನ ಸ್ನೇಹ ಇಲ್ಲಿಯೂ ನಿಕಟವಾಗಿ ಮುಂದುವರಿಯಿತು. ಕೆಲವು ಸಾರಿ ಒಂದೇ ಕೊಠಡಿಯಲ್ಲಿರುತ್ತಿದ್ದೆವು. ನಮ್ಮ ಬಾಹ್ಯ ಚಹರೆಗಳು ಬಹುಪಾಲು ಹೋಲಿಕೆಯಾಗುವಂತಿದ್ದು ಬಹಳಷ್ಟು ಜನ ನಮ್ಮಿಬ್ಬರನ್ನೂ, ಅಣ್ಣ ತಮ್ಮಂದಿರೆಂದೇ ಭಾವಿಸಿದ್ದರಂತೆ! ಅವರು ಕಲೆಗೆ ಸಂಬಂಧಿಸಿದ ವಿಷಯಗಳನ್ನು ಆರಿಸಿ ಕೊಂಡಿದ್ದರು.

ಸರಿಯಾದ ಕಾಲಕ್ಕೆ ಕಾಲೇಜಿನ ಪಾಠಪ್ರವಚನಗಳೇನೋ ಶುರುವಾದವು. ಹೈಸ್ಕೂಲಿನಲ್ಲಿ ಕನ್ನಡ ಮಾಧ್ಯಮದಲ್ಲಿ ಅಭ್ಯಾಸ ಮಾಡಿ ಬಂದಂತಹ ನಮ್ಮ ತರಹೆಯ ವಿದ್ಯಾರ್ಥಿಗಳಿಗೆ ಬಹುಪಾಲು ಇಂಗ್ಲಿಷ್ ಮಾಧ್ಯಮದಲ್ಲಿ ಜರುಗುತ್ತಿದ್ದ ಪ್ರವಚನಗಳನ್ನು ಅರ್ಥೈಸಿಕೊಳ್ಳುವುದು ಕಷ್ಟವಾಗುತ್ತಿತ್ತು. ಆ ಸಮಯದಲ್ಲಿ The Little Oxford Dictionary ಎಂಬ ನಿಘಂಟು ಖರೀದಿಸಿ, ಇಂಗ್ಲೀಷ್‌ನ ಪದಗಳನ್ನು ಅರ್ಥ ಮಾಡಿಕೊಳ್ಳಲು ತೊಡಗಿದೆ. ಶಿಥಿಲವಾಗಿದ್ದರೂ ಅಂದಿನ ದಿನಗಳ 'ಸ್ಮರಣಿಕೆ'ಯಾಗಿ ಅದು ಇಂದಿಗೂ ಉಳಿದುಕೊಂಡಿದೆ! ಸಸ್ಯಶಾಸ್ತ್ರ, ಪ್ರಾಣಿಶಾಸ್ತ್ರಗಳಂಥ ವಿಭಾಗಗಳಲ್ಲಿ ಉಪನ್ಯಾಸಕರ ಕೊರತೆ ಇತ್ತು. ಆದರೂ ಇದ್ದವರು ತುಂಬಾ ಮುತುವರ್ಜಿ

ವಹಿಸಿ ಪಾಠ ಪ್ರವಚನ ಮಾಡುತ್ತಿದ್ದರು, ಕಾಲೇಜಿನ ಕಿರಿಯ ಮತ್ತು ಹಿರಿಯ ತರಗತಿಗಳಿಗೆಲ್ಲಾ ಎಸ್.ವಿ. ಪರಮೇಶ್ವರ ಭಟ್ಟರೊಬ್ಬರೇ ಕನ್ನಡದ ಪ್ರವಾಚಕರು. ಇಡೀ ಜ್ಯೂನಿಯರ್ ಮತ್ತು ಸೀನಿಯರ್ ವಿಭಾಗಗಳ ಎಲ್ಲಾ ತರಗತಿಗಳನ್ನು ಒಂದೊಂದು ಗುಂಪಾಗಿ ಪ್ರವಚನ ನಡೆಸುತ್ತಿದ್ದರು. ರಸವತ್ತಾಗಿ ಹಾಗೂ ಅರ್ಥಗರ್ಭಿತವಾದ ಅವರ ಉಪನ್ಯಾಸಗಳು ಎಲ್ಲರ ಗಮನ ಸೆರೆಹಿಡಿದಿರಿಸುತ್ತಿದ್ದವು. ಹಳ್ಳಿಗಾಡಿನಿಂದ ಬಂದಿದ್ದ ನಮ್ಮಂತಹವರು ಕಷ್ಟಪಟ್ಟು ಅಭ್ಯಾಸನಿರತರಾಗಿರದಿದ್ದರೆ ತರಗತಿಗಳಲ್ಲಿ ತೇರ್ಗಡೆಯಾಗುವುದು ದುಸ್ತರವಾಗುತ್ತಿತ್ತು. ಮೊದಲ ವರ್ಷದ ಜೂನಿಯರ್ ಇಂಟರ್ ಪರೀಕ್ಷೆಯಲ್ಲಿ ತೇರ್ಗಡೆಯಾಗಿದ್ದಲ್ಲದೆ ಕೆಲವು ವಿಷಯಗಳಲ್ಲಿ ಉತ್ತಮ ಅಂಕಗಳನ್ನು ಗಳಿಸಲು ಸಾಧ್ಯವಾಗಿತ್ತು.

ಸೀನಿಯರ್ ಇಂಟರ್ ಮೀಡಿಯೇಟ್ ಪರೀಕ್ಷೆ ಇತರ ಎಲ್ಲಾ ಪರೀಕ್ಷೆಗಳಿಗಿಂತ ಅತ್ಯಂತ ಕಷ್ಟಕರವಾದುದೆಂಬ ಕುಖ್ಯಾತಿ ಆ ಕಾಲದಲ್ಲಿತ್ತು; ಪರೀಕ್ಷೆಗೆ ಕುಳಿತವರಲ್ಲಿ ಶೇಕಡ ೧೩-೧೫ರಷ್ಟು ವಿದ್ಯಾರ್ಥಿಗಳು ಮಾತ್ರ ಪಾಸಾಗುತ್ತಿದ್ದರು! ನಾವು ಆ ಪರೀಕ್ಷೆಗೆ ಕೂರುವ ಹಿಂದಿನ ವರ್ಷ (೧೯೪೯) ಆ ತರಗತಿಯಲ್ಲಿದ್ದ ೪೦-೫೦ ವಿದ್ಯಾರ್ಥಿಗಳಲ್ಲಿ ಯಾರೊಬ್ಬರೂ ತೇರ್ಗಡೆಯಾಗಿರಲಿಲ್ಲ! ಪ್ರತಿಯೊಬ್ಬರೂ ಒಂದಲ್ಲ ಒಂದು ವಿಷಯದಲ್ಲಿ ಅನುತ್ತೀರ್ಣರಾಗಿದ್ದು ತರಗತಿಯ ಒಟ್ಟಾರೆ ಫಲಿತಾಂಶ ಸೊನ್ನೆಯಾಗಿತ್ತು. ಬಹುಶಃ ಅದೇ ಕಾರಣದಿಂದಲೋ ಏನೋ ಮರು ವರ್ಷ ಕೆಲವು ಉಪನ್ಯಾಸಕರ ವರ್ಗಾವಣೆಯಾಗಿತ್ತು. ನಾವು ಸೀನಿಯರ್ ತರಗತಿಗೆ ಹಾಜರಾಗುತ್ತಿದ್ದಂತೆಯೇ ಹಿಂದಿನ ವರ್ಷದ ಫಲಿತಾಂಶ ಕೇಳಿ ಎದೆಗುಂದಿತು. ಕೆಲವು ಉಪನ್ಯಾಸಕರು ಹಿಂದಿನ ವರ್ಷದ ಕಳಪೆ ಫಲಿತಾಂಶವನ್ನು ಉಲ್ಲೇಖಿಸಿ ಪರೋಕ್ಷವಾಗಿ ನಮ್ಮನ್ನೂ ಮೂದಲಿಸುವ ಧಾಟಿಯಲ್ಲಿ ಮಾತಾಡುತ್ತಿದುದುಂಟು; ಮತ್ತೆ ಕೆಲವರು ಹಿಂದಿನ ವರ್ಷದ ನೆನಪನ್ನು ತೊಡೆದು ಹಾಕಿ ಪ್ರಸ್ತುತದ ತರಗತಿಯ ಫಲಿತಾಂಶವನ್ನು ಉತ್ತಮಗೊಳಿಸುವ ಪಣ ತೊಟ್ಟಂತಿದ್ದರು. ಅವರು ಕೆಲವು ರಜಾದಿನಗಳು ಹಾಗೂ ಭಾನುವಾರಗಳಲ್ಲಿ ವಿಶೇಷವಾಗಿ ಪ್ರವಚನಗಳನ್ನು ಜರುಗಿಸಿ ತುಂಬಾ ನಿಯತ್ತಿನಿಂದ ಶ್ರಮಿಸುತ್ತಿದ್ದರೆಂದೇ ಹೇಳಬೇಕು. ವಿದ್ಯಾರ್ಥಿಗಳೂ ಸಹ ಸ್ಪಂದಿಸಿ, ಹೆಚ್ಚಿನ ಶ್ರದ್ಧೆ ಯಿಂದ ಅಭ್ಯಾಸದಲ್ಲಿ ತೊಡಗುತ್ತಿದ್ದೆವು.

ನಮ್ಮ ವಿದ್ಯಾರ್ಥಿ ನಿಲಯದಲ್ಲಿ ತುಂಬಾ ಗಲಾಟೆಯ ವಾತಾವರಣವಿರುತ್ತಿದ್ದು ಏಕಾಗ್ರಚಿತ್ತತೆಯಿಂದ ಅಭ್ಯಾಸ ನಿರತರಾಗುವುದು ಕಷ್ಟವೆನಿಸಿತು. ಅದರಿಂದಾಗಿ ಶೀನಪ್ಪ ಮತ್ತು ನಾನು ನಿಲಯದ ಸಮೀಪದಲ್ಲೇ ಖಾಸಗಿ ಕೊಠಡಿಯೊಂದರಲ್ಲಿ ಬಾಡಿಗೆಗಿದ್ದುಕೊಂಡು, ಆ ವರ್ಷವೆಲ್ಲಾ ಅಲ್ಲೇ ಅಭ್ಯಾಸ ನಿರತರಾದೆವು. ಊಟೋಪಚಾರಗಳಿಗೆ ಮಾತ್ರ ನಿಲಯಕ್ಕೆ ಹೋಗುತ್ತಿದ್ದೆವು. ಈ ವರ್ಷವೂ (೧೯೫೦) ಸರಿಸುಮಾರು ಹಿಂದಿನ ವರ್ಷವಿದ್ದಷ್ಟೇ ಸಂಖ್ಯೆಯ ವಿದ್ಯಾರ್ಥಿಗಳು ಪರೀಕ್ಷೆಗೆ ಕುಳಿತಿದ್ದೆವು. ಅವರ ಪೈಕಿ ಕೇವಲ ಒಂಬತ್ತು ಜನ ಪಾಸಾಗಿದ್ದೆವು. ತೇರ್ಗಡೆಯಾಗುವುದಕ್ಕೆ ಕನಿಷ್ಠವಾದ ಶೇಕಡ ೩೫ರಷ್ಟು ಅಂಕಗಳನ್ನು ಗಳಿಸಿ ನಾನು ಸೋಲಿನ ದವಡೆಯಿಂದ ಪಾರಾಗಿದ್ದೆ! ನಮ್ಮ ವಿದ್ಯಾರ್ಥಿ ನಿಲಯದಿಂದ ಆ ವರ್ಷ ಪರೀಕ್ಷೆಗೆ ಕುಳಿತಿದ್ದ ೮-೧೦ ವಿದ್ಯಾರ್ಥಿಗಳ ಪೈಕಿ  ಕೇವಲ ಇಬ್ಬರು ಮಾತ್ರ ಪಾಸಾಗಿದ್ದೆವು; ಕಲಾ ವಿಷಯಗಳನ್ನು ಐಚ್ಛಿಕವಾಗಿ ಪಡೆದವರು ಇನ್ನೊಬ್ಬರಿದ್ದರು. ಶ್ರೀಮಂತ ಹಿನ್ನಲೆಯ ಅವರು ವರ್ಷ ವಿಡೀ ಖಾಸಗಿ ಪಾಠ ಹೇಳಿಸಿಕೊಂಡವರು. ಅಂದಿನ ಪರೀಕ್ಷೆಗೆ ಸರಿ ಸಮಾನವಾದ ಇಂದಿನ ಪದವಿಪೂರ್ವ ಪರೀಕ್ಷೆಗಳಲ್ಲಿ ಬಹುಪಾಲು ವಿದ್ಯಾರ್ಥಿಗಳು ಶೇಕಡ ೯೫ಕ್ಕಿಂತಲೂ ಹೆಚ್ಚು ಅಂಕಗಳನ್ನು ಗಳಿಸುವ ಪರಿಸ್ಥಿತಿಗೆ ಹೋಲಿಸಿದರೆ ನಮ್ಮ ಸಾಧನೆಗಳು ತೀರಾ ಕಳಪೆಯವೆನಿಸದಿರಲಾರದು. ಆದರೆ

ಇಂದಿನ ಬೋಧನಾ ರೀತಿ ನೀತಿಗಳು, ಮೌಲ್ಯ ಮಾಪನದ ವಿಧಾನಗಳಿಗೆ ಹೋಲಿಸಿದರೆ ಅದೇ ಹೆಚ್ಚಿನ ಮಟ್ಟದ್ದೆನ್ನಬಹುದು.

ಪರೀಕ್ಷೆಗಳು ಮುಗಿದ ತಕ್ಷಣದ ಸಮಯದಲ್ಲಿ ನಾವಿಬ್ಬರೂ ತೇರ್ಗಡೆಯಾಗುವ ಬಗೆಗೆ ದಟ್ಟ ಅನುಮಾನಗಳಿದ್ದವು. ಆದರಿಂದ ಫಲಿತಾಂಶ ಬಂದ ಮೇಲೆ ಯಾವುದಾದರೂ ಸರ್ಕಾರಿ ಕೆಲಸವನ್ನು ಹಿಡಿಯುವುದೆಂಬ ನಿರ್ಧಾರಕ್ಕೆ ಬಂದಿದ್ದೆವು. ಆ ಸಲುವಾಗಿ ಅರ್ಜಿ ಸಲ್ಲಿಸಲು ನಿಗದಿತವಾದ ನಮೂನೆ ಫಾರಂಗಳನ್ನು ಬೆಂಗಳೂರಿನಿಂದ ತರಿಸುವ ವಿರ್ಪಾಡು ಮಾಡಿದೆವು. ನಾನು ತೇರ್ಗಡೆಯಾದ್ದರಿಂದ ಅದನ್ನು ಎಂ. ಎಲ್. ಕೃಷ್ಣಪ್ಪ ಹೆಗ್ಗಡೆಯವರಿಗೆ ಕೊಟ್ಟಿದ್ದೆ. ಅದರಿಂದ ಅವರು ಶಾಲಾ ಮಾಸ್ತರಾಗಿ ನೇಮಕವಾದರು; ಹಾಗೂ ಪೂರ್ಣಾವಧಿ ಸರ್ಕಾರಿ ಶಾಲೆಗಳಲ್ಲಿ ಸೇವೆ ಸಲ್ಲಿಸಿ ನಿವೃತ್ತರಾಗಿದ್ದಾರೆ. ಶೀನಪ್ಪನಿಗೆ ಸಬ್‌ರಿಜಿಸ್ಟ್ರಾರ್ ಕಛೇರಿಯಲ್ಲಿ ಕೆಲಸ ದೊರಕಿತು. ಅವನು ಮುಂದೆ ಸಬ್‌ರಿಜಿಸ್ಟ್ರಾರ್ ಆಗಿ ನಿವೃತ್ತನಾಗಿದ್ದಾನೆ. ನಮ್ಮ ಹಿಂದಿನ ಗೆಳೆತನ ಇಂದಿಗೂ ಮುಂದುವರಿದುಕೊಂಡು ಬಂದಿದೆ.

ಇಂಟರ್ ಮೀಡಿಯಟ್ ಪರೀಕ್ಷೆಯಲ್ಲಿ ಮೊದಲ ಪ್ರಯತ್ನದಲ್ಲೇ ತೇರ್ಗಡೆಯಾಗುವುದು ಆಗ ಸ್ವಲ್ಪ ಅಪರೂಪದ ಘಟನೆಯೆ. ಅಷ್ಟೊಂದು ಶ್ರಮವಹಿಸಿ ತೇರ್ಗಡೆಯಾದರೂ ಸರ್ಕಾರಿ ಕೆಲಸಕ್ಕೆ ಸೇರಲು ಅದು ಎಸ್.ಎಸ್.ಎಲ್.ಸಿ.,ಗಿಂತ ಹೆಚ್ಚಿನ ಅರ್ಹತೆಯಾಗಿರಲಿಲ್ಲ. ಆದರೆ ಬಿ.ಎ., ಬಿ.ಎಸ್ಸಿ; ಬಿ.ಎಸ್ಸಿ.(ಅಗ್ರಿ), ಬಿ.ಇ., ಎಂ.ಬಿ.ಬಿ.ಎಸ್.,ಗಳಂಥ ಪದವಿ ತರಗತಿಗಳಿಗೆ ಸೇರಲು ಅದು ಅರ್ಹತೆಯಾಗಿತ್ತು. ಇಂತಹ ಪದವಿ ನೀಡುವ ಕಾಲೇಜು ಬೆಂಗಳೂರು, ಮೈಸೂರುಗಳಲ್ಲಿ ಮಾತ್ರ ಇದ್ದವು. ಶಿವಮೊಗ್ಗಾ ಮಟ್ಟದಲ್ಲೇ ವಿದ್ಯಾಭ್ಯಾಸ ಮಾಡುವುದು ಕಷ್ಟಕರವಾಗಿದ್ದ ನನಗೆ ಅಂತಹ ದೂರದ ಊರುಗಳಲ್ಲಿರುವ ಮಹಾವಿದ್ಯಾಲಯಗಳಲ್ಲಿ ಪದವಿ ಗಳಿಕೆಗಾಗಿ ಸೇರುವುದು ಇನ್ನೂ ಕಷ್ಟಸಾಧ್ಯವೇ ಸರಿ. ಕುಟುಂಬದಲ್ಲಿನ ಆರ್ಥಿಕ ಪರಿಸ್ಥಿತಿಯೂ ಅಷ್ಟೇನೂ ಸುಧಾರಿಸಿರಲಿಲ್ಲ. ಯಡೂರು ಸಾಹುಕಾರರಲ್ಲಿದ್ದ ಸಾಲವನ್ನು ತೀರಿಸುವುದಿರಲಿ, ಬಡ್ಡಿಯನ್ನು ಪೂರ್ತಿಯಾಗಿ ಕೊಡಲು ಸಾಧ್ಯವಾಗುತ್ತಿರಲಿಲ್ಲ. ಆ ಬಗೆಗೆ ಸಾಹುಕಾರರು ಅವರಲ್ಲಿದ್ದ ಸಾಲವನ್ನು ಒಂದೇ ಸಾರಿ ತೀರಿಸುವ ಬಗೆಗೆ ಸಲಹೆ ಮಾಡಿದ್ದು ಹಾಗೂ ಅದಕ್ಕಾಗಿ ಮೇಗರವಳ್ಳಿಯ ಸಂ. ಲಿಂಗಪ್ಪ ಹೆಗ್ಗಡೆಯವರಿಂದ ಹಣ ಪಡೆದು ಸಾಲವನ್ನು ಕೆಲವು ಕಂತುಗಳಲ್ಲಿ ತೀರಿಸುವ ವ್ಯವಸ್ಥೆ ಮಾಡಿದ ವಿಷಯ ಈ ಹಿಂದೆ ಪ್ರಸ್ತಾಪ ಮಾಡಲಾಗಿದೆ. ಅದರಿಂದ ಪದವೀಧರನಾಗಲು ಮೈಸೂರು ಬೆಂಗಳೂರುಗಳ ಕಾಲೇಜುಗಳಿಗೆ ಅರ್ಜಿ ಹಾಕುವ ಮನಸ್ಸಿರಲಿಲ್ಲ. ಆದರೂ ಸ್ನೇಹಿತರು ಮತ್ತು ಹಿತೈಷಿಗಳ ಒತ್ತಾಯಕ್ಕೆ ಮಣಿದು ಕೆಲವು ಕಾಲೇಜುಗಳ ಅರ್ಜಿ ಫಾರಂಗಳಿಗಾಗಿ ಪತ್ರ ವ್ಯವಹಾರ ನಡೆಸಿದ್ದೆ.

ಶಿವಮೊಗ್ಗಾ ಒಕ್ಕಲಿಗರ ವಿದ್ಯಾರ್ಥಿ ನಿಲಯದ ಮ್ಯಾನೇಜರ್ ಆಗಿದ್ದ ಶಾಂತವೇರಿ ಗೋಪಾಲಗೌಡರ ಸಂಪರ್ಕದ ಬಗೆಗೆ ಒಂದೆರಡು ಮಾತುಗಳಲ್ಲಿ ಹೇಳಬಹುದೆನಿಸುತ್ತದೆ. ಕೆಲವು ವರ್ಷಗಳ ಹಿಂದೆ ಇಂಟರ್‌ಮೀಡಿಯೇಟ್‌ನಲ್ಲಿ ಅನುತ್ತೀರ್ಣರಾಗಿದ್ದ ಅವರು ವಿದ್ಯಾಭ್ಯಾಸವನ್ನು ತ್ಯಜಿಸಿ, ರಾಜಕೀಯಕ್ಕೆ ಇಳಿದಿದ್ದರು. ಮೊದಲ ವರ್ಷ ನಿಲಯದಲ್ಲಿ ನಾವಿದ್ದ ಕೊಠಡಿಗೆ ಸೇರಿಕೊಂಡಂತಿರುತ್ತಿದ್ದ ಪುಟ್ಟ ಕೊಠಡಿ ಅವರ ವಾಸದ ತಾಣ ಹಾಗೂ ನಿಲಯದ ಕಛೇರಿ ಕೂಡ ಆಗಿತ್ತು. ಗಂಭೀರ ಮುದ್ರೆಯ ವದನ ಹಾಗೂ ಬಹುಪಾಲು ಮೌನವಾಗಿಯೇ ಇರುತ್ತಿದ್ದ ಅವರನ್ನು ಎದುರಿಸಿ ಮಾತನಾಡುವುದಕ್ಕೆ ನಾವೆಲ್ಲಾ ಸಂಕೋಚ ಪಟ್ಟುಕೊಳ್ಳುತ್ತಿದ್ದೆವು. ಸದಾ ರಾಜಕೀಯ, ಸಾಮಾಜಿಕ ವಿಷಯುಗಳಿಗೆ ಸಂಬಂಧಿಸಿದ ಗ್ರಂಥಗಳ ಅಭ್ಯಾಸದಲ್ಲಿ

ತೊಡಗಿರುವುದನ್ನು ನೋಡಬಹುದಾಗಿತ್ತು. ನಿಲಯದಲ್ಲಿ ಎರಡು ವರ್ಷಗಳು ಒಂದೊಂದು ತಿಂಗಳು ನಿಲಯದ ಊಟೋಪಚಾರಗಳ ಕಾರ್ಯದ ಪ್ರಿಫೆಕ್ಟ್ ಆಗಿ ಅವರನ್ನು ಹತ್ತಿರದಿಂದ ಗಮನಿಸುವ ಅವಕಾಶ ಒದಗಿ ಬಂದಿತ್ತು. ಒಂದು ತಿಂಗಳ ಲೆಕ್ಕ ಒಪ್ಪಿಸುವಾಗ ಒಂದು ಬಿಲ್‌ನ್ನು ತಿದ್ದಿ ಬರೆದದ್ದು ಅನುಮಾನಕ್ಕೆಡೆ ಮಾಡಿಕೊಟ್ಟಿರಬೇಕು. "ಏನ್ರೀ ನಿಮಗೆ ಹೇಗೆ ಕದಿಯ ಬೇಕೆಂಬುದೂ ಗೊತ್ತಿಲ್ಲವಲ್ರೀ?" ಎಂದು ವ್ಯಂಗ್ಯವಾಗಿ ಹೇಳಿದರು. ತರಕಾರಿ ಮಾರುವ ಹೆಂಗಸಿನ ಮೊಂಡುತನದಿಂದ ತಿದ್ದಿ ಮತ್ತೆ ಬರೆದದ್ದೆಂದು ವಿವರಿಸಿದೆ. ಮತ್ತೆ ಮುಂದುವರಿದು "ಹಾಗಲ್ಲ, ನಾ ಹೇಳಿದ್ದು, ಕದಿಯುವ ಉದ್ದೇಶವಿರುವವರು ಆ ಬಿಲ್‌ನ್ನು ಹರಿದು ಹಾಕಿ ಬೇರೆಯೇ ಬರೆಯುತ್ತಾರೆ, ಅದೂ ನಿಮಗೆ ಗೊತ್ತಿಲ್ಲ!" ಎಂದು ಮುಗುಳ್ನಕ್ಕು ಸಂತೈಸಿದ್ದು, ಈಗಲೂ ನೆನಪಿದೆ. ಆ ಸಮಯದಲ್ಲಿ ಗಳಿಸಿದ ಆಳವಾದ ಜ್ಞಾನವೇ ಅವರು ಮುಂದೆ ದಕ್ಷ ಹಾಗೂ ಪ್ರಾಮಾಣಿಕ ರಾಜಕಾರಣಿಯಾಗಲು ಸಾಧ್ಯವಾಯಿತೆನಿಸುತ್ತದೆ.

---



ಶಿವಮೊಗ್ಗ - ಸಮಾರಂಭವೊಂದರಲ್ಲಿ

# ೫. ಅನಿರೀಕ್ಷಿತ ತಿರುವು

ಬೆಂಗಳೂರು, ಮೈಸೂರು ಕಾಲೇಜುಗಳಿಂದ ಬಿ.ಎ., ಬಿ.ಎಸ್ಸಿ, ಬಿ.ಎಸ್ಸಿ(ಅಗ್ರಿ)., ಮೊದಲಾದ ಪದವಿಗಳ ಸಲುವಾಗಿ ಮುಂದಿನ ಕೆಲವೇ ದಿನಗಳಲ್ಲಿ ಅರ್ಜಿಫಾರಂಗಳೂ ಬಂದವು. ಅವುಗಳನ್ನು ಭರ್ತಿ ಮಾಡಿ, ಅಂಕಪಟ್ಟಿಗಳನ್ನು ಲಗತ್ತಿಸಿ ಕಳುಹಿಸಿಕೊಡುವ ಪ್ರಯತ್ನದಲ್ಲಿದ್ದೆ. ಅಂಕ ಪಟ್ಟಿಗಳು ನಾನು ತಿಳಿಸಿದ್ದ ಮೇಗರವಳ್ಳಿಯ ವಿಳಾಸಕ್ಕೆ ತಲುಪುವುದು ನಿರೀಕ್ಷಿಸಿದ್ದಕ್ಕಿಂತ ವಿಳಂಬವಾದ್ದರಿಂದ ಶಿವಮೊಗ್ಗಾಕ್ಕೇ ನೇರವಾಗಿ ಹೋದೆ. ಆ ಸಮಯದಲ್ಲೇ ನನಗೆ ಎರಡು ವರ್ಷಗಳ ಕಾಲೇಜು ಕಲಿಕೆಗೆ ವಿದ್ಯಾರ್ಥಿ ವೇತನ ಕೊಡಿಸಿ ಸಹಾಯ ಮಾಡಿದ ಕಡಿದಾಳ್ ಮಂಜಪ್ಪನವರಿಗೆ ಕೃತಜ್ಞತೆ ಸಲ್ಲಿಸುವುದಕ್ಕಾಗಿ ಅವರನ್ನು ಭೇಟಿ ಮಾಡಿದೆ. ಮೊದಲನೆಯ ಪ್ರಯತ್ನದಲ್ಲಿ ಇಂಟರ್‌ಮೀಡಿಯೇಟ್ ಪರೀಕ್ಷೆಯಲ್ಲಿ ತೇರ್ಗಡೆಯಾದ ವಿಷಯ ತಿಳಿದು ಹರ್ಷಿತರಾದಂತೆ ಕಂಡರು; ಹಾಗೂ ಮುಂದೆ ನಾನೇನು ಮಾಡಬೇಕೆಂದಿದ್ದು ಕೊಂಡಿದ್ದೇನೆಂದು ವಿಚಾರಿಸಿದರು. ಬಿ.ಎ.; ಬಿ.ಎಸ್ಸಿ., ಮತ್ತು ಬಿ.ಎಸ್ಸಿ., ಎಜಿ(ಅಗ್ರಿ)., ಪದವಿಗಳ ಸಲುವಾಗಿ ಅರ್ಜಿ ಫಾರಂಗಳನ್ನು ತರಿಸಿ, ಅವುಗಳಿಗೆ ಪ್ರಯತ್ನಿಸುತ್ತಿರುವುದಾಗಿ ಹೇಳಿದೆ. ಈಗವರ ಮುಖದಲ್ಲಿ ಒಂದು ಬಗೆಯ ತಾತ್ಸಾರದ ಛಾಯೆ ಮೂಡಿದಂತಾಯಿತು. "ಓಹೋ, ಇಷ್ಟೆಲ್ಲಾ ಮಾಡಿದ ಮೇಲೆ ಮತ್ತೆ ಊರಿಗೆ ಹೋಗಿ ಗದ್ದೆ ಉಳುವುದರಲ್ಲಿ ತೊಡಗಿಸಿಕೊಳ್ಳುತ್ತೀಯೇನೋ?" ಎಂದು ನಗುತ್ತಾ, ಮತ್ತಷ್ಟು ವಿವರಗಳನ್ನು ಕೇಳಿದರು. ಇಂಟರ್‌ಮೀಡಿಯೇಟ್‌ನಲ್ಲಿ ನಾನು ಆಯ್ಕೆ ಮಾಡಿಕೊಂಡಿದ್ದ ಐಚ್ಛಿಕ ವಿಷಯಗಳ ಬಗೆಗೆ ವಿಚಾರಿಸಿದರು. ಅವು ಸಿ.ಬಿ.ಜಡ್. ವಿಷಯ ಗಳೆಂದು ತಿಳಿಸಿದಾಗ, ಮತ್ತಷ್ಟು ಗಂಭೀರರಾದರು. ಹಾಗಿದ್ದ ಮೇಲೆ ಮೆಡಿಕಲ್ ಕಾಲೇಜಿಗೆ ಏಕೆ ಅರ್ಜಿ ಹಾಕಿಕೊಳ್ಳುತ್ತಿಲ್ಲವೆಂದು ಪ್ರಶ್ನಿಸಿದರು. ಅಂತಹ ದುಬಾರಿ ವಿದ್ಯಾಭ್ಯಾಸವನ್ನು ಕೈಗೊಳ್ಳಲು ನನ್ನ ಆರ್ಥಿಕ ಪರಿಸ್ಥಿತಿ ಅಷ್ಟೇನೂ ಉತ್ತಮವಾಗಿಲ್ಲವಾದುದರಿಂದ ನನಗದು ಸಾಧ್ಯವಾಗದೆಂದು ಅರುಹಿದೆ. ಆ ಸಮಯದಲ್ಲಿ ಅವರೊಡನೆ ಮಾತಾಡಿಕೊಂಡಿದ್ದವರೊಬ್ಬರ ಕಡೆಗೆ ತಿರುಗಿ, "ನೋಡ್ರೀ, ಭಟ್ಟರೆ, ನಮ್ಮವರ ಪೈಕಿ ಇಂಟರ್‌ಮೀಡಿಯೇಟನ್ನು ಮೊದಲ ಪ್ರಯತ್ನದಲ್ಲಿ ತೇರ್ಗಡೆ ಯಾಗುವವರೇ ಅಪರೂಪ; ಆದರೆ ಮೆಡಿಕಲ್ ವಿದ್ಯಾಭ್ಯಾಸದ ಸಾಧ್ಯತೆ ಇರುವವನೊಬ್ಬ ವ್ಯವಸಾಯ ಕಾಲೇಜಿನಲ್ಲಿ ಪದವಿ ಪಡೆದುಕೊಂಡು, ಮತ್ತೆ ಗದ್ದೆ ಉಳುವುದಕ್ಕೆ ಊರಿಗೆ ಹೋಗುತ್ತಾನಂತೆ!" ಎಂದು ಹೇಳಿ ತಮಗಾದ ಆಶ್ಚರ್ಯ ವ್ಯಕ್ತಪಡಿಸಿದರು. (ಆ ಕಾಲದಲ್ಲಿ ಶಿವಮೊಗ್ಗಾದ ಹೆಸರಾಂತ ಸೋಡಾ ಫ್ಯಾಕ್ಟರಿಯ ಮಾಲೀಕ ಪಾಂಡುರಂಗ ಭಟ್ಟರು ಆಗ ಅಲ್ಲಿದ್ದವರೆಂಬ ನೆನಪು) ಮತ್ತೆ ನನ್ನ ಕಡೆ ತಿರುಗಿ "ಅವೆಲ್ಲಾ ಸಬೂಬು ಈಗ ಬೇಡ; ಮೊದಲು ಮೆಡಿಕಲ್ ಕಾಲೇಜಿಗೆ ಅರ್ಜಿ ಹಾಕು; ಸೀಟು ಕೊಡಿಸುವ ಜವಾಬ್ದಾರಿ ನನಗಿರಲಿ; ಉಳಿದಿದ್ದನ್ನೆಲ್ಲಾ ಆಮೇಲೆ ನೋಡೋಣ" ಎಂದು ಬಿಟ್ಟರು. ಮೆಡಿಕಲ್ ಕಾಲೇಜಿನ ಅರ್ಜಿಫಾರಂಗಳನ್ನು ನಾನು ತರಿಸಿಲ್ಲ ಹಾಗೂ ಅದಕ್ಕೆ ಕೇವಲ ೪-೫ ದಿನಗಳ ಗಡುವು ಇದ್ದಂತಿದೆ ಎಂದು ನನ್ನ ಅಸಹಾಯಕತೆಯನ್ನು ತೋಡಿಕೊಂಡೆ. ಇದು ಅವರನ್ನು ಮತ್ತಷ್ಟು ರೇಗಿಸಿರಬೇಕು. "ನೀನು ಅದನ್ನೆಲ್ಲಾ ನನ್ನೆದುರು ಹೇಳಿಕೊಳ್ಳುತ್ತಾ ನಿಲ್ಲಬೇಡ; ಹೇಗಾದರೂ ಮಾಡಿ ಅರ್ಜಿ ಹಾಕಿ, ಆನಂತರ

ಮತ್ತೆ ನನ್ನನ್ನು ನೋಡು" ಎಂದು ಸ್ವಲ್ಪ ಗಡುಸಾಗಿಯೇ ಹೇಳಿ, ಭಟ್ಟರೊಡನೆ ತಮ್ಮ ಮಾತುಕತೆಗಳನ್ನು ಮುಂದುವರಿಸಿದರು.

ಆಗಿನ ಸನ್ನ ಪರಿಸ್ಥಿತಿಯನ್ನು ವಿವರಿಸುವುದು ಕಷ್ಟವೆನಿಸುತ್ತಿದೆ. ಭೂಮಿಯೇ ಬಾಯಿ ಬಿಟ್ಟು ನನ್ನನ್ನು ನುಂಗಬಾರದೇಕೆನಿಸಿತು. ಅವರನ್ನು ನೋಡಲು ಹೋದದ್ದೇ ತಪ್ಪೆನಿಸಿತು. ಇನ್ನುಳಿದ ಗಡುವಿನಲ್ಲಿ ಮೆಡಿಕಲ್ ಕಾಲೇಜಿನಿಂದ ಫಾರಂಗಳನ್ನು ತರಿಸಿ, ಅರ್ಜಿ ಹಾಕುವುದು ಅಸಾಧ್ಯವೆನಿಸಿತು. ಮುಂದೇನೂ ತೋಚದೆ ಅಂಕಪಟ್ಟಿಗಳನ್ನು ಪಡೆಯಲು ಕಾಲೇಜಿಗೆ ಹೋದೆ. ಅವು ಬಂದಿದ್ದು, ವಿತರಿಸುವ ಕಾರ್ಯ ಬಿರುಸಿನಿಂದ ಜರುಗುತ್ತಿತ್ತು. ನನ್ನ ಸರದಿಗಾಗಿ ಹಜಾರದ ಮೂಲೆಯೊಂದರಲ್ಲಿ ನಿಂತಿದ್ದೆ; ಅದೇ ರೀತಿಯಲ್ಲಿ ಕಾಯುತ್ತಿದ್ದ ಇನ್ನೊಬ್ಬ ವಿದ್ಯಾರ್ಥಿ ಲೋಕಾಭಿರಾಮವಾಗಿ ನನ್ನ ಬಗೆಗೆ ವಿಚಾರಿಸಿ, ಮಾತಿಗೆಳೆದ. ದೊಡ್ಡ ಬ್ರಾಹ್ಮಣ ಕೇರಿಯ ಅವನು ಪಿ.ಸಿ.ಎಂ. ವಿಷಯಗಳನ್ನು ಐಚ್ಛಿಕವಾಗಿ ಅಭ್ಯಾಸ ಮಾಡಿ ಮೊದಲ ದರ್ಜೆಯಲ್ಲಿ ತೇರ್ಗಡೆಯಾದವ. ಇಂಜಿನಿಯರಿಂಗ್ ಮತ್ತು ಮೆಡಿಕಲ್ ಕಾಲೇಜುಗಳಿಂದಲೂ ಅರ್ಜಿ ಫಾರಂಗಳನ್ನು ತರಿಸಿಕೊಂಡಿದ್ದ. ಸನ್ನ ಪ್ರವರಗಳನ್ನು ಕೇಳಿದ ನಂತರ ಮೆಡಿಕಲ್ ಕಾಲೇಜಿನ ಫಾರಂ ತರಿಸಿರುವನಾದರೂ ಅದಕ್ಕೆ ಸೇರುವ ಅಭಿಲಾಷೆ ಅವನಿಗಿಲ್ಲ; ಇಂಜಿನಿಯರಿಂಗ್‌ಗೆ ಮಾತ್ರ ಕಳುಹಿಸುವುದಾಗಿ ಹೇಳಿದ. ಅದರಿಂದ ಮೆಡಿಕಲ್‌ನ ಫಾರಂನ್ನು ನನಗೆ ಕೊಡಲು ತಯಾರಿರುವುದಾಗಿ ತಿಳಿಸಿದ; ಅವುಗಳನ್ನು ಅದಾಗಲೇ ಭರ್ತಿ ಮಾಡಿರುವುದಾಗಿ ಹೇಳಿ ಅದರಿಂದ ನನಗೆಷ್ಟು ಪ್ರಯೋಜನಕಾರಿಯೆಂಬುದರ ಬಗೆಗೆ ಅನುಮಾನ ವ್ಯಕ್ತಪಡಿಸಿದ. ಏನಾದರಾಗಲೆಂದು ಅವನ ಜೊತೆ ಮನೆಗೆ ಹೋಗಿ ಫಾರಂ ಪಡೆದುಕೊಳ್ಳಲು ಒಪ್ಪಿದೆ. ಸರದಿ ಬಂದಾಗ, ವಿಚಾರಿಸಿದಾಗ ನನ್ನ ಅಂಕಪಟ್ಟಿಯನ್ನು ಮೇಗರವಳ್ಳಿಯ ವಿಳಾಸಕ್ಕೆ ಅಂಚೆಯಲ್ಲಿ ಕಳುಹಿಸಿರುವುದಾಗಿ ತಿಳಿದು ಬಂದಿತು. ಆ ವಿದ್ಯಾರ್ಥಿ ಜೊತೆ ಮನೆಗೆ ಹೋಗಿ ಫಾರಂನ್ನು ಪಡೆದುಕೊಂಡೆ. ಅದರ ಕಾಲಂಗಳೆಲ್ಲಾ ಭರ್ತಿಯಾಗಿದ್ದರ ಜೊತೆಗೆ ಅದರಲ್ಲಿನ ಇನ್ನೊಂದು ವಿಷಯ ನನ್ನನ್ನು ಮತ್ತಷ್ಟು ಪೇಚಿಗೆ ಸಿಲುಕಿಸಿತು, ಫಾರಂನ ಕೊನೆ ಭಾಗದಲ್ಲಿ- ಅಚ್ಚು ಮಾಡಿದ ಫಾರಂಗಳನ್ನಲ್ಲದೆ, ಕೈಬರಹ/ಟೈಪು ಮಾಡಿದ ಫಾರಂಗಳನ್ನು ಸ್ವೀಕರಿಸುವುದಿಲ್ಲ-ವೆಂಬ ಷರಾ ಬರೆದಿತ್ತು! ಅದೊಂದು ಬಿಡಿಸಲಾರದ ಸಮಸ್ಯೆ ಎಂದೆನಿಸಿದರೂ ಕಡಿದಾಳ್ ಮಂಜಪ್ಪನವರ ಕ್ರೋಧವನ್ನು ಎದುರಿಸುವ ಸಲುವಾಗಿ, ಟೈಪು ಮಾಡಿಯೇ ಕಳುಹಿಸುವ ನಿರ್ಧಾರಕ್ಕೆ ಬರುವುದು ಅನಿವಾರ್ಯವಾಯಿತು.

ಆದರೆ ಮೀನ ಮೇಷ ಮಾಡಲು ಸಮಯವೂ ಇರಲಿಲ್ಲ. ಮುಂದಿನ ಬಸ್ಸಿಗೇ ಮೇಗರವಳ್ಳಿಗೆ ಹೊರಟೆ; ಅಷ್ಟರಲ್ಲೇ ಸಾಯಂಕಾಲವಾಗುತ್ತಿದ್ದು ಅಂಚೆಕಛೇರಿ ಮುಚ್ಚಿಯಾಗಿತ್ತು. ಪೋಸ್ಟ್‌ಮಾಸ್ಟರ್ ಕೃಷ್ಣಸ್ವಾಮಿಯವರು, ಹಿಂದಿನಿಂದಲೂ ಪರಿಚಯವಿದ್ದವರಾಗಿ, ಅವರೊಡನೆ ನನ್ನ ಪೇಚಿನ ಪರಿಸ್ಥಿತಿಯನ್ನು ವಿವರಿಸಿದೆ. ಅವರಿಗೆ ನನ್ನ ಮೇಲೆ ಅನುಕಂಪ ಉಂಟಾಗಿರಬೇಕು. ಕಛೇರಿಯ ಬಾಗಿಲು ತೆರೆದು ನನ್ನ ವಿಳಾಸದ ಲಕೋಟೆಯನ್ನು ಕೊಟ್ಟು, ಒಳ್ಳೆಯದಾಗಲೆಂದು ಹರಸಿ ಬೀಳ್ಕೊಟ್ಟರು. ಇನ್ನು, ಫಾರಂನ್ನು ಟೈಪು ಮಾಡುವ ಸಮಸ್ಯೆ ಎದುರಿಸುವುದು. ಆಗ ಎಲ್ಲೆಂದರಲ್ಲಿ ಟೈಪು ಮಾಡುವ ಸೌಲಭ್ಯಗಳಿರಲಿಲ್ಲ. ತೀರ್ಥಹಳ್ಳಿ ಹೈಸ್ಕೂಲ್‌ನಲ್ಲಿ ಅಂತಹ ಸೌಲಭ್ಯವಿದ್ದುದರ ನೆನಪಿತ್ತು. ಆ ಸಮಯದಲ್ಲೇ ತೀರ್ಥಹಳ್ಳಿ ಕಡೆಯ ಬಸ್ಸೊಂದಿದ್ದು, ಅದರಲ್ಲಿ ಅಲ್ಲಿಗೆ ಧಾವಿಸಿದೆ. ಹೈಸ್ಕೂಲು ತಲುಪುವಷ್ಟರಲ್ಲೇ ಸಂಜೆ ಆರು ಗಂಟೆಯಾಗುತ್ತಿದ್ದು, ಟೈಪಿಸ್ಟರು ಕೆಲಸ ಮುಗಿಸಿ ಹೊರಡುವುದರಲ್ಲಿದ್ದರು. ಆ ದಿನ ಸ್ವಲ್ಪ ಹೆಚ್ಚುವರಿ ಕೆಲಸ ಮುಗಿಸಬೇಕಾದ್ದರಿಂದ ಅವರು ಹೊರಡುವುದು ತಡವಾಗಿತ್ತಂತೆ! ಎರಡು ವರ್ಷಗಳ ಹಿಂದೆ ಅಲ್ಲಿಯ ವಿದ್ಯಾರ್ಥಿ

ಯಾಗಿದ್ದ ನನ್ನ ಪರಿಚಯವಿದ್ದ ಅವರು, ಫಾರಂ ಮತ್ತು ಅಂಕಪಟ್ಟಿಗಳನ್ನು ಟೈಪು ಮಾಡಲು ಸಹಕರಿಸಿದರು. ಅದೆಲ್ಲಾ ಮುಗಿಯುವಷ್ಟರಲ್ಲೇ ಕತ್ತಲಾಯಿತು. ಅವುಗಳಿಗೆ ನನ್ನ ಪೋಷಕರ ರುಜು ಸಹಾ ಹಾಕಿಸಬೇಕಾಗಿತ್ತು. ಆ ರಾತ್ರಿ ತೀರ್ಥಹಳ್ಳಿಯಲ್ಲೇ ತಂಗಿದ್ದು ಮರುದಿನ ಬೆಳಿಗ್ಗೆ ಊರಿಗೆ ಹೋದೆ. ಫಾರಂನ್ನು ಭರ್ತಿ ಮಾಡಿ, ಚಿಕ್ಕಪ್ಪ ಮಂಜಪ್ಪಗೌಡರ ಹೆಬ್ಬೆಟ್ಟಿನ ರುಜು ಹಾಕಿಸಿದೆ. ಆ ದಿನವೇ ಮೇಗರವಳ್ಳಿಗೆ ಧಾವಿಸಿ ಅವನ್ನೆಲ್ಲಾ ಮೈಸೂರು ಮೆಡಿಕಲ್ ಕಾಲೇಜಿನ ವಿಳಾಸಕ್ಕೆ ಬರೆದು ಅಂಚೆಪೆಟ್ಟಿಗೆಗೆ ಹಾಕಿದೆ!

ಮರುದಿನ ಮನೆಗೆ ಹಿಂದಿರುಗಿದೆ. ಕಳೆದ ಎರಡು - ಮೂರು ದಿನಗಳಿಂದ ಶಿವಮೊಗ್ಗ, ತೀರ್ಥಹಳ್ಳಿ, ಮೇಗರವಳ್ಳಿಗಳಲ್ಲಿನಾನು ಮಾಡಿದ ಕಾರ್ಯಗಳ ವಿವರ ನೀಡಿದೆ. ಹಾಗೂ ಅದು ಫಲಕಾರಿಯಾಗಿ ಮೆಡಿಕಲ್ ಕಾಲೇಜಿನಲ್ಲಿ ಪ್ರವೇಶ ದೊರೆತರೆ ಮುಂದಾಗಬಹುದಾದ ಬೆಳವಣಿಗೆಗಳ ಸಂಭವನೀಯತೆಗಳ ಬಗೆಗೆ ಸೂಕ್ಷ್ಮವಾಗಿ ವಿವರಿಸಿದೆ. ಮೆಡಿಕಲ್ ಕಾಲೇಜು ಸೇರಿದರೆ ನಾನೊಬ್ಬ ಡಾಕ್ಟರಾಗುವ ಅವಕಾಶ ಉಂಟಾಗುತ್ತದೆಂಬುದು ಎಲ್ಲರಿಗೂ ತಿಳಿಯು ವಂತಹದ್ದೆ. ಆದರೆ ಅಂತಹ ಒಂದು ವಿದ್ಯಾಭ್ಯಾಸಕ್ಕೆ ತಗಲುವ ಹಣಕಾಸಿನ ವೆಚ್ಚ, ಹಿಡಿಯುವ ಅವಧಿಗಳ ಬಗೆಗೆ ಸ್ಪಷ್ಟ ಚಿತ್ರಣ ಎಲ್ಲರಿಗೂ ಇದ್ದಂತಿರಲಿಲ್ಲ. ಆದರೆ ಒಂದಂತೂ ಎಲ್ಲರಿಗೂ ಸ್ಪಷ್ಟವಾದಂತಿತ್ತು. ಅದೆಂದರೆ ಅದಕ್ಕೆ ಬಹಳಷ್ಟು ಹಣಕಾಸನ್ನು ಕುಟುಂಬದಿಂದ ಒದಗಿಸ ಬೇಕಾಗುತ್ತದೆ; ಅಂತಹ ಒಂದು ಸಮಸ್ಯೆಯ ಭಾರವನ್ನು ಹೊರುವುದಕ್ಕೆ ಎಲ್ಲರೂ ಒಗ್ಗಟ್ಟಿನಿಂದ ಭರಿಸಲು ಆಗಲಾರದೆಂಬುದರ ಅರಿವು ಉಂಟಾಗತೊಡಗಿತ್ತು. ನನ್ನ ಖಾಸಾ ಚಿಕ್ಕಪ್ಪಂದಿರಿಗಂತೂ ಹಿಂದಿಗಿಂತ ಹೆಚ್ಚಿನ ಸಂದಿಗ್ಧತೆಯಲ್ಲಿರುವಂತೆ ಭಾಸವಾಗುತ್ತಿತ್ತು. ಅವ್ವನಿಗೆ ಆಕಾಶವೇ ತಲೆ ಮೇಲೆ ಬಿದ್ದಂತಾಗಿರಬೇಕು, ಶಿವಮೊಗ್ಗೆಯ ನಂತರವಾದರೂ ನನ್ನ ಓದು ಮುಗಿಯುತ್ತದೆಂಬ ಅವಳ ಬಹಳ ಕಾಲದ ನಿರೀಕ್ಷೆ ಹುಸಿಯಾಗಿತ್ತು. ಮಗ ಮುಂದೊಂದು ದಿನ ಡಾಕ್ಟರಾಗುತ್ತಾನೆಂಬ ಸಂತೋಷ, ಸಂತೃಪ್ತಿಯ ಭಾವನೆಗೆ ಬದಲಾಗಿ ಸದಾ ಯೋಚನಾಕ್ರಾಂತಳಾಗುವ ಅವಳ ಜಾಯಮಾನಕ್ಕೆ ಮತ್ತಷ್ಟು ಇಂಬು ದೊರೆತಂತಾಯಿತು. ಇನ್ನುಳಿದವರು ಈ ದಿಸೆಯಲ್ಲಿ ಬಹಿರಂಗವಾಗಿ ಏನೂ ವ್ಯಕ್ತಪಡಿಸದಿದ್ದರೂ, ಒಳಗೊಳಗೆ ಮುಂದಿನ ಆಗುಹೋಗುಗಳ ಬಗೆಗೆ ಚರ್ಚೆ ನಡೆಸುತ್ತಿದ್ದರು. ಈ ನಡುವೆ ಒಂದು ಆಶಾಭಾವನೆಯ ಹೊಂಗಿರಣವೂ ಇಲ್ಲದಿರಲಿಲ್ಲ. ಮೊದಲಿನಿಂದಲೂ ನನ್ನ ವಿದ್ಯಾಭ್ಯಾಸದ ಸಾಧನೆಗಳ ಬಗೆಗೆ ತುಂಬಾ ಅಭಿಮಾನವಿಟ್ಟು ಕೊಂಡಿರುತ್ತಿದ್ದ ಬಿಳಿ ಅಣ್ಣಯ್ಯ (ಸಣ್ಣ ಶಿದ್ದಪ್ಪಗೌಡರು) ಮಾತ್ರ ಈ ಬೆಳವಣಿಗೆಯ ಬಗೆಗೆ ಹೆಮ್ಮೆಪಡುವಂತಿದ್ದರೂ, ಅವರಾಗಿ ಇತರರೊಡನೆ ನೇರವಾಗಿ ಪ್ರಸ್ತಾಪ ಮಾಡಿರಲಿಲ್ಲವೆನಿಸುತ್ತದೆ. ಬಹುಶಃ ಅಂತಹ ಸಮಸ್ಯೆ ಎದುರಾದಾಗ ತಮ್ಮ ಪಾತ್ರ ನಿರ್ವಹಿಸುವ ಯೋಚನೆಯಲ್ಲಿದ್ದಿರ ಬಹುದು.

ಇನ್ನೊಂದು ೮-೧೦ ದಿನಗಳಲ್ಲಿ ಮೈಸೂರು ಮೆಡಿಕಲ್ ಕಾಲೇಜಿನಿಂದ ಸಂದರ್ಶನಕ್ಕೆ (ಇಂಟರ್‌ವ್ಯೂ) ಹಾಜರಾಗುವುದಕ್ಕೆ ಪತ್ರ ಬಂದಿತು. ಮುಂದಿನ ಪರಿಣಾಮ ಏನೇ ಆಗಬಹು ದಾದರೂ ತತ್‌ಕ್ಷಣ ಮೈಸೂರಿಗೆ ಹೊರಡಲೇ ಬೇಕಾದ ಪ್ರಮೇಯ ಸೃಷ್ಟಿಯಾಗಿ ಬಿಟ್ಟಿತು. ಮರುದಿನವೇ ಮೈಸೂರಿಗೆ ಪ್ರಯಾಣ ಮಾಡುವ ನಿರ್ಧಾರ ಮಾಡಿದೆ. ಆ ದಿನ ಅಮಾವಾಸ್ಯೆ ಯಾಗಿರುವುದರಿಂದ ಇನ್ನೊಂದು ದಿನ ತಡವಾಗಿ ಹೊರಡಬಹುದೆಂದು ಅವ್ವ ದುಂಬಾಲು ಬಿದ್ದಳು. ನನಗೆ ಒಂದು ಬಗೆಯ ಆವೇಶ ಬಂದಂತಾಗಿದ್ದು ಅದಕ್ಕೆ ಸಮ್ಮತಿಸಲೇ ಇಲ್ಲ. ನನ್ನ ಆಶಯಗಳಿಗೆ ಅಡ್ಡ ಬರಲು ಇಚ್ಛಿಸದ ಅವ್ವ ಆ ಬಗೆಗೆ ತಯಾರಿ ಮಾಡಲಾರಂಭಿಸಿದಳು. ತಾನು

ಆ ತನಕ ಉಳಿತಾಯ ಮಾಡಿ ಇಟ್ಟುಕೊಂಡಿದ್ದ ಸ್ವಲ್ಪ ಹಣವನ್ನು ಕೊಟ್ಟಳು. ಬಿಳಿ ಅಣ್ಣಯ್ಯ ಮೇಗರವಳ್ಳಿಯ ವರೆಗೆ ಜೊತೆಗೆ ಬಂದು ಬಸ್ಸು ಹತ್ತಿಸಲು ಮುಂದಾದರು. ನಮ್ಮ ಮನೆತನದಲ್ಲೇ ಏಕೆ, ಅಲ್ಲಿಯ ಸಮುದಾಯದವರಲ್ಲೇ ಆ ಮಟ್ಟದವರೆಗೆ ವಿದ್ಯಾಭ್ಯಾಸ ಮಾಡಿ, ಅಪರೂಪದ ವೈದ್ಯ ಪದವಿ ಗಳಿಸಬಹುದಾದ ಹಂತವನ್ನು ನಾನು ತಲುಪಿದ್ದುದರಿಂದ ಬಹುಶಃ ಅವರಿಗಾದಷ್ಟು ಸಂತಸ ಬೇರಾರಿಗೂ ಆಗಿರಲಾರದು. ನಡೆದುಕೊಂಡೇ ಪಯಣಿಸುತ್ತಿದ್ದಾಗ, ಅವರು ನನ್ನ ಮುಂದಿನ ಜವಾಬ್ದಾರಿ, ಹಾಗೂ ಎದುರಿಸಬೇಕಾದ ಸಮಸ್ಯೆಗಳ ಬಗೆಗೆ ವಿವರಿಸುತ್ತಲೇ ಇದ್ದರು. ಆರ್ಥಿಕ ಕೊರತೆಯಿಂದ ನಾನು ಮೆಡಿಕಲ್ ವಿದ್ಯಾಭ್ಯಾಸವನ್ನು ಮುಂದುವರಿಸಲು ಅಡಚಣೆಗಳು ಉದ್ಭವಿಸುವ ಸಂದರ್ಭವೇನಾದರೂ ಒದಗುವಂತಾದರೆ ತಮ್ಮ ಪಾಲಿನ ಸ್ವಲ್ಪ ಜಮೀನನ್ನಾದರೂ ಮಾರಾಟ ಮಾಡುವ ಮಾನಸಿಕ ನಿರ್ಧಾರಕ್ಕೂ ಬಂದಿದ್ದರೆನಿಸುತ್ತದೆ. ದಾರಿ ನಡುವೆ ಹುರುಳಿಕೊಡಿಗೆ ಕಾಡಿನ ದಾರಿಯಲ್ಲಿ ಸ್ವಲ್ಪ ವಿಶ್ರಾಂತಿಗಾಗಿ ಕುಳಿತುಕೊಂಡೆವು. ಆ ತನಕ ಮನದೊಳಗೆ ಬಚ್ಚಿಟ್ಟುಕೊಂಡಿದ್ದ ತಮ್ಮ ಇಂಗಿತವನ್ನು ಬಹಿರಂಗವಾಗಿ ಹೇಳಿಯೇ ಬಿಟ್ಟರು. "ಚಂದ್ರು, ಈ ತನಕ ನಮ್ಮ ಮನೆತನಕ್ಕೆ ಒಳ್ಳೆಯ ಹೆಸರು ತಂದಿರುವೆ. ಮುಂದೆ ಯಾವ ಕಾರಣಕ್ಕೂ ಹಿಂಜರಿಯದಂತೆ ನೋಡಿಕೊಳ್ಳುವ ಭರವಸೆ ನೀಡುತ್ತೇನೆ. ನನ್ನ ಪಾಲಿನ ಆಸ್ತಿಯನ್ನಾದರೂ ಮಾರಾಟ ಮಾಡಿ ನಿನ್ನ ಖರ್ಚಿಗೆ ಹಣಕಾಸು ಒದಗಿಸಲು ಪ್ರಯತ್ನಿಸುತ್ತೇನೆ" ಎಂದು ಹೇಳಿ ಸ್ವಲ್ಪ ಸಮಯ ಮಾತು ಮುಂದುವರಿಸದೆ ಮೌನಿಯಾಗಿ ಬಿಟ್ಟರು. ದಿಗ್ಭ್ರಮೆಗೊಳಗಾದ ನನ್ನ ಗಂಟಲು ಕಟ್ಟಿ ಬಂದಂತಾಯಿತು. ಮುಂದೇನು ಹೇಳಬೇಕೆಂಬುದು ನನಗೆ ಹೊಳೆಯಲೇ ಇಲ್ಲ. ಬಹಳ ಸಮಯ ಮೌನವಾಗಿಯೇ ಪ್ರಯಾಣ ಮುಂದುವರಿಯಿತು. ಮೇಗರವಳ್ಳಿಯಲ್ಲಿ ಬಸ್ಸು ಹತ್ತಿಸಿ, ಅವರು ಊರಿಗೆ ಹಿಂದಿರುಗಿದರು.

ಶಿವಮೊಗ್ಗೆಯನ್ನು ತಲುಪಿದ ಕೂಡಲೇ ಕಡಿದಾಳ್ ಮಂಜಪ್ಪನವರನ್ನು ನೋಡಿದೆ; ಮೆಡಿಕಲ್ ಕಾಲೇಜಿನಿಂದ ಸಂದರ್ಶನದ ಕರೆ ಬಂದಿರುವುದನ್ನು ತಿಳಿಸಿದೆ. ಅವರ ಹಸನ್ಮುಖದ ದೃಷ್ಟಿ ನನ್ನ ಮೇಲಿನ ಬೇಸರ ಮಾಯವಾಗಿದ್ದರ ಸಂಕೇತವೆಂದುಕೊಂಡೆ. ಸ್ವಲ್ಪ ಹೊತ್ತು ಕುಳಿತು ಕೊಂಡಿರುವಂತೆ ಹೇಳಿ, ಮೆಡಿಕಲ್ ಕಾಲೇಜಿನ ಆಯ್ಕೆ ಸಮಿತಿಯ ನಾಲ್ಕು ಮಂದಿ ಸದಸ್ಯರಿಗೆ ಪತ್ರಗಳನ್ನು ಬರೆದು ಕೊಟ್ಟರು; ಹಾಗೂ ಆದಷ್ಟು ಜಾಗ್ರತೆ ಸದಸ್ಯರಿಗೆ ತಲುಪಿಸಿ, ಸಂದರ್ಶನಕ್ಕೆ ಹಾಜರಾಗುವಂತೆ ಹೇಳಿ ಬೀಳ್ಕೊಟ್ಟರು.

ಊರಲ್ಲಿ ಅವ್ವ ಕೊಟ್ಟ ಹಣ ಖರ್ಚಿಗೆ ಸಾಕಾಗಲಾರದೆಂದು ಅಡಿಕೆಮಂಡಿಯಲ್ಲಿ ಹಿಂದೆ ನನ್ನ ಖಾತೆಯಲ್ಲಿ ಕೂಡಿಸಿ ಇಟ್ಟಿದ್ದ ಮೊಬಲಗಿನಿಂದಲೂ ಸ್ವಲ್ಪ ಹಣ ತೆಗೆದುಕೊಂಡೆ. ಆ ತನಕ ಶಿವಮೊಗ್ಗಾವನ್ನು ಹೊರತುಪಡಿಸಿ ಬೇರೆ ಇನ್ನಾವುದೇ ಪಟ್ಟಣಕ್ಕೆ ಹೋದವನಲ್ಲ ನಾನು. ಮೈಸೂರಿನ ಪರಿಸ್ಥಿತಿಯ ಬಗೆಗೆ ಗುರುತಿನ ಕೆಲವರಿಂದ ಮಾಹಿತಿ ಪಡೆದುಕೊಂಡೆ. ರೈಲ್ವೇ ಸ್ಟೇಷನ್ ಹತ್ತಿರದಲ್ಲೇ ಇರುವ ಮಾಡರ್ನ್ ಹಿಂದೂ ಹೋಟೆಲ್, ಇಳಿದುಕೊಳ್ಳುವುದಕ್ಕೆ ಪ್ರಶಸ್ತವಾದ ತಾಣವೆಂಬುದು ಗೊತ್ತಾಯಿತು. ಆ ಮೊದಲು ಎಂದೂ ರೈಲು ಹತ್ತದಿದ್ದವನು, ಅಂದು ರಾತ್ರಿ ರೈಲಿನಲ್ಲಿ ಮೈಸೂರಿಗೆ ಪ್ರಯಾಣ ಮಾಡಿದೆ.

ಬೆಳಿಗ್ಗೆ ಮೈಸೂರು ತಲುಪಿದವನೇ ಮಾಡರ್ನ್ ಹಿಂದೂ ಹೋಟೆಲಿಗೆ ಹೋಗಿ ಒಂದು ಕೊಠಡಿಯನ್ನು ನೀಡುವಂತೆ ಕೇಳಿಕೊಂಡೆ. ಅಂದು ಯಾವುದೇ ಕೊಠಡಿ ಖಾಲಿ ಇಲ್ಲವೆಂದು ಹೇಳಿ ನಿರಾಕರಿಸಿದರು. ನಾನು ಮೈಸೂರಿಗೆ ಹೊಸಬನೆಂದೂ ಯಾರದೋ ಶಿಫಾರಸ್ಸಿನಿಂದ ಅವರಲ್ಲಿಗೆ ಬಂದಿರುವುದಾಗಿ ಹೇಳಿ ಹೇಗಾದರೂ ಮಾಡಿ ಕೊಠಡಿಯನ್ನು ನೀಡುವಂತೆ ಮತ್ತೆ

ಮತ್ತೆ ಕೇಳಲಾರಂಭಿಸಿದೆ. ಶಿವಮೊಗ್ಗಾದಿಂದಲೇ ಬಂದವರೊಬ್ಬರು ಎರಡು ಜನರಿರಬೇಕಾದ ಕೊಠಡಿಯೊಂದರಲ್ಲಿ ಒಬ್ಬರೇ ಇದ್ದಾರೆಂತಲೂ, ನಾವಿಬ್ಬರೂ ಸಹಕರಿಸಿಕೊಂಡು ಇರುವುದಾದರೆ ಅದರಲ್ಲೇ ನನಗೂ ಅವಕಾಶ ಮಾಡಿಕೊಡುವುದಾಗಿ ಹೇಳಿದರು. ಅದಕ್ಕೆ ಒಪ್ಪಿದ ನಂತರ ನನಗೆ ಅಲ್ಲಿರುವಂತೆ ಕಳುಹಿಸಿಕೊಟ್ಟರು. ಅದರಲ್ಲಿ ಮೊದಲಿದ್ದವರು ಹೊರಗಡೆ ಹೋಗಿದ್ದರು. ಅಲ್ಲಿದ್ದ ಕೆಲವು ಕಾಗದ ಪತ್ರಗಳ ಮೇಲೆ ಕಣ್ಣಾಡಿಸಿದಾಗ, ನನಗೆ ಚಿರಪರಿಚಿತರಾದ ಪಟಮಕ್ಕಿ ಶ್ರೀನಿವಾಸ ಅಲ್ಲಿದ್ದ ಇನ್ನೊಬ್ಬರು ಎಂಬುದು ತಿಳಿಯಿತು. ತೀರ್ಥಹಳ್ಳಿಯ ನನ್ನ ವಿದ್ಯಾಭ್ಯಾಸದ ಸಮಯದಲ್ಲಿ ನನಗಿಂತ ಒಂದೆರಡು ತರಗತಿಗಳಷ್ಟು ಮುಂದಿದ್ದು ನಮ್ಮ ವಿದ್ಯಾರ್ಥಿ ನಿಲಯದಲ್ಲೇ ಇದ್ದವರು. ಅಲ್ಲದೆ ನನ್ನ ತಾಯಿಯ ಕಡೆಯಿಂದ ನಮ್ಮ ದೂರದ ಸಂಬಂಧಿ ಯೆಂದೂ ತಿಳಿದಿತ್ತು. ಇಷ್ಟೆಲ್ಲಾ ಪರಿಚಯವಿದ್ದವರೊಬ್ಬರು ತೀರ ಅಪರಿಚಿತ ಮೈಸೂರಿನಲ್ಲಿ ಸಿಕ್ಕಾಗ ನನಗುಂಟಾದ ಸಂತಸಕ್ಕೆ ಪಾರವಿಲ್ಲವಾಯಿತು. ಅವರ ಬರುವಿಕೆಗಾಗಿ ಕಾದುಕುಳಿತೆ.

ಸುಮಾರು ಮಧ್ಯಾಹ್ನದ ಹೊತ್ತಿಗೆ ಪಿ. ಎಂ. ಶ್ರೀನಿವಾಸ ಕೊಠಡಿಗೆ ಬಂದ. ಮೊದಲಿನಿಂದ ನಮ್ಮಿಬ್ಬರ ನಡುವೆ ಸಲಿಗೆ ವಾಡಿಕೆಯಾಗಿದ್ದು, "ಏನೋ ನೀನೂ ಬಂದು ಬಿಟ್ಟೆಯಾ? ನಾನು ಬಂದು ಒಂದೆರಡು ದಿನಗಳಾದವಯ್ಯ, ಆದರೂ ಸಂದರ್ಶನಕ್ಕೇ ಅವಕಾಶ ಕೊಡದೆ ಸತಾಯಿಸುತ್ತಿದ್ದಾರಯ್ಯ" ಎಂದು ಯಾವ ಬೇಸರವೂ ಇಲ್ಲದಂತೆ ಮಾತಾಡಿಸಿದ; ಹಾಗೂ ಸಂದರ್ಶನಕ್ಕೆ ಪರವಾನಿಗಿ ಪಡೆಯಲು ತಾನು ಮಾಡಿದ ಪ್ರಯತ್ನಗಳ ಬಗೆಗೆ ವಿವರಿಸಿದ. ಸಂದರ್ಶನದ ಅವಕಾಶ ದೊರೆಯುವ ಭರವಸೆ ಇಲ್ಲದ ಅವನು, ಶ್ರದ್ಧೆಯಿಂದ ಪ್ರಯತ್ನ ಮಾಡಿದರೆ, ನಾನು ಆಯ್ಕೆಯಾಗಲೂ ಬಹುದೆಂದು ಪ್ರೋತ್ಸಾಹದ ಮಾತುಗಳನ್ನಾಡಿದ.

ಪಿ. ಯಂ. ಶ್ರೀನಿವಾಸ ಮತ್ತು ಅವನ ಅಣ್ಣ ಪಟಮಕ್ಕಿ ವಿಜಯದೇವ ಇಬ್ಬರೂ ೧೯೪೨ರ 'ಚಲೇಜಾವ್' ಹಾಗೂ ೧೯೪೭ರ 'ಮೈಸೂರ್ ಚಲೋ' ಆಂದೋಳನಗಳಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದರು. ಎರಡು ಸಾರಿಯೂ ಜೈಲು ಶಿಕ್ಷೆ ಅನುಭವಿಸಿದವರು. ಮೆಡಿಕಲ್ ಕಾಲೇಜಿನ ಆಯ್ಕೆ ಸಮಿತಿಯ ಸದಸ್ಯರಾದ ಕೆಲವರು ಜೈಲಿನಲ್ಲಿ ಅವರ ನಿಕಟ ಪರಿಚಯದವ ರಾಗಿದ್ದರು. ತೀರ್ಥಹಳ್ಳಿಯ ಸ್ಕೂಲ್‌ಗಳಲ್ಲಿ ಶ್ರೀನಿವಾಸನೊಬ್ಬ ಪ್ರತಿಭಾವಂತ ವಿದ್ಯಾರ್ಥಿಯೆಂದು ಗುರುತಿಸಲ್ಪಟ್ಟವನು. ಶಿವಮೊಗ್ಗೆ ಇಂಟರ್‌ಮೀಡಿಯೇಟ್ ಕಾಲೇಜು ಸೇರಿದ ನಂತರ ಓದು ಹಿಂದೆ ಬಿತ್ತು; ಸಂಘ ಸಂಸ್ಥೆಗಳ ಚಟುವಟಿಕೆಗಳು ಮೇಲುಗೈ ಪಡೆದವು. ಒಂದು ವರ್ಷ ಕಾಲೇಜು ವಿದ್ಯಾರ್ಥಿ ಸಂಘದ ಕಾರ್ಯದರ್ಶಿಯೂ ಆಗಿದ್ದ. ಇಂಟರ್‌ಮೀಡಿಯೇಟ್‌ನ ಅಂತಿಮ ಪರೀಕ್ಷೆಯಲ್ಲಿ ೨-೩ ಸಾರಿ ಅನುತ್ತೀರ್ಣನಾಗುವುದು ಅನಿವಾರ್ಯವೇ ಆಯಿತು. ಹಾಗಾಗಿ ಮೆಡಿಕಲ್ ಕಾಲೇಜು ಪ್ರವೇಶದ ಸಂದರ್ಶನ ಪಡೆಯುವ ಕನಿಷ್ಠ ಅರ್ಹತೆಯ ಅವಕಾಶ ತಪ್ಪಿಹೋಗಿರಬೇಕು. ಮೊದಲನೇ ಪ್ರಯತ್ನದಲ್ಲಿ ಕೇವಲ ಶೇ. ೩೫ ಅಂಕಗಳನ್ನು ಗಳಿಸಿದ ನನ್ನಂತಹವರಿಗೆ ನಿರಾಯಾಸವಾಗಿ ಸಂದರ್ಶನದ ಅವಕಾಶ ಲಭಿಸಿತ್ತು.

ಕಡಿದಾಳ್ ಮಂಜಪ್ಪನವರು ಕೊಟ್ಟಿದ್ದ ಶಿಫಾರಸ್ಸಿನ ಪತ್ರಗಳನ್ನು ಆಯ್ಕೆ ಸಮಿತಿಯ ಸದಸ್ಯರಿಗೆ ತಲುಪಿಸುವುದು ನನ್ನ ಮುಂದಿನ ಕೆಲಸ. ಮೊದಲಿಗೆ ಶ್ರೀರಂಗಪಟ್ಟಣದ ಡಾ|| ಸಿ. ಬಂದೀಗೌಡರನ್ನು ನೋಡುವ ನಿರ್ಧಾರ ಮಾಡಿದೆ. ಆ ಸಲುವಾಗಿ ರೈಲ್ವೇ ಸ್ಟೇಷನ್‌ಗೆ ಹೋದೆ. ರೈಲು ಅದೇ ತಾನೇ ಚಲಿಸಲಾರಂಭಿಸಿತ್ತು; ಟಿಕೇಟು ಪಡೆದುಕೊಳ್ಳಲಾಗಲಿಲ್ಲ, ರೈಲಿನಲ್ಲಿ ಹತ್ತಿ ಕುಳಿತು ಕೊಂಡರೆ ಮುಂದಿನ ಸ್ಟೇಷನ್‌ನಲ್ಲಿ ಟಿಕೆಟ್ ಚೆಕ್ ಮಾಡುವ ಅಧಿಕಾರಿ ಟಿಕೆಟ್ ಕೊಡುತ್ತಾರೆಂದು ಯಾರೋ ಸಲಹೆ ಮಾಡಿದರು. ರೈಲು ಹತ್ತಿ ಕುಳಿತುಕೊಂಡು

ವಿಶ್ರಮಿಸಿಕೊಳ್ಳುತ್ತಿರುವಷ್ಟರಲ್ಲೇ ಶ್ರೀರಂಗಪಟ್ಟಣ ಸ್ಟೇಷನ್ ತಲುಪಿಯಾಗಿತ್ತು! ಅಲ್ಲಿ ಎಲ್ಲರಂತೆ ನಾನೂ ಇಳಿದೆ. ಆದರೆ ಹೊರಗಡೆ ಹೋಗಲು ಗೇಟಿನಲ್ಲಿ ಟಿಕೆಟ್ ತೋರಿಸದೇ ಬಿಡುತ್ತಿರಲಿಲ್ಲ. ಮುಂದೇನು ಮಾಡುವುದೆಂದು ಅಲ್ಲೇ ತಿರುಗಾಡಿಕೊಂಡಿದ್ದೆ. ನನ್ನ ವಿಚಿತ್ರ ಪರಿಸ್ಥಿತಿಯ ಬಗೆಗೆ ಒಬ್ಬರನ್ನು ವಿಚಾರಿಸಿದೆ. ಅವರು ರೈಲ್ವೇ ಸ್ಟೇಷನ್‌ನ ಪರಿಧಿ ಕೊನೆಗೊಳ್ಳುವ ಎಡೆಯಲ್ಲಿ ಯಾವುದೇ ಅಡೆತಡೆಗಳಿರುವುದಿಲ್ಲ; ಅಲ್ಲಿಯವರೆಗೆ ನಡೆದುಕೊಂಡು ಹೋಗಿ ಮುಂದೆ ಹೊರಗೆ ಹೋಗಲು ಸಾಧ್ಯವಾಗಬಹುದೆಂಬ ಉಪಾಯವನ್ನು ಸೂಚಿಸಿದರು. ಹಾಗೆಯೇ ಮಾಡಿ ಸ್ಟೇಷನ್‌ನಿಂದ ಹೊರಬಂದೆ! ಅದೇ ನನ್ನ ಮೊದಲ ಮತ್ತು ಕಡೆಯ ಟಿಕೆಟ್‌ರಹಿತ ಪ್ರಯಾಣ.

ಡಾ|| ಬಂದೀಗೌಡರ ದವಾಖಾನೆಯನ್ನು ತಲುಪಿದಾಗ ಅಲ್ಲಿ ಜನಜಂಗುಳಿಯ ಸಂತೆ ನೆರೆದಿತ್ತು. ಜನಾನುರಾಗಿಯಾದ ಅವರ ಸಹಾಯ ಕೋರಿ ಬಂದಿದ್ದ ರೋಗಿಗಳಂತೆ, ನನ್ನ ಹಾಗೆ ಮೆಡಿಕಲ್ ಕಾಲೇಜಿಗೆ ಆಯ್ಕೆ ಶಿಫಾರಸ್ಸಿಗಾಗಿ ಬಂದವರು ಹಲವರಿದ್ದರು. ಡಾಕ್ಟರು ನಡುವೆ ಸ್ವಲ್ಪ ಬಿಡುವು ಮಾಡಿಕೊಂಡು ನಮ್ಮ ಗುಂಪಿನಲ್ಲಿದ್ದವರ ಪ್ರವರಗಳನ್ನು ಕೇಳಲಾರಂಭಿಸಿದರು. ಪ್ರತಿಯೊಬ್ಬರ ಬಗೆಗೂ ಸಹನೆಯಿಂದ ವಿಷಯಗಳನ್ನು ತಿಳಿದುಕೊಳ್ಳುತ್ತಿದ್ದರು. ನನ್ನ ಸರದಿ ಬಂದಾಗ ಕಡಿದಾಳ್ ಮಂಜಪ್ಪನವರು ನೀಡಿದ್ದ ಪತ್ರವನ್ನು ಅವರ ಕೈಗಿತ್ತೆ. ಅದನ್ನು ಕಣ್ಣು ಹಾಯಿಸಿದಂತೆ ಮಾಡಿ, ಮಡಿಸಿ ತಮ್ಮ ಬಿಳಿಕೋಟಿನ ಜೇಬಿನೊಳಗೆ ತುರುಕಿದರು; ಹಾಗೂ ನಾನು ಹೋಗಬಹುದೆಂದರು. ಇನ್ನುಳಿದವರ ವಿವರವಾದ ಪ್ರವರಗಳನ್ನೇ ಅಲ್ಲದೆ, ಗಳಿಸಿದ ಅಂಕಗಳ ಬಗೆಗೂ ಕೆಣಕಿ ಕೆಣಕಿ ಪ್ರಶ್ನೆ ಕೇಳುತ್ತಿದ್ದರು. ಅವರೊಡನೆ ಭೇಟಿ ಮುಗಿದನಂತರ ಅಲ್ಲಿದ್ದವರೆಲ್ಲರೂ ಒಟ್ಟಿಗೆ ರೈಲ್ವೇ ಸ್ಟೇಷನ್ ಕಡೆ ಮಾತಾಡಿಕೊಂಡು ಹೊರಟೆವು. ಬಹಳಷ್ಟು ಜನ ತಮ್ಮ ಆಯ್ಕೆಯಾಗುವುದರ ಬಗೆಗೆ ಉತ್ಸಾಹಭರಿತರಾಗಿದ್ದಂತೆ ಮಾತಾಡಿಕೊಳ್ಳುತ್ತಿದ್ದರು. ಷರಟು, ಪ್ಯಾಂಟು ಧರಿಸಿದ ಅವರಿಗೆಲ್ಲಾ ಕೇವಲ ಪಂಚೆ ಅಂಗಿ ಧರಿಸಿದ ನನ್ನ ಬಗೆಗೆ ಕುತೂಹಲ ಉಂಟಾಗಿರಬೇಕು. ಅದರಲ್ಲೂ ಡಾಕ್ಟರು ಅವರ ಬಗೆಗೆ ವಿವರವಾಗಿ ವಿಚಾರಿಸಿದಂತೆ ನನ್ನನ್ನು ಏನೂ ಕೇಳದೆ ಕಳುಹಿಸಿದ್ದು ಅಯ್ಯೋ ಪಾಪವೆನಿಸಿರಬೇಕು. ಕೆಲವರು ನನ್ನ ಬಗೆಗೆ ಕನಿಕರ ವ್ಯಕ್ತಪಡಿಸುತ್ತಿದ್ದರು. ನಮ್ಮ ಕಡೆಯ ಧುರೀಣರೊಬ್ಬರು ಶಿಫಾರಸ್ಸು ಪತ್ರಗಳನ್ನು ಕೆಲವು ಸದಸ್ಯರಿಗೆ ತಲುಪಿಸುವಂತೆ ಹೇಳಿದ್ದರಿಂದ ನಾನು ಬಂದಿರುವುದಾಗಿ ಅಷ್ಟೇ ತಿಳಿಸಿದೆ.

ಮರುದಿನ ಡಿ. ಸುಬ್ಬಯ್ಯ ರಸ್ತೆಯಲ್ಲಿದ್ದ ಖ್ಯಾತ ವಕೀಲರೂ, ರಾಜಕೀಯ ಧುರೀಣರೂ ಆಗಿದ್ದ ರಂಗರಾಮಯ್ಯನವರನ್ನು ನೋಡಿದೆ. ಅಲ್ಲಿಗೆ ಹೋಗುವಷ್ಟರಲ್ಲೇ ಪಿ.ಎಂ. ಶ್ರೀನಿವಾಸನೂ ಅಲ್ಲಿದ್ದ. ಜೈಲು ವಾಸದ ಸಮಯದಲ್ಲಿ ಅವರಿಬ್ಬರೂ ಒಂದೇ ಕಡೆ ಇದ್ದು ಪರಿಚಯವಿತ್ತಂತೆ; ಹಾಗಾಗಿ ಸಲುಗೆಯಿಂದಲೇ ಮಾತುಕತೆ ನಡೆದಿತ್ತು. ಅವರು ಪ್ರಭಾವ ಬೀರಿ ಕಾಲೇಜು ಪ್ರಾಂಶುಪಾಲರಿಂದ ಸಂದರ್ಶನದ ಅವಕಾಶ ಕಲ್ಪಿಸಿ ಕೊಡಬೇಕೆಂದು ವಾದಿಸುತ್ತಿದ್ದ. ಅದನ್ನು ನಿರ್ಧರಿಸುವಲ್ಲಿ ಕೆಲವು ನಿರ್ದಿಷ್ಟ ಮಾನದಂಡಗಳನ್ನು ನಿಗದಿ ಪಡಿಸಿರುವುದಾಗಿಯೂ ಅವನು ಮೂರು ಸಾರಿ ಅನುತ್ತೀರ್ಣನಾಗಿರುವುದರಿಂದಲೋ ಏನೋ ಮಾನದಂಡಗಳ ಪ್ರಕಾರ ಅವನಿಗೆ ಅವಕಾಶ ದೊರೆತಿಲ್ಲವೆಂದು ಅವರು ಸಮಜಾಯಿಷಿ ನೀಡುತ್ತಿದ್ದರು. ಅಂತಹ ವಿಚಾರಗಳಲ್ಲಿ ಆಯ್ಕೆ ಸಮಿತಿಯ ಸದಸ್ಯರು ತಲೆಹಾಕಲಾಗದೆಂದು ಅವರು ಸಕಾರಣವಾಗಿ ಹೇಳುತ್ತಿದ್ದರೂ ಅವನ ವಾದಗಳು ಮುಂದುವರಿಯುತ್ತಲೇ ಇದ್ದವು. ಅಂತಿಮವಾಗಿ ಅದರಿಂದ ಯಾವುದೇ ಪ್ರಯೋಜನವಾದಂತಿಲ್ಲ. ನಂತರ ಕಡಿದಾಳ್ ಮಂಜಪ್ಪನವರ ಶಿಫಾರಸ್ಸಿನ ಪತ್ರವನ್ನು ಅವರಿಗೆ ಕೊಟ್ಟೆ. ಪತ್ರವನ್ನೇನೋ ವಿವರವಾಗಿ ಓದಿದರು; ಮುಂದೇನೂ ಪ್ರಶ್ನೆಗಳನ್ನು ಕೇಳಲಿಲ್ಲ.

ಆ ದಿನ ಸಾಯಂಕಾಲ ಇನ್ನೊಬ್ಬ ಖ್ಯಾತ ವಕೀಲರೂ, ಕಾಂಗ್ರೆಸ್ ಮುಂದಾಳುಗಳಾಗಿದ್ದ ಕೆ. ಪುಟ್ಟಸ್ವಾಮಿಯವರನ್ನು ಸಯ್ಯಾಜಿರಾವ್ ರಸ್ತೆಯಲ್ಲಿದ್ದ ಅವರ ಕಛೇರಿಯಲ್ಲಿ ಭೇಟಿಯಾಗಿ, ಕಡಿದಾಳ್ ಮಂಜಪ್ಪನವರ ಪತ್ರವನ್ನು ನೀಡಿದೆ. ಪತ್ರವನ್ನು ಗಮನಿಟ್ಟು ಓದಿದ ಅವರು ನಾನು ಗಳಿಸಿದ ಅಂಕಗಳ ಬಗೆಗೆ ವಿವರವಾಗಿ ವಿಚಾರಿಸಲಾರಂಭಿಸಿದರು. ತೇರ್ಗಡೆಯಾಗಲು ಕನಿಷ್ಠವಾದ ಶೇ. ೩೫ ಅಂಕಗಳನ್ನು ಪಡೆದುಕೊಂಡಿದ್ದನ್ನು ಕೇಳಿದಾಗ ನನ್ನ ಕಡೆ ದುರುಗುಟ್ಟಿ ನೋಡಲಾರಂಭಿಸಿದರು. "ಏನ್ರೀ, ತೇರ್ಗಡೆಯಾಗುವುದಕ್ಕೆ ಕನಿಷ್ಠ ಅಂಕಗಳನ್ನು ಮಾತ್ರ ಪಡೆದಿದ್ದೀರಿ; ಒಂದ್ನಾಲ್ಕು ಹೆಚ್ಚು ಗಳಿಸಿದ್ರೆ ನಿಮ್ಮಪ್ಪನ ಗಂಟೇನು ಹೋಗುತ್ತಿತ್ತು?" ಎಂದು ತಮ್ಮ ರೋಷವನ್ನು ವ್ಯಕ್ತಪಡಿಸಿದರು. ಶಿವಮೊಗ್ಗೆಯಂಥ ಹಿಂದುಳಿದ ಪ್ರದೇಶಗಳ ಕಾಲೇಜುಗಳಲ್ಲಿ ವಿದ್ಯಾಭ್ಯಾಸ ಮಾಡುವ ಅನಾನುಕೂಲ ಪರಿಸ್ಥಿತಿಗಳ ಬಗೆಗೆ ಅವರಿಗೆ ಅರಿವಿತ್ತೋ ಇಲ್ಲವೋ ಹೇಳಲಾರೆ. ಒಂದು ವರ್ಷ ತರಗತಿಯಲ್ಲಿದ್ದವರೆಲ್ಲಾ ತೇರ್ಗಡೆಯಾಗದೇ, ನಮ್ಮ ಕಾಲದಲ್ಲಿ ಕೇವಲ ಒಂಬತ್ತು ಜನ ತೇರ್ಗಡೆಯಾದವರಲ್ಲಿ ನಾನೂ ಒಬ್ಬ ಎಂದು ಅವರಿಗೆ ತಿಳಿಸಲೇ ಎಂದು ಒಂದು ಕ್ಷಣ ಯೋಚಿಸಿದೆ. ಇಂತಹ ವಿಚಾರಗಳಲ್ಲಿ ಅವರ ಹತ್ತಿರ ಚರ್ಚೆಗಿಳಿಯುವುದು ಸರಿಯಲ್ಲವೆಂದು, ಸುಮ್ಮನೆ ತಲೆಬಗ್ಗಿಸಿ ನಿಂತುಕೊಂಡೆ. ಮುಂದೆ ಏನೂ ಹೇಳದಿದ್ದುದರಿಂದ ಅಲ್ಲಿಂದ ಹೊರಟೆ;

ಚಿತ್ರದುರ್ಗದಿಂದ ಬಂದಿದ್ದ ಮುಂದಾಳು ಕೊಂಡಜ್ಜಿ ಬಸಪ್ಪನವರು ನಾನಿದ್ದ ಹೋಟೆಲಿನಲ್ಲೇ ಉಳಿದುಕೊಂಡಿದ್ದರು. ಮರುದಿನ ಬೆಳಿಗ್ಗೆ ಅವರನ್ನೂ ನೋಡಿದೆ. ಶಿಫಾರಸ್ಸು ಪತ್ರವನ್ನು ಪರಿಶೀಲಿಸಿದ ಅವರು ನನ್ನನ್ನು ಹೆಚ್ಚಿನ ವಿಚಾರಣೆಗೊಳಪಡಿಸಲಿಲ್ಲ.

ಕಡಿದಾಳ್ ಮಂಜಪ್ಪನವರ ನಿರ್ದೇಶನದಂತೆ ನನ್ನ ಕರ್ತವ್ಯವನ್ನೇನೋ ಮಾಡಿದ್ದಾಗಿತ್ತು. ಆದರೆ ಇತರ ಅಭ್ಯರ್ಥಿಗಳ ವೇಷಭೂಷಣ, ಪ್ರಭಾವೀ ವ್ಯಕ್ತಿಗಳ ಜೊತೆ ಅವರ ಚಲನವಲನಗಳನ್ನು ಗಮನಿಸುತ್ತಿದ್ದ ನನಗೆ ಮೆಡಿಕಲ್ ಕಾಲೇಜಿನ ಪ್ರವೇಶ ದೊರೆಯುವುದರ ಬಗೆಗೆ ಪ್ರಬಲ ಅನುಮಾನಗಳಾಗ ತೊಡಗಿದವು; ಕೂಡಲೇ ಊರಿಗೆ ವಾಪಸಾಗುವುದೇ ಸರಿಯೆನಿಸಿತು. ಆದರೆ ಮತ್ತೆ ಕಡಿದಾಳರನ್ನು ಎದುರಿಸುವ ಭಯ ಧುತ್ತೆಂದು ಬಾಧಿಸುತ್ತಿತ್ತು. ಅದರಿಂದ ಇನ್ನೂ ಎರಡು ದಿನಗಳಲ್ಲಿ ಜರುಗಲಿರುವ ಸಂದರ್ಶನಕ್ಕೆ ಹಾಜರಾಗಿಯೇ ಊರಿಗೆ ಹಿಂತಿರುಗುವುದೆಂದು ನಿರ್ಧರಿಸಿದೆ.

## ವೇಷಭೂಷಣದ ಪರಿ!

ಸಂದರ್ಶನಕ್ಕೆ ಹಾಜರಾಗುವ ಅಭ್ಯರ್ಥಿಗಳು ಕನಿಷ್ಠ ಪಕ್ಷ ಪ್ಯಾಂಟು, ಷರಟುಗಳನ್ನಾದರೂ ಧರಿಸುವುದು ವಾಡಿಕೆಯಂತೆ. ಆ ತನಕ ಪಂಚೆ, ಅಂಗಿಗಳಲ್ಲದೆ ನಾನು ಅಂತಹ ಪೋಷಾಕುಗಳನ್ನು ಧರಿಸಿದವನೇ ಅಲ್ಲ, ಅದೇ ನನ್ನ ಮುಂದಿನ ಸಮಸ್ಯೆಯಾಯಿತು. ನನ್ನ ಪೇಚನ್ನು ಗಮನಿಸಿದ ಶ್ರೀನಿವಾಸನೇ ಮತ್ತೆ ನನ್ನ ನೆರವಿಗೆ ಮುಂದಾದ. ಅವನ ಪ್ಯಾಂಟು ಷರಟುಗಳನ್ನೇ ಧರಿಸಿ ಹೋಗಬಹುದೆಂದು ಸಲಹೆ ನೀಡಿದ. ಅವನಾಗಲೇ ಅಜಾನುಬಾಹುವಾಗಿ, ಎತ್ತರವಾಗಿ ಬೆಳವಣಿಗೆ ಹೊಂದಿದವನು. ನಾನಂತೂ ಬಡಕಲು ಶರೀರದ ಸರಪೇತಲ ನಾರಾಯಣ ನಾಗಿಯೇ ಇದ್ದೆ. ಅವನ ಉಡುಗೆಗಳು ನನ್ನ ಗಾತ್ರಕ್ಕೆ ಮಿಗಿಲಾದವೇ. ಆದರೂ ಸಂದರ್ಶನಕ್ಕೆ ಹೋಗುವ ದಿನ ಅವನ ತೊಡುಗೆಗಳನ್ನೇ ಅಲ್ಲಿ ಇಲ್ಲಿ ಸರಿ ಹೊಂದುವಂತೆ ಮಾಡಿ ತೊಡಿಸಿದ. ಅಂದು ನನ್ನ ಅವತಾರ ಹೇಗಿತ್ತೆಂಬುದನ್ನು ನಾನೀಗ ವರ್ಣಿಸಲಾಗದು. ಮುಂದೆ ಹಲವು

ದಶಕಗಳ ನಂತರ ಮೆಡಿಕಲ್ ಮಿಶನರಿ ಡಾ|| ಆಲ್ಬರ್ಟ್ ಶ್ವೈಟ್ಸರ್, ಹೈಸ್ಕೂಲ್‌ನ ಅಂತಿಮ ಪರೀಕ್ಷೆಗೆ ಹಾಜರಾಗುವ ಸಂದರ್ಭದಲ್ಲಿ ಇಂತಹದೇ ಪೇಚಿಗೆ ಸಿಲುಕಿ, ಅವನ ದೊಡ್ಡಪ್ಪನ ಉಡುಗೆಗಳನ್ನು ತೊಟ್ಟುಕೊಂಡು ಹೋದ ವಿವರಗಳನ್ನು ದಾಖಲಿಸುತ್ತಿದ್ದಾಗ ಹಿಂದೊಂದು ಸಾರಿ ನಾನೂ ಸಹ ಅಂತಹದೇ ಪೀಕಲಾಟಕ್ಕೆ ಸಿಲುಕಿದ ಸಂದರ್ಭ ನೆನಪಿಗೆ ಬಂದು ನನ್ನೊಳಗೇ ಹುಸಿನಗೆ ಬೀರುವಂತಾಗಿತ್ತು.

ಸಂದರ್ಶನಕ್ಕೆ ಹಾಜರಾದಾಗ, ನನ್ನ ಬಡಕಲು ಶರೀರ ಎಲ್ಲರ ಗಮನ ಸೆಳೆದಂತಿತ್ತು. ನನ್ನ ತೂಕ, ಎತ್ತರಗಳ ಕುರಿತವೇ ಮೊದಲ ಪ್ರಶ್ನೆಗಳು, ಮಲೆನಾಡಿನವನೆಂದ ಮೇಲೆ ಅಲ್ಲಿಯ ಮಳೆ ಪ್ರಮಾಣ, ಅದರಲ್ಲೂ ಆಗುಂಬೆಯ ಮಳೆಯ ಬಗೆಗೆ, ಸೂರ್ಯಾಸ್ತಮಾನ ಮುಂತಾದವುಗಳ ಬಗೆಗೂ ಕೆಲವರು ಪ್ರಶ್ನೆ ಕೇಳಿದರು. ಮತ್ತೆ ಕೆಲವರು ನನಗಿರಬಹುದಾದ ಸಾಮಾನ್ಯ ಜ್ಞಾನದ ಬಗೆಗೂ ಪ್ರಶ್ನೆಗಳ ಸುರಿಮಳೆಗೈದರು. ರಾಜಕೀಯ ಹಾಗೂ ಸಾಮಾಜಿಕ ವಿಚಾರಗಳ ಬಗೆಗೆ ಹೆಚ್ಚಿನ ಆಸಕ್ತಿ ಹೊಂದಿದ್ದ ನಾನು ಅವುಗಳಿಗೆಲ್ಲಾ ಸಮರ್ಪಕವಾಗಿ ಉತ್ತರಿಸಿದೆನೆಂಬುದು ನನ್ನ ಭಾವನೆಯಾಗಿತ್ತು.

ಸಂದರ್ಶನ ಮುಗಿದ ಒಂದೆರಡು ದಿನಗಳಲ್ಲೇ ಫಲಿತಾಂಶವನ್ನು ಪ್ರಕಟಿಸುತ್ತಾರೆಂದು ತಿಳಿಯಿತು. ಊರಿಗೆ ಹಿಂದಿರುಗದೆ ಆ ತನಕ ಮೈಸೂರಲ್ಲೇ ಉಳಿದೆ. ಫಲಿತಾಂಶವೂ ಪ್ರಕಟವಾಯಿತು. ವಿಸ್ಮಯವೋ ಎಂಬಂತೆ ನನ್ನ ಹೆಸರೂ ಪಟ್ಟಿಯಲ್ಲಿ ರಾರಾಜಿಸುತ್ತಿತ್ತು! ನನಗಾಗ ಹರ್ಷವಾಯಿತೋ, ದುಃಖವಾಯಿತೋ ಏನೆಂದು ಹೇಳಲಿ. ಆಯ್ಕೆಯಾಗಿದ್ದರೂ ಮುಂದೆ ತುಳಿಯಬೇಕಾದ ದುರ್ಗಮ ಹಾದಿಯ ಆಲೋಚನೆಯೇ ಮೇಲುಗೈ ಪಡೆದಿರಬೇಕು.

ಕೇವಲ ಶೇ. ೩೫ ಅಂಕಗಳನ್ನು ಗಳಿಸಿದ ನನಗೆ ಮೆಡಿಕಲ್ ಕಾಲೇಜಿನ ಪ್ರವೇಶಾವಕಾಶ ದೊರೆತಿದ್ದು ನನಗಲ್ಲದೆ ಇತರರೂ ಅಚ್ಚರಿ ಪಡುವ ವಿಷಯವೆ. ಆನಂತರ ಕೆಲವು ವಿಚಾರಗಳು ಅನಧಿಕೃತವಾಗಿ ತಿಳಿದು ಬಂದವು. ಆದೇ ತಾನೇ ದೇಶ ಸ್ವಾತಂತ್ರ್ಯ ಗಳಿಸಿದ್ದು ಹಿಂದುಳಿದ ವರ್ಗದ ಜನ ಸಮೂಹ ಹಾಗೂ ಹಿಂದುಳಿದ ಪ್ರದೇಶಗಳಿಗೆ ಸರ್ಕಾರ ಎಲ್ಲಾ ಕ್ಷೇತ್ರಗಳಲ್ಲೂ ಹೆಚ್ಚಿನ ಪ್ರಾಶಸ್ತ್ಯ ಒದಗಿಸುವ ಕಾರ್ಯನೀತಿಯನ್ನು ರೂಪಿಸುವುದಕ್ಕಾರಂಭಿಸಿತ್ತು. ಹಿಂದುಳಿದ ವರ್ಗವೆಂದು ಪರಿಗಣಿಸಲಾಗಿದ್ದ ಒಕ್ಕಲಿಗ ಜನಾಂಗಕ್ಕೆ ಸೇರಿ ತೀರಾ ಹಿಂದುಳಿದ ಮಲೆನಾಡು ವಲಯಕ್ಕೆ ಸೇರಿದವನಾದ ನಾನು ಕನಿಷ್ಠ ಅಂಕಗಳನ್ನು ಪಡೆದಿದ್ದರೂ ನನ್ನನ್ನು ಕಡೆಗಣಿಸುವಂತಿರಲಿಲ್ಲ. ಇದೇ ಪರಿಸ್ಥಿತಿಯ ಇತರ ಒಂದಿಬ್ಬರು ಪ್ರಭಾವಶಾಲಿ ಅಭ್ಯರ್ಥಿಗಳಿದ್ದರೂ, ಅವರು ಒಂದೆರಡು ಸಾರಿ ಇಂಟರ್‌ಮೀಡಿಯೇಟ್ ಪರೀಕ್ಷೆಯಲ್ಲಿ ಅನುತ್ತೀರ್ಣರಾದವರು; ಎಲ್ಲಕ್ಕಿಂತ ಮಿಗಿಲಾಗಿ ನನ್ನ ಬತ್ತಳಿಕೆಯಲ್ಲಿದ್ದ ಕಡಿದಾಳ್ ಮಂಜಪ್ಪನವರ ಶಿಫಾರಸ್ಸು ಪತ್ರಗಳು ತ್ರೀರಕ್ಷೆ ಯಾಗಿದ್ದವು. ಅಂದಿನ (ಮುಂದೆಯೂ) ರಾಜಕೀಯ ಕ್ಷೇತ್ರದಲ್ಲಿ ಶುದ್ಧಹಸ್ತರೂ, ಪ್ರಾಮಾಣಿಕ ರಾಜಕಾರಣಿಯೆಂದು ಪ್ರಖ್ಯಾತರಾಗಿದ್ದ ಅವರ ವರ್ಚಸ್ಸು ನನ್ನ ಆಯ್ಕೆಯಲ್ಲಿ ಪ್ರಭಾವ ಬೀರಿತ್ತೆಂಬುದರಲ್ಲಿ ಅನುಮಾನ ವಿರಲಿಲ್ಲವೆನ್ನಬಹುದು.

ಮೈಸೂರಿನಿಂದ ಊರಿಗೆ ಹಿಂತಿರುಗುವಷ್ಟರಲ್ಲೇ ಬೆಂಗಳೂರಿನ ವ್ಯವಸಾಯ ಕಾಲೇಜಿಗೆ ಸೇರಲು ಆಯ್ಕೆಯಾಗಿರುವುದರ ಬಗೆಗೆ ಪತ್ರ ಬಂದಿತ್ತು. ಮೆಡಿಕಲ್ ಕಾಲೇಜಿನ ಪತ್ರ ಯಡೂರು ವಿಳಾಸಕ್ಕೆ ಬಂದಿದ್ದು, ಅಂಚೆಯವರು ವಾಡಿಕೆಯಂತೆ ಯಡೂರು ಸಾಹುಕಾರರ ಮನೆಯಲ್ಲಿ ಹಾಕಿ ಹೋಗಿದ್ದರಂತೆ. ಯಡೂರಲ್ಲಿ ಹೊಸದಾಗಿ ಮಂಜೂರಾಗಿದ್ದ ಆಸ್ಪತ್ರೆಗೆ ನೇಮಕವಾಗಿದ್ದ ಆಯುರ್ವೇದಿಕ್ ಡಾಕ್ಟರು ಅವರ ಮನೆಯಲ್ಲಿದ್ದರಂತೆ. ಅಲ್ಲಿದ್ದ ಇತರ ಪತ್ರಗಳ ಜೊತೆ ಇದ್ದ

ನನ್ನ ಅಂಚೆಕಾರ್ಡ್ ಅವರ ಗಮನ ಸೆಳೆಯಿತಂತೆ. ಲೋಕಾಭಿರಾಮವಾಗಿ ಅದನ್ನು ಅವಲೋಕಿಸಿದ ಅವರು, "ನೋಡ್ರೀ ಇಲ್ಲಿ ಯಾರೋ ಒಬ್ಬ ಹುಡುಗ ಎಂ.ಬಿ.ಬಿ.ಎಸ್. ಕಾಲೇಜಿಗೆ ಸೇರಲು ಆಯ್ಕೆಯಾಗಿದ್ದಾನೆ!" ಎಂದು ಉದ್ಗಾರವೆತ್ತಿದರಂತೆ. ಅದನ್ನು ಕೇಳಿಸಿಕೊಂಡ ಸಾಹುಕಾರರು "ಹೌದೇ, ಇಲ್ಲಿಗೆ ಹತ್ತಿರದ ಹೊಳೆಗದ್ದೆಯ ಒಬ್ಬ ಹುಡುಗ ಓದುವುದರಲ್ಲಿ ಬಹಳ ಚೂಟಿಯಾಗಿದ್ದಾನೆಂದು ಕೇಳಿದ್ದೇರೀ, ಅವನಿಗೇ ಇರಬೇಕೆಂದು" ದನಿ ಗೂಡಿಸಿದರಂತೆ. ಆ ಸಮಯದ ಅಂತಹ ಅಚ್ಚರಿ ಸಕಾರಣವೂ ಹೌದು. ವೈದ್ಯ ಪದವಿ ಗಳಿಸಿದ ಹಲವು ವರ್ಷಗಳ ನಂತರ ಅವಲೋಕಿಸಿದಾಗ ಶಿವಮೊಗ್ಗ ಜಿಲ್ಲೆಯ ಒಕ್ಕಲಿಗ ಜನಾಂಗದವರಲ್ಲಿ ಎಂ.ಬಿ.ಬಿ.ಎಸ್., ಪದವಿ ಗಳಿಸಿದವರಲ್ಲಿ ನಾನೇ ಮೊದಲಿಗನೆಂಬುದರ ಅರಿವಾಯಿತು. ಅದಕ್ಕೂ ಮೊದಲು ಒಬ್ಬಿಬ್ಬರು ಕಾಲೇಜಿಗೆ ಸೇರಿದ್ದರೂ, ಅಂತಿಮವಾಗಿ ಪದವಿ ಗಳಿಸಿ ಹೊರಬಂದದ್ದು ಎಷ್ಟೋ ವರ್ಷಗಳ ನಂತರ!

ಮೈಸೂರಿನಿಂದ ಶಿವಮೊಗ್ಗೆಗೆ ಹಿಂತಿರುಗಿದ ಕೂಡಲೇ ಕಡಿದಾಳ್ ಮಂಜಪ್ಪನವರನ್ನು ಭೇಟಿ ಮಾಡಿ ಮೈಸೂರಿನಲ್ಲಿ ಜರುಗಿದ ವಿದ್ಯಮಾನಗಳ ವರದಿ ಮಾಡಿ, ನಾನು ಆಯ್ಕೆಯಾಗಿರುವ ವಿಷಯವನ್ನೂ ಅರುಹಿದೆ. ಅವರ ಮುಖದಲ್ಲಿ ಮೂಡಿದ ಸಂತೃಪ್ತಿ ಭಾವನೆಯ ದೃಶ್ಯ ನಾನೆಂದೂ ಮರೆತಿಲ್ಲ. ನಾನು ಮುಂದುವರಿದು ಮೆಡಿಕಲ್ ವಿದ್ಯಾಭ್ಯಾಸವನ್ನು ಮುಂದುವರಿಸುವಲ್ಲಿ ನನಗಿರುವ ಆರ್ಥಿಕ ಹಿನ್ನೆಲೆಯ ಬಗೆಗೆ ವಿವರಿಸತೊಡಗಿದೆ. "ಆಯಿತು ಬಿಡೋ, ಇಷ್ಟಾಯಿ ತಲ್ಲಾ; ನಿನಗೆ ವಿದ್ಯಾರ್ಥಿ ವೇತನ ದೊರೆಯುವ ಏರ್ಪಾಡು ಮಾಡುತ್ತೇನೆ. ಮಿಕ್ಕುಳಿದ ಖರ್ಚು ವೆಚ್ಚಗಳಿಗೆ ಮುಂದೆ ಏನಾದರೂ ಮಾಡಿದರಾಯಿತು; ಮೊದಲು ಕಾಲೇಜಿಗೆ ಸೇರಿಕೋ" ಎಂದು ಸಾಂತ್ವನ ಹೇಳಿ ಬೀಳ್ಕೊಟ್ಟರು.

ನೇರವಾಗಿ ಊರಿಗೆ ಹೋಗುವ ಮೊದಲು ಮೇಗರವಳ್ಳಿಗೆ ಹೋದೆ. ಬಾಲ್ಯದಲ್ಲಿ ನನ್ನ ವಿದ್ಯಾಭ್ಯಾಸಕ್ಕೆ ಆಶ್ರಯವಿತ್ತು ಉಪಕರಿಸಿದ ಲಿಂಗಪ್ಪ ಹೆಗ್ಗಡೆಯವರ ಮನೆಯವರೆಲ್ಲಾ ನನ್ನ ಸಾಧನೆಗೆ ಹರ್ಷಿತರಾದರು. ಹಿಂದೆ ಅವರಲ್ಲಿದ್ದಾಗ 'ಚಂದ್ರ ಡಾಕ್ಟರು' ಎಂಬ ತಮಾಷೆಯ ಮಾತುಗಳೇ ನಿಜವಾಗಿದ್ದನ್ನು ನೆನಪಿಸಿಕೊಂಡು ಹೆಮ್ಮೆ ಪಟ್ಟುಕೊಂಡರು. ನಾನು ಡಾಕ್ಟರಾಗುವ ಬಗೆಗೆ ಅಂದಿನ ಮಾತುಗಳೇ ಅಲ್ಲದೆ ಮುದೊಂದು ಸಾರಿ ಹೊಳೆಗದ್ದೆಯ ಮನೆಗೆ ಬಂದಿದ್ದ ಮೇಗರವಳ್ಳಿ ಹೆಸರಾಂತ ಕಾಂಪೌಂಡರ್ ಜಾನ್ ಮಿಸ್ಕ್ವಿತ್‌ರು ನನ್ನ ಚಿಕ್ಕಪ್ಪಂದಿರಿಗೆ ಲೋಕಾಭಿರಾಮವಾಗಿ ಸೂಚಿಸಿದ್ದೂ ನೆನಪಿಗೆ ಬಂದಿತು. ಮನೆಯಲ್ಲಿ ಕಾಯಿಲೆಯಾಗಿದ್ದ ಒಬ್ಬರನ್ನು ನೋಡಲು ಅವರು ಬಂದಿದ್ದರು. ಹೈಸ್ಕೂಲಿನಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದ ನನ್ನನ್ನು ಗಮನಿಸಿದರು. ಅವರ ಮಗ ಫೆಲಿಕ್ಸ್ ಮಿಸ್ಕ್ವಿತ್ ಆ ಸಮಯದಲ್ಲಿ ಮೆಡಿಕಲ್ ಕಾಲೇಜಿನಲ್ಲಿ ಓದುತ್ತಿರುವುದನ್ನು ಜ್ಞಾಪಿಸಿಕೊಂಡರು; ಅದೊಂದು ಬಹಳ ಕಷ್ಟಕರ ಆದರೂ ತುಂಬಾ ಗೌರವದ ವೃತ್ತಿಯೆಂದು ಬೀಗಿಕೊಂಡು ಹೇಳಿದರು. ಹಾಗೂ ನನ್ನನ್ನು ಡಾಕ್ಟರ್ ಮಾಡಲು ಓದಿಸಿ ಎಂದು ನನ್ನ ಚಿಕ್ಕಪ್ಪಂದಿರಿಗೆ ಸೂಚಿಸಿದರು. ಅದೊಂದು ಸಾಧ್ಯವಾಗಲಾರದ ಗುರಿ ಎಂಬುದು ಅವರೆಲ್ಲರ ಅನಿಸಿಕೆಯಾಗಿದ್ದುದರಲ್ಲಿ ಅನುಮಾನವಿರಲಿಲ್ಲ. ಅದೆಲ್ಲಾ ಕೆಲವೇ ವರ್ಷಗಳಲ್ಲಿ ಸಾಧ್ಯವಾದ ಘಟನೆಗಳು ನನ್ನ ಮನದಾಳದಿಂದ ಒಂದೊಂದಾಗಿ ಹೊರಬರಲಾರಂಭಿಸಿದವು.

ಊರಿಗೆ ವಾಪಾಸಾದ ನಂತರ ಮನೆಯವರೆಲ್ಲರ ಪ್ರತಿಕ್ರಿಯೆಗಳನ್ನು ಸ್ಪಷ್ಟವಾಗಿ ಊಹಿಸುವುದು ಕಷ್ಟವೆನಿಸುವಂತಿತ್ತು. ಒಂದಂತೂ ಎಲ್ಲರಿಗೂ ಮನವರಿಕೆಯಾದಂತಿತ್ತು. ನಾನೀಗ ಡಾಕ್ಟರಾಗಲು ಮೆಡಿಕಲ್ ಕಾಲೇಜು ಸೇರಿ, ಅಲ್ಲಿ ಬಹಳ ಕಾಲ ವಿದ್ಯಾಭ್ಯಾಸ ಮಾಡಬೇಕು;

ಅದಕ್ಕಾಗಿ ಕುಟುಂಬದಿಂದ ಅಪಾರ ಹಣಕಾಸುಗಳನ್ನು ಒದಗಿಸಬೇಕಾಗುತ್ತದೆಂಬುದು ಎಲ್ಲರ ಮನಸ್ಸಿಗೆ ಹೊಳೆದಿತ್ತು. ಅವ್ವನಿಗೆ ಮತ್ತೊಂದು ಸಂಕಷ್ಟ ಎದುರಾದಂತಾಯಿತು. ದೀರ್ಘಕಾಲ ನನ್ನನ್ನು ಬಿಟ್ಟಿರುವುದು ಒಂದು ರೀತಿಯ ಕಷ್ಟವಾದರೆ, ಮೆಡಿಕಲ್ ವಿದ್ಯಾಭ್ಯಾಸಕ್ಕೆ ಅಪಾರ ಹಣ ಒದಗಿಸುವ ಸಮಸ್ಯೆ ಮತ್ತೊಂದು ರೀತಿಯದಾಯಿತು; ಮನೆಯವರೂ ಒಪ್ಪಿದರೂ, ನಮ್ಮಿಂದಾಗಿ ಇಡೀ ಕುಟುಂಬ ಸಂಕಷ್ಟಕ್ಕೆ ಸಿಲುಕ ಬೇಕಾಗುತ್ತದೆಂಬ ಮಾನಸಿಕ ಒತ್ತಡ ಇನ್ನೊಂದು ರೀತಿಯದು. ಖಾಸ ಚಿಕ್ಕಪ್ಪಂದಿರಿಗೆ ಸಂದಿಗ್ಧ ಪರಿಸ್ಥಿತಿ ಇನ್ನಷ್ಟು ಉದ್ವೇಗಕ್ಕೊಳಗಾಗುವಂತಾಯಿತು. ಬಿಳಿ ಅಣ್ಣಯ್ಯ ನಾನು ಆಯ್ಕೆಯಾದ ವಿಷಯದಲ್ಲಿ ಅತಿ ಹೆಚ್ಚಿನ ಆವೇಶಕ್ಕೊಳಗಾಗಿದ್ದರು. ಎಂ.ಬಿ.ಬಿ.ಎಸ್., ಪದವಿ ಗಳಿಸಲು ನನ್ನನ್ನು ಮೈಸೂರಿಗೆ ಕಳುಹಿಸುವ ನಿರ್ಧಾರದ ಬಗೆಗೆ ಕುಟುಂಬದ ಇತರರ ಜೊತೆ ಚರ್ಚೆ, ವಿಚಾರ ವಿನಿಮಯ ನಡೆಸುತ್ತಿದ್ದರು. ಕುಟುಂಬದ ಆರ್ಥಿಕ ಪರಿಸ್ಥಿತಿ ಅಷ್ಟೇನೂ ತೃಪ್ತಿಕರವಾಗಿರದಿದ್ದುದೂ ಸಹ ಇಂತಹ ಅನಿಶ್ಚಿತ ಪರಿಸ್ಥಿತಿಗೆ ಕಾರಣವಾಗಿತ್ತೆಂಬುದನ್ನು ಮತ್ತೆ ಹೇಳಬೇಕಾಗಿಲ್ಲ. ಇಂತಹ ಹೆಪ್ಪುಗಟ್ಟಿದ ವಾತಾವರಣದಲ್ಲಿ ನನ್ನಲ್ಲೂ ಹತಾಶಾ ಭಾವನೆಯುಂಟಾಗಿದ್ದರಲ್ಲಿ ಅಚ್ಚರಿಯಿಲ್ಲ. ಆಗ ತಾನೆ ಮಳೆಗಾಲ ಆರಂಭವಾಗಿ ಗದ್ದೆಯ ನಾಟಿಯ ಕೆಲಸ ಶುರುವಾಗಿತ್ತು. ಇನ್ನೇನು ಮನೆಯಲ್ಲೇ ಉಳಿದುಕೊಂಡು ನಾನೂ ವ್ಯವಸಾಯ ವೃತ್ತಿಯನ್ನು ಅವಲಂಬಿಸುವುದೇ ಸರಿಯೆಂದು ೨-೩ ದಿನ ಗದ್ದೆಯಲ್ಲಿ ನೇಗಿಲು ಹಿಡಿದು ಉಳಲಾರಂಭಿಸಿದೆ. ನೇಗಿಲ ಹಿಡಿದ ಹಸ್ತಗಳಲ್ಲಿ ಬೊಬ್ಬೆಗಳೆದ್ದು ನೋವು ಅನುಭವಿಸಿದ್ದರ ನೆನಪೀಗಲೂ ಮರುಕಳಿಸುತ್ತಿದೆ.

ಬಹುಶಃ ನಾನು ಹತಾಶನಾಗಿ ಮನೆಯಲ್ಲೇ ವ್ಯರ್ಥ ಜೀವನ ನಡೆಸಲು ಆರಂಭಿಸಿದ ವಿಚಾರ ನಮ್ಮ ಬಂಧುಗಳಾದ ಮೂಡುವಳ್ಳಿ ಮಂಜಪ್ಪ ಹೆಗ್ಗಡೆಯವರು ಮತ್ತು ಬೈಸೆ ತಮ್ಮಯ್ಯ ಗೌಡರವರೆಗೂ ಮುಟ್ಟಿರಬೇಕು. ಅವರಿಬ್ಬರೂ ಮನೆಗೆ ಬಂದು ನಮ್ಮ ಕುಟುಂಬದವರಿಗೆ ಒದಗಿ ಬಂದಿರುವ ಅಂತಹ ಮಹತ್ವದ ಅವಕಾಶವನ್ನು ಹಾಳು ಮಾಡಿಕೊಳ್ಳಬಾರದೆಂದು ಎಲ್ಲರ ಹತ್ತಿರ ಮಾತುಕತೆ ಆರಂಭಿಸಿದರು. ಒಂದೆರಡು ದಿನ ಅವರ ಪ್ರಯತ್ನದಿಂದ ನನ್ನನ್ನು ಮೈಸೂರಿಗೆ ಕಳುಹಿಸುವ ಬಗೆಗೆ ಒಂದು ರೀತಿಯ ಸಮ್ಮತಿಯನ್ನು ರೂಪಿಸುವುದರಲ್ಲಿ ಯಶಸ್ವಿಯಾದರೆಂದೇ ಹೇಳಬಹುದು. ಆ ಸಲುವಾಗಿ ಆಗಿಂದಾಗ್ಗೆ ಹಣ ಒದಗಿಸುವ ಸಮಸ್ಯೆ ಮುಂದಿನದು. ಯಡೂರು ಸಾಹುಕಾರರಲ್ಲಿ ನಮಗಾಗ ಲೇವಾದೇವಿಯ ವ್ಯವಹಾರ ಇಲ್ಲದಿದ್ದರೂ, ನನ್ನ ಕಾರಣಕ್ಕಾಗಿ ಹಣ ಒದಗಿಸಲು ಸಮ್ಮತಿಸಿದರೂ, ಕುಟುಂಬದ ಮೂರೂ ಬುಡಕಟ್ಟಿನವರು ಸಾಲ ಪತ್ರಕ್ಕೆ ರುಜು ಮಾಡಿ ಕೊಡಬೇಕಾಗುತ್ತದೆಂಬ ಷರತ್ತು ವಿಧಿಸಿದ್ದರಂತೆ. ಮನೆಯವರು ಅದಕ್ಕೆ ಒಪ್ಪಿದ್ದರಿಂದ ನಾನು ಮೊದಲ ಸಾರಿ ಮೈಸೂರಿಗೆ ತೆರಳಲು ಬೇಕಾಗುವ ಹಣದ ಏರ್ಪಾಡಾಯಿತು.

ಇಷ್ಟಾದರೂ ಅವ್ವ ಎಂದಿನಂತೆ ಸಪ್ಪೆ ಮೋರೆ ಮಾಡಿಕೊಂಡೇ ನಾನು ಮೈಸೂರಿಗೆ ಹೊರಡುವ ಸಿದ್ಧತೆ ಮಾಡಿಕೊಟ್ಟಳು. ಮೈಸೂರಿನಲ್ಲಿ ಡಾಕ್ಟರಾಗುವ ವಿದ್ಯೆ ಕಲಿಯಲು ಹೊರಟಾಗಲೂ ನನಗೇನೂ ತೊಂದರೆ ಸಂಭವಿಸದಿರಲೆಂದು, ಸಾಮಾನುಗಳ ಜೊತೆ ಕೆಲವು ಮನೆಮದ್ದುಗಳ ಪೊಟ್ಟಣಗಳು ಸೇರಿದ್ದವು! ಹೊರಡುವ ದಿನ ದುಃಖ ದುಮ್ಮಾನಗಳು ಉಕ್ಕಿ ಹರಿಯುವಂತಿದ್ದವು. ವಾರ, ಎರಡು ವಾರಗಳಿಗೊಮ್ಮೆಯಾದರೂ ಕಾಗದಗಳನ್ನು ಬರೆಯುತ್ತಿರಲೇಬೇಕೆಂದು ನನ್ನಿಂದ ಭರವಸೆ ಪಡೆಯಲು ಮರೆಯಲಿಲ್ಲ! ಎಂದಿನಂತೆ ಬಿಳಿ ಅಣ್ಣಯ್ಯ ಮೇಗರವಳ್ಳಿಯವರೆಗೂ ಬಂದು ಬಸ್ಸು ಹತ್ತಿಸಿದರು.

# ೬. ಮೆಡಿಕಲ್ ವಿದ್ಯಾಭ್ಯಾಸ

ಅಂತೂ ವೈದ್ಯನಾಗುವ ಮೊದಲ ಹೆಜ್ಜೆಯಾಗಿ ಮೈಸೂರು ನಗರವನ್ನು ಸೇರಿದೆ. ದೊಡ್ಡ ಗಡಿಯಾರ ಚೌಕದ ಹತ್ತಿರದಲ್ಲಿ ಸೋವಿಯಾಗಿದ್ದ ಗಾರ್ಡನ್ ಹೋಟೆಲಿನಲ್ಲಿ ಒಂದು ಕೊಠಡಿಯನ್ನು ಹಿಡಿದೆ. (ಈಗ ಅಲ್ಲೊಂದು ಅತ್ಯಾಧುನಿಕ ಚಿತ್ರಮಂದಿರವಿದೆ). ತಿಂಗಳಿಗೆ ಎಂಟು ರೂಪಾಯಿಗಳ ಬಾಡಿಗೆ ನಿಗದಿಯಾಗಿತ್ತು.

ಮರುದಿನವೇ ಮೆಡಿಕಲ್ ಕಾಲೇಜಿಗೆ ಶುಲ್ಕ ಪಾವತಿ ಮಾಡಲು ಹೋದೆ. ಸಂಬಂಧಿಸಿದ ಗುಮಾಸ್ತರ ಹತ್ತಿರ ಹೋದಾಗ, ನನ್ನ ಹೆಸರು ಕೇಳಿ ಅರ್ಜಿ ಫಾರಂನ್ನು ಹುಡುಕಿ ತೆಗೆದರು. ತತ್‌ಕ್ಷಣ ಆಶ್ಚರ್ಯಚಕಿತರಾಗಿ ತಲೆ ಮೇಲೆ ಕೈ ಇರಿಸಿಕೊಂಡು, "ಯಾರ್ರೀ, ನೀವು? ಟೈಪು ಮಾಡಿದ ಅರ್ಜಿಫಾರಂ ಕಳಿಸಿದ್ದೀರಲ್ಲ! ಅಚ್ಚು ಮಾಡಿದ ಫಾರಂಗಳನ್ನು ಮಾತ್ರ ಕಳುಹಿಸಬೇಕೆಂದು ನಮೂದಿಸಿದ್ದು ನಿಮ್ಮ ಕಣ್ಣಿಗೆ ಬೀಳಲೇ ಇಲ್ಲವೆ?" ಎಂದು ಗದರಿಸುವಂತೆ ನೋಡಲಾರಂಭಿಸಿದರು. ಅಚ್ಚು ಮಾಡಿದ ಫಾರಂ ಸಕಾಲದಲ್ಲಿ ಸಿಗಲಿಲ್ಲವಾದ್ದರಿಂದ ಹಾಗೆ ಮಾಡಬೇಕಾಯಿತೆಂದು ನನ್ನ ಅಸಹಾಯಕ ಪರಿಸ್ಥಿತಿಯನ್ನು ವಿವರಿಸಿದೆ. ನಾನು ಕಳುಹಿಸಿದ ಅರ್ಜಿಯನ್ನು ಸ್ವೀಕರಿಸಿದ ಅಧಿಕಾರಿ ಅದನ್ನು ಆಗಿಂದಾಗಲೇ ತಿರಸ್ಕರಿಸಬೇಕಿತ್ತಂತೆ; ಬದಲಿಗೆ ಅದು ಸ್ವೀಕಾರವಾಗಿದ್ದಲ್ಲದೆ ಆ ಅಭ್ಯರ್ಥಿಯ ಆಯ್ಕೆಯೂ ಆಗಿದೆಯೆಂದರೆ ಅದೆಷ್ಟು ಅಭಾಸ ವಾಗಿರಬೇಡ; ಮುಂದೆ ಅದೇನಾದರೂ ಪತ್ತೆಯಾದರೆ ಸಂಬಂಧಿಸಿದ ಅಧಿಕಾರಿಗೆ ಶಿಕ್ಷೆಯೋ ಇಲ್ಲವೆ ಕೆಲಸವನ್ನೇ ಕಳೆದುಕೊಳ್ಳುವಂತಾಗಬಹುದೆಂದು ಪರಿತಪಿಸಿದರು. ಮುಂದೇನು ಮಾಡಬಹುದೆಂದು ಸ್ವಲ್ಪ ಯೋಚಿಸಿ ಅಚ್ಚಾದ ಮತ್ತೊಂದು ಫಾರಂನ್ನು ನನ್ನ ಮುಂದಿಟ್ಟರು. ಹಾಗೂ ಅದನ್ನು ಇನ್ನೊಂದು ವಾರದೊಳಗೆ ಭರ್ತಿಮಾಡಿ, ನನ್ನ ಪೋಷಕರ ರುಜು ಮಾಡಿಸಿ ಮತ್ತೆ ಸಲ್ಲಿಸಬೇಕೆಂದು ಸೂಚಿಸಿದರು. ನಿಗದಿತ ಶುಲ್ಕವನ್ನು ಪಾವತಿಸಿ, ಅವರಿಂದಾದ ಉಪಕಾರಕ್ಕೆ ಕೃತಜ್ಞತೆ ಹೇಳಿ ಹೊರಬಂದೆ. ಫಾರಂನ್ನು ಊರಿಗೆ ಕಳುಹಿಸಿ ಚಿಕ್ಕಪ್ಪನವರ ಹೆಬ್ಬೆಟ್ಟಿನ ಗುರುತು ಹಾಕಿಸಿ ವಾಪಸ್ಸು ಬಂದ ಮೇಲೆ ಕಾಲೇಜಿನ ಗುಮಾಸ್ತರಿಗೆ ಸಲ್ಲಿಸಿದೆ!

ಮೈಸೂರಿಗೆ ತಲುಪಿದ ಒಂದೆರಡು ದಿನಗಳಲ್ಲೇ ನನ್ನಂತೆಯೇ ಸೇರಲು ಬಂದ ಕೆಲವರ ಪರಿಚಯವಾಯಿತು. ಅವರೊಡನೆ ಪೇಟೆಗಳಲ್ಲಿ ಸುತ್ತಾಡಿ ಹೊಸಬಟ್ಟೆ ಬರೆಗಳನ್ನು ಖರೀದಿಸಿದೆ; ಎರಡು ಸೂಟುಗಳನ್ನು ಹೊಲಿಯಲು ಕೊಟ್ಟೆ; ಒಂದು ಜೊತೆ ಬೂಟ್ಸುಗಳನ್ನೂ ಕೊಂಡು ಕೊಂಡೆ.

ಇನ್ನು ಕಾಯಂ ಆಗಿ ಊಟ ವಸತಿಗಳ ಏರ್ಪಾಡು ಮಾಡುವುದು ಮುಂದಿನ ಗುರಿ. ಈ ದಿಸೆಯಲ್ಲಿ ಎರಡು ಆಯ್ಕೆಗಳಿದ್ದವು. ನಮ್ಮ ಜನಾಂಗದವರ ನಜರಬಾದಿನಲ್ಲಿದ್ದ ಒಕ್ಕಲಿಗರ ವಿದ್ಯಾರ್ಥಿನಿಲಯವನ್ನು ಸೇರುವುದು, ಇಲ್ಲ, ಸರ್ಕಾರದ ವತಿಯಿಂದ ನಡೆಸಲ್ಪಡುತ್ತಿರುವ ಮೆಡಿಕಲ್ ಕಾಲೇಜು ವಿದ್ಯಾರ್ಥಿನಿಲಯವನ್ನು ಸೇರಿಕೊಳ್ಳುವುದು. ಒಕ್ಕಲಿಗರ ವಿದ್ಯಾರ್ಥಿ ನಿಲಯದಲ್ಲಿ ಬಹುಪಾಲು ಬಯಲು ಸೀಮೆಯವರೇ ಇರುತ್ತಿದ್ದು ಮಲೆನಾಡಿಗನಾದ ನನಗೆ ಅಲ್ಲಿ ಪರಿಸರ ಸರಿಹೊಂದಲಾಗದೆಂದೋ ಅಥವಾ ಅದು ಕಾಲೇಜಿಗೆ ಬಹಳ ದೂರದಲ್ಲಿದೆಯೆಂದೋ

ಅದರ ಆಯ್ಕೆ ನನಗೆ ಸರಿಯೆನಿಸಲಿಲ್ಲ. ಇದಲ್ಲದೆ ಮೈಸೂರಿನಲ್ಲಿ ಒಕ್ಕಲಿಗ ವಿದ್ಯಾರ್ಥಿಗಳ ಸಹಾಯಕ್ಕಾಗಿ ಕೆ. ಎಚ್. ರಾಮಯ್ಯನವರ ಅನಾಥಾಲಯವೊಂದಿತ್ತು. ಅದರಲ್ಲಿ ಬಹಳಷ್ಟು ನಿರ್ಗತಿಕರಿಗಾಗಿ ಉಚಿತ ಊಟೋಪಚಾರ ನೀಡುವ ವ್ಯವಸ್ಥೆ ಇರುತ್ತಿತ್ತು. ನಾನೊಬ್ಬ ನಿರ್ಗತಿಕನೆಂದುಕೊಳ್ಳುವಂತಹ ಸ್ಥಿತಿಯವನಾಗಿರದಿದ್ದುದರಿಂದ ಅದನ್ನು ಸೇರುವ ಬಗೆಗೆ ಪ್ರಯತ್ನ ಮಾಡಲೇ ಇಲ್ಲ. ಅಂತಿಮವಾಗಿ ಸ್ವಲ್ಪ ದುಬಾರಿ ಎನಿಸಬಹುದಾದರೂ ಮೆಡಿಕಲ್ ಕಾಲೇಜು ವಿದ್ಯಾರ್ಥಿ ನಿಲಯವನ್ನೇ ಸೇರುವ ನಿರ್ಧಾರ ಮಾಡಿದೆ. ಕಾಲೇಜಿಗೆ ಎರಡು ಮೂರು ಫರ್ಲಾಂಗು ದೂರ ಝಾನ್ಸಿ ಲಕ್ಷ್ಮೀಬಾಯಿ ರಸ್ತೆಯಲ್ಲಿ ಕಾಲೇಜು ವಿದ್ಯಾರ್ಥಿ ನಿಲಯವಿತ್ತು. ಕೆಲವು ದೊಡ್ಡ ಹಾಗೂ ಹಲವು ಸಣ್ಣಪುಟ್ಟ ಕಟ್ಟಡಗಳ ಸಮುಚ್ಚಯ ಅದಾಗಿತ್ತು. ಆದರೂ ಕಾಲೇಜಿಗೆ ಸೇರಿದವರೆಲ್ಲರಿಗೂ ತಕ್ಷಣ ವಸತಿ ಸಿಗುವುದು ಸಾಧ್ಯವಿರಲಿಲ್ಲ. ಅದರಲ್ಲಿ ಕೊಠಡಿಗಳು ಲಭ್ಯವಾಗುವುದಕ್ಕೆ ಒಂದೆರಡು ವರ್ಷಗಳವರೆಗೂ ಕಾಯಬೇಕಾಗುತ್ತಿತ್ತು. ಅದರಿಂದ ವಿದ್ಯಾರ್ಥಿನಿಲಯಕ್ಕೆ ಸ್ವಲ್ಪ ದೂರದ ಹಳೇಬಂಡಿ ಕೇರಿಯಲ್ಲಿ ಒಂದು ವಸತಿ ಗೃಹವನ್ನು ಪತ್ತೆ ಹಚ್ಚಿದೆವು. ಅಷ್ಟರಲ್ಲೇ ಸ್ನೇಹಿತರಾಗಿದ್ದ ನಮ್ಮ ಕಡೆಯವನೇ ಆದ ಆಯನೂರು ನಾರಾಯಣಪ್ಪ ಮತ್ತು ನಾನು ಅದರಲ್ಲಿ ಒಂದು ಕೊಠಡಿಯನ್ನು ಪಡೆದುಕೊಂಡೆವು. ಅದರಲ್ಲಿ ಸುಮಾರು ಹತ್ತು ಕೊಠಡಿಗಳಿದ್ದು, ಮುಂದೆ ಬೆಂಗಳೂರು ಕಡೆಯಿಂದ ಬಂದ ಇತರ ೮-೧೦ ಮೆಡಿಕಲ್ ವಿದ್ಯಾರ್ಥಿಗಳೂ ಅದೇ ವಸತಿಗೃಹದಲ್ಲಿ ನೆಲಸುವಂತಾಯಿತು. ಬಹುಪಾಲು ಸಿರಿವಂತರ ಕುಟುಂಬಗಳಿಗೆ ಸೇರಿದವರಾದ ಅವರೆಲ್ಲಾ ಹಿಂದಿನಿಂದಲೂ ಸೂಟುಬೂಟುಧಾರಿಗಳಾಗಿ, ಇಂಗ್ಲೀಷ್‌ನಲ್ಲಿ ನಿರರ್ಗಳವಾಗಿ ಮತಾಡಬಲ್ಲವರಾಗಿದ್ದರು. ಅಲ್ಲದೆ ತಮಿಳು, ತೆಲುಗು, ಮರಾಠಿಗಳಂಥ ಭಾಷಾ ಮೂಲದವರು ಅವರಲ್ಲಿದ್ದರು. ಅಲ್ಲಿ ಸೇರಿದ ನಮ್ಮೆಲ್ಲರಲ್ಲಿ ಅಷ್ಟೆಲ್ಲಾ ವೈವಿಧ್ಯತೆಗಳಿದ್ದರೂ ನಾವೆಲ್ಲಾ ಬಹುಬೇಗ ಆತ್ಮೀಯ ಸ್ನೇಹಿತರಂತಾಗಿ ಬಿಟ್ಟೆವು. ಹಳ್ಳಿಗಾಡಿನಿಂದ ಅದೇ ಮೊದಲ ಬಾರಿಗೆ ದೊಡ್ಡ ಪಟ್ಟಣದ ಪರಿಸರಕ್ಕೆ ಬಂದಿದ್ದ ನನಗೆ ಯಾವ ರೀತಿಯಲ್ಲೂ ಬೇಸರ ಉಂಟಾಗದಂತೆ ವರ್ತಿಸುತ್ತಿದ್ದರು. ವಿದ್ಯಾರ್ಥಿನಿಲಯಕ್ಕೆ ಊಟ ಉಪಚಾರಗಳಿಗೆ, ಸಿನೆಮಾಗಳಿಗೆ ಹೋಗುವುದು, ಇಲ್ಲವೆ ಹೊರಗಡೆ ತಿರುಗಾಟಕ್ಕೆ ಹೋಗುವಾಗಲೆಲ್ಲಾ ನಮ್ಮ ಏಳೆಂಟು ಜನರ ತಂಡ ಒಟ್ಟಾಗಿಯೇ ಇರುತ್ತಿತ್ತು. ನಾವು ಅದೆಷ್ಟು ಅನ್ಯೋನ್ಯವಾಗಿದ್ದೆವೆಂದರೆ, ನಮ್ಮ ನಮ್ಮ ಭಾಷೆಗಳನ್ನು ಇತರರಿಗೆ ಹೇಳಿ ಕೊಡುವ ದಿಸೆಯಲ್ಲಿ ಪರಸ್ಪರರ ಭಾಷೆಗಳ



ಮೈಸೂರಿನಲ್ಲಿ
ಊರಿನ ಸ್ನೇಹಿತರೊಂದಿಗೆ



ಮೆಡಿಕಲ್ ಕಾಲೇಜು ಹಾಸ್ಟೆಲ್ ಸ್ನೇಹಿತರ ಗುಂಪು

ಅಕ್ಷರಾಭ್ಯಾಸಗಳನ್ನೂ ಮಾಡುತ್ತಿದ್ದೆವು. ಇಂತಹ ಸ್ನೇಹಪೂರ್ಣ ಸಹಯೋಗ ಕಾಲೇಜಿನಿಂದ ಹೊರಬಂದ ನಂತರವೂ ಮುಂದುವರಿದುಕೊಂಡು ಬಂದಿದೆ.

ಮುಂದೆ ತರಗತಿಗಳು ಪ್ರಾರಂಭವಾದವು. ವಿಧಿಬದ್ಧವಾಗಿ ಮೆಡಿಕಲ್ ವಿಷಯ ಬೋಧನೆಗಳು ಶುರುವಾಗುವ ಮೊದಲು ಆರು ತಿಂಗಳ ಕಾಲ, ಅದಕ್ಕೆ ಅವಶ್ಯಕವಾದ ಕೆಲವು ಮೂಲಭೂತ ವಿಷಯಗಳ ಕಲಿಕೆಯ - ಪ್ರೀ ಮೆಡಿಕಲ್ ಕೋರ್ಸ್ (Premedical Course) ವ್ಯವಸ್ಥೆ ಇರುತ್ತದೆ. ಅದಕ್ಕೆ ಸಂಬಂಧಿಸಿದ ವಿಷಯಗಳು ಕಾಲೇಜು ವಿದ್ಯಾರ್ಥಿ ನಿಲಯಕ್ಕೆ ತುಸು ದೂರದಲ್ಲೇ ಇದ್ದ ಯುವರಾಜಾ ಕಾಲೇಜಿನಲ್ಲಿ ಜರುಗುತ್ತಿದ್ದವು. ವಿದ್ಯಾರ್ಥಿ ನಿಲಯಕ್ಕೆ ಬೆಳಗಿನ ಉಪಹಾರಕ್ಕೆ ಹೋದವರು, ಕಾಲೇಜಿನಲ್ಲಿ ತರಗತಿಗಳನ್ನು ಮುಗಿಸಿದ ನಂತರ ಸಾಯಂಕಾಲ ಕೊಠಡಿಗಳಿಗೆ ಹಿಂದಿರುಗುತ್ತಿದ್ದೆವು. ನಂತರ ದಿನಗಳಲ್ಲಿ ಕೃಷ್ಣರಾಜೇಂದ್ರ (ಕೆ. ಆರ್.) ಆಸ್ಪತ್ರೆಯ ಹತ್ತಿರವಿದ್ದ ಮೆಡಿಕಾಲೇಜಿಗೆ ಹೋಗಬೇಕಾಯಿತು. ಸುಮಾರು ೨-೩ ಫರ್ಲಾಂಗು ದೂರವನ್ನು ನಾನು ೫-೬ ವರ್ಷ ನಡೆದುಕೊಂಡೇ ಹೋಗುತ್ತಿದ್ದೆ. ಬಹುಪಾಲು ಜನ ಬೈಸಿಕಲ್‌ಗಳಲ್ಲಿ, ಕೆಲವರು ಮೋಟಾರು ಬೈಸಿಕಲ್‌ಗಳಲ್ಲಿ ಅಪರೂಪಕ್ಕೆ ಕೆಲವರು ಸ್ವಂತ ಕಾರುಗಳಲ್ಲಿ ಕಾಲೇಜಿಗೆ ಬರುತ್ತಿದ್ದರು. ಶಿವಮೊಗ್ಗಾದಲ್ಲಿ ಪ್ರತಿದಿನ ಮೂರು ಮೈಲಿಗಳಷ್ಟು ನಡೆಯುತ್ತಿದ್ದುದರಿಂದ ನನಗೆ ಈಗಿನ ದೂರ ಅಷ್ಟೇನೂ ಪ್ರಯಾಸವೆನಿಸಲಿಲ್ಲ.

## ಆಶಾದೀಪ ನಂದಿತು

ಪ್ರೀ-ಮೆಡಿಕಲ್ ವಿದ್ಯಾಭ್ಯಾಸದಲ್ಲಿ ತೊಡಗಿಕೊಂಡಿರುವಾಗಲೇ ನಾನು ವೈಯಕ್ತಿಕವಾದ ದುರಂತವೊಂದನ್ನು ಎದಿರಿಸಬೇಕಾಯಿತು. ಅದೆಷ್ಟೇ ಕಷ್ಟಗಳಾಗಲೀ, ಮನೆತನದಲ್ಲಿ ನಾನೊಬ್ಬ ಡಾಕ್ಟರಾಗಲೇ ಬೇಕೆಂಬ ಮಹತ್ತರ ಆಶೋತ್ತರಗಳನ್ನಿಟ್ಟುಕೊಂಡಿದ್ದ ಬಿಳಿ ಅಣ್ಣಯ್ಯ ತೀರಾ ಆಕಸ್ಮಿಕವೋ ಎನ್ನುವ ರೀತಿಯಲ್ಲಿ ಮರಣ ಹೊಂದಿದರು. ನನಗಾಗ ಪರೀಕ್ಷಾ ಸಮಯವಾದ್ದರಿಂದ ತಕ್ಷಣ ಊರಿಗೆ ಹೋಗಲಾಗಲಿಲ್ಲ. ಮೆಡಿಕಲ್ ಕಾಲೇಜಿಗೆ ಸೇರುವ ಸಮಯದಲ್ಲಿದ್ದ ಅಡೆತಡೆಗಳನ್ನು ಎದುರಿಸುವಲ್ಲಿ ಬೆಂಬಲವಾಗಿ ನಿಂತಿದ್ದರಲ್ಲದೆ, ಮುಂದೆ ಒದಗಬಹುದಾದ ತೊಂದರೆಗಳನ್ನು ನಿಭಾಯಿಸುವಲ್ಲಿ ಆಶಾದೀಪದಂತಿದ್ದರು. ಆಗ ನನಗಾದ ದುಃಖದ ಪರಿಯನ್ನು ವಿವರಿಸಲಾರೆ. ಅದರಲ್ಲೂ ಅವರು ಸಾವನ್ನಪ್ಪಿದ ರೀತಿ ಇಂದಿಗೂ ನನ್ನನ್ನು ಬಾಧಿಸುತ್ತಿದೆ. ಹಿಂದಿನ ವರ್ಷದ ಮಳೆಗಾಲದಲ್ಲಿ ನಮ್ಮ ಗದ್ದೆಗಳ ಪಕ್ಕದಲ್ಲೇ ಹರಿಯುತ್ತಿದ್ದ ಹೊಳೆ, ಇನ್ನೂ ನಮ್ಮ ಕಡೆ ಕೊರೆದು ಹರಿಯಲಾರಂಭಿಸಿತ್ತು; ಹಾಗೆ ಒಂದೆರಡು ವರ್ಷ ಬಿಟ್ಟಿದ್ದರೆ ತನ್ನ ಪಾತ್ರವನ್ನು ಬದಲಿಸಿ ಬಹುಪಾಲು ಗದ್ದೆಗಳನ್ನು ಕಬಳಿಸುವ ಸಾಧ್ಯತೆಗಳಿದ್ದವು. ಅಂತಹ ಕೊರೆತವನ್ನು ತಡೆಯುವ ಭಗೀರಥ ಪ್ರಯತ್ನವನ್ನು ಅವರೊಬ್ಬರೇ ಏಕಾಂಗಿಯಾಗಿ ಮಾಡತೊಡಗಿದ್ದರು. ಹೊಳೆಯ ನಡುವೆ ಇರುತ್ತಿದ್ದ ದೊಡ್ಡ ದೊಡ್ಡ ಕಲ್ಲುಗಳನ್ನು ಎತ್ತಿ ತಂದು ನಮ್ಮ ಕಡೆಯ ದಂಡೆಗೆ ಪೇರಿಸಿ, ಅದಕ್ಕೆ ಬಲ ಬರುವಂತೆ ಮಾಡುತ್ತಿದ್ದರು. ಅಂತಹ ಒಂದು ಸಮಯದಲ್ಲಿ ಅವರಿಗೆ ಹೊಟ್ಟೆ ನೋವು, ವಾಂತಿ ಶುರುವಾಯಿತಂತೆ. ಬಹುಶಃ ಅವರಿಗೆ 'ಅಂಡವಾಯು' (ಹರ್ನಿಯ) ವ್ಯಾಧಿ ಸ್ವಲ್ಪ ಕಾಲದಿಂದಿದ್ದಿರಬೇಕು. ಉಸಿರುಕಟ್ಟಿ ಭಾರವಾದ ವಸ್ತುಗಳನ್ನು ಎತ್ತುವಾಗ ಕರುಳಿನ ಸುರುಳಿಗಳು ಹರ್ನಿಯಾದ ಚೀಲದೊಳಗಡೆ ನುಸುಳಿ, ತಿರುಚಿಕೊಂಡಾಗ (ಸ್ಟ್ರ್ಯಾಂಗ್ಯುಲೇಟ್) ಅಂತಹ ಲಕ್ಷಣಗಳು ಉದ್ಭವಿಸುವುದು ಸಾಮಾನ್ಯ. ಜನನಾಂಗದ ಸನಿಹದಲ್ಲಿ ಅಂತಹ ಪರಿಸ್ಥಿತಿ ಉಂಟಾಗಿದ್ದರಿಂದ ನಾಚಿಕೆಯಿಂದ ಯಾರೊಂದಿಗೂ ಹೇಳಿಕೊಂಡಿಲ್ಲವೆನಿಸುತ್ತದೆ.

ಅಂತಹದಕ್ಕೆಲ್ಲಾ ದೂರದ ಆಸ್ಪತ್ರೆಗಳಿಗೆ ಕೊಂಡೊಯ್ಯುವ ವಿವೇಚನೆಯೂ ಇರಲಿಲ್ಲ. ಹತ್ತಿರದಲ್ಲಿ ವೈದ್ಯಕೀಯ ನೆರವು ದೊರೆತಿರಲಾರದು. ಹೆಚ್ಚೆಂದರೆ 'ಭಟ್ಟಿ ಜಾರಿದೆ' ಎಂದು ಹೊಟ್ಟೆಯ ಭಾಗಕ್ಕೆ ಎಣ್ಣೆ ತೀಡಿ ಭಟ್ಟಿ ಕಟ್ಟಿರಬೇಕು. ಆದರಿಂದಲೇ ಅವರು ಸಾಯುವಂತಾಗಿರಬೇಕು. ಮುಂದೆ ಊರಿಗೆ ಬಂದಾಗ ನಡೆದ ಪರಿಸ್ಥಿತಿಯ ಬಗೆಗೆ ನೀಡಿದ ವಿವರಣೆಗಳಿಂದ ಅದನ್ನು ಅಂದಾಜು ಮಾಡಿದೆ. ಮುಂದೆ ನಾನೊಬ್ಬ ಶಸ್ತ್ರಚಿಕಿತ್ಸಾ ಪರಿಣಿತ (ಸರ್ಜನ್) ಆಗಿ ಅಂತಹ ನೂರಾರು ಜನರಿಗೆ ಆಪರೇಷನ್ ಮಾಡಿ ಬದುಕಿಸುವ ಅವಕಾಶಗಳು ಒದಗಿದ್ದವು. ಆದರೆ ನನಗೆ ಪ್ರೀತಿ ಪಾತ್ರರಾಗಿದ್ದು, ಮುಂದೆ ನಾನೊಬ್ಬ ವೈದ್ಯನಾಗಬೇಕೆಂದು ಪಣ ತೊಟ್ಟವರಿಗೇ ನಾನೇನೂ ಮಾಡಲಾಗದ ವ್ಯಥೆ ನನ್ನನ್ನು ಸದಾ ಬಾಧಿಸುತ್ತಿದೆ.

## ಆರ್ಥಿಕ ಮುಗ್ಗಟ್ಟು

ಕೇವಲ ಆರು ತಿಂಗಳ ಅವಧಿಯ ಪ್ರೀ-ಮೆಡಿಕಲ್ ಕೋರ್ಸನ್ನು ತುಂಬಾ ಶ್ರಮಪಟ್ಟು ಅಭ್ಯಾಸ ಮಾಡಿ, ತೇರ್ಗಡೆಯಾದೆ. ಸಾಮಾನ್ಯವಾಗಿ ಮೊದಲನೆ ಎಂ.ಬಿ.ಬಿ.ಎಸ್., ತರಗತಿಗೆ ಬಂದಾಗ ವಿದ್ಯಾರ್ಥಿವೇತನ ದೊರೆಯುವ ಅವಕಾಶವುಂಟಾಗುತ್ತದೆ. ಆ ಸಮಿತಿಯ ಸದಸ್ಯರನ್ನು ಕಂಡು, ಕಡಿದಾಳ್ ಮಂಜಪ್ಪನವರ ಶಿಫಾರಸ್ಸು ಪತ್ರಗಳನ್ನೂ ನೀಡಿದ್ದೆ. ಸಮಿತಿಯ ಸಭೆ ಜರುಗಿದ ಮೊದಲ ದಿನ ಸಾಯಂಕಾಲ ಲಭ್ಯವಾದ ಮಾಹಿತಿಯಂತೆ ನನಗೆ ವಿದ್ಯಾರ್ಥಿ ವೇತನ ಮಂಜೂರಾಗಿದೆಯೆಂದು ತಿಳಿದು ಬಂದಿತ್ತು; ಆದರೆ ಮುಂದಿನ ಒಂದೆರಡು ದಿನಗಳಲ್ಲಿ ಪ್ರಕಟಣೆ ಹೊರಬಂದಾಗ ನನ್ನ ಹೆಸರು ಪಟ್ಟಿಯಿಂದ ಮಾಯವಾಗಿತ್ತು! ಕೆಲವು ದಿನಗಳ ನಂತರದ ವದಂತಿಯಂತೆ, ಬೆಂಗಳೂರು ಕಡೆ ನಮ್ಮ ಜನಾಂಗದ ಕೆಲವರು ಶಿವಮೊಗ್ಗ ಜಿಲ್ಲೆಯವನಾದ ನಾನು ಒಬ್ಬ ಕಾಫಿ ಪ್ಲಾಂಟರನ ಮಗನಾಗಿದ್ದು ವಿದ್ಯಾರ್ಥಿ ವೇತನ ಪಡೆಯುವಷ್ಟು ಬಡವನಲ್ಲವೆಂದು ಕೆಲವು ಸದಸ್ಯರ ಮನಸ್ಸನ್ನು ಬದಲಾಯಿಸುವುದರಲ್ಲಿ ಯಶಸ್ವಿಯಾಗಿದ್ದರಂತೆ. ನಿಜ ಸ್ಥಿತಿಯೆಂದರೆ ನಾನು ಒಬ್ಬ ಕಾಫಿ ಪ್ಲಾಂಟರನ ಮಗನಾಗುವುದಿರಲಿ, ಆ ಸಮಯದಲ್ಲಿ ಶಿವಮೊಗ್ಗ ಜಿಲ್ಲೆಯಲ್ಲಿ ಬಹುಶಃ ಒಂದೂ ಕಾಫಿ ಗಿಡ ಬೆಳೆದವರಿರಲಿಲ್ಲ!

ಮೆಡಿಕಲ್ ವಿದ್ಯಾಭ್ಯಾಸದ ಅವಧಿಯಲ್ಲಿ ವಿದ್ಯಾರ್ಥಿ ವೇತನ ದೊರೆಯುತ್ತದೆಂಬ ಆಶಾಭಾವನೆಯಿಂದಲೇ ಮೆಡಿಕಲ್ ಕಾಲೇಜಿಗೆ ಸೇರಿದವ ನಾನು. ಆ ಸಮಯದಲ್ಲಿ ಕೇಂದ್ರ ಸರ್ಕಾರದವರೂ ಸಹ ಕೆಲವರಿಗೆ ವಿದ್ಯಾರ್ಥಿ ವೇತನ ನೀಡುವ ಪರಿಪಾಟವಿತ್ತು. ನಮ್ಮ ಜಿಲ್ಲೆಯ ಸಂಸತ್ ಸದಸ್ಯರಿಗೆ ಆಗಿಂದಾಗ್ಗೆ ನನ್ನ ಪರಿಸ್ಥಿತಿಯನ್ನು ವಿವರಿಸಿ ಪತ್ರಗಳನ್ನು ಬರೆದು ಕೇಂದ್ರ ಸರ್ಕಾರದ ವಿದ್ಯಾರ್ಥಿ ವೇತನ ಮಂಜೂರು ಮಾಡಿಸಿ ಕೊಡಬೇಕೆಂದು ವಿನಂತಿಸಿಕೊಳ್ಳುತ್ತಿದ್ದೆ. ಪ್ರತಿಸಾರಿಯೂ ಆಯಾ ವರ್ಷದಲ್ಲಿ ನೀಡುವ ವಿದ್ಯಾರ್ಥಿವೇತನಗಳು ಮುಗಿದು ಹೋಗಿವೆಯಂತಲೂ ಮುಂದಿನ ಸಾರಿ ತಪ್ಪದೇ ನನಗೆ ಕೊಡಿಸುವ ಆಶ್ವಾಸನೆಯ ಪತ್ರಗಳು ಬರುತ್ತಿದ್ದವು. ಆದರೆ ಮೆಡಿಕಲ್ ಕಾಲೇಜಿನಲ್ಲಿದ್ದ ಪೂರ್ಣ ಅವಧಿಯಲ್ಲಿ ಅವರಿಂದ ಯಾವುದೇ ಸಹಾಯ ದೊರೆಯಲಿಲ್ಲ. ಅಂತಹ ಪತ್ರಗಳು ಬಂದ ಹಲವಾರು ತಿಂಗಳ ನಂತರವೂ ಅವರ ಕಡೆಯವರಿಗೆ ವಿದ್ಯಾರ್ಥಿ ವೇತನ ಪ್ರಕಟಣೆಗಳು ಬರುತ್ತಲೇ ಇರುತ್ತಿದ್ದವು. ಅಂತಹ ಕೆಲವರು ಶ್ರೀಮಂತ ಕುಟುಂಬದವರಾಗಿರುತ್ತಿದ್ದುದು ಗುಟ್ಟಾಗೇನೂ ಇರುತ್ತಿರಲಿಲ್ಲ; ಜೊತೆಗೆ ಕೆಲವರು ಅವರ ಕೋಮಿನ ಮಠಮಾನ್ಯರು ನಡೆಸುತ್ತಿದ್ದ ವಿದ್ಯಾರ್ಥಿ ನಿಲಯಗಳಲ್ಲಿ ಪುಕ್ಕಟೆ

ಉಟೋಪಚಾರಗಳನ್ನು ಮಾಡಿಕೊಂಡಿರುತ್ತಿದ್ದರು! ಆ ಕಾಲದ ನೈಜ ಪರಿಸ್ಥಿತಿಯ ಕಡೆ ಗಮನ ಹರಿಸಲು ಇವೆಲ್ಲಾ ಬರೆಯಬೇಕಾಯಿತು.

ಇಂತಹ ಪರಿಸ್ಥಿತಿಯಿಂದ ಖರ್ಚಿಗೆ ಹಣಕಾಸು ಒದಗಿಸಿಕೊಳ್ಳುವ ಬವಣೆ ಸದಾ ಬೆನ್ನು ಹತ್ತಿರುತ್ತಿತ್ತು. ಮುಂದಿನ ಕೆಲಸಾರಿ ವಿದ್ಯಾರ್ಥಿ ವೇತನ ಇಲ್ಲವೆ ಕಾಲೇಜು ಶುಲ್ಕವನ್ನು ಮನ್ನಾ ಮಾಡುವ ಅನುಕೂಲಗಳು ದೊರೆತಾಗ ಪರಿಸ್ಥಿತಿ ಸ್ವಲ್ಪಮಟ್ಟಿಗೆ ಸುಧಾರಿಸುತ್ತಿದ್ದುದೂ ಉಂಟು.

ನಾವು ಸೇರಿದ ವರ್ಷ (೧೯೫೦) ಮೈಸೂರು ಮೆಡಿಕಲ್ ಕಾಲೇಜಿಗೆ ರಜತ ಮಹೋತ್ಸವದ ವರ್ಷ. ಅದೇ ಸಮಯದಲ್ಲಿ ಕಳೆದ ಇಪ್ಪತ್ತೈದು ವರ್ಷಗಳಲ್ಲಿ ಸಾಧ್ಯವಾಗದ ಘಟನೆಯೂ ನಡೆಯಿತು. ಅದೆಂದರೆ ನಮ್ಮ ಕಾಲೇಜಿನ ಎಂ.ಬಿ.ಬಿ.ಎಸ್., ಪದವಿಯನ್ನು ಇಂಡಿಯನ್ ಮೆಡಿಕಲ್ ಕೌನ್ಸಿಲ್ (Indian Medical Council) 'ಮಾನ್ಯತೆ' ಮಾಡಿದ (Recognition) ಘೋಷಣೆಯೂ ಹೊರಬಿದ್ದಿತು. ಅದರಿಂದ ನಮ್ಮ ಕಾಲೇಜಿನಲ್ಲಿ ಎಂ.ಬಿ.ಬಿ.ಎಸ್., ಪದವಿ ಗಳಿಸಿದವರು ಭಾರತದೆಲ್ಲೆಡೆಗಳಲ್ಲದೆ, ವಿದೇಶಗಳಲ್ಲೂ ಕಾರ್ಯ ನಿರ್ವಹಿಸುವ ಇಲ್ಲವೆ ಹೆಚ್ಚಿನ ವಿದ್ಯಾಭ್ಯಾಸ ಮಾಡುವುದಕ್ಕೆ ಪರವಾನಿಗಿ ಸಿಕ್ಕಿದಂತಾಯಿತು. ಈ ಹಿನ್ನೆಲೆಯಲ್ಲಿ ರಜತ ಮಹೋತ್ಸವ ಅತ್ಯಂತ ವಿಜೃಂಭಣೆಯಿಂದ ಜರುಗಿತು. ನಮ್ಮ ತಂಡದವರು ರಜತ ಮಹೋತ್ಸವದ ತಂಡದವರೆಂದು ಬೀಗುವಂತಾಯಿತು. ಆಗಿನ ತಂಡದ ಕೆಲವರು ಕಾಲಕಾಲಕ್ಕೆ ಒಂದೆಡೆ ಸೇರಿ ಈಗಲೂ ಆ ಸಂಭ್ರಮವನ್ನು ನೆನಪು ಮಾಡಿಕೊಳ್ಳುತ್ತಿದ್ದಾರೆ!

ಮೆಡಿಕಲ್ ಕಾಲೇಜಿನ ಮೊದಲ ಎರಡು ವರ್ಷಗಳ ಬೆಳಗಿನ ಸಮಯ ಶವಗಳ ವಿವಿಧ ಅಂಗಾಂಗ/ಅವಯವಗಳನ್ನು ಒಂದು ಕ್ರಮಬದ್ಧವಾಗಿ ಕತ್ತರಿಸುತ್ತಾ (Dissection) ಅವುಗಳ ರಚನೆಯನ್ನು ಅಭ್ಯಾಸ ಮಾಡುವ ಕಾರ್ಯದಲ್ಲಿ ತೊಡಗಿಸಿಕೊಳ್ಳಬೇಕಾಗುತ್ತದೆ. ಎಂದೂ ಶವಗಳನ್ನು ನೋಡುವ ಅವಕಾಶವಿಲ್ಲದ ನನ್ನಂತಹವರಿಗೆ ಅದೊಂದು ಭಯಮಿಶ್ರಿತ ಜುಗುಪ್ಸೆಯ ಅನುಭವವೇ ಸರಿ. ನಾಲ್ಕಾರು ವಿದ್ಯಾರ್ಥಿಗಳ ಬೇರೆ ಬೇರೆ ತಂಡಗಳನ್ನಾಗಿ ವಿಂಗಡಿಸಿರುತ್ತಾರೆ. ಸರದಿಯಂತೆ ಪುಸ್ತಕದಲ್ಲಿನ ವಿವರಣೆಗಳನ್ನು ಒಂದಿಬ್ಬರು ಓದುತ್ತಿರುತ್ತಾರೆ. ಉಳಿದವರು ಸಂಬಂಧಿಸಿದ ಭಾಗವನ್ನು ಕ್ರಮಾನುಗತವಾಗಿ ಕತ್ತರಿಸಿ ಒಳಗಿನ ಭಾಗಗಳನ್ನು ಬಿಡಿಸಿ ತೋರಿಸುವ ಪ್ರಯತ್ನ ಮಾಡುತ್ತಿರುತ್ತಾರೆ. ಆ ಎರಡು ವರ್ಷ ಈ ರೀತಿಯಲ್ಲಿ ಅಂಗರಚನೆಯ ಅಭ್ಯಾಸದ ಜೊತೆಗೆ ವಿವಿಧ ಅಂಗಾಂಗಗಳು ಕಾರ್ಯ ನಿರ್ವಹಿಸುವ ವಿಧಾನಗಳ ಬಗೆಗೆ (ಅಂಗ ಕ್ರಿಯಾಶಾಸ್ತ್ರ) ಪಾಠ ಪ್ರವಚನ, ಪ್ರಯೋಗಗಳು ಜರುಗುತ್ತವೆ. ಮೊದಲನೇ ವರ್ಷದ ಅಂತ್ಯದಲ್ಲಿ ರಸಾಯನ ವಿಜ್ಞಾನದ ವಿಷಯಗಳಲ್ಲಿ ಮಾತ್ರ ಪರೀಕ್ಷೆ ನಡೆಯುತ್ತವೆ. ಅವುಗಳಲ್ಲಿ ಬಹುಪಾಲು ಎಲ್ಲರೂ ನಿರಾಯಾಸವಾಗಿ ತೇರ್ಗಡೆಯಾಗುತ್ತಾರೆ. ನಿಜವಾದ ಅಗ್ನಿ ಪರೀಕ್ಷೆ ಎರಡನೇ ವರ್ಷದ ಕೊನೆಯಲ್ಲಿ ಜರುಗುತ್ತದೆ. ಹಿಂದಿನ ಎರಡು ವರ್ಷಗಳು ಅಭ್ಯಾಸ ನಿರತರಾಗಿದ್ದ ಅಂಗ ರಚನಾಶಾಸ್ತ್ರ ಮತ್ತು ಅಂಗಕ್ರಿಯಾ ಶಾಸ್ತ್ರಗಳೆರಡರಲ್ಲೂ ಪರೀಕ್ಷೆಗಳಾಗುತ್ತವೆ. ಮೆಡಿಕಲ್ ಕೋರ್ಸ್‌ನಲ್ಲಿ ಈ ಎರಡನೇ ವರ್ಷದ ಪರೀಕ್ಷೆ ಅತ್ಯಂತ ಕಷ್ಟಕರವಾದುದೆಂಬ ಪ್ರತೀತಿ ಇದೆ; ಮೊದಲನೇ ಪ್ರಯತ್ನದಲ್ಲಿ ತೇರ್ಗಡೆಯಾಗುವುದು ಸುಲಭ ಸಾಧ್ಯವಲ್ಲ, ಕೆಲವರು ೫-೬ ಪ್ರಯತ್ನಗಳನಂತರ ತೇರ್ಗಡೆಯಾಗುತ್ತಿದ್ದರು. ನಾವಿದ್ದ ಸಮಯದಲ್ಲಿ ೧೦-೧೨ ಪ್ರಯತ್ನಗಳನ್ನು ಮಾಡಿಯೂ ತೇರ್ಗಡೆಯಾಗದವರಿದ್ದರು! ಇವೆಲ್ಲದರ ಜೊತೆ ವಿದ್ಯಾರ್ಥಿ ನಿಲಯದಲ್ಲಿದ್ದ ಹಿರಿಯ ವಿದ್ಯಾರ್ಥಿಗಳು ಕೆಲವು ವರ್ಗಗಳಿಗೆ ಸೇರಿದವರು ಯಾವುದೋ ಅವ್ಯಕ್ತ ಕಾರಣದಿಂದ ಮೊದಲ ಪ್ರಯತ್ನದಲ್ಲಿ ತೇರ್ಗಡೆಯಾಗುವುದೇ ಇಲ್ಲವೆಂದು ನಮ್ಮ ಮನಸ್ಥೈರ್ಯ ಕುಂದುವಂತೆ

ಮಾಡುತ್ತಿದ್ದುದೂ ಉಂಟು. ಆದರೂ ಧೃತಿಗೆಡದೆ ಮೊದಲಿನಿಂದಲೂ ನಾನು ಶ್ರಮವಹಿಸಿ ಅಭ್ಯಾಸ ಮಾಡುತ್ತಲೇ ಇದ್ದೆ. ಪರೀಕ್ಷೆಯ ಎಲ್ಲಾ ವಿಭಾಗಗಳಲ್ಲೂ ನನ್ನ ಸಾಧನೆಗಳು ತೃಪ್ತಿಕರವೆಂದೇ ಭಾವಿಸಿದ್ದೆ. ಆದರೆ ನಮ್ಮ ಸ್ನೇಹಿತರ ತಂಡದಲ್ಲಿ ನಾನು ಸೇರಿದಂತೆ ಹಲವರು ಅನುತ್ತೀರ್ಣರಾಗಿದ್ದೆವು. ಹಿರಿಯ ವಿದ್ಯಾರ್ಥಿಗಳು ಹೇಳಿದಂತೆ ಕೆಲವರು ಅನುತ್ತೀರ್ಣ ವಾದುದರಲ್ಲಿ ಅಂತಹ ಪ್ರಭಾವಗಳಿದ್ದಿರಬಹುದೆಂಬ ಅನುಮಾನಗಳಿದ್ದವೆಂದೇ ಹೇಳಬಹುದು. ಹಿಂದೆಂದೂ ಅನುತ್ತೀರ್ಣನಾಗದೆ ಉಳಿಸಿಕೊಂಡು ಬಂದಿದ್ದ ನನ್ನ ಗರಿಮೆಗೆ ಪೆಟ್ಟು ಕೊಟ್ಟಂತಾದರೂ, ಎದೆಗುಂದದೇ ಇನ್ನೂ ಹೆಚ್ಚು ಶ್ರಮ ವಹಿಸಿ ಅಭ್ಯಾಸ ಮಾಡಿದೆ. ಮುಂದಿನ ಆರು ತಿಂಗಳಲ್ಲಿ ಜರುಗಿದ ಪರೀಕ್ಷೆಯಲ್ಲಿ ತೇರ್ಗಡೆಯಾದೆ.

ಮೊದಲೆರಡು ವರ್ಷಗಳ ಪರೀಕ್ಷೆಗಳಲ್ಲಿ ತೇರ್ಗಡೆಯಾದವರು ಮೂರನೇ ವರ್ಷದಿಂದ ಬೆಳಗಿನ ಸಮಯ ಆಸ್ಪತ್ರೆಗಳಲ್ಲಿ ರೋಗಿಗಳ ಪರೀಕ್ಷಾ ವಿಧಾನಗಳಲ್ಲಿ ತರಬೇತಿ ಪಡೆಯುವ ಪರಿಪಾಟ ಆರಂಭವಾಗುತ್ತದೆ. ಆ ಸಮಯದಲ್ಲಿ ವಿದ್ಯಾರ್ಥಿಯ ವೇಷಭೂಷಣ ಗಳಲ್ಲಿ ಬಹಳಷ್ಟು ಬದಲಾವಣೆಗಳಾಗ ಬೇಕಾಗುತ್ತದೆ. ಹಿಂದಿನ ಎರಡು ವರ್ಷಗಳು ಬರೇ ಪ್ಯಾಂಟು, ಷರಟು, ಕೋಟು ಧರಿಸಿ ತರಗತಿಗಳಿಗೆ ಹೋಗುತ್ತಿದ್ದವರಿಗೆ ಈಗ 'ನೆಕ್‌ಟೈ' (Neck tie - ಕೊರಳಪಟ್ಟಿ) ಕಟ್ಟುವುದು ಹಾಗೂ ಬಿಳೀಕೋಟು ಧರಿಸುವುದು ಕಡ್ಡಾಯವಾಗುತ್ತದೆ. ಜೊತೆಯಲ್ಲಿ ವೈದ್ಯ ವೃತ್ತಿಯ ಸಂಕೇತವಾಗಿರುವ ಸ್ಟೆತೋಸ್ಕೋಪ್ (Stethoscope) ಬಿಳಿ ಕೋಟಿನ ಜೇಬನ್ನೋ ಇಲ್ಲವೆ ಕೊರಳನ್ನೋ ಅಲಂಕರಿಸುತ್ತದೆ. ಬಹುಪಾಲು ಮಂದಿ ಡಾಕ್ಟರಾಗಿ ಬಿಟ್ಟೆವೆಂದು ಬೀಗುತ್ತಾರೆ. ಇಂತಹ ಒಂದು ಪರಿಸ್ಥಿತಿಗೆ ಹೊಂದಿಕೊಂಡು ಜೀವನ ನಡೆಸುವುದಕ್ಕೆ ಹಿಂದಿನ ವರ್ಷಗಳಿಗಿಂತಲೂ ಹೆಚ್ಚು ಹಣವನ್ನು ವ್ಯಯ ಮಾಡಬೇಕಾಗುತ್ತದೆ.

ಒಳಗಿನ ಎಂಟು ಗಂಟೆಯ ಒಳಗೇ ಆಸ್ಪತ್ರೆಗೆ ಹಾಜರಾಗಬೇಕು. ನಿಗದಿತ ವಿಭಾಗದಲ್ಲಿ ನಮಗಿಂತ ಹಿರಿಯ ವಿದ್ಯಾರ್ಥಿಗಳು ಹಾಗೂ ಇತರ ಸಹಾಯಕ ವೈದ್ಯ/ಪ್ರವಾಚಕರ ಜೊತೆಗೂಡಿ ಅವರು ಕಾರ್ಯ ನಿರ್ವಹಿಸುವ ರೀತಿ ನೀತಿಗಳನ್ನು ಅನುಸರಿಸುವ ಅಭ್ಯಾಸ ಮಾಡಿಕೊಳ್ಳಬೇಕು. ರೋಗಿಗಳ ಪರೀಕ್ಷಾ ವಿಧಾನ, ಕೇಸ್‌ಷೀಟ್‌ಗಳನ್ನು ಕ್ರಮವರಿತು ಬರೆಯುವ ರೀತಿ, ಅವರ ಮಲ ಮೂತ್ರ ಮುಂತಾದವುಗಳ ಪರೀಕ್ಷಾ ವಿಧಿವಿಧಾನಗಳಲ್ಲಿ ಆಸಕ್ತಿ ವಹಿಸಿ, ಅವುಗಳಲ್ಲಿ ಸಕ್ರಿಯವಾಗಿ ಭಾಗಿಗಳಾಗಬೇಕಾಗುತ್ತದೆ. ಪ್ರಾಧ್ಯಾಪಕರುಗಳು ರೋಗಿಗಳ ಸಮ್ಮುಖದಲ್ಲಿ ಜರುಗಿಸುವ 'ಪ್ರಾತ್ಯಕ್ಷಿಕೆ' ಅಥವಾ 'ಹಾಸಿಗೆ ಬದಿ ಚರ್ಚೆ' (Clinics)ಗಳ ಸಮಯದಲ್ಲಿ ಹಾಜರಿದ್ದು ರೋಗಿ ಮತ್ತು ರೋಗಲಕ್ಷಣಗಳ ಬಗೆಗೆ ಕಲಿತುಕೊಳ್ಳುವುದು ಬಹಳಷ್ಟಿರುತ್ತದೆ. ಮುಂದಿನ ತರಗತಿಗಳಿಗೆ ಬಡ್ತಿ ಪಡೆದಂತೆಲ್ಲಾ ನಾವೇ ರೋಗಿಯನ್ನು ಪರೀಕ್ಷಿಸಿ, ಪ್ರಯೋಗ ಪರೀಕ್ಷೆಗಳನ್ನು ಜರುಗಿಸಿ ಪ್ರಾಧ್ಯಾಪಕರು ಮತ್ತು ಇತರ ವಿದ್ಯಾರ್ಥಿಗಳ ಸಮ್ಮುಖದಲ್ಲಿ ರೋಗಿಯ ಕಾಯಿಲೆಯ ಬಗೆಗೆ ನಾವು ರುಜುವಾತು ಮಾಡಿರುವ ಸಂಗತಿಗಳು, ರೋಗ ನಿರ್ಣಯ ಹಾಗೂ ಅನುಸರಿಸಬಹುದಾದ ಚಿಕಿತ್ಸಾ ವಿಧಾನ ಇವುಗಳ ಬಗೆಗೆ ನಮ್ಮ ಅಭಿಪ್ರಾಯಗಳನ್ನು ಮಂಡಿಸಬೇಕು. ನಡುವೆ ಪ್ರಾಧ್ಯಾಪಕರು ಮತ್ತಿತರ ಅನುಮಾನ/ಪ್ರಶ್ನೆಗಳಿಗೆ ಸಮಂಜಸವಾದ ಸಮಜಾಯಿಷಿಗಳನ್ನು ನೀಡಿ ಸಮರ್ಥಿಸಿಕೊಳ್ಳುವಂತಿರಬೇಕು. ಬಹುಪಾಲು ಆ ತನಕ ಬಾಯಿ ತೆರೆಯುವುದಕ್ಕೇ ಅಂಜುತ್ತಿದ್ದ ನನ್ನಂತಹವರಿಗೆ ಇದೊಂದು ಭಯ, ಭೀತಿ, ಪೇಚಿನ ಪ್ರಸಂಗಗಳಾಗುತ್ತಿದ್ದವೆಂದೇ ಹೇಳಬೇಕು. ಆದರೆ ದಿನ ಕಳೆದಂತೆಲ್ಲಾ ಸುಧಾರಿಸಿಕೊಂಡು ಎಲ್ಲರಂತಾಗುತ್ತೇವೆ. ವೈದ್ಯ ವೃತ್ತಿಯನ್ನು ಕರಗತ ಮಾಡಿಕೊಂಡು ಮುಂದೆ ಯಶಸ್ವೀ ವೈದ್ಯನಾಗಿ

ಪರಿವರ್ತನೆಯಾಗುವುದಕ್ಕೆ ಇಂತಹ ಪ್ರಾತ್ಯಕ್ಷಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸುವುದು ಪ್ರಮುಖ ಪಾತ್ರ ವಹಿಸುತ್ತದೆ. ಆದರೂ ಇದರಲ್ಲಿನ ಒಂದು ವಿಪರ್ಯಾಸವನ್ನು ದಾಖಲಿಸಬಯಸುತ್ತೇನೆ. ಅಂದಿನ ಕಾಲದಲ್ಲಿ (ಇಂದಿಗೂ ಸಹ) ಇಂತಹ ಕಾರ್ಯಗಳಲ್ಲಿ ಪ್ರಮುಖ ಪಾತ್ರ ವಹಿಸುವ ಬೋಧಕ ವೈದ್ಯರು ಬಹಳಷ್ಟು 'ಬಿಝಿ' (Busy) ಯಾಗಿರುತ್ತಿದ್ದು (ಬಹುಪಾಲು ಖಾಸಗಿ ಪ್ರಾಕ್ಟೀಸ್‌ನಲ್ಲಿ ತೊಡಗಿಕೊಂಡು) ಕಾಲಕಾಲಕ್ಕೆ ಅವುಗಳಲ್ಲಿ ಭಾಗವಹಿಸದೇ, ಇಲ್ಲವೆ ತುಂಬಾ ತಡವಾಗಿ ಬಂದು ನಿರಾಶೆಗೊಳಿಸುವ ಪ್ರವೃತ್ತಿ ಇರುತ್ತಿತ್ತೆಂದು ವಿಷಾದದಿಂದ ಹೇಳಬೇಕಾಗಿದೆ.

ಕೊನೆಯ ಈ ಮೂರು ವರ್ಷಗಳಲ್ಲಿ ವೈದ್ಯಶಾಸ್ತ್ರ (Medicine) ಶಸ್ತ್ರಚಿಕಿತ್ಸಾ ಶಾಸ್ತ್ರ (Surgery) ಮತ್ತು ಸ್ತ್ರೀರೋಗ ಶಾಸ್ತ್ರ (Obstetrics & Gynaecology) ಗಳ ಬೋಧನೆ ನಿರಂತರವಾಗಿ ಜರುಗುತ್ತಿರುತ್ತವೆ. ಆದರೆ ಅವುಗಳ ಬಗೆಗೆ ಅಂತಿಮ ಪರೀಕ್ಷೆ ನಡೆಯುವುದು ಕೊನೆಯ ವರ್ಷದಲ್ಲೇ. ಮೂರು ಮತ್ತು ನಾಲ್ಕನೇ ತರಗತಿಗಳಲ್ಲಿ ಔಷಧ ಶಾಸ್ತ್ರ, ಸಮುದಾಯ ವೈದ್ಯ ಶಾಸ್ತ್ರ, ವೈದ್ಯಕೀಯ ನ್ಯಾಯಶಾಸ್ತ್ರ, ರೋಗಶಾಸ್ತ್ರ, ನೇತ್ರ ವೈದ್ಯಶಾಸ್ತ್ರ, ಮುಂತಾದ ವಿಷಯಗಳ ಬೋಧನೆ ನಡೆಯುತ್ತಿದ್ದು, ನಾಲ್ಕನೇ ತರಗತಿ ಅಂತ್ಯವಾಗುವುದರೊಳಗೆ ಅವುಗಳ ಬಗೆಗೆ ಪರೀಕ್ಷೆಗಳು ಜರುಗುತ್ತವೆ. ಈ ಮೂರೂ ವರ್ಷ ಬಹಳಷ್ಟು ಶ್ರಮವಹಿಸಿ ಕಾರ್ಯ ನಿರ್ವಹಿಸಿ, ಅಭ್ಯಾಸವನ್ನು ಮುಂದುವರಿಸಿದೆ. ಹಾಗಾಗಿ ಎಲ್ಲಾ ಪರೀಕ್ಷೆಗಳಲ್ಲೂ ನಿರಾಯಾಸವಾಗಿ ತೇರ್ಗಡೆಯಾಗುತ್ತಿದ್ದೆ.

ಅಂತಿಮ ವರ್ಷ ಎಂ.ಬಿ.ಬಿ.ಎಸ್., ಪರೀಕ್ಷೆ ಒಂದು ರೀತಿಯ ಅಗ್ನಿಪರೀಕ್ಷೆಯೇ ಸರಿ. ಕಳೆದ ಮೂರು ವರ್ಷಗಳುದ್ದಕ್ಕೂ ಮೂರು ಪ್ರಮುಖ ವಿಷಯಗಳ ಬಗೆಗೆ ತಾತ್ವಿಕವಾಗಿ ಕಲಿತಿದ್ದಲ್ಲದೆ, ಸಂಬಂಧಿಸಿದ ರೋಗಿಗಳನ್ನು ಪರೀಕ್ಷಿಸಿ ಪ್ರತ್ಯಕ್ಷವಾಗಿ ಅನುಭವ ಪಡೆದಿರುತ್ತೇವೆ ಅದನ್ನೆಲ್ಲಾ ಒರೆಗೆ ಹಚ್ಚಲು ಪ್ರಶ್ನೆ ಪತ್ರಿಕೆಗಳಿಗೆ ಉತ್ತರಿಸುವುದು, ರೋಗಿಗಳ ಪ್ರಾತ್ಯಕ್ಷಿಕೆಗಳನ್ನು ಜರುಗಿಸುವುದು ಮೌಖಿಕ (Viva-Voce) ಪರೀಕ್ಷೆಯನ್ನು ಎದುರಿಸುವಂಥ ಅತ್ಯಂತ ತ್ರಾಸದಾಯಕ ಹಂತಗಳನ್ನು ಯಶಸ್ವಿಯಾಗಿ ದಾಟಬೇಕಾಗುತ್ತದೆ. ಮೆಡಿಕಲ್ ವಿದ್ಯಾಭ್ಯಾಸ ಒಂದು ರೀತಿಯ ಗುರುಕುಲ ವಿದ್ಯಾಭ್ಯಾಸದ ರೀತಿಯದೇ ಆದ್ದರಿಂದ ಪ್ರಾಧ್ಯಾಪಕರು ಹಾಗೂ ಇತರ ಬೋಧಕ ವರ್ಗದವರ ಮೆಚ್ಚಿಗೆಯನ್ನು ಗಳಿಸಿರುವುದೂ ಪ್ರಮುಖ ಪಾತ್ರ ವಹಿಸುತ್ತದೆ.

ಹಲವು ಅನಾನುಕೂಲತೆಗಳ ನಡುವೆಯೂ ಅಂತಿಮ ವರ್ಷದ ಪರೀಕ್ಷೆಗೆ ನನ್ನ ತಯಾರಿ ಸಮರ್ಪಕವಾಗಿಯೇ ಇತ್ತೆಂದು ಹೇಳಬಲ್ಲೆ. ಮೆಡಿಸನ್ ವಿಭಾಗವೊಂದನ್ನು ಹೊರತು ಪಡಿಸಿ, ಮಿಕ್ಕೆಲ್ಲಾ ವಿಭಾಗಗಳಲ್ಲಿ ಎಲ್ಲಾ ತರಹೆಯ ಪರೀಕ್ಷೆಗಳು ನನ್ನ ನಿರೀಕ್ಷೆಯಂತೆಯೆ ಸಾಗಿದವು. ಮೆಡಿಕಲ್ ವಿಭಾಗದ ಪ್ರಾತ್ಯಾಕ್ಷಿಕೆ (ಕ್ಲಿನಿಕಲ್)ಯ ಸಂದರ್ಭದಲ್ಲಿ ನನ್ನ ಯೋಜನೆಗಳು ತಲೆ ಕೆಳಗಾಗುವಂತಿದ್ದವು. ಮೆಡಿಕಲ್ ವಿಭಾಗದ ಮೊದಲ ಪ್ರಾತ್ಯಕ್ಷಿಕೆ ಆ ದಿನ; ನನ್ನ ಹೆಸರು ಇಂಗ್ಲಿಷ್‌ನ C ಅಕ್ಷರದಿಂದ ಆರಂಭವಾಗುವುದರಿಂದ ಮೊದಲ ತಂಡದಲ್ಲೇ ನನ್ನ ಸೇರ್ಪಡೆಯಾಗಿತ್ತು. ನನಗೆ ನಿಗದಿ ಪಡಿಸಿದ ರೋಗಿಯ ರೋಗ - ಇತಿಹಾಸ, ಮತ್ತಿತರ ವಿವರಗಳನ್ನು ಪಡೆದು ಕೊಂಡು, ಅವನನ್ನು ಆಮೂಲಾಗ್ರವಾಗಿ ಪರೀಕ್ಷೆ ಮಾಡಿದೆ; ಕೇಸ್ ಷೀಟನ್ನು ಬರೆದು ಮುಗಿಸಿದೆ. ಕೇವಲ ಅರ್ಧ ಮುಕ್ಕಾಲು ಗಂಟೆಯ ಅವಧಿಯಲ್ಲೇ ನನ್ನ ಪರೀಕ್ಷೆ ಮುಗಿದಿದೆಯೆಂದು ವರದಿ ಮಾಡಿದೆ. ಮೆಡಿಸನ್ ವಿಭಾಗದ ಪರೀಕ್ಷೆಗೆ ನಮ್ಮ ಕಾಲೇಜಿನವರೇ ಆದ ಒಬ್ಬ ಪ್ರಾಧ್ಯಾಪಕರಿದ್ದರು. ಹೊರಗಿನ ಪರೀಕ್ಷಕರನ್ನು ಕರೆಸುವ ನೀತಿಯಲ್ಲಿ ಆ ವರ್ಷ ಪ್ರಾಯೋಗಿಕವಾಗಿಯೋ ಎಂಬಂತೆ ಒಂದು ಬದಲಾವಣೆ ಮಾಡಲಾಗಿತ್ತು. ಇಂಜಿನಿಯರಿಂಗ್ ಪರೀಕ್ಷೆಗಳಿಗೆ, ಬೋಧಕ

ವೃತ್ತಿಯಲ್ಲಿರುವ ಪ್ರಾಧ್ಯಾಪಕರೇ ಅಲ್ಲದೆ ಇಲಾಖೆಯಲ್ಲಿ ಕಾರ್ಯ ನಿರತರಾದ ಉನ್ನತ ಶ್ರೇಣಿಯ ಇಂಜಿನಿರ್‌ರನ್ನು ಹೊರಗಿನ ಪರೀಕ್ಷಕರನ್ನಾಗಿ ಕರೆಸುವ ಪರಿಪಾಟವಿದೆಯಂತೆ. ಅದರಂತೆ ಈ ಸಾರಿ ಮೆಡಿಕಲ್ ಪರೀಕ್ಷೆಗೆ ಖ್ಯಾತ ಖಾಸಗಿ ವೈದ್ಯರಾಗಿದ್ದ ಒಬ್ಬರನ್ನು ಆ ಸಲುವಾಗಿ ಕರೆಸಿದ್ದರು. ನಮ್ಮ ಕಾಲೇಜಿನ ಪ್ರಾಧ್ಯಾಪಕರು, ಮೊದಲಿಗೆ ಕಾಲೇಜಿನಲ್ಲಿ ನನ್ನನ್ನು ನೋಡಿಯೇ ಇಲ್ಲವೆಂದು ಉದ್ಗಾರವೆತ್ತಿದರು. (ಅವರ ವಿಷಯದಲ್ಲಿ ಅದು ಸ್ವಲ್ಪಮಟ್ಟಿಗೆ ನಿಜವೇ. ಸದಾ ತಮ್ಮ ಕೊಠಡಿ ಯಲ್ಲಿ ಖಾಸಗಿ ಪ್ರಾಕ್ಟೀಸ್‌ನಲ್ಲಿ ನಿರತರಾಗಿದ್ದ ಅವರು ಪ್ರಾತ್ಯಕ್ಷಿಕೆಗಳು ಜರುಗಿಸುವುದು ತೀರಾ ಅಪರೂಪ. ಎಂದೋ ಒಂದು ಭಾನುವಾರ ಮಧ್ಯಾಹ್ನ ಎರಡೋ, ಮೂರೋ ಗಂಟೆಯ ಸಮಯಕ್ಕೆ; ಬೆಳಗಿನಿಂದ ಅದಕ್ಕಾಗಿ ಕ[illegible]ನಿಂತು ಬೇಸರ ಹಾಗೂ ಸುಸ್ತಾಗಿ ನಾನೂ ಸೇರಿದಂತೆ ಹಲವರು ಹೊರಟು ಹೋಗಿರುತ್ತಿದ್ದೆವು!) ಹಲವು ರೀತಿಯಲ್ಲಿ ತಿರುಚಿದಂಥ ಪ್ರಶ್ನೆಗಳನ್ನು ಹಾಕಿ ನಾನು ತಬ್ಬಿಬ್ಬಾಗುವಂತೆ ಮಾಡುತ್ತಿದ್ದರು. ಆದರೂ ಹೊರಗಿನ ಪರೀಕ್ಷಕರು ನಡುವೆ ಯಾವುದೇ ಪ್ರತಿಕ್ರಿಯೆ ತೋರಿಸದೆ ವೀಕ್ಷಕರಾಗಿಯೇ ನಿಂತಿದ್ದರು. ಬಹುಶಃ ಅವರಿಗೂ ಆ ರೀತಿಯಲ್ಲಿ ಅದೇ ಮೊದಲ ಪರೀಕ್ಷೆಯಾಗಿರಬೇಕು!

ಅದೇ ದಿನ ಮತ್ತೊಂದು ವಿಧದ ಪರೀಕ್ಷೆಯಲ್ಲಿ ಅಷ್ಟೇನೂ ಪ್ರಮುಖವಲ್ಲದ ಕಾಯಿಲೆಯಿಂದ ನರಳುವ ಮೂರು ಜನ ರೋಗಿಗಳನ್ನು ಪರೀಕ್ಷೆ ಮಾಡಬೇಕಾಗಿತ್ತು. ಅವರನ್ನೆಲ್ಲಾ ಸರಿಯಾಗಿ ಪರೀಕ್ಷೆ ಮಾಡಿದೆ. ಈ ಪರೀಕ್ಷೆಗೆ ನಮ್ಮ ಕಾಲೇಜಿನ ಮತ್ತೊಬ್ಬ ಹಿರಿಯ ಪ್ರಾಧ್ಯಾಪಕರಿದ್ದರು. ಕೇರಳದ ಕಡೆಯ ಪ್ರಾಧ್ಯಾಪಕರೊಬ್ಬರನ್ನು ಹೊರಗಿನ ಪರೀಕ್ಷಕರಾಗಿ ಕರೆಸಿದ್ದರು. ಅವರಿಬ್ಬರೂ ಕೇಳಿದ ಪ್ರಶ್ನೆಗಳಿಗೆಲ್ಲಾ ಸಮರ್ಪಕವಾಗಿಯೇ ಉತ್ತರಿಸಿದೆ; ಸಂಪ್ರೀತರಾದ ಅವರು ಯಾವ ತಕರಾರು ಎತ್ತಲಿಲ್ಲ. ಅಂತಿಮವಾಗಿ ನನ್ನ ಫಲಿತಾಂಶದ ಬಗೆಗೆ ಇತ್ಯರ್ಥವಾಗುವ ಸಮಯದಲ್ಲಿ ಮೊದಲ ತಂಡದ ಪರೀಕ್ಷಕರು, ಅದರಲ್ಲೂ ನಮ್ಮ ಕಾಲೇಜಿನ ಪ್ರಾಧ್ಯಾಪಕರು ನಾನು ಉತ್ತರಿಸಿದ ಬಗೆಗೆ ತಕರಾರು ಎತ್ತಿದರಂತೆ. ಆದರೆ ಎರಡನೇ ತಂಡದ ಪರೀಕ್ಷಕರು ನನ್ನ ನಿರ್ವಹಣೆಯ ಬಗೆಗೆ ಮೆಚ್ಚುಗೆ ವ್ಯಕ್ತಪಡಿಸಿ ನನ್ನ ಫಲಿತಾಂಶ ನಕಾರಾತ್ಮಕ ವಾಗದಂತೆ ನೋಡಿಕೊಂಡರಂತೆ. ಆ ದಿನ ಅಲ್ಲಿ ಸಹಾಯಕ ಪರೀಕ್ಷಕರಾಗಿದ್ದ ಇಬ್ಬರು ಸಹಾಯಕ ಪ್ರಾಧ್ಯಾಪಕರು ನಾನೊಬ್ಬ ಕಷ್ಟಪಟ್ಟು ಅಭ್ಯಾಸಮಾಡಿ, ಕಾರ್ಯ ನಿರ್ವಹಿಸುವ ವಿದ್ಯಾರ್ಥಿ ಯೆಂದೂ ದನಿಗೂಡಿಸಿದರಂತೆ; ಲಿಖಿತ ಪರೀಕ್ಷಾ ಪತ್ರಿಕೆಗಳಲ್ಲಿ ನನ್ನ ಉತ್ತರಗಳೂ ಉತ್ತಮ ತರಹದ್ದಾಗಿದ್ದು ನನ್ನನ್ನು ಸುಲಭವಾಗಿ ನಿರ್ಲಕ್ಷಿಸುವಂತಿರಲಿಲ್ಲ. ಇನ್ನುಳಿದ ಶಸ್ತ್ರಚಿಕಿತ್ಸೆ ಮತ್ತು ಸ್ತ್ರೀರೋಗ ವಿಭಾಗಗಳ ಎಲ್ಲಾ ಸ್ತರಗಳ ಪರೀಕ್ಷೆಗಳಲ್ಲೂ ನನ್ನ ಸಾಧನೆಗಳು ಉತ್ತಮವಾಗಿದ್ದು ಎಂ.ಬಿ.ಬಿ.ಎಸ್.,ನ ಅಂತಿಮ ಪರೀಕ್ಷೆಯಲ್ಲಿ ಮೊದಲ ಪ್ರಯತ್ನದಲ್ಲೇ (ಏಪ್ರಿಲ್ ೧೯೫೬) ತೇರ್ಗಡೆಯಾದೆ.

ನನ್ನ ಕನಸು ಮನಸಿನಲ್ಲೂ ಯೋಚಿಸಲಾಗದಿದ್ದ ವೈದ್ಯ ಪದವಿಯನ್ನು ಆಶ್ಚರ್ಯಕರ ರೀತಿಯಲ್ಲಿ ಗಳಿಸಿಕೊಂಡಿದ್ದೆ. ಅದೊಂದು ನನ್ನ ಜೀವಮಾನದ ಅತ್ಯಂತ ಸಂತೃಪ್ತ ಘಟ್ಟವೆಂದು ಭಾವಿಸುತ್ತೇನೆ. ಆದರೆ ಆಗಿನ ೫-೬ ವರ್ಷಗಳಲ್ಲಿ ಆರ್ಥಿಕವಾಗಿ ಅನುಭವಿಸಿದ ಕಷ್ಟಗಳು ಮರೆಯಲಾಗದ ಅನುಭವವಾಗಿ ಉಳಿದುಕೊಂಡಿವೆ. ಕಾಲೇಜಿಗೆ ಸೇರುವ ಮೊದಲು ವಿದ್ಯಾಭ್ಯಾಸದ ಖರ್ಚನ್ನು ಭರಿಸುವ ಬಗೆಗೆ ಒಂದು ಬಗೆಯ ಒಮ್ಮತ ಮೂಡಿದಂತಿದ್ದರೂ, ನಡು ನಡುವೆ ಗೃಹಕೃತ್ಯದ ಸಮಸ್ಯೆಗಳ ಸುಳಿಗಳಲ್ಲಿ ಸಿಲುಕಿಕೊಂಡು ಹಣ ಒದಗಿಸಿಕೊಳ್ಳುವಲ್ಲಿ ಪೇಚಾಡುವಂತಾಗುತ್ತಿತ್ತು. ಕೆಲವೊಂದು ಸಾರಿ ನನ್ನ ಹಿತಚಿಂತಕರಾದ ಮೂಡುವಳ್ಳಿ ಮಂಜಪ್ಪ

ಹೆಗ್ಗಡೆಯವರೋ ಬೈಸೆ ತಮ್ಮಯ್ಯಗೌಡರೋ ಆರ್ಥಿಕವಾಗಿ ಸಹಾಯ ಮಾಡುತ್ತಿದ್ದುದನ್ನು ಮರೆಯಲಾರೆ.

ಈ ಅವಧಿಯಲ್ಲಿ ನಮ್ಮ ಸಮಷ್ಟಿ ಕುಟುಂಬದೊಳಗಿನ ಸಾಮರಸ್ಯವೂ ಹದಗೆಡುವುದಕ್ಕೆ ಆರಂಭಿಸಿತ್ತು. ಯಾವ ಯಾವುದೋ ಕಾರಣಕ್ಕಾಗಿ ಪದೇ ಪದೇ ಭಿನ್ನಾಭಿಪ್ರಾಯಗಳು ತಲೆದೋರುತ್ತಿದ್ದು ಮನೆಯ ಕೆಲಸ ಕಾರ್ಯಗಳು ಸುಸೂತ್ರ ಜರುಗುತ್ತಿರಲಿಲ್ಲ. ವಿದ್ಯಾಭ್ಯಾಸಕ್ಕಾಗಿ ನನಗೆ ಆಗಿಂದಾಗ್ಗೆ ಒದಗಿಸಬೇಕಾಗುತ್ತಿದ್ದ ಹಣದ ಸಮಸ್ಯೆಯೂ ಪರೋಕ್ಷವಾಗಿಯಾದರೂ ಭಿನ್ನಾಭಿಪ್ರಾಯಗಳಿಗೆ ಸ್ವಲ್ಪ ಮಟ್ಟಿಗೆ ಕಾರಣವಾಗಿತ್ತೆಂದು ಹೇಳಬಹುದು. ಅದೆಷ್ಟು ಕಾಲ ಅಂತಹ ದೊಡ್ಡ ಸಂಸಾರವನ್ನು ಒಟ್ಟಾಗಿ ಮುಂದುವರಿಸಲು ಸಾಧ್ಯ ಎಂಬ ಭಾವನೆ ಕೆಲವು ಸದಸ್ಯರಲ್ಲಿ ಉಂಟಾಗತೊಡಗಿತ್ತು. ಅದಾಗಲೇ ಒಟ್ಟು ಸಂಸಾರದ ಕೆಲಸ ಕಾರ್ಯಗಳ ಬಗೆಗೆ ಆಸಕ್ತಿ ಕಳೆದು ಕೊಂಡಿದ್ದು ಕೆಲವರು ತಮ್ಮದೇ ಸ್ವಂತ ವ್ಯವಹಾರಗಳಲ್ಲಿ ತೊಡಗಿಕೊಳ್ಳಲಾರಂಭಿಸಿದ್ದರು; ಒಟ್ಟು ಕುಟುಂಬದ ಆಸ್ತಿಯಲ್ಲಿ ತಮ್ಮ ತಮ್ಮ ಪಾಲುಗಳನ್ನು ವಿಂಗಡಿಸಿಕೊಂಡು ಸ್ವತಂತ್ರ ಜೀವನ ನಡೆಸುವ ಇರಾದೆ ಕೆಲವರಲ್ಲಿ ಉಂಟಾಗಿತ್ತು. ಇವೆಲ್ಲದರ ಪರಿಣಾಮವಾಗಿ ಜಮೀನುಗಳಿಗೆ ಕಾಲಕಾಲದಲ್ಲಿ ಜರುಗಬೇಕಾದ ಕೆಲಸ ಕಾರ್ಯಗಳು ಜರುಗದೆ, ಆದಾಯವೂ ಇಳಿಮುಖವಾಗ ತೊಡಗಿದ್ದರಲ್ಲಿ ಅಚ್ಚರಿಯೇನಿಲ್ಲ. ಅಂತಹ ದೊಡ್ಡ ಪರಿವಾರದಲ್ಲಿ ಪ್ರತಿವರ್ಷ ಮದುವೆ, ಕಾಯಿಲೆ ಕಸಾಲೆಗಳಿಗೂ ಖರ್ಚು ಜಾಸ್ತಿಯಾಗುತ್ತಿದ್ದುದು ಅನಿವಾರ್ಯವಾಗಿತ್ತು. ಸಂಬಂಧಿಕರು, ಹಿತೈಷಿಗಳಿಂದ ಪದೇ ಪದೇ ರಾಜೀ ಪಂಚಾಯಿತಿಗಳು ನಡೆಯುತ್ತಿದ್ದರೂ ಅಂತಹ ಒಪ್ಪಂದಗಳು ಬಹಳ ಕಾಲ ಉಳಿಯುತ್ತಿರಲಿಲ್ಲ. ಅಂತಿಮವಾಗಿ ೧೯೫೪ರ ಸಮಯಕ್ಕೆ ನಮ್ಮ ಆಸ್ತಿ ಮನೆಗಳನ್ನು ಹಿಸ್ಸೆ ಮಾಡಿಕೊಳ್ಳುವ ನಿರ್ಧಾರಕ್ಕೆ ಬರಬೇಕಾಯಿತು. ಆ ಸಂಬಂಧದಲ್ಲಿ ಹಲವು ಸಾರಿ ಪಂಚಾಯಿತಿಗಳು ನಡೆದು ೧೯೫೫ರ ಮಾರ್ಚ್ ತಿಂಗಳಲ್ಲಿ ಹಿಸ್ಸಾ ಪಾರೀಖಾತ್ ಪತ್ರ ರಿಜಿಸ್ಟರ್ ಆಯಿತು. ಆದಿಯ ಮೂರು ಬುಡಕಟ್ಟುಗಳ ಆಧಾರವನ್ನನುಸರಿಸಿ ಮೂರು ಪಾಲುಗಳಾದವು. ಇಬ್ಬರೂ ಚಿಕ್ಕಪ್ಪಂದಿರು ಮತ್ತು ನಾನು ಒಂದು ಪಾಲಿನ ಹಿಸ್ಸೆದಾರರಾದೆವು.

ಅಷ್ಟರಲ್ಲಿ ನನ್ನ ವಿದ್ಯಾಭ್ಯಾಸದ ಅವಧಿಯು ಮುಗಿಯುವುದಕ್ಕೆ ಒಂದೂವರೆ ವರ್ಷ ಉಳಿದಿತ್ತೆಂದು ನೆನಪು. ಸಣ್ಣದಾದ ನಮ್ಮ ಬುಡಕಟ್ಟಿನ ಆಸ್ತಿಪಾಸ್ತಿಗಳ ಆದಾಯದಿಂದ ನನಗೆ ಅಗತ್ಯವಾದ ಹಣವನ್ನು ಒದಗಿಸುವುದು ಇನ್ನೂ ಕಷ್ಟವಾಗತೊಡಗಿತು. ನನ್ನ ದೆಸೆಯಿಂದಾಗಿ ಹಿಸ್ಸೆಯಾದ ಸಣ್ಣದಾದ ಕುಟುಂಬದ ಸಂಪನ್ಮೂಲಗಳ ಮೇಲೆ ಹೆಚ್ಚಿನ ಭಾರ ಉಂಟಾಗ ಬಾರದೆಂದು ನನ್ನ ತಾಯಿ, ಇನ್ನಾವುದಾದರೂ ಮೂಲಗಳಿಂದ ನಾನು ಹಣಕಾಸು ಒದಗಿಸಿ ಕೊಳ್ಳುವ ವ್ಯವಸ್ಥೆ ಮಾಡಿಕೊಳ್ಳಬೇಕೆಂದು ಒತ್ತಾಯ ಮಾಡಲಾರಂಭಿಸಿದಳು.

ನಾನು ವಿದ್ಯಾಭ್ಯಾಸದಲ್ಲಿ ಮುಂದುವರಿಯುತ್ತಿರುವುದನ್ನು ಗಮನಿಸುತ್ತಿದ್ದ ನಮ್ಮ ಕಡೆಯ ಕೆಲವು ಸ್ಥಿತಿವಂತರು ನನಗೆ ಹಣ ಸಹಾಯ ಮಾಡಲು ತಯಾರಾಗಿರುವ ಬಗೆಗೆ ಪರೋಕ್ಷವಾಗಿ ತಮ್ಮ ಅಭಿಲಾಷೆಯನ್ನು ವ್ಯಕ್ತಪಡಿಸುತ್ತಿದ್ದರು. ಅವರ ಹೆಣ್ಣು ಮಕ್ಕಳಲ್ಲಿ ಯಾರನ್ನಾದರೂ ನನಗೆ ಮದುವೆ ಮಾಡಿಕೊಡುವ ಉದ್ದೇಶ ಅದರ ಹಿಂದೆ ಇರುತ್ತಿತ್ತೆಂದು ಬೇರೆ ಹೇಳಬೇಕಿಲ್ಲ. ಆದರೆ ಅಂತಹವರ ಕೆಲವು ಷರತ್ತುಗಳನ್ನು ನಾನು ಒಪ್ಪಿಕೊಳ್ಳಲು ತಯಾರಿರುತ್ತಿರಲಿಲ್ಲ. ಕೆಲವರಂತೂ ತುಂಬಾ ಚೌಕಾಸಿ ವ್ಯವಹಾರಕ್ಕಿಳಿಯುತ್ತಿದ್ದುದು ಬೇಸರ ಉಂಟು ಮಾಡುತ್ತಿತ್ತು. ಹಣಕಾಸಿನ ಸಹಾಯ ಒದಗಿಸುತ್ತಿದ್ದಂತಲೇ ಮದುವೆಯೂ ಜರುಗಬೇಕೆಂಬ ಷರತ್ತಿಗೆ ನಾನು ತಯಾರಿರಲಿಲ್ಲ. ಪದವಿ ಗಳಿಸಿದ ನಂತರವೇ ಮದುವೆಯಾಗುವುದೆಂಬ ನನ್ನ ಆದರ್ಶವನ್ನು ಸಡಿಲಿಸುತ್ತಿರಲಿಲ್ಲ.



ಮಾವ ಅತ್ತೆ: ಎಂ. ಆರ್. ಅಪ್ಪಣ್ಣ ಹೆಗಡೆಯವರು, ಶ್ರೀಮತಿ ನಾಗಮ್ಮನವರು

ಈ ಹಂತದಲ್ಲಿ ಸಂಬಂಧಿಗಳು, ನನ್ನ ಹಿತೈಷಿಗಳೂ ಆದ ಎಂ. ಬಿ. ಮಂಜಪ್ಪ ನಾಯಕರು ಅವರು ಪಾಲುದಾರರಾಗಿದ್ದ ಮೇಗರವಳ್ಳಿ ರಾ॥ ಅಪ್ಪಣ್ಣ ಹೆಗ್ಗಡೆಯವರ ಸಂಬಂಧ ಮಾಡುವ ಪ್ರಸ್ತಾಪವನ್ನು ನನ್ನ ಮುಂದಿಟ್ಟರು. ಆಗಲೂ ನನ್ನ ಷರತ್ತನ್ನು ಕೈ ಬಿಡಲಿಲ್ಲ, ಬಹುಶಃ ನಾಯಕರು ನನ್ನ ಉದ್ದೇಶ ಮತ್ತು ಪ್ರಾಮಾಣಿಕತೆಯ ಬಗೆಗೆ ಭರವಸೆ ನೀಡಿರಬೇಕು. ಇದಲ್ಲದೆ ಈ ಸಂಬಂಧದ ಬಗೆಗೆ ನನ್ನ ತಾಯಿಯವರ ಮನಸ್ಸು ಒಲಿದಿದ್ದು ಅಂತಿಮವಾಗಿ ಒಂದು ನಿರ್ಧಾರಕ್ಕೆ ಬರಲು ಸಾಧ್ಯವಾಯಿತು. ನಾನಾಗ ನಾಲ್ಕನೆ ಎಂ. ಬಿ. ಬಿ. ಎಸ್., ತರಗತಿಯಲ್ಲಿದ್ದು ಅಂತಿಮ ಪದವಿ ಪರೀಕ್ಷೆ ಮುಗಿದ ನಂತರವೇ ವಿವಾಹ ಕಾರ್ಯ ಜರುಗುವುದೆಂದು ನಿರ್ಧಾರವಾಯಿತು. ವರದಕ್ಷಿಣೆ ಪಡೆಯುವಂತಹ ಪದ್ಧತಿಯನ್ನು ವಿರೋಧಿಸುವ ಆದರ್ಶವನ್ನು ಬೆಂಬಲಿಸುವ ಮನೋಭಾವ ನನ್ನದಾಗಿದ್ದರೂ ಪರಿಸ್ಥಿತಿಗಳ ಒತ್ತಡದಿಂದ ಆ ದಿಸೆಯಲ್ಲಿ ಸ್ವಲ್ಪಮಟ್ಟಿನ ರಾಜಿ ಮಾಡಿಕೊಳ್ಳುವಂತಾದುದು ನನ್ನ ಜೀವನದ ಒಂದು ವಿಪರ್ಯಾಸವೆಂದೇ ಭಾವಿಸಬೇಕಾಯಿತು. ಮುಂದೆ ಈ ವಿಚಾರದಲ್ಲಿ ನಾನು ವರ್ತಿಸಿದ ರೀತಿನೀತಿಗಳು ಪ್ರಾಮಾಣಿಕವಾಗಿದ್ದವೆಂಬುದು ಈಗ ಎಲ್ಲರಿಗೂ ತಿಳಿದಿರುವ ಸಂಗತಿಯಾಗಿದೆ.

# ೭. ನಾನೊಬ್ಬ ಡಾಕ್ಟರ್ ಆದೆ!

ಸಾವಿರದೊಂಬೈನೂರ ಐವತ್ತಾರರ ಏಪ್ರಿಲ್ ತಿಂಗಳಲ್ಲಿ ಎಂ.ಬಿ.ಬಿ.ಎಸ್. ಅಂತಿಮ ಪರೀಕ್ಷೆಯಲ್ಲಿ ತೇರ್ಗಡೆಯಾದ ವಿಷಯವನ್ನು ಅನಧಿಕೃತವಾಗಿ ಮಾತ್ರ ತಿಳಿಯಲಾಗಿತ್ತು. ಹಿಂದಿನ ಆರು ವರ್ಷಗಳ ಸಂಕಷ್ಟ ಪರಿಹಾರವಾದ ಸಂತಸದಿಂದ ಊರಿಗೆ ಹಿಂದಿರುಗಿದೆ. ಮನೆಯವರೆಲ್ಲರೂ ಸಹ ಸಂತಸದಿಂದ ನಿಟ್ಟುಸಿರಾಡುವಂತಾಯಿತು. ಅದೇ ಮೊದಲ ಬಾರಿಗೆ ಅಪ್ಪನ ಮುಖದಲ್ಲಿ ಮಂದಹಾಸ ಮೂಡಿದ್ದನ್ನು ನೋಡಬಹುದಾಗಿತ್ತು.

ಎಂ.ಬಿ.ಬಿ.ಎಸ್., ಪದವಿಯ ಪರೀಕ್ಷೆ ಮುಗಿದಿದ್ದರೂ ಪೂರ್ಣ ಪ್ರಮಾಣದ ವೈದ್ಯನೆಂಬ ಸನ್ನದು ಪಡೆಯಲು ಇನ್ನೂ ಆರು ತಿಂಗಳ ಕಾಲ ಆಸ್ಪತ್ರೆಯ ವಿವಿಧ ವಿಭಾಗಗಳಲ್ಲಿ ತರಬೇತಿ ಪಡೆಯುವುದು ಅತ್ಯಾವಶ್ಯಕ. ಮುಂದಿನ ೨-೩ ವಾರಗಳಲ್ಲಿ ಫಲಿತಾಂಶ ಅಧಿಕೃತವಾಗಿ ಘೋಷಿಸಲ್ಪಟ್ಟಿತು. ತರಬೇತಿಗಾಗಿ ಮರುದಿನವೇ ಮೈಸೂರಿಗೆ ಹೊರಡುವ ಸಿದ್ಧತೆಗಳನ್ನು ಮಾಡಿಕೊಂಡೆ. ಇನ್ನೊಂದೆರಡು ದಿನಗಳು ತಡೆದು ಹೋಗೆಂದು ಅವ್ವ ಗೋಗರೆದರೂ ಲೆಕ್ಕಿಸದೆ ಮೈಸೂರಿಗೆ ಪ್ರಯಾಣ ಮಾಡಿದೆ.

ಎಂ.ಬಿ.ಬಿ.ಎಸ್., ಪರೀಕ್ಷೆ ಮುಗಿಸಿ ತರಬೇತಿಗೆ ಕೆ. ಆರ್. ಆಸ್ಪತ್ರೆಯಲ್ಲಿ ಹಾಜರಾಗಬೇಕಿತ್ತು. ಆ ಜವಾಬ್ದಾರಿಯನ್ನು ನಿರ್ವಹಿಸುವ ಆರ್.ಎಂ.ಓ. ಡಾ|| ಕೆ. ಕೃಷ್ಣಮೂರ್ತಿಯವರ ಮುಂದೆ ಹಾಜರಾದೆ. ತ್ವರಿತಗತಿಯಲ್ಲಿ ಬಂದಿದ್ದ ನನ್ನನ್ನು ನೋಡಿ ಆಚ್ಚರಿಯಾಗಿರಬೇಕು ಅವರಿಗೆ. ತಮ್ಮ ಕೆಲಸದಲ್ಲಿ ಬಿಡುವಿಲ್ಲದೆ ಬಿಝಿಯಾಗಿದ್ದ ಅವರು "ಅದೇನು ಫಲಿತಾಂಶ ಹೊರಬೀಳುವಷ್ಟರಲ್ಲೇ ಅಷ್ಟೊಂದು ದೂರದಿಂದ ಓಡೋಡಿ ಬಂದು ಬಿಟ್ಟಿರಿ; ಅಂತಹ ಅವಸರ ಏನಿತ್ತಿರೀ? ಈಗಲಾದರೂ ನಾಲ್ಕು ದಿನ ಹಾಯಾಗಿರಬಹುದಿತ್ತಲ್ಲ. ನಿಮ್ಮ ಗುಂಪಿನವರು ಇನ್ನೂ ಯಾರೂ ಬಂದೇ ಇಲ್ಲ. ಅವರೆಲ್ಲಾ ಬಂದ ನಂತರ ನಿಮ್ಮನ್ನೆಲ್ಲಾ ವಿವಿಧ ಕಡೆ ತರಬೇತಿಗೆ ನೇಮಕ ಮಾಡುವೆ; ಸದ್ಯಕ್ಕೆ ಇಂಜಕ್ಷನ್ ಕೊಠಡಿಯಲ್ಲಿ ಕಾರ್ಯನಿರ್ವಹಿಸುತ್ತಿರಿ" ಎಂದು ಎಂದಿನ ಹಾಸ್ಯಮಯ ಧಾಟಿಯಲ್ಲಿ ನನ್ನನ್ನು ಸಾಗ ಹಾಕಿದರು. ನಿರಾಶೆಯಾದರೂ ಪಾಲಿಗೆ ಬಂದದ್ದು ಪರಮಾನ್ನವೆಂದು ಪರಿಗಣಿಸಿ ಇಂಜಕ್ಷನ್ ಕೊಠಡಿಯಲ್ಲಿದ್ದ ಹಿರಿಯ ವೈದ್ಯರೊಂದಿಗೆ ನನ್ನ ತರಬೇತಿಯನ್ನು ಆರಂಭ ಮಾಡಿದೆ. ವಿಪರ್ಯಾಸದ ಸಂಗತಿಯೆಂದರೆ, ಇತರರೆಲ್ಲಾ ಬಂದು ಅವರಿಗೆ ವಿವಿಧ ವಿಭಾಗಗಳಲ್ಲಿ ಕೆಲಸ ನಿರ್ವಹಿಸುವ ಅವಕಾಶಗಳುಂಟಾದರೂ ನನಗೆ ಮುಂದಿನ ಒಂದೂವರೆ ತಿಂಗಳು ಅಲ್ಲಿಂದ ಬಿಡುಗಡೆಯಾಗಲೇ ಇಲ್ಲ! (ಇಂಜಕ್ಷನ್ ಕೊಠಡಿಯಲ್ಲಿ ಕೇವಲ ಎರಡು ವಾರ ತರಬೇತಿ ನೀಡುವುದು ವಾಡಿಕೆ.) ಇನ್ನುಳಿದ ಸಮಯದಲ್ಲಿ ಸುಮಾರು ಎರಡೂವರೆ ತಿಂಗಳು ಶಸ್ತ್ರಚಿಕಿತ್ಸಾ ವಿಭಾಗ, ಮತ್ತು ಒಂದೂವರೆ ತಿಂಗಳು ಮೆಡಿಕಲ್ ವಿಭಾಗಗಳಲ್ಲಿ ತರಬೇತಿ ಪಡೆಯುವ ಅವಕಾಶ ದೊರೆಯಿತು.

ಪದವಿ ಪರೀಕ್ಷಾ ನಂತರ ಹೀಗೆ ಆಸ್ಪತ್ರೆಗಳಲ್ಲಿ ತರಬೇತಿ ಪಡೆಯುವ ಅಭ್ಯರ್ಥಿಗಳಿಗೆ ಆರು ತಿಂಗಳ ಕಾಲ ೫೦ ರೂಪಾಯಿಗಳ 'ಮಿತ-ಸಂಬಳ' (Stipend) ನೀಡುವ ಪರಿಪಾಟವಿರುತ್ತಿತ್ತು. ಆದರೆ ಅದು ನಿಗದಿತವಾದ ಸಂಖ್ಯೆಯ ವೈದ್ಯರಿಗೆ ಮಾತ್ರ ಲಭ್ಯವಾಗುತ್ತಿತ್ತು.

ಇನ್ನುಳಿದವರು ಪುಕ್ಕಟೆಯಾಗಿಯೇ ಕಾರ್ಯನಿರ್ವಹಿಸುವುದು ಅನಿವಾರ್ಯ. ಅದಕ್ಕಾಗಿ ಮೆಡಿಕಲ್ ಇಲಾಖೆಗೆ ಇತರರಂತೆ ನಾನೂ ಸಹ ಅರ್ಜಿ ಹಾಕಿಕೊಂಡಿದ್ದೆ. ಆದೇಶ ಬರುವುದು ತುಂಬಾ ವಿಳಂಬವಾದುದರಿಂದ ನಮ್ಮಲ್ಲಿ ಕೆಲವರು ಬೆಂಗಳೂರಿಗೆ ಹೋಗಿ ನಿರ್ದೇಶಕರನ್ನು ಭೇಟಿ ಮಾಡಿದೆವು. ಅವರು ಎಂ.ಬಿ.ಬಿ.ಎಸ್. ಪರೀಕ್ಷೆಯನ್ನು ಮೊದಲ ಪ್ರಯತ್ನದಲ್ಲಿ ತೇರ್ಗಡೆಯಾದವರಿಗೆ ಮಿತ ಸಂಬಳ ಮಂಜೂರು ಮಾಡುವುದಾಗಿ ಭರವಸೆಯಿತ್ತು ಕಳುಹಿಸಿ ಕೊಟ್ಟರು. ಆದರೆ ಫಲಿತಾಂಶ ಹೊರ ಬಂದಾಗ ನಮ್ಮಲ್ಲಿ ಬಹುಪಾಲು ಜನರಿಗೆ ಅದನ್ನು ಮಂಜೂರು ಮಾಡಿರಲಿಲ್ಲ; ಬದಲಿಗೆ ಎರಡು-ಮೂರು ಪ್ರಯತ್ನಗಳಲ್ಲಿ ತೇರ್ಗಡೆಯಾದವರಿಗೆ ಮಿತಸಂಬಳ ಮಂಜೂರಾಗಿತ್ತು. ವಿಪರ್ಯಾಸದ ಸಂಗತಿಯೆಂದರೆ ಆ ವರ್ಷದ ಪರೀಕ್ಷೆಯಲ್ಲಿ ಮೊದಲ ದರ್ಜೆಯಲ್ಲಿ ತೇರ್ಗಡೆಯಾದವರಿಗೇ ಅದು ದೊರೆತಿರಲಿಲ್ಲ!

ನಮ್ಮ ಎಂ.ಬಿ.ಬಿ.ಎಸ್., ಪರೀಕ್ಷಾ ಫಲಿತಾಂಶ ಪ್ರಕಟವಾಗುವ ಸಮಯದಲ್ಲೇ ಮೈಸೂರು ಸರ್ಕಾರದ ಪಬ್ಲಿಕ್ ಸರ್ವಿಸ್ ಕಮೀಷನ್‌ನವರು ಆ ಮೊದಲೇ ಅಸಿಸ್ಟೆಂಟ್ ಸರ್ಜನ್‌ರ ಹುದ್ದೆಗಳನ್ನು ಆಹ್ವಾನಿಸಿದ ಅರ್ಜಿಗಳನ್ನು ಸ್ವೀಕರಿಸುವ ಕೊನೆಯ ದಿನಾಂಕವೂ ಸಮೀಪಿಸಿತ್ತು. ಭಾಷಾವಾರು ಪ್ರಾಂತ್ಯಗಳ ರಚನೆಯ ವಿಧಿವಿಧಾನಗಳು ಸಹ ಜರುಗುತ್ತಿದ್ದು ಮೈಸೂರು ಸಂಸ್ಥಾನ ವಿಶಾಲವಾದ ಕರ್ನಾಟಕ/ಮೈಸೂರು ಪ್ರದೇಶದಲ್ಲಿ ವಿಲೀನವಾಗುವುದರಲ್ಲಿತ್ತು. ಅಂತಹ ಸಂದರ್ಭದಲ್ಲಿ ನಮಗೆಲ್ಲಾ ಸರ್ಕಾರಿ ಹುದ್ದೆ ಲಭಿಸುವುದು ಕಷ್ಟಸಾಧ್ಯವೆಂಬ ಭಾವನೆ ಆಗ ಎಲ್ಲರನ್ನೂ ಆವರಿಸಿಕೊಂಡಿತ್ತು. ಅದರಿಂದ ನಾವೂ ಸಹ ಪ್ರಸ್ತುತದ ಪಬ್ಲಿಕ್ ಸರ್ವಿಸ್ ಕಮೀಷನ್‌ನ ಕರೆಯ ಒಳಗೇ ಸೇರಿಕೊಳ್ಳುವಂತಾಗಲೂ ತರಾತುರಿಯಿಂದ ಅರ್ಜಿಗಳನ್ನು ನಿಗದಿತ ಕಾಲದೊಳಗೇ ಸಲ್ಲಿಸಿದೆವು. ಆದರೆ ಅಂಕಪಟ್ಟಿ ಮತ್ತಿತರ ದಸ್ತಾವೇಜುಗಳನ್ನು ಲಗತ್ತಿಸಲಾಗಿರಲಿಲ್ಲ; ಮೇಲಾಗಿ ಪೂರ್ಣಾವಧಿಯ ತರಬೇತಿಯೂ ಮುಗಿದಿರಲಿಲ್ಲ. ಆದರಿಂದಲೇನೋ ಕಮೀಷನ್‌ನವರು ನಮ್ಮೆಲ್ಲರ ಅರ್ಜಿಗಳನ್ನು ಸರಾಸಗಟಾಗಿ ತಿರಸ್ಕರಿಸಿಬಿಟ್ಟರು. ಹಳೇ ಮೈಸೂರು ಸರ್ಕಾರ ಅಸ್ತಿತ್ವದಲ್ಲಿರುವಾಗಲೇ ಕೆಲಸ ಗಿಟ್ಟಿಸಿಕೊಳ್ಳುವ ನಮ್ಮ ಯೋಜನೆ ಫಲಕಾರಿಯಾಗಲಿಲ್ಲ. ರಾಜ್ಯಗಳ ಪುನರ್‌ವಿಂಗಡನೆಯಾದ ನಂತರ ಜನಸಂಖ್ಯೆಯ ವಿವಿಧ ಸಮುದಾಯಗಳ ಅನುಪಾತಗಳಲ್ಲಾದ ವ್ಯತ್ಯಾಸಗಳಿಂದ ನಮ್ಮಲ್ಲಿ ಕೆಲವರಿಗೆ ಅನಾನುಕೂಲಗಳಾದವು.

ಇದರ ಜೊತೆಯಲ್ಲೇ ಜರುಗಿದ ಇನ್ನೊಂದು ವಿಪರ್ಯಾಸವನ್ನು ಪ್ರಸ್ತಾಪಿಸಬಹುದೆನಿಸುತ್ತದೆ. ಪುನರ್‌ವಿಂಗಡನೆಯ ಏರ್ಪಾಡುಗಳು ಜರುಗುತ್ತಿದ್ದ ಸಮಯದಲ್ಲಿ, ಸಂಬಂಧಿಸಿದ ಯಾವ ರಾಜ್ಯದವರೂ ಹೊಸ ನೇಮಕಾತಿಗಳನ್ನು ಮಾಡಬಾರದು ಮತ್ತು ಬಡ್ತಿಗಳನ್ನು ನೀಡಬಾರದೆಂದು ಕೇಂದ್ರ ಸರ್ಕಾರ ಆದೇಶ ನೀಡಿತು. ಆದರೆ ಹೈದರಾಬಾದು, ಬೊಂಬಾಯಿ, ಮದ್ರಾಸು ಪ್ರಾಂತ್ಯಗಳ ಕನ್ನಡದ ಭಾಗಗಳ ಕೆಲವು ವರ್ಗದ ಅಧಿಕಾರಿಗಳಿಗೆ ಗುಪ್ತವಾಗಿ ಬಡ್ತಿ ನೀಡಿದರಂತೆ; ಕೊಡಗಿನಂಥ ಪುಟ್ಟ ರಾಜ್ಯದವರು ಅವರ ಅಧಿಕಾರಿಗಳಿಗೆ ಬಡ್ತಿ ನೀಡಿದರಲ್ಲದೆ, ನೂರಾರು ಹೊಸ ನೇಮಕಗಳನ್ನು (ಅದರಲ್ಲೂ ವೈದ್ಯರನ್ನು) ನೇಮಕ ಮಾಡಿಯೇ ಬಿಟ್ಟರು. ಆದರೆ ಆ ಸಮಯದಲ್ಲಿ ಮೈಸೂರು ರಾಜ್ಯದ ಮುಖ್ಯಮಂತ್ರಿಗಳಾಗಿದ್ದ ಕಡಿದಾಳ್ ಮಂಜಪ್ಪನವರು ಕೇಂದ್ರ ಸರ್ಕಾರದ ಸೂಚನೆಗಳಿಗೆ ವಿರುದ್ಧವಾಗಿ ವರ್ತಿಸಲು ಸಮ್ಮತಿಸಲಿಲ್ಲವಂತೆ. ಅದರಿಂದ ಹಳೇ ಮೈಸೂರು ಸಂಸ್ಥಾನದಲ್ಲಿ ಬಡ್ತಿಗಳಾಗಲೀ, ಹೊಸ ನೇಮಕಗಳಾಗಲೀ ಆಗಲಿಲ್ಲ. ಇದರಿಂದ ಮುಂದೆ ಹಳೇ ಮೈಸೂರಿನ ಸಾವಿರಾರು ಅಧಿಕಾರಿಗಳು

ಹೊರಗಡೆಯಿಂದ ಬಡ್ತಿ ಪಡೆದು ಬಂದ ಕಿರಿಯ ಅಧಿಕಾರಿಗಳ ಅಧೀನದಲ್ಲಿ ಕಾರ್ಯ ನಿರ್ವಹಿಸಬೇಕಾದ ಪ್ರಮೇಯ ಒದಗಿತ್ತಂತೆ. ಅಲ್ಲದೆ ಹೊಸ ನೇಮಕಾತಿಗಳಿಗೆ ಅವಕಾಶ ಮಾಡಿಕೊಟ್ಟಿದ್ದರೆ ನಮ್ಮ ತರಹೆಯ ಪರಿಸ್ಥಿತಿಯಲ್ಲಿದ್ದ ಬಹುಪಾಲು ಯುವಕರು ಸರ್ಕಾರಿ ಕೆಲಸಗಳಿಗೆ ಸೇರಲು ಅವಕಾಶಗಳುಂಟಾಗುತ್ತಿದ್ದವು. ನಾವು ಮೆಡಿಕಲ್ ಕಾಲೇಜಿಗೆ ಸೇರುವ ಸಂದರ್ಭದಲ್ಲಿ ಒಕ್ಕಲಿಗ ಕೋಮಿನವರ ಸಂಖ್ಯೆ ಜಾಸ್ತಿ ಪ್ರಮಾಣದಲ್ಲಿದ್ದು ಅದಕ್ಕನುಗುಣವಾಗಿ ಪ್ರವೇಶ ಪಡೆದವರ ಸಂಖ್ಯೆಯೂ ಹೆಚ್ಚಿತ್ತು; ಆದರೆ ಮೆಡಿಕಲ್ ಕಾಲೇಜಿನಿಂದ ಹೊರಬರುವುದ ರೊಳಗೆ ಈ ಪ್ರಮಾಣದಲ್ಲಿ ಬಹಳಷ್ಟು ಏರುಪೇರುಗಳಾದವು. ಹಾಗಾಗಿ ನಮ್ಮಲ್ಲಿ ಬಹುಪಾಲು ಜನರಿಗೆ ಸರ್ಕಾರಿ ಕೆಲಸ ದೊರೆಯುವುದು ಕಷ್ಟವಾಯಿತು.

ಈ ಮಧ್ಯೆ ಕೊಡಗಿನಲ್ಲಿ ಹಲವಾರು ಆಸ್ಪತ್ರೆಗಳನ್ನು ತೆರೆದ ಹಾಗೆ ಆಜ್ಞೆ ಹೊರಡಿಸಿ, ಸೂಕ್ತ ಪದವಿ ಪಡೆದಿರುವ ವೈದ್ಯರು ಅಲ್ಲಿ ಸೇರಿಕೊಳ್ಳಬಹುದೆಂಬ ಸುದ್ದಿ ಬಂದಿತು. ಹಳೇ ಮೈಸೂರು ಕಡೆ ಕೆಲಸ ದೊರೆಯದಿದ್ದ ವೈದ್ಯರ ತಂಡೋಪ ತಂಡಗಳು ಮಡಿಕೇರಿಯತ್ತ ಧಾವಿಸಿದವು. ಅಲ್ಲಿಯ ಜಿಲ್ಲಾ ಆಸ್ಪತ್ರೆಯಲ್ಲಿ ವರದಿ ಮಾಡಿಕೊಂಡವರಿಗೆಲ್ಲಾ ನೇಮಕಾತಿಯ ಆದೇಶ ನೀಡಲಾಗುತ್ತಿತ್ತಂತೆ! ಇಂತಹ ಅವಕಾಶವನ್ನು ನಾನೂ ಬಳಸಿಕೊಳ್ಳುವ ಮನಸ್ಸು ಮಾಡಿದ್ದುಂಟು; ಆದರೆ ತರಬೇತಿಯ ಅವಧಿ ಪೂರ್ಣಗೊಂಡಿರಲಿಲ್ಲ. ಕೊಡಗಿನ ಹುದ್ದೆಗೆ ಮೈಸೂರಿನವರಿಗಿಂತಲೂ ಹೆಚ್ಚಿನ ಸಂಬಳದ ಆಕರ್ಷಣೆ ಇರುತ್ತಿದ್ದರೂ ಅದು ಗೆಜೆಟೆಡ್ ಶ್ರೇಣಿಯದ್ದಾಗಿರಲಿಲ್ಲ. ಇಂತಹ ಆದರ್ಶಗಳು ನಾನು ಮಡಿಕೇರಿಗೆ ಹೋಗುವುದನ್ನು ತಡೆ ಹಿಡಿದವು. ಆದರೆ ಇಂತಹ ಆದರ್ಶಗಳಿಗೆ ಅಂಟಿಕೊಳ್ಳದ ನನ್ನ ಸಹಪಾಠಿಗಳೂ ಸೇರಿದಂತೆ ಹಲವು ವೈದ್ಯರು ಕೊಡಗಿನ ಮೆಡಿಕಲ್ ಇಲಾಖೆಯಲ್ಲಿ ನೇಮಕವಾದರು. ಕೊಡಗು ಮೈಸೂರಿನಲ್ಲಿ ವಿಲೀನವಾದ ಕೆಲವು ವರ್ಷಗಳ ನಂತರ ಆ ಕಡೆಯ ಪ್ರಭಾವೀ ಮಂತ್ರಿಗಳ ಪ್ರಭಾವದಿಂದ ಅವರೆಲ್ಲಾ ಗೆಜೆಟೆಡ್ ಹುದ್ದೆಗೆ ಪೂರ್ವಾನ್ವಯವಾಗುವಂತೆ ಬಡ್ತಿ ಪಡೆದರು. ಮುಂದೆ ಸೇವೆಯ ಹಿರಿತನದಲ್ಲಿ ನಮಗಿಂತ ೪೦೦-೫೦೦ ಸ್ಥಾನಗಳ ಮೇಲೇರಿದರು!

ಈ ಎಲ್ಲಾ ಪ್ರಕ್ರಿಯೆಗಳು ಜರುಗುತ್ತಿರುವಾಗಲೇ ಹಳೇ ಮೈಸೂರು ಸರ್ಕಾರದವರು ವೈದ್ಯಕೀಯ ಇಲಾಖೆಯಲ್ಲಿ ಖಾಲಿ ಇರುವ ಹುದ್ದೆಗಳಿಗೆ ಕೆಲವು ಸ್ಥಳೀಯ ಅಭ್ಯರ್ಥಿಗಳನ್ನು (Local Candidates) ಹಂಗಾಮಿ ಅಸಿಸ್ಟೆಂಟ್ ಸರ್ಜನ್‌ಗಳಾಗಿ ನೇಮಕ ಮಾಡಿಕೊಳ್ಳುತ್ತಿರುವ ವಿಚಾರ ನಮ್ಮ ಗಮನಕ್ಕೆ ಬಂದಿತು. ನಮ್ಮ ತಂಡದಲ್ಲಿ ತೇರ್ಗಡೆಯಾದ ಬಹುಪಾಲು ವೈದ್ಯರು ಆ ಸಲುವಾಗಿ ಅರ್ಜಿ ಸಲ್ಲಿಸಿದೆವು. ಅವರ ಪೈಕಿ ೧೭ ಜನರನ್ನು ನೇಮಕ ಮಾಡಿದ ಸರ್ಕಾರಿ ಆದೇಶ ೧೯೫೭ರ ನವೆಂಬರ್‌ನಲ್ಲಿ ಹೊರಬಂದಿತು. ಅದು ಕೇವಲ ಆರು ತಿಂಗಳ ಹಂಗಾಮಿ ಕೆಲಸ; ವೇತನ ತಿಂಗಳಿಗೆ ಒಂದು ನೂರು ರೂಪಾಯಿ; ಆದರೂ ಗೆಜೆಟೆಡ್ ಹುದ್ದೆ!

ಹಾಗೆ ನೇಮಕವಾದ ಡಾ|| ಎ. ಆರ್. ರಾಮಚಂದ್ರ ಮತ್ತು ನನ್ನನ್ನು ಬಿಟ್ಟರೆ ಇನ್ನುಳಿದವ ರನ್ನೆಲ್ಲಾ ಬೆಂಗಳೂರು ಮೈಸೂರು ಇಲ್ಲವೆ ಇತರ ಜಿಲ್ಲೆಗಳ ದೊಡ್ಡ ದೊಡ್ಡ ಆಸ್ಪತ್ರೆಗಳಿಗೆ ನೇಮಕ ಮಾಡಲಾಗಿತ್ತು. ಡಾ|| ರಾಮಚಂದ್ರ ಅವರು ಬಂಗಾರು ಪೇಟೆಯ ತಾಲ್ಲೂಕು ಆಸ್ಪತ್ರೆಗೆ ನೇಮಕ ವಾಗಿದ್ದರೆ, ನನ್ನನ್ನು ಶಿಕಾರಿಪುರದ ಕಂಬೈಂಡ್ ಆಸ್ಪತ್ರೆಗೆ ನೇಮಕ ಮಾಡಲಾಗಿತ್ತು. ಕೇವಲ ಆರು ತಿಂಗಳ, ಅದರಲ್ಲೂ ತೀರಾ ಅಸಮರ್ಪಕವಾದ ರೀತಿಯಲ್ಲಿ ತರಬೇತಿ ಪಡೆದ ನಾವಿಬ್ಬರೂ ಯಾವುದೇ ರೀತಿಯ ಮಾರ್ಗದರ್ಶನವಿಲ್ಲದೆ ಸ್ವತಂತ್ರವಾಗಿ ಆಸ್ಪತ್ರೆಗಳಲ್ಲಿ ಕಾರ್ಯ ನಿರ್ವಹಿಸ ಬೇಕಾದ ಪರಿಸ್ಥಿತಿ ಉಂಟಾಗಿತ್ತು. ಅಂತಹ ಹುದ್ದೆಯನ್ನು ಆಗ ನಾವಿದ್ದ ಪರಿಸ್ಥಿತಿಯಲ್ಲಿ

ನಿಭಾಯಿಸುವುದು ಅಸಾಧ್ಯವೆನಿಸಿತು. ಮುಂದೇನು ಮಾಡಬೇಕೆಂಬುದು ಹೊಳೆಯದೆ ಒಂದೆರಡು ದಿನ ಯೋಚನಾಕ್ರಾಂತನಾಗಿ ತಿರುಗಾಡಿಕೊಂಡಿದ್ದೆ. ನನ್ನ ಹಿತೈಷಿಗಳಾದ ಕೆಲವು ಬೋಧಕರು ಮತ್ತು ಸ್ನೇಹಿತರು ಆ ಹುದ್ದೆಯನ್ನು ಒಪ್ಪಿಕೊಳ್ಳದೆ ಕೆ. ಆರ್. ಆಸ್ಪತ್ರೆಯ ವಿವಿಧ ವಿಭಾಗಗಳಲ್ಲಿ ತರಬೇತಿಯನ್ನು ಮುಂದುವರಿಸುವ ಸಲಹೆ ಮಾಡುತ್ತಿದ್ದರು. ಮತ್ತೆ ಕೆಲವರು ಹಳ್ಳಿಗಾಡಿನ ಆಸ್ಪತ್ರೆಯಲ್ಲಿ ಸೇವೆ ಸಲ್ಲಿಸುವ ಈಗ ದೊರೆತ ಅವಕಾಶವನ್ನು ನಿರಾಕರಿಸಿದರೆ, ಮುಂದೆ ಕಾಯಂ ಕೆಲಸದ ಆಯ್ಕೆಯ ಸಂದರ್ಭದಲ್ಲಿ, ಈ ಅಂಶವೇ ನನ್ನ ವಿರುದ್ಧವಾಗಿ ವರ್ತಿಸಬಹುದಾದ್ದರಿಂದ ಅದನ್ನು ಒಪ್ಪಿಕೊಳ್ಳುವುದೇ ಸೂಕ್ತವೆಂದು ಹಿತವಚನ ನುಡಿದರು. ಯಾವುದೇ ಭತ್ಯೆಯ ಸೌಲಭ್ಯವಿಲ್ಲದೆ ಇನ್ನೂ ಆರು ತಿಂಗಳು ಮೈಸೂರಿನಲ್ಲಿ ಮುಂದುವರಿಯುವುದು ಆರ್ಥಿಕವಾಗಿಯೂ ಸಾಧುವೆನಿಸಲಿಲ್ಲ. ಆದುದರಿಂದ ಶಿಕಾರಿಪುರಕ್ಕೆ ಹೋಗುವ ನಿರ್ಧಾರ ಮಾಡಿದೆ.

---



# ೮. ಮೊದಲ ಹುದ್ದೆ - ಶಿಕಾರಿಪುರ

ಆರು ವರ್ಷಗಳಿಂದ ಇದ್ದ ಮೈಸೂರಿಗೆ ಒಲ್ಲದ ಮನಸ್ಸಿನಿಂದ ವಿದಾಯ ಹೇಳಿ ಶಿಕಾರಿಪುರಕ್ಕೆ ಪ್ರಯಾಣ ಬೆಳೆಸಿದೆ. ಶಿಕಾರಿಪುರದಲ್ಲಿ ಅಧಿಕೃತವಾಗಿ ವರದಿ ಮಾಡುವ ಮೊದಲು ಶಿವಮೊಗ್ಗಾದಲ್ಲಿ ಜಿಲ್ಲಾ ವೈದ್ಯಾಧಿಕಾರಿಗಳನ್ನು (ಡಿ.ಎಂ.ಓ) ಭೇಟಿ ಮಾಡಿ ಸರ್ಕಾರಿ ಆದೇಶ ಪತ್ರದ ಮೇಲೆ ಷರಾ ಬರೆಸಿಕೊಳ್ಳುವ ಸಲುವಾಗಿ ಮೆಗ್ಗಾನ್ ಆಸ್ಪತ್ರೆಗೆ ಹೋದೆ. ಅಂದು ಡಿ.ಎಂ.ಓ. ಡಾ|| ಡಿ. ಶಾಮಣ್ಣನವರು ಹೊರಗಡೆ ತಿರುಗಾಟಕ್ಕೆ ಹೋಗಿದ್ದರಿಂದ ಭೇಟಿಯಾಗಲು ಸಾಧ್ಯವಾಗಲಿಲ್ಲ. ಬದಲಿ ಕಾರ್ಯ ನಿರ್ವಹಿಸುತ್ತಿದ್ದ ಸ್ಥಾನಿಕ ವೈದ್ಯಾಧಿಕಾರಿ (ಆರ್.ಎಂ.ಓ.), ಯವರು ಕ್ಷುಲ್ಲಕ ಕಾರಣವನ್ನೊಡ್ಡಿ ಷರಾ ಬರೆಯಲು ಮೊದಲು ನಿರಾಕರಿಸಿದರು; ಕಚೇರಿಯ ಹೆಡ್‌ಗುಮಾಸ್ತೆಯವರು ಸಮಜಾಯಿಷಿ ನೀಡಿದ ನಂತರ ಸಹಕರಿಸಿದರು.

ಅಂದು ಪ್ರಯಾಣವನ್ನು ಮುಂದುವರಿಸಿ ಮಧ್ಯಾಹ್ನದ ಹೊತ್ತಿಗೆ ಶಿಕಾರಿಪುರದ ಆಸ್ಪತ್ರೆಗೆ ಸ್ವಲ್ಪ ದೂರದಲ್ಲಿದ್ದ ಬಸ್ ತಂಗುದಾಣದಲ್ಲಿ ಟ್ರಂಕು ಹಾಸಿಗೆಗಳ ಸಮೇತ ಬಸ್ಸಿನಿಂದ ಇಳಿದೆ. ಹೊಸ ಡಾಕ್ಟರ ಆಗಮನವನ್ನು ನಿರೀಕ್ಷಿಸುತ್ತಿದ್ದ ಆಸ್ಪತ್ರೆಯ ಕೆಲವು ಜವಾನರು ತಮ್ಮ ಅನುಮಾನ ವನ್ನು ಖಾತರಿ ಪಡಿಸಿಕೊಂಡರು; ಸಾಮಾನುಗಳ ಜೊತೆ ನನ್ನನ್ನು ಆಸ್ಪತ್ರೆಗೆ ಕರೆದುಕೊಂಡು ಹೋದರು. ಆಸ್ಪತ್ರೆಯ ಮೆಟ್ಟಿಲುಗಳನ್ನು ಏರುತ್ತಿದ್ದಂತೆಯೇ ಲೇಡಿ ಡಾಕ್ಟರ್ ಪಿ. ಬಿ. ಶಾರದಮ್ಮ ಮತ್ತು ಕಾಂಪೌಂಡರು ಮುಗುಳ್ನಕ್ಕು, ನಮಸ್ಕರಿಸಿ ಸ್ವಾಗತಿಸಿದರು. ಕುಶಲ ಪ್ರಶ್ನೆಗಳಾದ ಬಳಿಕ ಅಂದೇ ೨೬-೧೧-೧೯೫೬ ರಂದು ಕೆಲಸಕ್ಕೆ ಹಾಜರಾದ ಬಗೆಗೆ ದಸ್ತಾವೇಜುಗಳಿಗೆ ರುಜು ಮಾಡಿದೆ. ನನ್ನ ಜೀವಮಾನದಲ್ಲಿ ಒಂದು ಪ್ರಮುಖ ಘಟ್ಟವನ್ನು ತಲುಪಿದ ಕುರುಹು ಆಗಿ, ಆದಿನ ನನ್ನ ನೆನಪಿನಾಳದಲ್ಲಿ ಇನ್ನೂ ಉಳಿದುಕೊಂಡಿದೆ. ಆಸ್ಪತ್ರೆಯ ವೈದ್ಯರಿಗಾಗಿಯೇ ಹತ್ತಿರದ ಶಿವಮೊಗ್ಗಾ-ಶಿರಾಳಕೊಪ್ಪ ರಸ್ತೆಯಲ್ಲಿದ್ದ ಅಧಿಕೃತ ನಿವಾಸದಲ್ಲಿ ವಾಸ್ತವ್ಯ ಹೂಡಿದೆ.

ಶಿಕಾರಿಪುರ, ಶಿವಮೊಗ್ಗ ಜಿಲ್ಲೆಯ ಪ್ರಮುಖ ತಾಲ್ಲೂಕುಗಳಲ್ಲೊಂದು. ಶಿಕಾರಿಪುರ ನಗರದಲ್ಲಿ ಆ ಸಮಯದಲ್ಲಿ ಅಂದಾಜು ಹತ್ತು, ಹದಿನೈದು ಸಾವಿರ ಜನಸಂಖ್ಯೆ ಇತ್ತೆನಿಸುತ್ತದೆ. 'ಚಲೇಜಾವ್' ಚಳುವಳಿಯ ಸಮಯದಲ್ಲಿ (೧೯೪೨) "**ಏಸೂರು ಕೊಟ್ಟರೂ ಈಸೂರು ಕೊಡೆವು**" ಎಂಬ ಖ್ಯಾತಿಯ ಈಸೂರು ಈ ತಾಲ್ಲೂಕಿನಲ್ಲೇ ಇರುವುದು. ಆದರಿಂದಾಗಿ ರಾಜಕೀಯವಾಗಿ ತುಂಬಾ ಜಾಗೃತವಾದ ಪ್ರದೇಶವೆಂಬ ಖ್ಯಾತಿಯೂ ಇತ್ತು.

## ಸುಸಜ್ಜಿತ ಆಸ್ಪತ್ರೆ

ಎರಡು ವರ್ಷಗಳ ಹಿಂದೆ 'ನ್ಯಾಷನಲ್ ಎಕ್ಸ್‌ಟೆನ್ಷನ್ ಸ್ಕೀಮ್' (ಎನ್.ಇ.ಎಸ್) ಎಂಬ ಗ್ರಾಮಾಭಿವೃದ್ಧಿ ಯೋಜನೆಯಡಿಯಲ್ಲಿ ೨೮ ಹಾಸಿಗೆಗಳ ಆಸ್ಪತ್ರೆ ಶಿಕಾರಿಪುರಕ್ಕೆ ಮಂಜೂರಾಗಿತ್ತು. ಕಟ್ಟಡ ನಿರ್ಮಾಣ ಕಾರ್ಯಗಳು ಮುಗಿದಿದ್ದು ಆರು ತಿಂಗಳಿಂದ ಆಸ್ಪತ್ರೆಯ ಕೆಲಸ ಪ್ರಾರಂಭವಾಗಿತ್ತು. ಆ ಸಮಯದಲ್ಲಿದ್ದ ಡಾಕ್ಟರಿಗೆ ಕಾಯಂ ಕೆಲಸ ದೊರೆತು, ಬೇರೆ ಕಡೆಗೆ ವರ್ಗವಾಗಿತ್ತು. ಹಾಗೆ ಖಾಲಿಯಾದ ಜಾಗಕ್ಕೆ ನಾನು ನೇಮಕವಾದದ್ದು.

ಎಸ್.ಇ.ಎಸ್. ಯೋಜನೆಯಡಿ ನಿರ್ಮಾಣವಾಗುವ ಆಸ್ಪತ್ರೆಗಳಂಥ ಕಟ್ಟಡಗಳು ಸಾಮಾನ್ಯವಾಗಿ ಪೂರ್ವ ಕಲ್ಪಿತ ಯೋಜನೆಗನುಗುಣವಾಗಿ (Type Design) ನಿರ್ಮಾಣ ವಾಗುತ್ತವೆ. ಇಲ್ಲಿಯ ಆಸ್ಪತ್ರೆಯ ಸಮುಚ್ಚಯದ ಪ್ರಧಾನ ಕಟ್ಟಡದಲ್ಲಿ ಪುರುಷರು ಹಾಗೂ ಮಹಿಳಾ ರೋಗಿಗಳ ಪರೀಕ್ಷೆಗೆ ಪ್ರತ್ಯೇಕ ಹೊರರೋಗಿಗಳ ವಿಭಾಗ, ಪ್ರತ್ಯೇಕ ವಾರ್ಡುಗಳು, ಆಪರೇಷನ್ ಕೊಠಡಿ, ಹೆರಿಗೆ ಕೋಣೆ, ಔಷಧಗಳ ಉಗ್ರಾಣ, ಕಾಂಪೌಂಡಿಂಗ್ ವಿಭಾಗ, ಎಕ್ಸ್‌ರೇ ವಿಭಾಗ, ಆಡಳಿತ ಕಚೇರಿ ಮುಂತಾದವು ಇದ್ದವು. ಈ ಕಟ್ಟಡದ ತುಸು ಹಿಂಭಾಗದಲ್ಲಿ ವಿಶಾಲವಾದ ಪಾಕಶಾಲೆ, ದನಗಳ ಕೊಟ್ಟಿಗೆ, ಹಾಲು ಕರೆಯುವ ಸ್ಥಳ ಹಾಗೂ ಹೊರವಲಯದಲ್ಲಿ ಶವಾಗಾರ ಮುಂತಾದ ಕಟ್ಟಡಗಳು ನಿರ್ಮಾಣವಾಗಿದ್ದವು. ಆಸ್ಪತ್ರೆಯ ಎಲ್ಲಾ ವಿಭಾಗಗಳಲ್ಲೂ ಹಚ್ಚ ಹೊಸ ಕುರ್ಚಿ, ಮೇಜು, ಬೆಂಚು, ಗಾಜಿನ ಬೀರು ಮುಂತಾದವುಗಳನ್ನು ಖರೀದಿಸಿ ಜೋಡಿಸಲಾಗಿತ್ತು ; ವಾರ್ಡುಗಳಲ್ಲಿ ಸ್ಪ್ರಿಂಗ್ ಮಂಚಗಳು; ಆಪರೇಷನ್ ಹಾಗೂ ಹೆರಿಗೆ ಕೊಠಡಿಗಳಲ್ಲೂ ವಿಶೇಷ ರೀತಿಯ ಟೇಬಲ್ಲುಗಳು, ದೀಪಗಳ ಅಳವಡಿಕೆ ಮಾಡಿದ್ದಲ್ಲದೆ ಶಸ್ತ್ರಚಿಕಿತ್ಸೆಗಳಿಗೆ ಬೇಕಾಗುವ ಉಪಕರಣ ಮತ್ತಿತರ ಸಾಮಾನು ಸರಂಜಾಮುಗಳನ್ನು ಒದಗಿಸ ಲಾಗಿತ್ತು. ಒಬ್ಬ ಮಹಿಳಾ ವೈದ್ಯರು, ಒಬ್ಬ ಕಾಂಪೌಂಡರು, ತರಬೇತಿ ಪಡೆದ ಒಬ್ಬ ನರ್ಸ್, ನಾಲ್ಕು ಜನ ಸೂಲಗಿತ್ತಿಯರು ಹಲವು ವಾರ್ಡ್ ಬಾಯ್‌ಗಳು ಮತ್ತಿತರ ಸಿಬ್ಬಂದಿಗಳನ್ನು ನೇಮಕ ಮಾಡಲಾಗಿತ್ತು. ಹಲವು ವರ್ಷಗಳ ಅನುಭವ ಪಡೆದ ವೈದ್ಯಾಧಿಕಾರಿಯೊಬ್ಬರಿಗೆ ಸಂತೃಪ್ತಿ ಉಂಟು ಮಾಡಬಹುದಾದ ನವ ನವೀನ ಆಸ್ಪತ್ರೆ ಅದಾಗಿತ್ತೆನ್ನಬಹುದು. ಅಲ್ಲಿದ್ದ ವ್ಯವಸ್ಥೆಗಳು ನನಗೂ ಸಂತೋಷ ಉಂಟು ಮಾಡದಿರಲಿಲ್ಲ. ಆದರೆ ವೃತ್ತಿಯಲ್ಲಾಗಲೀ, ಆಡಳಿತ ವಿಷಯ ದಲ್ಲಾಗಲೀ ಯಾವುದೇ ಅನುಭವವಿರದ ಹಸುಳೆಯಂತಿದ್ದ ನನ್ನ ಎದೆಗುಂದಿಸುವಂತಿತ್ತು!

ಅಷ್ಟೆಲ್ಲಾ ಅನುಕೂಲತೆಗಳಿಂದ ಸುಸಜ್ಜಿತವಾದ ಆಸ್ಪತ್ರೆಯು ಊರ ಹೊರಗಡೆ ತುಸು ದೂರದಲ್ಲಿದ್ದುದು ಒಂದು ಅಪವಾದವೆಂದೇ ಹೇಳಬೇಕು. ಬಹಳ ಹಿಂದೆ ಅಲ್ಲಿ ಸ್ಮಶಾನವಿತ್ತೆಂಬ ಅನುಮಾನವಿದ್ದು, ರಾತ್ರಿ ಹೊತ್ತು ಕೊಳ್ಳಿದೆವ್ವಗಳು ನೃತ್ಯವಾಡುತ್ತವೆಂಬ ಗುಮಾನಿಯ ಸುದ್ದಿಗಳು ದಟ್ಟವಾಗಿ ಹರಡಿದ್ದವು. ಹತ್ತಿರದಲ್ಲಿ ಔಷಧದ ಅಂಗಡಿಗಳಾಗಲೀ, ಹೋಟೆಲು ಇತರ ಅಂಗಡಿ ಮುಂಗಟ್ಟುಗಳು ಸಹಾ ಇರಲಿಲ್ಲ. ಸುಮಾರು ಮೂವತ್ತು ಒಳ ರೋಗಿಗಳು ತಂಗುವ ಅವಕಾಶವಿದ್ದರೂ ಅವರಿಗೆ ಆಹಾರ ಸರಬರಾಜು ಮಾಡುವ ವ್ಯವಸ್ಥೆ ಮಾಡಿರದಿದ್ದುದು ಪ್ರಮುಖ ಕೊರತೆಯಾಗಿತ್ತು. ಮಹಿಳಾ ವಿಭಾಗದಲ್ಲಿ ಲೇಡಿ ಡಾಕ್ಟರನ್ನು ನೋಡಲು ಬರುವ ಕೆಲವು ರೋಗಿಗಳು ಹಾಗೂ ಹೆರಿಗೆಯಾದ ಮತ್ತೆ ಕೆಲವರನ್ನು ಹೊರತು ಪಡಿಸಿದರೆ ಆಸ್ಪತ್ರೆ ಬಹುಪಾಲು ಬಿಕೋ ಎನ್ನುವಂತಿತ್ತು.

ಅದೇ ಮೊದಲ ಸಲ ಎಂಬಂತೆ ಸ್ವತಂತ್ರವಾಗಿ ರೋಗಿಗಳನ್ನು ಪರೀಕ್ಷಿಸಿ, ರೋಗ ನಿರ್ಣಯ ಮಾಡಿ, ಚಿಕಿತ್ಸೆಗೊಳಪಡಿಸುವ ಜವಾಬ್ದಾರಿಯನ್ನು ನಾನು ವಹಿಸಬೇಕಾಯಿತು. ಆಸ್ಪತ್ರೆಯ ಸಿಬ್ಬಂದಿಗಳ ಕಾರ್ಯಕಲಾಪಗಳನ್ನು ನಿರ್ವಹಿಸುವ, ಅದಕ್ಕೆ ಸಂಬಂಧಿಸಿದ ಇತರ ಆಡಳಿತಾತ್ಮಕ ವ್ಯವಹಾರಗಳ ಮೇಲ್ವಿಚಾರಣೆಯ ಅಧಿಕಾರಿಯೂ ನಾನೇ ಆಗಬೇಕಾಯಿತು. ಆ ದಿಸೆಯಲ್ಲಿ ಸಹಾಯ ಮಾಡುವ ಗುಮಾಸ್ತರ ಹುದ್ದೆ ಮುಂಜೂರಾಗಿದ್ದರೂ ಅದನ್ನು ಆ ತನಕ ಭರ್ತಿ ಮಾಡಿರಲಿಲ್ಲ. ಅಲ್ಲಿದ್ದ ಕಾಂಪೌಂಡರ್ ಹಲವು ವರ್ಷಗಳ ಅನುಭವ ಪಡೆದವರಾಗಿದ್ದು ಅವರ ಮಾರ್ಗದರ್ಶನದಲ್ಲಿ ಈ ಎಲ್ಲಾ ಕಾರ್ಯಗಳನ್ನು ನಿಭಾಯಿಸುವ ಪರಿಸ್ಥಿತಿ ನನ್ನದಾಗಿತ್ತು. ಆಸ್ಪತ್ರೆಯಲ್ಲಿ ಔಷಧಿ (ಮಿಕ್ಶ್ಚರ್)ಗಳನ್ನು ತಯಾರಿಸಿ ವಿತರಿಸುವುದರ ಜೊತೆಗೆ, ಔಷಧಗಳ

ಉಗ್ರಾಣದ ಪಾರುಪತ್ಯೆ, ಕಛೇರಿ ವ್ಯವಹಾರ, ಲೆಕ್ಕಪತ್ರಗಳ ದಾಖಲಾತಿ, ಸಂಬಳ ಸಾರಿಗೆಗಳ ಲೆಕ್ಕಾಚಾರಗಳೆಲ್ಲಾ ಅವರಿಂದಲೇ ಜರುಗಬೇಕು. ಇಂತಹ ವಿಚಾರಗಳಲ್ಲಿ ಏನೆಂದರೇನೂ ತಿಳಿಯದ, ಸರ್ಕಾರದ ನಿಯಮ - ನಿಬಂಧನೆಗಳ ಗಂಧ ಗಾಳಿ ಇಲ್ಲದ್ದರಿಂದ ಆಸ್ಪತ್ರೆಯ ಮುಖ್ಯಸ್ಥ (ವೈದ್ಯಾಧಿಕಾರಿ) ನೆನಸಿಕೊಂಡವ ತಲೆದೂಗಿಸುತ್ತಿರಬೇಕು! ಅಷ್ಟೊಂದು ಸುಸಜ್ಜಿತವಾಗಿ, ರಾಷ್ಟ್ರೀಯ ಯೋಜನೆಯೊಂದರ ಅನುಷ್ಠಾನದ ಸಲುವಾಗಿ ನಿರ್ಮಾಣವಾಗಿರುವ ಜನೋಪಯೋಗಿ ಆಸ್ಪತ್ರೆಯಂತಹ ಸಂಸ್ಥೆಯ ನಿರ್ದೇಶನಕ್ಕೆ ಆಗತಾನೇ ಹುಟ್ಟಿಕಣ್ಣು ಬಿಡುತ್ತಿರುವ ನನ್ನಂತಹ ಹಸುಳೆಯನ್ನು ನೇಮಿಸುವ ಸರ್ಕಾರದ ರೀತಿನೀತಿಗಳಿಗೇನೆನ್ನಬೇಕು! ಲಕ್ಷಾಂತರ ರೂಪಾಯಿಗಳನ್ನು ವ್ಯಯಮಾಡಿ ಸಾರ್ವಜನಿಕರ ಸ್ವಾಸ್ಥ್ಯ ಸಂರಕ್ಷಣೆಯ ಉದ್ದೇಶದಿಂದ ನಿರ್ಮಿಸಿದ ತಪ್ಪಿಗೆ ನನ್ನನ್ನು ಬಲಿಪಶು ಮಾಡುತ್ತಿದ್ದಾರೆಂಬ ವ್ಯಥೆ ಒಂದೊಂದು ಸಾರಿ ನನ್ನಾವರಿಸುತ್ತಿತ್ತು. ಆದರೂ ಜವಾಬ್ದಾರಿಯನ್ನು ವಹಿಸಿಕೊಂಡು ರಂಗಪ್ರವೇಶ ಮಾಡಿಯಾಗಿತ್ತು! ಮುಂದೆ ನಟನೆ ಮಾಡದೆ ಸುಮ್ಮನಿರಲಾಗದಷ್ಟೆ?



ಮರುದಿನದಿಂದಲೇ ಹೊರ ರೋಗಿಗಳ ವಿಭಾಗದಲ್ಲಿ ಕಾರ್ಯನಿರತನಾದೆ. ಬಹುಶಃ ಅಷ್ಟರಲ್ಲೇ ಆಸ್ಪತ್ರೆಗೆ ಹೊಸ ಡಾಕ್ಟರೊಬ್ಬರು ಬಂದಿರುವ ಸುದ್ದಿ ಹರಡಿದ್ದರಿಂದ ಅವರನ್ನು ನೋಡುವ ಸಲುವಾಗಿಯೇ ಕೆಲವರು ಬರುತ್ತಿದ್ದರೆನಿಸುತ್ತಿತ್ತು, ನನಗೆ. ನನ್ನ ಆಗಿನ ಸ್ವರೂಪ ಹಾಗೂ ಬಾಹ್ಯ ನಡವಳಿಕೆಗಳಿಂದ ತುಂಬಾ ಎಳಸಿನ ವೈದ್ಯನೊಬ್ಬನನ್ನು ತಮ್ಮೂರಿಗೆ ಕಳಿಸಿದ್ದಾರೆಂಬ ಭಾವನೆ ಕೆಲವರಲ್ಲುಂಟಾಗಿದ್ದರೆ ಅಚ್ಚರಿಯೇನಲ್ಲ. ಮೊದಮೊದಲು ಬಹುಪಾಲು ಎಳೆಯ ಮಕ್ಕಳೇ ನನ್ನ ರೋಗಿಗಳಾಗುತ್ತಿದ್ದುದೊಂದು ವಿಶೇಷವೆನಿಸಿತು. ಅವರ ಜೊತೆ ಹಾಸ್ಯಭರಿತ ಮಾತುಗಳನ್ನಾಡಿ ಮೊದಲಿಗೆ ನಕ್ಕು ನಲಿಯುವಂತೆ ಮಾಡುತ್ತಿದ್ದೆ. ಕೆಲವರಿಗೆ ಸಾಂತ್ವನದ ಮಾತುಗಳನ್ನಾಡಿ ಸುಮ್ಮನಾಗುವಂತೆ ಮಾಡುತ್ತಿದ್ದೆ. ಬಹುಶಃ ಈ ತರಹದ ವರ್ತನೆ ಮಕ್ಕಳಿಗೆ ಹಿಡಿಸಿರಬೇಕು. ಅವರಲ್ಲಿ ಬಹುಪಾಲು ಶೀತ, ಕೆಮ್ಮು, ಜ್ವರ, ಭೇದಿ, ಕೈ ಕಾಲುಗಳಲ್ಲಿ ಗಾಯಗಳಾದವರೇ ಹೆಚ್ಚಾಗಿರುತ್ತಿದ್ದುದು. ಆಸ್ಪತ್ರೆಯಲ್ಲಿ ಮದ್ದುಗಳಿದ್ದದ್ದು ಅಷ್ಟಕಷ್ಟೇ. ಕಾಂಪೌಂಡರು ಕೊಡುತ್ತಿದ್ದ ಬಣ್ಣ ಬಣ್ಣದ ಮಿಕ್ಶ್ಚರ್‌ಗಳ ಮೇಲೆ ನಂಬಿಕೆ ಹಾಗೂ ವ್ಯಾಮೋಹವಿದ್ದ ಕಾಲ ಅದಾಗಿತ್ತು; ಜೊತೆಗೆ ವೈದ್ಯರಾಡುತ್ತಿದ್ದ ಭರವಸೆಗಳೇ ಎಷ್ಟೋ ಜನರಲ್ಲಿ ಸಂತೃಪ್ತಿ ಮಾಡುತ್ತಿದ್ದವು!

## ಪ್ರಥಮ ಚುಂಬನಂ...!

ಆಸ್ಪತ್ರೆಯಲ್ಲಿ ಕಾರ್ಯಾರಂಭ ಮಾಡಿದ ಎರಡು ಇಲ್ಲವೆ ಮೂರನೇ ದಿನವಿರಬೇಕು. ಹಳ್ಳಿಗಾಡಿನ ರೋಗಿಯೊಬ್ಬನಿಗೆ ಪೆನಿಸಿಲಿನ್ ಇಂಜಕ್ಷನ್ ನೀಡಬೇಕಾಗುತ್ತದೆಂಬ ನಿರ್ಧಾರ ಮಾಡಿದೆ. ಆಸ್ಪತ್ರೆಯಲ್ಲಿ ಲಭ್ಯವಿರದಿದ್ದುದರಿಂದ ಪೇಟೆಯಿಂದ ಅವನಿಂದಲೇ ತರಿಸಿ, ಕೊಟ್ಟೆ, ಅನಂತರ ಪೇಟೆಯಲ್ಲಿ ಇನ್ನೇನೋ ಕೆಲಸವಿದೆಯೆಂದು ಹೊರಟು ಹೋದ. ಆದರೆ ಮುಂದಿನ ೧೦-೧೫ ನಿಮಿಷಗಳಲ್ಲೇ ಅವಸರದಿಂದ ಓಡೋಡುತ್ತಾ ಮತ್ತೆ ಬಂದ. ಮೈಯೆಲ್ಲಾ

ತುರಿಕೆಯಾಗುತ್ತದೆಂದೂ ಉಸಿರು ಕಟ್ಟಿಬರುತ್ತಿದೆಯೆಂದು ಹೇಳತೊಡಗಿದ. ತಕ್ಷಣ ಅವನನ್ನು ಮಲಗಿಸಿ ಪರೀಕ್ಷೆ ಮಾಡತೊಡಗಿದೆ. ಅವನ ಮೈಯೆಲ್ಲಾ ಬೆವರಿ ನೀರಿನ ಹನಿ ಹರಿಯಲಾರಂಭಿಸಿತ್ತು. (ಬಹುಶಃ ನನಗೂ ಸಹ!) ನಾಡಿ ಮಿಡಿತದ ವೇಗ ಹೆಚ್ಚಾಗಿದ್ದಲ್ಲದೆ ಕ್ಷೀಣಿಸತೊಡಗಿತ್ತು; ರಕ್ತದೊತ್ತಡ ಕುಸಿಯಲಾರಂಭಿಸಿತ್ತು. ಪೆನಿಸಿಲಿನ್ ಇಂಜಕ್ಷನ್‌ಗೆ ಪ್ರತಿಕ್ರಿಯೆ (ರಿಯಾಕ್ಷನ್) ಉಂಟಾಗಿದ್ದರ ಪರಿಣಾಮ ಅದೆಂಬುದರಲ್ಲಿ ಸಂಶಯವಿರಲಿಲ್ಲ. ಮೈಸೂರಿನ ಆಸ್ಪತ್ರೆಯ ಇಂಜಕ್ಷನ್ ವಿಭಾಗದಲ್ಲಿ ಕಾರ್ಯನಿರತನಾಗಿದ್ದಾಗ ಇಂತಹ ಕೆಲವು ಪ್ರಕರಣಗಳನ್ನು ನಿಭಾಯಿಸಿದ್ದ ರೀತಿ ನೀತಿಗಳು ನೆನಪಿನಾಳದಿಂದ ಹೊರಬರಲಾರಂಭಿಸಿದವು. ಕೂಡಲೇ ಕಾರ್ಯೋನ್ಮುಖನಾದೆ. ಇಂತಹ ಪರಿಸ್ಥಿತಿಗಳಲ್ಲಿ ತತ್‌ಕ್ಷಣ ನೀಡಬಹುದಾದ ಎರಡು ಬಗೆಯ ಇಂಜಕ್ಷನ್‌ಗಳು (Adrenaline ಮತ್ತು Synopen) ಆಸ್ಪತ್ರೆಯಲ್ಲಿ ಲಭ್ಯವಿದ್ದವು. ಅವುಗಳನ್ನು ತತ್‌ಕ್ಷಣ ನೀಡಿದೆ. ಇನ್ನೂ ಹೆಚ್ಚು ಪ್ರಭಾವ ಬೀರುವ ಕಾರ್ಟಿಸೋನ್ (Cortisone) ಇಂಜಕ್ಷನ್ ತರಿಸಲು ಜವಾನನೊಬ್ಬನಿಗೆ ದುಡ್ಡು ಕೊಟ್ಟು ಪೇಟೆಗೆ ಕಳುಹಿಸಿದೆ; ತಂದಾಕ್ಷಣ ಅದನ್ನೂ ನೀಡಿದೆ. ಮುಂದಿನ ಅರ್ಧಗಂಟೆಯಲ್ಲಿ ಅವನ ಸ್ಥಿತಿ ಉತ್ತಮವಾದಂತೆ ಕಂಡಿತು. ನಾಡಿ ಮಿಡಿತ, ರಕ್ತದೊತ್ತಡಗಳೆಲ್ಲಾ ಸಹಜ ಸ್ಥಿತಿಗೆ ಹಿಂತಿರುಗುವ ಲಕ್ಷಣಗಳು ವ್ಯಕ್ತವಾದವು. ಸ್ವಲ್ಪ ಹೊತ್ತಿನಲ್ಲೇ ಚೇತರಿಸಿಕೊಂಡು ಮಾತನಾಡಲಾರಂಭಿಸಿದ. ನನಗಂತೂ ಹೋದ ಜೀವ ಮರಳಿ ಬಂದಂತಾಯಿತು. ಅಲ್ಲಿದ್ದ ಇತರ ರೋಗಿಗಳು ಹಾಗೂ ಸಿಬ್ಬಂದಿ ವರ್ಗದವರೆಲ್ಲಾ ಮುಂದೇನಾಗುತ್ತದೋ ಎಂದು ಕಾತರದಿಂದ ನೋಡುತ್ತಿದ್ದರು. ಪೂರ್ತಿ ಚೇತರಿಸಿಕೊಂಡ ರೋಗಿ, "ಡಾಕ್ಟ್ರೇ ನಿಮ್ಮ ಕೈಗುಣ ಒಳ್ಳೆಯದು; ಸತ್ತೇ ಹೋದಂತಾದ ನನ್ನನ್ನು ಬದುಕಿಸಿದಿರಿ; ಹೆಂಡತಿ ಮಕ್ಕಳನ್ನು ಕಾಪಾಡಿದಿರಿ; ನಿಮಗಿನ್ನೂ ಚಿಕ್ಕ ವಯಸ್ಸು; ದೇವರು ನಿಮ್ಮನ್ನು ಚೆನ್ನಾಗಿರಿಸಲಿ" ಎಂದು ನನ್ನ ಕಾಲಿಗೆ ಬೀಳಲು ಹವಣಿಸಿದ. ಅವನನ್ನು ತಡೆದು, ನನ್ನ ಕೈಗುಣಕ್ಕಿಂತಲೂ ಅವನ ಅದೃಷ್ಟವೇ ಚೆನ್ನಾಗಿತ್ತೆಂದು ಸಾಂತ್ವನ ಹೇಳಿ ಕಳುಹಿಸಿದೆ.

ಅಂದು ನಾನು ನೀಡಿದ ಪೆನಿಸಿಲಿನ್ ಇಂಜಕ್ಷನ್ ಪರಿಣಾಮದಿಂದ ರೋಗಿಯೇನಾದರೂ ಅಸು ನೀಗಿದ್ದರೆ ನನ್ನ ಪರಿಸ್ಥಿತಿ ಏನಾಗುತ್ತಿತ್ತೋ ಹೇಳಲಾಗದು. ಸಿಟ್ಟಿಗೆದ್ದ ಜನ ಸಮುದಾಯ ಆಸ್ಪತ್ರೆಯೊಳಗೆ ನುಗ್ಗಿ ಧಾಂದಲೆ ಮಾಡಬಹುದಾಗಿತ್ತು; ನನಗೆ ಅಲ್ಲಿಂದ ಎತ್ತಂಗಡಿಯೋ ಇಲ್ಲವೆ ಆಗ ತಾನೇ ಲಭಿಸಿದ್ದ ಸರ್ಕಾರಿ ಕೆಲಸವೇ ಕೈ ತಪ್ಪಿ ಹೋಗುತ್ತಿತ್ತೋ! ಅದರಿಂದುಂಟಾಗಬಹುದಾದ ಮಾನಸಿಕ ಕ್ಷೋಭೆಯಿಂದ ಆಗತಾನೇ ಚಿಗುರೊಡೆಯುತ್ತಿದ್ದ ವೈದ್ಯಕೀಯ ವೃತ್ತಿ ಮುರುಟಿ ಹೋಗುತ್ತಿತ್ತೋ ಏನೋ ಹೇಳಲಾಗದು. ತರಬೇತಿಯ ಸಮಯದಲ್ಲಿ ಇಂಜಕ್ಷನ್ ವಿಭಾಗದಲ್ಲಿ ನಿಗದಿತ ಅವಧಿಗಿಂತ ಹೆಚ್ಚು ಸಮಯ ಕಾರ್ಯ ನಿರ್ವಹಿಸಿದ್ದರ ಪ್ರತಿಫಲ ಹಾಗೂ ಸಮಯ ಸ್ಫೂರ್ತಿಯಿಂದ ವರ್ತಿಸಿದ್ದು ಆ ದಿನ ನನ್ನನ್ನು ಕಾಪಾಡಿತು.

## ಮೊದಲ ಸವಾಲು

ಇನ್ನೊಂದು ವಾರ ಕಳೆದಿರಬಹುದು. ಬೆಳಗಿನ ಒಂಬತ್ತು ಗಂಟೆ ಸಮಯ. ಹೊರ ರೋಗಿಗಳ ವಿಭಾಗದಲ್ಲಿ ಆಗ ತಾನೇ ರೋಗಿಗಳನ್ನು ನೋಡಲಾರಂಭಿಸಿದ್ದೆ. ಮೂರ್‍ನಾಲ್ಕು ಎತ್ತಿನ ಗಾಡಿಗಳು ಆಸ್ಪತ್ರೆಯ ಎದುರಿಗೆ ಬಂದು ನಿಂತವು. ಅವುಗಳಿಂದ ಪ್ರಜ್ಞೆ ತಪ್ಪಿದಂತಿದ್ದ ಕೆಲವರನ್ನು ಕೆಳಗಿಳಿಸುವ ತಯಾರಿ ಮಾಡುವಂತಿತ್ತು. ಆಸ್ಪತ್ರೆಯ ವಾರ್ಡ್‌ಬಾಯ್‌ಗಳನ್ನು ಕಳುಹಿಸಿ ಅವರನ್ನೆಲ್ಲಾ ವಾರ್ಡುಗಳಿಗೆ ಸಾಗಿಸುವ ಏರ್ಪಾಡು ಮಾಡಿದೆ. ಸುಮಾರು ೬-೭

ಜನರಿರಬಹುದು; ಅವರಿಗೇನಾಯಿತೆಂದು ವಿಚಾರಿಸಿದಾಗ ಹಿಂದಿನ ದಿನ ನಡೆದ ಪ್ರಕರಣದ ವಿವರಗಳು ಹೊರಬಂದವು.

ಸೋಲೂರು, ಶಿಕಾರಿಪುರಕ್ಕೆ ೫-೬ ಮೈಲಿಗಳ ದೂರದ ಒಂದು ಹಳ್ಳಿ. ಅಲ್ಲಿಯ ಶಾಲಾ ಮಾಸ್ತರೊಬ್ಬರಿಗೆ ಸಾಕಷ್ಟು ಜಮೀನು ಕೂಡ ಇತ್ತು. ಅವರ ಗದ್ದೆಯ ಕಟಾವಿಗಾಗಿ ಹಿಂದಿನ ದಿನ ೧೦-೧೫ ಜನ ಲಂಬಾಣಿ ಕೂಲಿಗಳನ್ನು ನೇಮಿಸಿಕೊಂಡಿದ್ದರು. ಅಂದು ಕೆಲಸದ ನಂತರ ಸಾಯಂಕಾಲ ಅವರಿಗೆಲ್ಲಾ 'ಖುಷಿ' ಮಾಡಿಸಬೇಕೆಂದು ಕೂಲಿಗಳು ಮಾಸ್ತರನ್ನು ಪೀಡಿಸಲಾರಂಭಿಸಿದರು. ಖುಷಿ ಮಾಡಿಸುವುದೆಂದರೆ ಸಾರಾಯಿ ಕುಡಿಸುವುದೆಂದರ್ಥ! ಆದಾಗ ಪಾನ ನಿಷೇಧದ ಸಮಯವಾದುದರಿಂದ ಮದ್ಯಪಾನೀಯಗಳು ಸುಲಭವಾಗಿ ದೊರೆಯುತ್ತಿರಲಿಲ್ಲ. ಸಾರಾಯಿಯ ಬದಲಿಗೆ ಕೆಲವರು 'ಫ್ರೆಂಚ್ ಪಾಲಿಷ್' ದ್ರಾವಣವನ್ನು (ಬಣ್ಣವನ್ನು ಕರಗಿಸಲು ಬಳಸುವ ಮದ್ಯಕ್ಕೆ ಸಂಬಂಧಿಸಿದ ದ್ರವ) ಕುಡಿದು ಖುಷಿ ಪಟ್ಟುಕೊಳ್ಳುತ್ತಿದ್ದರಂತೆ. ಮಾಸ್ತರಿಗೆ ಯಾರೋ ಆ ವಿಚಾರವನ್ನು ತಿಳಿಸಿದರು. ಅವರು ನಿಜವೆಂದು ನಂಬಿ ಶಿಕಾರಿಪುರದಿಂದ ಕೆಲವು ಫ್ರೆಂಚ್ ಪಾಲಿಷ್ ಬಾಟಲುಗಳನ್ನು ತರಿಸಿ ಕೂಲಿಗಾರರು ಮನೆಗೆ ಹಿಂತಿರುಗುವಾಗ ಹಂಚಿದರು. ತಮ್ಮ ತಾಂಡಗಳಿಗೆ ಹಿಂತಿರುಗಿದ ಅವರೆಲ್ಲಾ ಆಪ್ತೇಷ್ಟರನ್ನೂ ಸೇರಿಸಿಕೊಂಡು ಬಾಟಲಿಗಳನ್ನೆಲ್ಲಾ ಖಾಲಿ ಮಾಡಿದರು. ಮಧ್ಯರಾತ್ರಿಯ ನಂತರ ಲಂಬಾಣಿ ತಾಂಡಾದಿಂದ ರೋದನ, ಕೂಗಾಟಗಳು ಕೇಳಿ ಬರಲಾರಂಭಿಸಿದವು. ಬಹುಪಾಲು ಜನರಿಗೆ ವಿಪರೀತ ಹೊಟ್ಟೆನೋವು ಕಾಣಿಸಿಕೊಂಡು ಎಡೆಬಿಡದೆ ವಾಂತಿಯೂ ಆಗುತ್ತಿತ್ತು. ಅವರ ಆಕ್ರಂದನದ ಕೂಗು ಊರಿಗೂ ಕೇಳಿ ಬರುತ್ತಿತ್ತು. ಊರಿನ ಕೆಲವರು ತಾಂಡಗಳತ್ತ ಧಾವಿಸಿದರು. ಫ್ರೆಂಚ್ ಪಾಲಿಷ್ ಕುಡಿದವರೆಲ್ಲಾ ಹೊಟ್ಟೆ ನೋವಿನಿಂದ ಹೊರಳಾಡುತ್ತಿದ್ದುದನ್ನು ನೋಡಲಾಗದಂತಿತ್ತು. ಆದಾಗಲೇ ಬೆಳಗಿನ ಜಾವವಾಗಿದ್ದು ಅವರಿಗೆ ವೈದ್ಯಕೀಯ ನೆರವು ಒದಗಿಸುವುದು ಅಸಾಧ್ಯವಾಗಿತ್ತು. ಶಿಕಾರಿಪುರದ ಆಸ್ಪತ್ರೆಗೆ ಸಾಗಿಸುವುದಕ್ಕೆ ಯಾವುದೇ ವಾಹನ ಸೌಕರ್ಯಗಳೂ ಆ ಕುಗ್ರಾಮದಲ್ಲಿ ಲಭ್ಯವಿರಲಿಲ್ಲ. ಬೆಳಗಾಗುವುದರಲ್ಲೇ ನಾಲ್ಕು ಜನ ಅಸು ನೀಗಿದರು. ಇನ್ನುಳಿದವರನ್ನು ಗಾಡಿಗಳಲ್ಲಿ ಶಿಕಾರಿಪುರಕ್ಕೆ ಸಾಗಿಸಿದರು.

ಆಸ್ಪತ್ರೆಗೆ ದಾಖಲಾದವರ ಪರಿಸ್ಥಿತಿ ತುಂಬಾ ಗಂಭೀರವಾಗಿತ್ತು. ಉದರ ಬೇನೆ ಮತ್ತು ವಾಂತಿಯನ್ನು ಉಪಶಮನ ಮಾಡಲು ಕೆಲವು ಇಂಜಕ್ಷನ್‌ಗಳನ್ನು ನೀಡಿದೆ. ತೀರಾ ಸುಸ್ತಾದವರಿಗೆ ಅಂಗಡಿಗಳಿಂದ ಗ್ಲೂಕೋಸ್ ಬಾಟಲುಗಳನ್ನು ತರಿಸಿ ನೀಡಿದೆ. ಹೀಗೆ ಪೂರ್ವಭಾವಿ ಚಿಕಿತ್ಸಾ ವಿಧಾನಗಳನ್ನು ಅಳವಡಿಸಿ ಹೊರ ರೋಗಿಗಳ ವಿಭಾಗಕ್ಕೆ ಬಂದು ಕುಳಿತುಕೊಳ್ಳುವಷ್ಟರಲ್ಲೇ ಪೋಲೀಸ್ ಪೇದೆಯೊಬ್ಬ ಸೆಲ್ಯೂಟ್ ಮಾಡಿ, ಲಕೋಟೆಯೊಂದನ್ನು ಕೈಗಿತ್ತ. ಅದು ಸೋಲೂರಿನಲ್ಲಿ ಅಸು ನೀಗಿದ ನಾಲ್ಕು ಜನರ ಶವಪರೀಕ್ಷೆ (ಪೋಸ್ಟ್‌ಮಾರ್ಟಂ) ಜರುಗಿಸುವಂತೆ ಕೋರಿ ಸಬ್‌ಇನ್ಸ್‌ಪೆಕ್ಟರ್ ಕಳುಹಿಸಿದ ಪತ್ರ. ಅದನ್ನು ಓದಿ ನನ್ನ ಜಂಘಾಬಲವೇ ಉಡುಗಿ ಹೋದಂತಾಯಿತು. ಸರ್ಕಾರಿ ಕೆಲಸಕ್ಕೆ ಸೇರಿದ ಒಂದು ವಾರದಲ್ಲೇ ಒಂದೇ ದಿನ ನಾಲ್ಕು ಶವಪರೀಕ್ಷೆಗಳನ್ನು ಜರುಗಿಸಬೇಕಾದ ಅನಿವಾರ್ಯತೆ ಧುತ್ತೆಂದು ಎದುರಾದರೆ ಏನಾಗಬೇಡ. ಆದರೆ ಬಂದುದನ್ನು ಎದುರಿಸುವುದಲ್ಲದೆ ಅನ್ಯಮಾರ್ಗವಿರಲಿಲ್ಲ.

ಮೆಡಿಕಲ್ ವಿದ್ಯಾಭ್ಯಾಸದ ಮೂರು ಮತ್ತು ನಾಲ್ಕನೆ ತರಗತಿಗಳಲ್ಲಿ ವೈದ್ಯಕೀಯ ನ್ಯಾಯಶಾಸ್ತ್ರದ (Forensic Medicine) ಬಗೆಗೆ ಪಾಠ ಪ್ರವಚನಗಳು ಜರುಗುತ್ತವೆ. ಅದರ ಅಂತಿಮ ಪರೀಕ್ಷೆಯಲ್ಲಿ ಉತ್ತಮ ಅಂಕಗಳನ್ನು ಗಳಿಸಿದ್ದು ನನ್ನ ಗರಿಮೆ ಎನಿಸಿಕೊಂಡಿದ್ದ. ಆ

ಎರಡೂ ವರ್ಷಗಳಲ್ಲಿ ಈ ರೀತಿಯಲ್ಲಿ ಆಕಸ್ಮಿಕವಾಗಿ ಇಲ್ಲವೆ ಅನುಮಾನಾಸ್ಪದ ರೀತಿಯಲ್ಲಿ ಸತ್ತವರ ಶವಪರೀಕ್ಷೆ ಮಾಡುತ್ತಾರೆ. ಅಪರಾಧಗಳನ್ನು ಪತ್ತೆ ಹಚ್ಚುವುದರಲ್ಲಿ ಅದು ಪ್ರಮುಖ ಪಾತ್ರ ವಹಿಸುತ್ತದೆ. ಮೈಸೂರು ನಗರದ ಆಜುಬಾಜಿನಲ್ಲಿ ಈ ರೀತಿಯಲ್ಲಿ ಸಾವೀಗೀಡಾದವರ ಶವಗಳ ಪರೀಕ್ಷೆ ಮೆಡಿಕಲ್ ಕಾಲೇಜಿನ ಶವಾಗಾರದಲ್ಲಿ, ವೈದ್ಯಕೀಯ ನ್ಯಾಯಶಾಸ್ತ್ರದ ಬೋಧಕರಿಂದಲೇ ಜರುಗುವುದು. ಅಂತಹ ಸಮಯಗಳಲ್ಲಿ ನಾವು ಆಸ್ಪತ್ರೆಗಳಲ್ಲಿ ಎಲ್ಲೇ ಕಾರ್ಯನಿರತರಾಗಿದ್ದರೂ, ಅಲ್ಲಿಂದ ಶವಾಗಾರಕ್ಕೆ ಹೋಗಿ ನ್ಯಾಯ-ವೈದ್ಯದ (Medico-Legal) ಶವಪರೀಕ್ಷೆಯ ವಿಧಿವಿಧಾನಗಳನ್ನು ವೀಕ್ಷಿಸಬೇಕೆಂಬ ನಿಯಮವಿದೆ. ಅದರಿಂದ ಕರೆ ಬಂದ ಕೂಡಲೇ ಆಸ್ಪತ್ರೆಯಿಂದ ನಾವೆಲ್ಲಾ ಅತ್ತ ಕಡೆ ಧಾವಿಸುತ್ತಿದ್ದೆವು. ಆರಂಭದ ದಿನಗಳಲ್ಲಿ ಘಟನೆ ನಡೆದ ಬಗೆಗಿನ ರೋಚಕ ಸಂಗತಿಗಳು, ಹೆಣದ ಮೇಲಿನ ಗಾಯ, ಅದು ತಲುಪಿರುವ ಸ್ಥಿತಿ ಮುಂತಾದ - ವಿಷಯಗಳು ಕುತೂಹಲ ಹುಟ್ಟಿಸಿದ್ದವು. ಪ್ರಾಧ್ಯಾಪಕರಾಗಿದ್ದ ನಿವೃತ್ತ ಮಿಲಿಟರಿ ವೈದ್ಯ ಡಾ|| ಎ. ಟಿ. ಶ್ರೀನಿವಾಸ ಅಯ್ಯಂಗಾರರ ಶಿಸ್ತುಬದ್ಧ ನಡೆವಳಿಕೆ, ಶವಛೇದನ ಕುಶಲತೆ, ಉಂಟಾಗಿರಬಹುದಾದ ಬದಲಾವಣೆಗಳ ಪ್ರದರ್ಶನ ಮುಂತಾದವು ತುಂಬಾ ಚಿತ್ತಾಕರ್ಷಕವಾಗಿ ಕಂಡು ಬರುತ್ತಿದ್ದವು. ಬರುಬರುತ್ತಾ ಅದೆಲ್ಲಾ ಮಾಮೂಲಿನಂತಾಗಿ ನಮ್ಮಲ್ಲಿ ಬಹಳಷ್ಟು ಜನರಲ್ಲಿ ಆಕರ್ಷಣೆ ಕುಂದುತ್ತಾ ಬರುತ್ತಿತ್ತು. ಕೆಲವರು (ನಾನೂ ಸೇರಿದಂತೆ!) ಅಂತಹ ಪ್ರದರ್ಶನಗಳಿಗೆ ಚಕ್ಕರ್ ಹಾಕುತ್ತಿದ್ದುದು ಅಪರೂಪವಾಗೇನೂ ಇರುತ್ತಿರಲಿಲ್ಲ. ಈಗ ಸಮಸ್ಯೆ ಮುಖಾಮುಖಿಯಾಗಿ ನನಗೆ ಪರಿತಪಿಸುವಂತಾಯಿತು.

ಮುಂದಿನ ಕ್ರಮಗಳ ಬಗೆಗೆ ಕಾಂಪೌಂಡರನ್ನು ಕರೆಸಿ ಸಮಾಲೋಚನೆ ನಡೆಸಿದೆ. ಅದೊಂದು ಹೊಸದಾಗಿ ಆರಂಭವಾದ ಆಸ್ಪತ್ರೆಯಾದುದರಿಂದ, ಆ ಬಗೆಗೆ ಹಳೆಯ ದಾಖಲಾತಿಗಳಿರಲಿಲ್ಲ. ಹಿಂದೆ ಅವರಿದ್ದ ಕಡೆಗಳಲ್ಲಿ ವೈದ್ಯರು, ಶವಪರೀಕ್ಷಾ ಸಮಯದಲ್ಲಿ ಯಾವ ರೀತಿಯಲ್ಲಿ ವರ್ತಿಸುತ್ತಿದ್ದರೆಂಬುದರ ಬಗೆಗೆ ಕೇಳಿ ತಿಳಿದುಕೊಂಡೆ. ಅದರಂತೆ ನಮ್ಮ ಆಸ್ಪತ್ರೆಯ ಸರ್ಜಿಕಲ್ ಅಟೆಂಡರ್ ಅಬ್ದುಲ್ ರಹೀಮ್ ವಿಧಿವತ್ತಾದ ಕ್ರಮದಲ್ಲಿ ಹೆಣವನ್ನು ಕತ್ತರಿಸಿ, ದೇಹದ ವಿವಿಧ ಅವಯಗಳನ್ನು ತೋರಿಸುವುದು, ಅದರಲ್ಲುಂಟಾಗಿರಬಹುದಾದ ಬದಲಾವಣೆಗಳನ್ನು ಹೇಳುತ್ತಾ ಹೋಗುವುದು, ಕಾಂಪೌಂಡರೂ ಸಹ ಜೊತೆಗಿದ್ದು ಆ ಬಗೆಗೆ ಟಿಪ್ಪಣಿ ಬರೆದು ಕೊಳ್ಳುತ್ತಿರುವುದೆಂಬ ನಿರ್ಧಾರ ಮಾಡಿದೆವು. ಪ್ರಸ್ತುತ ಪ್ರಕರಣ ಒಂದು ರೀತಿಯ 'ವಿಷಪ್ರಾಶನ' (Poisoning) ದಿಂದಾದುದರಿಂದ ಪ್ರತಿಯೊಂದು ಶವದಿಂದಲೂ ಕೆಲವು ಅವಯವಗಳ ತುಣುಕುಗಳನ್ನು ಶೇಖರಿಸಲು ಕೆಲವು ಬಾಟಲುಗಳನ್ನು ಸಹ ಅಣಿ ಮಾಡಿಕೊಂಡೆವು.

ನಾವು ಶವಪರೀಕ್ಷಾ ಕಾರ್ಯವನ್ನು ಮಧ್ಯಾಹ್ನ ೧೨ ಗಂಟೆಯ ನಂತರ ಆರಂಭಿಸಿದೆವು. ರಹೀಮ್ ಈ ಕಾರ್ಯದಲ್ಲಿ ಸಾಕಷ್ಟು ಪಳಗಿದವನೆ. ಪ್ರತಿಯೊಂದು ಶವದ ಎದೆಯ ಮೇಲ್ತುದಿಯಿಂದ ಕಿಬ್ಬೊಟ್ಟೆಯ ಕೊನೆಯವರೆಗೂ ಕತ್ತರಿಸಿ ದೇಹದ ಒಳಭಾಗಗಳನ್ನು ತೆರೆದಿಡುತ್ತಾ ಹೋದ; ನಂತರ ಹೊಟ್ಟೆಯೊಳಗಡೆ ಜಠರದಿಂದ ಹಿಡಿದು ಪ್ರತಿಯೊಂದು ಅವಯವವನ್ನೂ ಕತ್ತರಿಸಿ ಪ್ರದರ್ಶಿಸುತ್ತಾ ತನ್ನ ಕಾರ್ಯವನ್ನು ಮುಂದುವರಿಸಿದ ಹಾಗೆ ಎದೆಗೂಡು ಮತ್ತು ತಲೆಬುರುಡೆಯನ್ನೂ ಸಹ ತೆರೆದು ಅಲ್ಲಿನ ಅಂಗಾಂಗಗಳನ್ನು ತೆರೆದು ತೋರಿಸಿದ. ಅವುಗಳಲ್ಲಿ ಕಂಡು ಬಂದ ಬದಲಾವಣೆಗಳ ಬಗೆಗೆ ನಾನು ಹೇಳುತ್ತಿದ್ದುದನ್ನು ಕಾಂಪೌಂಡರು ಟಿಪ್ಪಣಿ ಮಾಡಿಕೊಳ್ಳುತ್ತಿದ್ದರು. ಹಾಗೆಯೇ ಪರೀಕ್ಷೆಗೊಳಪಡಿಸಿದ ಅವಯವಗಳ ತುಣುಕುಗಳನ್ನು ಕತ್ತರಿಸಿ, ಅವುಗಳಲ್ಲಿದ್ದ ಸ್ವಲ್ಪ ರಸವನ್ನೂ ಸೇರಿಸಿ ವಿವಿಧ ಬಾಟಲುಗಳಲ್ಲಿ ಆಗಿಂದಾಗಲೇ ಶೇಖರ

ಮಾಡುತ್ತಲೂ ಇದ್ದೆವು. ನಾಲ್ಕೂ ಶವಗಳನ್ನು ಈ ರೀತಿ ಪರೀಕ್ಷೆ ಮಾಡಿ ಮುಗಿಸಿ, ಬಾಟಲುಗಳಿಗೆ ಹಾಕಿ ಗುರುತಿನ ಚೀಟಿಗಳನ್ನು ಅಂಟಿಸಿ, ಮುಚ್ಚಳಗಳನ್ನು ಅಳವಡಿಸಿ, ಸೀಲ್ ಮಾಡಿದೆವು. ಶವಾಗಾರದಿಂದ ಹೊರಬರಲು ಸಂಜೆ ಆರು ಗಂಟೆ ಮುಗಿದಿತ್ತು. ಮನೆಗೆ ಹಿಂತಿರುಗುವ ಮೊದಲು ಬೆಳಿಗ್ಗೆ ವಾರ್ಡುಗಳಿಗೆ ಸೇರಿಸಿದ ಇದೇ ಪ್ರಕರಣದಲ್ಲಿ ಬದುಕಿ ಉಳಿದವರನ್ನು ಮತ್ತೊಮ್ಮೆ ಅಜಮಾಯಿಶಿ ನೋಡಿ ಮನೆಗೆ ಹಿಂದಿರುಗುವಲ್ಲಿ ರಾತ್ರಿ ಆವರಿಸಿತ್ತು.

ಮನೆಯಲ್ಲಿ ತಣ್ಣೀರು ಸ್ನಾನ ಮಾಡಿ, ಹೋಟೇಲಿನಿಂದ ತರಿಸಿದ ಊಟದ ಶಾಸ್ತ್ರ ಮುಗಿಸಿದೆ. ದಿನವೆಲ್ಲಾ ಪುರುಸೊತ್ತಿಲ್ಲದೆ ದಣಿದಿದ್ದರಿಂದ ನಿದ್ದೆ ಮಾಡಲು ಕಣ್ಣೆಳೆಯುತ್ತಿದ್ದವು. ಆದರೆ ಆ ದಿನ ಜರುಗಿಸಿದ ಶವ ಪರೀಕ್ಷಾ ವರದಿಗಳನ್ನು ನಿಗದಿತ ಫಾರಂ ಮತ್ತು ಪುಸ್ತಕದಲ್ಲಿ ಮುಂದಿನ ೨೪ ಗಂಟೆಗಳಲ್ಲೇ ಬರೆದು, ಮೇಲಾಧಿಕಾರಿಗಳಿಗೆ, ಪೋಲೀಸರಿಗೆ ಹಾಗೂ ಬೆಂಗಳೂರಿನ ವೈದ್ಯನ್ಯಾಯಶಾಸ್ತ್ರದ ಪ್ರಯೋಗಾಲಯ (Forensic Science Laboratory)ಕ್ಕೆ ಕಳುಹಿಸಿ ಕೊಡಬೇಕೆಂಬ ನಿಯಮವಿದೆ; ಅವನ್ನೆಲ್ಲಾ ನಾಲ್ಕು ಶವಗಳ ಬಗೆಗೆ ಹದಿನಾರು ಪ್ರತಿಗಳು) ಅವತ್ತೇ ಬರೆಯುವ ಅನಿವಾರ್ಯತೆ ಇತ್ತು. ಮರುದಿನ ಆಸ್ಪತ್ರೆಯ ಕೆಲಸ ಕಾರ್ಯಗಳಲ್ಲಿ ತೊಡಗಿಸಿಕೊಳ್ಳ ಬೇಕಾದುದರಿಂದ ಆ ಸಮಯದಲ್ಲಿ ಈ ಕಾರ್ಯವನ್ನು ಜರುಗಿಸಿರುವುದಕ್ಕೆ ಸಾಧ್ಯವಾಗಲಾರದು. ಅದರಿಂದ ಕೂಡಲೇ ವರದಿಗಳನ್ನು ಬರೆಯಲು ಆರಂಭಿಸಿದೆ. ಬಹುಪಾಲು ಬರೆದ ವಿಷಯಗಳನ್ನೇ ಮರುಕಳಿಸಿ ಬರೆಯುವ ಬೇಸರ ಒಂದು ಕಡೆ; ನಿದ್ರೆಯ ಒತ್ತಡ ಮತ್ತೊಂದು ಕಡೆ. ಆದರೂ ಛಲ ಬಿಡದೆ ಎಲ್ಲಾ ಪ್ರತಿಗಳನ್ನು ಬರೆದು ಮುಗಿಸುವಷ್ಟರಲ್ಲಿ ಬೆಳಗಿನ ಜಾವ ಸಮೀಪಿಸುತ್ತಿತ್ತು! ಒಂದೇ ದಿನ ಹಲವಾರು ಶವಪರೀಕ್ಷೆಗಳನ್ನು ಜರುಗಿಸಬೇಕಾದ ವಿಶೇಷ ಪ್ರಕರಣಗಳಲ್ಲಿ ಶವಪರೀಕ್ಷಾ ವರದಿಗಳನ್ನು ಕಳುಹಿಸುವಲ್ಲಿ ಕೆಲವು ದಿನಗಳಾದರೆ ಯಾವುದೇ ರೀತಿಯ ಆಕ್ಷೇಪಣೆಗಳು ಬರಲಾರವೆಂದು ಕೆಲವು ದಿನಗಳ ನಂತರ ತಿಳಿದು ಬಂದಿತು. ಆದರೆ ಸರ್ಕಾರದ ನೀತಿ ನಿಯಮಗಳನ್ನು ಚಾಚೂ ತಪ್ಪದೆ ಅನುಸರಿಸಬೇಕೆಂಬ ನಿಯತ್ತಿನ ಛಲ ನನ್ನಾವರಿಸಿಕೊಂಡಿತ್ತು; ಅದನ್ನು ಸಾಧಿಸಿಯೇ ಬಿಟ್ಟೆ!

ಅವಯವಗಳ ತುಣುಕುಗಳನ್ನು ಶೇಖರಿಸಿದ ಬಾಟಲುಗಳನ್ನು ಮುಚ್ಚಿ ಯಾವ ರೀತಿಯಲ್ಲಿ ಸೀಲ್ ಮಾಡಬೇಕು, ಹೇಗೆ ಕಳುಹಿಸಬೇಕೆಂಬ ಬಗೆಗೆ ಸರಿಯಾದ ಮಾಹಿತಿ ಇರಲಿಲ್ಲ. ಕಾಂಪೌಂಡರ ಅನುಭವ ಸೀಮಿತವಾಗಿತ್ತು. ನಮಗೆ ತಿಳಿದಂತೆ ಅವುಗಳನ್ನೆಲ್ಲಾ ಪ್ಯಾಕ್ ಮಾಡಿ ಒಂದೇ ಜಾಯಿಕಾಯಿ ಪೆಟ್ಟಿಗೆಯಲ್ಲಿರಿಸಿ ಪೋಲೀಸ್ ಸ್ಟೇಷನ್‌ಗೆ ಕಳುಹಿಸಿ ಕೊಡಲಾಯಿತು. ಇನ್ನೆರಡು ದಿನಗಳಲ್ಲಿ ಸಾಗರದಿಂದ ಪೋಲೀಸ್ ಇಲಾಖೆಯ ಡಿ.ವೈ.ಎಸ್ಪಿ.(DY.S.P.) ಯವರು ಪ್ರಕರಣದ ಹೆಚ್ಚಿನ ತನಿಖೆಗಾಗಿ ಶಿಕಾರಿಪುರದ ಪೋಲೀಸ್ ಸ್ಟೇಷನ್ನಿಗೆ ಬಂದಿಳಿದರು. ಆ ತನಕ ಜರುಗಿದ ವಿದ್ಯಮಾನಗಳನ್ನು ಅಜಮಾಯಿಶಿದ ನಂತರ ನಾವು ಕಳುಹಿಸಿದ ಬಾಟಲುಗಳ ಪೆಟ್ಟಿಗೆ ಅವರ ಗಮನ ಸೆಳೆದಿರಬೇಕು. ಅನುಭವಿಗಳಾದ ಅವರಿಗೆ ನಾವು ಕಳುಹಿಸಿದ ರೀತಿ ಸರಿಯೆಂದು ಕಾಣಿಸಲಿಲ್ಲವಂತೆ. ಕೂಡಲೇ ಆಸ್ಪತ್ರೆಗೆ ತಮ್ಮ ಜೀಪನ್ನು ಕಳುಹಿಸಿ ನನ್ನನ್ನು ಕರೆತರುವಂತೆ ಹೇಳಿದರಂತೆ. ನಾನು ಅನುಸರಿಸಿದ ವಿಧಾನಗಳಲ್ಲಿ ಏನೇನು ಅಚಾತುರ್ಯ ಸಂಭವಿಸಿದೆಯೋ ಎಂಬ ಆತಂಕ ನನ್ನನ್ನು ಬಾಧಿಸತೊಡಗಿತು. ಅಲ್ಲದೆ ಹಾಗೆ ಪೋಲೀಸ್ ಸ್ಟೇಷನ್ನಿಗೆ ಹೋಗುವುದು ಸರಿಯೇ ಎಂಬ ಬಗೆಗೂ ಅನುಮಾನ ಉಂಟಾಯಿತು; ಹೇಗೂ ಅವರೇ ಜೀಪು ಕಳುಹಿಸಿದ್ದರಿಂದ ಅದೇ ಸರಿಯೆಂದು ಹೋದೆ. ಡಿ.ವೈ.ಎಸ್ಪಿ., ದಢೂತಿ ಮೈಕಟ್ಟಿನ ಜಬರ್‌ದಸ್ತಿನ ವ್ಯಕ್ತಿಯಂತೆ ಕಂಡುಬಂದರೂ, ಹಸನ್ಮುಖದಿಂದ ಸ್ವಾಗತಿಸಿ ಕೈಕುಲುಕಿದರು. ನಾಲ್ಕು ಶವಗಳಿಗೆ

ಸಂಬಂಧಿಸಿದ ಎಲ್ಲಾ ೧೬ ಬಾಟಲುಗಳನ್ನು ಒಂದೇ ಪೆಟ್ಟಿಗೆಯಲ್ಲಿರಿಸಿ ಕಳುಹಿಸುವುದು ಸರಿಯಾದ ಕ್ರಮವಲ್ಲವೆಂತಲೂ, ಒಂದೊಂದು ವ್ಯಕ್ತಿಗೆ ಸಂಬಂಧಿಸಿದ ಬಾಟಲುಗಳನ್ನು ಬೇರೆ ಬೇರೆ ಪೆಟ್ಟಿಗೆಯಲ್ಲಿಟ್ಟು, ಪ್ರತಿ ಪೆಟ್ಟಿಗೆಯನ್ನೂ ಸೀಲ್ ಮಾಡಿಡಬೇಕು; ಶವಪರೀಕ್ಷಾ ವರದಿಗಳನ್ನು ಸ್ಯಾಂಪಲ್ ಸೀಲ್‌ಗಳ ಜೊತೆ ಪ್ರತ್ಯೇಕ ಲಕೋಟೆಗಳಲ್ಲಿಟ್ಟು, ಅವುಗಳನ್ನೂ ಸೀಲ್ ಮಾಡಿ ಕಳುಹಿಸಬೇಕೆಂದು ಸಲಹೆ ಮಾಡಿದರು. ಇದಲ್ಲದೆ ಸರ್ಕಾರಿ ಸೇವೆಯಲ್ಲಿ ನಾನೆಷ್ಟು ವರ್ಷಗಳನ್ನು ಕಳೆದಿರಬಹುದು, ಹಾಗೂ ಎಷ್ಟು ಶವಪರೀಕ್ಷೆಗಳನ್ನು ಜರುಗಿಸಿರಬಹುದೆಂಬ ವಿಷಯಗಳ ಬಗೆಗೂ ವಿಚಾರಿಸಿದರು. ನಾನು ಸರ್ಕಾರಿ ಸೇವೆಗೆ ಸೇರಿ ಕೇವಲ ೮-೧೦ ದಿನಗಳಾದವು; ಎರಡು ದಿನಗಳ ಹಿಂದೆ ಜರುಗಿಸಿದವುಗಳೇ ನಾನು ಮೊಟ್ಟ ಮೊದಲು ಜರುಗಿಸಿದ ಶವಪರೀಕ್ಷೆಗಳೆಂದು ಹೇಳಿದಾಗ ದಂಗಾದರು. ಇಂತಹ ವಿಷಯಗಳಲ್ಲಿ ಇನ್ನೂ ಅನುಭವವಿಲ್ಲದಿದ್ದುದರಿಂದ ಈ ರೀತಿಯ ವ್ಯತ್ಯಯವಾಗುವುದು ಸ್ವಾಭಾವಿಕ; ಹಾಗೂ ಮುಂದೆ ಈ ತರಹದ ಪ್ರಸಂಗಗಳನ್ನು ಎದುರಿಸಿದಂತೆಲ್ಲಾ ಸರಿ ಹೋಗುತ್ತದೆಂದು ಸಾಂತ್ವನ ಹೇಳಿದರು. ಅಲ್ಲದೆ ಪೋಲೀಸ್ ಇನ್‌ಸ್ಪೆಕ್ಟರ್ ಕಡೆ ತಿರುಗಿ ಹೀಗೆ ಹೊಸ ಡಾಕ್ಟರು ಬಂದಾಗ ಹಾಗೂ ಒಂದೇ ಸಾರಿ ಅಷ್ಟೊಂದು ಶವಪರೀಕ್ಷಾ ಸಂದರ್ಭವಿದ್ದಾಗ ಅವರೂ ಸಹ ಆಸ್ಪತ್ರೆಗೆ ಹೋಗಿ ಡಾಕ್ಟರಿಗೆ ಸಲಹೆ ಸೂಚನೆಗಳನ್ನು ನೀಡಬಹುದೆಂದು ಹೇಳುವುದನ್ನು ಮರೆಯಲಿಲ್ಲ. ಆಸ್ಪತ್ರೆಗೆ ಹಿಂದಿರುಗಿದವನೆ, ಡಿ.ವೈ.ಎಸ್ಪಿಯವರ ಸಲಹೆಯಂತೆ ಬಾಟಲುಗಳನ್ನು ಮತ್ತೊಮ್ಮೆ ಅಣಿಗೊಳಿಸಿ, ಪ್ರತ್ಯೇಕ ಪೆಟ್ಟಿಗೆಗಳಲ್ಲಿಟ್ಟು ಕಳುಹಿಸಿಕೊಟ್ಟೆವು. ಇನ್ನೊಂದು ವಾರದಲ್ಲಿ ಪುರಸಭೆಯ ಜಾಡಮಾಲಿಯೊಬ್ಬ ಇದೇ ರೀತಿ ಫ್ರೆಂಚ್‌ಪಾಲಿಷ್ ಕುಡಿದು ಸಾವಿಗೀಡಾದ. ಅವನ ಶವಪರೀಕ್ಷೆಯನ್ನು ಯಾವುದೇ ವ್ಯತ್ಯಯವಿಲ್ಲದೆ ಮಾಡಲು ಸಾಧ್ಯವಾಯಿತು.

## ದಿವಾನರೂ ಫೀಜು ಕೊಟ್ಟರಂತೆ!

ಹಳ್ಳಿಗಾಡಿನ ಆಸ್ಪತ್ರೆಗಳಲ್ಲಿ ರೋಗಿಗಳನ್ನು ಪರೀಕ್ಷೆ ಮಾಡಿ, ಚಿಕಿತ್ಸೆ ಮಾಡುವ, ಅವರಲ್ಲೂ ಇಂಜೆಕ್ಷನ್ ಕೊಟ್ಟ ಡಾಕ್ಟರುಗಳಿಗೆ ಫೀಜು ಕೊಡುವ ರಿವಾಜು ಹಿಂದಿನಿಂದಲೂ ಪ್ರಚಲಿತವಿದ್ದ ಕಾಲವದು. ಬಹುಪಾಲು ಡಾಕ್ಟರುಗಳು ಕೇಳದಿದ್ದರೂ ಅವರಿಗೆ 'ಮರ್ಯಾದೆ' ಕೊಡುವ ಸಂಪ್ರದಾಯವಾಗಿ ಪರಿಣಮಿಸಿತ್ತು ಆ ಪದ್ಧತಿ; ಕೆಲವು ಬಾರಿ ಕಾಂಪೌಂಡರರೋ, ಅಥವಾ ಆಸ್ಪತ್ರೆಯ ಸಿಬ್ಬಂದಿಯವರೋ ರೋಗಿಗಳ ಕಡೆಯವರನ್ನು ಪುಸಲಾಯಿಸಿ ಡಾಕ್ಟರಿಗೆ 'ಮರ್ಯಾದೆ' ಕೊಡಿಸಿ, ಆ ನೆಪದಲ್ಲಿ ಅವರೂ ಸ್ವಲ್ಪ ಪಡೆದುಕೊಳ್ಳುತ್ತಿದ್ದುದೂ ಅಪರೂಪವಾಗಿರಲಿಲ್ಲ!

ಈ ದಿಸೆಯಲ್ಲಿ ಹಿಂದೆ ಮೈಸೂರು ಸಂಸ್ಥಾನದ ದಿವಾನರಾಗಿದ್ದ (ಸರ್) ಭಾರತರತ್ನ ಮೋಕ್ಷಗೊಂಡಂ ವಿಶ್ವೇಶ್ವರಯ್ಯನವರು ನೀಡಿದ ವಿಶ್ಲೇಷಣೆ ಉಲ್ಲೇಖಾರ್ಹ. ದಿವಾನರು ಯಾವುದೋ ಒಂದು ತಾಲ್ಲೂಕಿಗೆ ಪ್ರವಾಸ ಹೋಗಿದ್ದಾಗ, ಕಾರಿನ ಬಾಗಿಲು ಹಾಕುವಾಗ ಬೆರಳಿಗೆ ಗಾಯವಾಯಿತು. ಅವರನ್ನು ಅಲ್ಲಿಯ ಸರ್ಕಾರಿ ಆಸ್ಪತ್ರೆಗೆ ಕರೆದುಕೊಂಡು ಹೋದರು. ದಿವಾನ್ ಸಾಹೇಬರನ್ನು ಅಲ್ಲಿಯ ವೈದ್ಯರು ತುಂಬಾ ಭಯ ಭಕ್ತಿ ಗೌರವಗಳಿಂದ ನೋಡಿಕೊಂಡರು. ಸೂಕ್ತ ಚಿಕಿತ್ಸೆ ನೀಡಿದರು; ಪ್ರವಾಸಿ ಮಂದಿರಕ್ಕೆ ಹಿಂದಿರುಗಿದ ದಿವಾನರು ಡಾಕ್ಟರರ ಹೆಸರಿಗೆ ೨೫ ರೂಪಾಯಿಗಳ ಚೆಕ್ ಬರೆದು ಕಳುಹಿಸಿ ಕೊಟ್ಟರು. ಅದನ್ನು ನೋಡಿದ ಡಾಕ್ಟರು ತುಂಬಾ ಗಾಬರಿ ಪಟ್ಟುಕೊಂಡರು. ತಾವು ನೀಡಿದ ಚಿಕಿತ್ಸೆ ದಿವಾನ್ ಸಾಹೇಬರಿಗೆ ತೃಪ್ತಿಯುಂಟು

ಮಾಡಲಿಲ್ಲವೋ? ತಾವು ಅವರಿಂದ ಹಣ ಅಪೇಕ್ಷಿಸಿದಂತೆ ಭಾಸವಾಯಿತೋ? ಇಲ್ಲವೆ ಜನರ ಹತ್ತಿರ ಚಿಕಿತ್ಸೆಯ ಸಲುವಾಗಿ ಹಣ ವಸೂಲು ಮಾಡುವ ಧನಪಿಶಾಚಿಯೆಂದು ಯಾರಾದರೂ ದೂರಿರುವರೋ ಎಂಬೆಲ್ಲಾ ಅನುಮಾನಗಳು ಅವರನ್ನು ಬಾಧಿಸತೊಡಗಿದವು. ಏನಾದರಾಗಲೀ ಪ್ರವಾಸಿಮಂದಿರಕ್ಕೆ ಹೋಗಿ ದಿವಾನರಿಗೆ ಚೆಕ್ಕನ್ನು ಹಿಂದಿರುಗಿಸುವ ನಿರ್ಧಾರ ಮಾಡಿದರು. ದಿವಾನರಿಗೆ ಶಿರಬಾಗಿ ನಮಿಸಿ ಜೇಬಿನಿಂದ ಚೆಕ್ಕನ್ನು ಹಿಂದಿರುಗಿಸುವ ಪ್ರಯತ್ನ ಮಾಡಲಣಿಯಾದರು, "ಮಹಾಸ್ವಾಮಿಗಳು ಕ್ಷಮಿಸಬೇಕು...." ಎಂದೆಲ್ಲಾ ತಮ್ಮ ಅಹವಾಲನ್ನು ಹೇಳಲುದ್ಯುಕ್ತವಾದರು. ದಿವಾನರು ಡಾಕ್ಟರ ಮಾತನ್ನು ತಡೆದು, ನಸುನಕ್ಕು "ಹಾಗಲ್ಲ ಡಾಕ್ಟರೇ, ನಾನು ಬೇಕೆಂತಲೇ ನಿಮಗೆ ಫೀಜು ಕೊಡುವ ಸಲುವಾಗಿ ಚೆಕ್ಕನ್ನು ಕಳುಹಿಸಿದ್ದು. ನಿಮಗೆಲ್ಲಾ ತುಂಬಾ ಕಡಿಮೆ ಸಂಬಳವೆನ್ನುವುದು ನನಗೆ ಗೊತ್ತಿದೆ. ನಡೆಸಿದ ಚಿಕಿತ್ಸೆಗೆ ನಮ್ಮ ಹಾಗೆ ಸ್ಥಿತಿವಂತರು ಡಾಕ್ಟರಿಗೆ ಫೀಜು ಕೊಡುವುದು ಆಕ್ಷೇಪಣೀಯವಲ್ಲ; ಆದರೆ ನೀವು ಬಡಬಗ್ಗರನ್ನು ಚಿಕಿತ್ಸೆ ಮಾಡಿದಾಗ ಅವರಿಂದ ಯಾವುದೇ ತರಹೆಯ ಪ್ರತಿಫಲ / ಫೀಜನ್ನು ನಿರೀಕ್ಷಿಸುವುದು ಸರಿಯಲ್ಲ" ಎಂದು ಸಾಂತ್ವನ ಹೇಳಿದರಂತೆ* ಈಗ ಅರ್ಧ-ಮುಕ್ಕಾಲು ಶತಮಾನದ ಹಿಂದೆ ಪರಿಸ್ಥಿತಿ ಹೀಗೇ ಇತ್ತು. ಎಂ.ಬಿ.ಬಿ.ಎಸ್., ಪದವೀಧರ ವೈದ್ಯರನ್ನು ಅಸಿಸ್ಟೆಂಟ್ ಸರ್ಜನ್ ಎಂಬ ಗೆಜೆಟೆಡ್ (Gazetted) ಹುದ್ದೆಗೆ (ಮುನ್ಸೀಫ್ ಮ್ಯಾಜಿಸ್ಟ್ರೇಟ್, ಅಸಿಸ್ಟೆಂಟ್ ಕಮೀಷನರ್, ಡಿ.ವೈ.ಎಸ್ಪಿ, ಮುಂತಾದವಕ್ಕೆ ಸರಿಸಮಾನವಾದುದು!) ನೇಮಿಸಿ ತಿಂಗಳಿಗೆ ಕೇವಲ ಒಂದು ನೂರು ರೂಪಾಯಿ ವೇತನ ನೀಡುತ್ತಿದ್ದರು. ಬಹುಶಃ ಸರ್ಕಾರೀ ವೈದ್ಯರಿಗೆ ಈ ತರಹದ ಖಾಸಗಿ ಪ್ರಾಕ್ಟೀಸ್ ಮಾಡುವ ಅವಕಾಶವಿರುತ್ತದೆಂಬುದರಿಂದಲೋ ಏನೋ ಇತರ ಎಲ್ಲಾ ಗೆಜೆಟೆಡ್ ಹುದ್ದೆಯಲ್ಲಿರುವವರಿಗಿಂತ ಕಡಿಮೆ ವೇತನ ನಿಗದಿ ಮಾಡಿದ್ದರೆನಿಸುತ್ತದೆ. ತಮ್ಮ ಜೀವನ್ಮರಣ ಸ್ಥಿತಿಯಲ್ಲಿ ವೈದ್ಯರ ಆರೈಕೆ ಉಪಚಾರಗಳಿಂದ ಸಂತೃಪ್ತರಾದ ರೋಗಿಗಳು ಕೇವಲ ಫೀಜು ಕೊಡುವುದು ಮಾತ್ರವಲ್ಲದೆ ಬೆಣ್ಣೆ, ತುಪ್ಪ, ಹೂವು, ಹಣ್ಣು-ತರಕಾರಿ, ದವಸ-ಧಾನ್ಯಗಳನ್ನೂ ಅವರ ಪ್ರೀತಿ ಗೌರವಗಳ ದ್ಯೋತಕವಾಗಿ ತಮ್ಮ ವೈದ್ಯರ ಮನೆಗಳಿಗೆ ಒದಗಿಸುತ್ತಿದ್ದುದು ಅಪರೂಪವೇನಲ್ಲ. ಶಿಕಾರಿಪುರದಲ್ಲಿ ನಾನು ಸರ್ಕಾರಿ ಸೇವೆ ಆರಂಭಿಸಿದಾಗಿನಿಂದಲೂ ಅಂತಿಮವಾಗಿ ನಿವೃತ್ತನಾಗುವವರೆಗೂ ಅಂತಹ ಪ್ರೀತಿಯ ಇನಾಂಗಳನ್ನು ಧಾರಾಳವಾಗಿ ಪಡೆಯುತ್ತಿದ್ದುದನ್ನು ಅಲ್ಲಗಳೆಯಲಾರೆ.

## 'ಪ್ರಾಕ್ಟೀಸ್'ನ ಗೊಂದಲ

ಈ ರೀತಿಯ ಒಸ್ನೆಲೆಯ ಪರಿಸ್ಥಿತಿಯಲ್ಲೇ ನಾನು ಸರ್ಕಾರಿ ವೈದ್ಯನಾಗಿ ಕಾರ್ಯಾರಂಭ ಮಾಡಿದ್ದು. ಜೊತೆಗೆ ನಮ್ಮ ಕುಟುಂಬದವರಿಂದ ಒಂದು ರೀತಿಯ ವೈದ್ಯಕೀಯ ನೆರವು ನೀಡುವ ಪರಿಪಾಟವಿದ್ದರೂ ಯಾವುದೇ ಬಗೆಯ ಪ್ರತಿಫಲ ಸ್ವೀಕರಿಸದ ಉದಾತ್ತ ಸಂಪ್ರದಾಯ ಬಾಲ್ಯದಿಂದಲೂ ನನ್ನ ಮೇಲೆ ಪರಿಣಾಮ ಬೀರಿತ್ತು. ಅಂತಹ ಒಂದು ಆದರ್ಶ ಜೀವನ ನಡೆಸಬೇಕೆಂಬ ಅಭಿಲಾಷೆ ನನಗೂ ಇತ್ತು. ಇದರಿಂದಾಗಿ ಶಿಕಾರಿಪುರದಲ್ಲಿ ಕೆಲವು ರೋಗಿಗಳಿಗೆ ಇಂಜಕ್ಷನ್ ನೀಡಿದಾಗ ಅವರು ಫೀಜು ಕೊಡಲು ಮುಂದಾದರೂ ಸ್ವೀಕರಿಸಲು ನಿರಾಕರಿಸ

---

* ಉಲ್ಲೇಖ: 'ಭಾಗ್ಯ ಶಿಲ್ಪಿ' ಲೇ: ಎಸ್. ವಿ. ಪರಮೇಶ್ವರ ಭಟ್ಟ (೧೯೬೭-೬೮ನೇ ವರ್ಷದ ಪ್ರೌಢಶಾಲಾ ಹತ್ತನೇ ತರಗತಿಯ ಕನ್ನಡ ಉಪ-ಪಠ್ಯಪುಸ್ತಕ, ಸೇವಾ ಸದನ ಪ್ರೆಸ್, ಚಿದಂಬರಾಶ್ರಮ, ಗುಬ್ಬಿ.

ಲಾರಂಭಿಸಿದೆ. ಹಲವಾರು ರೋಗಿಗಳಲ್ಲಿ ನನ್ನ ಈ ಪ್ರವೃತ್ತಿ ಅಚ್ಚರಿಯುಂಟು ಮಾಡಿತ್ತಂತೆ. ಆಸ್ಪತ್ರೆಯ ಹಿರಿಯ-ಕಿರಿಯ ಸಿಬ್ಬಂದಿ ವರ್ಗದವರು ಹುಬ್ಬೇರಿಸುವಂತೆಯೂ ಆಯಿತು.

ಆದರೆ ನನ್ನ ಈ ಆದರ್ಶ ಬಹಳ ಕಾಲ ಉಳಿಯಲಿಲ್ಲ. ಆಸ್ಪತ್ರೆಗೆ ಒಂದು ವರ್ಷದ ಅವಧಿಗಾಗಿ ಸರಬರಾಜು ಮಾಡುತ್ತಿದ್ದ ಇಂಜಕ್ಷನ್, ಮಾತ್ರೆ ಮುಂತಾದವು ಕೇವಲ ೨-೩ ತಿಂಗಳಿಗೂ ಸಾಕಾಗುತ್ತಿರಲಿಲ್ಲ. ಔಷಧಿಗಳನ್ನು ಕೊಂಡು ತರುವ ಸಾಮರ್ಥ್ಯವಿದ್ದವರಿಗೆ ಚೀಟಿ ಬರೆದು ಕೊಟ್ಟರೆ ದೂರದ ಪೇಟೆಯ ಅಂಗಡಿಗಳಿಗೆ ಹೋಗಿ, ಮತ್ತೆ ವಾಪಸ್ಸು ಬರಲು ಬೇಸರ ಪಟ್ಟುಕೊಳ್ಳುತ್ತಿದ್ದರು; ಕೆಲವರು ಪೇಟೆಯಲ್ಲೇ ಯಾರಿಂದಲಾದರೂ ಇಂಜಕ್ಷನ್ ಮಾಡಿಸಿ ಕೊಳ್ಳುತ್ತಿದ್ದರು; ಈ ರೀತಿ ಕೇವಲ ಚೀಟಿ ಬರೆಸಿಕೊಳ್ಳುವುದಕ್ಕಾಗಿ ಸರ್ಕಾರಿ ಆಸ್ಪತ್ರೆಗೆ ಯಾಕೆ ಬರಬೇಕು ಎಂಬುದಾಗಿ ಗೊಣಗಾಟ ಮಾಡುವವರೂ ಇರುತ್ತಿದ್ದರು. ಮತ್ತೆ ಕೆಲವರು ನಾನೇ ಏಕೆ ಅವಶ್ಯಕವಾದ ಇಂಜಕ್ಷನ್‌ಗಳನ್ನು ತರಿಸಿ ಇಟ್ಟುಕೊಂಡು, ಅವರಿಗೆ ಕೊಟ್ಟು ತಗಲುವ ವೆಚ್ಚವನ್ನು ತೆಗೆದುಕೊಳ್ಳಬಾರದೆಂದು ವಾದಿಸುತ್ತಿದ್ದರು. ಶಿಕಾರಿಪುರದ ಹತ್ತಿರ ಮ್ಯಾಂಗನೀಸ್ ಅದಿರಿನ ಗಣಿಯೊಂದಿತ್ತು; ಅದರಲ್ಲಿ ನೂರಾರು ಜನ ಕೂಲಿಕಾರರಿರುತ್ತಿದ್ದರು. ಅದರ ಆಡಳಿತ ಮಂಡಳಿಯವರು ಕೂಲಿಗಳಿಗೆ ಹುಷಾರು ತಪ್ಪಿದಾಗ ನನ್ನ ಹತ್ತಿರ ಚಿಕಿತ್ಸೆಗಾಗಿ ಕಳುಹಿಸುತ್ತಿದ್ದರು; ತಿಂಗಳು ಮುಗಿದ ನಂತರ ಅವರಿಗೆ ನೀಡಿದ ಇಂಜಕ್ಷನ್ ಮಾತ್ರೆ ಮುಂತಾದವುಗಳ ಖರ್ಚನ್ನು ತುಂಬಿ ಕೊಡುತ್ತಿದ್ದರು. ಅದೇ ರೀತಿಯಲ್ಲಿ ನನ್ನ ಪರಿಚಿತರಾದ ಹಳ್ಳಿಗಾಡಿನ ಕೆಲವು ಜಮೀನುದಾರರೂ ಸಹ ತಮ್ಮ ಕೆಲಸಗಾರರನ್ನು ಕಳುಹಿಸಿದಾಗ ಅವರ ಚಿಕಿತ್ಸೆಗಾಗಿ ಇಂಜಕ್ಷನ್ ಮುಂತಾದವನ್ನು ಕೊಡಬೇಕೆಂತಲೂ ಮುಂದಿನ ಸಾರಿ ಪೇಟೆಗೆ ಬಂದಾಗ ಅವುಗಳ ಖರ್ಚನ್ನು ಕೊಡುವುದಾಗಿ ಚೀಟಿ ಬರೆದು ಕಳುಹಿಸುತ್ತಿದ್ದುದೂ ಉಂಟು. ಈ ಸಮಸ್ಯೆ ಕೆಲಕಾಲ ನನ್ನನ್ನು ಆಲೋಚನೆಗೀಡು ಮಾಡಿತು. ಹೊಸದಾಗಿ ಪ್ರಾರಂಭವಾಗಿರುವ ಆಸ್ಪತ್ರೆಗೆ ಜನರನ್ನು ಆಕರ್ಷಿಸುವ ಉದ್ದೇಶ ಮತ್ತು ಅದರ ಉಪಯುಕ್ತತೆಯನ್ನು ಜನಸಾಮಾನ್ಯರಿಗೆ ವಿಸ್ತರಿಸುವ ಸಲುವಾಗಿ ಅಂತಹ ಏರ್ಪಾಡು ಮಾಡುವುದು ಸರಿಯೆನಿಸಿತು. ಶಿವಮೊಗ್ಗದಿಂದ ಆಗಿಂದಾಗ್ಗೆ ಕೆಲವು ಇಂಜಕ್ಷನ್, ಮಾತ್ರೆಗಳನ್ನು ಖರೀದಿಸಿಕೊಂಡು ಹಾಗೆಯೇ ಮಾಡಲಾರಂಭಿಸಿದೆ. ಈ ಏರ್ಪಾಡು ಬಹಳಷ್ಟು ಜನರನ್ನು ಆಸ್ಪತ್ರೆಗೆ ಆಕರ್ಷಿಸುವಲ್ಲಿ ಸಹಕರಿಸಿತ್ತು. ನಾನು ನೀಡುತ್ತಿದ್ದ ಮದ್ದುಗಳಿಗೆ ತಗುಲುವ ವೆಚ್ಚಕ್ಕಿಂತ ಸ್ವಲ್ಪ ಹೆಚ್ಚುವರಿ ಮೊಬಲಗನ್ನು ತೆಗೆದುಕೊಳ್ಳುವುದು ಅನಿವಾರ್ಯವಾಗುತ್ತಿತ್ತು. ಹೀಗೆ ಇಂಜಕ್ಷನ್ ತೆಗೆದುಕೊಂಡು, ಮುಂದಿನ ಸಾರಿ ಬಂದಾಗ ಅದರ ಮೊಬಲಗನ್ನು ಕೊಡುತ್ತೇನೆಂದು ಹೇಳಿ ಹೋದ ಎಷ್ಟೋ ಜನ ವಾಪಸ್ಸು ಬರುತ್ತಿರಲಿಲ್ಲ!

## ಡಿ.ಎಂ.ಓ. ಅವರೊಡನೆ ಮುಖಾಮುಖಿ

ಈ ನಡುವೆ ಮೇಲಾಧಿಕಾರಿಗಳಾದ ಶಿವಮೊಗ್ಗದ ಡಿ.ಎಂ.ಓ. ಅವರಿಗೆ ನನ್ನ ಮೇಲೆ ಸ್ವಲ್ಪ ಅಸಮಾಧಾನ ಉಂಟಾಗಿರಬಹುದಾದ ಅನುಮಾನ ಉಂಟಾಯಿತು. ಶಿಕಾರಿಪುರಕ್ಕೆ ಕೆಲಸಕ್ಕೆ ಹಾಜರಾಗುವ ಮೊದಲು ಅವರನ್ನು ಭೇಟಿ ಮಾಡಲು ಸಾಧ್ಯವಾಗದಿದ್ದುದು ನನ್ನ ಕಡೆಯಿಂದಾದ ಒಂದು ರೀತಿಯ ಅಪರಾಧವಾಗಿತ್ತೆನಿಸಿತು; ನಾನು ಕಾರ್ಯಾರಂಭ ಮಾಡಿದ ನಂತರ ನಮ್ಮ ಆಸ್ಪತ್ರೆಯಿಂದ ಜರುಗುತ್ತಿದ್ದ ಪತ್ರವ್ಯವಹಾರಗಳ ಧಾಟಿ ಅವರಿಗೆ ಅಷ್ಟಾಗಿ ಹಿಡಿಸುತ್ತಿರಲಿಲ್ಲವೆಂಬ ವದಂತಿಗಳೂ ಇದ್ದು, ಇಂತಹ ತಪ್ಪು ಕಲ್ಪನೆಗಳನ್ನು ಪರಿಹರಿಸಿಕೊಳ್ಳಲು ಅವರನ್ನು ಖುದ್ದಾಗಿ ಭೇಟಿ ಮಾಡುವ ನಿರ್ಧಾರ ಮಾಡಿದೆ.

ಒಂದು ದಿನ ಶಿವಮೊಗ್ಗಕ್ಕೆ ತೆರಳಿ ಮೆಗ್ಗಾನ್ ಆಸ್ಪತ್ರೆಯ ಕಚೇರಿಯಲ್ಲಿ ಅವರನ್ನು ಭೇಟಿಯಾದೆ. ಅವರು ಮೊದಲು ನನ್ನನ್ನು ಸ್ವಾಗತಿಸಿದ ರೀತಿಯಿಂದ, ನನ್ನ ಮೇಲೆ ಅಸಮಾಧಾನ ವಿರುವುದರ ಛಾಯೆಯನ್ನು ಗುರುತಿಸಬಹುದಾಗಿತ್ತು. ಶಿಕಾರಿಪುರಕ್ಕೆ ಹೋಗುವ ಮೊದಲು ಅವರನ್ನು ಭೇಟಿ ಮಾಡಲಾಗದಿದ್ದುದರ ಕಾರಣವನ್ನು ತಿಳಿಸಿ ವಿಷಾದ ವ್ಯಕ್ತಪಡಿಸಿದೆ. ನಮ್ಮ ಕಚೇರಿಯಿಂದ ಬರುತ್ತಿರುವ ಪತ್ರಗಳು ಸ್ವಂತ ಮನೆಯವರಿಗೆ ಬರೆಯುವ ಕಾಗದಗಳಂತಿರುತ್ತವೆ ಎಂಬ ಆಕ್ಷೇಪ ವ್ಯಕ್ತಪಡಿಸಿದರು. ಮೆಡಿಕಲ್ ಕಾಲೇಜಿನಿಂದ ನೇರವಾಗಿ ವೈದ್ಯಾಧಿಕಾರಿಯಾಗಿ ಶಿಕಾರಿಪುರದಲ್ಲಿ ಹೊಸದಾಗಿ ನೇಮಕವಾಗಿರುವ ನನ್ನ ಬವಣೆಗಳ ಬಗೆಗೆ ವಿವರಣೆ ನೀಡತೊಡಗಿದೆ. ಅಲ್ಲಿಯ ಆಸ್ಪತ್ರೆಯ ಕಟ್ಟಡ ಮತ್ತು ಸಾಮಾನು ಸರಂಜಾಮುಗಳ ದೃಷ್ಟಿಯಿಂದ ಪರಿಪೂರ್ಣವಾಗಿರುವಂತಿದ್ದರೂ ಮೂಲಭೂತವಾಗಿ ಗುಮಾಸ್ತರನ್ನು ನೇಮಿಸದಿರುವುದು, ಆಡಳಿತದ ವಿಷಯಗಳಲ್ಲಿ ನನಗೂ ಸಹ ಅನುಭವವಿಲ್ಲದಿರುವುದು ಮುಂತಾದ ನ್ಯೂನ್ಯತೆಗಳನ್ನು ಅವರ ಗಮನಕ್ಕೆ ತಂದೆ.

ಡಿ.ಎಂ.ಓ. ಸಾಹೇಬರಿಗೆ ಅದೇ ಮೊದಲ ಬಾರಿ ಎಂಬಂತೆ ಶಿಕಾರಿಪುರದ ಆಸ್ಪತ್ರೆಯ ನೈಜ ಚಿತ್ರಣ ಆದಂತಿರಬೇಕು. ಮುಂದೆ ಶಾಂತಚಿತ್ತರಾಗಿ ಮಾತಾಡಲಾರಂಭಿಸಿದರು. ಮುಂದಿನ ಕೆಲವೇ ದಿನಗಳಲ್ಲಿ ಆಸ್ಪತ್ರೆಯ ವಾರ್ಷಿಕ ಪರಿಶೀಲನೆಗಾಗಿ (Annual Inspection) ಅಲ್ಲಿಗೆ ಬರುವುದಾಗಿಯೂ ಆ ಸಮಯದಲ್ಲಿ ಅಲ್ಲಿಯ ಸ್ಥಿತಿಗತಿಗಳನ್ನು ಅಧ್ಯಯನ ಮಾಡಿ ಸೂಕ್ತ ಮಾರ್ಗದರ್ಶನ ಮಾಡುವ ಭರವಸೆ ಇತ್ತರು. ಅವರು ಮುಂದುವರಿದು, "ಹಳ್ಳಿಗಾಡಿನ ಆಸ್ಪತ್ರೆಗಳಿಗೆ ನಿಮ್ಮಂತಹ ಯುವ ವೈದ್ಯರು ಬರುವುದಕ್ಕೆ ಮನಸ್ಸು ಮಾಡುವುದೇ ಅಪರೂಪ; ಜೊತೆಗೆ ವಿಷಯಗಳನ್ನು ಕಲಿಯುವ ಮನಸ್ಸೂ ನಿಮಗಿರುವಂತಿದೆ; ಇನ್ನು ಮುಂದೆ ಯಾವುದೇ ಸಮಸ್ಯೆಗಳು ಎದುರಾದರೆ ವೈಯಕ್ತಿಕವಾಗಿ ನನಗೇ ಪತ್ರ ಬರೆಯಿರಿ. ಅವುಗಳನ್ನು ನಿಭಾಯಿಸಲು ಮಾರ್ಗದರ್ಶನ ಮಾಡಲು ಪ್ರಯತ್ನಿಸುವೆ". ಎಂದು ಸಾಂತ್ವನದ ಧಾಟಿಯಲ್ಲಿ ಮಾತಾಡಿದರು. ಬಿಸಿ ವಾತಾವರಣದಲ್ಲಿ ಆರಂಭವಾದ ಭೇಟಿ ಸೌಹಾರ್ದಯುತವಾಗಿ ಕೊನೆಗೊಂಡಿದ್ದು ನನಗೂ ಹರ್ಷ ಉಂಟುಮಾಡಿತು.

ಶಿಕಾರಿಪುರಕ್ಕೆ ಹಿಂದಿರುಗಿದವನೇ ಆಡಳಿತದ ವಿಷಯಗಳ ಬಗೆಗೆ ಇನ್ನೂ ಹೆಚ್ಚಿನ ಆಸಕ್ತಿ ವಹಿಸತೊಡಗಿದೆ. ಬೆಳಗಿನ ಹೊತ್ತು ಒಂದರ್ಧ ಗಂಟೆ ಮೊದಲೇ ಆಸ್ಪತ್ರೆಗೆ ಹೋಗಲು ಆರಂಭಿಸಿದೆ. ಹಿಂದಿನ ದಿನದ ಟಪಾಲುಗಳನ್ನು ಪರಾಮರ್ಶಿಸಿ ನನ್ನದೇ ಟಿಪ್ಪಣಿ ಮತ್ತು ಉತ್ತರಗಳನ್ನು ಬರೆದಿಡಲಾರಂಭಿಸಿದೆ. ಈ ನಡುವೆ ಕಾಂಪೌಂಡರು ಅಲ್ಲಿಯ ಸಿಬ್ಬಂದಿ ವರ್ಗದವರೊಡನೆ ವರ್ತಿಸುತ್ತಿದ್ದ ರೀತಿನೀತಿಗಳ ಬಗೆಗೆ ತಮಗಾಗುತ್ತಿದ್ದ ತೊಂದರೆಗಳ ಬಗೆಗೆ ಕೆಲವರು ದೂರಿತ್ತರು. ಆ ದಿಸೆಯಲ್ಲಿ ನನಗಿರುತ್ತಿದ್ದ ಅನುಮಾನಗಳಿಗೆ ಈಗ ಪುಷ್ಟಿ ದೊರೆತಂತೆ ಆಯಿತು. ಒಂದು ಸಾರಿ ಒಬ್ಬರಿಗೆ ಯಾವುದೋ ಸರ್ಕಾರಿ ನಿಯಮವನ್ನು ಉಲ್ಲೇಖಿಸಿ ರಜೆ ಮಂಜೂರು ಮಾಡಿಸುವುದು, ಅಂತಹ ಇನ್ನೊಂದು ಸಂದರ್ಭದಲ್ಲಿ ಇನ್ನೊಂದು ಕಾನೂನನ್ನು ವಿವರಿಸಿ ಅವರಿಗೆ ರಜೆ ಮಂಜೂರು ಮಾಡಲಾಗುವುದಿಲ್ಲವೆಂದು ನನ್ನನ್ನು ಒಪ್ಪಿಸಲು ಪ್ರಯತ್ನಿಸುತ್ತಿದ್ದರು; ಹೊಸದಾಗಿ ಬಂದಿರುವ ನನ್ನ ಅಜ್ಞಾನದ ದುರುಪಯೋಗ ನಡೆಯುತ್ತಿದೆ ಯೆಂಬುದರ ಅರಿವು ಉಂಟಾದಂತಾಯಿತು. ಆ ಸಮಯದಲ್ಲೇ ಜರುಗಿದ ಪದವೀದಾನ ಸಮಾರಂಭಕ್ಕೆ (Convocation) ಮೈಸೂರಿಗೆ ಹೋಗಬೇಕಾಯಿತು. ಕಚೇರಿಗಳಲ್ಲಿ ಆಡಳಿತ ನಿರ್ವಹಣೆಗೆ ಮಾರ್ಗದರ್ಶನ ನೀಡಲು ಸರ್ಕಾರದವರು ಪ್ರಕಟಿಸಿದ್ದ ಮೈಸೂರು ಸಿವಿಲ್

ಸರ್ವಿಸ್ ರೂಲ್ಸ್ (M.C.S.R) ಪುಸ್ತಕವನ್ನು ಕೊಂಡುತಂದೆ. ಮುಂದಿನ ದಿನಗಳಲ್ಲಿ ಆಡಳಿತ ವಿಷಯದಲ್ಲಿ ಅನುಮಾನ ಉದ್ಭವಿಸಿದಾಗಲೆಲ್ಲಾ ಅದರಿಂದ ಮಾರ್ಗದರ್ಶನ ಪಡೆಯುತ್ತಿದ್ದೆ; ಆಡಳಿತ ನಿರ್ವಹಣೆಯಲ್ಲಿ ಬೇರೆಯವರ ಮೇಲೆ ಅವಲಂಬಿಸುವುದು ಕಡಿಮೆಯಾಯಿತು.

## ಕೆ.ಎಫ್.ಡಿ.- ಕ್ಯಾಸನೂರು ಕಾಡಿನ ಕಾಯಿಲೆ

ಶಿಕಾರಿಪುರಕ್ಕೆ ೧೯೫೭ರ ಅಂತಿಮ ದಿನಗಳಲ್ಲಿ ಬಂದೆನಷ್ಟೆ, ಆ ಸಮಯದಲ್ಲೇ ಆ ತನಕ ಪ್ರಚಲಿತವಿರದಿದ್ದ ಅಪರೂಪದ ಭೀಕರ ವ್ಯಾಧಿಯೊಂದು ಸಾಗರ-ಸೊರಬದ ಪ್ರದೇಶಗಳಲ್ಲಿ ಹಠಾತ್ತನೆ ತಲೆದೋರಿತು. ಅದೊಂದು ಅತ್ಯಂತ ತ್ವರಿತಗತಿಯಲ್ಲಿ ಹರಡುವ ಸಾಂಕ್ರಾಮಿಕ ಕಾಯಿಲೆಯಾಗಿದ್ದು ಅಕ್ಕಪಕ್ಕದ ತಾಲ್ಲೂಕುಗಳಿಗೂ ಹರಡಬಹುದಾದ ಆತಂಕ ದಟ್ಟವಾಗ ತೊಡಗಿತ್ತು. ಈ ರೋಗದ ಕಾರಣ, ರೂಪುರೇಷೆಗಳನ್ನು ಪತ್ತೇಹಚ್ಚಿ ತ್ವರಿತವಾಗಿ ಹತೋಟಿಗೆ ತರಲು ಸರ್ಕಾರ ಹಲವಾರು ಕ್ರಮಗಳನ್ನು ಜಾರಿಗೆ ತಂದಿತು. ಅಂತಹ ಚಟುವಟಿಕೆಗಳ ಪರಸ್ಪರ ಹೊಂದಾಣಿಕೆ ಮತ್ತು ನಿರ್ದೇಶನದ ಸಲುವಾಗಿ ಸಾಗರದಲ್ಲಿ ಒಂದು ವಿಶೇಷ ಘಟಕವನ್ನು ಆರಂಭಿಸಿತು. ವೈದ್ಯಕೀಯ ಇಲಾಖೆಯ ಉನ್ನತಮಟ್ಟದ ಅಧಿಕಾರಿ ಡಾ॥ ಎಸ್. ಆರ್. ಬಾಂಭೋರೆ ಎಂಬವರನ್ನು ನಿರ್ದೇಶಕರನ್ನಾಗಿ ನೇಮಿಸಿತು. ಕಾಯಿಲೆಗೆ ಕಾರಣಗಳು ಆ ತನಕ ನಿಗೂಢವಾಗಿಯೇ ಇದ್ದು ಅದರ ವಿವಿಧ ಮಗ್ಗುಲುಗಳನ್ನು ಪತ್ತೆ ಮಾಡಲು ಆ ವಲಯದ ವೈದ್ಯರೆಲ್ಲರೂ ಅದರಲ್ಲಿ ತೊಡಗಿಸಿಕೊಳ್ಳಬೇಕಾಯಿತು. ಆ ಸಲುವಾಗಿ ಸಾಗರದಲ್ಲಿ ಆಗಿಂದಾಗ್ಗೆ ಆ ವಲಯದ ವೈದ್ಯರ ಸಭೆಗಳನ್ನು ಏರ್ಪಡಿಸಿ ಅವರ ಅನುಭವ ಹಾಗೂ ಅನಿಸಿಕೆಗಳ ಬಗೆಗೆ ವಿಚಾರ ವಿನಿಮಯಗಳಾಗುತ್ತಿದ್ದವು. ಸೊರಬದ ಪಕ್ಕದ ತಾಲ್ಲೂಕು ಶಿಕಾರಿಪುರಕ್ಕೂ ಕಾಯಿಲೆ ಹರಡುವ ಸಾಧ್ಯತೆಗಳಿದ್ದು ಅಂತಹ ಸಭೆಗಳಲ್ಲಿ ಹಾಜರಿರಲು ನನಗೂ ಆಮಂತ್ರಣಗಳಿರುತ್ತಿದ್ದವು. ಒಂದು ಸಾರಿ ಸಾಗರದಲ್ಲಿ ಅಂತಹ ಸಭೆಯೊಂದರಲ್ಲಿ ಭಾಗವಹಿಸಿ ಅಂದೇ ಸಾಯಂಕಾಲ ಹಿಂದಿರುಗಿದೆ. ಹಿಂದಿನ ದಿನ ವಿಪರೀತ ಜ್ವರದಿಂದ ನರಳುತ್ತಿದ್ದ ಮ್ಯಾಂಗನೀಸ್ ಗಣಿ ಕಾರ್ಮಿಕ ರಿಬ್ಬರನ್ನು ಆಸ್ಪತ್ರೆಗೆ ಸೇರಿಸಿದ್ದೆ. ಮಲೇರಿಯಾ ಜ್ವರದಿಂದ ನರಳುತ್ತಿದ್ದರೆಂಬ ಸಂಶಯವಿದ್ದು ಚಿಕಿತ್ಸೆಯನ್ನು ಆರಂಭಿಸಿದ್ದೆ. ಅಂದು ಸಾಗರದಿಂದ ವಾಪಾಸಾಗುವಷ್ಟರಲ್ಲೇ ಅವರಿಬ್ಬರೂ ಮರಣ ಹೊಂದಿದ್ದರು. ಸಾಗರ-ಸೊರಬ ವಲಯದಲ್ಲಿ ಹರಡುತ್ತಿದ್ದ ವ್ಯಾಧಿಗೆ ಅದಾಗಲೇ ಕ್ಯಾಸನೂರು ಕಾಡಿನ ಕಾಯಿಲೆ (ಕೆ.ಎಫ್.ಡಿ. Kysanoor Forest Disease) ಎಂದು ನಾಮಕರಣವಾಗಿದ್ದು, ಕೆಲವು ಗುಣಲಕ್ಷಣಗಳಲ್ಲಿ ಮಲೇರಿಯಾವನ್ನು ಹೋಲುತ್ತಿತ್ತು. ಅದರ ಬಗೆಗೆ ಅಂದಿನ ಸಭೆಯಲ್ಲಿ ವಿವರವಾದ ಚರ್ಚೆಗಳಾಗಿದ್ದವು. ಅವುಗಳ ಹಿನ್ನೆಲೆಯಲ್ಲಿ ಕೇವಲ ಮೂರ್‍ನಾಲ್ಕು ದಿನಗಳ ಜ್ವರದಿಂದ ಒಂದೇ ಸಾರಿ ಎರಡು ಜನ ಸಾಯುವಂತಾಗಿದ್ದು, ಅವರಿಗೂ ಕೆ.ಎಫ್.ಡಿ ತಗುಲಿದ್ದಿರಬಹುದಾದ ಅನುಮಾನಗಳು ನನಗುಂಟಾಗ ತೊಡಗಿದವು. ಗಣಿಯ ವ್ಯವಸ್ಥಾಪಕರನ್ನು ಕೂಡಲೇ ಕರೆಸಿ ಕೆಲವು ವಿಷಯಗಳ ಬಗೆಗೆ ವಿಚಾರಿಸಿದೆ. ಗಣಿಯ ಕೂಲಿಗಾರರು ಕಾಡಿನ ನಡುವೆ, ಗಣಿಗಳ ಪಕ್ಕದಲ್ಲೇ ಗುಡಿಸಲುಗಳಲ್ಲಿ ವಾಸಿಸುತ್ತಿರುವುದು ತಿಳಿಯಿತು. ಹಾಗೂ ಅವರ ವಸತಿಗಳ ಸನಿಹದಲ್ಲೇ ಕೆಲವು ದಿನಗಳ ಹಿಂದೆ ಎರಡು ಮಂಗಗಳು ಸತ್ತು ಬಿದ್ದಿರುವುದು ಸಹಾ ಅವರ ಗಮನಕ್ಕೆ ಬಂದಿತ್ತಂತೆ! ಅದರಿಂದ ಅವರಿಬ್ಬರ ಸಾವಿಗೆ ಕೆ.ಎಫ್.ಡಿ.ಯೇ ಕಾರಣವಾಗಿರ ಬಹುದೆಂಬ ಅನುಮಾನ ಬಲವಾಯಿತು. ಅವರ ಶವಗಳನ್ನು ತತ್‌ಕ್ಷಣ ವಾರಸುದಾರರಿಗೆ ಹಸ್ತಾಂತರಿಸದೆ, ಆಸ್ಪತ್ರೆಯ ಶವಾಗಾರದಲ್ಲೇ ಇರಿಸುವ ಏರ್ಪಾಡು

ಮಾಡಿದೆ ಹಾಗೂ ಅಂದು ರಾತ್ರಿಯೇ ಸಾಗರದ ಕೆ.ಎಫ್.ಡಿ. ಘಟಕದವರಿಗೆ ಫೋನ್ ಮಾಡಿ ವಿಷಯವನ್ನು ವರದಿ ಮಾಡಿದೆ. ಡಾ|| ಬಾಂಭೋರೆಯವರು ಮರುದಿನ ಬೆಳಿಗ್ಗಿನ ನಸುಕಿನಲ್ಲೇ ಶಿಕಾರಿಪುರಕ್ಕೆ ಬಂದು ತನಿಖೆ ನಡೆಸುವುದಾಗಿ ಹೇಳಿದರು. ಹಾಗೂ ಶವಪರೀಕ್ಷೆಗಳನ್ನು ಜರುಗಿಸ ಬೇಕಾಗುವುದರಿಂದ ಅವುಗಳನ್ನು ಆ ತನಕ ವಾರಸುದಾರರಿಗೆ ಕೊಡಬಾರದೆಂದೂ ತಿಳಿಸಿದರು.

ಡಾ|| ಬಾಂಭೋರೆಯವರು ಅವರ ಸಿಬ್ಬಂದಿಯೊಡನೆ ಮರುದಿನ ಬಂದರು. ಮಂಗಗಳು ಸತ್ತು ಬಿದ್ದಿದ್ದ ಸ್ಥಳಕ್ಕೂ ಭೇಟಿ ನೀಡಿ ಪರಿಶೀಲಿಸಿದರು. ಸತ್ತವರಿಬ್ಬರ ಶವ ಪರೀಕ್ಷೆಗಳನ್ನು ಮಾಡಿ, ಕೆಲವು ಅಂಗಾಂಗಗಳ ತುಣುಕುಗಳು, ರಕ್ತ ಮೂತ್ರಗಳ ಮಾದರಿಗಳನ್ನು ಮುಂದುವರಿದ ಪರೀಕ್ಷೆಗಳಿಗಾಗಿ ಕೊಂಡೊಯ್ದರು. ಕೆಲವು ದಿನಗಳ ನಂತರ ಫಲಿತಾಂಶ ಲಭ್ಯವಾದರೂ ಕೆ.ಎಫ್.ಡಿ.ಯ ಬಗೆಗೆ ಯಾವುದೇ ನಿರ್ಣಾಯಕ ಕುರುಹುಗಳಿರಲಿಲ್ಲವಂತೆ.

ಆ ಸಮಯದಿಂದಲೇ ಕೆ.ಎಫ್.ಡಿ.ಯ ಬಗೆಗೆ ನನ್ನಲ್ಲಿ ಅತೀವ ಆಸಕ್ತಿಯುಂಟಾಯಿತು. ಶಿಕಾರಿಪುರದಲ್ಲಿರುವವರೆಗೂ ಅದರ ಬಗೆಗೆ ಜರುಗುವ ಸಭೆಗಳಲ್ಲಿ ಭಾಗವಹಿಸುತ್ತಿದ್ದೆ. ಅದರ ಸಂಬಂಧವಾಗಿ ಪ್ರಕಟವಾಗುತ್ತಿದ್ದ ವೈಜ್ಞಾನಿಕ (ವೈದ್ಯಕೀಯ) ಹಾಗೂ ವಾರ್ತಾ ಪತ್ರಿಕೆಗಳ ಲೇಖನಗಳನ್ನು ಸಂಗ್ರಹಿಸಿಡತೊಡಗಿದೆ; ಅವು ಈಗಲೂ ನನ್ನಲ್ಲಿವೆ. ಮುಂದೆ ಸಾಹಿತ್ಯ ಕ್ಷೇತ್ರದಲ್ಲಿ ತೊಡಗಿಕೊಳ್ಳಲು ಶುರು ಮಾಡಿದಾಗ ಅದರ ಬಗೆಗೆ ಹಲವು ನಿಯತಕಾಲಿಕಗಳಲ್ಲಿ ಲೇಖನಗಳನ್ನು ಬರೆಯುತ್ತಿದ್ದೆ. ಇತ್ತೀಚೆಗೆ ಶಿವಮೊಗ್ಗಾದ ದಿನಪತ್ರಿಕೆಯವರು ಅವರ ವಿಶೇಷ ಸಂಚಿಕೆಯೊಂದಕ್ಕೆ ಅದರ ಬಗೆಗೆ ವಿಶೇಷ ಲೇಖನ ಬರೆದುಕೊಡಬೇಕೆಂದು ಕೇಳಿದಾಗ ಕೆ.ಎಫ್.ಡಿ. ಮತ್ತು 'ಹಂದಿಗೋಡು ಕೀಲು ಬೇನೆ' ಎರಡರ ಬಗೆಗೂ ವಿವರವಾದ ಲೇಖನವನ್ನು ಬರೆದುಕೊಟ್ಟಿದ್ದೆ.*

## ವಿವಾಹ

ಗೃಹಸ್ಥಾಶ್ರಮಕ್ಕೆ ಅಡಿ ಇಟ್ಟಿದ್ದು ನನ್ನ ಮುಂದಿನ ಹೆಜ್ಜೆ. ಕಾಲೇಜಿನಲ್ಲಿರುವಾಗಲೇ ಮದುವೆಯ ಬಗೆಗೆ ನಿರ್ಧಾರವಾಗಿತ್ತಷ್ಟೆ. ಅದರಂತೆ ೧೯೫೭ರ ಮಾರ್ಚ್ ಹತ್ತನೇ ದಿನಾಂಕ ಮದುವೆ ಮುಹೂರ್ತ ನಿಗದಿಯಾಯಿತು. ಮದುವೆಯ ಸಲುವಾಗಿ ಒಂದು ತಿಂಗಳ ರಜೆ ಮಂಜೂರು ಮಾಡಿಸಿಕೊಂಡಿದ್ದೆ. ಆದರೆ ನಿಗದಿತ ದಿನ ಅನಿರೀಕ್ಷಿತವಾಗಿ ಅಡಚಣೆಯೊಂದು ಎದುರಾಯಿತು. ಲೇಡಿ ಡಾಕ್ಟರು ಯಾವುದೋ ಕಾರಣಕ್ಕಾಗಿ ಅಲ್ಪ ಸಮಯದ ರಜೆಯಲ್ಲಿ ಹೋಗಿದ್ದರು. ನಾನು ರಜೆಯಲ್ಲಿ ಹೋಗುವ ಮೊದಲೇ ಅವರು ವಾಪಾಸು ಬರಬೇಕಾಗಿತ್ತು. ಇನ್ನೇನೋ ಕಾರಣದಿಂದ ರಜೆಯನ್ನು ಮುಂದುವರಿಸಿದರು. ಕೊನೇ ಗಳಿಗೆಯಲ್ಲಾದ ಈ ಬೆಳವಣಿಗೆಯನ್ನು ನಿಭಾಯಿಸಲು ಕಾಂಪೌಂಡರಿಗೆ ತಾತ್ಕಾಲಿಕವಾಗಿ ಛಾರ್ಜು ವಹಿಸಿ ನಾನು ಹೋಗಬಹುದೆಂತಲೂ, ಸ್ವಲ್ಪ ಸಮಯದಲ್ಲೇ ಬೇರೊಬ್ಬ ವೈದ್ಯರನ್ನು ಶಿಕಾರಿಪುರಕ್ಕೆ ಕಳುಹಿಸುವ ಏರ್ಪಾಡು ಮಾಡುವುದಾಗಿ ಶಿವಮೊಗ್ಗಾದಿಂದ ಡಿ.ಎಂ.ಓ. ಫೋನ್ ಮೂಲಕ ತಿಳಿಸಿದರು. ಆದರೂ ಕೊನೇ ಕ್ಷಣದಲ್ಲಿ ಕಾಂಪೌಂಡರು ಯಾವುದೋ ತಕರಾರು ಎತ್ತಿ ರಜೆ ಬರೆದಿಟ್ಟು ಹೊರಟು ಹೋದರು. ಬೇರಾವ ಮಾರ್ಗವೂ ಕಾಣದೆ ಸಾಯಂಕಾಲವೇ ಶಿವಮೊಗ್ಗೆಗೆ ಧಾವಿಸಿ ಅಂದು ರಾತ್ರಿಯೇ ಡಿ.ಎಂ.ಓ. ಅವರನ್ನು ಮನೆಯಲ್ಲಿ ಭೇಟಿ ಮಾಡಿದೆ. ನನಗುಂಟಾದ ಇಕ್ಕಟ್ಟಿನ

---

*'ಮಲೆನಾಡಿನ ಎರಡು ಮಾರಕ ಕಾಯಿಲೆಗಳು' (ಕ್ಯಾಸನೂರು ಕಾಡಿನ ಕಾಯಿಲೆ ಮತ್ತು ಹಂದಿಗೋಡು ಕೀಲುಬೇನೆ) 'ನಾವಿಕ' ದಿನಪತ್ರಿಕೆ ವಿಶೇಷಾಂಕ - ೧೯೯೮-೯೯.

ಪರಿಸ್ಥಿತಿಯ ಅರಿವಾಗಿರಬೇಕು, ನಾನು ಆಗಿಂದಲೇ ರಜೆಯ ಮೇಲೆ ಹೋಗಬಹುದೆಂತಲೂ, ಮರುದಿನ ಬೆಳಿಗ್ಗೆಯೇ ಶಿಕಾರಿಪುರಕ್ಕೆ ಮೆಗ್ಗಾನ್ ಆಸ್ಪತ್ರೆಯಿಂದ ಒಬ್ಬರನ್ನು ನಿಯೋಜಿಸಿ ಕಳುಹಿಸುವುದಾಗಿ ಭರವಸೆ ಇತ್ತು, ಶುಭ ಹಾರೈಸಿ ಬೀಳ್ಕೊಟ್ಟರು. ಅಲ್ಲದೆ ಆ ರೀತಿ ವರ್ತಿಸಿದ ಕಾಂಪೌಂಡರ ಮೇಲೆ ಶಿಸ್ತಿನ ಕ್ರಮ ತೆಗೆದುಕೊಳ್ಳುವ ಆಶ್ವಾಸನೆ ಇತ್ತರು.

ಸರಳ ರೀತಿಯ ವಿವಾಹಗಳನ್ನು ಜರುಗಿಸುವತ್ತ ಜನರ ಗಮನ ಹರಿಯುವ ಕಾಲ ಅದಾಗಿತ್ತು. ನನ್ನ ಒಲವೂ ಸಹ ಅತ್ತ ಕಡೆಯೇ ಇತ್ತೆಂದು ಬೇರೆ ಹೇಳಬೇಕಾಗಿಲ್ಲ. ಮೊದಲೇ ನಿಯೋಜಿಸಿಕೊಂಡಂತೆ ಮೇಗರವಳ್ಳಿ, ರಾ|| ಅಪ್ಪಣ್ಣ ಹೆಗ್ಗಡೆಯವರ ಮಗಳು ರುಕ್ಮಿಣಿ (ರಾಜಮ್ಮ)ಯ ಜೊತೆ ನನ್ನ ವಿವಾಹ ಮಾರ್ಚ್ ತಿಂಗಳ ದಿನಾಂಕ ಹತ್ತರಂದು ಜರುಗಿತು. ಆಗುಂಬೆಯ ವೇಣುಗೋಪಾಲ ಸ್ವಾಮಿ ದೇವಸ್ಥಾನದಲ್ಲಿ ಹೆಚ್ಚಿನ ಅದ್ದೂರಿ ಆಡಂಬರಗಳಿಲ್ಲದ ಸರಳ ರೀತಿಯಲ್ಲಿ ಮದುವೆಯ ವಿಧಿವಿಧಾನಗಳು ಜರುಗಿದವು.



ಮದುವೆ ಸಮಯ ಪತ್ನಿಯೊಂದಿಗೆ

ಮುಂದಿನ ಒಂದು ತಿಂಗಳಲ್ಲೇ ನಮ್ಮ ಸಂಸಾರ ಶಿಕಾರಿಪುರದಲ್ಲಿ ನೆಲೆಯಾಯಿತು. ತಾಯಿಯವರೂ ಸಹ ನಮ್ಮೊಡನಿದ್ದು, ಮಾರ್ಗದರ್ಶಕರಾದರು. ಅವರ ಜೀವಮಾನದಲ್ಲಿ ಬಹುಶಃ ಅದೇ ಮೊದಲ ಬಾರಿಗೆ ಸಂತಸ, ಸಂತೃಪ್ತಿ ಹಾಗೂ ಸಫಲತೆಯ ಭಾವನೆಗಳು ಮೂಡುತ್ತಿದ್ದುದನ್ನು ಗಮನಿಸಬಹುದಾಗಿತ್ತು. ನನ್ನ ಜೀವನದಲ್ಲೂ ಅಂತಹ ಭಾವನೆಗಳು ಉಂಟಾದವೆಂದು ಬೇರೆ ಹೇಳಬೇಕಾಗಿಲ್ಲ. ಆಗಿನ್ನೂ ದೊರೆತ ಸರ್ಕಾರಿ ಕೆಲಸ ಕಾಯಂ ಆಗಿರದಿದ್ದರೂ, ಆ ತನಕ ಅನುಭವಿಸಿದ ಕಷ್ಟ ಕೋಟಲೆಗಳನ್ನು ಪರಿಗಣಿಸಿದಾಗ ಮುಂದಿನ ದಿನಗಳ ಬಗೆಗೆ ಆಶಾಭಾವನೆ ತಳೆಯಬಹುದಾಗಿತ್ತು. ಆತ್ಮಸ್ಥೈರ್ಯದಿಂದ ಮುಂದಿನ ಜೀವನವನ್ನು ಎದಿರಿಸಬಲ್ಲೆನೆಂಬ ಧೈರ್ಯ, ನಂಬಿಕೆ ನನ್ನದಾಯಿತು. ಪತ್ನಿ ರುಕ್ಮಿಣಿ ಸಿರಿವಂತರ ಮನೆಯಿಂದ ಬಂದವಳಾಗಿದ್ದರೂ, ನಮ್ಮ ಜೀವನದ ರೀತಿ-ನೀತಿಗಳಿಗೆ ನಿರಾಯಾಸವಾಗಿ ಹೊಂದಿಕೊಂಡಳು. ಗೃಹಕೃತ್ಯದ ಸಾಕಷ್ಟು ಪರಿಣಿತಿ ಅವಳಿಗಿತ್ತು. ಸಂಸಾರವನ್ನು ಸುಸೂತ್ರವಾಗಿ ತೂಗಿಸಿಕೊಂಡು ಹೋಗುವುದು ಅವಳಿಗೆ ಸಮಸ್ಯೆಯೇ ಆಗಲಿಲ್ಲ. ಅದಾಗಲೇ ನಾನು ಆಸ್ಪತ್ರೆಯ ಕೆಲಸ ಕಾರ್ಯಗಳಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಂಡಿದ್ದೆನಷ್ಟೆ. ಬೆಳಿಗ್ಗೆ ಬಹಳ ಮುಂಚೆಯೇ ಮನೆಯಿಂದ ಹೊರಡುವುದು, ಹೊತ್ತು

ಗೊತ್ತಿಲ್ಲದೆ ತುರ್ತುಕರೆಗಳು ಬಂದಾಗಲೆಲ್ಲಾ ಹೊರಟು ಹೋಗುವಂಥಾ ನನ್ನ ಅನಿವಾರ್ಯತೆಗಳಿಗೆ ಅವಳೂ ಸ್ಪಂದಿಸಿ ಹೊಂದಿಕೊಂಡಳು. ನನ್ನ ಊಟೋಪಚಾರ, ವಿಶ್ರಾಂತಿಗಳಿಗೆ ಅಡಚಣೆಗಳಾಗದಂತೆ ಕಾರ್ಯ ನಿರ್ವಹಿಸಿದಳು. ಮದುವೆಗೆ ಮೊದಲು ತವರು ಮನೆಯಲ್ಲಿ ಇರುತ್ತಿದ್ದ ಮನರಂಜನೆ, ತಿರುಗಾಟಗಳ ಅವಕಾಶಗಳು ತಪ್ಪಿಹೋದರೂ, ಆ ಬಗೆಗೆ ಪರಿತಪಿಸಲಿಲ್ಲ.

## ಡಿ. ಎಂ. ಓ. ಅವರ ವಾರ್ಷಿಕ ಪರಿಶೀಲನೆ

ಮದುವೆಯ ನಂತರ ಶಿಕಾರಿಪುರಕ್ಕೆ ಹಿಂತಿರುಗುತ್ತಿರುವಂತೆಯೇ ಡಿ.ಎಂ.ಓ. ಅವರು ಆಸ್ಪತ್ರೆಯ ವಾರ್ಷಿಕ ಪರಿಶೀಲನೆಯ ದಿನವನ್ನು ನಿಗದಿ ಮಾಡಿದರು. ಮೇಲಾಧಿಕಾರಿಗಳಿಂದ ಜರುಗುವ ವಾರ್ಷಿಕ ಪರಿಶೀಲನೆ ಒಂದು ರೀತಿಯಲ್ಲಿ ಸಂಬಂಧಿಸಿದ ಸಂಸ್ಥೆಯವರಿಗೆ ಪೇಚಿನ ಪ್ರಕರಣವೆಂಬ ಭಾವನೆ ಇರುವುದು ಸ್ವಾಭಾವಿಕ. ಆ ಸಮಯದಲ್ಲಿ ಆ ಸಂಸ್ಥೆಯ ಒಳ ಹೊರಗುಗಳೆಲ್ಲಾ ಬಯಲಿಗೆ ಬರುವ ಸಂದರ್ಭ. ನವನವೀನ ಆಸ್ಪತ್ರೆಯೊಂದನ್ನು ಆ ಮೊದಲು ಯಾವುದೇ ಅನುಭವವಿಲ್ಲದೆ ಮುನ್ನಡೆಸುವ ಜವಾಬ್ದಾರಿಯನ್ನು ಹೊರುವ ಸ್ಥಾನದಲ್ಲಿದ್ದ ನಾನು ಅಂತಹ ಅವಕಾಶವನ್ನು ಕುತೂಹಲದಿಂದ ಎದುರು ನೋಡುತ್ತಿದ್ದೆ. ಹಾಗಾಗಿ ಅಂತಹ ಸಂದರ್ಭಕ್ಕೆ ಮಾಡಬೇಕಾದ ತಯಾರಿಗಳನ್ನೆಲ್ಲಾ ಬಿರುಸಿನಿಂದ ಮಾಡಿಸ ತೊಡಗಿದೆ. ಆಸ್ಪತ್ರೆಯ ಆವರಣವೆಲ್ಲಾ ಸ್ವಚ್ಛವಾಗಿರುವಂತೆ ಮಾಡಿದೆ. ಆಸ್ಪತ್ರೆ ಎದುರಿಸುತ್ತಿದ್ದ ಸಮಸ್ಯೆಗಳು ಹಾಗೂ ಆಗಬೇಕಾದ ಸುಧಾರಣೆಗಳ ಬಗೆಗೆ ವಿವರವಾದ ಪಟ್ಟಿಯನ್ನು ತಯಾರು ಮಾಡತೊಡಗಿದೆ.

ಪರಿಶೀಲನೆಗೆ ನಿಗದಿಯಾದ ಮೂರು ದಿನಗಳ ಮೊದಲೇ ಮೆಗ್ಗಾನ್ ಆಸ್ಪತ್ರೆಯ ಹೆಡ್ ಗುಮಾಸ್ತರೊಬ್ಬರು ಬಂದರು. ಲೆಕ್ಕಪತ್ರಗಳ ದಾಖಲಾತಿಗಳ ಪರಿಶೀಲನೆ ಅವರ ಉದ್ದೇಶ. ಹೊಸದಾಗಿ ಆರಂಭವಾಗುವ ಯಾವುದೇ ಸಂಸ್ಥೆಗಳಲ್ಲಿರಬಹುದಾದ ನ್ಯೂನತೆಗಳ ಬಗೆಗೆ ಸೂಕ್ತ ಪರಿಹಾರವನ್ನು ಸೂಚಿಸಿದರು.

ನಿಗದಿತ ದಿನ ಬೆಳಿಗ್ಗೆ ೧೦ ಗಂಟೆಗೆ ಡಿ.ಎಂ.ಓ. ಡಾ|| ಶಾಮಣ್ಣನವರು ಬಂದರು. ಅವರಿಗಾಗಿ ಏರ್ಪಡಿಸಿಕೊಂಡಿದ್ದ ಲಘು ಉಪಾಹಾರವನ್ನು ಸ್ವೀಕರಿಸಲು ನಗುಮುಖದಿಂದಲೇ ನಿರಾಕರಿಸಿದರು; ಮುಂದೆ ನೇರವಾಗಿ ವಾರ್ಡುಗಳತ್ತ ಧಾವಿಸಿದರು; ಕೆಲವು ರೋಗಿಗಳನ್ನು ಪರೀಕ್ಷಿಸಿದರು; ಸಂಬಂಧಿಸಿದ ಕೇಸ್ ಷೀಟ್‌ಗಳನ್ನು ಪಡೆದುಕೊಂಡು ಅಜಮಾಯಿಶಿದರು.

"ಡಾಕ್ಟರ್, ಈ ರೋಗಿ ಅಪೆಂಡಿಸೈಟಿಸ್‌ನಿಂದ ನರಳುತ್ತಿರುವಂತಿದೆಯಲ್ಲಾ; ಅವನನ್ನು ಇಲ್ಲಿ ಹೇಗೆ ಚಿಕಿತ್ಸೆ ಮಾಡುತ್ತಿರುವಿರಿ? ಅಪರೇಷನ್ ಆಗ ಬೇಡವೆ? ಇನ್ನೇನಾದರೂ ಅಡ್ಡ ಪರಿಣಾಮಗಳು ಉದ್ಭವಿಸಿದರೆ ಏನು ಮಾಡುತ್ತೀರಿ?"

"ಹೌದು ಸರ್, ಅವನಿಗೆ ಶಿವಮೊಗ್ಗಗೆ ಹೋಗುವಂತೆ ಸಲಹೆ ಮಾಡಿದ್ದೆ; ಅಲ್ಲಿಗೆ ಹೋಗಲಾರದಷ್ಟು ಬಡತನ ತನ್ನದೆಂದು ಇಲ್ಲೇ ಉಳಿದುಕೊಂಡಿದ್ದಾನೆ. ಕನ್ಸರ್ವೇಟಿವ್ (ಜೋಪಸಾನಿಕ) ರೀತಿಯ ಚಿಕಿತ್ಸೆ ಅಳವಡಿಸಲಾಗಿದೆ; ಪರಿಸ್ಥಿತಿ ಸುಧಾರಿಸುತ್ತಿದೆ".

"ಅವನ ಕೇಸ್ ಷೀಟ್‌ನನ್ನೇನೋ ಸುಮಾರಾಗಿ ಬರೆದಿರುವಿರಿ, ಆದರೆ ರಕ್ತ ಮೂತ್ರಗಳ ಪರೀಕ್ಷೆಗಳಾವುವನ್ನೂ ಜರುಗಿಸಿದಂತಿಲ್ಲವಲ್ರೀ?"

"ಹೌದು, ಸರ್ ಅವೀಗ ಸಾಧ್ಯವಾಗುತ್ತಿಲ್ಲ. ತಮಗೇ ತಿಳಿದಿರುವಂತೆ ಆಸ್ಪತ್ರೆ ಆರಂಭವಾಗಿ ಕೆಲವೇ ತಿಂಗಳಾಗಿವೆ. ಪ್ರಯೋಗಾಲಯವನ್ನು ಸಜ್ಜುಗೊಳಿಸಲು ಸಾಧ್ಯವಾಗಿಲ್ಲ.

ಪ್ರಯೋಗಾಲಯ, ತಂತ್ರಕುಶಲಿ (ಟೆಕ್ನೀಶಿಯನ್) ಕೂಡಾ ನೇಮಕವಾಗಿಲ್ಲ. ನನ್ನ ಕೆಲಸ ಕಾರ್ಯಗಳ ಭರಾಟೆಯಲ್ಲಿ ಅತ್ತ ಕಡೆ ಗಮನ ಹರಿಸಲು ಸಾಧ್ಯವಾಗುತ್ತಿಲ್ಲ."

"ಅದು ಸರಿಯಪ್ಪಾ; ಸರಳವಾದ ಪ್ರಯೋಗಾಲಯವೇ ಇಲ್ಲದ ಈ ಆಸ್ಪತ್ರೆಗೆ, ಲಕ್ಷಾಂತರ ರೂಪಾಯಿಗಳ ಎಕ್ಸರೇ ಯಂತ್ರ ಒದಗಿಸಬೇಕೆಂದು ನಿಮ್ಮ ಊರಿನವರು ಸರ್ಕಾರದ ಮೇಲೆ ಒತ್ತಡ ಮಾಡುತ್ತಿದ್ದಾರಲ್ಲಾ?"

ಮುಂದೆ ಕೆಲವು ರೋಗಿಗಳನ್ನು ನೋಡಿದರು; ಅವಶ್ಯಕವಾದ ಸಂದರ್ಭಗಳಲ್ಲಿ ಸಲಹೆ ಸೂಚನೆಗಳಿತ್ತರು. ವಾರ್ಡಿನ ಕಕ್ಕಸು, ಬಚ್ಚಲುಗಳನ್ನು ವೀಕ್ಷಿಸಿದರು. ಅಲ್ಲಿಂದ ವಾಪಸಾಗುತ್ತ ರೋಗಿಗಳಿಗಿರುವ ತೊಂದರೆಗಳ ಬಗೆಗೂ ವಿಚಾರಿಸಿದರು. ಅವರೆಲ್ಲಾ ಅಷ್ಟೆಲ್ಲಾ ಕಟ್ಟಡಗಳ ನಿರ್ಮಾಣ ಮಾಡಿ, ವಾರ್ಡು, ಮಂಚಗಳನ್ನು ಒದಗಿಸಿದ್ದರೂ, ಅಲ್ಲಿ ಊಟ ಉಪಚಾರಗಳ ಸೌಲಭ್ಯ ಒದಗಿಸಿರದಿರುವುದರ ಬಗ್ಗೆ ದೂರಿದರು. ಆಸ್ಪತ್ರೆ ಊರ ಹೊರಗಡೆ ಇರುವುದರಿಂದ ಹೋಟೇಲುಗಳಿಂದಲೂ ತರಿಸಿಕೊಳ್ಳುವುದಕ್ಕೆ ಕಷ್ಟವಾಗುವುದನ್ನೂ ಅವರ ಗಮನಕ್ಕೆ ತಂದರು.

ಮಹಿಳಾ ವಾರ್ಡಿಗೆ ಪ್ರವೇಶಿಸಿದವರೇ ಲೇಡಿ ಡಾಕ್ಟರರನ್ನು ಬರಹೇಳಿದರು. ಕೆಲವು ವಿಷಯಗಳ ಬಗೆಗೆ ವಿಚಾರಿಸುತ್ತಾ ಸ್ವಲ್ಪ ಸಿಡುಕಿನ ಧಾಟಿಯಲ್ಲಿ ಮಾತಾಡಿದರು; ಬಹುಶಃ ಅವರ ಮೇಲೆ ಕೆಲವರು ದೂರಿದ್ದರೆನಿಸಿತು. (ಅವುಗಳ ಬಗೆಗೆ ನಂತರ ನನ್ನ ಹತ್ತಿರವೂ ಪ್ರಸ್ತಾಪಿಸಿದ್ದರು).

ಮುಂದಿನ ತನಿಖೆ ಆಪರೇಷನ್ ಥಿಯೇಟರ್‌ನಲ್ಲಿ, "ಓಹೋ, ಇಲ್ಲೊಂದು ಉತ್ತಮ ಆಪರೇಷನ್ ಥಿಯೇಟರ್ ಕೂಡಾ ಇದೆಯಲ್ರೀ? ಸಾಕಷ್ಟು ಸಲಕರಣೆಗಳೂ ಕಾಣಿಸುತ್ತಿವೆ; ಇದೇನ್ರೀ, ಇಲ್ಲಿ ಎರಡು ಜೆಂಕರ್ಸ್ ಅನೆಸ್ಥೀಸಿಯಾ ಬಾಟಲುಗಳಿವೆಯಲ್ಲಾ? (ಮಕ್ಕಳಿಗೆ ಅರವಳಿಕೆ ಉಂಟು ಮಾಡುವ ಸಾಧನ). ಮೆಗ್ಗಾನ್ ಆಸ್ಪತ್ರೆಯಲ್ಲಿ ಒಂದೂ ಇಲ್ವಲ್ಲಪ್ಪಾ. ಅಲ್ಲಿ ಮಕ್ಕಳನ್ನು ಪ್ರಜ್ಞೆ ತಪ್ಪಿಸುವುದರಲ್ಲಿ ತುಂಬಾ ಪೇಚಾಡಬೇಕಾಗುತ್ತಿದೆ; ಇಷ್ಟೆಲ್ಲಾ ಇಲ್ಲಿಗೆ ಹೇಗೆ ಬಂದವಪ್ಪಾ?"

"ಈ ಆಸ್ಪತ್ರೆ ಎನ್.ಇ.ಎಸ್. ಯೋಜನೆಯಡಿ ನಿರ್ಮಾಣವಾದದ್ದು. ಅದರಂತೆ ಕಟ್ಟಡವೇ ಅಲ್ಲದೆ ಅಲ್ಲಿಗೆ ಒದಗಿಸಬೇಕಾದ ಸಾಮಾನು ಸರಂಜಾಮುಗಳು ನಿಗದಿಪಡಿಸಿದ ಸೂತ್ರಗಳ ಪ್ರಕಾರ ಸರಬರಾಜಾಗುತ್ತವೆ. ತಾವು ಈಗಾಗಲೇ ನೋಡಿದ ವಾರ್ಡು, ಹೊರ ರೋಗಿಗಳ ವಿಭಾಗದ ಕುರ್ಚಿ, ಮೇಜು ಬೀರುಗಳೆಲ್ಲಾ ಆ ಸೂತ್ರದ ಪ್ರಕಾರವೇ ಬಂದವು. ಈ ಊರಿನ ಮುಖಂಡರೂ ಸಹ ಬಹಳಷ್ಟು ಜಾಗೃತರಾಗಿದ್ದು, ಆಸ್ಪತ್ರೆಯ ಅಭಿವೃದ್ಧಿಗೆ ಸರ್ಕಾರದ ಮೇಲೆ ಒತ್ತಡ ತರುತ್ತಲೇ ಇರುತ್ತಾರೆ, ಸಾರ್"

"ಅದೆಲ್ಲಾ ಸರಿಬಿಡಿ, ಇಷ್ಟೆಲ್ಲಾ ಅನುಕೂಲಗಳನ್ನು ಬಳಸಿಕೊಂಡು ನೀವೇನಾದ್ರೂ ಚಿಕ್ಕಪುಟ್ಟ ಆಪರೇಷನ್ ಮಾಡ್ತೀರಾ, ಡಾಕ್ಟರ್?"

"ಏನ್ ಮಾಡೋಕಾಗ್ತದೆ ಸರ್, ದಿನವೆಲ್ಲಾ ಹೊರರೋಗಿಗಳನ್ನು ನಿಭಾಯಿಸುವುದರಲ್ಲೇ ಕಳೆದು ಹೋಗ್ತದೆ. ತಾವೀಗ ನೋಡಿದ್ರಲ್ಲಾ ಎರಡು ಜೆಂಕರ್ಸ್ ಬಾಟಲುಗಳಿದ್ದರೂ ಸ್ಥಳೀಯ ಅರಿವಳಿಕೆ (Local Anaesthesia) ಮದ್ದುಗಳೇ ಇಲ್ಲಿಲ್ಲ. ಆದರೂ ಶಿವಮೊಗ್ಗಾದಿಂದ ಸ್ಥಳೀಯ ಅರಿವಳಿಕೆ ಮದ್ದಿನ ಇಂಜಕ್ಷನ್ ಖರೀದಿಸಿ ತಂದು ಆಗಾಗ್ಗೆ ಕೆಲವು ಸುನ್ನತಿ (Circumcision ಮುಸ್ಲಿಂ ಬಾಲಕರಿಗೆ ಜರುಗಿಸುವ ಮುಂಜಿ) ಮಾಡುತ್ತಿರುತ್ತೇನೆ."

"ಸರಿ, ಸರಿ, ಹಾಗೇನಾದರೂ ಮಾಡುತ್ತಿರಿ; ಇಲ್ಲವಾದ್ರೆ ಕಲಿತದ್ದೆಲ್ಲಾ ಮರೆತು ಹೋಗುತ್ತದೆ. ಅಂದ ಹಾಗೆ ಈ ಜೆಂಕರ್ ಬಾಟಲುಗಳ ಪೈಕಿ ಒಂದನ್ನು ನಾನು ಮೆಗ್ಗಾನ್ ಆಸ್ಪತ್ರೆಗೆ ಕೊಂಡೊಯ್ಯುತ್ತೀನ್ರೀ"

"ಸರ್, ಅವೆಲ್ಲಾ ನಿಗದಿತ ಯೋಜನೆಯನ್ವಯ ಈ ಆಸ್ಪತ್ರೆಗೇ ಸರಬರಾಜಾದವು; ಮುಂದೆ ಯಾರಾದರೂ ತಕರಾರು ಮಾಡಬಹುದಲ್ಲವೆ, ಸರ್."

"ಅದಕ್ಕೇಕೆ ಗಾಬ್ರಿಯಾಗತ್ತೀರಿ? ಮೆಗ್ಗಾನ್ ಆಸ್ಪತ್ರೆಗೆ ಡಿ.ಎಂ.ಓ. ಅವರೇ ಕೊಂಡು ಹೋಗಿದ್ದಾರೆ ಎನ್ರಿ. ಬೇಕಾದರೆ ನಿಮ್ಮ ಉಗ್ರಾಣದ ಪುಸ್ತಕದಲ್ಲಿ ನಮೂದಿಸಿ, ನಾನೇ ರುಜು ಹಾಕ್ತೀನಿ".

ನಾನು ಬೇರೇನೂ ಹೇಳಲಾರದೆ ಸಮ್ಮತಿಸಿದೆ. ಒಂದು ಬಾಟಲನ್ನು ಆಸ್ಪತ್ರೆಯ ಕಚೇರಿಯ ಮೇಜಿನ ಮೇಲೆ ಇರಿಸುವಂತೆ ಹೇಳಿದರು. ಹಾಗೇ ಮಾಡಿಸಿದೆ.

ನಂತರ ಹೆರಿಗೆ ಕೋಣೆ ಮತ್ತು ಹೆರಿಗೆ ವಾರ್ಡಿಗೂ ಭೇಟಿ ನೀಡಿ ಪರಿಶೀಲಿಸಿದರು. ಅಲ್ಲೆಲ್ಲೂ ಟೀಕೆ ಮಾಡುವಂತಹ ವಿಚಾರಗಳೇನೂ ಅವರ ಕಣ್ಣಿಗೆ ಬೀಳಲಿಲ್ಲ. ಅಲ್ಲಿಂದ ಆಸ್ಪತ್ರೆಯ ಹಿಂಭಾಗದತ್ತ ಅವರನ್ನು ಕೊಂಡೊಯ್ದೆ.

ಆಸ್ಪತ್ರೆಯ ಹಿಂಭಾಗದಲ್ಲೂ ವಿಶಾಲವಾದ ಮೈದಾನವಿರುವುದನ್ನು ನೋಡಿ ಆಶ್ಚರ್ಯ ಚಕಿತರಾದರು. ಬೇರಾವ ಊರುಗಳ ಆಸ್ಪತ್ರೆಗಳಿಗೆ ಇಲ್ಲದಷ್ಟು ವಿಶಾಲ ಆವರಣವಿರುವುದನ್ನು ನೋಡಿ ಮೆಚ್ಚಿಗೆ ವ್ಯಕ್ತಪಡಿಸಿದರು. ಎಡಗಡೆಯ ಒಂದು ಪಕ್ಕದಲ್ಲಿದ್ದ ಪಾಕ ಶಾಲೆಯ ಕಟ್ಟಡ, ದನದ ಕೊಟ್ಟಿಗೆ ಮುಂತಾದವುಗಳೂ ಸಹ ನಿರ್ಮಾಣವಾಗಿರುವುದು ಅವರ ಗಮನ ಸೆಳೆಯಿತು. (ಆಗಿನ್ನೂ ರೋಗಿಗಳಿಗೆ ಆಹಾರ ಒದಗಿಸುವ ಏರ್ಪಾಡಾಗಿರಲಿಲ್ಲವಾದ್ದರಿಂದ ಅವೆಲ್ಲಾ ಖಾಲಿಯಾಗಿದ್ದವು) ಮೈದಾನದ ಗಡಿಯಲ್ಲಿ ಸುಸಜ್ಜಿತವಾದ ಶವಾಗಾರ (Mortuary) ವಿದ್ದುದನ್ನೂ ನೋಡಿದರು. ತಾಲ್ಲೂಕು ಕೇಂದ್ರವೊಂದರಲ್ಲಿ ಅಷ್ಟೊಂದು ಪರಿಪೂರ್ಣವಾಗಿ ನಿರ್ಮಾಣವಾದ ಆಸ್ಪತ್ರೆಯ ಸಮುಚ್ಚಯ ಅವರನ್ನು ಬೆರಗುಗೊಳಿಸಿತ್ತಂತೆ.

ಇವೆಲ್ಲಾ ಮುಗಿದ ನಂತರ ಮುಂಭಾಗದಲ್ಲಿದ್ದ ಹೊರ ರೋಗಿಗಳ ವಿಭಾಗಕ್ಕೆ ಬಂದರು. ಅಲ್ಲಿ ಹೊರ ರೋಗಿಗಳ ನೋಂದಣಿ ರಿಜಿಸ್ಟರು, ಒಳರೋಗಿಗಳ ನೋಂದಣಿ ರಿಜಿಸ್ಟರು, ಅಪಘಾತಗಳ ದಾಖಲಾತಿ ರಿಜಿಸ್ಟರು, ಆಪರೇಷನ್ ರಿಜಿಸ್ಟರು, ಹೆರಿಗೆ ದಾಖಲಾತಿ ರಿಜಿಸ್ಟರು ಮುಂತಾದವುಗಳನ್ನೆಲ್ಲಾ ತರಿಸಿಕೊಂಡು ಕೂಲಂಕಷವಾಗಿ ಪರಿಶೀಲಿಸಿದರು. ಅವುಗಳಲ್ಲಿದ್ದ ನ್ಯೂನತೆಗಳನ್ನು ಸರಿಪಡಿಸುವ ಬಗೆಗೆ ಮಾರ್ಗದರ್ಶನ ನೀಡಿದರು. ಅಲ್ಲೇ ಎದುರಿಗಿದ್ದ ಕಾಂಪೌಂಡಿಂಗ್ ಕೊಠಡಿಗೆ ಧಾವಿಸಿ ಅಲ್ಲಿ ಜೋಡಿಸಿದ್ದ ಬಣ್ಣ ಬಣ್ಣದ ಬಾಟಲುಗಳನ್ನು ಅಲ್ಲಾಡಿಸಿದರು. ಕಾಂಪೌಂಡರ್ ವರ್ತನೆ ಬಗೆಗೆ ಅರಿವಿದ್ದು, ಅವರನ್ನು ನೋಡುತ್ತಲೇ ಹುಷಾರಾಗಿ ವರ್ತಿಸಬೇಕೆಂದು ಎಚ್ಚರದ ಮಾತುಗಳನ್ನಾಡಿದರು. ಹೊಸದಾಗಿ ಬರುವ ಡಾಕ್ಟರುಗಳಿಗೆ ಸಹಕಾರ ನೀಡಬೇಕೇ ಹೊರತು ಅಡ್ಡಗಾಲು ಹಾಕುತ್ತಿರಬಾರದೆಂಬ ಹಿತವಚನ ನುಡಿದರು. ಹಾಗೆಯೇ ಔಷಧ ಸಾಮಗ್ರಿಗಳ ಉಗ್ರಾಣವನ್ನು (Medical Stores) ಬಾಗಿಲು ತೆಗೆಸಿ ಅಲ್ಲಿದ್ದ ವಿವಿಧ ಔಷಧಗಳ ರಖಂಗಳನ್ನು ಅಜಮಾಯಿಶಿದರು. ವಾಸ್ತವಾಗಿ ಅಲ್ಲಿದ್ದುದಕ್ಕೂ ಉಗ್ರಾಣ ರಿಜಿಸ್ಟರಲ್ಲಿ ನಮೂದಾಗಿರುವ ಮೊತ್ತಗಳಿಗೂ ತಾಳೆ ನೋಡಿದರು. ಯಾವುದರಲ್ಲೂ ವ್ಯತ್ಯಯ ಕಂಡುಬರಲಿಲ್ಲ. ಆದರೆ ಕೆಲವು ರಖಂಗಳ ಬಳಕೆಯ ಅವಧಿ (Expiry Date) ಸಮೀಪಿಸುತ್ತಿದ್ದು ಅಥವಾ ಮುಗಿದು ಹೋಗಿರುವುದನ್ನು ಪತ್ತೇಹಚ್ಚಿ ನಮ್ಮ ಗಮನ ಸೆಳೆದರು. ಆ ದಿಸೆಯಲ್ಲಿ ಮುಂದೆ ಎಚ್ಚರ ವಹಿಸುವಂತೆ ತಾಕೀತು ಮಾಡಿದರು.

ಅಲ್ಲಿಂದ ರೋಗಿಗಳನ್ನು ನೋಡುವ ಪುರುಷ ಹೊರ ರೋಗಿಗಳ ವಿಭಾಗಕ್ಕೆ ಹಿಂದಿರುಗಿದರು. ಪಕ್ಕದಲ್ಲೇ ರೋಗಿಗಳನ್ನು ಮಲಗಿಸಿ ಪರೀಕ್ಷೆ ಮಾಡುವ ಕೊಠಡಿಯ ಬಾಗಿಲು

ತೆಗೆದಿದ್ದು, ಹಲವು ಗಾಜಿನ ಬೀರುಗಳು ಅವರ ಕಣ್ಣಿಗೆ ಬಿದ್ದಿರಬೇಕು. ಅಲ್ಲಿಗೂ ಹೋದರು. ಕೆಲವು ಬೀರುಗಳಲ್ಲಿ ಬಗೆ ಬಗೆಯ ಇಂಜಕ್ಷನ್ ಟ್ಯೂಬುಗಳು ಮತ್ತಿತ್ತರ ಔಷಧಗಳನ್ನು ಅಚ್ಚುಕಟ್ಟಾಗಿ ಜೋಡಿಸಿರುವುದರ ಕಡೆಗೆ ಅವರ ದೃಷ್ಟಿಹಾಯ್ದಿರಬೇಕು. ಅವೆಲ್ಲಾ ಸರ್ಕಾರದಿಂದ ಸರಬರಾಜಾದವೇ ಅಥವಾ ನನ್ನ ಖಾಸಗಿಯವೇ ಎಂದು ವಿಚಾರಿಸಿದರು. ರೋಗಿಗಳಿಗೆ ನೀಡುವುದಕ್ಕಾಗಿ ನಾನೇ ಖರೀದಿಸಿ ತಂದಿಟ್ಟುಕೊಂಡವು ಎಂದು ಉತ್ತರಿಸಿದೆ. ಕೂಡಲೇ ಬೆರಗಾದವರಂತೆ ಕಂಡರೂ ಥಟ್ಟನೇ ಯಾವುದೇ ಅಭಿಪ್ರಾಯ ವ್ಯಕ್ತಪಡಿಸಲಿಲ್ಲ.

ಯಾವುದೇ ಸಂಸ್ಥೆಯ ವಾರ್ಷಿಕ ಪರಿಶೀಲನೆಯ ಸಮಯದಲ್ಲಿ ಅತ್ಯಾವಶ್ಯಕವಾಗಿ ಜರುಗಿಸಲೇಬೇಕಾದ ಕಾರ್ಯವೊಂದಿರುತ್ತದೆ. ಆಸ್ಪತ್ರೆಯಲ್ಲಿ ಬಳಕೆಯಾಗಿ ನಾದುರಸ್ತಿಯಾದ, ಮುಂದೆ ಕೆಲಸಕ್ಕೆ ಬಾರದಂತಾಗಿರುವ ಬಟ್ಟೆ, ಬರೆ, ಸಾಧನ ಸಲಕರಣೆಗಳು, ಉಪಕರಣಗಳನ್ನು ನಾಶಮಾಡಿ ಅವುಗಳನ್ನು ಉಗ್ರಾಣದ ರಿಜಿಸ್ಟರಿನಿಂದ ರದ್ದು ಮಾಡುವ ಕಾರ್ಯ ವಾರ್ಷಿಕ ಪರಿಶೀಲನೆ ಮಾಡುವ ಮೇಲಾಧಿಕಾರಿಗಳಿಂದಲೇ ಜರುಗಬೇಕೆಂಬ ನಿಯಮವಿರುತ್ತದೆ. ಈ ಕ್ರಿಯೆಗೆ ಕಂಡೆಮ್ನೇಶನ್ (Condemnation - ನಿಷೇಧಿಸುವುದು) ಎಂದು ಹೇಳಲಾಗುತ್ತದೆ. ವಾರ್ಷಿಕ ಪರಿಶೀಲನೆಯ ದಿನ ನಿಗದಿಯಾಗುತ್ತಿದ್ದಂತೆಯೇ ಆ ರೀತಿಯಲ್ಲಿ ನಿಷೇಧಿಸಬೇಕಾದ ವಸ್ತುಗಳನ್ನೆಲ್ಲಾ ಪರಿಶೀಲಿಸಿ ಪಟ್ಟಿಮಾಡಿ ಒಂದು ಕಡೆ ಜೋಡಿಸಿ ಇಡುತ್ತಾರೆ. ಅಂತಹ ಒಂದು ಪ್ರಕ್ರಿಯೆಯನ್ನು ನಾನು ಹಿಂದೆ ಎಂದೂ ನೋಡಿರಲಿಲ್ಲ. ಅರ್ಧಂಬರ್ಧ ಹರಿದ ಬೆಡ್‌ಷೀಟುಗಳು, ಮತ್ತಿತ್ತರ ಬಟ್ಟೆ ಬರೆಗಳು, ಹಾಗೂ ದುರಸ್ತು ಮಾಡಲಾಗದಷ್ಟು ಹಾಳಾಗಿದ್ದ ಸಾಮಾನು ಸರಂಜಾಮು, ಸಾಧನ ಸಲಕರಣೆಗಳನ್ನೆಲ್ಲಾ ಒಂದು ಕಡೆ ಜಮಾಯಿಸಿ ಇಡಲಾಗಿತ್ತು. ಡಿ.ಎಂ.ಓ. ಅವನ್ನೆಲ್ಲಾ ಪರೀಶಿಲಿಸಿ ಕೆಲವು ಬಟ್ಟೆಬರೆಗಳನ್ನು ಜವಾನರಿಂದ ಹರಿದು ಚಿಂದಿ ಚಿಂದಿ ಮಾಡಿಸಿದರು. ಅವುಗಳನ್ನು ಆಸ್ಪತ್ರೆಯ ನೆಲ ಒರೆಸಲು ಬಳಸಿಕೊಳ್ಳಬೇಕೆಂಬ ಸಲಹೆ ಮಾಡಿದರು; ಇನ್ನು ಕೆಲವನ್ನು ರಿಪೇರಿ ಮಾಡಿ ಮತ್ತೆ ಉಪಯೋಗಿಸಿಕೊಳ್ಳುವಂತೆ ಸೂಚಿಸಿದರು. ಹಾಗೇ ದುರಸ್ತು ಮಾಡಲಾಗದ ಸಾಮಾನು ಸರಂಜಾಮುಗಳಲ್ಲಿ ಕೆಲವನ್ನು ಜಜ್ಜಿ ಅಪ್ಪಚ್ಚಿ ಮಾಡಿಸಿದರು; ಮತ್ತೆ ಕೆಲವನ್ನು ಹರಾಜು ಮಾಡುವಂತೆ ಆದೇಶಿಸಿದರು; ಹಾಳಾಗಿದ್ದ ಲ್ಯಾಂಪಿನ ಗಾಜಿನ ಬುರುಡೆಯೊಂದು ಚೆನ್ನಾಗಿದ್ದು ಅದನ್ನು ಮೇಜಿನ ಮೇಲೆ ಪುಷ್ಪಗುಚ್ಛವನ್ನು ಇರಿಸಲು ಬಯಸಿದ್ದೆ. ಆದರೆ ಆಸ್ಪತ್ರೆ ಸಿಬ್ಬಂದಿಯೊಬ್ಬನ ಕಡೆ ಅದನ್ನು ಕೊಟ್ಟು ಆಸ್ಪತ್ರೆ ಹಿಂದೆ ಇದ್ದ ಕೆರೆಯಲ್ಲಿ ಮುಳುಗಿಸಿ ಬರುವಂತೆ ಕಳುಹಿಸಿಕೊಟ್ಟರು! ಇಂತಹ ಕ್ರಿಯೆಯ ಉದ್ದೇಶವೇನೆಂದರೆ ಒಂದು ಸಾರಿ ಕಂಡೆಮ್ ಮಾಡಿದ ಸಾಮಾನುಗಳನ್ನು ಉಗ್ರಾಣದ ರಿಜಿಸ್ಟರ್‌ನಿಂದ ರದ್ದುಗೊಳಿಸುವುದು; ಅವುಗಳನ್ನು ನಾಶ ಮಾಡದಿದ್ದರೆ, ಹೊಸದಾಗಿ ಖರೀದಿಸಿದವೆಂದು ಹಿಂಬಾಗಿಲಿನಿಂದ ಉಗ್ರಾಣದ ರಿಜಿಸ್ಟರನ್ನು ಮತ್ತೆ ಸೇರುವ ಸಾಧ್ಯತೆಗಳಿರುತ್ತವೆ. ಬಹುಶಃ ಹೊಸದಾಗಿ ನೇಮಕವಾಗಿರುವ ಯುವ ಮೆಡಿಕಲ್ ಆಫೀಸರ್ ಇಂತಹ ವಿಷಯಗಳ ಬಗೆಗೆ ಸರಿಯಾದ ರೀತಿ ನೀತಿಗಳನ್ನು ಕಲಿತುಕೊಳ್ಳಲೆಂದು ಇರಬಹುದೇನೋ!

ಇಷ್ಟೆಲ್ಲಾ ಕಾರ್ಯಕ್ರಮಗಳು ಮುಗಿಯುವಷ್ಟರಲ್ಲಿ ಮಧ್ಯಾಹ್ನ ಎರಡು ಗಂಟೆಯ ಸಮಯವಾಗಿತ್ತು. ಡಿ.ಎಂ.ಓ. ಅವರು ತಮ್ಮ ಊಟ-ಹುಳಿಯನ್ನ, ಮೊಸರನ್ನ - ತಮ್ಮ ಕಿಟ್ ಬ್ಯಾಗ್‌ನಲ್ಲಿ ತಂದಿರುವುದಾಗಿಯೂ ಆ ದಿಸೆಯಲ್ಲಿ ಯಾವುದೇ ಏರ್ಪಾಡು ಮಾಡಬಾರದೆಂದು ಹೇಳಿದರು. ಅವರಿಗೊಂದು ಆರಾಮ-ಕುರ್ಚಿಯನ್ನು ಕೊಟ್ಟರೆ ಅದರಲ್ಲೇ ವಿಶ್ರಮಿಸಿ ಕೊಳ್ಳುವು ದಾಗಿಯೂ ತಿಳಿಸಿದರು. ಲೆಕ್ಕಪತ್ರಗಳನ್ನು ಅಜಮಾಯಿಶಿ ಮಾಡಿದ ಗುಮಾಸ್ತರನ್ನುದ್ದೇಶಿಸಿ,

ಅವರು ತಯಾರು ಮಾಡಿದ ವರದಿಯನ್ನು ಮೇಜಿನ ಮೇಲೆ ಇರಿಸಿ ಊಟಕ್ಕೆ ಹೋಗಿ ಬರುವಂತೆ ಆದೇಶಿಸಿದರು. ಆಸ್ಪತ್ರೆಯ **'ಸಂದರ್ಶಕರ ಪುಸ್ತಕ'** (Visitors Book)ವನ್ನೂ ಸಹಾ ಮೇಜಿನ ಮೇಲಿರಿಸುವಂತೆ ನಮಗೂ ತಿಳಿಸಿ ಎಲ್ಲರೂ ಊಟ ಮುಗಿಸಿಕೊಂಡು ಬರುವುದಕ್ಕೆ ಕಳುಹಿಸಿದರು.

ಸುಮಾರು ಮೂರುವರೆ-ನಾಲ್ಕು ಗಂಟೆಯ ಹೊತ್ತಿಗೆ ನಾವೆಲ್ಲಾ ಹಿಂತಿರುಗಿದೆವು. ಡಿ.ಎಂ.ಓ. ಸಾಹೇಬರೂ ಸಹ ತಮ್ಮ ಕರ್ತವ್ಯವನ್ನು ಮುಗಿಸಿದ್ದರು, ಗುಮಾಸ್ತರ ವರದಿಯನ್ನು ಪರಿಶೀಲಿಸಿರುವುದಾಗಿಯೂ, ಅಷ್ಟೇನೂ ಗಂಭೀರವಲ್ಲದ ಆಕ್ಷೇಪಣೆಗಳನ್ನು ರದ್ದು ಮಾಡುವಂತೆ ಅವರಿಗೆ ಸೂಚಿಸಿದರು. ಹಣಕಾಸು ಮತ್ತು ಆಸ್ಪತ್ರೆಗೆ ಸಂಬಂಧಿಸಿದ ವಿಷಯಗಳ ಬಗೆಗೆ ನನ್ನೊಡನೆ ವಿವರವಾಗಿ ಚರ್ಚಿಸಿದರು. ನಾನು ಮೊದಲೇ ತಯಾರಿಸಿಕೊಂಡಿದ್ದ ಆಸ್ಪತ್ರೆಯ ಅವಶ್ಯಕತೆಗಳನ್ನು ಅವರ ಮುಂದಿಟ್ಟೆ, ಅದರಲ್ಲಿ ರೋಗಿಗಳಿಗೆ ಅಗತ್ಯವಾದ ಊಟದ ವ್ಯವಸ್ಥೆ, ಔಷಧ ಸಾಮಗ್ರಿಗಳ ಹೆಚ್ಚಳ, ಗುಮಾಸ್ತರು ಮತ್ತು ಪ್ರಯೋಗ ಶಾಲೆಯ ಟೆಕ್ನೀಷಿಯನ್ನರ ನೇಮಕ ಮುಂತಾದವು ಸೇರಿದ್ದವು. ಅವುಗಳನ್ನು ಹಂತ ಹಂತವಾಗಿ ಈಡೇರಿಸುವ ಪ್ರಯತ್ನ ಮಾಡುವುದಾಗಿಯೂ, ಕೆಲವು ವಿಷಯಗಳ ಬಗೆಗೆ ವೈದ್ಯಕೀಯ ಇಲಾಖೆಯ ನಿರ್ದೇಶಕರಿಗೂ ಶಿಫಾರಸ್ಸು ಮಾಡುವ ಭರವಸೆ ಇತ್ತರು. ಈ ಎಲ್ಲಾ ವಿಚಾರಗಳ ಬಗೆಗೆ ಸಂದರ್ಶಕರ ಪುಸ್ತಕದಲ್ಲಿ ಪ್ರಸ್ತಾಪ ಮಾಡಿರುವುದಾಗಿಯೂ ಹೇಳಿದರು ಅನಂತರ ಅಲ್ಲಿದ್ದ ಇತರರನ್ನೆಲ್ಲಾ ಹೊರ ಹೋಗುವಂತೆ ಹೇಳಿ ನನ್ನೊಡನೆ ವೈಯಕ್ತಿಕವಾಗಿ ಮಾತಾಡಲಾರಂಭಿಸಿದರು.

## ಖಾಸಗಿ ಪ್ರಾಕ್ಟೀಸ್ ಬಗೆಗೆ ವ್ಯಾಖ್ಯಾನ

"ನಿಮ್ಮ ಪರೀಕ್ಷಾ ಕೊಠಡಿಯ ಬೀರುಗಳಲ್ಲಿರಿಸಿಕೊಂಡಿರುವ ಮದ್ದುಗಳನ್ನು ನೀವು ಖಾಸಗಿಯಾಗಿ ಖರೀದಿಸಿದವೆಂದು ಹೇಳಿದಿರಲ್ಲಾ, ಅವನ್ನು ನೀವು ಹೇಗೆ ಬಳಕೆ ಮಾಡುತ್ತೀರಿ?"

"ಅವುಗಳನ್ನು ನಾನು ಶಿವಮೊಗ್ಗೆಯಿಂದ ತರಿಸಿಕೊಂಡಿರುವೆ; ಆಸ್ಪತ್ರೆಯಲ್ಲಿ ಲಭ್ಯವಿರದ ಇಂಜಕ್ಷನ್ ಮುಂತಾದವನ್ನು ಇಷ್ಟಪಡುವ ರೋಗಿಗಳಿಗೆ ನೀಡಿ ಸ್ವಲ್ಪ ಫೀಜು ತೆಗೆದುಕೊಳ್ಳುತ್ತೇನೆ".

"ಅಂದರೆ ಸರ್ಕಾರಿ ಆಸ್ಪತ್ರೆಯಲ್ಲಿ ಖಾಸಗಿ ಪ್ರಾಕ್ಟೀಸ್ ಮಾಡಿ ನೀವು ಹಣ ಪಡೆಯುತ್ತೀರೆಂದಾಯಿತಲ್ಲವೆ? ಸರ್ಕಾರದ ಕಾನೂನು ಪ್ರಕಾರ ಅದು ತಪ್ಪಲ್ಲವೆ ಡಾಕ್ಟರ್?"

ಅಂತಹ ಪದ್ಧತಿ ತಪ್ಪಾಗಿರಬಹುದೆಂದು ಒಪ್ಪಿಕೊಂಡೆ; ಊರಿನಿಂದ ದೂರ ಇರುವ ಆಸ್ಪತ್ರೆಗೆ ಬರುವ ರೋಗಿಗಳಿಗೆ ಪೇಟೆಯಿಂದ ಇಂಜಕ್ಷನ್, ಮಾತ್ರೆಗಳನ್ನು ತರಿಸಿಕೊಳ್ಳುವುದರಲ್ಲಿನ ಕಷ್ಟ ಹಾಗೂ ಹೊಸದಾಗಿ ಆರಂಭವಾಗಿರುವ ಆಸ್ಪತ್ರೆಗೆ ರೋಗಿಗಳನ್ನು ಆಕರ್ಷಿಸುವ ದೃಷ್ಟಿಯಲ್ಲಿ ಈ ಏರ್ಪಾಡು ಮಾಡಿಕೊಳ್ಳುವುದು ಅನಿವಾರ್ಯವಾಯಿತೆಂದು ನನ್ನ ಅಹವಾಲನ್ನು ಮುಂದಿಟ್ಟೆ

"ಕಾರಣಗಳು ಹಾಗೂ ನಿಮ್ಮ ಉದ್ದೇಶಗಳೇನಿದ್ದರೂ ಸರ್ಕಾರಿ ಆಸ್ಪತ್ರೆಗಳಲ್ಲಿ ರೋಗಿಗಳಿಂದ ಬಹಿರಂಗವಾಗಿ ಹಣ ಪಡೆಯುವುದು ಸರಿಯಲ್ಲ. ನಿಮ್ಮ ಉದ್ದೇಶ ಅದೆಷ್ಟೇ ಒಳ್ಳೆಯದಾಗಿದ್ದರೂ, ಒಂದಲ್ಲ ಒಂದು ದಿನ ನೀವು ಲಂಚ ಪಡೆಯುತ್ತಿದ್ದೀರೆಂಬ ಅಪಾದನೆಗಳು ಹುಟ್ಟಿಕೊಳ್ಳುತ್ತವೆ. ಅದರಿಂದ ನಿಮಗೆ ತೊಂದರೆ ಆಗಬಹುದಲ್ಲವೆ? ಉತ್ಸಾಹೀ ಯುವ ವೈದ್ಯರಾಗಿ ಈಗ ತಾನೇ ವೃತ್ತಿಯಲ್ಲಿ ಕಾಲಿಡುತ್ತಿರುವಿರಿ. ಇಂತಹ ಅಭ್ಯಾಸ ಮುಂದೆ ಹೆಮ್ಮರವಾಗಿ ಬೆಳೆದು ನಿಮ್ಮ ಭವಿಷ್ಯಕ್ಕೇ ಕುತ್ತಾಗಬಹುದು. ನಾನು ಈ ದಿನ ನೋಡಿದಂತೆ ಒಳ್ಳೆಯ ಕೆಲಸ

ಮಾಡುತ್ತಿರುವಿರಿ. ಅದನ್ನು ಮುಂದುವರಿಸುವುದು ಇಲ್ಲವೆ ಬಿಡುವ ಆಯ್ಕೆ ನಿಮ್ಮದು. ನಾನೊಬ್ಬ ನಿಮ್ಮ ಹಿತೈಷಿ ಎಂದು ತಿಳಿಯಿರಿ" ಎಂದು ನಿರ್ಲಿಪ್ತ ಭಾವನೆಯಿಂದ ಹೇಳಿದರು.

"ತಮ್ಮ ಹಿತವಚನಗಳಿಗೆ ತುಂಬಾ ಥ್ಯಾಂಕ್ಸ್ ಸರ್; ನಾನೂ ಸಹ ಮೊದಲಿನಿಂದಲೂ ರೋಗಿಗಳಿಂದ ಹಣ ಪಡೆಯಬಾರದೆಂಬ ಘನ ಉದ್ದೇಶ ಹೊಂದಿದವನೇ. ಆದರೆ ಇಲ್ಲಿಯ ವಿಶಿಷ್ಟ ಪರಿಸ್ಥಿತಿಯಲ್ಲಿ ಕೆಲವರಿಗಾದರೂ ಅನುಕೂಲವಾಗಲೆಂದು ಈ ರೀತಿ ಮಾಡಬೇಕಾಯಿತು. ಅದರ ಹಿಂದೆ ಇಷ್ಟೆಲ್ಲಾ ತೊಡಕುಗಳಿರಬಹುದೆಂಬುದು ನನಗೆ ಹೊಳೆದೇ ಇರಲಿಲ್ಲ. ಮುಂದೆ ಈ ಪದ್ಧತಿಯನ್ನು ನಿಲ್ಲಿಸುತ್ತೇನೆ" ಎಂದು ಭರವಸೆ ನೀಡಿದೆ. ಅವರಿಗೂ ಹೊರಡುವ ಹೊತ್ತಾಯಿತು. ಎದ್ದು ನಿಂತು ಶುಭ ಹಾರೈಸಿದರು. ನಾನು ವಂದಿಸಿ ಬೀಳ್ಕೊಟ್ಟೆ

ಡಿ.ಎಂ.ಓ. ಅವರು ಹೊರಟು ಹೋದ ನಂತರ ಸಂದರ್ಶಕರ ಪುಸ್ತಕದಲ್ಲಿ ಬರೆದಿರುವುದರ ಬಗೆಗೆ ಕುತೂಹಲ; ಸಾರಾಂಶ:

"ಶಿಕಾರಿಪುರದ ಕಂಬೈಂಡ್ ಆಸ್ಪತ್ರೆಯ ವಾರ್ಷಿಕ ಪರಿಶೀಲನೆಯನ್ನು ಈ ದಿನ ಜರುಗಿಸಲಾಯಿತು. ಡಾ|| ಎಚ್. ಡಿ. ಚಂದ್ರಪ್ಪಗೌಡ ಎಂಬ ಯುವ ವೈದ್ಯರು ವೈದ್ಯಾಧಿಕಾರಿಯಾಗಿ ಕಳೆದ ಆರು ತಿಂಗಳಿಂದ ಕಾರ್ಯನಿರ್ವಹಿಸುತ್ತಿದ್ದಾರೆ. ಆಸ್ಪತ್ರೆ ಸಾಕಷ್ಟು ಶುಚಿಯಾಗಿದೆ; ಹೊರ ರೋಗಿಗಳ ಹಾಜರಾತಿ ದಿನೇ ದಿನೇ ಹೆಚ್ಚಾಗುತ್ತಿದೆ. ಕೆಲವು ಒಳ ರೋಗಿಗಳನ್ನು ಸೇರಿಸಿಕೊಳ್ಳುತ್ತಿದ್ದಾರೆ; ಆದರೆ ಇನ್ನೂ ಊಟದ ವ್ಯವಸ್ಥೆ ಇಲ್ಲದಿರುವುದರಿಂದ ಹಳ್ಳಿಗಾಡುಗಳಿಂದ ಬರುವವರಿಗೆ ಅನಾನುಕೂಲತೆ ಕಂಡು ಬರುತ್ತಿದೆ. ಕೆಲವು ಸಿಬ್ಬಂದಿ ವರ್ಗದವರ ಕೊರತೆ ಇದೆ. ಸಾಕಷ್ಟು ಔಷಧ ಸಾಮಾಗ್ರಿಗಳು ದೊರಕುತ್ತಿಲ್ಲ; ಹೊಸದಾಗಿ ಆರಂಭವಾದ ೨೮ ಹಾಸಿಗೆಗಳ ಆಸ್ಪತ್ರೆ ಇದಾಗಿದ್ದು ಪ್ರಸ್ತುತ ಮಂಜೂರಾದ ಹಣಕಾಸಿನ ಮೊಬಲಗು ಸಾಕಾಗುತ್ತಿಲ್ಲ; ಕೊರತೆಯನ್ನು ನಿವಾರಿಸಲು ಇಲಾಖೆಯವರೊಂದಿಗೆ ಪತ್ರ ವ್ಯವಹಾರ ನಡೆಸಲಾಗುವುದು. ಒಳರೋಗಿಗಳಿಗೆ ಸ್ಥಳೀಯ ಹೋಟೇಲುಗಳಿಂದ ತಾತ್ಕಾಲಿಕವಾಗಿ ಊಟ ಒದಗಿಸುವ ವ್ಯವಸ್ಥೆ ಮಾಡಲು ಸಾಧ್ಯವೇ ಎಂಬುದರ ಬಗೆಗೆ ಪ್ರಯತ್ನ ಮಾಡಲು ವೈದ್ಯಾಧಿಕಾರಿಗಳಿಗೆ ಸೂಚಿಸಲಾಗಿದೆ.

ಆಸ್ಪತ್ರೆಯ ಸಿಬ್ಬಂದಿ ವರ್ಗದವರು ವೈದ್ಯಾಧಿಕಾರಿಗಳೊಡನೆ ಸಹಕರಿಸುತ್ತಿದ್ದಾರೆ. ಆಸ್ಪತ್ರೆ ದಿನೇ ದಿನೇ ಜನಾನುರಾಗಿಯಾಗುವ ಲಕ್ಷಣಗಳಿವೆ".

**(ಸಹಿ) ಡಾ|| ಡಿ. ಶಾಮಣ್ಣ**
ಡಿ.ಎಂ.ಓ. ಶಿವಮೊಗ್ಗ.

ಡಿ.ಎಂ.ಓ. ಅವರು ವ್ಯಕ್ತಪಡಿಸಿದ ಅನಿಸಿಕೆಗಳು ಮನಸ್ಸಿಗೆ ಮುದ ನೀಡಿದವು. ಆರು ತಿಂಗಳ ಹಿಂದೆ ಅಂಜುತ್ತಾ ಶಿಕಾರಿಪುರಕ್ಕೆ ಬಂದಾಗಿನಿಂದ ಮಾಡಿದ ಸಾಧನೆಗಳ ಬಗೆಗೆ ಸಂತೃಪ್ತಿಯುಂಟಾದಂತಿತ್ತು; ಇನ್ನೂ ಹೆಚ್ಚಿನ ಸಾಧನೆಗಳಿಗೆ ಹುರುಪು ದೊರೆಯಿತು.

ಎಂದಿನ ಹುರುಪಿನಿಂದ ಮತ್ತೆ ಕೆಲಸದಲ್ಲಿ ಮಗ್ನನಾದೆ. ಅಷ್ಟರಲ್ಲೇ ನಮ್ಮ ಹಂಗಾಮಿ ಕೆಲಸದ ಆರು ತಿಂಗಳ ಅವಧಿ ಮುಗಿದಿತ್ತು. ಆದರೆ ಕೂಡಲೇ ನಮ್ಮ ಕೆಲಸವನ್ನು ರದ್ದು ಮಾಡಲಿಲ್ಲ. ಒಂದೆರಡು ತಿಂಗಳು ಅಲ್ಲೇ ನಮ್ಮನ್ನು ಕೆಲಸದಲ್ಲಿ ಮುಂದುವರಿಸುವ ಆದೇಶ ಬಂದಿತು. ಮುಂದೆಯೂ ಕೆಲವು ಸಾರಿ ಹೀಗೆ ಆಗುತ್ತಿತ್ತು. ಪ್ರತಿ ಸಾರಿಯೂ ಸರ್ಕಾರಿ ಆದೇಶ ಹೊರ ಬರುವವರೆಗೆ ಬೆಂಗಳೂರಿನಿಂದ ಅಕೌಂಟೆಂಟ್ ಜನರಲ್‌ರಿಂದ (ಎ.ಜಿ.) ಪರವಾನಿಗಿ ಬರದೇ ಸಂಬಳ ಪಡೆಯಲಾಗುತ್ತಿರಲಿಲ್ಲ. ಮುಂದೆ ಬಹುಶಃ ಸರ್ಕಾರದವರಿಗೇ ಬೇಸರವಾಗಿರ

ಬೇಕು. ಅಂತಿಮವಾಗಿ ಮುಂದಿನ ಸಾರಿ ಮೆಡಿಕಲ್ ಪ್ರೊಬೇಷನರ್‌ಗಳು ನೇಮಕವಾಗುವವರೆಗೆ ನಮ್ಮ ನೇಮಕಾತಿಯನ್ನು ಮುಂದುವರಿಸಲಾಗಿದೆ ಎಂದು ಆದೇಶ ಹೊರಡಿಸಿತು!

ಡಿ.ಎಂ.ಓ. ಅವರ ಸೂಚನೆಯಂತೆ ಕೆಲವು ಸ್ಥಳೀಯ ಹೋಟೇಲುಗಳಿಂದ ಆಸ್ಪತ್ರೆಗೆ ಎರಡು ಹೊತ್ತು ಊಟ ಸರಬರಾಜು ಮಾಡುವ ಬಗೆಗೆ ವಿಚಾರ ವಿನಿಮಯ ಮಾಡಿದೆ. ಬಸ್‌ಸ್ಟ್ಯಾಂಡ್ ಹೋಟೆಲಿನ ರಾಮಚಂದ್ರಯ್ಯನವರ ದರ ಇತರರಿಗಿಂತ ಕಡಿಮೆಯಾಗಿ ಕಂಡು ಬಂದಿತು. ಅವರು ದಿನದಲ್ಲಿ ಎರಡು ಸಾರಿ ನಾವು ಹೇಳಿದಷ್ಟು ರೋಗಿಗಳಿಗೆ ಊಟ ತಂದು ಬಡಿಸಲಾರಂಭಿಸಿದರು; ಅದೊಂದು ಗರಿ ಮೂಡಿಸಿದಂತಾಯಿತು ನನಗೆ; ಅಂದಿನಿಂದ ಆಸ್ಪತ್ರೆಗೆ ದಾಖಲಾಗುವವರ ಸಂಖ್ಯೆಯೂ ಹೆಚ್ಚಾಯಿತು. ತಾಲ್ಲೂಕಿನ ಜನರು ನನ್ನ ಕಡೆ ಗಮನ ಹರಿಸುವಂತಾಯಿತು.

## 'ಗುದ್ದಮ್ಮನ ಬೇನೆ' ಒದಗಿಸಿದ ಅವಕಾಶ

ಆ ವರ್ಷ (೧೯೫೭) ಮುಗಿಯುವುದರೊಳಗೆ, ಶಿಕಾರಿಪುರದ ಪಟ್ಟಣದವರೇ ಅಲ್ಲದೆ ಇಡೀ ತಾಲ್ಲೂಕಿನ ಜನ ಆಸ್ಪತ್ರೆಯ ಕಡೆ ತಂಡೋಪತಂಡವಾಗಿ ಧಾವಿಸುವ ಪರಿಸ್ಥಿತಿ ಉಂಟಾಯಿತು. ಹಳ್ಳಿಗರ ಭಾಷೆಯಲ್ಲಿ 'ಗುದ್ದಮ್ಮನ ಬೇನೆ'ಯೆಂದು ಕರೆಸಿಕೊಳ್ಳುತ್ತಿದ್ದ ಇನ್‌ಫ್ಲುಯೆನ್ಸಾ ಜ್ವರ (Influenza) ದೇಶಾದ್ಯಂತ ಸಾಂಕ್ರಾಮಿಕವಾಗಿ ಕಾಣಿಸಿಕೊಂಡಿತು. ಸುಮಾರು ನಾಲ್ಕು ದಶಕಗಳ ಹಿಂದೆ (೧೯೧೭-೧೮) ಭಾರತವೂ ಸೇರಿದಂತೆ ಪ್ರಪಂಚದೆಲ್ಲೆಡೆ ಆವರಿಸಿದ ಆ ವ್ಯಾಧಿ ಲಕ್ಷ ಲಕ್ಷಗಟ್ಟಲೆ ಜನರನ್ನು ಬಲಿ ತೆಗೆದುಕೊಂಡಿತ್ತು. ಅದರ ಉಪಟಳವನ್ನು ಅನುಭವಿಸಿ ಬದುಕಿ ಉಳಿದ ಕೆಲವರು ಅದರ ಲಕ್ಷಣಗಳಾದ ವಿಪರೀತ ಮೈ ಕೈ ನೋವು, ತಲೆನೋವು, ಶೀತ, ಜ್ವರಗಳ ರೀತಿ ನೀತಿಗಳನ್ನು ಮರೆತಿರಲಿಲ್ಲ. ಅದರಿಂದಲೇ 'ಗುದ್ದಮ್ಮನ ಬೇನೆ' ಎಂಬ ಅನ್ವರ್ಥನಾಮ. ಸೌಮ್ಯ ರೀತಿಯಲ್ಲಿ ಆರಂಭವಾದ ಶೀತ, ಕೆಮ್ಮು, ಮೈ ಕೈ ನೋವು ಶೀಘ್ರಗತಿಯಲ್ಲಿ ವಿಪರೀತ ನಿಶ್ಯಕ್ತಿಯುಂಟು ಮಾಡುತ್ತದೆ. ಅಂತಿಮವಾಗಿ ಎರಡೂ ಕಡೆಯ ಶ್ವಾಸಕೋಶಗಳಲ್ಲಿ ಉರಿತ ಉಂಟಾಗಿ (ಡಬಲ್ ಅಥವಾ ಜೋಡಿ ನ್ಯೂಮೋನಿಯ)ಕ್ಕೆ ತಿರುಗಬಹುದು; ಅದರಿಂದ ಬಹಳಷ್ಟು ಜನ ಸಾವಿಗೀಡಾಗುತ್ತಿದ್ದುದು ಅಪರೂಪವೇನಲ್ಲ. ಶ್ವಾಸಕೋಶಗಳಲ್ಲಿ ರೋಗಾಣು ಸೋಂಕಿನಿಂದ ಉಂಟಾಗುತ್ತಿದ್ದ ಪರಿಸ್ಥಿತಿಯನ್ನು ಯಶಸ್ವಿಯಾಗಿ ನಿಭಾಯಿಸಲು ಪೆನಿಸಿಲಿನ್, ಟೆಟ್ರಾಸೈಕ್ಲಿನ್‌ಗಳಂಥ ಜೀವಿರೋಧಕ (Antibiotics) ಮದ್ದುಗಳು ಆ ಸಮಯದಲ್ಲಿ ಲಭ್ಯವಿರದಿದ್ದುದರಿಂದ ಜನ ನೊಣ ಸತ್ತಂತೆ ಸಾಯುತ್ತಿದ್ದರಂತೆ. ಆದರೆ ೧೯೫೭ರ ಹೊತ್ತಿಗೆ ಸಂಜೀವಿನಿಯಂಥ ಜೀವಿರೋಧಕ ಮದ್ದುಗಳು ದೊರೆಯುತ್ತಿದ್ದು ಆ ವ್ಯಾಧಿಯಿಂದ ಸಾವೀಗೀಡಾಗುವ ಭಯ ಅಷ್ಟಾಗಿರಲಿಲ್ಲ.

ಈ ವ್ಯಾಧಿ ತಗುಲಿದ ಬಡಬಗ್ಗರು ಖಾಸಗಿ ವೈದ್ಯರಲ್ಲಿ ಚಿಕಿತ್ಸೆಗೊಳಗಾಗುವ ಸ್ಥಿತಿಯಲ್ಲಿರುತ್ತಿರಲಿಲ್ಲವಾದ್ದರಿಂದ, ಆಸ್ಪತ್ರೆ ಊರಿನಿಂದ ಹೊರಗಿದ್ದರೂ ಅಲ್ಲಿಗೆ ಬರುವುದು ಅನಿವಾರ್ಯವಾಯಿತು. ನಾವು ಆಸ್ಪತ್ರೆಯವರೂ ಸಹಾ ಸಂಕಷ್ಟದಲ್ಲಿರುತ್ತಿದ್ದ ಜನರಿಗೆ ನೆರವಾಗುವ ಉದ್ದೇಶದಿಂದ ಹೊತ್ತುಗೊತ್ತುಗಳ ಪರಿವೆ ಇಲ್ಲದೆ ಚಿಕಿತ್ಸೆ ಮಾಡತೊಡಗಿದೆವು. ಸರ್ಕಾರದವರೂ ಸಹಾ ಮದ್ದುಗಳನ್ನು ಹೆಚ್ಚುವರಿಯಾಗಿ ಸರಬರಾಜು ಮಾಡಿದ್ದರು. ಎಲ್ಲಕ್ಕಿಂತ ಮಿಗಿಲಾಗಿ ನಮ್ಮ ಆಸ್ಪತ್ರೆಯಲ್ಲೇ ದೊರೆಯುತ್ತಿದ್ದ 'ಡೋವರ್ಸ್ ಪೌಡರ್' (Dower's Powder) ಎಂಬ ಪುಡಿ ರೋಗಿಗಳು ಅನುಭವಿಸುತ್ತಿದ್ದ ನೋವು, ಬಾಧೆಗಳನ್ನು ಅತ್ಯಂತ ಪರಿಣಾಮಕಾರಿ

ಯಾಗಿ ಉಪಶಮನಗೊಳಿಸುತ್ತಿತ್ತು. ಅದರ ನಿಗದಿತ ಪ್ರಮಾಣದ ಡೋಸು (Dose)ಗಳನ್ನು ಪೊಟ್ಟಣಗಳಲ್ಲಿ ಸೇರಿಸಿಟ್ಟು ಒಂದೆರಡು ದಿನಗಳಿಗಾಗುವಷ್ಟು ಅಂತಹ ರೋಗಿಗಳಿಗೆ ನೀಡುತ್ತಿದ್ದೆವು. ದಿನದಲ್ಲಿ ಒಂದೆರಡು ಸಾರಿ ಸೇವಿಸುವುದರಲ್ಲೇ ಮೈ ಕೈ ನೋವು ಜ್ವರಗಳೆಲ್ಲಾ ಮಾಯವಾಗಿ ಬಿಡುತ್ತಿದ್ದವಂತೆ. ಮರುದಿನ ಮತ್ತೆ ಅದನ್ನು ಕೇಳಿಕೊಂಡು ಬರುತ್ತಿದ್ದರು. ಆ ಸಮಯದಲ್ಲಿ ಬಹುಪಾಲು ಖಾಸಗಿ ವೈದ್ಯರೂ ಸೇರಿದಂತೆ ಆ ಕಾಯಿಲೆಯಿಂದ ನರಳದವರೇ ಇಲ್ಲವೆಂಬಂತಾಗಿತ್ತು. ಬಹುಶಃ ಅದರಿಂದ ಕಟ್ಟಕಡೆಯಾಗಿ ನರಳಿದವನು ನಾನೇ! ಉಸಿರಿನ ಗಾಳಿಯ ಮೂಲಕ ಹರಡುತ್ತಿದ್ದ ಅದರ ನಿವಾರಣೆಗೆ ನಾನು ಸದಾ ಮುಖವಾಡ (face mask) ಧರಿಸಿಕೊಂಡಿದ್ದರಿಂದ ಅಷ್ಟುಕಾಲ ಬಚಾವಾಗಿರಲು ಸಾಧ್ಯವಾಗಿತ್ತೇನೋ?

## ಕಾಲರ ಕಾಟ

ಗುದ್ದಮ್ಮನ ಜೇನೆಯ ಉಪಟಳ ಕಡಿಮೆಯಾಗುತ್ತಿದ್ದಂತೆಯೇ ಶಿಕಾರಿಪುರ ತಾಲ್ಲೂಕಿನ ಕೆಲವು ಹಳ್ಳಿಗಳಲ್ಲಿ ತೀವ್ರ ರೀತಿಯ ವಾಂತಿ ಬೇಧಿ - ಕಾಲರ- ಯ ಪ್ರಕರಣಗಳು ಪ್ರಕಟವಾದವು. ಹಗಲು ರಾತ್ರಿಗಳ ಪರಿವೆಯೇ ಇಲ್ಲದೆ ರೋಗಿಗಳನ್ನು ಆಸ್ಪತ್ರೆಗೆ ದಾಖಲು ಮಾಡುತ್ತಿದ್ದರು. ತೀವ್ರ ತರಹೆಯ ವಾಂತಿ ಭೇದಿಯಿಂದಾಗಿ ದೇಹದಿಂದ ನೀರು ಮತ್ತು ಲವಣಾಂಶಗಳು ಹೊರ ಹೋಗುತ್ತಿದ್ದು, ರೋಗಿಗಳು ತುಂಬಾ ಸುಸ್ತಾಗುತ್ತಿದ್ದರು. ಬಹಳಷ್ಟು ಪ್ರಕರಣಗಳಲ್ಲಿ 'ನಿರ್ಜಲ ಸ್ಥಿತಿ' (Dehydration) ಉಂಟಾಗಿ, ಮೂತ್ರ ಸ್ರವಿಕೆಯೂ ಸ್ಥಗಿತವಾಗಿ ಬಿಡುತ್ತಿತ್ತು. ಅಂತಹ ಸ್ಥಿತಿ ತಲುಪಿದವರನ್ನು ಆಸ್ಪತ್ರೆಗೆ ದಾಖಲು ಮಾಡಿದರೂ ಬದುಕಿಸಲಾಗುತ್ತಿರಲಿಲ್ಲ. ದೇಹದಿಂದ ನಷ್ಟವಾದ ನೀರು ಮತ್ತು ಲವಣಾಂಶಗಳನ್ನು ಮರುಗೂಡಿಸಲು ಈಗಿನಂತೆ ಬಾಯಿ ಮೂಲಕ ನೀರ್ಗೂಡಿಸುವ ಮದ್ದಿನ ಪೊಟ್ಟಣಗಳ (Oral Rehydratio Solution O.R.S)ಗಳ ಸಂಶೋಧನೆ ಆಗಿರಲಿಲ್ಲ; ಲವಣಾಂಶಭರಿತ ಗ್ಲೂಕೋಸ್ ದ್ರಾವಣವನ್ನು ರಕ್ತನಾಳಗಳ ಮೂಲಕ ನೀಡುವುದು ಸರಿಯಾದ ಮಾರ್ಗವಾದರೂ ಅವು ಈಗಿನಂತೆ ವ್ಯಾಪಕವಾಗಿ ದೊರೆಯುತ್ತಿರಲಿಲ್ಲ; ದೊರೆತರೂ ತುಂಬಾ ದುಬಾರಿಯಾಗಿರುತ್ತಿದ್ದುದರಿಂದ ಬಡಬಗ್ಗರಿಗೆ ಕೊಂಡುಕೊಳ್ಳುವುದು ದುಸ್ತರ ಎನಿಸುತ್ತಿತ್ತು. ಆಗ ನಮ್ಮ ಆಸ್ಪತ್ರೆಯಲ್ಲಿ ಲಭ್ಯವಿರುತ್ತಿದ್ದ ಗ್ಲೂಕೋಸ್ ಟ್ಯೂಬುಗಳನ್ನು (Ampoules) ತ್ರಿಕೋಣಾಕಾರದ ಬಲ್ಬಿ(Bulb)ನಂಥ ಗಾಜಿನ ಬುರುಡೆಯಲ್ಲಿ ಶೇಖರಿಸಿ ರಕ್ತನಾಳಗಳ ಮೂಲಕ ತೊಟ್ಟಿಕ್ಕಿಸುವ ಏರ್ಪಾಡು ಮಾಡುತ್ತಿದ್ದೆವು. ಜೊತೆಗೆ ವಾಂತಿಯನ್ನು ನಿಲ್ಲಿಸಲು ಇಂಜಕ್ಷನ್ ಹಾಗೂ ಕೆಲವು ಮಾತ್ರೆಗಳನ್ನು ಮಾತ್ರ ನೀಡಬಹುದಾಗಿತ್ತು. ಅವೆಷ್ಟು ಪರಿಣಾಮಕಾರಿಯಾಗುತ್ತಿದ್ದ ವೆಂಬುದನ್ನು ಊಹಿಸಲಾಗುತ್ತಿರಲಿಲ್ಲ. ಆದರೂ ಸ್ವಲ್ಪಮಟ್ಟಿಗಾದರೂ ಸಹಾಯ ಮಾಡುವ ಸಲುವಾಗಿ ಹಲವಾರು ಸಾರಿ - ಅಂತಹವರು ಹೆಚ್ಚಾಗಿ ರಾತ್ರಿಯ ಸಮಯ ದಲ್ಲೇ ಬರುತ್ತಿದ್ದರೂ- ಆಸ್ಪತ್ರೆಗೆ ಹೋಗಿ ಲಭ್ಯವಿರುವ ಚಿಕಿತ್ಸೆಯನ್ನು ಅಳವಡಿಸಿ ಬರುತ್ತಿದ್ದೆ; ಆ ತನಕ ಆಸ್ಪತ್ರೆಗೆ ಬಂದು ಅಷ್ಟೊಂದು ಜನ ಸಾಯುತ್ತಿದ್ದುದನ್ನು ನಾನು ನೋಡಿಯೇ ಇರಲಿಲ್ಲ; ನಂತರವೂ ನೋಡಿಲ್ಲ!

ಕಾಲರ ಹರಡುವಿಕೆಯನ್ನು ತಡೆಯಲು ಸೂಕ್ತ ವ್ಯಾಕ್ಸಿನೇಷನ್ ಮಾಡಬೇಕಾಗುತ್ತದೆ. ಆ ಸಮಯದಲ್ಲಿ ಶಿಕಾರಿಪುರದಲ್ಲಿ ಅಂತಹ ಕಾರ್ಯವನ್ನು ಕೈಗೊಳ್ಳಲು ಆರೋಗ್ಯ ಇಲಾಖೆಯ ವೈದ್ಯರಾರೂ ಇರಲಿಲ್ಲ. ಆ ಜವಾಬ್ದಾರಿಯನ್ನೂ ನನ್ನ ಮೇಲೆಯೇ ಹೇರಿದರು. ಆರೋಗ್ಯ ಇಲಾಖೆಯ ಕೆಲವು ಕಾರ್ಯಕರ್ತರನ್ನು ಸೇರಿಸಿಕೊಂಡು, ಆಸ್ಪತ್ರೆಯ ಕೆಲಸ-ಕಾರ್ಯಗಳು ಮುಗಿದ ನಂತರ ನಗರದ ಬೀದಿ ಬೀದಿಗಳಲ್ಲಿ ವ್ಯಾಕ್ಸಿನೇಷನ್ ಕಾರ್ಯಕ್ರಮದಲ್ಲಿ

ಭಾಗಿಯಾಗುತ್ತಿದ್ದೆ. ಕೆಲಸಾರಿ ಪೆಟ್ರೋಮ್ಯಾಕ್ಸ್ ದೀಪ ಹಚ್ಚಿಕೊಂಡು ರಾತ್ರಿಯೂ ವ್ಯಾಕ್ಸಿನೇಷನ್ ಮಾಡ ಬೇಕಾಗುತ್ತಿತ್ತು. ಈ ರೀತಿ ನನ್ನ ಕೆಲಸ ದಿನೇ ದಿನೇ ಹೆಚ್ಚಾಗುತ್ತಿರುವುದನ್ನು ಡಿ.ಎಂ.ಓ. ಅವರಿಗೆ ವರದಿ ಮಾಡಿದೆ. ನನ್ನ ಪರಿಸ್ಥಿತಿಯನ್ನು ಅರ್ಥ ಮಾಡಿಕೊಂಡ ಅವರು ಮೆಗ್ಗಾನ್ ಆಸ್ಪತ್ರೆಯಿಂದ ಡಾ|| ಟಿ. ಚಂದ್ರಶೇಖರ್ ಎಂಬವರನ್ನು ನನ್ನ ಸಹಾಯಕರನ್ನಾಗಿ ನಿಯೋಜಿಸಿದರು; ಮುಂದೆ ಎರಡು ತಿಂಗಳು ಅವರು ನನ್ನ ಜೊತೆ ಇದ್ದು ಸಹಕರಿಸಿದರು, ಹೀಗೆ ಕಾಲರ ಮತ್ತು ಅದಕ್ಕೂ ಹಿಂದೆ ಇನ್‌ಫ್ಲೂಎನ್‌ಝ ಸಾಂಕ್ರಾಮಿಕಗಳ ಸಮಯದಲ್ಲಿ ನಾವು ತಾಲ್ಲೂಕಿನ ಜನರ ಸಂಕಷ್ಟಗಳಲ್ಲಿ ಭಾಗಿಯಾಗಿದ್ದು ಅವರೊಡನೆ ನನ್ನ ಸಂಪರ್ಕ ಬೆಸೆಯಲು ಸಹಕಾರಿಯಾಯಿತು. ಮುಂದೆ ಜನಪ್ರಿಯತೆಗೆ ನಾಂದಿಯಾಯಿತು.

## ಎಕ್ಸರೇ ಎಂಬ ಮಾಯಾ ಲಾಂದ್ರ!

ಶಿಕಾರಿಪುರಕ್ಕೆ ನಾನು ಹೋಗುವ ಮೊದಲೇ ಅಲ್ಲಿಗೆ ಎಕ್ಸ್‌ರೇ ಯಂತ್ರ ತರಿಸುವ ಬಗೆಗೆ ಸರ್ಕಾರದ ಮೂಲಕ ಪ್ರಯತ್ನಗಳು ನಡೆದಿದ್ದವು. ಇನ್ನೊಂದು ವರ್ಷದೊಳಗೇ ಎಕ್ಸ್‌ರೇ ಯಂತ್ರ ಬಂದಿಳಿಯಿತು. ಸರಬರಾಜು ಮಾಡಿದ ಕಂಪನಿಯ ಪ್ರತಿನಿಧಿಯೊಬ್ಬರು ಬಂದು ಅದನ್ನು ಪ್ರತಿಷ್ಠಾಪನೆ ಮಾಡಿದರು. ಅವರಿದ್ದ ೩-೪ ದಿನಗಳಲ್ಲಿ ಅದು ಕಾರ್ಯ ನಿರ್ವಹಿಸುವ ವಿಧಾನವನ್ನು ಪ್ರದರ್ಶಿಸಿ ನನಗೆ ತರಬೇತಿ ನೀಡಿದರು! ಆ ಸಮಯದಲ್ಲಿ ಸ್ಕ್ರೀನ್ ಮಾಡುವುದನ್ನು ಕಲಿತುಕೊಂಡಿದ್ದಲ್ಲದೆ, ಕೆಲವು ಎಕ್ಸ್‌ರೇ ಪಟಗಳನ್ನು ತೆಗೆಯುವುದನ್ನೂ ತಿಳಿದುಕೊಂಡೆ. ಅದೇನಿದ್ದರೂ ಮಕ್ಕಿಕಾ ಮಕ್ಕಿ ಕಾರ್ಯವಾಗಿತ್ತೇ ಹೊರತು, ಅದರ ಪೂರ್ಣ ವಿವರಗಳ ಜ್ಞಾನವಿರಲಿಲ್ಲ. ಆದರೂ ಆ ಊರಿಗೆ ನಾನೊಬ್ಬ ಎಕ್ಸ್‌ರೇ ತಜ್ಞನಾಗಿ ಬಿಟ್ಟೆ!

ಎಕ್ಸ್‌ರೇ ಎಂದರೆ ಅದೊಂದು ಮಾಯಾಲಾಂದ್ರವೆಂಬ ಭಾವನೆ ಜನ ಸಮೂಹದಲ್ಲಿದೆ. ಅದೀಗ ಅವರ ಊರಿಗೆ ಬಂದಿದೆ ಎಂದು ತಿಳಿದಾಕ್ಷಣ ಜನರ ದಂಡು ಬರಲಾರಂಭಿಸಿತು. ಅದರಿಂದ ಪರೀಕ್ಷೆಗೊಳಗಾಗುವ ಅವಶ್ಯಕತೆ ಇರಲಿ ಅಥವಾ ಇಲ್ಲದಿರಲಿ ಪ್ರತಿಯೊಬ್ಬರೂ ಅದರ ಪರದೆಯ ಹಿಂದೆ ನಿಂತುಕೊಳ್ಳುವ ಇಲ್ಲವೇ ಎಕ್ಸರೇ ಫೋಟೋ ತೆಗೆಸಿಕೊಳ್ಳುವ ಅಭಿಲಾಷೆ ತೋರ ತೊಡಗಿತು. ನನ್ನ ಮೇಲೆ ಒತ್ತಾಯ ಬೀರಿಯೋ, ಇಲ್ಲವೆ ಇತರರಿಂದ ಶಿಫಾರಸ್ಸು ಮಾಡಿಸಿಯೋ ಅದರಿಂದ ಪರೀಕ್ಷೆಗೊಳಪಡುವವರ ಸಂಖ್ಯೆ ದಿನೇ ದಿನೇ ಹೆಚ್ಚಾಗತೊಡಗಿತು. ನನ್ನ ಕೆಲಸದ ಒತ್ತಡ ಇನ್ನಷ್ಟು ಜಾಸ್ತಿಯಾಯಿತು. ಸರಳ ಹಾಗೂ ಅತ್ಯವಶ್ಯಕವಾದ ರಕ್ತಮೂತ್ರಗಳ ಪರೀಕ್ಷೆಗಳಿಗೆ ಸೌಲಭ್ಯಗಳಿರದ ತಾಲ್ಲೂಕು ಆಸ್ಪತ್ರೆಗೆ ಎಕ್ಸ್‌ರೇ ಯಂತ್ರದ ಗರಿಮೆ; ಎಂಥಾ ವಿಪರ್ಯಾಸ!

## ಕಾಯಂ ಕೆಲಸ - ಮೊದಲ ಪ್ರಯತ್ನ

ಸಾವಿರದೊಂಬೈನೂರ ಐವತ್ತೇಳರ ಅಂತಿಮ ದಿನಗಳಲ್ಲಿ ವಿಶಾಲ ಮೈಸೂರು ಸಂಸ್ಥಾನದ ಪಬ್ಲಿಕ್ ಸರ್ವಿಸ್ ಕಮೀಷನ್‌ರವರು (ಪ.ಸ.ಕ) ಮೆಡಿಕಲ್ ಪ್ರೊಬೇಷನರ್‌ರನ್ನು ನೇಮಕಾತಿ ಮಾಡಲು ಅರ್ಜಿಗಳನ್ನು ಕೋರಿ ಪ್ರಕಟಣೆ ಹೊರಡಿಸಿದರು. ಆ ಸಮಯದಲ್ಲಿ ಸುಮಾರು ೧೫೦ ಅಸಿಸ್ಟೆಂಟ್ ಸರ್ಜನರುಗಳ ಹುದ್ದೆಗಳು ಖಾಲಿ ಇದ್ದರೂ ಕೇವಲ ೮೦ ಜನರ ಆಯ್ಕೆಗೆ ಅವಕಾಶ ಮಾಡಿಕೊಡಲಾಗಿತ್ತು. ಎಲ್ಲಾ ವಿಧಿ ವಿಧಾನಗಳನ್ನನುಸರಿಸಿ ನಾನೂ ಅರ್ಜಿ ಹಾಕಿದೆ. ಆಯ್ಕೆ ಪ್ರಕ್ರಿಯೆಯು ಸಂದರ್ಶನದ ಕರೆ ಬರಲು ೬-೮ ತಿಂಗಳುಗಳು ಹಿಡಿದವವೆಂಬ ನೆನಪು.

ಆ ಸಮಯದಲ್ಲಿ ಆಯ್ಕೆಯಾಗುವ ಸಂಭವವಿರುವವರ ಪೈಕಿ ನಮ್ಮ ಕಡೆಯವರಾಗಿದ್ದು, ನನಗೆ ಪೈಪೋಟಿಯಾಗುವವರು ೨-೩ ಜನ ಅಭ್ಯರ್ಥಿಗಳಿರುವ ಸಾಧ್ಯತೆ ಕಂಡು ಬಂದಿತು. ಅವರಲ್ಲೊಬ್ಬರು ನನಗಿಂತಲೂ ಒಂದೆರಡು ವರ್ಷಗಳ ಮೊದಲೇ ಮೆಡಿಕಲ್ ಕಾಲೇಜು ಸೇರಿದ್ದು ನಾನು ಕಾಲೇಜಿನಿಂದ ತೇರ್ಗಡೆಯಾಗಿ ಹೊರಬಂದ ಇನ್ನೊಂದು ವರ್ಷದ ನಂತರ ಅಂತಿಮ ಪರೀಕ್ಷೆಯಲ್ಲಿ ತೇರ್ಗಡೆಯಾದವರು. ಮತ್ತೊಬ್ಬರು ನನ್ನ ಜೊತೆಯಲ್ಲೇ ಕಾಲೇಜು ಸೇರಿದವರಾದರೂ ಎರಡನೇ ತರಗತಿ ಮತ್ತು ಅಂತಿಮ ವರ್ಷದ ಪರೀಕ್ಷೆಗಳಲ್ಲಿ ಅನುತ್ತೀರ್ಣ ರಾದವರು. ಎರಡನೇ ತರಗತಿಯಲ್ಲಿ ಒಂದು ಸಾರಿ ತೇರ್ಗಡೆಯಾಗದ್ದನ್ನು ಹೊರತು ಪಡಿಸಿದರೆ ಇನ್ನೆಲ್ಲಾ ಪರೀಕ್ಷೆಗಳನ್ನು ಮೊದಲನೇ ಪ್ರಯತ್ನದಲ್ಲೇ ಮುಗಿಸಿದ್ದೆ. ಇದಕ್ಕಿಂತ ಮೇಲಾಗಿ ಎಂ.ಬಿ.ಬಿ.ಎಸ್., ಪದವಿ ಗಳಿಸಿದ ತಕ್ಷಣ ಹಳ್ಳಿಗಾಡಿನ ಆಸ್ಪತ್ರೆಯೊಂದಕ್ಕೆ ನೇಮಕ ಮಾಡಿದಾಗ ಯಾವುದೇ ತಕರಾರು ಎತ್ತದೆ ಅಲ್ಲಿ ಕಾರ್ಯನಿರತನಾಗಿದ್ದೆ. ಇನ್ನುಳಿದವರಲ್ಲಿ ಒಬ್ಬರನ್ನು ಉತ್ತರ ಕರ್ನಾಟಕದ ತಾಲ್ಲೂಕು ಆಸ್ಪತ್ರೆಗೆ ನೇಮಕ ಮಾಡಿದಾಗ ಆ ಕೆಲಸವನ್ನು ನಿರಾಕರಿಸಿ ಮನೆಯಲ್ಲಿ ಕುಳಿತವರು; ಮತ್ತೊಬ್ಬರು ಜಿಲ್ಲಾ ಆಸ್ಪತ್ರೆಯಲ್ಲಿ ಕೆಲ ಸಮಯ ಕಾರ್ಯ ನಿರ್ವಹಿಸಿ ಅನಂತರ ರಾಜೀನಾಮೆ ಕೊಟ್ಟವರು. ಈ ಎಲ್ಲಾ ಕಾರಣಗಳಿಂದಾಗಿ ನನ್ನ ಆಯ್ಕೆ ಸುಗಮವಾಗಬಹುದೆಂಬ ಅಂದಾಜಿತ್ತು. 'ಮೈಸೂರುಚಲೋ' ಆಂದೋಲನದಲ್ಲಿ ಭಾಗವಹಿಸಿ ಜೈಲು ವಾಸ ಅನುಭವಿ ಸಿದ್ದರೂ, ಯಾವುದೋ ಆದರ್ಶವೆಂಬಂತೆ ಆ ವಿಷಯವನ್ನು ಅರ್ಜಿಯಲ್ಲಿ ನಮೂದಿಸಿರಲಿಲ್ಲ.

ಈ ಹಂತದಲ್ಲಿ ನನ್ನಿಂದಾದ ಒಂದು ಲೋಪವನ್ನು ದಾಖಲಿಸುವುದು ಅಗತ್ಯ. ಮೆಡಿಕಲ್ ವಿದ್ಯಾಭ್ಯಾಸವನ್ನು ಮುಗಿಸುವಷ್ಟರಲ್ಲಿ, ನನ್ನ ಜೀವನದ ದಿಕ್ಕುದೆಸೆಗಳನ್ನು ಬದಲಿಸಲು ಕಾರಣಕರ್ತರಾಗಿದ್ದ ಕಡಿದಾಳ್ ಮಂಜಪ್ಪನವರು ಆಗತಾನೆ ರಚಿತವಾಗಿದ್ದ ವಿಶಾಲ ಮೈಸೂರು ಸಂಸ್ಥಾನದ ಮುಖ್ಯಮಂತ್ರಿಗಳಾಗಿದ್ದರು. ಅವರನ್ನು ಭೇಟಿ ಮಾಡಿ ನನ್ನ ಕೃತಜ್ಞತೆಗಳನ್ನು ಅರ್ಪಿಸುವುದು ನನ್ನ ಆದ್ಯ ಕರ್ತವ್ಯವಾಗಿತ್ತು. ಆ ಸ್ಥಾನದಲ್ಲಿ ಅವರು ಬಹಳ ಬಿಝಿಯಾಗಿರು ತ್ತಾರೆಂತಲೂ ಅವರೊಡನೆ ಭೇಟಿಯ ಅವಕಾಶ ನನ್ನಂಥವರಿಗೆ ಸಿಗುವುದು ದುರ್ಲಭವೆಂದು ಕೆಲವರು ಅಭಿಪ್ರಾಯಪಟ್ಟರು. ಆದರೂ ಒಂದು ಪ್ರಯತ್ನ ಮಾಡಬಹುದಿತ್ತೆನಿಸುತ್ತದೆ. ತೇರ್ಗಡೆಯಾದ ಕೂಡಲೇ ಆಸ್ಪತ್ರೆಯ ತರಬೇತಿ, ನಂತರ ಹಂಗಾಮಿ ಕೆಲಸ ಮುಂತಾದವುಗಳಲ್ಲಿ ನಾನೂ ನಿರತನಾಗಿಬಿಟ್ಟೆ, ಆಗ ಅವರನ್ನು ನೋಡಲಾಗದಿದ್ದುದಕ್ಕೆ ನಂತರ ಪರಿತಾಪ ಪಟ್ಟೆ.*

---

*ಅನುಲೇಖ :

**ಕಡಿದಾಳ್ ಮಂಜಪ್ಪ** ಬೆಂಗಳೂರು, 26-6-90

ನಿಮ್ಮ ತಾರೀಕು 22-6-1990ರ ಪತ್ರ ತಲುಪಿತು. ನನ್ನ ಆತ್ಮಕಥೆ ಹಾಗೂ ನನ್ನ ವ್ಯಕ್ತಿತ್ವದ ಬಗ್ಗೆ ನೀವು ಬರೆದಿರುವ ಮೆಚ್ಚುಗೆಯ ನುಡಿಗಳಿಗಾಗಿ ನಿಮಗೆ ನನ್ನ ಕೃತಜ್ಞತೆಗಳು......

ನಾನು ನಿಮಗೆ ಮಾಡಿದ ಸಹಾಯ ಅತಿ ದೊಡ್ಡದೆಂದು ನಾನು ಭಾವಿಸಿಲ್ಲ. ಮಲೆನಾಡಿನಲ್ಲಿ ಕೆಲವರಿಗೆ ನಿಮಗಿಂತ ಹೆಚ್ಚು ಸಹಾಯ ಮಾಡಿದ್ದೇನೆ. ಅವರಲ್ಲಿ ಹಲವರು ನನ್ನನ್ನು ಮರೆತೇ ಬಿಟ್ಟಿದ್ದಾರೆ. ಎಲ್ಲೋ ಅಲ್ಲಿ ಇಲ್ಲಿ ಕೆಲವರು ನನ್ನ ಉಪಕಾರವನ್ನು ಸ್ಮರಿಸುತ್ತಾರೆ. ಅವರ ಪೈಕಿ ನೀವೂ ಒಬ್ಬರು. ನೀವು ಬರೆದಿರುವ ಡಾ|| ಆಲ್ಬರ್ಟ್ ಶ್ವೆಯಿಟ್ಜರ್ ಅವರ ಜೀವನ ಚರಿತ್ರೆಯನ್ನು ಆರೋಗ್ಯ ಸರಿ ಇದ್ದಾಗ ಕೊಂಚ ಕೊಂಚವಾಗಿ ಓದುತ್ತೇನೆ. ನಿಮಗೆ ಭಗವಂತನು ಆಯುರಾರೋಗ್ಯವನ್ನೂ, ದೀರ್ಘಾಯಸ್ಸನ್ನೂ ಕೊಟ್ಟು ನಿಮ್ಮಿಂದ ಹೆಚ್ಚಿನ ಸೇವೆ ನಡೆಯಲೆಂದು ಹಾರೈಸುತ್ತೇನೆ.

ಇತೀ ಆಶೀರ್ವಾದಗಳು,
(ಸಹಿ) **ಕಡಿದಾಳ್ ಮಂಜಪ್ಪ**

ಪ.ಸ.ಕದ ಸಂದರ್ಶನದ ಸಮಯದಲ್ಲಿ ಬೆಂಗಳೂರಿಗೆ ಹೋದಾಗ ಅವರನ್ನು ಭೇಟಿಯಾದೆ. ಅವರಾಗ ಮುಖ್ಯಮಂತ್ರಿಯಾಗಿರದೆ ಕಂದಾಯ ಇಲಾಖೆಯ ಸಚಿವರಾಗಿದ್ದರು. ನಾನಾಗಲೇ ವೈದ್ಯ ಪದವಿ ಗಳಿಸಿ ಹಂಗಾಮಿ ಕೆಲಸ ನಿರ್ವಹಿಸುತ್ತಿರುವುದನ್ನು ನಿವೇದಿಸಿಕೊಂಡೆ. ನಾನು ಸಾಧಿಸಿದ ಪ್ರಗತಿಯ ಬಗೆಗೆ ಹರ್ಷ ವ್ಯಕ್ತಪಡಿಸಿದರು. ನಾನೀಗ ಮೆಡಿಕಲ್ ಪ್ರೊಬೇಷನರ್ ಹುದ್ದೆಗಾಗಿ ಪ.ಸ.ಕ.ದ ಸಂದರ್ಶನಕ್ಕಾಗಿ ಬಂದಿರುವುದಾಗಿಯೂ, ಆ ದಿಸೆಯಲ್ಲಿ ಸಹಾಯ ಮಾಡಬೇಕೆಂದು ವಿನಂತಿಸಿಕೊಂಡೆ. ಪ.ಸ.ಕ.ದ ಕೆಲವು ಸದಸ್ಯರಿಗೆ ಟೆಲಿಫೋನು ಮಾಡಿ ಶಿಫಾರಸ್ಸು ಮಾಡುವ ಆಶ್ವಾಸನೆ ನೀಡಿದರು. ಅದೇಕೋ ನನ್ನ ಮೇಲೆ ಹಿಂದೆ ಇದ್ದಷ್ಟು ಆಸಕ್ತಿ ಇಲ್ಲದಿರುವುದು ಅಂದಿನ ಮಾತುಕತೆಗಳಲ್ಲಿ ವ್ಯಕ್ತವಾಗುವಂತಿತ್ತು. ನಮ್ಮ ಕಡೆಯ ಅಸೆಂಬ್ಲಿ ಸದಸ್ಯರನ್ನು ಭೇಟಿ ಮಾಡಿ ನನಗೆ ಸಹಾಯ ಮಾಡುವಂತೆ ಕೇಳಿಕೊಂಡೆ. ಅವರೂ ಸಹ ಕೆಲವು ಸದಸ್ಯರಿಗೆ ಶಿಫಾರಸ್ಸು ಮಾಡುವುದಾಗಿ ನನ್ನ ಹೆಸರು ಮತ್ತಿತರ ವಿವರಗಳನ್ನು ಬರೆದುಕೊಂಡರು. ನಾನು ಆಯ್ಕೆಯಾಗುವ ಬಗೆಗೆ ಮೊದಲೇ ನನ್ನಲ್ಲಿ ಒಂದು ರೀತಿಯ ಆತ್ಮವಿಶ್ವಾಸ ಮೂಡಿದ್ದು ಬೇರೆ ಇನ್ನಾರ ಮೇಲೂ ಹೆಚ್ಚಿನ ಪ್ರಭಾವ ಬೀರುವ ಪ್ರಯತ್ನ ಮಾಡಲಿಲ್ಲ.

ಆದರೆ ಸಂದರ್ಶನ ನಡೆಯುವ ಹಿಂದಿನ ಒಂದೆರಡು ದಿನಗಳಲ್ಲಿ ನನಗೆ ಪ್ರಬಲ ಎದುರಾಳಿಯಾಗಬಹುದೆಂಬ ಅಭ್ಯರ್ಥಿಯೊಬ್ಬರು ರಾಜಕೀಯ ಪುಡಾರಿಗಳನ್ನು ಜೊತೆಗೂಡಿಸಿ ಕೊಂಡು ಕಾರುಗಳಲ್ಲಿ ಬಿರುಸಿನಿಂದ ತಿರುಗಾಡುವುದು ನನ್ನ ಕಣ್ಣಿಗೆ ಬಿದ್ದಿದ್ದರೂ ಅದರಿಂದುಂಟಾಗ ಬಹುದಾದ ಅನಾಹುತದ ಬಗೆಗೆ ನನಗೆ ಜ್ಞಾನೋದಯವಾಗಲೇ ಇಲ್ಲ. ಅದಾವುದೋ ಮೊಂಡು ಧೈರ್ಯ ನನ್ನನ್ನಾವರಿಸಿತ್ತು.

ನಿಗದಿತ ದಿನ ಸಂದರ್ಶನ ಜರುಗಿತು. ಸದಸ್ಯರು ಕೇಳಿದ ಪ್ರಶ್ನೆಗಳಿಗೆಲ್ಲಾ ಸಮರ್ಪಕ ಉತ್ತರಗಳನ್ನು ನೀಡಿದೆ. ಪಂಚವಾರ್ಷಿಕ ಯೋಜನೆಯಲ್ಲಿ ಆರೋಗ್ಯ ಇಲಾಖೆಗೆ ನಿಗದಿ ಪಡಿಸಿದ ಹಣಕಾಸಿನ ಮೊತ್ತದ ಬಗೆಗೂ ಸರಿಯಾದ ಉತ್ತರ ನೀಡಿದ ನೆನಪಿದೆ. ಸಂದರ್ಶನ ಮುಗಿದ ದಿನವೇ ಶಿಕಾರಿಪುರಕ್ಕೆ ಹಿಂದಿರುಗಿ ಎಂದಿನಂತೆ ನನ್ನ ಕೆಲಸಕಾರ್ಯಗಳಲ್ಲಿ ಮುಳುಗಿ ಹೋದೆ.

## ಹಂಗಾಮಿ ಕೆಲಸವೂ ಕೈ ತಪ್ಪಿತು!

ಏಪ್ರಿಲ್ ತಿಂಗಳ ೨೬ನೇ ತಾರೀಖು (೧೯೫೮) ಬೆಳಗಿನ ಹನ್ನೊಂದು ಗಂಟೆಯ ಸಮಯಕ್ಕೆ ಎಂದಿನಂತೆ ಮಾಮೂಲು ಟಪಾಲು ಬಂದಿತು; ಅಂತಹ ವಿಶೇಷವೇನೂ ಇರಲಿಲ್ಲ. ಹನ್ನೆರಡು ಗಂಟೆಗೆ ಆಸ್ಪತ್ರೆಯ ಬಾಗಿಲು ಮುಚ್ಚುವ ಸಮಯ; ಪಕ್ಕದಲ್ಲೇ ಇದ್ದ ಅಂಚೆ ಕಛೇರಿ ಯಿಂದ ಅಂಚೆ ಪೇದೆ ಓಡೋಡುತ್ತಾ ಬಂದು ಎಕ್ಸ್‌ಪ್ರೆಸ್ ಕಾಗದವನ್ನು ಕೊಟ್ಟು ಹೋದ. ಡಿ.ಎಂ.ಓ. ಅವರ ಕಛೇರಿಯ ಕಾಗದ ಅದು. ಅದನ್ನು ಬಿಡಿಸಿ ಒಕ್ಕಣೆಯ ಮೇಲೆ ಕಣ್ಣಾಡಿಸಿದೆ. "ಅಸಿಸ್ಟೆಂಟ್ ಸರ್ಜನ್ ಡಾ|| ಚಂದ್ರಪ್ಪಗೌಡರು ಆಸ್ಪತ್ರೆಯ ಲೇಡಿ ಡಾಕ್ಟರಿಗೆ ಚಾರ್ಜ್ ವಹಿಸಿ ವರದಿ ಮಾಡುವುದು" ಎಂಬ ಆದೇಶ ಅದರಲ್ಲಿತ್ತು! ಹಂಗಾಮಿಯಾಗಿ ನೇಮಕ ಮಾಡಿ ಕೊಂಡಿದ್ದ ಕೆಲವು ಅಸಿಸ್ಟೆಂಟ್ ಸರ್ಜನ್‌ರನ್ನು ಪ.ಸ.ಕ.ದವರು ಆಯ್ಕೆ ಮಾಡಿಲ್ಲವಾದ್ದರಿಂದ ಅಂತಹವರನ್ನೆಲ್ಲಾ ಕೆಲಸದಿಂದ ಬಿಡುಗಡೆ ಮಾಡುವುದು, ಎಂಬ ಮೆಡಿಕಲ್ ಇಲಾಖೆಯ ಆದೇಶದ ಉಲ್ಲೇಖ ಅದರಲ್ಲಿತ್ತು.

ನನಗುಂಟಾದ ನಿರಾಶೆಯನ್ನು ಬಹಿರಂಗವಾಗಿ ವ್ಯಕ್ತಪಡಿಸದೇ ಲೇಡಿ ಡಾಕ್ಟರನ್ನು ಕರೆಸಿ ನನ್ನ ಹುದ್ದೆಯ ಚಾರ್ಜನ್ನು ವಿಧಿವಿಧಾನಗಳನ್ನನುಸರಿಸಿ ವಹಿಸಿಕೊಟ್ಟೆ, ಮನೆಗೆ ಬಂದವನೇ

ಪತ್ನಿಯ ಹತ್ತಿರ ವಿಷಯವನ್ನು ತಿಳಿಸಿ, ಊಟದ ಶಾಸ್ತ್ರ ಮುಗಿಸಿದೆ. ಕೂಡಲೇ ಬೆಂಗಳೂರಿಗೆ ಹೋಗುವ ಸಲುವಾಗಿ ಶಿವಮೊಗ್ಗಾಕ್ಕೆ ಬಸ್ಸು ಹತ್ತಿದೆ. ನೇರವಾಗಿ ಮೆಗ್ಗಾನ್ ಆಸ್ಪತ್ರೆಗೆ ಹೋಗಿ ಆದೇಶದ ಬಗೆಗೆ ಸಂಬಂಧಿಸಿದ ಗುಮಾಸ್ತರನ್ನು ವಿಚಾರಿಸಿದೆ ಅಲ್ಲಿ ಕಾರ್ಯನಿರತರಾಗಿದ್ದ ಇನ್ನಿಬ್ಬರು ಅಸಿಸ್ಟೆಂಟ್ ಸರ್ಜನರಿಗೂ ಅಂತಹದೇ ಆದೇಶ ಬಂದಿದ್ದು, ಅವರನ್ನು ಕೆಲಸದಿಂದ ಬಿಡುಗಡೆ ಮಾಡಿರುವುದಾಗಿ ತಿಳಿಸಿದರು; ಹಾಗೂ ಅವರೀಗಾಗಲೇ ಬೆಂಗಳೂರಿಗೆ ಪ್ರಯಾಣ ಮಾಡಿದ್ದಾರೆಂಬ ವಿಷಯವೂ ತಿಳಿಯಿತು. ಮಾವನವರ ಮನೆಗೂ ಹೋಗಿ, ವಿಷಯ ತಿಳಿಸಿ, ರಾತ್ರಿ ರೈಲಿಗೆ ಬೆಂಗಳೂರಿಗೆ ಹೊರಟೆ.

ಮರುದಿನ ಬೆಳಿಗ್ಗೆ ವಿಧಾನಸೌಧದ ಹತ್ತಿರ ಹೋದಾಗ ಶಿವಮೊಗ್ಗಾದಿಂದ ಬಂದಿದ್ದ ಡಾ|| ಎ. ನಾರಾಯಣಪ್ಪ ಮತ್ತು ಡಾ|| ಎಚ್. ಬಿ. ದೊರೆಸ್ವಾಮಿ ಸಿಕ್ಕಿದರು. ಮೊದಲಿಗೆ ಆರೋಗ್ಯ ಮಂತ್ರಿಗಳನ್ನು ನೋಡಿ ನಮ್ಮ ಅಹವಾಲನ್ನು ಹೇಳಿಕೊಳ್ಳುವ ಬಗ್ಗೆ ಚರ್ಚಿಸಿದರೂ ಅಂತಿಮವಾಗಿ ನಮ್ಮ ಕಡೆಯ ಮಂತ್ರಿಗಳಾದ ಕಡಿದಾಳ್ ಮಂಜಪ್ಪನವರನ್ನು ಈ ಬಗೆಗೆ ಭೇಟಿಯಾಗುವುದು ಸೂಕ್ತವೆಂದು ತೀರ್ಮಾನಿಸಿದೆವು. ಮಧ್ಯಾಹ್ನದ ಹೊತ್ತಿಗೆ ಅವರನ್ನು ಭೇಟಿಯಾಗುವ ಅವಕಾಶ ದೊರೆಯಿತು. ನಮ್ಮ ಪರಿಸ್ಥಿತಿಯನ್ನು ಅವರಿಗೆ ವಿವರಿಸಿದೆವು. ನಾವು ಕೆಲಸ ಮಾಡುತ್ತಿದ್ದ ಜಾಗಗಳಿಗೆ ಬದಲಾಗಿ ಬೇರೆ ಯಾರನ್ನೂ ನೇಮಿಸದಿದ್ದಾಗ ನಮ್ಮನ್ನು ತೆಗೆದು ಹಾಕುವುದರ ಮರ್ಮವೇನೆಂಬುದು ಅರ್ಥವಾಗದೇ ನಮ್ಮನ್ನೇ ತರಾಟೆಗೆ ತೆಗೆದುಕೊಳ್ಳುವ ಧಾಟಿಯಲ್ಲಿ ಮಾತಾಡ ತೊಡಗಿದರು. ಆದರೂ ಮರುದಿನ ಬೆಳಿಗ್ಗೆ ಅವರ ಮನೆಗೆ ಬಂದರೆ ಈ ಬಗೆಗೆ ವಿವರವಾಗಿ ಚರ್ಚಿಸಬಹುದೆಂದರು.

ಮರುದಿನ ಬೆಳಿಗ್ಗೆ ಅವರ ಮನೆಗೆ ಹೋದೆವು; ಮನೆ ಮುಂದಿನ ಕೈತೋಟದಲ್ಲಿ ತಿರುಗಾಡುತ್ತಿದ್ದರು. ನಾವು ಮತ್ತಷ್ಟು ವಿವರಗಳನ್ನು ಒದಗಿಸಿದೆವು. ರಾಜ್ಯದೆಲ್ಲೆಡೆ ವೈದ್ಯರ ಕೊರತೆ ಇರುವಾಗ ನಮ್ಮನ್ನು ಕೆಲಸದಿಂದ ತೆಗೆದು ಹಾಕುವುದರ ಬಗಗೆ ಮೆಡಿಕಲ್ ಇಲಾಖೆಯವರನ್ನು ದೂರಿ ಮಾತಾಡಿದರು. ಅಲ್ಲದೆ ೧೧ ಗಂಟೆ ಸಮಯಕ್ಕೆ ವಿಧಾನಸೌಧದ ಅವರ ಕಚೇರಿಯಲ್ಲಿ ಮತ್ತೆ ಭೇಟಿಯಾಗುವಂತೆ ಹೇಳಿದರು. ಅವರ ಆಪ್ತ ಕಾರ್ಯದರ್ಶಿಯ ಮೂಲಕ ನಮ್ಮ ಸಮಸ್ಯೆಯನ್ನು ಆರೋಗ್ಯಮಂತ್ರಿಗಳ ಗಮನಕ್ಕೆ ತರುವುದಾಗಿ ಹೇಳಿ ಬೀಳ್ಕೊಟ್ಟರು. ಹಾಗೆಯೇ ಮಾಡಿದೆವು. ಅವರ ಆಪ್ತ ಕಾರ್ಯದರ್ಶಿಯ ಹತ್ತಿರ ನಮ್ಮ ಸಮಸ್ಯೆಯ ಬಗೆಗೆ ವಿವರವಾದ ಟಿಪ್ಪಣಿಯನ್ನು ಬರೆಸಿ ಆರೋಗ್ಯ ಮಂತ್ರಿಗಳಿಗೆ ಕಳುಹಿಸುವ ಏರ್ಪಾಡು ಮಾಡಿದರು. ಹಾಗೂ ಮರುದಿನ ಅದೇ ಸಮಯದಲ್ಲಿ ಬಂದರೆ ಏನಾಗುತ್ತದೆಂಬುದನ್ನು ತಿಳಿಸುವುದಾಗಿ ಹೇಳಿದರು.

ಮತ್ತೆ ಮರುದಿನವೂ ವಿಧಾನಸೌಧದ ಬಳಿಗೆ ಹೋದೆವು. ಅಲ್ಲಿ ನನ್ನ ಹಳೆಯ ಸ್ನೇಹಿತ ಪಿ. ಎಂ. ಶ್ರೀನಿವಾಸ ಎದುರಾದ. ಅವನಾಗ ವಿದ್ಯಾಭ್ಯಾಸದ ಹವ್ಯಾಸಗಳನ್ನು ಕೈಬಿಟ್ಟು ರಾಜಕೀಯ ಪ್ರವೇಶ ಮಾಡಿದ್ದ. ಆ ಸಮಯದಲ್ಲಿ ತೀರ್ಥಹಳ್ಳಿ ತಾಲ್ಲೂಕು ಕಾಂಗ್ರೆಸ್ ಕಮಿಟಿಯ ಕಾರ್ಯದರ್ಶಿಯೂ ಆಗಿದ್ದನೆನಿಸುತ್ತದೆ. ನಮ್ಮ ಸಮಸ್ಯೆಯನ್ನು ಕೇಳಿದವನೆ ನಕ್ಕುಬಿಟ್ಟ. ಇಂತಹ ಸಮಸ್ಯೆಗಳಿಗೆ ನಮ್ಮ ಮಂತ್ರಿಗಳನ್ನು ನೋಡುವುದರಿಂದ ಏನೂ ಆಗುವುದಿಲ್ಲವೆಂದು ಹೇಳಿ ನೇರವಾಗಿ ಆರೋಗ್ಯ ಸಚಿವರ ಕಛೇರಿಗೆ ನಮ್ಮನ್ನು ಕರೆದುಕೊಂಡು ಹೋದ. ಅವನ ಜೊತೆಯಲ್ಲಿ ಮಂತ್ರಿಗಳ ಕೊಠಡಿಗೆ ಹೋದೆವು ಮತ್ತು ನಮ್ಮ ಸಮಸ್ಯೆಯನ್ನು ವಿವರಿಸಿದೆವು. ಸ್ವತಃ ವೈದ್ಯರೂ ಆಗಿದ್ದ ದಕ್ಷಿಣ ಕನ್ನಡ ಜಿಲ್ಲೆಯ, ಡಾ|| ಕೆ. ಕೆ. ಹೆಗ್ಗಡೆಯವರಿಗೆ ಸಿಟ್ಟು ಉಕ್ಕೇರಿ ಬಂದಂತಾಯಿತು. ಕೂಡಲೇ ವೈದ್ಯ ಇಲಾಖೆಯ ನಿರ್ದೇಶಕರಿಗೆ ಟೆಲಿಫೋನಿನಲ್ಲಿ ಗದರಿಸುವ

ಧಾಟಿಯಲ್ಲೇ ಮಾತಾಡತೊಡಗಿದರು; ಹಾಗೂ ನಾವು ಅವರನ್ನು ತಕ್ಷಣ ಭೇಟಿಯಾಗುವಂತೆ ಹೇಳಿದರು. ಕಚೇರಿಯಿಂದ ಹೊರಡುವುದದರಲ್ಲಿದ್ದ ನಿರ್ದೇಶಕರು ಆಡಳಿತಾಧಿಕಾರಿಯನ್ನು ಭೇಟಿಯಾಗಲು ಸೂಚಿಸಿದರು. ಆಡಳಿತಾಧಿಕಾರಿಯವರಿಗೆ ಇಷ್ಟರಲ್ಲೇ ಜ್ಞಾನೋದಯ ವಾದಂತಿತ್ತು. ನಮ್ಮನ್ನು ಮುಂದಿನ ಸಾರಿ ಪ.ಸ.ಕ.ದವರ ಆಯ್ಕೆಯವರೆಗೂ ಮುಂದುವರಿಸ ಬೇಕೆಂಬ ಹಿಂದಿನ ಆದೇಶವಿದ್ದುದರಿಂದ ಆಯ್ಕೆಯಾಗದ ನಮ್ಮಂಥ ಕೆಲವರನ್ನು ಕೆಲಸದಿಂದ ವಜಾ ಮಾಡಿದ್ದರಂತೆ. ಆದರೆ ನಮ್ಮ ಜಾಗಗಳಿಗೆ ಬದಲೀ ವ್ಯವಸ್ಥೆ ಮಾಡದೇ ಏಕಾಏಕಿ ಬಿಡುಗಡೆ ಮಾಡಿದ್ದು ಸರಿಯಲ್ಲವೆಂಬ ಅರಿವುಂಟಾಗಿತ್ತು. ನಾವು ಬೆಂಗಳೂರಿಗೆ ಬರುವಷ್ಟರಲ್ಲೇ ನಮ್ಮನ್ನೆಲ್ಲಾ ಮತ್ತೆ ಅದೇ ಜಾಗಗಳಲ್ಲಿ ಮುಂದುವರಿಸುವ ಆದೇಶ ಹೊರಡಿಸಿದ್ದರು! ಅವು ತಲುಪುವುದರೊಳಗೆ ಇಷ್ಟೆಲ್ಲಾ ಅವಾಂತರಗಳು ಆಗಿ ಹೋಗಿದ್ದವು.

## ಅಭಿವೃದ್ಧಿ ಕಾರ್ಯಗಳು

ಈ ಹಂತದಲ್ಲಿ ಅದೇ ಮೊದಲಬಾರಿಗೆ ಸರ್ಕಾರದಿಂದ ಆಸ್ಪತ್ರೆಗೆ ಸಂದರ್ಶಕ ಸಮಿತಿ (Board of Visitors)ಯ ನೇಮಕವಾಯಿತು. ವಿಧಾನ ಪರಿಷತ್ತಿನ ಸದಸ್ಯರಾಗಿದ್ದ ಕೆ. ವಿ. ನರಸಪ್ಪನವರು ಅಧ್ಯಕ್ಷರಾಗಿ ನೇಮಕವಾದರು. ಪುರಸಭಾಧ್ಯಕ್ಷರು, ಉಪಾಧ್ಯಕ್ಷರು, ಕಾಂಗ್ರೆಸ್ ಕಮಿಟಿಯ ಅಧ್ಯಕ್ಷರನ್ನೊಳಗೊಂಡಂತೆ ಸಮಾಜದ ಹಲವು ಪ್ರಮುಖರನ್ನು ಅದು ಒಳಗೊಂಡಿತ್ತು. ಮುಂದೆ ತಿಂಗಳಿಗೊಂದಾವರ್ತಿ ಸಮಿತಿಯ ಸಭೆಗಳನ್ನು ಏರ್ಪಡಿಸುತ್ತಿದ್ದೆ. ನಗರಗಳ ಹಿರಿಯ ಆಸ್ಪತ್ರೆಯ ಸಂದರ್ಶಕ ಸಮಿತಿಗಳಂತೆಯೇ ಇದೂ ಕಾರ್ಯ ನಿರ್ವಹಿಸುತ್ತಿತ್ತು. ಪ್ರತಿ ಸಭೆಗಳಲ್ಲೂ ರೋಗಿಗಳ ಕಷ್ಟಸುಖ, ಅನಾನುಕೂಲಗಳ ಬಗೆಗೆ ಚರ್ಚೆಗಳಾಗುತ್ತಿದ್ದವು. ಅವರು ವಾರ್ಡುಗಳಿಗೆ ಹೋಗಿ ರೋಗಿಗಳನ್ನು ವಿಚಾರಿಸುವಾಗ ನಾನಾಗಲೀ, ಆಸ್ಪತ್ರೆಯ ಇತರ ಸಿಬ್ಬಂದಿಗಳಾಗಲೀ ಹಿಂಬಾಲಿಸಬಾರದೆಂಬ ವಾದವನ್ನು ಮಾಡುತ್ತಿದ್ದವರೂ ಇದ್ದರು; ಹಾಗೂ ಸಂದರ್ಶಕ ಸಮಿತಿಯ ಕಾರ್ಯ ಕಲಾಪಗಳನ್ನು ವೈದ್ಯಾಧಿಕಾರಿ ತಯಾರಿಸಿ ಕಳುಹಿಸುವ ಬದಲು ಅವರೇ ತಯಾರಿಸಿ ಇಲಾಖೆಗೆ ಕಳುಹಿಸಬಾರದೇಕೆಂದು ವಾದಿಸುವವರೂ ಇದ್ದರು. ಅಂತಹ ಸಲಹೆಗಳಿಗೆ ನಾನು ವಿರೋಧ ವ್ಯಕ್ತಪಡಿಸಲಿಲ್ಲ. ಕೆಲಸಾರಿ ಅವರೇ ವಾರ್ಡುಗಳಿಗೆ ಭೇಟಿ ಮಾಡಿ ಬಂದಾಗ ಯಾರಿಂದಲೂ ದೂರುಗಳು ಬಂದಿಲ್ಲವೆಂದು ಅಚ್ಚರಿ ವ್ಯಕ್ತಪಡಿಸುತ್ತಿದ್ದರು. ವರದಿಯನ್ನು ಅವರೇ ನೇರವಾಗಿ ಕಳುಹಿಸುವುದಕ್ಕೆ ನಿಯಮಗಳಲ್ಲಿ ಅವಕಾಶವಿಲ್ಲವೆಂದು ಅಧ್ಯಕ್ಷರೇ ತಳ್ಳಿ ಹಾಕಿದರು. ಮುಂದೆ ನನ್ನ ಸೇವಾ ಅವಧಿಯಲ್ಲಿ ಹಲವು ಆಸ್ಪತ್ರೆಗಳ ಸಂದರ್ಶಕ ಸಮಿತಿಗಳ ಸಭೆಗಳು ಕಾರ್ಯನಿರ್ವಹಿಸುವ ಪರಿಯನ್ನು ನೋಡುವ ಅವಕಾಶ ಗಳಿದ್ದವು. ಆದರೆ ನಾನು ಎದುರಿಸಿದ ಮೊದಲ ಸಮಿತಿಯ ಸದಸ್ಯರಷ್ಟು ಹುಮ್ಮಸ್ಸು ಮತ್ತು ಕಾಳಜಿಯಿಂದ ಭಾಗಿಯಾಗುತ್ತಿದ್ದವರನ್ನು ನೋಡಲಾಗಲಿಲ್ಲ!

ಮೊದಲ ಸಭೆಯಲ್ಲೇ ರೋಗಿಗಳಿಗೆ ಹೋಟೇಲಿನಿಂದ ಊಟ ಒದಗಿಸುವ ಪದ್ಧತಿಯ ಬದಲಿಗೆ ಇತರ ಆಸ್ಪತ್ರೆಗಳಂತೆ ಗುತ್ತಿಗೆದಾರರ ಮೂಲಕ ಆಹಾರ ಸರಬರಾಜು ಮಾಡಿಸುವಂತೆ ಠರಾವು ಮಾಡಿದರು. ಅಧ್ಯಕ್ಷರು ಮತ್ತು ಕೆಲವು ಸದಸ್ಯರು ಇಲಾಖಾ ಮಟ್ಟದಲ್ಲಿ ಪ್ರಭಾವ ಬೀರಿ ಆ ದಿಸೆಯಲ್ಲಿ ಶೀಘ್ರಗತಿಯಲ್ಲಿ ಆದೇಶ ಬರುವಂತೆ ಮಾಡಿದರು.

ಒಂದೆರಡು ತಿಂಗಳಲ್ಲೇ ಡಿ.ಎಂ.ಓ. ಅವರು ಟೆಂಡರು ಕರೆದು; ಶಿವಮೊಗ್ಗಾದಿಂದ ಸಂಗಪ್ಪ ಎಂಬವರು ನಮ್ಮ ಆಸ್ಪತ್ರೆಯ ಆಹಾರ ಸರಬರಾಜಿನ ಗುತ್ತಿಗೆದಾರರಾಗಿ ಬಂದರು.

ಮೊದಲೇ ನಿರ್ಮಾಣವಾದ ಪಾಕಶಾಲೆಯ ಸಮುಚ್ಚಯವಿದ್ದುದರಿಂದ ಮುಂದಿನ ಕಾರ್ಯಗಳೆಲ್ಲಾ ಸುಗಮವಾದವು. ಗುತ್ತಿಗೆದಾರರು ಎರಡು ಸಿಂಧೀ ಹಸುಗಳನ್ನು ತರಿಸಿದ್ದರು. ಬಹುಶಃ ಅದೇ ಮೊದಲ ಬಾರಿಗೆ ಅಂತಹ ಜಾತಿಹಸುಗಳು ಶಿಕಾರಿಪುರಕ್ಕೆ ಬಂದದ್ದು ಬಹುಜನರ ಆಕರ್ಷಣೆಯ ಕೇಂದ್ರಗಳಾದವು. ಹೀಗೆ ವ್ಯವಸ್ಥಿತ ರೀತಿಯಲ್ಲಿ ಒಳ್ಳೆಯ ಆಹಾರ ಸರಬರಾಜು ಸಾರ್ವಜನಿಕರ ಮೆಚ್ಚುಗೆ ಗಳಿಸಿತ್ತಲ್ಲದೆ, ನನಗೂ ಸಂತೃಪ್ತಿಯುಂಟು ಮಾಡಿತು.

ಹೀಗೆ ಒಂದೊಂದಾಗಿ ಲಭ್ಯವಾಗುತ್ತಿದ್ದ ಸೌಲಭ್ಯಗಳು, ಎರಡು ಸಾಂಕ್ರಾಮಿಕ ಪಿಡುಗುಗಳ ಸಮಯದಲ್ಲಿ ಆಸ್ಪತ್ರೆಯವರು ಜನರಿಗೆ ಸ್ಪಂದಿಸಿದ ರೀತಿ ನೀತಿಗಳಿಂದ, ಒಳರೋಗಿಗಳಾಗಿ ದಾಖಲಾಗುತ್ತಿದ್ದವರ ಪ್ರಮಾಣ ಹೆಚ್ಚಾಗತೊಡಗಿತು; ಅದಕ್ಕಿಂತ ಹೊರರೋಗಿಗಳ ಸಂಖ್ಯೆ ದಿನಕ್ಕೆ ೧೦೦-೧೫೦ರಷ್ಟಿದ್ದದು ೩೫೦-೪೦೦ರ ವರೆಗೂ ಮುಟ್ಟುವಂತಾಯಿತು. ಕೆಲಸದ ಒತ್ತಡದಿಂದ ಕೆಲಸಾರಿ ಮಧ್ಯಾಹ್ನದ ಊಟಕ್ಕೆ ಮನೆಗೆ ಹೋಗುವುದಕ್ಕೆ ಆಗುತ್ತಿರಲಿಲ್ಲ. ಇವೆಲ್ಲದರ ಜೊತೆಗೆ ಖಾಸಗಿ ರೋಗಿಗಳನ್ನು ನೋಡಲು ಕರೆಗಳೂ ಬರುತ್ತಿದ್ದುದುಂಟು. ಬೆಳಿಗ್ಗೆ ಆಸ್ಪತ್ರೆಗೆ ಹೋಗುವ ಮೊದಲೇ ಬೈಸಿಕಲ್‌ನಲ್ಲಿ ಕೆಲವರ ಮನೆಗೆ ಹೋಗಿ ಚಿಕಿತ್ಸೆ ಮಾಡಿ ಬರುತ್ತಿದ್ದೆ. (ಮೆಡಿಕಲ್ ಕಾಲೇಜಿನ ನಾಲ್ಕನೆ ತರಗತಿಯಲ್ಲಿದ್ದ ಸಮಯದಲ್ಲಿ ವಿದ್ಯಾರ್ಥಿ ನಿಲಯದ ಕೊಠಡಿಯ ಸಹಪಾಠಿಯ ನೆರವಿನಿಂದ ಬೈಸಿಕಲ್ ಸವಾರಿಯ ತರಬೇತಿ ಪಡೆದುಕೊಂಡಿದ್ದೆ. ಹಾಗೂ ಶಿಕಾರಿಪುರಕ್ಕೆ ಬಂದ ಕೆಲವೇ ತಿಂಗಳಲ್ಲಿ ಬೈಸಿಕಲ್ ಒಂದನ್ನು ಖರೀದಿಸಿಕೊಂಡಿದ್ದೆ!) ಡಿ.ಎಂ.ಓ. ಅವರ ಸಲಹೆಯಂತೆ ಆಸ್ಪತ್ರೆಯಲ್ಲಿ ಖಾಸಗಿ ಇಂಜಕ್ಷನ್ ನೀಡುವ ಪದ್ಧತಿಯನ್ನು ನಿಲ್ಲಿಸಿದ್ದೆನಾದರೂ ಮ್ಯಾಂಗನೀಸ್ ಗಣಿಯ ಕಾರ್ಮಿಕರು ಮತ್ತು ಹಳ್ಳಿಗಾಡಿನ ಪ್ರಮುಖರು ಕಾಗದ ಬರೆದು ಕಳುಹಿಸಿದಾಗ ಅವನ್ನು ನಿರಾಕರಿಸಲಾಗುತ್ತಿರಲಿಲ್ಲ. ಇತರರಿಗೆ ಚೀಟಿ ಬರೆದು ಕೊಟ್ಟು ಅಂಗಡಿಗಳಿಂದಲೇ ತರಿಸಿ ಕೊಡುತ್ತಿದ್ದೆ.



ಶಿಕಾರಿಪುರದ ಅಧಿಕಾರಿ ಮಿತ್ರರೊಂದಿಗೆ

ಬಹುಪಾಲು ಸಮಯ ಆಸ್ಪತ್ರೆಯ ಕೆಲಸಕಾರ್ಯಗಳಲ್ಲೇ ಮಗ್ನನಾಗಿರುತ್ತಿದ್ದ ನನಗೆ ಮನರಂಜನೆಯ ಅವಕಾಶಗಳೇ ಇರುತ್ತಿರಲಿಲ್ಲ. ಆಸ್ಪತ್ರೆಯ ಆಜುಬಾಜಿನಲ್ಲೇ ಕಛೇರಿಗಳಿದ್ದ ಆಸಿಸ್ಟೆಂಟ್ ಇಂಜಿನಿಯರ್, ಪೋಸ್ಟ್‌ಮಾಸ್ಟರ್, ರೇಂಜ್ ಫಾರೆಸ್ಟ್ ಆಫೀಸರ್ ಮುಂತಾದವರನ್ನು ಕೆಲಸಾರಿ ಆಸ್ಪತ್ರೆಯಿಂದ ಮನೆಗೆ ತೆರಳುವಾಗ ಭೇಟಿ ಮಾಡುತ್ತಿದ್ದೆ. ಒಂದೊಂದು ಸಾರಿ ಪೇಟೆ ಬೀದಿಯಲ್ಲಿ ನಡೆದುಕೊಂಡು ಹೋಗಿ, ಹೋಟೇಲ್ ಒಂದರಲ್ಲಿ ಕಾಫಿ ಹೀರುತ್ತಾ ಹರಟೆ

ಹೊಡೆಯುತ್ತಿದ್ದೆವು. ಮತ್ತೆ ಕೆಲ ಸಮಯ ಅಲ್ಲಿ ಇದ್ದ ಒಂದೇ ಸಿನೆಮಾ ಥಿಯೇಟರ್‌ನಲ್ಲಿ ಸ್ವಲ್ಪ ಹೊತ್ತು ಕುಳಿತು ಸಿನೆಮಾ ನೋಡುತ್ತಿದ್ದುದೂ ಉಂಟು. ಬಾಲ್ಕನಿಯಲ್ಲಿ ಆಸನಗಳ ವ್ಯವಸ್ಥೆ ಇರದಿದ್ದರೂ, ನಾವು ಹೋದಾಗಲೆಲ್ಲಾ ಮಾಲೀಕರೇ ಕುರ್ಚಿಗಳನ್ನು ಹಾಕಿಸಿ, ಕಾಫಿ ತಿಂಡಿ ತರಿಸಿ ಉಪಚರಿಸುತ್ತಿದ್ದರು. ಆದರೆ ನಾನೆಂದೂ ಬಹಳ ಹೊತ್ತು ಅಲ್ಲಿ ಕುಳಿತು ಸಿನೆಮಾ ನೋಡಲು ಸಾಧ್ಯವಾಗುತ್ತಿರಲಿಲ್ಲ. ಪಾನನಿಷೇಧದ ಕಾಲ ಅದಾಗಿದ್ದು ಪೋಲೀಸರು ಕುಡಿದವರನ್ನು ಹೊತ್ತು ಗೊತ್ತಿಲ್ಲದೆ ಕರೆದು ತರುತ್ತಿದ್ದರು, ಅವರು ಬಂದಾಗ ಮನೆಗೋ, ಆಸ್ಪತ್ರೆಗೋ ಹಿಂದಿರುಗಿ ನನ್ನ ಕರ್ತವ್ಯ ನಿರ್ವಹಿಸಬೇಕಾಗುತ್ತಿತ್ತು.

ಆ ಸಮಯದಲ್ಲಿ ನನ್ನನ್ನು ಬಹಳ ಆದರಿಸುತ್ತಿದ್ದ ಮತ್ತೊಬ್ಬರೆಂದರೆ ತಾಲ್ಲೂಕಿನ ಅಮಲ್ದಾರ್ ಜಹಿರುದ್ದೀನ್. ನಡುವಯಸ್ಸಿನ ಅವರು ಕಲೆ, ಸಾಹಿತ್ಯ, ನಾಟಕಗಳಲ್ಲಿ ಆಸಕ್ತಿ ಹೊಂದಿದವರು. ಮೊದಲು ಒಬ್ಬಂಟಿಯಾಗಿದ್ದ ನನ್ನನ್ನು ಕೆಲವು ಭಾನುವಾರಗಳಲ್ಲಿ ತಮ್ಮ ಬಂಗಲೆಗೆ ಆಹ್ವಾನಿಸಿ ವಿಶೇಷ ಭೋಜನ ಮಾಡಿಸುತ್ತಿದ್ದರು. ತಾಲ್ಲೂಕಿನಲ್ಲಿ ಎಲ್ಲೇ ನಾಟಕಗಳು ಜರುಗುತ್ತಿದ್ದರೂ, ಅವರಿಗೆ ಆಹ್ವಾನವಿರುತ್ತಿತ್ತು. ಹಾಗೆ ರಾತ್ರಿ ನಾಟಕಗಳಿಗೆ ಹೋಗುವಾಗ ನನ್ನನ್ನೂ ಒತ್ತಾಯಿಸಿ ಕರೆದುಕೊಂಡು ಹೋಗುತ್ತಿದ್ದರು. ಹೆಸರಾಂತ ನಾಟಕಕಾರ ಏಣಗಿ ಬಾಳಪ್ಪನವರ "ಜಗಜ್ಯೋತಿ ಬಸವೇಶ್ವರ" ಮುಂತಾದ ಹಲವಾರು ನಾಟಕಗಳನ್ನು ನೋಡುವ ಅವಕಾಶ ಅಂದು ದೊರಕಿತ್ತು.

## ಪ್ರಸೂತಿ ತಜ್ಞನೂ ಆದೆ!

ಅಮಲ್ದಾರರ ಮನೆಯಲ್ಲಿ ಒಂದು ಭಾನುವಾರ ಭೋಜನದ ನಂತರ ಹೊರಗಿನ ಪಡಸಾಲೆಯಲ್ಲಿ ಲೋಕಾಭಿರಾಮವಾಗಿ ಮಾತಾಡುತ್ತಾ ಕುಳಿತಿದ್ದೆವು. ಮಾತಿನ ನಡುವೆ ಅಮಲ್ದಾರರು, ಅವರ ಪತ್ನಿ ೬-೭ ತಿಂಗಳ ಗರ್ಭಿಣಿಯಾಗಿರುವುದಾಗಿಯೂ ಈ ಸಾರಿ ಅವರ ಹೆರಿಗೆಯನ್ನು ನಾನೇ ಮಾಡಿಸಬೇಕೆಂದೂ ನಿರಾಂತಕವಾಗಿ ಪ್ರಸ್ತಾಪಿಸಿದರು. ಆಶ್ಚರ್ಯಚಕಿತನಾಗಿ ಅವರನ್ನು ದಿಟ್ಟಿಸಿ ನೋಡಲಾರಂಭಿಸಿದೆ. ಆ ತನಕ ಕಾಲೇಜಿನಲ್ಲಿದ್ದ ಸಮಯ ಕೆಲವು ಹೆರಿಗೆಗಳಾಗುತ್ತಿದ್ದುದನ್ನು ವೀಕ್ಷಿಸಿದ್ದನ್ನು ಬಿಟ್ಟರೆ ನಾನಾಗಿಯೇ ಖುದ್ದು ಹೆರಿಗೆ ಮಾಡಿಸಿದ ಅನುಭವವಿರಲಿಲ್ಲ. ನನ್ನ ಪರಿಸ್ಥಿತಿಯನ್ನು ವಿವರಿಸಿ, ಆಸ್ಪತ್ರೆಯ ಲೇಡಿ ಡಾಕ್ಟರರಿಂದ ಅವರ ಪತ್ನಿಯನ್ನು ಪರೀಕ್ಷೆ ಮಾಡಿಸೋಣ, ನಂತರ ಹೆರಿಗೆ ಸಮಯದಲ್ಲಿ ಆಸ್ಪತ್ರೆಗೆ ಸೇರಿಸಿದರೆ ಲೇಡಿ ಡಾಕ್ಟರು ಹೆರಿಗೆ ಮಾಡಿಸುತ್ತಾರೆ ಎಂದು ಹೇಳಿದೆ. ಜಹಿರುದ್ದೀನ್ ಅವರು ನಡುವೆ ನನ್ನನ್ನು ತಡೆದು, ಹಿಂದಿನ ಸಾರಿ ನಮ್ಮ ಆಸ್ಪತ್ರೆಯಲ್ಲಿ ಅವರ ಹೆಂಡತಿಗಾದ ಅನುಭವದಿಂದ ಈ ಸಾರಿ ಅವರಿಂದ ಹೆರಿಗೆ ಮಾಡಿಸಿಕೊಳ್ಳಲು ಇಷ್ಟಪಡುತ್ತಿಲ್ಲವೆಂದು ಹೇಳಿದರು. ಬಾಗಿಲ ಪರದೆಯ ಹಿಂದೆ ನಮ್ಮ ಸಂಭಾಷಣೆಯನ್ನು ಕೇಳಿಸಿಕೊಳ್ಳುತ್ತಿದ್ದ ಬೇಗಂರು "ನಕ್ಕೋಸಾಬ್. ಈ ಸಾರಿ ಹೆರಿಗೆ ತುಮಾರಾ ಹಾಥ್‌ಮೇನೆ ಆಗಬೇಕು. ನನ್ನ ಜೀವ ಹೋಗುವುದಾದರೂ ಅವರ ಹತ್ತಿರ ಹೋಗಾಕಿಲ್ಲ ಸಾಬ್" ಎಂದು ಖಡಾಖಂಡಿತವಾಗಿ ಹೇಳಿಬಿಟ್ಟರು. ಹೆರಿಗೆ ಮಾಡಿಸುವ ವಿಚಾರದಲ್ಲಿ ನನ್ನ ಅನುಭವದ ಕೊರತೆಯನ್ನು ಹೇಳಿ, ಈ ಸಾರಿ ನಾನೇ ಮುತುವರ್ಜಿ ವಹಿಸಿ ಲೇಡಿ ಡಾಕ್ಟರಿಂದ ಮಾಡಿಸುವುದಾಗಿ ಹೇಳಿದರೂ ಅವರದನ್ನು ಕೇಳುವ ಸ್ಥಿತಿಯಲ್ಲಿರಲಿಲ್ಲ. ಇನ್ನೇನು ಹೆರಿಗೆ ಸಮಯ ಬಂದಾಗ ನೋಡಿಕೊಂಡರಾಯಿತೆಂದು ಭಾರವಾದ ಹೃದಯದಿಂದ ಮನೆಗೆ ಹಿಂದಿರುಗಿದೆ.

ಮುಂದಿನ ಎರಡೇ ತಿಂಗಳಲ್ಲಿ ಅಮಲ್ದಾರರ ಬೇಗಂರಿಗೆ ಹೆರಿಗೆ ನೋವು ಕಾಣಿಸಿಕೊಂಡಿತು. ಹಿಂದಿನ ವರ್ಷ ನಮ್ಮ ಆಸ್ಪತ್ರೆಯಿಂದ ನಿವೃತ್ತಿಯಾದ ಸೂಲಗಿತ್ತಿಯೊಬ್ಬಳನ್ನು ಕರೆಸಿಕೊಂಡಿದ್ದರು. ಬೆಳಗಿನ ಜಾವದವರೆಗೂ ಹೆರಿಗೆಯಾಗದಿದ್ದುದರಿಂದ ನನಗೆ ಹೇಳಿ ಕಳುಹಿಸಿದರು. ಅವಶ್ಯವಾದ ಕೆಲವು ಇಂಜಕ್ಷನ್ ಮತ್ತಿತರ ಮದ್ದುಗಳನ್ನು ಕಿಟ್‌ಬ್ಯಾಗ್‌ನಲ್ಲಿರಿಸಿಕೊಂಡು ಅವರ ಬಂಗಲೆ ಕಡೆ ಹೊರಟೆ. ದಾರಿಯಲ್ಲಿ ಅಮಲ್ದಾರರು ಮನೆಯಲ್ಲಿರುವರೇ ಎಂದು ವಿಚಾರಿಸಿದೆ. ಅವರು ಎರಡು ದಿನಗಳ ಹಿಂದೆ ಹಳ್ಳಿಗಳಲ್ಲಿ ಜಮಾಬಂದಿಗಳಲ್ಲಿ ಭಾಗವಹಿಸುವುದಕ್ಕಾಗಿ ಹೋದವರು ಇನ್ನೂ ಬಂದಿಲ್ಲವೆಂದು ತಿಳಿಯಿತು. ಎಂತಹಾ ನಿರ್ಲಕ್ಷ್ಯ! ದಿನ ತುಂಬಿದ ಗರ್ಭಿಣಿ ಪತ್ನಿಯನ್ನು ಒಂಟಿಯಾಗಿ ಬಿಟ್ಟು ದಿನಗಟ್ಟಲೇ ಹೊರಗೆ ಮೊಕ್ಕಾಂ ಮಾಡುತ್ತಿದ್ದ ಅಮಲ್ದಾರರ ಮೇಲೆ ಕೋಪ ಉಕ್ಕೇರಿಬಂತು.

ಬಂಗಲೆಯನ್ನು ತಲುಪುವಷ್ಟರಲ್ಲೇ ಸೂಲಗಿತ್ತಿ ಹೊರಬಂದು ನಮಸ್ಕರಿಸಿದಳು. ಬೇಗಂ ಅವರನ್ನು ನಾನೊಂದು ಸಾರಿ ಪರೀಕ್ಷಿಸಬಹುದೇ ಎಂದು ವಿಚಾರಿಸಿದೆ. ಒಳಗಿನಿಂದಲೇ ನಮ್ಮ ಮಾತನ್ನು ಕೇಳಿಸಿಕೊಂಡ ಬೇಗಂರು "ನಕ್ಕೋ ಸಾಬ್, ನಕ್ಕೋ" ಎಂದು ಆರ್ತನಾದ ಮಾಡತೊಡಗಿದರು. ಹೆರಿಗೆ ಯಾವ ಹಂತದಲ್ಲಿದೆ ಹಾಗೂ ಹೇಗೆ ಮುಂದುವರಿಯುತ್ತಿದೆಯೆಂಬುದರ ಬಗೆಗೆ ಸೂಲಗಿತ್ತಿಯನ್ನು ವಿಚಾರಿಸಿದೆ. "ಶಿಶುವಿನ ತಲೆ ಕಿಬ್ಬೊಟ್ಟೆಯಲ್ಲಿ 'ಫಿಕ್ಸ್' ಆಗಿ ಕುಳಿತಿದೆ; ಜನನದ್ವಾರ ಸಂಪೂರ್ಣವಾಗಿ ಸಡಿಲವಾಗಿದೆ; ಆದರೆ ಗರ್ಭಕೋಶದ ಚಲನೆ (ಕಂಟ್ರಾಕ್ಷನ್) ತುಂಬಾ ಕ್ಷೀಣವಾಗುತ್ತಿದೆ. ಒಂದು ಇಂಜಕ್ಷನ್ ಕೊಟ್ಟರೆ ಹೆರಿಗೆಯ ಮುಂದಿನ ಹಂತ ಜರುಗಿ, ಶಿಶು ಹೊರಬಂದು ಬಿಡುತ್ತದೆ ಸಾರ್" ಎಂದು ಸೂಲಗಿತ್ತಿ ವರದಿ ಮಾಡಿದಳು. ಕೂಡಲೇ ಸಿರಿಂಜನ್ನು ಬಿಸಿ ಮಾಡುವ ಏರ್ಪಾಡು ಮಾಡಿಸಿದೆ. ಅದು ತಯಾರಾದ ನಂತರ ಕಿಟ್‌ಬ್ಯಾಗ್‌ನಲ್ಲಿದ್ದ ಪೋಸ್ಟೀರಿಯರ್ ಪಿಟ್ಯುಟರಿ ಎಕ್ಸ್‌ಟ್ರ್ಯಾಕ್ಟ್ (Posterior Pituitary Extract)ನ್ನು ತೆಗೆದು ಬೇಗಂರಿಗೆ ಇಂಜಕ್ಷನ್ ನೀಡಿದೆ. ಮುಂದೇನಾಗುವುದೋ ಎಂದು ಪಡಸಾಲೆಯಲ್ಲಿ ಕಾತರದಿಂದ ತಿರುಗಾಡುತ್ತಿದ್ದೆ. ಮುಂದಿನ ೧೦-೧೫ ನಿಮಿಷಗಳಲ್ಲೇ ಶಿಶುವಿನ ಚೀತ್ಕಾರ ನನ್ನನ್ನು ಎಚ್ಚರಿಸಿತು. ನನ್ನ ಸಂತೋಷಕ್ಕೆ ಪಾರವೇ ಇರಲಿಲ್ಲ; ದೊಡ್ಡದೊಂದು ಭಾರ ಇಳಿದಂತಾಯಿತು. ಗರ್ಭಕೋಶದಿಂದ 'ಕಸ' (ಪ್ಲಾಸೆಂಟಾ) ಹೊರಗೆ ಬರುವವರೆಗೂ ಅಲ್ಲೇ ಇದ್ದು ಮನೆಗೆ ಹಿಂದಿರುಗಿದೆ.

ಸರ್ಕಾರಿ ಡಾಕ್ಟರು ಅಮಲ್ದಾರರ ಪತ್ನಿಗೆ ಅವರ ಬಂಗಲೆಯಲ್ಲೇ ಹೆರಿಗೆ ಮಾಡಿಸಿದ ವಿಷಯ ಬೆಳಗಾಗುವುದರೊಳಗೆ ತಿಳಿದು ನಾನೊಬ್ಬ ಪ್ರಸೂತಿ ತಜ್ಞನಾಗಿ ಬಿಟ್ಟೆ! ಮುಂದೆ ಲೇಡಿ ಡಾಕ್ಟರು ರಜೆಯಲ್ಲಿದ್ದಾಗ ಆಸ್ಪತ್ರೆಯಲ್ಲಿ ಹೆರಿಗೆ ಪ್ರಕರಣಗಳನ್ನು ನಿಭಾಯಿಸ ಬೇಕಾಗುತ್ತಿತ್ತು. ಕಷ್ಟಕರ ಪ್ರಕರಣಗಳಲ್ಲಿ ಇಕ್ಕಳ ಪ್ರಯೋಗಿಸಿ, ಇಲ್ಲವೆ ಗರ್ಭಕೋಶದೊಳಗಡೆ ಕೈತೂರಿಸಿ ಶಿಶುವಿನ ಭಂಗಿಯನ್ನು ಬದಲಾಯಿಸಿ ಹೆರಿಗೆ ಮಾಡಿಸಿದ್ದೂ ಉಂಟು.

ಈಗ್ಗೆ ಕೆಲವು ದಿನಗಳ ಹಿಂದೆ ಶಿವಮೊಗ್ಗಾದಲ್ಲಿ ಕೆಲವು ರೋಗಿಗಳನ್ನು ನೋಡಲು ಒಂದು ನರ್ಸಿಂಗ್ ಹೋಮ್‌ಗೆ ಹೋಗಿದ್ದೆ. ಪಕ್ಕದ ವಾರ್ಡ್ ಒಂದರಲ್ಲಿ ಆಗ ತಾನೇ ಅಸು ನೀಗಿದ ರೋಗಿಯೊಬ್ಬಳ ಸಂಬಂಧಿಕರ ರೋದನ ಮುಗಿಲು ಮುಟ್ಟುವಂತಿತ್ತು. ಅಲ್ಲಿ ಬೇರಿನ್ನಾವ ವೈದ್ಯರಿರಲಿಲ್ಲವಾದ್ದರಿಂದ ನಾನೇ ಆ ವಾರ್ಡಿಗೆ ಹೋಗಿ ಅವರನ್ನೆಲ್ಲಾ ಸಮಾಧಾನ ಮಾಡಲು ಪ್ರಯತ್ನಿಸುತ್ತಿದ್ದೆ. ಅಲ್ಲಿದ್ದ ವಯಸ್ಸಾದ ವ್ಯಕ್ತಿಯೊಬ್ಬರು ನನ್ನನ್ನು ಗುರುತಿಸಿದಂತೆ ಕಾಣಿಸಿತು. ಅವರು ನನ್ನನ್ನು ಸಮೀಪಿಸಿ "ಈಗ್ಗೆ ೩೦-೪೦ ವರ್ಷಗಳ ಹಿಂದೆ ಶಿಕಾರಿಪುರದ ಆಸ್ಪತ್ರೆಯಲ್ಲಿದ್ದ

ಡಾಕ್ಟರ್ ಚಂದ್ರೇಗೌಡರು ನೀವಲ್ಲವೇ ಸ್ವಾಮಿ" ಎಂದು ಮಾತಾಡಿಸಿದರು. ಹೌದೆಂದು ಒಪ್ಪಿಕೊಂಡಾಗ ಅವರ ದುಃಖ ಇನ್ನಷ್ಟು ಉಮ್ಮಳಿಸಿ ಬಂದಂತಾಯಿತು. "ಸ್ವಾಮೀ, ಈಗ ಪ್ರಾಣ ಬಿಟ್ಟವಳು ನನ್ನ ಸೊಸೆ; ಅವಳ ಗಂಡ ಜನಿಸುವ ಸಮಯದಲ್ಲಿ ನೀವು ಶ್ರಮಪಟ್ಟು ಹೆರಿಗೆ ಮಾಡಿಸಿದ್ದನ್ನು ಮರೆಯಲು ಸಾಧ್ಯವೇ? ಲೇಡಿ ಡಾಕ್ಟರು ರಜೆ ಹೋಗಿದ್ದರು. ಅಲ್ಲಿ ಸುಖ ಪ್ರಸವ ಆಗಲಾರದು, ಶಿವಮೊಗ್ಗೆಗೆ ಕೊಂಡೊಯ್ಯಲು ನೀವೇ ಹೇಳಿದ್ದಿರಿ. ಅದು ನಮಗೆ ಸಾಧ್ಯವಾಗದಿದ್ದಾಗ ಇಕ್ಕಳ ಹಾಕಿ ಮಗುವನ್ನು ಹೊರಗೆ ತೆಗೆದಿದ್ದು ನೀವು ಮರೆತಿರಬಹುದು ಡಾಕ್ಟ್ರೇ, ಆದರೆ ನಾವು ಮರೆತಿಲ್ಲ." ಹತ್ತಿರದಲ್ಲೇ ಇದ್ದ ಮಗನನ್ನು ತನ್ನತ್ತ ಎಳೆದುಕೊಂಡು, "ಇವ್ರೇ ಕಣೋ ಪುಣ್ಯಾತ್ಮರು, ನಿನ್ನ ಜನನದ ಸಮಯದಲ್ಲಿ ನಿನ್ನ ತಾಯಿ ಮತ್ತು ನಿನ್ನನ್ನು ಬದುಕಿಸಿದವರು" ಎಂದು ಅವನನ್ನು ತಬ್ಬಿಕೊಂಡು ಗೋಳಾಡಲಾರಂಭಿಸಿದರು. ನಾನು ನಿವೃತ್ತನಾಗಿ ಶಿವಮೊಗ್ಗದಲ್ಲಿ ಖಾಸಗಿಯಾಗಿ ಕೆಲಸ ಮಾಡುತ್ತಿರುವ ವಿಷಯ ಅವರಿಗೆ ತಿಳಿದಿತ್ತೆಂದೂ, ಬಂದು ನನ್ನನ್ನು ಮಾತಾಡಿಸಬೇಕೆಂದಿದ್ದರೆಂತಲೂ ಹೇಳಿ ಗೋಳಾಡಿದರು. ಹೀಗೆ ಪರಿಚಯವಾದ ನಂತರ ಅವರನ್ನೆಲ್ಲಾ ಸಮಾಧಾನ ಪಡಿಸಲು ಸಾಧ್ಯವಾಯಿತು. ನನ್ನ ಮನಸ್ಸು ಅಂದಿನ ದಿನಗಳತ್ತ ಸರಿದು ಶಿಕಾರಿಪುರದ ನನ್ನ ನೆನಪುಗಳು ಮರುಕಳಿಸಿದವು.

## ಉಪಾಧ್ಯಕ್ಷರನ್ನೇ ಹೊರಗೆ ಕಳುಹಿಸಿದೆ!

ನಿಂಗಪ್ಪಯೆಂಬವರು ಅಲ್ಲಿಯ ಪುರಸಭೆಯ ಉಪಾಧ್ಯಕ್ಷರು. ಕಾರ್ಯನಿಮಿತ್ತ ಅವರು ಆಸ್ಪತ್ರೆಗೆ ಬಂದಾಗಲೆಲ್ಲಾ ಯಥೋಚಿತ ಗೌರವಾದರಗಳಿಂದ ನೋಡಿಕೊಳ್ಳುತ್ತಿದ್ದೆ. ಅವರ ಹೆಂಡತಿಯನ್ನು ಹೆರಿಗೆಗಾಗಿ ಆಸ್ಪತ್ರೆಗೆ ಸೇರಿಸಿದರು. ಲೇಡಿ ಡಾಕ್ಟರಿಗೂ ಅವರಿಗೂ ಹಿಂದೆ ಮನಸ್ತಾಪವಿದ್ದುದರಿಂದ ಲೇಡಿ ಡಾಕ್ಟರು ಈ ಸಾರಿ ಮುತುವರ್ಜಿ ವಹಿಸುವಂತೆ ನೋಡಿ ಕೊಂಡಿದ್ದೆ. ಹೆರಿಗೆ ಸುಸೂತ್ರವಾಗಿಯೇ ಜರುಗಿತು. ಅವರ ಹೆಂಡತಿಯ ಖಾಸಗೀ ಬಟ್ಟೆಬರೆ ಗಳನ್ನು ಆಸ್ಪತ್ರೆಯವರೇ ತೊಳೆದು ಶುಚಿಮಾಡಿಕೊಡಬೇಕೆಂದು ಸೂಲಗಿತ್ತಿಯೊಬ್ಬಳೊಡನೆ ಜಗಳವಾಡುತ್ತಿದ್ದರಂತೆ; ಅವಳು ಮನೆಗೆ ಹೋಗುತ್ತಿರುವಾಗಲೂ ಬೀದಿಯಲ್ಲಿ ಜಗಳಕ್ಕಿಳಿಯುತ್ತಿದ್ದ ರಂತೆ; ಸೂಲಗಿತ್ತಿ ಈ ವಿಷಯವನ್ನು ನನ್ನೊಡನೆ ಹೇಳಿಕೊಂಡು ಅಳತೊಡಗಿದಳು.

ಒಂದು ದಿನ ಆಸ್ಪತ್ರೆಯ ಕೆಲಸ ಮುಗಿದ ಮೇಲೆ ಪಕ್ಕದ ಅಂಚೆ ಕಚೇರಿಯಲ್ಲಿ ಕುಳಿತಿರುವುದಾಗಿಯೂ ನಿಂಗಪ್ಪನವರು ಆಸ್ಪತ್ರೆಗೆ ಬಂದ ಕೂಡಲೇ ನನಗೆ ತಿಳಿಸಬೇಕೆಂದೂ ಸೂಚಿಸಿದೆ. ಹಾಗೆ ಅವರು ಬಂದ ವಿಷಯ ತಿಳಿದಾಕ್ಷಣ ಆಸ್ಪತ್ರೆಗೆ ಹೋದೆ. ಅವರನ್ನು ನನ್ನ ಕಚೇರಿಗೆ ಕರೆಸಿ ವಿಷಯವನ್ನು ಪ್ರಸ್ತಾಪಿಸಿದೆ. ರೋಗಿಗಳ ಬಟ್ಟೆ ಬರೆಗಳನ್ನು ಶುಚಿ ಮಾಡಿ ಕೊಡುವುದು ಆಸ್ಪತ್ರೆಯವರ ಕರ್ತವ್ಯ, ಅವರು ಸಹಕರಿಸುತ್ತಿರಲಿಲ್ಲವಾದ್ದರಿಂದ ಅವರು ಹಾಗೆ ಮಾಡಬೇಕಾಯಿತೆಂದು ವಾದಿಸತೊಡಗಿದರು. ಆಸ್ಪತ್ರೆಯ ವತಿಯಿಂದ ಬಳಸಿದ ಬಟ್ಟೆಗಳನ್ನು ಶುಚಿ ಮಾಡುವುದು ಆಸ್ಪತ್ರೆಯವರ ಜವಾಬ್ದಾರಿಯೆಂದೂ ಅವರವರ ಖಾಸಗಿ ಬಟ್ಟೆ ಬರೆಗಳನ್ನು ಅವರೇ ಶುಚಿ ಮಾಡಿಕೊಳ್ಳಬೇಕೆಂದೂ ನಾನು ಉತ್ತರಿಸಿದೆ. ಆ ಬಗೆಗೆ ಸರ್ಕಾರಕ್ಕೆ ಬರೆದು ಏರ್ಪಾಡು ಮಾಡಿ ಕೊಳ್ಳಬೇಕೆಂದು ಆಗ್ರಹ ಪಡಿಸಿದರು ಆಸ್ಪತ್ರೆಗೆ ಡೋಬಿಯೇ ನೇಮಕ ವಾಗಿಲ್ಲ; ನೇಮಕವಾದರೂ ಅವರ ಬಟ್ಟೆಗಳನ್ನು ಶುಚಿ ಮಾಡುವುದು ಅವನ ಕರ್ತವ್ಯ ವಾಗಿರುವುದಿಲ್ಲವೆಂದು ಹೇಳಿದೆ; ಹಾಗೂ ಆ ಬಗೆಗೆ ಅವರೇನಾದರೂ ಅಹವಾಲು ಬರೆದು ಕೊಡುವುದಾದರೆ ಸರ್ಕಾರಕ್ಕೆ ಕಳುಹಿಸುವುದಾಗಿ ಬಿಳೀ ಕಾಗದ ಹಾಳೆಯನ್ನು ಅವರತ್ತ ದೂಡಿದೆ.

ಅದು ಅವರನ್ನೂ ಇನ್ನೂ ಸಿಟ್ಟಿಗೇರಿಸಿತು. ನಾನು ಯಾರ ಹತ್ತಿರ ಮಾತಾಡುತ್ತಿರುವೆನೆಂಬುದರ ಬಗೆಗೆ ತಿಳಿದಿರಿ, ಮುಂದಿನ ಸಾರಿ ಪುರಸಭೆಯ ಮೀಟಿಂಗ್‌ನಲ್ಲಿ ಮತ್ತೊಬ್ಬ ಪ್ರಭಾವೀ ಸದಸ್ಯರಿಂದ ನನಗೇನು ಮಾಡಿಸುತ್ತೇನೆಂದು ನೋಡಿಕೊಳ್ಳಿರೆಂದು ಅಬ್ಬರಿಸಿದರು. ಅದೇನು ಮಾಡುತ್ತೀರೋ ಮಾಡಿಕೊಳ್ಳಿ, ಅದೀಗ ಅಲ್ಲಿಂದ ಹೊರ ಹೋಗಬಹುದೆಂದು ನಾನೂ ಬಿರುಸಾಗಿಯೇ ಮಾರುತ್ತರ ನೀಡಿದೆ. ಹಾಗೆಲ್ಲ ಆದೇಶ ಮಾಡುವುದಕ್ಕೆ ನಾನಾರೆಂದು ಮತ್ತೂ ಕೂಗಾಡಲಾರಂಭಿಸಿದರು. ಬಾಗಿಲ ಹಿಂದೆ ನಿಂತಿದ್ದ ಅಬ್ದುಲ್ ಅಜೀಜ್ ಎಂಬ ಜವಾನನನ್ನು ಕರೆದು ಅವರನ್ನು ಹೊರತಳ್ಳುವಂತೆ ಆದೇಶಿಸಿದೆ. ಅವನು ಒಳಗೆ ಬರುವಷ್ಟರಲ್ಲೇ ತಾವೇ ಹೋಗುವುದಾಗಿ ಹೇಳಿ ಬಯ್ದುಕೊಳ್ಳುತ್ತಾ ಅಲ್ಲಿಂದ ಕಾಲ್ಕಿತ್ತರು.

ಮುಂದಿನ ವಾರ ಪುರಸಭೆಯ ಮೀಟಿಂಗ್‌ನಲ್ಲಿ ಡಾಕ್ಟರು ತಮ್ಮೊಡನೆ 'ಅನುಚಿತ'ವಾಗಿ ನಡೆದುಕೊಂಡರೆಂದು ಮಾತಾಡಲಾರಂಭಿಸಿದರಂತೆ. ಆಸ್ಪತ್ರೆಯಲ್ಲಿ ಜರುಗಿದ ಪ್ರಸಂಗ ಬಹುಶಃ ಇಷ್ಟರಲ್ಲೇ ಹಲವು ಸದಸ್ಯರಿಗೆ ತಿಳಿದಿರಬೇಕು. ಅಧ್ಯಕ್ಷರೂ ಸೇರಿದಂತೆ ಇತರ ಸದಸ್ಯರು, "ಬೇರೆಲ್ಲಾ ಆಫೀಸುಗಳಲ್ಲಿ ನಿಮ್ಮ ತಕರಾರು ಮುಗಿದು, ಹೊಸದಾಗಿ ಬಂದ ಡಾಕ್ಟರ ಮೇಲೂ ನಿಮ್ಮ ವಕ್ರದೃಷ್ಟಿ ಬೀರಿತೇ" ಎಂದು ಹೇಳಿ ಅವರು ಮುಂದೆ ಮಾತಾಡದೆ ಕುಳಿತುಕೊಳ್ಳುವಂತೆ ಮಾಡಿದರಂತೆ!

## ಕುಡಿದ ಪೋಲೀಸ್ ಕಾನ್‌ಸ್ಟೇಬಲ್!

ಶಿಕಾರಿಪುರದಲ್ಲಿ ನಾನಿದ್ದ ಮೂರು ವರ್ಷಗಳ ಅವಧಿಯಲ್ಲಿ ನಾನೆದುರಿಸಿದ ಮೆಡಿಕೋ ಲೀಗಲ್ (ವೈದ್ಯಕೀಯ ನ್ಯಾಯಶಾಸ್ತ್ರದ) ಪ್ರಕರಣಗಳು ಬೇರೆಲ್ಲೂ ಉಂಟಾಗಲಿಲ್ಲವೆಂದರೆ ಅತಿಶಯೋಕ್ತಿಯಲ್ಲ. ಸಾಲದ್ದಕ್ಕೆ ಪಾನ ನಿಷೇಧದ ಕಾಲ ಅದು. ಪೋಲೀಸರು ಕುಡಿದವರನ್ನು ಹಗಲು ರಾತ್ರಿಗಳನ್ನು ಲೆಕ್ಕಿಸದೆ ನಾನೆಲ್ಲಿದ್ದರೂ ಅಲ್ಲಿಗೆ ಕರೆತರುತ್ತಿದ್ದರು. ಒಂದೊಂದು ಸಾರಿ ಶಿವಮೊಗ್ಗಾದಿಂದ ಆ ಸಲುವಾಗಿಯೆ ವಿಶೇಷ ಪೋಲೀಸ್ ತಂಡಗಳು ಬಂದು ಕೆಲ ಸಮಯ ಅಲ್ಲಿ ಮೊಕ್ಕಾಂ ಮಾಡುತ್ತಿದ್ದರು; ಲಂಬಾಣಿ ತಾಂಡಾಗಳಿಗೆ ನುಗ್ಗಿ ಹೆಂಗಸರು-ಗಂಡಸರು ಎಂಬ ಭೇದವಿಲ್ಲದೆ ವ್ಯಾನುಗಳಲ್ಲಿ ತುಂಬಿಕೊಂಡು ನನ್ನ ನಿವಾಸದ ಎದುರು ಪ್ರದರ್ಶಿಸುತ್ತಿದ್ದರು. ಅವರನ್ನು ಪರೀಕ್ಷೆ ಮಾಡಿ ದೃಢೀಕರಣ ಪತ್ರಗಳನ್ನು ಅದಾಗಲೇ ನೀಡಬೇಕಾಗುತ್ತಿತ್ತು. ಒಂದು ಪ್ರಕರಣ ಉಲ್ಲೇಖನೀಯ.

ಶಿಕಾರಿಪುರದ ಹತ್ತಿರದ ಹಳ್ಳಿಯೊಂದರಲ್ಲಿ ಎರಡು ಕೋಮುಗಳ ನಡುವೆ ವೈಮನಸ್ಯ ದಿಂದ ಜಗಳ ದೊಂಬಿಗಳಾದವು. ಅಹಿತಕರ ಘಟನೆಗಳು ಮರುಕಳಿಸದಂತೆ ಮುನ್ನೆಚ್ಚರಿಕೆಗಾಗಿ ಕೆಲವು ಪೋಲೀಸ್ ಪೇದೆಗಳನ್ನು ಅಲ್ಲಿ ಕಾವಲಿರಿಸಿದ್ದರು. ಒಂದು ಸಲ ಪೇದೆಯೊಬ್ಬನಿಗೆ ಒಂದು ಕಡೆಯವರು ಚೆನ್ನಾಗಿ ಕುಡಿಸಿ ಬಿಟ್ಟರು. ಮತ್ತೇರಿ ಅವನು ಧಾಂದಲೆ ಮಾಡತೊಡಗಿದ. ಮತ್ತೊಂದು ಕಡೆಯವರು ಅವನನ್ನು ಚೆನ್ನಾಗಿ ಥಳಿಸಿ, ಕೈಕಾಲು ಕಟ್ಟಿ ಗಾಡಿಯಲ್ಲಿ ಹೇರಿಕೊಂಡು ಪೋಲೀಸ್ ಠಾಣೆಗೆ ತಂದರು. ಸಬ್‌ಇನ್ಸ್‌ಪೆಕ್ಟರ್ ಪೇಚಿಗೆ ಸಿಲುಕಿದಂತಾಯಿತು. ಮೊದಲೇ ತರಲೆ ಪ್ರದೇಶವೆಂದು ಗಲಭೆಯನ್ನು ನಿಯಂತ್ರಿಸಲು ಕಳುಹಿಸಿದ್ದ ಅವರ ಠಾಣೆಯ ಪೇದೆ ಕರ್ತವ್ಯಭ್ರಷ್ಟನಾಗಿದ್ದಾನೆ; ಪಾನ ನಿಷೇಧವಿದ್ದು, ಸರ್ಕಾರಿ ಸೇವೆಯಲ್ಲಿರುವವನೇ ಚೆನ್ನಾಗಿ ಕುಡಿದು ಅಮಲೇರಿದ್ದಾನೆ. ತಮ್ಮ ಇಲಾಖೆಯವನೇ ಆಗಿದ್ದರೂ ಕ್ರಮ ತೆಗೆದುಕೊಳ್ಳಲೇ ಬೇಕಾದ ಅನಿವಾರ್ಯತೆ. ಇಕ್ಕಟ್ಟಿಗೆ ಸಿಲುಕಿದ ಅವರು ದೃಢೀಕರಣ ಪತ್ರಕ್ಕಾಗಿ ವೈದ್ಯರಲ್ಲಿಗೆ ಕಳುಹಿಸದೇ

ಅನ್ಯ ಮಾರ್ಗವಿರಲಿಲ್ಲ. ಆ ಸಲುವಾಗಿ ಪತ್ರ ಬರೆದು ನನ್ನ ಕಡೆ ಕಳುಹಿಸಿ ತಮ್ಮ ಕರ್ತವ್ಯ ಮಾಡಿದರು. ಆದರೂ ಹೇಗಾದರೂ ಮಾಡಿ ಅವನನ್ನು ಬಚಾವು ಮಾಡುವಂತೆ ನನಗೆ ಗುಟ್ಟಾಗಿ ಸಂದೇಶ ಕಳುಹಿಸುವುದಕ್ಕೆ ಮರೆತಿರಲಿಲ್ಲ!

ಪೋಲೀಸರು ಅವನನ್ನು ರಾತ್ರಿ ಸುಮಾರು ಹತ್ತು ಗಂಟೆ ಸಮಯಕ್ಕೆ ನನ್ನ ನಿವಾಸದ ಹತ್ತಿರ ಕರೆತಂದರು ಜೊತೆಗೆ ಹಳ್ಳಿಗರ ದಂಡೇ ಅವನನ್ನು ಹಿಂಬಾಲಿಸಿತ್ತು.

ಪೇದೆಯನ್ನು ವಿವರವಾಗಿ ಪರೀಕ್ಷೆ ಮಾಡಿದೆ. ಸಾಕಷ್ಟು ಪ್ರಮಾಣದಲ್ಲಿ ಮದ್ಯ ಪಾನೀಯವನ್ನು ಸೇವಿಸಿದ್ದರ ಲಕ್ಷಣಗಳು ಎದ್ದು ಕಾಣುವಂತಿದ್ದವು. ತೊದಲಿ ಮಾತಾಡುತ್ತಾ ಅಸಂಬದ್ಧವಾಗಿ ವರ್ತಿಸುತ್ತಿದ್ದ. ಉಸಿರಿನಿಂದ ಮದ್ಯ ಮಿಶ್ರಿತ ಈರುಳ್ಳಿ ವಾಸನೆ ರಾಚುತ್ತಿತ್ತು. ಅವನನ್ನು ಉಳಿಸುವಂತೆ ಕೈ ಕೈ ಮುಗಿದು ಬೇಡುತ್ತಿದ್ದ. ಮೈ ಮೇಲೆ ಬಾಸುಂಡೆಗಳು ಯಾರಿಗಾದರೂ ಕನಿಕರ ಹುಟ್ಟಿಸುವಂತಿದ್ದವು. ಅವನಲ್ಲಿದ್ದ ಮದ್ಯ ಸಾರತೆಯ ಗುಣಲಕ್ಷಣಗಳನ್ನು ದಾಖಲಿಸಿಕೊಂಡೆ. ಅವನ ಮೇಲೆ ಅನುಕಂಪ ಇದ್ದರೂ ನನ್ನ ಅಂತರಾತ್ಮ ಕರ್ತವ್ಯದಿಂದ ವಿಮುಖನಾಗದಂತೆ ಎಚ್ಚರಿಸುತ್ತಲೇ ಇತ್ತು. ಹಾಗೆಯೇ ಮಾಡಿದೆ.

ಅಷ್ಟರಲ್ಲೇ ಪರಿಚಿತರಾದ ಗುರುಶಿದ್ದಪ್ಪ ಎಂಬವರು ನಮಸ್ಕಾರ ಮಾಡುತ್ತಾ ಒಳಗಡೆ ಬಂದರು. ಮಧ್ಯಾಹ್ನ ಆಸ್ಪತ್ರೆಗೆ ಸೇರಿದ ಅವರ ಸಂಬಂಧಿಯೊಬ್ಬರ ಪರಿಸ್ಥಿತಿಯನ್ನು ತಿಳಿಯಲು ಬಂದಿರುವುದಾಗಿ ಹೇಳಿದರು. ಪಕ್ಕದ ಕುರ್ಚಿಯಲ್ಲಿ ಕುಳಿತೂ ಬಿಟ್ಟರು. ರೋಗಿಯ ಪರಿಸ್ಥಿತಿ ಯನ್ನು ವಿವರಿಸಿದರೂ ಅವರು ಹೋಗುವಂತೆ ಕಾಣಲಿಲ್ಲ. ನಡು ನಡುವೆ ಏನೇನೋ ಮಾತಾಡುತ್ತಿದ್ದರು. ನನ್ನ ಬರವಣಿಗೆ ಮುಗಿದು ದೃಢೀಕರಣ ಪತ್ರದಲ್ಲಿ ಬರೆದಿದ್ದೇನೆಂದು ಬೇರೆ ಹೇಳಬೇಕಾಗಿಲ್ಲ. ಗುರುಶಿದ್ದಪ್ಪನವರಿಗೆ ಪರೋಕ್ಷವಾಗಿ ಅದರ ಸುಳುಹು ತಿಳಿದಿರಬೇಕು. ಮರುದಿನ ಬೆಳಿಗ್ಗೆ ಆಸ್ಪತ್ರೆಗೆ ಹೋಗುವ ಮಾರ್ಗದಲ್ಲಿ ಪೋಸ್ಟ್ ಮಾಸ್ಟರ್ ಸುಬ್ಬರಾಯರು, ಗುರುಶಿದ್ದಪ್ಪ ರಾತ್ರಿ ನನ್ನ ಮನೆಗೆ ಬಂದಿದ್ದರ ಮರ್ಮ ತಿಳಿಸಿದರು. ನಾನೇನಾದರೂ ಕುಡಿದಿಲ್ಲವೆಂದು ದೃಢೀಕರಣ ಪತ್ರ ನೀಡಿದ್ದರೆ ಆರೋಗ್ಯ ಇಲಾಖೆಗೆ ನನ್ನ ಬಗೆಗೆ ತಂತಿ ಸುದ್ದಿ ಕಳುಹಿಸಲು ಅವರ ಕಡೆಯವರು ಅಲ್ಲಿ ಕಾಯ್ದು ಕುಳಿತ್ತಿದ್ದರಂತೆ! ಪೋಲೀಸ್ ಪೇದೆ ವಜಾ ಆದ. ವಿಷಯ ಕೆಲ ಕಾಲದ ನಂತರ ತಿಳಿಯಿತು; ವಿಷಾದವೇನೋ ಆಯಿತು; ಆದರೂ ಕರ್ತವ್ಯ ನಿರ್ವಹಿಸಿದ ಸಮಾಧಾನವಿತ್ತು. ಶಿಕಾರಿಪುರದಿಂದ ವರ್ಗವಾದ ಒಂದೆರಡು ವರ್ಷಗಳಲ್ಲಿ ಅಲ್ಲಿ ಕಾರ್ಯನಿರತರಾಗಿದ್ದ ವೈದ್ಯರೂ ಸಹ ಎರಡು ಜನ ಕುಡಿದು ಅಮಲೇರಿದ್ದ ಪೋಲೀಸ್ ಪೇದೆಗಳಿಗೆ ಸಕಾರಾತ್ಮಕ ದೃಢೀಕರಣ ಪತ್ರ ನೀಡಿದ್ದರಂತೆ; ಅವರೂ ಸಹಾ ಕೆಲಸದಿಂದ ವಜಾ ಆಗಿದ್ದರಂತೆ. ವೈದ್ಯರ ಮೇಲೆ ಸೇಡು ತೀರಿಸಿಕೊಳ್ಳಲು ಸಾಯಂಕಾಲ ಮನೆಗೆ ಹಿಂತಿರುಗುವ ಸಮಯ ಹೊಂಚು ಹಾಕಿ ಅವರಿಗೆ ಚೂರಿಗಳಿಂದ ತಿವಿಯುವ ಪ್ರಯತ್ನ ಮಾಡಿದ್ದರಂತೆ. ದಾರಿಹೋಕರು ಅಕಸ್ಮತ್ತಾಗಿ ತಡೆದು ಡಾಕ್ಟರರ ಜೀವ ಉಳಿಸಿದರಂತೆ. ಪತ್ರಿಕೆಯಿಂದ ಸುದ್ದಿ ತಿಳಿದಾಗ ಪ್ರಾಮಾಣಿಕವಾಗಿ ಕರ್ತವ್ಯ ನಿರ್ವಹಿಸುವುದರ ಅಪಾಯವೆಷ್ಟೆಂಬುದರ ಅರಿವಾಯಿತು. ಆದರೂ ಮುಂದೆ ಬೇರೆ ಬೇರೆ ಕಡೆ ಇದ್ದಾಗ ಎರಡು ಜನ ಅರಣ್ಯ ಪಾಲಕರಿಗೆ ಕುಡಿದಿದ್ದುದರ ಬಗೆಗೆ ದೃಢೀಕರಣ ಪತ್ರ ನೀಡುವಲ್ಲಿ ಹಿಂಜರಿಯಲಿಲ್ಲ!

## ಅಕ್ಕಿ ಗಿರಣಿ Vs ಪೋಲೀಸ್!

ಶಿಕಾರಿಪುರದಲ್ಲಿದ್ದು ಸುಮಾರು ಒಂದೂವರೆ ವರ್ಷ ಕಳೆದಿರಬಹುದು. ಒಂದು ದಿನ ಅಕ್ಕಿ ಗಿರಣಿ ಮಾಲೀಕರ ಆರೇಳು ವರ್ಷದ ಬಾಲಕ, ಗಿರಣಿ ಚಾಲನೆಯಾಗಿರುವ ಸಮಯದಲ್ಲೇ ಅದರ ಆಜುಬಾಜಿನಲ್ಲಿ ಆಟವಾಡಿಕೊಂಡಿದ್ದ. ತಿರುಗುತ್ತಿದ್ದ ಗಿರಣಿಯ ಬೆಲ್ಟಿಗೆ ಆಕಸ್ಮಿಕವಾಗಿ ಸಿಲುಕಿ, ಕೂಡಲೇ ಸಾವಿಗೀಡಾದ. ಅವನ ಕಡೆಯವರು ಆಸ್ಪತ್ರೆಗೆ ಬಂದು ನನ್ನನ್ನು ಸ್ಥಳಕ್ಕೆ ಕರೆದುಕೊಂಡು ಹೋದರು. ನಾನು ನೋಡುವಷ್ಟರಲ್ಲಿ ಪ್ರಾಣಪಕ್ಷಿ ಹಾರಿಹೋಗಿತ್ತು. ಪೋಲೀಸರಿಗೂ ಅದು ಹೇಗೋ ಸುದ್ದಿ ತಿಳಿದು, ಗಿರಣಿಗೆ ಧಾವಿಸಿ ಬಂದು ಮಹಜರು ಮಾಡಿದರು. ಹಾಗೂ ಶವವನ್ನು ಆಸ್ಪತ್ರೆಯ ಶವಾಗಾರಕ್ಕೆ ಕಳುಹಿಸುವ ಏರ್ಪಾಡು ಮಾಡುವುದರಲ್ಲಿದ್ದರು. ಮಗುವಿನ ಕಡೆಯವರು ಶವವನ್ನು ಶವಾಗಾರದಲ್ಲಿಡಿಸುವುದನ್ನು ಹಾಗೂ ಅನಂತರ ಶವವನ್ನು ಕತ್ತರಿಸಿ ಪರೀಕ್ಷೆ ಮಾಡುವುದನ್ನು (ಪೋಸ್ಟ್ ಮಾರ್ಟಂ) ಪ್ರಬಲವಾಗಿ ವಿರೋಧಿಸ ತೊಡಗಿದರು. ಪೋಲೀಸರು ಜರುಗಿಸುತ್ತಿರುವುದು ಕಾನೂನಿಗೆ ಅನುಗುಣವಾಗಿದ್ದು ತಮ್ಮ ಪಟ್ಟು ಸಡಿಲಿಸಲು ತಯಾರಿರಲಿಲ್ಲ. ಅಸುನೀಗಿದ ಬಾಲಕನ ಸಂಬಂಧಿಕರು ನನಗೆ ಸುಪರಿಚಿತರಾಗಿದ್ದು ಪೋಲೀಸರೊಡನೆ ಸಂಧಾನ ಮಾಡಿ ಸಮಸ್ಯೆಯನ್ನು ಪರಿಹರಿಸುವಂತೆ ಕೇಳಿಕೊಂಡರು. ಆಗ ಹೊಸದಾಗಿ ಬಂದಿದ್ದ ಸರ್ಕಲ್ ಇನ್ಸ್‌ಪೆಕ್ಟರ್‌ಗೆ ಊರಿನ ಜನರ ಬಗೆಗೆ ಹೆಚ್ಚಿನ ಮಾಹಿತಿ ಇದ್ದಂತಿರಲಿಲ್ಲ. ಹಾಗಾಗಿ ಅವರು ನನ್ನ ಮಾತುಗಳನ್ನು ಕೇಳಲಿಲ್ಲ. ಅದಾಗಲೇ ರಾತ್ರಿಯಾಗಿದ್ದು ಜಿಟಿ ಜಿಟಿ ಮಳೆ ಬೀಳುತ್ತಿದ್ದರೂ ಪೋಲೀಸ್ ಠಾಣೆಗೆ ಹೋಗಿ ಮಾತುಕತೆ ಜರುಗಿಸಿದ್ದರ ನೆನಪಿದೆ. ಬಾಲಕನ ಕಡೆಯವರಿಗೆ ಮಂತ್ರಿಮಂಡಲದಲ್ಲಿ ಕೆಲವು ಸಂಬಂಧಿಕರಿದ್ದು ಕೂಡಲೇ ಬೆಂಗಳೂರಿಗೆ ಹೋಗಿ ಪ್ರಭಾವ ಬೀರಲು ಹೊರಡುವುದರಲ್ಲಿದ್ದರು. ಪರಿಸ್ಥಿತಿ ಹಾಗೆಯೇ ಮುಂದುವರಿದರೆ ಆ ರಾತ್ರಿ ಉದ್ವಿಗ್ನ ಪರಿಸ್ಥಿತಿ ಉಂಟಾಗುವ ಸಾಧ್ಯತೆಗಳು ಕಂಡು ಬಂದವು. ಮತ್ತೊಮ್ಮೆ ಪೋಲೀಸರನ್ನು ಸಂಧಿಸಿ ಶವವನ್ನು ಗಿರಣಿಯಿಂದ ಎತ್ತದೆ ಆ ರಾತ್ರಿ ಅಲ್ಲೇ ಇರುವಂತೆ ಕಾವಲು ಏರ್ಪಡಿಸುವುದಕ್ಕೆ ಒಪ್ಪಿಸುವುದರಲ್ಲಿ ಯಶಸ್ವಿಯಾದೆ. ಅದೇ ರೀತಿ ಬಾಲಕನ ಸಂಬಂಧಿಕರಿಗೂ ಗಲಾಟೆಗವಕಾಶ ಮಾಡದಂತಿರಲು ಹೇಳಿದೆ. ಬೆಳಿಗ್ಗೆ ಶವವನ್ನು ಆಸ್ಪತ್ರೆ ಶವಾಗಾರಕ್ಕೆ ತರಲು ಬಿಡಬೇಕೆಂದೂ, ಅದನ್ನು ಕತ್ತರಿಸದೇ ವರದಿ ಮಾಡುತ್ತೇನೆಂದು (ಹುಸಿ!) ಭರವಸೆ ನೀಡಿದೆ; ಅವರೂ ಅದಕ್ಕೆ ಒಪ್ಪಿದರು. ಬೆಳಿಗ್ಗೆ ಏಳು ಗಂಟೆಯ ಸಮಯಕ್ಕೆ ಶವ ಪರೀಕ್ಷೆ ಜರುಗಿಸುವುದಾಗಿ ಆಸ್ಪತ್ರೆಯಲ್ಲೂ ಅಣಿ ಮಾಡಿಸಿದೆ. ನಾನು ಹೇಳಿದ ಸಮಯಕ್ಕೆ ಶವಪರೀಕ್ಷೆ ಶುರು ಮಾಡಿದೆ. ಶವಾಗಾರದ ಆಜುಬಾಜಿನಲ್ಲಿ ಸಂಬಂಧಿಕರಾಗಲೀ, ಪೋಲಿಸಿನವರಾಗಲೀ ಇರಬಾರದೆಂದು ಕಟ್ಟುನಿಟ್ಟಿನ ಏರ್ಪಾಡು ಮಾಡಿಸಿದೆ. ತಲೆಯನ್ನು ತೆರೆದು ಮೆದುಳನ್ನು ಪರೀಕ್ಷಿಸುವುದರಿಂದ ಹಿಡಿದು ಮಿಕ್ಕೆಲ್ಲಾ ಅವಯವಗಳನ್ನು ಕತ್ತರಿಸಿ ಶಾಸ್ತ್ರೋಕ್ತ ಶವಪರೀಕ್ಷೆ ಜರುಗಿಸಿದೆ. ಕತ್ತರಿಸಿದ ಭಾಗಗಳನ್ನೆಲ್ಲಾ ಸರಿಯಾಗಿ ಹೊಲಿಗೆ ಹಾಕಿ ಮುಚ್ಚಿಸಿದೆ. ಮೊದಲೇ ಸ್ವಲ್ಪ ಜಾಸ್ತಿ ಬಟ್ಟೆಯನ್ನು ತರಿಸುವ ಏರ್ಪಾಡು ಮಾಡಿದ್ದೆ. ಕತ್ತರಿಸಿದ ಯಾವ ಭಾಗವೂ ಹೊರಗೆ ಕಾಣದಂತೆ ಬಟ್ಟೆಯನ್ನು ಹೊದಿಸಿ, ಹೊಲಿಗೆ ಹಾಕಿಸಿದೆ. ಸಂಬಂಧಿಕರಲ್ಲಿ ಜವಾಬ್ದಾರಿಯುತರೆಂಬವರನ್ನು ಕರೆಸಿ ಹಿಂದಿನ ದಿನ ಭರವಸೆ ನೀಡಿದಂತೆ ಶವವನ್ನು ಕತ್ತರಿಸಿಲ್ಲವೆಂತಲೂ, ಹಾಗೂ ಮನೆಗೆ ಶವವನ್ನು ಕೊಂಡು ಹೋದ ಮೇಲೆ ಅಲ್ಲಿ ಹೆಚ್ಚು ಸಮಯ ಇಟ್ಟುಕೊಳ್ಳಬಾರದೆಂತಲೂ ಸೂಚಿಸಿದೆ; ಕುತೂಹಲಕ್ಕಾದರೂ ಯಾರೂ ಬಟ್ಟೆ ತೆರೆದು ನೋಡುವ ಪ್ರಯತ್ನ ಮಾಡಬಾರದೆಂದು ಎಚ್ಚರಿಸಿದೆ. ಹೆಣ 'ಕತ್ತರಿಸದ' ವಿಷಯ ಪೋಲೀಸರಿಗೆ ಹೇಗಾದರೂ ತಿಳಿದರೆ

ನಾನು ಕೆಲಸ ಕಳೆದುಕೊಳ್ಳಬೇಕಾಗುತ್ತದೆಂಬುದನ್ನು ಅವರ ಗಮನಕ್ಕೆ ತಂದೆ. ಶವಪರೀಕ್ಷೆಗೆ ಸಹಾಯ ಮಾಡಿದ ಜವಾನ ರಹೀಮ್ ಆ ಬಗೆಗೆ ಹೊರಗಡೆ ಬಾಯಿ ಬಿಡಬಾರದೆಂದೂ ತಾಕೀತು ಮಾಡಿದೆ. ಮುಂದೆ ಎಲ್ಲಾ ನನ್ನ ಯೋಜನೆಯಂತೆಯೇ ಜರುಗಿದವು. ನಾನು ಶಿಕಾರಿಪುರದಿಂದ ವರ್ಗವಾಗುವವರೆಗೂ ಆ ವಿಷಯ ಬಹಿರಂಗವಾಗಿರಲಿಲ್ಲ!

ಇನ್ನೊಂದು ಸಾರಿ ಬಸ್ ಅಪಘಾತವೊಂದರಲ್ಲಿ ತೀವ್ರ ಗಾಯವಾದ ಕಂಡಕ್ಟರ್ ಒಬ್ಬನನ್ನು ಆಸ್ಪತ್ರೆಗೆ ಕರೆತಂದರು. ಒಂದು ತೊಡೆಯ ಮೂಳೆ ಮುರಿದಂತಿತ್ತು. ಅವನನ್ನು ಪರೀಕ್ಷೆ ಮಾಡಿ ಪುಸ್ತಕದಲ್ಲಿ ದಾಖಲು ಮಾಡುತ್ತಿರುವಾಗಲೇ ಬಸ್ ಮಾಲೀಕರು ಬಂದರು. ಅವರು ನನಗೆ ಚೆನ್ನಾಗಿ ಪರಿಚಿತರು ಹಾಗೂ ತಾಲ್ಲೂಕಿನ ರಾಜಕೀಯದಲ್ಲಿ ಪ್ರಭಾವಶಾಲಿಗಳು ಕೂಡ. ಅವರು ನನ್ನನ್ನು ಪಕ್ಕಕ್ಕೆ ಕರೆದು ಬಸ್ ಕೆಳಗೆ ಉರುಳಿದಾಗ ಅದರ ಕೆಳಗೆ ಸಿಕ್ಕಿ ಹಾಕಿಕೊಂಡಿದ್ದರಿಂದ ಹಾಗಾಯಿತೆಂದು ಕಂಡಕ್ಟರ್ ಹೇಳಿದಂತೆ ದಾಖಲು ಮಾಡಬಾರದೆಂತ ಹೇಳಲಾರಂಭಿಸಿದರು; ಬಸ್ ಒಂದು ಕಡೆ ವಾಲುತ್ತಿದ್ದಾಗ ಗಾಬರಿಯಿಂದ ಅವನು ಹೊರಗಡೆ ಹಾರಿದಾಗ ಕಾಲು ಮುರಿಯಿತೆಂದು ಬರೆಯಿರಿ ಎಂದೂ ಸಲಹೆ ಮಾಡಿದರು. ಸಂದಿಗ್ಧದಲ್ಲಿ ಸಿಲುಕಿದೆನಾದರೂ, ಅಂತರಾತ್ಮದ ಕರೆ ಎಚ್ಚರಿಸಿತು. ಅವರಲ್ಲಿದ್ದಾಗ ಅವರು ಹೇಳಿದಂತೇ ದಾಖಲು ಮಾಡಿದೆ. ಅವರು ಹೊರಟು ಹೋದ ಮೇಲೆ ಆ ಹಾಳೆಯನ್ನು ಕಿತ್ತು ಹಾಕಿ ಕಂಡಕ್ಟರನ ಹೇಳಿಕೆಯನ್ನೇ ಬರೆದುಕೊಂಡೆ; ಮನಸ್ಸು ನಿರಾಳವಾಯಿತು!

ಶಿಕಾರಿಪುರದ ಕೆಲವು ಕಡೆ ನಾಲಾ ನೀರಿನ ಸೌಲಭ್ಯವಿದೆ. ತಮ್ಮ ತಮ್ಮ ಹೊಲಗಳಿಗೆ ಹೆಚ್ಚು ನೀರು ಹರಿಸುವ ವಿಷಯದಲ್ಲಿ ರೈತರಲ್ಲಿ ಆಗಾಗ್ಗೆ ಜಗಳ ಹೊಡೆದಾಟಗಳು ಜರುಗುತ್ತಿದ್ದವು. ಈ ಘಟನೆಗಳು ಸಾಮಾನ್ಯವಾಗಿ ರಾತ್ರಿ ಹೊತ್ತು ಜರುಗುತ್ತಿದ್ದವು; ಬೆಳಗಾಗುವುದರೊಳಗೇ ವೈದ್ಯರ ದೃಢೀಕರಣ ಪತ್ರ ಪಡೆದುಕೊಳ್ಳಲು ಶಿಕಾರಿಪುರಕ್ಕೆ ಎರಡೂ ಕಡೆಯವರು ನಾ ಮುಂದು - ತಾ ಮುಂದು ಎಂದು ಧಾವಿಸಿ, ನನ್ನ ವಸತಿಯ ಎದುರು ಜಮಾಯಿಸಿ ಬಿಡುತ್ತಿದ್ದರು. ಯಾರು ಮೊದಲು ವೈದ್ಯರ ದೃಢೀಕರಣ ಪತ್ರ ಪಡೆದು ಪೋಲೀಸರಿಗೆ ದೂರು ನೀಡುತ್ತಾರೋ ಅವರ ಪ್ರಕರಣ ಮೇಲುಗೈ ಪಡೆಯುತ್ತದೆಂಬ ನಂಬಿಕೆ ಇದ್ದುದರಿಂದ ಆ ಪೈಪೋಟಿ! ಬಹುಪಾಲು ಮೈ ಮೇಲೆ ತೆರಚಿದಂಥ ಸಣ್ಣಪುಟ್ಟ ಗಾಯಗಳಿರುತ್ತಿದ್ದವು; ಅವುಗಳನ್ನೆಲ್ಲಾ ದಾಖಲು ಮಾಡಿಕೊಂಡು ದೃಢೀಕರಣ ಪತ್ರ ನೀಡುವುದರಲ್ಲಿ ಸಾಕು ಸಾಕಾಗಿ ಹೋಗುತ್ತಿತ್ತು. ಆವೇಶದ ಭರಾಟೆಯಲ್ಲಿ ಅವಸರಪಟ್ಟುಕೊಂಡು ಕೇಸುಗಳನ್ನು ದಾಖಲು ಮಾಡಿಸುತ್ತಿದ್ದರಾದರೂ ಬಹುಪಾಲು ಅವರೆಲ್ಲಾ ಸಂಬಂಧಿಕರೇ ಆಗಿರುತ್ತಿದ್ದುದರಿಂದ ಕೇಸುಗಳು ರಾಜಿಯಲ್ಲಿ ಪರ್ಯವಸಾನವಾಗುತ್ತಿದ್ದವಂತೆ.

## ಶವ ಪರೀಕ್ಷೆಗಳ ಮಹಾಪೂರ

ಶಿಕಾರಿಪುರದಲ್ಲಿ ಕಾರ್ಯಾರಂಭ ಮಾಡುತ್ತಿದ್ದಂತೆಯೇ ಶವ ಪರೀಕ್ಷೆಗಳ ಮಹಾಪೂರಕ್ಕೆ ನಾಂದಿಯಾಯಿತು. ಮುಂದೆಯೂ ಸರಿಸುಮಾರು ಅದೇ ಗತಿಯಲ್ಲಿ ಪರಿಸ್ಥಿತಿ ಮುಂದುವರಿಯಿತು. ಬಹುಪಾಲು ಶವಗಳನ್ನು ಆಸ್ಪತ್ರೆಯ ಶವಾಗಾರಕ್ಕೆ ತರುತ್ತಿದ್ದರಾದರೂ, ಕೆಲವು ಸಾರಿ ಶವವಿರುತ್ತಿದ್ದ ಸ್ಥಳಕ್ಕೇ ಹೋಗಿ ಪರೀಕ್ಷೆ ಮಾಡುವ ಪ್ರಮೇಯ ಒದಗಿ ಬರುತ್ತಿದ್ದಿತು.

ಅಂತಹ ಮೊದಲ ಪ್ರಸಂಗ ಏಳೆಂಟು ಮೈಲು ದೂರದ ಹಳ್ಳಿಯಲ್ಲಿ ಒದಗಿ ಬಂದಿತು. ಅಲ್ಲಿಯ ನಾಲೆಯ ಪಕ್ಕದಲ್ಲಿ ಶವವೊಂದು ಕೊಳೆತು ಬಿದ್ದಿದೆಯೆಂದೂ, ಸ್ಥಳಕ್ಕೇ ಬಂದು ಶವಪರೀಕ್ಷೆ ನಡೆಸಬೇಕೆಂದೂ ಕೋರಿಕೆ ಪೋಲೀಸರಿಂದ ಬಂದಿತು. ಅವತ್ತು ಮಧ್ಯಾಹ್ನವೇ

ಪೋಲಿಸರು ನನ್ನನ್ನು ಅಲ್ಲಿಗೆ ಎತ್ತಿನಗಾಡಿಯಲ್ಲಿ ಕರೆದುಕೊಂಡು ಹೋದರು. ಊರನ್ನು ತಲುಪುವಷ್ಟರಲ್ಲಿ ನಾಲ್ಕೂವರೆ ಗಂಟೆಯಾಗಿತ್ತು. ಶವ ಬಿದ್ದಿದ್ದ ಜಾಗದ ಬಹು ದೂರದಿಂದಲೇ ದುರ್ವಾಸನೆ ಮೂಗಿಗೆ ಬಡಿಯುತ್ತಿತ್ತು. ಹತ್ತಿರ ಹೋಗಿ ನೋಡುವಾಗ ನೊಣಗಳ ರಾಶಿ ಮುತ್ತಿಗೆ ಹಾಕಿಕೊಂಡಿತ್ತು. ಅದೇ ಮೊದಲ ಸಾರಿಗೆ ನಾನು ಅಂತಹ ಪರಿಸ್ಥಿತಿಯನ್ನು ಎದುರಿಸಿದ್ದು.

ಮನಸ್ಸಿಗೆ ಜುಗುಪ್ಸೆಯಾಗುತ್ತಿದ್ದರೂ ಗಟ್ಟಿ ಮನಸ್ಸು ಮಾಡಿ ಪರೀಕ್ಷೆ ನಡೆಸಲು ತಯಾರಾದೆವು. ಜೊತೆಗೆ ಬಂದಿದ್ದ ರಹೀಮ್ ನಾಲೆಯಿಂದ ನಾಲ್ಕಾರು ಕೊಡ ನೀರು ತಂದು ಹೆಣದ ಮೇಲೆ ಸುರಿದ; ನೊಣಗಳೇನೋ ದೂರ ಸರಿದವು; ವಾಸನೆ ಕಡಿಮೆಯಾಗಲಿಲ್ಲ. ಹೆಣವು ಗುರುತು ಸಿಗಲಾರದಷ್ಟು ಊದಿಕೊಂಡಿತ್ತು. ಗಾಯಗಳಾದ ಬಾಹ್ಯ ಕುರುಹುಗಳೇನೂ ಗೋಚರಿಸುತ್ತಿರಲಿಲ್ಲ. ಎಂದಿನಂತೆ ರಹೀಮ್ ಶವವನ್ನು ಕ್ರಮವರಿತು ಕತ್ತರಿಸಿ, ಅವಯವ ಭಾಗಗಳನ್ನು ತೋರಿಸಿದ. ಎಲ್ಲವೂ ಕೊಳೆತು ಹೋಗಿದ್ದರಿಂದ ವಿಶೇಷವಾದ ಬದಲಾವಣೆಗಳು ಕಂಡು ಬರಲಿಲ್ಲ. ವಿಷಪ್ರಾಶನದ ಸಾಧ್ಯತೆಯನ್ನು ಹೊರತುಪಡಿಸುವ ಸಲುವಾಗಿ ಕೆಲವು ಅಂಗಾಂಗಳ ತುಣುಕು ಮತ್ತು ದ್ರವಗಳನ್ನು ಬಾಟಲುಗಳಲ್ಲಿ ಶೇಖರಿಸಿಕೊಂಡೆವು. ಅವುಗಳಿಗೆಲ್ಲಾ ಚೀಟಿಗಳನ್ನು ಅಂಟಿಸಿ, ಮುಚ್ಚಳಗಳಿಗೆ ಸೀಲ್ ಮಾಡುವುದಕ್ಕೆ ರಾತ್ರಿ ಎಂಟು ಗಂಟೆ ಮೇಲಾಯಿತು. ಊರಿನ ರಸ್ತೆಯಲ್ಲಿ ನಮ್ಮ ಗಾಡಿ ಸಾಗುತ್ತಿದ್ದಂತೆಯೇ ಅಲ್ಲಿನ ಶಾನುಭೋಗರು ನಮ್ಮನ್ನು ಭೇಟಿ ಮಾಡಿ ಊಟೋಪಚಾರಗಳನ್ನು ಮುಗಿಸಿಕೊಂಡು ಹೋಗಬೇಕೆಂದು ಪರಿ ಪರಿಯಿಂದ ನಿವೇದಿಸಿಕೊಂಡರು; ಸ್ನಾನಕ್ಕೆ ಬಿಸಿ ನೀರು ಸಹಾ ತಯಾರಾಗಿರುವುದಾಗಿಯೂ ಹೇಳಿದರು. ಜೊತೆಗೆ ಬಂದಿದ್ದ ಯುವ ಸಬ್‌ಇನ್ಸ್‌ಪೆಕ್ಟರ್ ಹಾಗೂ ನನಗೂ ಹಸಿವಾಗುತ್ತಿದ್ದು ಅವರ ಆಹ್ವಾನವನ್ನು ಒಪ್ಪಿಕೊಳ್ಳುವ ಮನಸ್ಸಿತ್ತು. ಆದರೆ ನಮ್ಮ ಜೊತೆಗಿದ್ದ ವಯಸ್ಸಾದ ಸಂಪ್ರದಾಯ ಶರಣ ಪೋಲಿಸ್ ಇನ್ಸ್‌ಪೆಕ್ಟರ್ ಅದಕ್ಕೆ ಸುತರಾಂ ಒಪ್ಪಲಿಲ್ಲ. ನವರಾತ್ರಿಯ ಸಮಯವಾದ್ದರಿಂದ ಮನೆಯಲ್ಲಿ ಸ್ನಾನ ಮಾಡಿ ದೇವರ ಆರಾಧನೆ ಮಾಡದೇ ನೀರೂ ಸಹ ಮುಟ್ಟುವುದಿಲ್ಲವೆಂದು ಪಟ್ಟುಹಿಡಿದರು! ಅವರ ಮನಸ್ಸು ನೋಯಿಸಲಾಗದೆಂದು ಪ್ರಯಾಣವನ್ನು ಮುಂದುವರಿಸಿದೆವು. ಮನೆ ತಲುಪುವಷ್ಟರಲ್ಲಿ ರಾತ್ರಿ ೧೧ ಗಂಟೆ ದಾಟಿತ್ತು. ತಣ್ಣೀರು ಸ್ನಾನ ಮಾಡಿ ನೀರು ಕುಡಿದು ಮಲಗಿದೆ. ಸುಸ್ತಾಗಿದ್ದರಿಂದ ನಿದ್ದೆ ಆವರಿಸಿತು.

## ಪತ್ತೇದಾರಿ ಪ್ರಹಸನ!

ಶಿಕಾರಿಪುರ ಹಾಗೂ ಧಾರವಾಡ ಜಿಲ್ಲೆಯ ಸರಹದ್ದಿನಲ್ಲಿ 'ಹೆಣ'ವೊಂದು ಕಂಡು ಬಂದಿದೆಯೆಂದು ಪೋಲಿಸರಿಗೆ ಸುದ್ದಿ ಬಂದಿತು. ಅದನ್ನು ಆಸ್ಪತ್ರೆಗೆ ಸಾಗಿಸಲಾಗದ ಸ್ಥಿತಿಯಲ್ಲಿರುವುದರಿಂದ ನಾನು ಅಲ್ಲಿಗೇ ಬರಬೇಕೆಂಬ ಕೋರಿಕೆ ಪೋಲೀಸರಿಂದ ಬಂದಿತು. ಅವರೇ ಕಳುಹಿಸಿದ್ದ ಜೀಪಿನಲ್ಲಿ ನಮ್ಮ ಜವಾನ ಮತ್ತಿತರ ಸಲಕರಣೆಗಳೊಂದಿಗೆ ಪ್ರಯಾಣ ಬೆಳೆಸಿದೆವು. ದಾರಿಯಲ್ಲಿ ಶವದ ಪರಿಸ್ಥಿತಿ ಹೇಗಿದೆಯೆಂಬುದರ ಬಗೆಗೆ ಜೊತೆಗಿದ್ದ ಪೋಲೀಸ್ ಪೇದೆಯನ್ನು ವಿಚಾರಿಸಿದೆ. "ಹೆಣವೆಲ್ಲಿ ಬಂತು ಸಾರ್, ಅಲ್ಲಿ ಒಂದು ಮರದ ಕೆಳಗೆ ಮೂಳೆಗಳ ರಾಶಿ ಬಿದ್ದಿದೆ" ಎಂದು ಮುಗುಳು ನಕ್ಕ. ಬರೇ ಮೂಳೆಗಳು ಬಿದ್ದಿದ್ದರೆ ಶವಪರೀಕ್ಷೆಯ ಮಾತೆಲ್ಲಿ ಎಂದು ಶಪಿಸುತ್ತಲೇ ಮುಂದುವರಿದೆವು.

ಸುಮಾರು ಎರಡು ಗಂಟೆಗಳ ಪ್ರಯಾಣ ಮಾಡಿದ ನಂತರ ದೊಡ್ಡದೊಂದು ಗುಡ್ಡ ಇರುವ ಹೆದ್ದಾರಿಯಲ್ಲಿ ಜೀಪನ್ನು ನಿಲ್ಲಿಸಿದರು. ಮುಂದೆ ಗುಡ್ಡ ಏರಿ ಸ್ವಲ್ಪ ದೂರ ನಡೆಯ

ಬೇಕೆಂದರು; ಹಾಗೆ ನಡೆಯಲಾರಂಭಿಸಿದೆವು. ಕುತೂಹಲಿಗಳಾದ ಊರಿನ ಜನರ ದಂಡೂ ನಮ್ಮನ್ನು ಹಿಂಬಾಲಿಸಿತು. ಅದೇ ಸಮಯದಲ್ಲಿ ಧಾರವಾಡದ ಕಡೆಯಿಂದ ಹೆದ್ದಾರಿಯಲ್ಲಿ ಬರುತ್ತಿದ್ದ ಇಬ್ಬರು ಸೈಕಲ್ ಸವಾರರಿಗೆ ಸೂಟು, ಬೂಟು, ಹ್ಯಾಟು ಧರಿಸಿದ ಅಧಿಕಾರಿಗಳ ಜೊತೆ ಜನರ ದಂಡು ಗುಡ್ಡ ಏರುತ್ತಿರುವುದರ ಕಡೆ ಗಮನ ಹರಿಯಿತು. ಕುತೂಹಲಭರಿತರಾದ ಅವರೂ ಗುಂಪನ್ನು ಹಿಂಬಾಲಿಸಿದರು.

ಗುಡ್ಡದ ನೆತ್ತಿಯಿಂದ ಸ್ವಲ್ಪ ಕೆಳಗೆ ಬತ್ತಿದ ತೊರೆಯಂಥ ಪುಟ್ಟ ಕಣಿವೆ ಇತ್ತು. ಅಲ್ಲಿನ ಮರವೊಂದರ ಕೆಳಗಡೆ ಸರಿಸುಮಾರು ಮನುಷ್ಯನೊಬ್ಬ ಮಲಗಿದ್ದಿರಬಹುದಾದ ರೀತಿಯಲ್ಲಿ ಮೂಳೆಗಳು ಸಾಲಾಗಿ ಬಿದ್ದಿರುವುದು ಗೋಚರಿಸಿತು. ಅವುಗಳಿಗೆ ಮಾಂಸಖಂಡ ಹಾಗೂ ಮತ್ತಿತರ ಅಂಗಾಂಶಗಳು ಅಂಟಿಕೊಂಡಿರುವ ಯಾವ ಕುರುಹುಗಳೂ ಇರಲಿಲ್ಲ. ಅದರ ನೇರವಾಗಿ ಮರದ ಕೊಂಬೆಯಿಂದ ಪುಂಡಿ ನಾರಿನ ಹಗ್ಗವೊಂದು ನೇತಾಡುತ್ತಿದ್ದು, ಕೆಳತುದಿಯಲ್ಲಿ ಸಡಿಲವಾದ ಕುಣಿಕೆ ಇತ್ತು. ಮರದ ಇನ್ನೊಂದು ಕೊಂಬೆಯಿಂದ ಟರ್ಕಿ ಟವೆಲ್, ಖಾಕಿ ಬಣ್ಣದ ಷರಟು, ಲುಂಗಿ ಮುಂತಾದವು ನೇತಾಡುತ್ತಿದ್ದವು. ಪರೀಕ್ಷೆ ಮಾಡಲು ಅಲ್ಲಾವ ಹೆಣವೂ ಇರಲಿಲ್ಲ. ಅಲ್ಲಿದ್ದ ಮೂಳೆಗಳನ್ನು ಎಣಿಸಿ ಚೀಲ ತುಂಬುವ ಕೆಲಸದಲ್ಲಿ ನಾನು ಮತ್ತು ರಹೀಮ್ ನಿರತರಾದೆವು. ಪಂಚಾಯಿತಿದಾರರನ್ನು ಕೂರಿಸಿಕೊಂಡು ಸಬ್‌ಇನ್ಸ್‌ಪೆಕ್ಟರ್ ಮಹಜರು ಬರೆಯಲಾರಂಭಿಸಿದರು. ಅಂತಹ ಗಂಭೀರ ವಾತಾವರಣದಲ್ಲಿ ಹಠಾತ್ತಾಗಿ ಕೆಲವರು ರೋದಿಸುವ ಶಬ್ದ ಕೇಳತೊಡಗಿತು. ನಮ್ಮನ್ನು ಹಿಂಬಾಲಿಸಿ ಬಂದಿದ್ದ ಧಾರವಾಡದ ಕಡೆಯ ಇಬ್ಬರೂ ಬಿಕ್ಕಿ ಬಿಕ್ಕಿ ಅಳುತ್ತಿದ್ದರು. ಎಲ್ಲರೂ ಅವರತ್ತ ತಿರುಗಿ ವಿಚಾರಿಸಲಾರಂಭಿಸಿದರು. ಮರದ ಕೊಂಬೆಗಳ ಮೇಲಿದ್ದ ಬಟ್ಟೆಗಳ ಕಡೆ ಕೈ ತೋರಿಸಿ ಅವು ತಮ್ಮ ಸಂಬಂಧಿ ಹುಡುಗನೊಬ್ಬನವೆಂದು ಹೇಳಿ ತಮ್ಮ ದುಃಖವನ್ನು ಮತ್ತಷ್ಟು ತೋಡಿಕೊಂಡರು. ಮೂರ್ನಾಲ್ಕು ತಿಂಗಳಿಂದ ಅವನು ನಾಪತ್ತೆಯಾಗಿದ್ದಾನೆಂದೂ, ಅಲ್ಲಿ ಬಿದ್ದಿರುವ ಮೂಳೆಗಳು ಅವನವೇ ಇದ್ದಿರಬೇಕೆಂಬ ಸಂಶಯ ವ್ಯಕ್ತಪಡಿಸಿದರು.

ಪ್ರಕರಣದ ಬಗೆಗೆ ಆ ತನಕ ದಿಕ್ಕು ತೋರದಿದ್ದ ಸಬ್‌ಇನ್ಸ್‌ಪೆಕ್ಟರ್‌ಗೆ ಮತ್ತಷ್ಟು ಕುತೂಹಲ ಉಂಟಾಯಿತು. ಆ ಪ್ರಕರಣದ ವಿವರಗಳನ್ನು ತಿಳಿಸುವಂತೆ ಅವರನ್ನು ಪುಸಲಾಯಿಸಿದರು. ಅಲ್ಲಿಂದ ಸುಮಾರು ಆರು ಮೈಲಿ ದೂರದ ಊರಲ್ಲಿದ್ದ ಅವರ ಅಕ್ಕನ ಮಗನ ಮದುವೆ ಮೂರ್ನಾಲ್ಕು ತಿಂಗಳ ಹಿಂದೆ ಪಕ್ಕದ ಹಳ್ಳಿಯ ಪಟೇಲರ ಮಗಳ ಜೊತೆ ನಿಶ್ಚಯವಾಗಿತ್ತಂತೆ. ಮರುದಿನ ಬೆಳಿಗ್ಗೆ ದಿಬ್ಬಣ ಹೊರಡುವುದರಲ್ಲಿತ್ತು. ಅಂದು ಸಾಯಂಕಾಲ ಒಂಭತ್ತು ಗಂಟೆಗೆ ಮದುಮಗನಿಗೆ ಕೆಲವು 'ಶಾಸ್ತ್ರಗಳನ್ನು' ಜರುಗಿಸುವುದರಲ್ಲಿದ್ದರು. ಮದುಮಗನೇ ಸ್ವಲ್ಪ ದೂರದಲ್ಲಿದ್ದ ಪಕ್ಕದ ಮನೆಯ ಮಹಿಳೆಯರನ್ನು ಕರೆತರಲು ಹೊರ ಹೋದ. ಆ ಕ್ಷಣದಿಂದ ಅವನು ನಾಪತ್ತೆಯಾಗಿದ್ದಾನೆ. ಮದುವೆಯೂ ನಿಂತು ಹೋಯಿತು. ಪೋಲೀಸರಿಗೆ ದೂರು ಸಲ್ಲಿಸಿದ್ದಾಯಿತು. ಅಲ್ಲೆಲ್ಲಾ ಅದೆಷ್ಟು ಹುಡುಕಿದರೂ ಅವನನ್ನು ಪತ್ತೆ ಮಾಡಲಾಗಿಲ್ಲ. ಶಿಕಾರಿಪುರದ ಕಡೆ ಕೆಲವು ದೂರದ ಸಂಬಂಧಿಗಳಿದ್ದು ಅಲ್ಲೆಲ್ಲಿಯಾದರೂ ಸೇರಿಕೊಂಡಿರಬಹುದೇ ಎಂದು ಹುಡುಕಲು ಅವರು ಆದಿನ ಅತ್ತ ಹೊರಟಿದ್ದರು ಎಂಬುದನ್ನು ಅವರಲ್ಲೊಬ್ಬ ಹೇಳಿ ನಿಡುಸುಯ್ದ. ಅವನ ಹೇಳಿಕೆಯಿಂದ ಪ್ರಕರಣದ ಹಿಂದೆ ಮತ್ತೇನಾದರೂ ಸುಳುಹು ತಿಳಿಯಬಹುದೆಂದು ಅದರ ಹಿನ್ನೆಲೆಯಲ್ಲಿ ಏನಾದರೂ ಗುಮಾನಿಗಳಿರಬಹುದೇ ಎಂದು ವಿಚಾರಿಸತೊಡಗಿದರು. ಈಗ ಮತ್ತೊಬ್ಬ ಮಾತಾಡಿದ. ಹೆಣ್ಣು ಕೊಡಬೇಕೆಂದಿದ್ದ ಪಟೇಲರು ಸಿರಿವಂತರಾಗಿದ್ದರೆಂದೂ,

ಹುಡುಗ ಸ್ವಲ್ಪ ಓದಿಕೊಂಡು ಚಾಲಾಕಿನವನಾಗಿದ್ದುದರಿಂದ ತನ್ನ ಮಗಳನ್ನು ಕೊಡುವುದಲ್ಲದೆ, ಅವರ ಆಸ್ತಿ, ಮನೆ, ಪಟೇಲಗಿರಿ ಮುಂತಾದವಕ್ಕೆಲ್ಲಾ ಮುಂದೆ ಅವನನ್ನೇ ವಾರಸುದಾರರನ್ನಾಗಿಸುವ ನಿರ್ಧಾರ ಮಾಡಿದ್ದರು. ಆದರೆ ಅವರ ದಾಯಾದಿಗಳು, ಪಟೇಲರು ಅವನಿಗೆ ತಮ್ಮ ಚರಾಸ್ತಿ ಹಾಗೂ ಹಣಕಾಸುಗಳನ್ನು ಕೊಡುವುದರ ಬಗೆಗೆ ಚಕಾರ ಎತ್ತಲಿಲ್ಲ. ಆದರೆ ಜಮೀನು ಮುಂತಾದ ಸ್ಥಿರಾಸ್ತಿಗಳು ಹಾಗೂ ಪಟೇಲಗಿರಿಯನ್ನು ಅಳಿಯನಿಗೆ ಕೊಡುವ ಬಗೆಗೆ ವಿರೋಧ ವ್ಯಕ್ತಪಡಿಸಿದರು. ಆ ದಿಸೆಯಲ್ಲಿ ಜಗಳ ದೊಂಬಿಗಳೂ ನಡೆದವು. ಪಟೇಲರು ಅವಾವನ್ನೂ ಲೆಕ್ಕಿಸದೆ ಮದುವೆಯ ನಿರ್ಧಾರ ಮುಂದುವರಿಸಿದ್ದರು. ಅದರಿಂದ ಮದುಮಗ ನಾಪತ್ತೆಯಾದುದಕ್ಕೆ ಅವರ ಮೇಲೆ ಗುಮಾನಿ ಇರುವುದಾಗಿ ತಿಳಿಸಿದರು. ನಾಟಕೀಯವಾದ ಅವರ ವಿವರಣೆ ಸಬ್‌ಇನ್ಸ್‌ಪೆಕ್ಟರಿಗೆ ಪ್ರಕರಣದ ಬಗೆಗೆ ಮಾರ್ಗದರ್ಶನ ನೀಡುವಂತಿತ್ತು.

ಮೂಳೆಗಳ ಗಂಟನ್ನು ಆಸ್ಪತ್ರೆಗೆ ತಂದ ಮೇಲೆ ಮುಂದೇನು ಎಂಬುದರ ನಿರ್ಧಾರವಾಗಬೇಕು. ಕಾಲೇಜಿನಲ್ಲಿ ಬೋಧಿಸಿದಂತೆ ಅವುಗಳನ್ನು ವೈದ್ಯ-ನ್ಯಾಯಶಾಸ್ತ್ರದ ಪ್ರಾಧ್ಯಾಪಕ ಅಂತಸ್ತಿನ ವಿಶೇಷಜ್ಞರಿಗೆ ಕಳುಹಿಸಬೇಕಾಗುತ್ತದೆ; ಅವರು ಆ ಮೂಳೆ ಗಂಡಸಿನದ್ದೋ, ಹೆಂಗಸಿನದ್ದೋ, ಅವರ ವಯಸ್ಸು ಹಾಗೂ ಸಾವಿನ ಕಾರಣ ಮುಂತಾದವುಗಳ ಬಗೆಗೆ ಅಭಿಪ್ರಾಯ ನೀಡಬೇಕಾಗುತ್ತದೆ. ನನ್ನ ಈ ಅಭಿಪ್ರಾಯವನ್ನು ಪೋಲಿಸಿನವರಿಗೆ ಪತ್ರ ಬರೆದು ತಿಳಿಸಿದೆ. ನನ್ನ ಅಭಿಪ್ರಾಯವನ್ನು ಒಪ್ಪಲು ಅವರು ತಯಾರಿರಲಿಲ್ಲ. ಆ ಎಲ್ಲಾ ವಿಚಾರಗಳ ಬಗೆಗೆ ನಾನೇ ಅಭಿಪ್ರಾಯ ನೀಡಬೇಕೆಂದು ಪಟ್ಟು ಹಿಡಿದರು. ನನಗೆ ಆ ತನಕ ಯಾವುದೇ ವೈಯಕ್ತಿಕ ಅನುಭವವಿರಲಿಲ್ಲ. ಆದರೂ ನನ್ನ ಬಳಿಯಿದ್ದ ಪುಸ್ತಕಗಳನ್ನು ಅಭ್ಯಾಸ ಮಾಡಿ ಮೂಳೆಗಳಿಗೆ ಸಂಬಂಧಿಸಿದ ಮೇಲಿನ ವಿಷಯಗಳ ಬಗೆಗೆ ಮನವರಿಕೆ ಮಾಡಿಕೊಂಡೆ. ಆ ಹಿನ್ನೆಲೆಯಿಂದ ಮೂಳೆಗಳನ್ನು ವಿವರವಾಗಿ ಅಭ್ಯಾಸ ಮಾಡಿದೆ. ಅದರಿಂದ ಆ ಮೂಳೆಗಳು ೧೮-೨೦ ವಯಸ್ಸಿನ ಗಂಡಸಿನ ಅಸ್ಥಿಪಂಜರವಾಗಿರಬಹುದು; ಆದರೆ ಸಾವಿನ ಕಾರಣವನ್ನು ಗುರುತಿಸುವುದಕ್ಕೆ ಅವುಗಳಲ್ಲಿ ಸಾಕ್ಷಾಧಾರಗಳಿಲ್ಲ ಎಂದು ನನ್ನ ಅಭಿಪ್ರಾಯವನ್ನು ತಿಳಿಸಿದೆ. ಪೋಲೀಸಿನವರು ನನ್ನ ಅಭಿಪ್ರಾಯವನ್ನು ಅವರ ಮೇಲಿನವರಿಗೆ ತಿಳಿಸಿರಬೇಕು. ಅವರು ನಾನು ಮೊದಲು ಹೇಳಿದಂತೆ ಇಂತಹ ಪ್ರಕರಣಗಳಲ್ಲಿ ವೈದ್ಯ-ನ್ಯಾಯಶಾಸ್ತ್ರದ ಪ್ರಾಧ್ಯಾಪಕರದೇ ಪರಿಣಿತ ಅಭಿಪ್ರಾಯ (Expert Opinion) ನ್ಯಾಯಸಮ್ಮತವೆಂದು ಹೇಳಿ, ಅವುಗಳನ್ನು ಮೈಸೂರು ಮೆಡಿಕಲ್ ಕಾಲೇಜಿಗೆ ಕಳುಹಿಸುವಂತೆ ಆದೇಶಿಸಿದರಂತೆ. ಅದರಂತೆ ಮತ್ತೆಲ್ಲಾ ವಿಧಿ ವಿಧಾನಗಳನ್ನನುಸರಿಸಿ ಮೈಸೂರಿನ ವೈದ್ಯ-ನ್ಯಾಯಶಾಸ್ತ್ರದ ಪ್ರಾಧ್ಯಾಪಕರಿಗೆ ಕಳುಹಿಸಿದೆ. ಕೆಲ ದಿನಗಳ ನಂತರ ಅವರಿಂದ ಬಂದ ಅಭಿಪ್ರಾಯವೂ ನಾನು ನೀಡಿದ್ದನ್ನೇ ಪುಷ್ಟೀಕರಿಸಿತ್ತು!

ಈ ಪ್ರಕರಣ ಹೇಗೆ ತೀರ್ಮಾನವಾಯಿತೆಂಬುದರ ಬಗೆಗೆ ತುಂಬಾ ಕುತೂಹಲಿಯಾಗಿದ್ದೆ. ಆದರೆ ಅಂತಿಮವಾಗಿ ಅದು ಯಾವುದೇ ಒಂದು ಇತ್ಯರ್ಥಕ್ಕೆ ಬಾರದೇ ವಜಾ ಆಯಿತಂತೆ. ಶವ ಬಿದ್ದಿದ್ದ ಜಾಗ ಯಾವ ಜಿಲ್ಲೆಗೆ ಸೇರಿದ್ದೆಂಬುದರ ಬಗೆಗೆ ಸರ್ವೇ ನಡೆಸಿದಾಗ ಅದು ಧಾರವಾಡದ ಸರಹದ್ದಿನೊಳಗಿರುವುದು ತಿಳಿಯಿತಂತೆ. ಶಿಕಾರಿಪುರ ಪೋಲಿಸಿನವರು ಸಂಬಂಧಿಸಿದ ಕಡತವನ್ನು ಧಾರವಾಡದವರಿಗೆ ವರ್ಗಾಯಿಸಿದರು. ಪ್ರಕರಣ ಎರಡು ಜಿಲ್ಲೆಯ ಪೋಲಿಸರ ತಿಕ್ಕಾಟದಲ್ಲಿ ನರಳುವಂತಾಯಿತಂತೆ. ಇನ್ನು ಫಲಿತಾಂಶವೇನಾಗಲು ಸಾಧ್ಯ.

## ಕೋರ್ಟುಗಳ ಕಟಕಟೆಗಳಲ್ಲಿ....

ಹೊಡೆದಾಟ, ಶವಪರೀಕ್ಷೆ ಮುಂತಾದವುಗಳಲ್ಲಿ ಹೆಚ್ಚಾಗಿ ತೊಡಗಿಸಿಕೊಂಡಂತೆಲ್ಲಾ ಸಾಕ್ಷಿ ನೀಡಲು ಕೋರ್ಟುಗಳಿಗೆ ತಿರುಗಾಡುವುದು ಮಾಮೂಲಿನ ಕೆಲಸವಾಗಿ ಬಿಟ್ಟಿತು. ಮೊದ ಮೊದಲು ಸಾಗರದ ಕೋರ್ಟಿಗೆ ಹೋಗುತ್ತಿದ್ದೆ. ಹಿಂದೆಂದೂ ಅಂತಹ ಸನ್ನಿವೇಶಗಳನ್ನು ಎದುರಿಸಿದ ಅನುಭವವಿಲ್ಲದೆ, ಸ್ವಲ್ಪ ಗಾಬರಿಯಾಗುತ್ತಿತ್ತು. ದಿನ ಕಳೆದಂತೆಲ್ಲಾ ಅಭ್ಯಾಸವಾಗಿ ಎಂತಹವನ್ನಾದರೂ ಎದುರಿಸುವ ಧೈರ್ಯ ಉಂಟಾಯಿತು. ಧಾರವಾಡದ ಸೆಷನ್ಸ್ ಕೋರ್ಟಿನಲ್ಲಾದ ಒಂದು ಅನುಭವ ಉಲ್ಲೇಖನೀಯ. ಅದೇ ಮೊದಲ ಸಾರಿ ಸೆಷನ್ಸ್ ಕೋರ್ಟಿಗೆ ಹಾಜರಾಗಿದ್ದು ಕೂಡ.

ಕೋರ್ಟಿನಲ್ಲಿ ಜರುಗಿದ ವಿದ್ಯಮಾನಗಳನ್ನು ಹೇಳುವ ಮೊದಲು ಆ ಪ್ರಕರಣದ ಬಗೆಗೆ ಹಿನ್ನೆಲೆ ಒದಗಿಸುವುದು ಸೂಕ್ತವೆನಿಸುತ್ತದೆ.

ಶಿಕಾರಿಪುರದ ಮತ್ತೊಂದು ಸರಹದ್ದಿನಲ್ಲಿ ಗುಡ್ಡ ಬೆಟ್ಟಗಳಲ್ಲಿದ್ದ ಗುಡ್ಡೇಕೊಪ್ಪ ಎಂಬ ಊರಿನಲ್ಲಿ ಕೊಲೆ ಪ್ರಕರಣ ಒಂದು ಜರುಗಿತ್ತು. ಸಬ್‌ಇನ್ಸ್‌ಪೆಕ್ಟರ್ ಸ್ಥಳಕ್ಕೆ ಹೋದವರು ಶವವನ್ನು ಶಿಕಾರಿಪುರಕ್ಕೆ ಸಾಗಿಸುವುದಕ್ಕೆ ಮಾರ್ಗ ಸರಿಯಾಗಿಲ್ಲವೆಂದು ನನ್ನನ್ನೇ ಅಲ್ಲಿಗೆ ಕರೆತರುವಂತೆ ಕೋರಿಕೆ ಸಲ್ಲಿಸಿದರು. ಸುಮಾರು ಹತ್ತು ಮೈಲಿಗಳ ದೂರದಲ್ಲಿದ್ದ ಆ ಕೊಂಪೆ ಬೆಟ್ಟದ ಮೇಲಿತ್ತು. ಪೋಲಿಸರಲ್ಲಿದ್ದ ಜೀಪನ್ನು ಅವರೇ ತೆಗೆದುಕೊಂಡು ಹೋಗಿದ್ದರಿಂದ ನಾವು ಬೈಸಿಕಲ್ ಪ್ರಯಾಣ ಮಾಡಬೇಕಾಯಿತು. ಏಳೆಂಟು ಮೈಲಿಗಳ ದೂರ ಸಾಗಿದ ನಂತರ ಮುಂದಿನ ಹಾದಿ ದುರ್ಗಮ ವಾಗಿರುವುದರಿಂದ ನೇರವಾಗಿ ಕಾಲ್ನಡಿಗೆಯಲ್ಲಿ ಬೆಟ್ಟ ಹತ್ತುವುದೇ ಸುಲಭವೆಂದು ಯಾರೋ ಸಲಹೆ ಮಾಡಿದರು. ಹಾಗೆಯೇ ಕಷ್ಟಪಟ್ಟು ಹತ್ತಿದ್ದಾಯಿತು. ಸಬ್‌ಇನ್ಸ್‌ಪೆಕ್ಟರ್ ಊಟೋಪಚಾರ ಗಳನ್ನು ಮುಗಿಸಿ ದೇವಸ್ಥಾನದ ಚಾವಡಿಯಲ್ಲಿ ಹರಟೆ ಹೊಡೆಯುತ್ತಾ ಕುಳಿತಿದ್ದರು. ಸ್ಥಳಕ್ಕೇ ಬರುವಂತೆ ಕೋರಿಕೆ ಕಳುಹಿಸಿದ ಮೇಲೆ ಡಾಕ್ಟರ ಮೇಲೆ ಕರುಣೆ ಉಂಟಾಯಿತಂತೆ. ಅವರಿಗೆ ಕಷ್ಟ ಕೊಡುವ ಬದಲು ಶವವನ್ನು ಬೇರೊಂದು ಮಾರ್ಗದಲ್ಲಿ ಗಾಡಿಯ ಮೇಲೆ ಕಳುಹಿಸಿ ಬಿಟ್ಟರಂತೆ! ಸಿಟ್ಟು ನೆತ್ತಿಗೇರಿತಾದರೂ ಅದುಮಿ ಹಿಡಿಯಬೇಕಾಯಿತು. ಅವರ ಜೊತೆ ಜೀಪಿನಲ್ಲಿ ಶಿಕಾರಿಪುರಕ್ಕೆ ಹಿಂದಿರುಗಿ ಅಂದು ಮಧ್ಯಾಹ್ನದ ನಂತರ ಶವಪರೀಕ್ಷೆ ಜರುಗಿಸಿದೆ. ವ್ಯಕ್ತಿಯ ತಲೆಯ ಮೇಲೆ ಯಾರೋ ಭಾರವಾದ ಕಲ್ಲನ್ನು ಎತ್ತಿ ಹಾಕಿದ್ದರಿಂದ ತಲೆ ಅಪ್ಪಚ್ಚಿಯಾಗಿ ಮರಣ ಹೊಂದಿದ್ದ.

ಈ ಪ್ರಕರಣದ ಕತೆಯೂ ಸ್ವಾರಸ್ಯಕರವಾಗಿದೆ. ಮರಣ ಹೊಂದಿದ ವ್ಯಕ್ತಿ ತನ್ನ ಮೊದಲ ಹೆಂಡತಿಯ ಶೀಲವನ್ನು ಶಂಕಿಸಿ 'ಸೋಡಚೀಟಿ' (Divorce) ಕೊಟ್ಟು ಬಿಟ್ಟಿದ್ದನಂತೆ. ಆಕೆ ತನ್ನ ಪ್ರಿಯಕರನ ಜೊತೆ ಇಪ್ಪತ್ತು ವರ್ಷಗಳ ಹಿಂದೆ ಪಲಾಯನ ಮಾಡಿದ್ದಳಂತೆ. ಕೆಲವು ದಿನಗಳಿಂದ ಧಾರವಾಡದ ಕಡೆಯಿಂದ ಬರುತ್ತಿದ್ದ ಯುವಕನೊಬ್ಬ ಆ ವ್ಯಕ್ತಿಯು (ಮರಣ ಹೊಂದಿದ) ಮೊದಲ ಹೆಂಡತಿಯ ಮಗನೆಂದು ಹೇಳುತ್ತಿದ್ದನಂತೆ; ಅವನ ತಾಯಿ ಅಲ್ಲಿಂದ ಹೋಗುವಾಗ ಗರ್ಭಿಣಿಯಾಗಿದ್ದು ಅಲ್ಲಿಗೆ ಹೋದ ಕೆಲವೇ ತಿಂಗಳಲ್ಲಿ ಹುಟ್ಟಿದವನಂತೆ. ಅದರಿಂದ ಅವನ ಆಸ್ತಿಯಲ್ಲಿ ತನಗೂ ಪಾಲು ಕೊಡಬೇಕೆಂಬ ವಾದವನ್ನು ಮುಂದಿಡಲಾರಂಭಿಸಿದ್ದ. ಆ ಸಲುವಾಗಿ ಜಗಳ, ಹೊಡೆದಾಟಗಳು ಆಗಿದ್ದವು. ಸಮಸ್ಯೆ ಬಹಳ ಕಾಲ ನೆನೆಗುದಿಗೆ ಬಿದ್ದಿತ್ತು. ಆ ವ್ಯಕ್ತಿಯು ತನ್ನ ಹೊಲಗಳನ್ನು ಕಾಯುವ ಸಲುವಾಗಿ ಅಲ್ಲಿಯೇ ಹತ್ತಿರದ ಕೊಟ್ಟಿಗೆಯೊಂದರಲ್ಲಿ ರಾತ್ರಿ ಹೊತ್ತು ಮಲಗಿರುತ್ತಿದ್ದ. ಒಂದು ರಾತ್ರಿ ಅವನ ತಲೆಯ ಮೇಲೆ ಯಾರೋ ಭಾರವಾದ ಕಲ್ಲನ್ನು ಎತ್ತಿ

ಹಾಕಿದ್ದರಿಂದ ಅವನು ಸಾವಿಗೀಡಾದ. ಧಾರವಾಡದ ಕಡೆಯಿಂದ ಬರುತ್ತಿದ್ದು ಅವನ ಮಗನೆಂದು ಹಕ್ಕುಬಾಧ್ಯತೆ ಸಾಧಿಸಲು ಬರುತ್ತಿದ್ದ ಯುವಕನೇ ಆ ಕೃತ್ಯವನ್ನು ಜರುಗಿಸಿರಬೇಕೆಂದು ಅಪರಾಧ ಹೊರೆಸಿದ್ದರು. ಹಿಂದಿನ ಪ್ರಕರಣದಂತೆಯೇ ಮೃತ ವ್ಯಕ್ತಿ ಮಲಗಿದ್ದ ಜಾಗ ಧಾರವಾಡ ಜಿಲ್ಲೆಗೆ ಸೇರಿದ್ದೆಂದು ಸರ್ವೆಯಿಂದ ತಿಳಿದು ಬಂದಿತು; ಅದರಿಂದ ಪ್ರಕರಣ ಧಾರವಾಡದ ನ್ಯಾಯಾಲಯದ ವಿಚಾರಣೆಗೊಳಪಟ್ಟಿತು.

ನಾನು ಕಳುಹಿಸಿದ ಶವಪರೀಕ್ಷಾ ವರದಿ ಧಾರವಾಡದ ಸರ್ಕಾರಿ ವಕೀಲರ ಕೈ ಸೇರುತ್ತಲೇ, ಅದರ ಬಗೆಗೆ ಹಲವಾರು ಅನುಮಾನಗಳಿಗೆ ಸಮಜಾಯಿಷಿ ನೀಡುವಂತೆ ಪತ್ರ ಬರೆದಿದ್ದರು. ಅವೆಲ್ಲಾ ಶವಪರೀಕ್ಷೆಯ ವರದಿಯ ನಮೂನೆಗಳಲ್ಲಿ (Form)ಗಳಲ್ಲಿದ್ದ ವ್ಯತ್ಯಾಸ ಗಳಿಂದಾಗಿದ್ದು, ಅವುಗಳಿಗೆ ಸಮಂಜಸ ಉತ್ತರ ನೀಡಿದ್ದೆ. ಸೆಷೆನ್ಸ್ ಕೋರ್ಟಿನಲ್ಲಿ ವಿಚಾರಣೆಯ ದಿನ ನಿಗದಿಯಾದಂತೆಯೇ ನನಗೆ ಹಾಜರಾಗಲು 'ಸಮನ್ಸ್' ಬಂದಿತು. ಶವಪರೀಕ್ಷಾ ವರದಿಯನ್ನು ಮತ್ತೆ ಓದಿದ್ದಲ್ಲದೆ, ಆ ಬಗೆಗೆ ನನ್ನಲ್ಲಿದ್ದ ಪುಸ್ತಕಗಳನ್ನು ಅಭ್ಯಾಸ ಮಾಡಿದೆ. ಅದೇ ಮೊದಲ ಬಾರಿಗೆ ಸಷೆನ್ಸ್ ಕೋರ್ಟಿಗೆ, ಅದರಲ್ಲೂ ಮುಂಬಯಿ ಕರ್ನಾಟಕದ ಕೋರ್ಟ್ ಒಂದರಲ್ಲಿ ಹಾಜರಾಗಬೇಕಾದ್ದರಿಂದ ಮನಸ್ಸಿನಲ್ಲಿ ಒಂದು ತರಹದ ಅಳುಕು ಉಂಟಾಗುವಂತಿತ್ತು. ಕೋರ್ಟಿನ ಹಿಯರಿಂಗ್‌ನ ಹಿಂದಿನ ದಿನವೇ ಹುಬ್ಬಳ್ಳಿಯನ್ನು ತಲುಪಿ, ಉಳಿದುಕೊಂಡೆ. ಮರುದಿನ ಬೆಳಿಗ್ಗೆ ಸರ್ಕಾರಿ ವಕೀಲರ ಮನೆಯನ್ನು ಪತ್ತೆ ಮಾಡಿ ಅವರನ್ನು ಭೇಟಿ ಮಾಡಿದೆ. ಅವರು ಮತ್ತಷ್ಟು ಅನುಮಾನಗಳ ಬಗೆಗೆ ಸಮಜಾಯಿಷಿ ಕೇಳಿದರು; ಅವುಗಳನ್ನು ವಿವರಿಸಿದೆ; ಹಾಗೂ ಅವರು ಪ್ರಶ್ನೆಗಳನ್ನು ಕೇಳುವ ಬಗೆಗೆ, ಪ್ರತಿವಾದಿಯ ವಕೀಲರು ಪ್ರಶ್ನೆ ಕೇಳುವ ಬಗೆಗೆಲ್ಲಾ ಹೇಗೆ ಉತ್ತರಿಸಬೇಕೆಂಬುದನ್ನೂ ಸೂಕ್ಷ್ಮವಾಗಿ ತಿಳಿಸಿದರು.

ಹನ್ನೊಂದು ಗಂಟೆಗೆ ಸರಿಯಾಗಿ ಕೋರ್ಟಿನ ಕಟಕಟೆಯಲ್ಲಿ ನಿಲ್ಲಿಸಿ ಪ್ರಮಾಣ ವಚನ ಮಾಡಿಸಿದರು. ನಡುವಯಸ್ಸು ದಾಟಿದವರಂತೆ ಕಂಡ ನ್ಯಾಯಾಧೀಶರು ಹಳೇ ಮೈಸೂರು ಕಡೆಯ ಸೌಮ್ಯ ಸ್ವಭಾವದವರಂತೆ ಗೋಚರಿಸಿದರು. ಪ್ರಸ್ತುತ ಪ್ರಕರಣವನ್ನು ಎರಡು ಜನ ಯುವ ವಕೀಲರು ವಹಿಸಿಕೊಂಡಿರುವ ಸೂಚನೆಗಳು ಕಂಡು ಬಂದವು. ಅವರಲ್ಲೊಬ್ಬರು ನನಗೆ ಸಂಬಂಧಿಸಿದ ವಿಷಯಗಳ ಬಗೆಗೆ ಪಾಟೀಸವಾಲು ಮಾಡುವ ಜವಾಬ್ದಾರಿ ವಹಿಸಿಕೊಂಡಿದ್ದರು.

ಮೊದಲಿಗೆ ಸರ್ಕಾರಿ ವಕೀಲರು ಪ್ರಕರಣದ ಬಗೆಗೆ, ಶವ ಪರೀಕ್ಷೆ ಜರುಗಿಸಿದ ರೀತಿ, ಗಾಯಗಳ ವಿವರ ಮತ್ತು ಆ ಬಗೆಗೆ ನನ್ನ ಅಭಿಪ್ರಾಯಗಳನ್ನು ಹೊರಗೆಡಹುವ ಪ್ರಶ್ನೆಗಳನ್ನು ಕೇಳಿದರು; ಸಮಂಜಸ ಉತ್ತರಗಳನ್ನು ನೀಡಿದೆ. ಮುಂದೆ ಪ್ರತಿವಾದಿಯ ವಕೀಲರ ಸರದಿ; ಅವರಲ್ಲೊಬ್ಬರು ನನ್ನ ಬಳಿ ಸಾರಿದಾಗ ಅದೇನೋ ಸಿಟ್ಟು ಬಂದವರಂತೆ ಕಾಣಿಸಿದರು. ಮೊದಲು ಸಮಾಧಾನ ಚಿತ್ತದಿಂದಲೇ ಸರ್ಕಾರಿ ವಕೀಲರಿಗೆ ಉತ್ತರಿಸಿದ್ದರೂ ಇವರೆದುರಿಗೆ ಅದೇಕೊ ಮೈ ಬೆವರಿ, ನಾಲಿಗೆ ಒಣಗಿದಂತಾಯಿತು. ಆದರೂ ಧೈರ್ಯವನ್ನೆಲ್ಲಾ ಕ್ರೋಢೀಕರಿಸಿ ಉತ್ತರಿಸಲು ತಯಾರಾದೆ; ಅವರು ಪ್ರಶ್ನಿಸಲಾರಂಭಿಸಿದರು:

"ನಿಮ್ಮ ಹೆಸರೇನು ಡಾಕ್ಟರ್?" - ನಾನು ಉತ್ತರಿಸಿದೆ

"ನಿಮ್ಮ ವಯಸ್ಸೆಷ್ಟು?" - "೨೮ ವರ್ಷಗಳು" ನನ್ನ ಉತ್ತರ

"ಯಾವ ಮೆಡಿಕಲ್ ಕಾಲೇಜಿನಲ್ಲಿ ನೀವು ಓದಿದ್ದು?"

"ಮೈಸೂರು ಮೆಡಿಕಲ್ ಕಾಲೇಜು"

"ಯಾವ ಪದವಿ ಗಳಿಸಿದ್ದೀರಿ?" "ಎಂ.ಬಿ., ಬಿ.ಎಸ್.,"

"ನೀವು ಸರ್ಕಾರಿ ಕೆಲಸಕ್ಕೆ ಸೇರಿ ಎಷ್ಟು ಸಮಯವಾಗಿದೆ?"

"ಎರಡೂವರೆ ವರ್ಷ"

"ಈ ತನಕ ಎಷ್ಟು ಶವಪರೀಕ್ಷೆ ಮಾಡಿರಬಹುದು ನೀವು?"

"ಸುಮಾರು ಮೂವತ್ತರ ಮೇಲಿರಬಹುದು"

ನಂತರ ಮೃತನ ದೇಹದ ಮೇಲಾಗಿದ್ದ ಗಾಯಗಳ ಬಗೆಗೆ ಕೆಲವು ವಿವರಣಾತ್ಮಕ ಪ್ರಶ್ನೆಗಳನ್ನು ಕೇಳಿದರು. ಅವುಗಳಿಗೂ ಸೂಕ್ತ ಉತ್ತರ ನೀಡಿದೆ.

"ಈ ತನಕ ವಿವರಿಸಿದ ಗಾಯಗಳು ಮೃತ ಹೊಂದಿದ ವ್ಯಕ್ತಿಯನ್ನು ಯಾವ ದಿಕ್ಕಿನಿಂದ ಆಕ್ರಮಣ ಮಾಡಿದ್ದರಿಂದ ಆಗಿರಬಹುದೆಂದು ಹೇಳುತ್ತೀರಾ ಡಾಕ್ಟರ್?" ಎಂದು ನನ್ನನ್ನು ದಿಟ್ಟಿಸಿ ನೋಡಲಾರಂಭಿಸಿದರು.

ನಮ್ಮಿಬ್ಬರ ನಡುವಿನ ಪ್ರಶ್ನೋತ್ತರಗಳನ್ನು ಗಮನವಿಟ್ಟು ಆಲಿಸುತ್ತಿದ್ದ ನ್ಯಾಯಾಧೀಶರು ವಕೀಲರನ್ನುದ್ದೇಶಿಸಿ, "ಏನು, ನೀವು ಡಾಕ್ಟರನ್ನು ಕೇಳುತ್ತಿರುವುದು? ಅವರೇನು ಅಲ್ಲಿ ಪ್ರತ್ಯಕ್ಷದರ್ಶಿಯಾಗಿ ನಿಂತುಕೊಂಡಿದ್ದರೆ? ಈಜಲು ಸಾಧ್ಯವಾಗದ ವಲಯಕ್ಕೆ ನೀವೀಗ ಪ್ರವೇಶಿಸುತ್ತಿದ್ದೀರಲ್ಲಾ?" ("You are entering an area where you cannot swim") ಎಂದು ಬಿರುಸಾಗಿಯೇ ನುಡಿದರು.

ನ್ಯಾಯಾಧೀಶರಿಂದ ಅಂತಹ ಅಭಿಪ್ರಾಯ ವ್ಯಕ್ತವಾಗುತ್ತಿದ್ದಂತೆಯೇ ವಕೀಲರು ತಮ್ಮ ಕುರ್ಚಿಯಲ್ಲಿ ದಸಕ್ಕನೆ ಕುಳಿತುಕೊಂಡು ಬಿಟ್ಟರು; ಬೆವರುತ್ತಿದ್ದ ಮುಖವನ್ನು ಒರೆಸಿಕೊಳ್ಳಲಾರಂಭಿಸಿದರು; ಕೈಗಳು ನಡುಗುವಂತಿದ್ದವು. ಅವರ ಸಹವರ್ತಿ ವಕೀಲರು ಎದ್ದು ನಿಂತು ಮತ್ತೆ ಪ್ರಶ್ನೆಗಳನ್ನು ಮುಂದುವರಿಸುವಂತೆ ಪುಸಲಾಯಿಸಿದರು. ನ್ಯಾಯಾಧೀಶರೂ ಅವರ ಕಡೆ ತಿರುಗಿ "ಡಾಕ್ಟರಿಗೆ ಮತ್ತೇನು ಕೇಳುವುದಿಲ್ಲವೇ?" ಎಂದು ನೆನಪಿಸಿದರು. ವಕೀಲರು ಎದ್ದು ನಿಂತಂತೆ ಮಾಡಿ "Sorry, Your Honour ಮತ್ತೇನಿಲ್ಲ" ಎಂದು ಕುಳಿತುಬಿಟ್ಟರು! ನ್ಯಾಯಾಧೀಶರು ನಾನು ಕಟಕಟೆಯಿಂದ ಇಳಿಯುವಂತೆ ಹೇಳಿದರು.

ಅಲ್ಲಿಂದ ಹೊರಬಂದವನು ಪಕ್ಕದ ಕೊಠಡಿಯಲ್ಲಿ ಕೋರ್ಟಿಗೆ ಹಾಜರಾದ ಬಗೆಗೆ ದೃಢೀಕರಣ ಪತ್ರ ಪಡೆಯಲು ಕಾಯ್ದು ಕುಳಿತಿದ್ದೆ. ಅಷ್ಟರಲ್ಲೇ ನನ್ನನ್ನು ಪಾಟೀ ಸವಾಲು ಮಾಡಿದ ವಕೀಲರಿಬ್ಬರೂ ಅಲ್ಲಿಗೆ ಬಂದರು. ತೀರಾ ಎಳಸಿನ ಡಾಕ್ಟರಾಗಿರುವಂತೆ ಕಾಣುತ್ತಿದ್ದ ನನ್ನ ಪರೀಕ್ಷಾ ವರದಿಗೆ ನ್ಯಾಯಾಧೀಶರು ಹೆಚ್ಚಿನ ಲಕ್ಷ್ಯ ವಹಿಸದಂತಾಗಲೆಂದು ಅವರು ಮೊದಲಿಗೆ ನನ್ನ ಬಗೆಗೆ ತೀರಾ ವೈಯಕ್ತಿಕವೆನ್ನಬಹುದಾದ ಪ್ರಶ್ನೆ ಕೇಳಬೇಕಾಯಿತಂತೆ; ಆದರೆ ನನ್ನ ಅನುಭವದ ಅರಿವಾದ ಮೇಲೆ ಮುಂದೇನು ಕೇಳಬೇಕೆಂಬುದೇ ಅವರಿಗೆ ಹೊಳೆಯಲಿಲ್ಲವಂತೆ! ಅನ್ಯಥಾ ಭಾವಿಸಬಾರದೆಂದು ಹೇಳಿ ಕೈಕುಲುಕಿ ಹೊರಟು ಹೋದರು.

## ಸಂತ ವಿನೋಬಾ - ಮರೆಯಲಾಗದ ಒಂದು ಭೇಟಿ

ಮಹಾತ್ಮಾಗಾಂಧಿಯವರ ನಾಮ ಸ್ಮರಣೆಯಿಂದಲೇ ಪುಳಕಿತಗೊಳ್ಳುವ ಕಾಲವೊಂದಿತ್ತು. ಸ್ವಾತಂತ್ರ್ಯ ಲಭಿಸಿದ ಸ್ವಲ್ಪ ಸಮಯದಲ್ಲೇ ಅವರ ಹತ್ಯೆಯಾದ್ದರಿಂದ ನಮ್ಮ ತಲೆಮಾರಿನವರಿಗೆ ಅವರ ದರ್ಶನ ಸಾಧ್ಯವಾಗಲಿಲ್ಲ. ಗಾಂಧಿಯವರಂಥ ಮಾನವ ಸ್ವರೂಪಿ ಈ ಭೂಮಿಯ ಮೇಲೆ ನಡೆದಾಡಿದ್ದರೆಂಬುವುದನ್ನು ಈಗ ಊಹಿಸುವುದೂ ಕಷ್ಟ. ಅವರ ನೆಚ್ಚಿನ ಅನುಯಾಯಿ ವಿನೋಬಾ ಭಾವೆ- ಸಂತ ವಿನೋಬಾ - ಶಿಕಾರಿಪುರಕ್ಕೆ ಭೇಟಿ ನೀಡಿದ ಸಮಯ ಅವಿಸ್ಮರಣೀಯ.

ಭೂದಾನದ ಪಾದಯಾತ್ರೆ ಆಂದೋಲನ ಪರಮೋಚ್ಚ ಹಂತದಲ್ಲಿದ್ದ ಕಾಲ ಅದು. ಡಿಸೆಂಬರ್ ೩೧ರಂದು (೧೯೫೭) ಶಿಕಾರಿಪುರದ ಸನಿಹದ ನೆಲವಾಗಿಲು ಗ್ರಾಮದಲ್ಲಿ ಅವರ ತಂಡ ತಂಗಿತ್ತು. ಹೊಸವರ್ಷ (೧೯೫೮) ಜನವರಿ ಮೊದಲ ದಿನ ಅವರ ಪಾದಯಾತ್ರೆಯ ತಂಡ ಶಿಕಾರಿಪುರ ಪ್ರವೇಶಿಸುವ ಶುಭ ಘಳಿಗೆ. ಒಂದರೆಡು ದಿನಗಳಿಂದಲೇ ಶಿಕಾರಿಪುರ ಜನಸಮುದಾಯದಲ್ಲಿ ಮಿಂಚಿನ ಪ್ರವೇಶ ಉಂಟಾದಂತಾಗಿತ್ತು.

ವಿನೋಬಾಜಿಯವರ ತಂಡ ಶಿಕಾರಿಪುರಕ್ಕೆ ಬರುವ ಮೂರು ದಿನಗಳ ಹಿಂದೆ ಶಿವಮೊಗ್ಗಾ ಜಿಲ್ಲಾಧಿಕಾರಿಗಳಾದ ಭರಣಯ್ಯನವರು ಅಲ್ಲಿಗೆ ಬಂದಿದ್ದರು. ವಿನೋಬಾರ ಭೇಟಿಯ ಸಂದರ್ಭದಲ್ಲಿ ಮಾಡಬೇಕಾದ ಪೂರ್ವಭಾವಿ ಪರಿಶೀಲನೆ ಅವರ ಉದ್ದೇಶ; ವೈದ್ಯಕೀಯ ನೆರವಿನ ಬಗೆಗೆ ಚರ್ಚಿಸಲು ನನ್ನನ್ನು ಪ್ರವಾಸಿ ಮಂದಿರಕ್ಕೆ ಕರೆಸಿಕೊಂಡರು. ತಂಡದ ಸದಸ್ಯರಲೊಬ್ಬರಾದ ಶ್ರೀಮತಿ ಕೌಲ್ ಎಂಬವರೂ ಸಹ ಅವರ ಜೊತೆ ಬಂದಿದ್ದರು. ಯಾತ್ರೀ ತಂಡದವರ ಸ್ಥಿತಿಗಳನ್ನು ಆ ಮೊದಲೇ ನೋಡಿದ್ದ ಜಿಲ್ಲಾಧಿಕಾರಿಗಳು ಅವರೆಲ್ಲರ ಆರೋಗ್ಯ ಸಮಸ್ಯೆಗಳ ಸ್ಥೂಲ ಪರಿಚಯ ಮಾಡಿಕೊಟ್ಟರು. ಕೇಂದ್ರ ಸರ್ಕಾರದ ಹಿರಿಯ ಅಧಿಕಾರಿಯೊಬ್ಬರ ಪತ್ನಿಯಾಗಿದ್ದ ಶ್ರೀಮತಿ ಕೌಲ್ ಅವರ (ವಿನೋಬಾರ ತತ್ವಾದರ್ಶಗಳಿಗೆ ಮಾರುಹೋಗಿ ಅವರ ಪಾದಯಾತ್ರೆಯಲ್ಲಿ ಭಾಗವಹಿಸಿ ಬರಿಗಾಲಲ್ಲೇ ನಡೆಯುತ್ತಿದ್ದರು!) ಪಾದಗಳಲ್ಲಿ ಬೊಕ್ಕೆಗಳೆದ್ದು ಕೀವುಗಟ್ಟಿಕೊಂಡಿದ್ದವು. ಜಿಲ್ಲಾಧಿಕಾರಿಗಳು ಅವರಿಗೆ ಸೂಕ್ತ ಚಿಕಿತ್ಸೆ ನೀಡುವಂತೆ ಸೂಚಿಸಿದರು. ಆಸ್ಪತ್ರೆಯಿಂದ ಕೆಲವು ಔಷಧ ಸಾಮಗ್ರಿ ಮತ್ತು ಬ್ಯಾಂಡೇಜುಗಳನ್ನು ತರಿಸಿ ಶ್ರೀಮತಿ ಕೌಲ್ ಅವರಿಗೆ ಚಿಕಿತ್ಸೆ ಮಾಡಿದೆ. ಪಾದಯಾತ್ರೆಯಲ್ಲಿರುವ ಬಹುಪಾಲು ಜನರಲ್ಲಿ ಇಂತಹ ಸಮಸ್ಯೆಗಳಿರುವುದಾಗಿಯೂ ಅವರು ಇಲ್ಲಿಗೆ ಬಂದಾಗ ಸೂಕ್ತ ಚಿಕಿತ್ಸೆ ನೀಡಲು ಏರ್ಪಾಡು ಮಾಡಿಕೊಳ್ಳುವಂತೆಯೂ ಸಲಹೆ ಮಾಡಿದರು.

ಇನ್ನೆರಡು ದಿನಗಳಲ್ಲಿ ಬರಲಿರುವ ಆ ಕಾಲದ ಸಂತ ಹಾಗೂ ಅವರ ಅನುಯಾಯಿಗಳ ಸ್ವಾಸ್ಥ್ಯ ಸಮಸ್ಯೆಗಳಿಗೆ ಸಹಾಯ ಮಾಡಲು ಅವಶ್ಯಕವೆನಿಸಿದ ಏರ್ಪಾಡುಗಳತ್ತ ಗಮನ ಹರಿಸಿದೆ. ಅವರು ಅಲ್ಲಿರುವ ಒಂದು ದಿನ ನಾನು ಕಿಂಚಿತ್ ಸೇವೆ ಮಾಡಬಹುದು; ಆದರೆ ಅವರೆಲ್ಲಾ ಪ್ರತಿದಿನ ಎದುರಿಸುವ ಆರೋಗ್ಯದ ಸಮಸ್ಯೆಗಳಿಗೆ ನಾನೇದರೂ ಸಹಾಯ ಮಾಡಬಹುದೇ ಎಂಬುದರ ಬಗೆಗೂ ಯೋಚಿಸಿದೆ. ಅವರ ಪಾದಗಳಲ್ಲಾಗುತ್ತಿದ್ದ ಗಾಯಗಳು ಮತ್ತಿತರ ಸಣ್ಣ ಪುಟ್ಟ ತೊಂದರೆಗಳಿಗೆ ನೆರವಾಗಬಹುದಾದ ಯೋಚನೆಯೊಂದು ಹೊಳೆಯಿತು. ಡಾಕ್ಟರುಗಳು ಸಾಮಾನ್ಯವಾಗಿ ಬಳಸುವ ಕಿಟ್-ಬ್ಯಾಗ್(Kit Bag) ಮತ್ತು ಪ್ರಥಮ ಚಿಕಿತ್ಸೆಗೆ ಬಳಕೆಯಾಗುವ ಕೆಲವು ಮದ್ದು/ಸಲಕರಣೆಗಳನ್ನು ನನ್ನ ಸ್ವಂತ ಖರ್ಚಿನಿಂದಲೇ ಶಿವಮೊಗ್ಗಾದಿಂದ ತರಿಸಿದೆ.

ಜನವರಿ ಒಂದನೇ ತಾರೀಖು (೧೯೫೮)ರ ಬುಧವಾರ ಹತ್ತೂವರೆ ಗಂಟೆ ಸಮಯಕ್ಕೆ ವಿನೋಬಾ ತಮ್ಮ ತಂಡದವರ ಜೊತೆ. ಪಾದಯಾತ್ರೆಯಲ್ಲಿ ಶಿಕಾರಿಪುರ ಪ್ರವೇಶ ಮಾಡಿದರು. ಅವರ ತಂಡದ ೨೫-೩೦ ಜನರಲ್ಲದೆ, ಸಾವಿರಾರು ಸ್ಥಳೀಯರು ಅವರನ್ನು ಹಿಂಬಾಲಿಸಿ ಬಂದರು. ಹೈಸ್ಕೂಲು ಕಟ್ಟಡದಲ್ಲಿ ಅವರು ತಂಗಲು ಏರ್ಪಾಡುಗಳಾಗಿದ್ದವು. ಅಲ್ಲಿಗೆ ಬಂದ ಸ್ವಲ್ಪ ಸಮಯ ವಿಶ್ರಾಂತಿ ಪಡೆಯಬಹುದೆಂದು ಭಾವಿಸಿದ್ದೆವು. ಆದರೆ ಹಾಗೆ ಮಾಡದೆ ಹೈಸ್ಕೂಲಿನ ವಿಶಾಲ ಮೈದಾನದಲ್ಲಿ ಉರಿ ಬಿಸಿಲನ್ನೂ ಲೆಕ್ಕಿಸದೆ ಕೆಲವು ಸಂಗಡಿಗರೊಡನೆ ತಮ್ಮ ನಡೆದಾಟವನ್ನು ಮುಂದುವರಿಸಿದರು. ಹಿಂದಿನ ದಿನ ತಂಗಿದ್ದ ನೆಲವಾಗಿಲು, ಶಿಕಾರಿಪುರಕ್ಕೆ ಕೇವಲ ಐದು ಮೈಲಿ

ಪಾಸಲೆ; ಆದ್ದರಿಂದ ಅವರ ಪ್ರತಿದಿನದ ನಡಿಗೆಯ ಗಡುವಾದ ಹತ್ತು ಮೈಲಿಯನ್ನು ಆ ದಿನ ಪೂರೈಸಿರಲಿಲ್ಲ; ಅದಕ್ಕಾಗಿ ಈ ನಡಿಗೆ!

ಪ್ರತಿ ಜನವರಿ ಒಂದರಂದು ವಿನೋಬಾರ ತೂಕವನ್ನು ನೋಡುವ ಪರಿಪಾಟವಿದೆಯಂತೆ. ನಡಿಗೆ ಮುಗಿದ ನಂತರ ಅದೇ ಅವರ ಮುಂದಿನ ಕಾರ್ಯಕ್ರಮ. ಅಂತಹ ಸುಯೋಗ ಅಂದು ನನ್ನದಾಗಿತ್ತು. ಅಂದು ಅವರು ಕೇವಲ ಒಂದು ನೂರು ಪೌಂಡ್ ತೂಕವಿದ್ದರು; ಕಳೆದ ವರ್ಷಕ್ಕಿಂತ ಈ ಸಾರಿ ಮೂರು ಪೌಂಡು ಜಾಸ್ತಿಯಾಗಿದೆ ಎಂದು ಅವರ ಸಹಚರ ನೆನಪಿಸಿದರು. ಆದರೆ ಸಂತನಿಗೆ ಅದರಿಂದ ಸಂತಸವಾಗಲಿಲ್ಲ. ಬದಲಿಗೆ ಹಿಂದಿನ ವರ್ಷದ ಸಾಧನೆ ತೃಪ್ತಿಕರವಾಗಿರಲಿಲ್ಲವಾದ್ದರಿಂದ, ಹೆಚ್ಚಾದದ್ದು ತೂಕವೊಂದೇ ಎಂಬ ವಿಷಾದದ ಉದ್ಗಾರ!



ಶಿಕಾರಿಪುರದಲ್ಲಿ ಸಂತ ವಿನೋಬಾ

ಆ ದಿನವೆಲ್ಲಾ ಅವರ ತಂಡದವರ ಸಣ್ಣಪುಟ್ಟ ಆರೋಗ್ಯದ ಸಮಸ್ಯೆಗಳಿಗೆ ಚಿಕಿತ್ಸೆ ಮಾಡಿದೆ. ಭೂದಾನ ಮಾಡುವವರ ಜೊತೆ ಸಮಾಲೋಚನೆಗಳು ನಡೆಯುತ್ತಿದ್ದವು. ಸಂಜೆ ಪ್ರಾರ್ಥನಾ ಸಭೆಗೆ ಹೋಗುವ ಮೊದಲು ನನ್ನ ಭೇಟಿಗೆ ಅವಕಾಶ ಕಲ್ಪಿಸಿದ್ದರು. ಪ್ರಥಮ ಚಿಕಿತ್ಸೆಯ ಸಲುವಾಗಿ ನಾನು ನೀಡಬೇಕೆಂದಿದ್ದ ಪುಟ್ಟ 'ದಾನ'ದ ಬಗೆಗೆ ಕಾರ್ಯಕರ್ತರು ಮೊದಲೇ ತಿಳಿಸಿದ್ದಿರಬೇಕು. ಶಾಲೆಯ ವಿಶಾಲವಾದ ಕೊಠಡಿಯ ಒಂದು ಬದಿಯಲ್ಲಿ ತೆಂಗಿನ ನಾರಿನಿಂದ ತಯಾರಿಸಿದ ಮಂಚವೊಂದಿತ್ತು. ಅದರ ಕೆಳಗೆ ಹಾಸಿದ ಜಮಾಖಾನೆಯ ಮೇಲೆ ದಿಂಬಿಗೊರಗಿ ವಿನೋಬಾ ಕುಳಿತು ಮಾತಾಡುತ್ತಲೇ ಇದ್ದರು. ಅವರ ಮುಂದುಗಡೆ ಪುಟ್ಟ ಇಳಿಮೇಜು (Desk) ಇತ್ತು. ಅವರನ್ನು ಸಮೀಪಿಸಿ, ಶಿರಬಾಗಿ ನಮಸ್ಕರಿಸಿದೆ. ಕಾರ್ಯಕರ್ತರಲ್ಲೊಬ್ಬರು ನನ್ನ ವಿಷಯ ಪ್ರಸ್ತಾಪಿಸಿದರು. "ಆವ್ ಭಾಯಿ, ಬೈಟೋ" ಎಂದು ಆತ್ಮೀಯವಾಗಿ ಸ್ವಾಗತಿಸಿ ಕುಳ್ಳಿರಿಸಿದರು. ಪವಿತ್ರಾತ್ಮ ಸಂತನ ದಿವ್ಯದರ್ಶನದಿಂದ ನಾನು ಬಾಯಿ ಬಿಡಲಾರದೆ ಬೆರಗಾಗಿ ಕುಳಿತುಕೊಂಡೆ. ಅವರ ತಂಡದವರ ಪ್ರಥಮ ಚಿಕಿತ್ಸೆಗಾಗಿ ಅಳವಡಿಸಿಕೊಂಡು ತಂದಿದ್ದ ಕಿಟ್ ಬ್ಯಾಗನ್ನು ಅವರಿಗೆ ನೀಡಿದೆ; ಹಾಗೂ ಅದರಲ್ಲಿರುವ ಸಾಮಗ್ರಿಗಳ ಬಗೆಗೆ ಚುಟುಕಾಗಿ ವಿವರಿಸಿದೆ. ಹಸನ್ಮುಖಿಯಾಗಿ ಸ್ವೀಕರಿಸಿದ ಅವರು "ಭೂದಾನ ಯಜ್ಞದ ಕಾರ್ಯಕ್ರಮಗಳಲ್ಲಿ ಆವಶ್ಯಕತೆ ಒದಗಿದರೆ, ಅದರಲ್ಲಿ

ಸಕ್ರಿಯವಾಗಿ ನನಗೆ ಭಾಗವಹಿಸಲು ಇಷ್ಟವಿರುವುದೇ" ಎಂದು ಹಿಂದಿಯಲ್ಲಿ ಹೇಳಿದ್ದನ್ನು ಸಹಚರರೊಬ್ಬರು ನನಗೆ ಅರ್ಥವಾಗುವಂತೆ ವಿವರಿಸಿದರು. ಅದನ್ನು ಕೇಳಿದಾಕ್ಷಣ ಭಾವಪರವಶನಾಗಿ ಸಂತಸದಿಂದ ತಲೆ ಅಲ್ಲಾಡಿಸಿ ಒಪ್ಪಿಕೊಂಡೆ. ಅವರ ಡೈರಿಯಲ್ಲಿ ನನ್ನ ಹೆಸರು, ವಿಳಾಸ ಮುಂತಾದ ವಿವರಗಳನ್ನು ಸಹಾಯಕರೊಬ್ಬರಿಗೆ ಹೇಳಿ ಬರೆಯಿಸಿದರು. ಆ ಮೊದಲೇ ಅವರು ರಚಿಸಿದ್ದ 'ಗೀತಾ ಪ್ರವಚನ' (ಕನ್ನಡ ಅನುವಾದ) ಪುಸ್ತಕವನ್ನು ಅವರೆದುರಿಗೆ ಹಿಡಿದೆ 'ವಿನೋಬಾ' ಎಂದು ಮುದ್ದಾದ ಕನ್ನಡ ಅಕ್ಷರಗಳಲ್ಲೇ ಸಹಿ ಮಾಡಿ ಹಿಂದಿರುಗಿಸಿದರು. ಮತ್ತೆ ಶಿರಬಾಗಿ ನಮಸ್ಕರಿಸಿ ಅವರಿಂದ ಬೀಳ್ಕೊಂಡೆ. ಅದೊಂದು ನನ್ನ ಜೀವನದ ಅವಿಸ್ಮರಣೀಯ ಘಟನೆಯೆಂದು ಭಾವಿಸುತ್ತೇನೆ.

## ಕಾಯಂ ಕೆಲಸದ ಪ್ರಯತ್ನ

ಇನ್ನೊಂದು ವರ್ಷದಲ್ಲೇ ಪ. ಸ. ಕ. ದವರು ಮತ್ತಷ್ಟು ಮೆಡಿಕಲ್ ಪ್ರೊಬೇಷನರ್ ಹುದ್ದೆಗೆ ಜಾಹೀರಾತು ಹೊರಡಿಸಿದರು. ಮುತುವರ್ಜಿ ವಹಿಸಿ ಅರ್ಜಿಯನ್ನು ಹಾಕಿದೆ. ಸಂದರ್ಶನದ ಕರೆಬರಲು ಒಂದು ವರ್ಷವೇ ಹಿಡಿಯಿತು. ಈ ಸಾರಿ ಹಿಂದಿನಂತೆ ತಟಸ್ಥ ಧೋರಣೆ ತಾಳದೆ ಆಸ್ಥೆಯಿಂದ ಕಾರ್ಯಪ್ರವೃತ್ತನಾದೆ. ಪ.ಸ.ಕ.ದ ಸದಸ್ಯರ ವಿವರಗಳನ್ನು ಪಡೆದುಕೊಂಡು ಪ್ರಭಾವೀ ವ್ಯಕ್ತಿಗಳ ಮೂಲಕ ಅವರಿಗೆಲ್ಲಾ ಶಿಫಾರಸ್ಸು ಮಾಡಿಸಲಾರಂಭಿಸಿದೆವು. ನನ್ನ ಮಾವನವರೂ ಸಹ ಕೆಲದಿನ ಬೆಂಗಳೂರಿನಲ್ಲೇ ಇದ್ದು ಅವರ ವಲಯದಲ್ಲಿ ಪ್ರಭಾವಿತರ ಮೂಲಕ ಪ್ರಯತ್ನ ಮಾಡಿಸಿದರು. ಅವರ ಸಂಬಂಧಿಕರೊಬ್ಬರು ಪ.ಸ.ಕ. ಸದಸ್ಯರೊಬ್ಬರ ಮನೆಗೆ ನನ್ನನ್ನು ಕರೆದುಕೊಂಡು ಹೋಗಿ ಹಿಂದಿನ ಸಾರಿ ನನಗಾದ ಅನ್ಯಾಯದ ಬಗೆಗೆ ವಿವರಿಸಿದರು. ಎದುರಾಳಿಗಳಾಗಬಹುದಾದವರ ಚಲನವಲನಗಳನ್ನು ಗಮನಿಸಿ, ಆ ಬಗೆಗೂ ಸೂಕ್ತ ಕ್ರಮ ಜರುಗಿಸುವ ಪ್ರಯತ್ನ ಮಾಡುತ್ತಿದ್ದೆವು. ಪ.ಸ.ಕ.ದವರು ಅಪೇಕ್ಷಿಸಿದ್ದಕ್ಕಿಂತಲೂ ಅತಿ ಹೆಚ್ಚು ಅಭ್ಯರ್ಥಿಗಳಿದ್ದುದು ಈ ಸಾರಿಯ ವಿಶೇಷ. ಕಾಲೇಜಿನಿಂದ ನಾನು ತೇರ್ಗಡೆಯಾಗಿ ಮೂರು ವರ್ಷಗಳಾಗಿದ್ದರಿಂದ ಇನ್ನಷ್ಟು ವೈದ್ಯರು ಸೇರ್ಪಡೆಯಾಗಿದ್ದರು.

ಈ ಸಾರಿ ೮೪ ಜನ ಮೆಡಿಕಲ್ ಪ್ರೊಬೇಷನರ್‌ಗಳಾಗಿ ಆಯ್ಕೆ ಮಾಡಿದ ಸರ್ಕಾರಿ ಆದೇಶ ೧೯೫೪ರ ಜುಲೈ ಮಧ್ಯಭಾಗದಲ್ಲಿ ಹೊರಬಂದಿತು ಆಯ್ಕೆಯಾದವರ ಯಾದಿಯಲ್ಲಿ ನನ್ನ ಹೆಸರು ೮೧ರ ಕ್ರಮಸಂಖ್ಯೆಯಲ್ಲಿತ್ತು. ನನ್ನ ಸ್ಥಾನ ಅಷ್ಟೊಂದು ಕೆಳಮಟ್ಟಕ್ಕೆ ಇಳಿದಿದ್ದರ ಕಾರಣ ನಿಗೂಢವಾಗಿತ್ತು. ಕಾಲೇಜಿನಲ್ಲಿ ನನಗಿಂತಲೂ ಎರಡು-ಮೂರು ವರ್ಷಗಳಷ್ಟು ಹಿಂದಿದ್ದವರೆಲ್ಲ ನನ್ನ ಮೇಲಿನ ಸ್ಥಾನಗಳನ್ನಲಂಕರಿಸಿದ್ದರು. ಆಗತಾನೇ ತೇರ್ಗಡೆಯಾಗಿ ತರಬೇತಿಯಿಂದ ಹೊರಬಂದವರು ಮೂರು ವರ್ಷಗಳಷ್ಟು ಕಾಲ ಹಳ್ಳಿಗಾಡಿನ ಆಸ್ಪತ್ರೆಯೊಂದರಲ್ಲಿ ಯಶಸ್ವಿಯಾಗಿ ಕಾರ್ಯನಿರ್ವಹಿಸಿದ್ದ ನನಗಿಂತ ಹಿರಿತನದಲ್ಲಿ (Seniority) ಮೇಲಿದ್ದರು. ಮೆಡಿಕಲ್ ಪದವಿ ಗಳಿಸುವಲ್ಲಿ ಹಲವಾರು ವರ್ಷಗಳನ್ನು ತೆಗೆದುಕೊಂಡಿದ್ದವರೂ ಸಹ ನನಗಿಂತ ಅದೆಷ್ಟೋ ಸ್ಥಾನಗಳ ಮೇಲಿದ್ದರು. ಅಂತಿಮ ವರ್ಷದ ಒಂದೊಂದು ವಿಷಯಗಳನ್ನು ಒಂದೊಂದು ಸಾರಿ ತೇರ್ಗಡೆಯಾಗಿ ಹೆಚ್ಚು ಅಂಕಗಳನ್ನು ಪಡೆದವರೂ ಕೂಡ ಅವರನ್ನೆಲ್ಲಾ ಮೊದಲನೇ ಪ್ರಯತ್ನದಲ್ಲಿ ತೇರ್ಗಡೆಯಾದ ನನಗಿಂತ ಉತ್ತಮ ದರ್ಜೆಯವರೆಂದು ಪರಿಗಣಿಸಲಾಗಿತ್ತು! ಈ ಎಲ್ಲಾ ವಿಷಯಗಳೂ ನನ್ನನ್ನು ದಿಗ್ಭ್ರಮೆಗೊಳಿಸಿದವು. ಮೊದಲು ಪರಿಚಯವಾಗಿದ್ದ ಪ.ಸ.ಕ. ಸದಸ್ಯರೊಬ್ಬರನ್ನು ಭೇಟಿ ಮಾಡಿ ನನಗಾಗಿರುವ ಅನ್ಯಾಯದ ಬಗೆಗೆ ಹೇಳಿಕೊಂಡೆವು. ಪ್ರಸ್ತುತ

ಪ್ರಕಟವಾಗಿರುವುದು ಕೇವಲ ಹಂಗಾಮಿ ಪಟ್ಟಿಯೆಂತಲೂ ಇನ್ನು ಕೆಲವೇ ದಿನಗಳಲ್ಲಿ ಅದು ಮರು ಪರಿಶೀಲನೆಯಾಗಿ ಮತ್ತೆ ಪ್ರಕಟವಾಗಲಿದೆಯೆಂದರು. ಆಯ್ಕೆಯ ಸಮಯದಲ್ಲಿ ಪ್ರತಿಯೊಬ್ಬ ಅಭ್ಯರ್ಥಿಗೂ ಒಂದು ರೀತಿಯ ಕೋಡ್ ಸಂಖ್ಯೆ (Code number) ನೀಡಿರುತ್ತಾರೆಂತಲೂ ಮುಂದೆ ಪ.ಸ.ಕ. ಮತ್ತು ಇಲಾಖೆಯವರು ಚರ್ಚಿಸಿ ಹಿರಿತನವನ್ನು ನಿರ್ಧರಿಸುತ್ತಾರೆಂದು ಭರವಸೆ ಇತ್ತರು. ಅಲ್ಲದೆ ಸರ್ಕಾರಿ ಆದೇಶದಲ್ಲಿ ನಮೂದಾಗಿದ್ದ ಒಂದು ನಿಬಂಧನೆಯ ಕಡೆ ನಮ್ಮ ಗಮನ ಹರಿಸಿದರು. (6. Ranking of the candidates will be as Indicated below subject to subsequent classification by the Public Service Commissionà) ಅದರಿಂದ ನನ್ನ ಸೇವಾ ಹಿರಿತನದ ಬಗೆಗೆ ಆತಂಕ ಪಡುವ ಅವಶ್ಯಕತೆ ಇಲ್ಲವೆಂದು ಬೀಳ್ಕೊಟ್ಟರು.

ಮುಂದೆ ಹಲವು ಸಾರಿ ಮೆಡಿಕಲ್ ಇಲಾಖೆಯ ವರಿಷ್ಠರು ಹಾಗೂ ಸರ್ಕಾರದ ಮಟ್ಟದವರೆಗೂ ಈ ಬಗೆಗೆ ಮನವಿಗಳನ್ನು ಕಳುಹಿಸುತ್ತಲೇ ಇದ್ದೆ. ಇಲಾಖಾ ನಿರ್ದೇಶಕರನ್ನು ಒಂದು ಸಾರಿ ಖುದ್ದಾಗಿ ಭೇಟಿ ಮಾಡಿ ನನ್ನ ಅಹವಾಲನ್ನು ನಿವೇದಿಸಿಕೊಂಡೆ. ಎಷ್ಟೋ ಕಾಲದ ನಂತರ ಇಲಾಖೆಯವರಿಂದ ಪ.ಸ.ಕ.ದವರು ಅಭ್ಯರ್ಥಿಗಳ ಸರ್ವಾಂಗೀಣ ಯೋಗ್ಯತೆಯನ್ನು ಪರಿಗಣಿಸಿ ಜ್ಯೇಷ್ಠತಾ ಪಟ್ಟಿಯನ್ನು ತಯಾರು ಮಾಡಿರುತ್ತಾರೆಂದೂ, ಅದನ್ನು ಮತ್ತೆ ಬದಲಾಯಿಸಲಾಗದೆಂದೂ ಉತ್ತರ ನೀಡಿದರು! ಈ ಬಗೆಗೆ ನಾನು ಅಷ್ಟೆಲ್ಲಾ ತಲೆ ಪರಿಚಿಕೊಂಡಿದ್ದಕ್ಕೆ ಕಾರಣ ಅಂದು ಅವರಿಗೆಲ್ಲಾ ಅರ್ಥವಾದಂತಿಲ್ಲ. ನನ್ನ ಸರ್ಕಾರಿ ಸೇವೆಯ ಪೂರ್ಣಾವಧಿಯಲ್ಲಿ ನನಗಿಂತ ವಯಸ್ಸು, ಸೇವೆ ಹಾಗೂ ದಕ್ಷತೆಯಲ್ಲಿ ಕಿರಿಯರಾದವರು ಅದೆಷ್ಟು ಸಾರಿ ನನ್ನ ತೇಜೋವಧೆಗೆ ಕಾರಣರಾಗುತ್ತಿದ್ದರೆಂಬುದರ ಪ್ರಸ್ತಾಪಗಳು ಮುಂದೆ ಬರಲಿವೆ. ಇಂದಿನ ಕಾಲದಂತೆ ಇಂತಹ ಸಮಸ್ಯೆಗಳನ್ನು ಕೋರ್ಟುಗಳಲ್ಲಿ ಪ್ರಶ್ನಿಸುವ ಪರಿಪಾಟ ಆಗ ಇರಲಿಲ್ಲ. ಮುಂದೇನೂ ಮಾಡಲಾಗದೆ ಶಿಕಾರಿಪುರದ ಆಸ್ಪತ್ರೆಯಲ್ಲೇ ಮೆಡಿಕಲ್ ಪ್ರೊಬೇಷನರ್ ಆಗಿ ವರದಿ ಮಾಡಿಕೊಂಡೆ.

## ವರ್ಗಾವಣೆ

ಶಿಕಾರಿಪುರದಲ್ಲಿ ಮೆಡಿಕಲ್ ಪ್ರೊಬೇಷನರ್ ಆಗಿ ೩-೪ ತಿಂಗಳು ಕಾರ್ಯ ನಿರ್ವಹಿಸಿರಬಹುದು; ಅಷ್ಟರಲ್ಲೇ ಕೋಲಾರ ಜಿಲ್ಲೆಯ ರಾಬರ್ಟ್ ಸನ್‌ಪೇಟೆ (ಕೆ.ಜಿ.ಎಫ್)ಯ ಸಿವಿಲ್ ಆಸ್ಪತ್ರೆಗೆ ರೆಸಿಡೆಂಟ್ ಮೆಡಿಕಲ್ ಆಫೀಸರ್ (ಆರ್.ಎಂ.ಓ. ಸ್ಥಾನಿಕ ವೈದ್ಯಾಧಿಕಾರಿ) ವರ್ಗಾವಣೆ ಮಾಡಿದ ಆದೇಶ ಬಂದಿತು. ಪ್ರೊಬೇಷನರಿಗಳ ಆಯ್ಕೆ ಪಟ್ಟಿಯ ಆದ್ಯತೆಯಲ್ಲಿ ಒಂದು ರೀತಿಯ ಅಸಮಾಧಾನದಿಂದ ಕಂಗೆಟ್ಟಿದ್ದ ನನಗೆ ಪ್ರೊಬೇಷನರಿ ಅವಧಿ ಮುಗಿಯುವಷ್ಟರಲ್ಲೇ ಜಿಲ್ಲಾ ಆಸ್ಪತ್ರೆಯೊಂದರ ಒಳಾಡಳಿತದ ಜವಾಬ್ದಾರಿಯ ಕೆಲಸ ಆರಿಸಿಕೊಂಡು ಬಂದದ್ದು ಸಂತಸ ಉಂಟು ಮಾಡಿತು.

ವರ್ಗಾವಣೆಯ ಸುದ್ದಿ ಬಹಿರಂಗವಾಗುತ್ತಿದ್ದಂತೆಯೇ ಶಿಕಾರಿಪುರದ ಸಾರ್ವಜನಿಕರು ಹಾಗೂ ಕೆಲವು ಜನಪ್ರತಿನಿಧಿಗಳು ಆಸ್ಪತ್ರೆಗೆ ಬಂದು ವರ್ಗಾವಣೆಯ ಆದೇಶವನ್ನು ಕೂಡಲೇ ರದ್ದುಪಡಿಸಲು ತಯಾರಾಗಿರುವುದಾಗಿ ಹೇಳತೊಡಗಿದರು. ಇಲಾಖೆಗೆ ಹಲವಾರು ಟೆಲಿಗ್ರಾಮ್‌ಗಳು ಹೋದವೆಂದು ಸಾಯಂಕಾಲ ಭೇಟಿಯಾದ ಪೋಸ್ಟ್ ಮಾಸ್ಟರ್ ತಿಳಿಸಿದರು. ಆಸ್ಪತ್ರೆಯ ಸಂದರ್ಶಕ ಸಮಿತಿಯ ಅಧ್ಯಕ್ಷರೂ ಹಾಗೂ ವಿಧಾನ ಪರಿಷತ್ತಿನ ಸದಸ್ಯರೂ ಆಗಿದ್ದ ಕೆ. ಪಿ. ನರಸಪ್ಪನವರು, ಪುರಸಭಾ ಅಧ್ಯಕ್ಷರೇ ಆದಿಯಾಗಿ ಕೆಲವರು ಮರುದಿನ ಭೇಟಿಯಾಗಿ

ಆಸ್ಪತ್ರೆಯನ್ನು ಪ್ರಗತಿಪಥದಲ್ಲಿ ನಡೆಸುತ್ತಿರುವ ನಾನು ಅಷ್ಟು ಬೇಗ ಅಲ್ಲಿಂದ ಹೋಗುವುದು ಸರಿಯಲ್ಲವೆಂತಲೂ, ಅವರೆಲ್ಲಾ ಬೆಂಗಳೂರಿಗೆ ನಿಯೋಗ ಹೋಗಿ, ವರ್ಗಾವಣೆಯನ್ನು ರದ್ದು ಪಡಿಸಿಕೊಂಡು ಬರುವುದಾಗಿ ಒತ್ತಾಯ ಹೇರಲಾರಂಭಿಸಿದರು. ಪ್ರಸ್ತುತ ಬಂದಿರುವ ವರ್ಗಾವಣೆಯ ಸ್ಥಾನಮಾನಗಳನ್ನು ಅವರಿಗೆ ವಿವರಿಸಿ, ಮುಂದೆ ಅಂತಹ ಅವಕಾಶ ಸಿಗಲಾರ ದೆಂದು ಹೇಳಿ ಆ ದಿಸೆಯಲ್ಲಿ ಅವರಾರೂ ಅಡ್ಡಬರಬಾರದೆಂದು ವಿನಂತಿಸಿಕೊಂಡೆ. ನನ್ನ ಇಂಗಿತವನ್ನು ಅರ್ಥ ಮಾಡಿಕೊಂಡ ಅವರು ಒಲ್ಲದ ಮನಸ್ಸಿನಿಂದ ಸುಮ್ಮನಾಗಬೇಕಾಯಿತು.

ಅನಿರೀಕ್ಷಿತವಾಗಿ ಬಂದ ವರ್ಗಾವಣೆಯ ಆದೇಶ ಹಾಗೂ ಮುಂದಿನ ಊರಿನಲ್ಲಿ ದೊರೆಯಲಿದ್ದ ಸ್ಥಾನಮಾನ ನನ್ನಲ್ಲಿ ಮಿಶ್ರ ಪ್ರತಿಕ್ರಿಯೆ ಉಂಟು ಮಾಡಿತು. ಕಾಲೇಜಿನಿಂದ ಹೊರಬರುತ್ತಲೆ, ಹಳ್ಳಿಗಾಡಿನ ಆಸ್ಪತ್ರೆಗೆ ಅಳುಕಿನಿಂದಲೇ ಬಂದಿದ್ದೆ; ಅಲ್ಲಿಯೂ ಅದೇ ತಾನೇ ಆರಂಭವಾಗಿದ್ದ ಪುಟ್ಟ ಆಸ್ಪತ್ರೆಯೊಂದನ್ನು ಪ್ರಧಾನ ಆಸ್ಪತ್ರೆಯ ಹಂತಕ್ಕೆ ತರುವಲ್ಲಿ ನಾನು ಯಶಸ್ಸು ಗಳಿಸಿದ್ದು ಅಚ್ಚರಿ ಪಡಿಸುವಂತಿತ್ತು. ಸಾಕಷ್ಟು ಜನಪ್ರಿಯತೆಯನ್ನು ಗಳಿಸಿದ್ದು, ಇನ್ನೂ ಒಂದೆರಡು ವರ್ಷಗಳಾದರೂ ಅಲ್ಲೇ ಮುಂದುವರಿಯುವ ಅಭಿಲಾಷೆಯೂ ಇತ್ತು . ಆದರೆ ಒಂದು ರೀತಿಯಲ್ಲಿ ಬಡ್ತಿಯೆನ್ನಬಹುದಾದ (ನಿಜವಾದ ಬಡ್ತಿಯಲ್ಲ!) ಅವಕಾಶ ಅದಾಗೇ ಒದಗಿ ಬಂದಿರುವುದನ್ನು ನಿರಾಕರಿಸುವ ಧಾರ್ಷ್ಟ್ಯತೆಯೂ ನನಗಿರಲಿಲ್ಲವೆಂದು ಹೇಳಬಹುದು. ಆದರಿಂದ ರಾಬರ್ಟ್ ಸನ್‌ಪೇಟೆ (ಕೆ.ಜಿ.ಎಫ್) ಆಸ್ಪತ್ರೆಗೆ ಹೋಗುವುದೆಂದೇ ದೃಢ ನಿರ್ಧಾರ ಮಾಡಿದೆ.

## ಪ್ರಪ್ರಥಮ ವ್ಯಾಸೆಕ್ಟಮಿ ಶಿಬಿರ

ಕುಟುಂಬ ಕಲ್ಯಾಣ ಯೋಜನೆಯ ಕಾರ್ಯಕ್ರಮಗಳು ಕೆಲವು ವರ್ಷಗಳಿಂದ ಪ್ರಚಲಿತವಿದ್ದರೂ ೧೯೫೦ರ ದಶಕದಲ್ಲಿ ಹೆಚ್ಚಿನ ಬಿರುಸಿನಿಂದ ಆಚರಿಸಲ್ಪಡುತ್ತಿದ್ದವು. ಪುರುಷರಿಂದ ಸಂತಾನ ನಿಯಂತ್ರಣ ಸಾಧಿಸಲು ಅವರ ರೇತ್ರನಾಳವನ್ನು ಕತ್ತರಿಸುವ 'ವ್ಯಾಸೆಕ್ಟಮಿ' ಆಪರೇಷನ್ ಬಳಕೆ ಬಂದಿತ್ತು. ಶಸ್ತ್ರಚಿಕಿತ್ಸೆ ನಡೆಸಬಲ್ಲ ವೈದ್ಯರಿರುತ್ತಿದ್ದ ಜಿಲ್ಲಾ ಹಾಗೂ ಆಯ್ದ ಕೆಲವು ಆಸ್ಪತ್ರೆಗಳಲ್ಲಿ ಅದನ್ನು ಜರುಗಿಸಲು ಸಾಧ್ಯವಾಗುತ್ತಿತ್ತು. ಅಂತಹ ಚಿಕಿತ್ಸಾ ವಿಧಾನದ ವ್ಯಾಪ್ತಿಯನ್ನು ಹಳ್ಳಿಗಾಡುಗಳಿಗೂ ವಿಸ್ತರಿಸುವ ಉದ್ದೇಶದಿಂದ ಸರ್ಕಾರದವರು ೧೯೫೯ರ ಉತ್ತರಾರ್ಧದ ದಿನಗಳಲ್ಲಿ ಹೊಸ ಯೋಜನೆಯೊಂದನ್ನು ಸಿದ್ಧಪಡಿಸಿದರು. ಅದರಂತೆ ಪ್ರಸ್ತುತ ವ್ಯಾಸೆಕ್ಟಮಿ ಜರುಗದಿರುವ ಕೆಲವು ಆಸ್ಪತ್ರೆಗಳಲ್ಲಿ ಶಿಬಿರಗಳನ್ನೇರ್ಪಡಿಸಿ ಜಿಲ್ಲಾ ಆಸ್ಪತ್ರೆಯಿಂದ ವ್ಯಾಸೆಕ್ಟಮಿ ಜರುಗಿಸುವ ವೈದ್ಯರನ್ನು ಕಳುಹಿಸುವ ಯೋಜನೆಯನ್ನು ಜಾರಿಗೊಳಿಸುವಂತೆ ಆದೇಶ ನೀಡಿತು. ನಮ್ಮ ಆಸ್ಪತ್ರೆಯಲ್ಲಿ ಲಭ್ಯವಿದ್ದ ಸಾಧನ ಸಲಕರಣೆ ಹಾಗೂ ಕಾರ್ಯ ಚಟುವಟಿಕೆಗಳ ಬಗೆಗೆ ಅರಿವಿದ್ದ ಡಿ.ಎಂ.ಓ. ಡಾ|| ಶಾಮಣ್ಣನವರು ಮೊತ್ತ ಮೊದಲು ಶಿಕಾರಿಪುರದಲ್ಲೇ ಜರುಗಿಸುವ ನಿರ್ಧಾರ ಮಾಡಿ ನನಗೆ ಪತ್ರ ಬರೆದರು. ಅಂತಹದೊಂದು ಶಿಬಿರ ಮೈಸೂರು ಸಂಸ್ಥಾನದಲ್ಲೇ ಮೊತ್ತ ಮೊದಲನೆಯದಾಗಬೇಕೆಂಬ ಆಶಯವೂ ಅವರಿಗಿತ್ತಂತೆ. ಅದರಿಂದ ನಾನು ಶ್ರಮವಹಿಸಿ ಆದಷ್ಟು ಜಾಗ್ರತೆ ಆದಕ್ಕೆಲ್ಲಾ ಏರ್ಪಾಡು ಮಾಡಬೇಕೆಂದು ಆಗ್ರಹ ಪಡಿಸಿದರು. ವ್ಯಾಸೆಕ್ಟಮಿ ಶಿಬಿರವನ್ನು ದಿನಾಂಕ ೧೬-೧೦-೧೯೫೯ರಂದು ಜರುಗಿಸುವ ನಿರ್ಧಾರವೂ ಆಯಿತು. ಆ ಸಲುವಾಗಿ ಆಸ್ಪತ್ರೆಗೆ ಬರುತ್ತಿದ್ದ ಅರ್ಹ ಜನರಿಗೆ ಅಲ್ಲದೆ ತಾಲ್ಲೂಕಿನಾದ್ಯಂತ ಪ್ರಚಾರ ಮಾಡಲಾರಂಭಿಸಿದೆವು. ಆಪರೇಷನ್ ಥಿಯೇಟರ್, ವಾರ್ಡುಗಳೇ

ಅಲ್ಲದೆ ಸುತ್ತಲ ಪರಿಸರವನ್ನು ಮತ್ತಷ್ಟು ಶುಚಿಗೊಳಿಸಲಾಯಿತು. ಆಪರೇಷನ್‌ಗೆ ಮುಂದಾಗುವವರ ಹೆಸರುಗಳನ್ನೂ ನೋಂದಣಿ ಮಾಡಿಸುತ್ತಿದ್ದೆವು. ಈ ಸಿದ್ಧತೆಗಳು ಜರುಗುತ್ತಿರುವಾಗಲೇ ನನ್ನ ವರ್ಗಾವಣೆಯ ಆದೇಶವೂ ಬಂದು ಬಿಟ್ಟಿತು. ಮುಂದಿನ ಊರಿಗೆ ಹೋಗುವ ನಿರ್ಧಾರ ಮಾಡಿದ್ದರಿಂದ ಶಿಬಿರವನ್ನು ನನ್ನ ನಂತರ ಬರುವ ವೈದ್ಯಾಧಿಕಾರಿಗಳ ನೇತೃತ್ವದಲ್ಲೇ ಜರುಗಿಸುವ ಏರ್ಪಾಡು ಮಾಡುವುದು ಉಚಿತ ಎಂದು ಡಿ.ಎಂ.ಓ. ಅವರಿಗೆ ತಿಳಿಸಿದೆ. ಆದರೆ ಡಿ.ಎಂ.ಓ. ಅವರು ನನ್ನ ಸಲಹೆಯನ್ನು ಒಪ್ಪಲಿಲ್ಲ. ನಾನಾಗಲೇ ಮೂರು ವರ್ಷಗಳಿಂದ ಅಲ್ಲಿದ್ದು ಜನಬಳಕೆ ಇದ್ದು, ಬಹುಪಾಲು ಜನ ನನ್ನ ಭರವಸೆಯಿಂದ ಅಂತಹ ಆಪರೇಷನ್‌ಗೆ ಒಪ್ಪಿರುತ್ತಾರೆ; ಆ ಸಮಯದಲ್ಲಿ ಬೇರೊಬ್ಬರಿಂದ ಆಪರೇಷನ್ ಮಾಡಿಸಿಕೊಳ್ಳಲು ಹಿಂಜರಿಯಬಹುದೆಂದು ವಾದಿಸಿದರು. ನನ್ನ ಜಾಗಕ್ಕೆ ವರ್ಗವಾಗಿರುವವರು ಮೆಗ್ಗಾನ್ ಆಸ್ಪತ್ರೆಯಲ್ಲಿ ಅವರ ಅಧೀನ ಕಾರ್ಯ ನಿರ್ವಹಿಸುತ್ತಿರುವ ಡಾ|| ಭೀಮಯ್ಯನವರು ನನಗೆ ಪರಿಚಿತರೇ ಆಗಿದ್ದರು; ನಡುವೆ ಒಂದು ಸಾರಿ ಶಿಕಾರಿಪುರಕ್ಕೂ ಬಂದು ಆಸ್ಪತ್ರೆಯನ್ನೆಲ್ಲಾ ನೋಡಿಕೊಂಡು ಹೋದರು. ಆದರಿಂದ ನಿಗದಿತ ದಿನ ಶಿಬಿರ ಜರುಗುವುದೆಂತಾಯಿತು.

ನಿಗದಿತ ದಿನ ಡಿ.ಎಂ.ಓ. ಅವರು ಶಿವಮೊಗ್ಗಾದಿಂದ ಆಂಬುಲೆನ್ಸ್ ವಾಹನದಲ್ಲಿ ಆಪರೇಷನ್‌ಗೆ ಅವಶ್ಯವಾದ ಸಾಧನ ಸಲಕರಣೆ ಹಾಗೂ ಸಿಬ್ಬಂದಿಗಳೊಡನೆ ಬಂದಿಳಿದರು. ಆ ಸಮಯದಲ್ಲಿ ತೀರ್ಥಹಳ್ಳಿ ಆಸ್ಪತ್ರೆಯಲ್ಲಿ ಜನಾನುರಾಗಿ ಹಾಗೂ ದಕ್ಷ ಸರ್ಜನ್ ಎಂದು ಖ್ಯಾತಿ ಗಳಿಸಿದ್ದ ಡಾ|| ಎ. ಡಿ. ಪಾಲ್‌ರಿಗೂ ಶಿಬಿರದಲ್ಲಿ ಭಾಗವಹಿಸಲು ಮೊದಲೇ ಆಹ್ವಾನಿಸಿದ್ದು ಅವರೂ ಸಹ ಬಂದಿದ್ದರು. ಡಾ|| ಪಾಲ್‌ರ ಪರಿಚಯ ಸ್ವಲ್ಪ ಸಮಯದಿಂದ ನನಗಿದ್ದು ಅವರ ಆಗಮನ ಮುದ ನೀಡಿತು. ವ್ಯಾಸೆಕ್ಟಮಿ ಮಾಡಿಸಿಕೊಳ್ಳಲು ಹದಿನಾರು ಜನ ನೋಂದಣಿ ಮಾಡಿಸಿಕೊಂಡಿದ್ದರ ನೆನಪು. ಆಪರೇಷನ್ ಮಾಡಿಸಿಕೊಳ್ಳುವವರ ಸಂಬಂಧಿಕರೇ ಅಲ್ಲದೆ ಅವತ್ತೇನು ನಡೆಯುತ್ತದೆಂಬುದನ್ನು ವೀಕ್ಷಿಸಲು ಕುತೂಹಲಭರಿತ ಜನರ ದಂಡೇ ಆಸ್ಪತ್ರೆಯ ಆವರಣದಲ್ಲಿ ನೆರೆದಿತ್ತು. ಇಡೀ ಆಸ್ಪತ್ರೆಯಲ್ಲಿ ಸಡಗರದ, ಹಬ್ಬದ ವಾತಾವರಣ ಉಂಟಾದಂತಿತ್ತು.

ಸುಮಾರು ಹತ್ತು ಗಂಟೆಯ ಸಮಯಕ್ಕೆ ಆಪರೇಷನ್‌ಗಳು ಶುರುವಾದವು. ಎರಡು ಟೇಬಲ್ಲುಗಳನ್ನು ಸಜ್ಜುಗೊಳಿಸಲಾಗಿದ್ದು ಅವರಿಬ್ಬರೂ ಒಂದೊಂದರಲ್ಲಿ ಕಾರ್ಯನಿರತರಾದರು. ಆ ತನಕ ನನಗೆ ವ್ಯಾಸೆಕ್ಟಮಿಯಂಥ ಆಪರೇಷನ್ ಜರುಗಿಸುವ ಅವಕಾಶವಿಲ್ಲದಿದ್ದುದರಿಂದ ಡಾ|| ಪಾಲ್ ಅವರೊಡನೆ ಸಹಾಯಮಾಡಿ, ಕಲಿತುಕೊಳ್ಳುವ ಪ್ರಯತ್ನ ಮಾಡಲು ಪುಸಲಾಯಿಸಿದರು. ನಾನೂ ಅವರ ಜೊತೆ ಸೇರಿದೆ. ಒಂದೊಂದು ಟೇಬಲ್ಲಿನಲ್ಲಿ [illegible] ಆಪರೇಷನ್‌ಗಳು ಜರುಗಿರಬಹುದು. ಜವಾನನೊಬ್ಬ ಒಳಗಡೆ ಬಂದು ಶಿವಮೊಗ್ಗಾದಿಂದ ಬಂದವರೊಬ್ಬರು ತುರ್ತಾಗಿ ನನ್ನನ್ನು ನೋಡಬಯಸುತ್ತಿದ್ದಾರೆಂದು ತಿಳಿಸಿದ. ಹೊರಗೆ ಹೋಗಿ ನೋಡಿದರೆ, ಬಂದವರು ಮತ್ತಾರೂ ಅಲ್ಲದೆ ಡಾ|| ಭೀಮಯ್ಯನವರು! ಕುಶಲ ಪ್ರಶ್ನೆಗಳಾದ ಮೇಲೆ ಅವರು ಆ ದಿನವೇ ಆಸ್ಪತ್ರೆಯ ಚಾರ್ಜ್ ವಹಿಸಿಕೊಡಬೇಕೆಂದು ಆಗ್ರಹ ಪಡಿಸತೊಡಗಿದರು. ಅದಕ್ಕೂ ಮೊದಲು ಡಿ.ಎಂ.ಓ. ಅವರಿಗೆ ಆ ಬಗೆಗೆ ಹೇಳಿದ್ದನ್ನು ಗಮನಕ್ಕೆ ತಂದೆ; ಹಾಗೂ ಆಸ್ಪತ್ರೆಯಲ್ಲಿ ಜರುಗುತ್ತಿರುವ ಗುರುತರ ವ್ಯಾಸೆಕ್ಟಮಿ ಶಿಬಿರದ ನಡುವೆ ಚಾರ್ಜ್ ವಹಿಸುವುದಾದರೂ ಹೇಗೆ ಎಂದು ನನ್ನ ಅಸಹಾಯಕತೆಯನ್ನು ಅವರ ಮುಂದಿಟ್ಟೆ. ಅದನ್ನೊಪ್ಪದೇ ಅದೊಂದು ಶ್ರೇಷ್ಠ ದಿನವೆಂದು ಅವರ ಕುಟುಂಬದ ಪುರೋಹಿತರು ಹೇಳಿರುವುದರಿಂದ ಅವರು ಆ ದಿನವೇ ಚಾರ್ಜ್ ವಹಿಸಿಕೊಳ್ಳುವುದಾಗಿ ಪಟ್ಟು ಹಿಡಿದರು. (ಕೆಲವು

ದಿನಗಳ ನಂತರ ತಿಳಿದ ಸುದ್ದಿಯಂತೆ, ಶಿಕಾರಿಪುರದ ಜನತೆ ನನ್ನ ವರ್ಗಾವಣೆಯನ್ನು ರದ್ದುಗೊಳಿಸುವ ಪ್ರಯತ್ನದಲ್ಲಿದ್ದಾರೆಂದು ಅವರು ತಕ್ಷಣ ಚಾರ್ಜು ವಹಿಸಿಕೊಳ್ಳದಿದ್ದರೆ ಶಿಕಾರಿಪುರ ಆಸ್ಪತ್ರೆಗೆ ಹೋಗುವ ಅವಕಾಶ ತಪ್ಪಿಹೋಗುತ್ತದೆಂದು ಡಾ॥ ಭೀಮಯ್ಯನವರು ಆ ರೀತಿ ಮಾಡಿದ್ದರಂತೆ!)

ಮುಂದೇನು ಮಾಡಬಹುದೆಂಬುದರ ಬಗೆಗೆ ಡಿ.ಎಂ.ಓ. ಅವರ ಸಲಹೆ ಪಡೆಯಲು ಆಪರೇಷನ್ ಥಿಯೇಟರ್‌ಗೆ ಹಿಂದಿರುಗಿದೆ. ಡಾ॥ ಭೀಮಯ್ಯನವರು ಬಂದು ಚಾರ್ಜು ವಹಿಸಿಕೊಡುವುದರ ಬಗೆಗೆ ಕೇಳುತ್ತಿರುವುದನ್ನು ತಿಳಿಸಿದೆ. ಅನಿರೀಕ್ಷಿತವಾದ ಈ ಘಟನೆ ಅವರನ್ನು ಆಶ್ಚರ್ಯಚಕಿತರನ್ನಾಗಿಸಿತು. ಶಿಕಾರಿಪುರದಲ್ಲಿ ಚಾರ್ಜು ವಹಿಸಿಕೊಳ್ಳುವ ದಿನದ ಬಗೆಗೆ ಡಾ॥ ಭೀಮಯ್ಯನವರೊಡನೆ ಕೆಲವು ದಿನಗಳ ಹಿಂದೆ ಅವರು ಮಾತಾಡಿದ್ದಾಗಿಯೂ, ವ್ಯಾಸೆಕ್ಟಮಿ ಶಿಬಿರ ಮುಗಿದ ೨-೩ ದಿನಗಳ ನಂತರವೇ ಚಾರ್ಜು ತೆಗೆದುಕೊಳ್ಳುವುದಾಗಿ ಹೇಳಿದ್ದನ್ನು ಜ್ಞಾಪಿಸಿಕೊಂಡರು. ಅವರೊಬ್ಬ 'ಜಂಟಲ್‌ಮನ್' ಅಂಥ ಭಾವಿಸಿದ್ದಾಗಿಯೂ, ಈಗ ಅವರ ಮನಸ್ಸೇಕೆ ಬದಲಾಯಿತೋ ತಿಳಿಯದೆಂದು ಪರಿತಪಿಸಿದರು. ಅವರೇ ನಮ್ಮಿಬ್ಬರ ಮೇಲಾಧಿಕಾರಿಯಾಗಿರುವುದರಿಂದ ಈ ಹಂತದಲ್ಲಿ ಅವರು ಮಧ್ಯೆ ಪ್ರವೇಶಿಸುವುದು ಸರಿಯಾಗದೆಂದೂ, ಹಾಗೂ ಆ ಬಗೆಗಿನ ನಿರ್ಧಾರವನ್ನು ನನಗೇ ಬಿಡುವುದಾಗಿಯೂ ಹೇಳಿದರು. ನಮ್ಮ ಸಂಭಾಷಣೆಗಳನ್ನು ಆಲಿಸುತ್ತಿದ್ದ ಡಾ॥ ಪಾಲ್ ನನ್ನನ್ನುದ್ದೇಶಿಸಿ "ನೀವೊಬ್ಬ ಫೂಲ್ (Fool) ಇರಬೇಕ್ರಿ. ನಿಮ್ಮಂತಹವರ ಮೇಲೆ ನಂಬಿಕೆ ಅವರಿಗಿಲ್ಲವೆಂದಾದ ಮೇಲೆ ಕೂಡಲೇ ಚಾರ್ಜ್ ಕೊಟ್ಟುಬಿಡಿ. ಇಷ್ಟೆಲ್ಲಾ ಜವಾಬ್ದಾರಿ ಹೊತ್ತುಕೊಂಡು ಅತ್ತಿತ್ತ ತಿರುಗುವುದನ್ನು ಬಿಟ್ಟು ನನಗೆ ಸಹಾಯ ಮಾಡುವುದನ್ನು ಮುಂದುವರಿಸಿ; ಅವರನ್ನು ಹೊರ ರೋಗಿಗಳ ವಿಭಾಗದಲ್ಲಿ ಕೂರಿಸಿ ಬಿಡಿ" ಎಂದು ಛೇಡಿಸುವ ರೀತಿಯಲ್ಲಿ ಹೇಳಿಬಿಟ್ಟರು. (ನಮ್ಮಿಬ್ಬರ ನಡುವಿನ ಆತ್ಮೀಯ ಸಂಬಂಧದ ಹಿನ್ನೆಲೆಯಲ್ಲಿ!) ಡಿ. ಎಂ. ಓ. ಅವರೂ ಸಹ ಡಾ॥ ಪಾಲ್ ಅವರ ಅಭಿಪ್ರಾಯಕ್ಕೆ ದನಿಗೂಡಿಸಿದರು, ಇನ್ನು ಬೇರಾವ ಆಯ್ಕೆಯೂ ಇಲ್ಲದೆ ಹೊರಗಡೆ ಬಂದೆ; ಹಾಗೂ ಗುಮಾಸ್ತರನ್ನು ಕರೆಸಿ ಚಾರ್ಜ್ ರಿಪೋರ್ಟ್ ಫಾರಂಗಳನ್ನು ತಯಾರಿಸಿ ರುಜು ಹಾಕಿಸುವಂತೆ ಹೇಳಿ, ಆಪರೇಷನ್ ಥಿಯೇಟರಿಗೆ ಹೋಗಿ ನನ್ನ ಕಾರ್ಯದಲ್ಲಿ ಮಗ್ನನಾದೆ! ಅಂದಿನ ವ್ಯಾಸೆಕ್ಟಮಿ ಶಿಬಿರ ಮೈಸೂರು ಸಂಸ್ಥಾನದಲ್ಲಿ ಮೊತ್ತ ಮೊದಲನೆಯದಾಗಿ ನನ್ನ ನೆನಪಿನಲ್ಲುಳಿದಿರುವಂತೆಯೇ ನನ್ನ ಮೊತ್ತ ಮೊದಲ ಹುದ್ದೆಯ ಚಾರ್ಜ್ ವಹಿಸುವ ಪ್ರಕರಣ ನಾಟಕೀಯವಾಗಿ ಜರುಗಿದ್ದೂ ಸಹ ನನ್ನ ನೆನಪಿನಾಳದಲ್ಲಿ ಶಾಶ್ವತವಾಗಿ ಉಳಿದುಕೊಂಡಿದೆ.

## ಆತ್ಮೀಯ ಬೀಳ್ಕೊಡಿಗೆ

ವರ್ಗಾವಣೆಯ ಪ್ರಕರಣ ಆಕಸ್ಮಿಕ ನಾಟಕದ ತಿರುವು ಪಡೆದುಕೊಂಡದ್ದು ಆಸ್ಪತ್ರೆಯ ಸಿಬ್ಬಂದಿ ವರ್ಗದವರನ್ನೂ ಚಕಿತಗೊಳಿಸಿರಬೇಕು. ಆದರೆ ಅವರೇನೂ ಮಾಡುವಂತಿರಲಿಲ್ಲ. ಹಾಗೆ ಒದಗಿದ ಸಂದರ್ಭವನ್ನು ಒಂದು ರೀತಿಯಲ್ಲಿ ಸದುಪಯೋಗವಾಗುವಂತೆ ಪರಿವರ್ತಿಸಿದರು. ನಾನು ಮುಂದಿನ ಊರಿಗೆ ಹೋಗುವ ಬಗೆಗೆ ದೃಢ ನಿರ್ಣಯ ಮಾಡಿದ್ದನ್ನು ತಿಳಿದ ಅವರು ಬೀಳ್ಕೊಡಿಗೆ ಸಮಾರಂಭವನ್ನು ಏರ್ಪಡಿಸಲು ಒಂದೆಡು ದಿನಗಳಿಂದ ತಯಾರಿ ಮಾಡಿಕೊಳ್ಳುತ್ತಿದ್ದರಂತೆ. ನಮ್ಮೆಲ್ಲರ ಮೇಲಾಧಿಕಾರಿಯಾದ ಡಿ. ಎಂ. ಓ. ಹಾಗೂ ಗಣ್ಯರಾದ ಡಾ॥ ಪಾಲ್ ಮುಂತಾದವರು ಹಾಜರಿದ್ದ ಸಂದರ್ಭ ಅವರು ಏರ್ಪಡಿಸುತ್ತಿದ್ದ ಸಮಾರಂಭಕ್ಕೆ

ಮೆರುಗು ಕೊಡುವಂತಿತ್ತು. ಆದರಿಂದ ಆ ದಿನ ಸಂಜೆಯೇ ಬೀಳ್ಕೊಡುಗೆ ಸಮಾರಂಭವನ್ನು ಏರ್ಪಡಿಸಿದರು.



ಶಿಕಾರಿಪುರ ಬೀಳ್ಕೊಡಿಗೆ ಸಮಾರಂಭ

ಕಳೆದ ಮೂರು ವರ್ಷಗಳಿಂದ ನನ್ನೊಡನೆ ಆತ್ಮೀಯವಾಗಿ ಸಹಕರಿಸಿ, ಆಸ್ಪತ್ರೆಯ ಅಭಿವೃದ್ಧಿಗೆ ಕೈಜೋಡಿಸಿದ ಸಿಬ್ಬಂದಿ ವರ್ಗದಲ್ಲಿ ಕೆಲವರು ನನ್ನ ನೀತಿ, ನಡತೆ, ಕಾರ್ಯ ವೈಖರಿಗಳ ಬಗೆಗೆ ಪ್ರಶಂಸೆಯ ಮಾತುಗಳನ್ನಾಡಿದರು. ಡಿ.ಎಂ.ಓ. ಡಾ|| ಶಾಮಣ್ಣನವರು ಮುಖ್ಯ ಅತಿಥಿಯಾಗಿ ಮಾತನಾಡುತ್ತಾ "ಮೂರು ವರ್ಷಗಳ ಹಿಂದೆ ಅದೇ ತಾನೆ ಮೆಡಿಕಲ್ ಕಾಲೇಜಿನಿಂದ ನೇರವಾಗಿ ಅಂಜುತ್ತಾ ಅಳುಕುತ್ತಾ ಹೊಸದಾಗಿ ಶುರುವಾದ ಹಳ್ಳಿಗಾಡಿನ ಆಸ್ಪತ್ರೆಗೆ ವೈದ್ಯಾಧಿಕಾರಿಯಾಗಿ ಬಂದ ಯುವಕ ಮಾಡಿದ ಸಾಧನೆ ನನಗೆ ಹೆಮ್ಮೆಯುಂಟು ಮಾಡಿದೆ. ಯಾವುದೇ ರೀತಿಯ ಹಿಂದಿನ ತಳಪಾಯವಿಲ್ಲದ ಹೊಸ ಆಸ್ಪತ್ರೆಯಲ್ಲಿ ದೊಡ್ಡ ಆಸ್ಪತ್ರೆಗಳಲ್ಲಿ ಇರುವಂಥ ಸೌಕರ್ಯಗಳನ್ನು ಹುಟ್ಟು ಹಾಕುವಲ್ಲಿ ಅವರು ಶ್ರಮಿಸಿದ ರೀತಿ ಬೆರಗುಗೊಳಿಸು ವಂತಹದು. ಒಂದು ರೀತಿಯಲ್ಲಿ ಈ ಸಂಸ್ಥೆ ಎಲ್ಲಾ ವಿಧಗಳಲ್ಲೂ Major Hospital in Miniature ಆಗಿ ಪರಿವರ್ತನೆಯಾಗಿರುವುದು ಒಂದು ಪವಾಡವೆಂದೇ ಹೇಳಬಹುದು. ಅವರ ಇಲ್ಲಿಯ ಕಾರ್ಯದಕ್ಷತೆಯ ಪ್ರತಿಫಲವೋ ಎಂಬಂತೆ ಕೆ.ಜಿ.ಎಫ್.ನಲ್ಲಿ ಇನ್ನೂ ಹೆಚ್ಚಿನ ಜವಾಬ್ದಾರಿ ಹುಡುಕಿಕೊಂಡು ಬಂದಂತಾಗಿದೆ. ಅಲ್ಲಿಯೂ ಅವರು ಯಶಸ್ಸು ಗಳಿಸುತ್ತಾರೆಂಬ ಭರವಸೆ ನನಗಿದೆ" ಎಂದು ತಮ್ಮ ಮಾತುಗಳನ್ನು ಮುಗಿಸಿದರು. ನನ್ನ ಸರದಿ ಬಂದಾಗ ಆವೇಶದಿಂದ ಗಂಟಲು ಕಟ್ಟಿ ಬಂದಂತಾಯಿತು. ಆದರೂ ಸಾವರಿಸಿಕೊಂಡು ನಾನು ಅಲ್ಲಿಗೆ ಬಂದಾಗ ಆಸ್ಪತ್ರೆಯ ಪರಿಸ್ಥಿತಿಯನ್ನು ಸ್ಥೂಲವಾಗಿ ವಿವರಿಸಿ, ಆಸ್ಪತ್ರೆಯ ಸಿಬ್ಬಂದಿಯವರೆಲ್ಲಾ ನನ್ನ ಯೋಜನೆಗಳೊಂದಿಗೆ ಸಹಕರಿಸಿದ್ದರಿಂದ ಇಷ್ಟೆಲ್ಲಾ ಸಾಧಿಸಲು ಸಾಧ್ಯವಾಯಿತು; ಅದಕ್ಕೂ ಹೆಚ್ಚಾಗಿ ಡಿ.ಎಂ.ಓ. ಸಾಹೇಬರೇ ಆಡಳಿತವೆಂದರೇನೆಂಬುದರ ಪ್ರಾಥಮಿಕ ತಿಳುವಳಿಕೆ ಇಲ್ಲದ ನನ್ನನ್ನು ಪ್ರೀತಿ, ವಾತ್ಸಲ್ಯಗಳಿಂದ ಅಕ್ಷರಶಃ ಕೈ ಹಿಡಿದು ನಡೆಸಿ ಮಾರ್ಗದರ್ಶನ ಮಾಡಿದ್ದನ್ನು ನಾನೆಂದೂ ಮರೆಯಲಾರೆ ಎಂದು ಮಾತು ಮುಗಿಸಿದೆ.

ಒಂದೆರಡು ದಿನಗಳಲ್ಲೇ ಶಿಕಾರಿಪುರದ ಪುರಸಭೆಯವರಿಂದಲೂ ಬೀಳ್ಕೊಡಿಗೆ ಸಮಾರಂಭವೇರ್ಪಟ್ಟಿತ್ತು. ಪುರಸಭಾಧ್ಯಕ್ಷರೇ ಅಲ್ಲದೆ ಮತ್ತಿತರ ಸದಸ್ಯರು ತುಂಬಾ ಆತ್ಮೀಯವಾಗಿ

ಮಾತನಾಡಿದರು. ಮೆಡಿಕಲ್ ಕಾಲೇಜಿನಿಂದ ನೇರವಾಗಿ, ಹೊಸದಾಗಿ ನಿರ್ಮಿಸಿದ ಆಸ್ಪತ್ರೆಗೆ ಬಂದ ಯುವ ವೈದ್ಯ ಅದನ್ನು ಪರಿವರ್ತಿಸಿದ ರೀತಿ ಬಗೆಗೆ ತಮ್ಮೆಲ್ಲರ ಮೆಚ್ಚುಗೆ ವ್ಯಕ್ತಪಡಿಸಿದರು. ಕೆ. ವಿ. ನರಸಪ್ಪನವರು ಮಾತಾಡಿ ಈ ಊರಿಗೆ ಎನ್. ಇ. ಎಸ್. ಯೋಜನೆಯಡಿ ಆಧುನಿಕ ಮಾದರಿಯ ಆಸ್ಪತ್ರೆ ಕಟ್ಟಡ ತಯಾರಾದಾಗ ಯಾವ ತರಹದ ವೈದ್ಯರು ಬರುತ್ತಾರೋ, ಏನೆಲ್ಲಾ ಅವಸ್ಥೆಗಳಾಗಬಹುದೋ ಎಂಬ ಶಂಕೆ ಅವರನ್ನು ಬಾಧಿಸುತ್ತಿತ್ತೆಂದೂ, ಆದರೆ ಡಾ॥ ಚಂದ್ರಪ್ಪ ಗೌಡರು ಅವರೆಲ್ಲರ ನಿರೀಕ್ಷೆಗೆ ಮೀರಿ ಆಸ್ಪತ್ರೆಯನ್ನು ಒಂದು ಮಾದರಿಯನ್ನಾಗಿ ಪರಿವರ್ತಿಸಿದ್ದಾರೆ. ಅದನ್ನು ಇನ್ನೂ ೫೦ ಹಾಸಿಗೆಗಳ ಆಸ್ಪತ್ರೆಯನ್ನಾಗಿ ಪರಿವರ್ತಿಸುವ ಬಗೆಗೆ ಸರ್ಕಾರದ ಹಂತದಲ್ಲಿ ಪ್ರಯತ್ನಗಳು ನಡೆಯುತ್ತಿರುವಾಗಲೇ ಅವರ ವರ್ಗಾವಣೆ ಒಂದು ಹಿನ್ನಡೆಯಾಗುತ್ತದೆ ಎಂದು ಶಂಕಿಸಿದರು. ಅಲ್ಪ ಸಮಯದಲ್ಲೇ ಜನಾನುರಾಗಿಯಾಗಿದ್ದ ಅವರನ್ನು ಇನ್ನೂ ಸ್ವಲ್ಪ ಸಮಯ ಇಲ್ಲಿ ಉಳಿಸಿಕೊಳ್ಳಲಾಗದುದಕ್ಕೆ ಜನ ತಮ್ಮನ್ನು ದೂರುವುದಕ್ಕೆ ಆರಂಭಿಸಿದ್ದಾರೆಂದು ಪರಿತಪಿಸಿದರು. ಆದರೆ ಅವರಿಗೆ ಇನ್ನೂ ಉತ್ತಮ ಅವಕಾಶಗಳು ಒದಗಿ ಬಂದಿದೆಯಾದುದರಿಂದ, ಅವರ ಮುನ್ನಡೆಗೆ ಅಡ್ಡಗಾಲು ಹಾಕುವುದು ಸರಿಯಲ್ಲವೆಂದು ಹೇಳಿ, ಶುಭ ಹಾರೈಸಿದರು. ನಾನು ಉತ್ತರಿಸಿ, ಶಿಕಾರಿಪುರದ ಜನತೆಯು ಆಸ್ಪತ್ರೆ ಮತ್ತು ವೈಯಕ್ತಿಕವಾಗಿ ನನ್ನನ್ನು ಆದರಿಸಿದ್ದನ್ನು ಮರೆಯಲಾರೆ; ಅದರ ಏಳಿಗೆ ಅಥವಾ ಆಡಳಿತದಲ್ಲಿ ಯಾರೂ ಹಸ್ತಕ್ಷೇಪ ಮಾಡದೇ ಸಹಕರಿಸಿದ್ದರಿಂದಲೇ ಅಷ್ಟೆಲ್ಲಾ ಬೆಳವಣಿಗೆಗಳನ್ನು ಮಾಡಲು ಸಾಧ್ಯವಾಯಿತೆಂದು ಹೇಳಿ, ಅವರೆಲ್ಲರ ಸಹಕಾರಕ್ಕೆ ಕೃತಜ್ಞತೆ ಸಲ್ಲಿಸಿದೆ.

ಸಮಾರಂಭ ಮುಗಿಯುತ್ತಲೇ ಸದಸ್ಯರೆಲ್ಲಾ ಕೈಕುಲುಕಿ ಶುಭ ಕೋರಿದರು. ಉಪಾಧ್ಯಕ್ಷ ನಿಂಗಪ್ಪನವರು ಮುಂದೆ ಬಂದು ಹಸನ್ಮುಖರಾಗಿ ಕೈಕುಲುಕುತ್ತಾ ಹಿಂದೊಂದು ಸಾರಿ ತಾವು ಅನುಚಿತವಾಗಿ ವರ್ತಿಸಿದ ಬಗೆಗೆ ವ್ಯಥೆ ಪಡುವಂತಾಯಿತು, ಆ ಬಗೆಗೆ ಅವರನ್ನು ಕ್ಷಮಿಸ ಬೇಕೆಂದು ಅಗ್ರಹ ಪಡಿಸಿದರು. ಆ ಸಮಯದ ಆವೇಶದ ಭರದಲ್ಲಿ ಅವರನ್ನು ನೋಡಿಕೊಂಡ ಬಗೆಗೆ ನನಗೂ ವ್ಯಥೆಯಾಯಿತೆಂದು ಹೇಳಿ ಘಟನೆಯನ್ನು ಮರೆತುಬಿಡೋಣವೆಂದು ಹೇಳಿದೆ.

ವೈದ್ಯ ವೃತ್ತಿಯಲ್ಲಾಗಲೀ, ಆಡಳಿತ ಕ್ಷೇತ್ರದಲ್ಲಾಗಲೀ ಯಾವುದೇ ಅನುಭವವಿರದ ವೈದ್ಯನಾಗಿ ತೀರಾ ಎಳೆಯ ಯುವಕ ಅಪರಿಚಿತ ಹಳ್ಳಿಗಾಡಿನ ಊರಲ್ಲಿ ಆರಂಭವಾದ ಸುಸಜ್ಜಿತ ಆಸ್ಪತ್ರೆಗೆ ನೇಮಕವಾದಗಿನ ಪರಿಸ್ಥಿತಿಯನ್ನು, ಅಲ್ಲಿಂದ ಮುಂದಿನ ಜಾಗಕ್ಕೆ ವರ್ಗವಾಗಿ ಹೋಗುವ ಸಂದರ್ಭದಲ್ಲಿ ಹಿಂದಿರುಗಿ ನೋಡಿದಾಗ ಏನೆನ್ನಿಸಬಹುದು? ಅಲ್ಪ ಸ್ವಲ್ಪ ಈಜು ಕಲಿತವನು ಅಕಸ್ಮಾತ್ತಾಗಿ ನದಿಯೊಳಗೆ ಬಿದ್ದಾಗ ಹೇಗಾದರೂ ಈಜಾಡಿ ದಡ ಸೇರಿದ ನಾಣ್ನುಡಿಯ ಪ್ರಾತ್ಯಕ್ಷಿಕೆ ನನ್ನದಾಯಿತು. ಅತಿಯಾದ ಯಾವ ಆಸೆ, ಆಕಾಂಕ್ಷೆಗಳ ಬೆನ್ನು ಹತ್ತದೆ ಎದುರಾಗುತ್ತಿದ್ದ ಸಮಸ್ಯೆಗಳನ್ನು ಸಮರ್ಪಣಾಭಾವದಿಂದ ಸ್ವೀಕರಿಸಿ ಕಾರ್ಯಮಗ್ನನಾಗುತ್ತಿದ್ದೆ. ಕಾಯಂ ಕೆಲಸ ಸಿಗುವಲ್ಲಿ ಆಗಿನ ರಾಜಕೀಯ/ಸಾಮಾಜಿಕ ವ್ಯವಸ್ಥೆಗಳ ಕೈವಾಡಗಳಿಂದ ಅನ್ಯಾಯವಾಗಿದ್ದರೂ ಅದು ನನ್ನ ಕಾರ್ಯ ನಿರ್ವಹಣೆಯಲ್ಲಿ ಪ್ರಭಾವ ಬೀರದಂತೆ ನೋಡಿಕೊಂಡೆನೆನ್ನಬಹುದು. ಎಳೆಯ ವಯಸ್ಸಿನಿಂದಲೇ ಗುರಿಯಾಗಿರಿಸಿಕೊಂಡಿದ್ದ ಕೆಲವು ಆದರ್ಶಗಳೂ ಸದಾ ದಾರಿ ದೀಪಗಳಂತಿದ್ದು ಅದರಂತೆ ಆತ್ಮಸಾಕ್ಷಿಗನುಗುಣವಾಗಿ ವರ್ತಿಸಿದೆ. ಶಿಕಾರಿಪುರವನ್ನು ಬಿಡುವಾಗ ಏನನ್ನೋ ಸಾಧಿಸಿದ ಸಂತೃಪ್ತಿ ನನಗುಂಟಾಗಿತ್ತು. ಇಲ್ಲಿಯ ಅನುಭವ ಹಾಗೂ ಸಾಧನೆಗಳು ನನ್ನ ಮುಂದಿನ ಕಾರ್ಯಕ್ಷೇತ್ರಗಳ ಯಶಸ್ಸುಗಳಿಗೆ ಹೇಗೆ ನಾಂದಿಯಾಯಿತು ಎಂಬುದನ್ನು ಮುಂದೆ ನೋಡಬಹುದು.

# ೯. ಕೆ.ಜಿ.ಎಫ್. - ರೆಸಿಡೆಂಟ್ ಮೆಡಿಕಲ್ ಆಫೀಸರ್

ಕೆ.ಜಿ.ಎಫ್., ಅರ್ಥಾತ್ ಕೋಲಾರದ ಚಿನ್ನದ ಗಣಿ ಪ್ರದೇಶ; ಶಿಕಾರಿಪುರದಿಂದ ಸುಮಾರು ೨೪೦ ಮೈಲಿಗಳ ದೂರದಲ್ಲಿದೆ. ಮೈಸೂರು ಸಂಸ್ಥಾನದ ಪೂರ್ವಗಡಿಯಲ್ಲಿ ಆಂಧ್ರ ಪ್ರದೇಶ ಮತ್ತು ತಮಿಳುನಾಡು ರಾಜ್ಯಗಳ ಸರಹದ್ದು ಕೇವಲ ೧೦ ಮೈಲಿಗಳ ದೂರ ಅಲ್ಲಿಂದ. ಸುಮಾರು ಅರ್ಧ ಶತಮಾನದಿಂದ ಅಲ್ಲಿಯ ಆಳವಾದ ಗಣಿಗಳಿಂದ ಚಿನ್ನವನ್ನು ತೆಗೆಯುವ ಕಾರ್ಯ ನಡೆಯುತ್ತಿತ್ತು. ಕೆ.ಜಿ.ಎಫ್.ನಲ್ಲಿ ರಾಬರ್ಟ್‌ಸನ್ ಪೇಟೆ, ಆಂಡರ್‌ಸನ್ ಪೇಟೆ ಹಾಗೂ ಉರಿಗಾಮ್ - ಪುಟ್ಟಪುಟ್ಟ ಕೈಗಾರಿಕೆ ಪ್ರದೇಶಗಳನ್ನು ಒಳಗೊಂಡಿವೆ. ರಾಬರ್ಟ್‌ಸನ್ ಪೇಟೆ, ವ್ಯಾಪಾರ ವಹಿವಾಟುಗಳಲ್ಲಿ ನಿರತ ನಾಗರಿಕರ ವಲಯ; ಅದಕ್ಕೆ ಪ್ರತ್ಯೇಕ ಪೌರಾಡಳಿತ ಇದೆ. ಇನ್ನೆರಡು ವಲಯಗಳಲ್ಲಿ ಚಿನ್ನದ ಗಣಿಗಳಿದ್ದು ಅಲ್ಲಿ ಅದಿರನ್ನು ಹೊರತೆಗೆದು ಚಿನ್ನವನ್ನು ಬೇರ್ಪಡಿಸುವ ಯಂತ್ರೋದ್ಯಮಗಳು ಹಾಗೂ ಕಾರ್ಮಿಕರ ವಸತಿ ಸಮುಚ್ಚಯಗಳಿವೆ. ಇವೆಲ್ಲದರ ನಡುವೆ ಹಲವು ಮೈಲಿಗಳ ಅಂತರ; ಈ ಮೂರೂ ವಲಯಗಳು ಬಂಗಾರಪೇಟೆ ತಾಲ್ಲೂಕಿನ ವ್ಯಾಪ್ತಿಗೆ ಸೇರುತ್ತವೆ. ಕೆ.ಜಿ.ಎಫ್.ನ ಕೈಗಾರಿಕಾ ಸ್ವರೂಪದಿಂದಾಗಿ ಅದನ್ನೇ ಪ್ರತ್ಯೇಕ ನಗರ (City)ವಾಗಿ ಪರಿಗಣಿಸಲಾಗಿದೆ. ಆ ನಗರದ ಆಡಳಿತ ವ್ಯವಸ್ಥೆ ವಿಶೇಷ ತರಹದ್ದಾಗಿ ಇರುವುದರಿಂದ ಅಲ್ಲೊಬ್ಬ ಸ್ಪೆಷಲ್ ಪೋಲೀಸ್ ಸೂಪರಿಂಟೆಂಡೆಂಟ್ (S.S.P.) ಮ್ಯಾಜಿಸ್ಟ್ರೇಟ್ ಕೋರ್ಟ್, ಜೈಲುಗಳನ್ನು ಪ್ರತ್ಯೇಕವಾಗಿ ಸ್ಥಾಪಿಸಲಾಗಿದೆ. ಅಲ್ಲದೆ ಗಣಿ ಕಾರ್ಮಿಕರ ಸ್ವಾಸ್ಥ್ಯ ಸಮಸ್ಯೆಗಳ ಸಲುವಾಗಿ ೨೫೦ ಹಾಸಿಗೆಗಳ ವಿಶೇಷ ಸವಲತ್ತುಗಳ 'ಗಣಿ ಆಸ್ಪತ್ರೆ' (Mines Hospital) ಸ್ಥಾಪಿಸಲಾಗಿದೆ. ಇತರ ನಾಗರಿಕರ ಆರೋಗ್ಯ ರಕ್ಷಣೆಗಾಗಿ ರಾಬರ್ಟ್‌ಸನ್ ಪೇಟೆಯಲ್ಲಿ ಮೈಸೂರು ಸರ್ಕಾರದ 'ಸಿವಿಲ್ ಆಸ್ಪತ್ರೆ'ಯೂ ನಿರ್ಮಾಣವಾಗಿತ್ತು. ಅದರಲ್ಲಿ ನಾಗರಿಕರೇ ಅಲ್ಲದೆ ಗಣಿ ಕಾರ್ಮಿಕರನ್ನವಲಂಬಿಸಿರುವ ಕುಟುಂಬದವರ ಆರೋಗ್ಯ ಸಮಸ್ಯೆಗಳನ್ನೂ ನೋಡಿಕೊಳ್ಳಬೇಕಾಗುತ್ತಿತ್ತು. ಸುಮಾರು ೧೦೦ ಹಾಸಿಗೆಗಳ ಸಾರ್ವಜನಿಕ ಆಸ್ಪತ್ರೆ ಒಂದು ಕಡೆ ಇದ್ದರೆ ಅದರ ಎದುರೇ ಪ್ರತ್ಯೇಕ ಆಡಳಿತ ೩೦-೪೦ ಹಾಸಿಗೆಗಳ ಹೆರಿಗೆ ಆಸ್ಪತ್ರೆಯೂ ಇತ್ತು. ಸಿವಿಲ್ ಆಸ್ಪತ್ರೆಗೆ ಒಬ್ಬ ಡಿ.ಎಂ.ಓ., ಒಬ್ಬ ಆರ್.ಎಂ.ಓಗಳೇ ಅಲ್ಲದೆ ೭-೮ ಜನ ಅಸಿಸ್ಟೆಂಟ್ ಸರ್ಜನರೂ ಇರುತ್ತಿದ್ದರು.

## ಅಧಿಕಾರ ಹಸ್ತಾಂತರದ ವಿಚಿತ್ರ ಅನುಭವ

ಶಿಕಾರಿಪುರ ಆಸ್ಪತ್ರೆಯಿಂದ ಬಿಡುಗಡೆಯಾದನಂತರ ಕೆ.ಜಿ.ಎಫ್.ನಲ್ಲಿ ಹಾಜರಾಗುವುದಕ್ಕೆ ಒಂದು ವಾರದಷ್ಟು ಕಾಲಾವಕಾಶವಿತ್ತು. ಅಲ್ಲಿಯ ಆಸ್ಪತ್ರೆಯ ಒಳಾಡಳಿತದ (R.M.O) ಜವಾಬ್ದಾರಿ ನನ್ನದಾಗುವುದರಿಂದ ಕೆಲವು ವಿಭಾಗಗಳ ನಿರ್ವಹಣೆ ನೇರವಾಗಿ ನನ್ನ ಮೇಲಿರುತ್ತಿತ್ತು. ಆಸ್ಪತ್ರೆಯ ಔಷಧಗಳ ಉಗ್ರಾಣದ ಉಸ್ತುವಾರಿ, ಸಾಮಾನು ಸರಂಜಾಮುಗಳು, ಮತ್ತಿತರ ಸಾಧನ ಸಲಕರಣೆಗಳೆಲ್ಲಾ ಆರ್.ಎಂ.ಓ. ಆದವರ ನೇರ ಚಾರ್ಜಿನಲ್ಲಿರುತ್ತವೆ. ಅದರಿಂದ ಶಿಕಾರಿಪುರದಲ್ಲಿ ಬಿಡುಗಡೆಯಾದ ೩-೪ ದಿನಗಳಲ್ಲೇ ಕೆ.ಜಿ.ಎಫ್. ತಲುಪಿದೆ.

ನಮ್ಮ ಊರು ಕಡೆಯು ಡಾ॥ ಕಡಿದಾಳ್ ದೇವೇಂದ್ರ ಎಂಬವರು ಕಳೆದ ಆರು ತಿಂಗಳಿಂದ ಅಲ್ಲಿ ಅಸಿಸ್ಟೆಂಟ್ ಸರ್ಜನ್ ಆಗಿದ್ದರು. ಅದರಿಂದ ಹೋದ ಕೂಡಲೇ ಅವರ ನಿವಾಸದಲ್ಲೇ ವಾಸ್ತವ್ಯ ಹೂಡಲು ಸಹಾಯವಾಯಿತು. ಮರುದಿನ ಬೆಳಿಗ್ಗೆ ಆಗಿನ ಆರ್.ಎಂ.ಓ. ಡಾ॥ ವೆಂಕಟೇಶ ನಾಯ್ಡು ಅವರನ್ನು ಭೇಟಿ ಮಾಡಿದೆ. ಅವರು ಕಾಲೇಜಿನಲ್ಲಿ ನನಗಿಂತ ಒಂದೆರಡು ತರಗತಿಗಳು ಮುಂದಿದ್ದು, ಸುಪರಿಚಿತರಾಗಿದ್ದವರೇ; ಅವರ ಜೊತೆಯಲ್ಲೇ ಡಿ.ಎಂ.ಓ. ಡಾ॥ ಸುಬ್ಬಯ್ಯನವರನ್ನು ಭೇಟಿ ಮಾಡಿದೆ. ಸ್ಫುರದ್ರೂಪಿಯಾದ ಕುಳ್ಳನೆ ವ್ಯಕ್ತಿ ಸುಬ್ಬಯ್ಯನವರು; ಕಟ್ಟುನಿಟ್ಟಿನ ಶಿಸ್ತಿನ ಆಡಳಿತಕ್ಕೆ ಹೆಸರಾದವರಂತೆ. ಅಂದೇ ನನಗೆ ಆರ್.ಎಂ.ಓ. ಅವರಿಂದ ಆಸ್ಪತ್ರೆಯ ಚಾರ್ಜು ಕೊಡಿಸುವ ಪ್ರಸ್ತಾವ ಮಾಡಿದೆ. ಚಾರ್ಜು ತೆಗೆದುಕೊಳ್ಳುವುದಕ್ಕೆ ಇನ್ನೂ ೩-೪ ದಿನಗಳ ಗಡುವು ಇರುವುದರಿಂದ ಕೊನೆಯ ದಿನ ತೆಗೆದುಕೊಂಡರಾಯಿತು ಎಂದು ಅವರೇ ಸೂಚನೆ ಮಾಡಿದರು. ಅಷ್ಟರಲ್ಲೇ ಡಾ॥ ನಾಯ್ಡು ಅವರು ಕಾರ್ಯನಿಮಿತ್ತ ಹೊರಗೆ ಹೋಗ ಬೇಕಾಯಿತು; ನಾವಿಬ್ಬರೇ ಮಾತುಗಳನ್ನು ಮುಂದುವರಿಸಿದೆವು. ಡಿ.ಎಂ.ಓ. ಅವರು ಮುಂದುವರಿದು "ಆಸ್ಪತ್ರೆಯ ಔಷಧ ಉಗ್ರಾಣ ಮತ್ತಿತರ ಸಾಮಾನು ಸಲಕರಣೆಗಳ ಲೆಕ್ಕಪತ್ರಗಳನ್ನು ಡಾ॥ ನಾಯ್ಡು ಬಹಳ ಕರಾರುವಾಕ್ಕಾಗಿ ಇರಿಸಿದ್ದಾರೆ; ಅವರೊಬ್ಬ ಮಹಾ ಕೋಮಟಿಯಂಥವರು; ಆ ಬಗೆಗೆ ನಿಮಗೆ ಯಾವುದೇ ಅನುಮಾನ ಬೇಡ; ನೀವು ಹಾಜರಾಗಬೇಕಾದ ಕಡೇ ದಿನ ಚಾರ್ಜು ವಹಿಸಿ ಕೊಂಡರಾಯಿತು. ಆ ತನಕ ಆಸ್ಪತ್ರೆ ಕಾರ್ಯ ನಿರ್ವಹಿಸುತ್ತಿರುವ ವಿಧಿ ವಿಧಾನಗಳನ್ನು ವೀಕ್ಷಿಸುತ್ತಿರಿ" ಎಂದು ಹೇಳಿದರು. ವ್ಯಾಸೆಕ್ಟಮಿ ಶಿಬಿರದಂಥ ಜವಾಬ್ದಾರಿ ಕಾರ್ಯದ ನಡುವೆಯೇ ಜಾರ್ಜನ್ನು ವಹಿಸಿಕೊಟ್ಟು ಬಂದಿರುವ ನನಗೆ ಅವರ ವರ್ತನೆ ಸ್ವಲ್ಪ ವಿಚಿತ್ರವೆನಿಸಿತು. ಮುಂದೆ ಮೇಲಾಧಿಕಾರಿಯಾಗುವವರ ಸಲಹೆಯನ್ನು ವಿರೋಧಿಸಿ ಚಾರ್ಜು ವಹಿಸಿಕೊಡುವಂತೆ ಒತ್ತಾಯ ಮಾಡುವುದು ಅಷ್ಟೇನು ಸರಿಯಾದ ಕ್ರಮವಾಗಲಾರದೆಂದು ಸಮ್ಮತಿಸಬೇಕಾಯಿತು. ಡಾ॥ ನಾಯ್ಡು ಅವರು ಮರುದಿನವೇ ಚಾರ್ಜು ರಿಪೋರ್ಟುಗಳಿಗೆ ಸಹಿ ಹಾಕಿದರು; ಆದರೆ ಸಾಮಾನು ಸಾಮಗ್ರಿ ಮತ್ತು ಔಷಧ ಉಗ್ರಾಣ ವಿವರವಾದ ಚಾರ್ಜನ್ನು ಎರಡು ದಿನಗಳ ಮಟ್ಟಿಗೆ ತುರ್ತಾಗಿ ಬೆಂಗಳೂರಿಗೆ ಹೋಗಬೇಕಾಗಿರು ವುದರಿಂದ ವಾಪಸ್ಸು ಬಂದ ನಂತರ ತೋರಿಸುವುದಾಗಿ ಹೇಳಿ ಹೋದರು. ಮುಂದೆ ಅವರು ವಾಪಾಸು ಬಂದಿದ್ದು ಕೆ.ಜಿ.ಎಫ್. ಬಿಡುವ ಹಿಂದಿನ ದಿನವೇ. ಔಷಧ ಉಗ್ರಾಣ, ಆಪರೇಷನ್ ಥಿಯೇಟರ್ ಮುಂತಾದ ಕಡೆಗಳಿಗೆ ನನ್ನನ್ನು ಕರೆದುಕೊಂಡು ಹೋಗಿ ಕೆಲವು ರಖಂಗಳನ್ನು ತೋರಿಸಿ, ಪುಸ್ತಕದಲ್ಲಿ ನಮೂದಾಗಿರುವ ದಾಖಲಾತಿಗೆ ಸರಿಹೊಂದುವುದನ್ನು ತೋರಿಸಿದರು; ಹಾಗೂ ಮಿಕ್ಕೆಲ್ಲಾ ಸಾಮಾನುಗಳು ಹಾಗೇ ಸರಿಯಾಗಿರುವುವೆಂದು ಭರವಸೆ ನೀಡಿದರು. ಮರುದಿನದಿಂದಲೇ ನನನ್ನು ಕೆಲಸ ಕಾರ್ಯಗಳಲ್ಲಿ ತೊಡಗಿಸಿಕೊಂಡೆ. ಮೊದಲೇ ಪ್ರಸ್ತಾಪಿಸಿದಂತೆ ಮೆಡಿಕಲ್ ಉಗ್ರಾಣ, ಔಷಧಗಳು, ಆಹಾರ ವಸ್ತುಗಳ ಸರಬರಾಜಿನ ಬಗೆಗೆ ಮೇಲ್ವಿಚಾರಣೆ ನನ್ನ ಜವಾಬ್ದಾರಿಯಾಗಿತ್ತು. ಔಷಧ ಸಾಮಗ್ರಿಗಳನ್ನು ಸ್ವೀಕರಿಸುವುದು. ಅವುಗಳ ವಿತರಣೆ, ಲೆಕ್ಕಪತ್ರಗಳ ದಾಖಲಾತಿಗಳನ್ನೆಲ್ಲಾ ವೈಯಕ್ತಿಕವಾಗಿ ನಾನೇ ಮಾಡಬೇಕಾದ ಪರಿಸ್ಥಿತಿ ಇತ್ತು. ನನ್ನ ಸಹಾಯಕ್ಕೆ ಅರೆಕಾಲಿಕ ಗುಮಾಸ್ತರನ್ನು ನಿಯೋಜಿಸಿದ್ದರೂ, ಅವರಿಗೆ ಆಸ್ಪತ್ರೆಯ ಕಚೇರಿಯ ಕಾರ್ಯ ನಿರ್ವಹಿಸುವುದರಲ್ಲೇ ಕಾಲ ಮುಗಿದು ಹೋಗುತ್ತಿತ್ತು. ಇನ್ನು ಸರ್ಜಿಕಲ್ ವಾರ್ಡಿನ ರೋಗಿಗಳ ಚಿಕಿತ್ಸಾ ನಿರ್ವಹಣೆಯ ಮೇಲುಸ್ತುವಾರಿ ಹಾಗೂ ಎಕ್ಸ್‌ರೇ ಇಲಾಖೆಯ ಕೆಲಸ ಕಾರ್ಯಗಳು ನನ್ನದಾಗಿರುತ್ತಿದ್ದವು.

ಆರ್. ಎಂ. ಓ. ಹುದ್ದೆಯಲ್ಲಿರುವವರು ಖಾಸಗಿ ಪ್ರಾಕ್ಟೀಸ್ ಮಾಡುವಂತಿರಲಿಲ್ಲವಾದ್ದರಿಂದ ಅವರಿಗೆ ತಿಂಗಳಿಗೆ ೫೦ ರೂಪಾಯಿಗಳ ನಾನ್-ಪ್ರ್ಯಾಕ್ಟೀಸ್ ಭತ್ಯೆ (N.P.A.) ನೀಡಲಾಗುತ್ತಿತ್ತು. ಆದರೂ ಹಿಂದೆ ಇದ್ದವರು ತಮ್ಮ ಕೊಠಡಿಯನ್ನೇ ಒಂದು ಖಾಸಗಿ ಪ್ರ್ಯಾಕ್ಟೀಸ್‌ನ ತಾಣವಾಗಿ ಪರಿವರ್ತಿಸಿಕೊಂಡಿದ್ದರಂತೆ. ಡಯಾಬಿಟೀಸ್‌ನಂತಹ ಕಾಯಿಲೆಯವರ ಮೂತ್ರ ಪರೀಕ್ಷೆಯನ್ನು ಅವರೇ ಜರುಗಿಸಿ, ಇಂಜಕ್ಷನ್ ಸಹ ನೀಡುತ್ತಿದ್ದರಂತೆ! ಆದರೆ ನನಗೆ ಹೊರರೋಗಿಗಳ ವಿಭಾಗದಲ್ಲಿ ರೋಗಿಗಳನ್ನು ನೋಡಲಾಗುತ್ತಿರಲಿಲ್ಲ. ಇತರ ವೈದ್ಯರು ಸ್ವಲ್ಪ ಕಷ್ಟಕರವೆಂದು ಕಳುಹಿಸಿದವರನ್ನು ಮಾತ್ರ ನೋಡುತ್ತಿದ್ದೆ. ಪ್ರ್ಯಾಕ್ಟೀಸ್ ವಿಷಯದಲ್ಲಿ ನನ್ನ ನಿಲುವನ್ನು ಹಿಂದೆಯೇ ವ್ಯಕ್ತಪಡಿಸಿರುವೆ.

ಕೆ.ಜಿ.ಎಫ್.ನಲ್ಲಿ ನಾನಿದ್ದುದು ಕೇವಲ ಎರಡೇ ವರ್ಷಗಳಾದರೂ ಆ ಸಮಯದಲ್ಲಿ ಜರುಗಿದ ಘಟನೆಗಳು ಹಾಗೂ ನನಗುಂಟಾದ ಅನುಭವಗಳು ವಿಶಿಷ್ಟವಾದವು. ಕೆಲವನ್ನು ಈ ಹಂತದಲ್ಲಿ ಪ್ರಸ್ತಾಪಿಸುವೆ.

ಡಾ|| ದೇವೇಂದ್ರ ತುಂಬಾ ಮೃದು ಸ್ವಭಾವದ, ಕಷ್ಟಸಹಿಷ್ಣು ಹಾಗೂ ಶ್ರದ್ಧೆಯಿಂದ ಕಾರ್ಯ ನಿರ್ವಹಿಸುವವರು. ನಾನು ಅಲ್ಲಿಗೆ ಹೋಗಿ ಎರಡು ವಾರಗಳಾಗಿರಬೇಕು; ಒಂದು ರಾತ್ರಿ ಅವರು ಕರ್ತವ್ಯ ತತ್ಪರ (ಡ್ಯೂಟಿ)ರಾಗಿದ್ದರು; ಸುಮಾರು ಹತ್ತು ಗಂಟೆ ಇರಬಹುದು; ಪೋಲೀಸರು ಎರಡು ವ್ಯಾನುಗಳ ತುಂಬಾ ಕುಡಿದವರನ್ನು ತಂದಿಳಿಸಿದರು. ಬಹುಪಾಲು ಕೂಲಿ ಕಾರ್ಮಿಕರೇ ಇದ್ದ ಕೆ.ಜಿ.ಎಫ್. ವಲಯದಲ್ಲಿ ಕುಡಿತದ ಅಭ್ಯಾಸ ವ್ಯಾಪಕವಾಗಿತ್ತು. ಅದು ಪಾನನಿಷೇಧದ ಕಾಲವಾಗಿದ್ದು, ಅದರ ಹತೋಟಿಗಾಗಿ ವಿಶೇಷ ಪೋಲೀಸ್ ಪಡೆಗಳೇ ಅಲ್ಲಿದ್ದವು. ಕೆಲಸಾರಿ ಹಗಲಿಗಿಂತಲೂ ರಾತ್ರಿ ಸಮಯದಲ್ಲೇ ಇದರಿಂದಾಗಿ ನಮ್ಮ ಆಸ್ಪತ್ರೆ ಬಿಝಿ(Busy)ಯಾಗಿರುತ್ತಿದ್ದುದು. ಅಂದು ಡಾ|| ದೇವೇಂದ್ರ ಪೋಲೀಸರು ಹಾಜರು ಪಡಿಸಿದವರನ್ನೆಲ್ಲಾ ಪರೀಕ್ಷೆ ಮಾಡಿ ಪುಸ್ತಕದಲ್ಲಿ ದಾಖಲು ಮಾಡಿಕೊಳ್ಳಲಾರಂಭಿಸಿದರು. ಅಷ್ಟರಲ್ಲೇ ಕುಳ್ಳನೆಯ, ಧಡೂತಿಯ ವ್ಯಕ್ತಿಯೊಬ್ಬರು ಬಂದು ತಾವು ಡಾ|| ತಂಗವೇಲುವೆಂಬ ಖಾಸಗಿ ವೈದ್ಯರು ಹಾಗೂ ಆಸ್ಪತ್ರೆಯ ಸಂದರ್ಶಕ ಸಮಿತಿಯ ಸದಸ್ಯರೂ ಕೂಡ ಎಂದು ಪರಿಚಯಿಸಿಕೊಂಡರು. ಪೋಲೀಸರು ಕರೆತಂದಿರುವವರ ಪೈಕಿ ಆರ್ಮುಗಂ ಎಂಬವನು ಅವರ ತಮ್ಮನೆಂದೂ ಅವನಲ್ಲಿ ಕುಡಿತದ ಚಿಹ್ನೆಗಳಿಲ್ಲವೆಂದು ದೃಢೀಕರಿಸಬೇಕೆಂದು ಹೇಳತೊಡಗಿದರು. ಆದರೆ ಡಾ|| ದೇವೇಂದ್ರ ತಾವು ಪರೀಕ್ಷೆ ಮಾಡಿದವರಿಗೆ ಯಾವ ರೀತಿಯ ಚಿಹ್ನೆಗಳಿರುತ್ತವೆಯೋ ಅದಕ್ಕನುಗುಣವಾಗಿ ದೃಢೀಕರಣ ಪತ್ರಕೊಡುವೆನೆಂದು, ಅದರಲ್ಲಿ ಮೂರನೆಯವರ ಪ್ರಭಾವಕ್ಕೆ ಮಣಿಯುವುದಿಲ್ಲವೆಂದರು. ಡಾ|| ತಂಗವೇಲು ತಮ್ಮ ಮಾತಿಗೆ ಬೆಲೆ ಕೊಡದಿದ್ದರೆ ಅವರಿಗೇನಾಗಬಹುದೆಂಬುದರ ಬಗೆಗೆ ಎಚ್ಚರಿಕೆಯ ಧಾಟಿಯಲ್ಲಿ ಮಾತನಾಡಲಾರಂಭಿಸಿದರು. ಅದಕ್ಕೂ ಕರ್ತವ್ಯನಿರತ ವೈದ್ಯರು ಸಮ್ಮತಿಸದಿದ್ದಾಗ ಸಿಟ್ಟಿನಿಂದ ಬುಸುಗುಟ್ಟುತ್ತಾ ಹೊರಹೋದರು. ಮತ್ತೆ ೧೦-೧೫ ನಿಮಿಷಗಳಲ್ಲೇ ಹುಡುಗನೊಬ್ಬನನ್ನು ವೈದ್ಯರ ಹತ್ತಿರ ಕರೆತಂದು, ಅವನ ಎದೆಗೂಡಿನಲ್ಲಿ ಸೂಜಿಯೊಂದು ನಾಟಿದೆಯೆಂತಲೂ ಅದನ್ನು ತೆಗೆಯಬೇಕೆಂದು ಹೇಳಿದರು. ವೈದ್ಯರು ಅವನನ್ನು ಪರೀಕ್ಷಿಸಿ, ಸಲಕರಣೆಗಳನ್ನು ಶುದ್ಧೀಕರಿಸಲು ನರ್ಸ್‌ಗೆ ಹೇಳಿ, ತಮ್ಮ ಕರ್ತವ್ಯದಲ್ಲಿ ಮುಂದುವರಿದರು. ಡಾ|| ತಂಗವೇಲು ಐದಾರು ನಿಮಿಷಗಳಲ್ಲೇ ಒಳಬಂದು ಸೂಜಿ ತೆಗೆಯುವುದನ್ನು ಅವರು ಬೇಕೆಂತಲೇ ತಡ ಮಾಡುತ್ತಿದ್ದಾರೆಂದು ದೂಷಣೆ ಮಾಡತೊಡಗಿದರು. ಸಾಮಾನುಗಳನ್ನು ಬಿಸಿಮಾಡಿ ಶುದ್ಧೀಕರಿಸುವ ಕಾರ್ಯ ನಡೆಯುತ್ತಿರುವು

ದಾಗಿಯೂ, ಅವು ಸಜ್ಜಾದ ಕೂಡಲೇ ತೆಗೆಯುವುದಾಗಿಯೂ ಡಾ|| ದೇವೇಂದ್ರ ಹೇಳಿದರೂ, ಅವರು ಕೇಳಿಸಿ ಕೊಳ್ಳುವ ಸ್ಥಿತಿಯಲ್ಲಿರಲಿಲ್ಲ. ಪರಿಸ್ಥಿತಿ ವಿಕೋಪಕ್ಕೆ ಹೋಗಬಹುದೆಂದು ಭಾವಿಸಿ ನನ್ನನ್ನು ಕರೆತರಲು ಹೇಳಿ ಕಳುಹಿಸಿದರು. ಅಷ್ಟರಲ್ಲೇ ಡಾ|| ತಂಗವೇಲು ಆವೇಶಭರಿತರಾಗಿ ಹುಡುಗನನ್ನು ಕೈಹಿಡಿದು ಹೊರಗಡೆ ಕರೆದುಕೊಂಡು ಹೋದರು. ಹುಡುಗನ ಎದೆಗೆ ನಾಟಿದ್ದ ಸೂಜಿಯನ್ನು ಗಣಿ ಆಸ್ಪತ್ರೆಯಲ್ಲಿ ತೆಗೆಯಲಾಯಿತೆಂದು ಅಲ್ಲಿದ್ದ ಸ್ನೇಹಿತರು ಮರುದಿನ ತಿಳಿಸಿದರು.

ಡಾ|| ತಂಗವೇಲು ಅಷ್ಟಕ್ಕೇ ಸುಮ್ಮನಾಗಲಿಲ್ಲ. ಡಿ.ಎಂ.ಓ. ಅವರಿಗೇ ಅಲ್ಲದೆ, ಬೆಂಗಳೂರಿನ ವೈದ್ಯಕೀಯ ಇಲಾಖೆಯ ನಿರ್ದೇಶಕರಿಗೂ ದೂರು ಸಲ್ಲಿಸಿದರು. ಮುಂದೆ ಆ ಬಗೆಗೆ ಇಲಾಖಾ ವಿಚಾರಣೆಯೂ ನಡೆಯಿತು. ಪ್ರಕರಣ ಜರುಗಿದ ಸಮಯದಲ್ಲಿದ್ದ ಆಸ್ಪತ್ರೆ ಸಿಬ್ಬಂದಿಗಳೇ ಅಲ್ಲದೆ ಆ ದಿನ ಕುಡಿತದವರನ್ನು ಕರೆದು ತಂದಿದ್ದ ಕೆಲವು ಪೋಲೀಸರನ್ನು ವಿಚಾರಣೆಯ ಸಮಯದಲ್ಲಿ ಸಾಕ್ಷಿಗಳಾಗಿ ಹಾಜರು ಪಡಿಸಲಾಯಿತು. ಅಂತಹ ಪ್ರತ್ಯಕ್ಷದರ್ಶಿಗಳ ಸಾಕ್ಷ್ಯದ ಎದುರು ಡಾ|| ತಂಗವೇಲು ಆಪಾದನೆಗಳನ್ನು ರುಜುವಾತು ಪಡಿಸುವಲ್ಲಿ ವಿಫಲ ರಾದರು. ಆದರೆ ಡಾ|| ತಂಗವೇಲು ಆಸ್ಪತ್ರೆಯ ಮೇಲೆ ಸಮಯ ಸಿಕ್ಕಾಗಲೆಲ್ಲಾ ಕಿಡಿ ಕಾರುವುದನ್ನು ಮುಂದುವರಿಸುತ್ತಲೇ ಇದ್ದರು.

## ಸರ್ಕಾರಿ ಅಧಿಕಾರಿಯ ಉದ್ಧಟತನ

ಒಂದು ಸಾರಿ ಡಿ.ಎಂ.ಓ. ಅವರು ಅನಾರೋಗ್ಯದ ನಿಮಿತ್ತ ಒಂದು ತಿಂಗಳಿಗೂ ಹೆಚ್ಚು ಸಮಯ ರಜೆಯಲ್ಲಿರಬೇಕಾಯಿತು. ಅವರ ಕರ್ತವ್ಯಗಳನ್ನು ಹೆಚ್ಚುವರಿಯಾಗಿ ನಾನು ನಿರ್ವಹಿಸುತ್ತಿದ್ದೆ. ಆ ಸಮಯದಲ್ಲಿ ಪರಸ್ಪರ ಹೊಂದಾಣಿಕೆ ಹಾಗೂ ಹುರುಪಿನಿಂದ ಕಾರ್ಯ ನಿರ್ವಹಿಸುವ ಯುವ ವೈದ್ಯರ ತಂಡ ನಮ್ಮಲ್ಲಿತ್ತು. ಒಂದು ದಿನ ಬೆಳಗಿನ ಹೊತ್ತು ಇಲೆಕ್ಟ್ರಿಕಲ್ ಇಲಾಖೆಯ ಇಂಜಿನಿಯರ್ ರಂಗಸ್ವಾಮಿಯೆಂಬವರು ತಮ್ಮ ಮಗನನ್ನು ಹೊರ ರೋಗಿಗಳ ವಿಭಾಗಕ್ಕೆ ಕರೆತಂದರು. ಆದಾಗಲೇ ಸರತಿಯ ಸಾಲು ಉದ್ದಕ್ಕೆ ಬೆಳದಿತ್ತು. ಅದರಲ್ಲಿ ಸೇರಿ ಕಾಯುವಷ್ಟು ಸಹನೆ ಇರದ ಅವರು, ಅಲ್ಲಿ ತಮಗೆ ಪರಿಚಯವಿದ್ದ, ಅದೇ ಊರಿನವರಾದ ಡಾ|| ಕುಲಶೇಖರನ್ ಹತ್ತಿರ ಮಗನನ್ನು ನೇರವಾಗಿ ತೋರಿಸಿದರು. ಡಾ|| ಕುಲಶೇಖರನ್ ಪರಿಚಯಸ್ಥರ ಮಗನಾದುದರಿಂದ ಸರತಿಯ ಸಾಲಿನ ಉಲ್ಲಂಘನೆಯನ್ನು ಅಷ್ಟಾಗಿ ಗಮನಕ್ಕೆ ತೆಗೆದುಕೊಳ್ಳದೆ ಹುಡುಗನ ಗಾಯಕ್ಕೆ ಪಕ್ಕದ ಚಿಕ್ಕ ಆಪರೇಷನ್ ಥಿಯೇಟರ್‌ನಲ್ಲಿ ಮದ್ದು ಹಾಕಿಸಿ, ಟೆಟನಸ್ ನಿರೋಧ ಇಂಜಕ್ಷನ್ ಮಾಡಿಸಿಕೊಂಡು ಹೋಗುವಂತೆ ಚೀಟಿ ಬರೆದು ಕೊಟ್ಟರು. ಅಲ್ಲಿ ಕಾರ್ಯನಿರತರಾಗಿದ್ದ ಡಾ|| ಇಲಿಯಾಸ್ ಅಹಮದ್ ಹುಡುಗನ ಗಾಯಕ್ಕೆ ಮದ್ದು ಹಾಕಿ ಟೆಟನಸ್‌ಗೆ ಪರೀಕ್ಷಾ ಕೊಡುಗೆ (Test dose) ನೀಡಿ ಸ್ವಲ್ಪ ಹೊತ್ತು ಕಾಯ್ದು ಕುಳ್ಳಿರಲು ಹೇಳಿದರು. ಸರ್ಕಾರಿ ಅಧಿಕಾರಿಯಾದ ರಂಗಸ್ವಾಮಿಯವರಿಗೆ ಹಾಗೆಲ್ಲ ಕಾಯ್ದು ಕೂರುವಷ್ಟು ಸಹನೆ ಇರಲಿಲ್ಲ. ತಮ್ಮ ಕಚೇರಿಗೆ ಹೋಗುವುದಕ್ಕೆ ತಡವಾಗುತ್ತಿರುವುದರಿಂದ ಕೂಡಲೇ ಇಂಜಕ್ಷನ್ ಕೊಡಬೇಕೆಂದು ವೈದ್ಯರೊಡನೆ ವಾದಿಸತೊಡಗಿದರು. ಪರೀಕ್ಷಾ ಕೊಡುಗೆಯ ಫಲಿತಾಂಶವನ್ನು ನೋಡಲು ಸ್ವಲ್ಪ ಸಮಯ ಕಾಯಬೇಕಾಗುತ್ತದೆಂದು ಅದೆಷ್ಟು ಪರಿಯಾಗಿ ಹೇಳಿದರೂ ಅದಕ್ಕವರು ಸಮ್ಮತಿಸುವ ಮನಸ್ಸಿನವರಲ್ಲ. ಸರ್ಕಾರಿ ಅಧಿಕಾರಿಯಾದ ತನಗೇ ನಿರ್ಲಕ್ಷ್ಯ ತೋರಿಸುತ್ತಿದ್ದಾರೆಂದು ದೂಷಿಸುತ್ತಾ ಅಲ್ಲೊಂದು ಗಲಾಟೆಯೆಬ್ಬಿಸಿದರು.

ಮುಂದೆ ನೇರವಾಗಿ ಡಿ.ಎಂ.ಓ. ಕೊಠಡಿಯತ್ತ ಧಾವಿಸಿದರು. ಅಲ್ಲಿ ಕಾಯ್ದು ಕೂತಿದ್ದ ಹಲವರನ್ನು ಲೆಕ್ಕಿಸದೆ ಏರಿದ ದನಿಯಲ್ಲಿ ಕೂಗಾಡಲಾರಂಭಿಸಿದರು. ಒಳಗಿದ್ದ ನಾನು ಅದೇನು ಗಲಾಟೆಯೆಂದು ಜವಾನನಿಗೆ ಹೇಳಿ ಅವರನ್ನು ಒಳಗೆ ಕರೆಯಿಸಿದೆ. ಅವರ ಪರಿಚಿತರಾಗಿದ್ದ ಡಿ.ಎಂ.ಓ. ಸುಬ್ಬಯ್ಯನವರು ಅಲ್ಲಿರದಿದ್ದುದು ಅರಿವಾದಾಗ ಮತ್ತಷ್ಟು ರೇಗುವಂತಾಯಿತು. ಡಾ|| ಸುಬ್ಬಯ್ಯನವರು ಇದ್ದಿದ್ದರೆ ಆಸ್ಪತ್ರೆಯಲ್ಲಿ ಅಷ್ಟೆಲ್ಲಾ ಅವ್ಯವಸ್ಥೆಗಳಾಗುತ್ತಿರಲಿಲ್ಲವೆಂದು ಅಸಂಬದ್ಧ ಪ್ರಲಾಪ ಮಾಡಲಾರಂಭಿಸಿದರು. ಅವರನ್ನು ಕುಳಿತುಕೊಳ್ಳುವಂತೆ ಹೇಳಿ ಅವರ ಸಮಸ್ಯೆಯ ಬಗೆಗೆ ವಿಚಾರಿಸಿದೆ. ನಡೆದದ್ದೆಲ್ಲಾ ತಿಳಿದ ಮೇಲೆ ಆಸ್ಪತ್ರೆಯಲ್ಲಿ ಸರತಿಯ ಸಾಲಿನ ಅನುಸರಣೆ, ಪರೀಕ್ಷಾ ಕೊಡುಗೆಗಳಂಥ ಕಾರ್ಯಕ್ರಮಗಳನ್ನು ಅನುಸರಿಸುವುದರ ಪ್ರಾಮುಖ್ಯತೆಗಳ ಬಗೆಗೆ ಮನದಟ್ಟು ಮಾಡಲು ಪ್ರಯತ್ನಿಸಿದೆ. ಆದರೂ ಅವರ ಕೋಪ ತಾಪಗಳು ಉಪಶಮನವಾಗುವಂತೆ ಕಾಣಲಿಲ್ಲ. ಇಂಜಕ್ಷನ್‌ನ್ನು ಅಲ್ಲಿಗೇ ತರಿಸಿ ಹುಡುಗನಿಗೆ ಕೊಟ್ಟು ಸಾಂತ್ವನ ಹೇಳಿ ಕಳುಹಿಸಿಕೊಟ್ಟೆ. ಆದರೂ ಅವರ ಉದ್ಧಟತನದ ನಡೆವಳಿಕೆ ಕಡಿಮೆಯಾಗಲಿಲ್ಲ. ಹೊರಗಡೆ ಬಂದವರೇ ಜವಾನರೊಡನೆ ಪ್ರಸ್ತುತ ಡಿ.ಎಂ.ಓ. ಆಗಿ ಕಾರ್ಯ ನಿರ್ವಹಿಸುವವರು ಮತ್ತೆ ಕೆಲವರ ಹೆಸರುಗಳನ್ನು ಕೇಳಿ ತಿಳಿದುಕೊಳ್ಳಲು ಪ್ರಯತ್ನಿಸಿದರು. ಅವರೆಲ್ಲಾ ಹೆಸರು ಹೇಳಲು ನಿರಾಕರಿಸಿದರಂತೆ. ಬುಸುಗುಟ್ಟುತ್ತಾ ಹೊರಟು ಹೋದರು!

ಆಸ್ಪತ್ರೆಯ ಕೆಲಸದ ಸಮಯ ಮುಗಿಯುತ್ತಲೇ ಡಾಕ್ಟರುಗಳೆಲ್ಲಾ ನನ್ನ ಕಚೇರಿಗೆ ಬಂದರು; ಸರ್ಕಾರಿ ಅಧಿಕಾರಿಯೊಬ್ಬರು ಆಸ್ಪತ್ರೆಯಲ್ಲಿ ಅಸಭ್ಯವಾಗಿ ವರ್ತಿಸಿದುದರ ಬಗೆಗೆ ಅವರೆಲ್ಲಾ ರೊಚ್ಚಿಗೆದ್ದಿದ್ದರು. ಅವರ ಒರಟು ವರ್ತನೆಯ ಬಗೆಗೆ ಇಲೆಕ್ಟ್ರಿಕಲ್ ಇಲಾಖೆಯ ವರಿಷ್ಠರಿಗೆ ದೂರು ಸಲ್ಲಿಸಬೇಕೆಂದು ವಾದಿಸಿವರು. ನಾವು ಹಾಗೆ ಮಾಡುವುದರಿಂದ ನಮ್ಮ ಹಾಗೆಯೇ ಇನ್ನೊಬ್ಬ ಸರ್ಕಾರಿ ನೌಕರರಿಗೆ ತೊಂದರೆಯುಂಟು ಮಾಡುವುದು ಸರಿಯಾದ ಮಾರ್ಗವಲ್ಲವೆಂದು ಶಾಂತಗೊಳಿಸಿ ಕಳುಹಿಸಿದೆ. ಆದರೆ ಇಂಜಿನಿಯರ್ ರಂಗಸ್ವಾಮಿ ಸುಮ್ಮನೆ ಕೂರಲಿಲ್ಲ. ಕೆ.ಜಿ.ಎಫ್. ಹಲವು ಸಂಘ ಸಂಸ್ಥೆಗಳು ಹಾಗೂ ಸರ್ಕಾರಿ ಸಂಸ್ಥೆಗಳಲ್ಲಿ ಜನಪ್ರತಿನಿಧಿಯಾಗಿದ್ದು ಪ್ರಸ್ತುತ 'ಮಾಜಿ' ಎನ್ನಿಸಿಕೊಳ್ಳುತ್ತಿದ್ದ ಪುಡಾರಿ ವೆಂಕಟಸ್ವಾಮಿಯವರನ್ನು ಎತ್ತಿಕಟ್ಟುವಲ್ಲಿ ಯಶಸ್ವಿಯಾದರು. ರಂಗಸ್ವಾಮಿ ಆಸ್ಪತ್ರೆಯವರ ಮೇಲೆ ಆರೋಪಿಸಿದ ವಿಚಾರಗಳಿಗೆ ಮತ್ತಷ್ಟು ಮಸಾಲೆ ಸೇರಿಸಿ ಮೆಡಿಕಲ್ ಇಲಾಖೆಗೆ ದೂರು ಸಲ್ಲಿಸಿದರು.

ಮುಂದಿನ ಕೆಲವೇ ದಿನಗಳಲ್ಲಿ ಮೆಡಿಕಲ್ ಇಲಾಖೆಯ ನಿರ್ದೇಶಕ ಡಾ|| ವಿ. ಆರ್. ನಾಯ್ಡು ಅವರು ಈ ಪ್ರಕರಣದ ಬಗೆಗೆ ವಿಚಾರಿಸಿ ವರದಿ ಮಾಡುವಂತೆ ಪತ್ರ ಬರೆದರು. ಅಷ್ಟರಲ್ಲೇ ಡಾ|| ಸುಬ್ಬಯ್ಯನವರು ಕರ್ತವ್ಯದ ಮೇಲೆ ಹಾಜರಾಗಿದ್ದರು. ಅವರು ನಮ್ಮನ್ನೆಲ್ಲಾ ಕರೆಸಿ ಮೌಖಿಕವಾಗಿ ವಿಚಾರಿಸಿದ್ದಲ್ಲದೆ, ಲಿಖಿತವಾಗಿಯೂ ಹೇಳಿಕೆಗಳನ್ನು ಬರೆದು ಕೊಡುವಂತೆ ಹೇಳಿದರು. ಆಸ್ಪತ್ರೆಯ ಇತರ ವೈದ್ಯರು, ಹಿಂದೆ ನಾನು ರಂಗಸ್ವಾಮಿಯವರ ವರ್ತನೆಯ ಬಗೆಗೆ ಇಲೆಕ್ಟ್ರಿಕಲ್ ಇಲಾಖೆಗೆ ದೂರು ನೀಡಲು ಸಮ್ಮತಿಸದಿದ್ದಕ್ಕಾಗಿ ಮತ್ತೆ ನನ್ನನ್ನು ದೂಷಿಸಲು ಆರಂಭಿಸಿದರು. ಆಗಲೂ ಸಮಯ ಮೀರಿಲ್ಲವೆಂದು ಸಾಂತ್ವನ ಹೇಳಿ ನಾವೆಲ್ಲಾ ಒಟ್ಟಾಗಿ ಜರುಗಿದ ಘಟನೆಯ ಬಗೆಗೆ ವಿವರವಾಗಿ ಮನವಿ ಕಳುಹಿಸಲು ಅವರನ್ನು ಒಪ್ಪಿಸಿದೆ. ಅದರಂತೆ ಒಂದು ಮನವಿಯನ್ನು ತಯಾರು ಮಾಡಿದೆವು. ಅದರಲ್ಲಿ ಪ್ರಕರಣದ ಬಗೆಗೆ ಅವರ ಇಲಾಖೆಯವರಿಂದಾಗಲೀ ಇಲ್ಲವೆ ನಮ್ಮ ಇಲಾಖೆಯವರಾಗಲೀ ಬಹಿರಂಗ ವಿಚಾರಣೆ ಜರುಗಿಸಬೇಕೆಂದು ಒತ್ತಾಯಿಸಿದೆವು. ಆಸ್ಪತ್ರೆಯಲ್ಲಿದ್ದವರ ಪೈಕಿ ಒಬ್ಬ ಡಾಕ್ಟರನ್ನು ಹೊರತು ಪಡಿಸಿ, ನಾನೂ

ಸೇರಿದಂತೆ ಮಿಕ್ಕೆಲ್ಲಾ ವೈದ್ಯರು ಅದಕ್ಕೆ ಸಹಿ ಮಾಡಿದ್ದೆವು (ಅದರ ಒಂದು ಪ್ರತಿ ಇತ್ತೀಚೆಗೆ ನನ್ನ ಕಡತದಲ್ಲಿ ದುಡುದು ಪತ್ತೆಯಾಯಿತು!) ಇದಲ್ಲದೆ ಡಿ.ಎಂ.ಓ. ಅವರ ಆದೇಶದಂತೆ ಪ್ರಕರಣದ ಬಗೆಗೆ ಸಂಬಂಧಿಸಿದವರೆಲ್ಲರೂ ಇಲಾಖಾ ನಿರ್ದೇಶಕರಿಗೆ ಪ್ರತ್ಯೇಕ ಹೇಳಿಕೆಗಳನ್ನು ಬರೆದು ಕೊಟ್ಟೆವು.

ಕೆಲವೇ ದಿನಗಳಲ್ಲಿ ಇಲೆಕ್ಟ್ರಿಕಲ್ ಇಲಾಖೆಯ ಮುಖ್ಯ ಇಂಜಿನಿಯರ್ ಡಿ'ಸಾ ಎಂಬವರು ನನಗೆ ಪತ್ರ ಬರೆದರು. ಸರ್ಕಾರಿ ಅಧಿಕಾರಿಗಳಲ್ಲೊಬ್ಬರು ಕೆಲಸಾರಿ ಆ ರೀತಿ ವರ್ತಿಸುವುದು ಅಪರೂಪವೇನಲ್ಲ. ತಮ್ಮ ಇಲಾಖೆಯವರೊಬ್ಬರು ಆಸ್ಪತ್ರೆಯಲ್ಲಿ ಹಾಗೆ ನಡೆದುಕೊಂಡದ್ದು ವಿಷಾದನೀಯ; ಅಂತಹದ್ದನ್ನು ನಾವೆಲ್ಲಾ ತುಂಬಾ ಗಂಭೀರವಾಗಿ ಗಣನೆಗೆ ತೆಗೆದುಕೊಳ್ಳ ಬಾರದು. ಸದ್ಯದಲ್ಲೇ ಕೆ.ಜಿ.ಎಫ್.ಗೆ ಅವರು ಭೇಟಿ ನೀಡುವ ಸಂಭವವಿದೆಯೆಂತಲೂ, ಆ ಸಮಯದಲ್ಲಿ ಪ್ರಕರಣದ ಬಗೆಗೆ ವಿಚಾರಿಸುವುದಾಗಿ ಸೌಜನ್ಯದ ಉತ್ತರ ಬರೆದಿದ್ದರು.

ಮೆಡಿಕಲ್ ಇಲಾಖಾ ನಿರ್ದೇಶಕರಿಗೆ ನಾವು ಬರೆದುಕೊಟ್ಟ ವಿವರಣೆಗಳು ಹಾಗೂ 'ಮಾಜಿ' ವೆಂಕಟಸ್ವಾಮಿಯವರ ದೂರಿನ ಅರ್ಜಿಯಲ್ಲಿದ್ದ ಅಂಶಗಳ ಬಗೆಗೆ ಇಲಾಖಾ ಮಟ್ಟದಲ್ಲಿ ಪರಾಮರ್ಶೆ ನಡೆದಿರಬೇಕು. ಅದರಲ್ಲಿ ತಿರುಳಿಲ್ಲವೆಂಬುದನ್ನು ಗಮನಿಸಿ, ನಿರ್ದೇಶಕ ವಿ. ಆರ್. ನಾಯ್ಡು ಅವರು ಫಿರ್ಯಾದಿ ವೆಂಕಟಸ್ವಾಮಿಯವರಿಗೆ ಪತ್ರ ಬರೆದರು. ಅದರ ಪ್ರತಿಯೊಂದನ್ನು ನಮ್ಮ ಗಮನಕ್ಕಾಗಿ ಡಿ.ಎಂ.ಓ. ಅವರಿಗೂ ಕಳುಹಿಸಿದ್ದರು. ಅದರ ಸಾರಾಂಶ:

"ಸರ್ಕಾರಿ ಆಸ್ಪತ್ರೆಗಳ ಚಿಕಿತ್ಸೆಗಾಗಿ ಬರುವ ಸಾರ್ವಜನಿಕರೇ ಅಲ್ಲದೆ, ಅಧಿಕಾರಿ ವರ್ಗದವರೂ ಸಹ ಸರತಿಯ ಸಾಲಿನ ನಿಯಮಗಳನ್ನು ಅನುಸರಿಸಬೇಕೆಂಬ ನಿಯಮವಿದೆ. ಕಚೇರಿಗೆ ತಡವಾಗುತ್ತದೆಂದೋ, ಅಥವಾ ಇನ್ನಾವುದೇ ಕಾರಣದಿಂದ ಆದ್ಯತೆಗಾಗಿ ಒತ್ತಾಯ ಮಾಡುವುದು ಸರಿಯಲ್ಲ; ತುರ್ತು ಚಿಕಿತ್ಸೆಗೊಳಗಾಗಬೇಕಾದವರ ಪ್ರಸಂಗ ಬೇರೆ. ಕಾರ್ಯ ನಿರತರಾಗಿರುವ ವೈದ್ಯರಿಗೆ ಸಾರ್ವಜನಿಕರ ಸಮ್ಮುಖದಲ್ಲಿ ಅವಮಾನಕರವಾಗಿ ವರ್ತಿಸಿದಾಗ ಅವರೂ ಸಹನೆ ಕಳೆದುಕೊಳ್ಳಬಹುದು; ಸಹನೆ, ಸಭ್ಯ ನಡತೆ ಅಥವಾ ದೈವೀಕತೆಗಳನ್ನು ವೈದ್ಯರಿಂದ ಮಾತ್ರ ನೀರಿಕ್ಷಿಸಲಾಗದು; ಆಸ್ಪತ್ರೆಗಳಿಗೆ ಹೋಗುವ ರೋಗಿಗಳು ಹಾಗೂ ಅವರ ಸಂಬಂಧಿಗಳಲ್ಲೂ ಸ್ವಲ್ಪ ಮಟ್ಟಿಗೆ ಅಂತಹ ಭಾವನೆಗಳು ಇರಬೇಕಾಗುತ್ತದೆ. ಪ್ರಕರಣದ ಬಗೆಗೆ ನೀವು ಸಲ್ಲಿಸಿದ ದೂರಿನ ವಿವರಗಳು ಮತ್ತು ಅದರ ಬಗೆಗೆ ಸಂಬಂಧಪಟ್ಟವರೆಲ್ಲರೂ ನೀಡಿರುವ ವಿವರಣೆಗಳನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದೆ. ಆಸ್ಪತ್ರೆ ವೈದ್ಯರಾಗಲೀ, ಇತರ ಸಿಬ್ಬಂದಿ ಗಳಾಗಲೀ ಅಸಭ್ಯ ರೀತಿಯಲ್ಲಿ ವರ್ತಿಸಿರುವಂತೆ ಕಂಡುಬರುತ್ತಿಲ್ಲ. ಬಹುಶಃ ಪ್ರಕರಣಕ್ಕೆ ಸಂಬಂಧ ಪಟ್ಟವರೆಲ್ಲಾ ಸ್ವಲ್ಪ ಸಹನೆಯಿಂದ ವರ್ತಿಸಿದ್ದರೆ ಇಂತಹ ಘಟನೆ ಜರುಗುತ್ತಿರಲಿಲ್ಲವೇನೋ?"

ಈ ಘಟನೆಯ ನಂತರ ಆಸ್ಪತ್ರೆಯಲ್ಲಿ ಪದೇ ಪದೇ ಜರುಗುತ್ತಿದ್ದ ಅಸಭ್ಯ ವರ್ತನೆಯ ಪ್ರಕರಣಗಳು ಕಡಿಮೆಯಾದವು. ಯಾವುದೇ ಪ್ರಕರಣಗಳನ್ನು ಕೂಲಂಕಷವಾಗಿ ವಿಚಾರಣೆಗೆ ಒಳಪಡಿಸಿ ನಿಷ್ಪಕ್ಷಪಾತ ನಿರ್ಧಾರಗಳಿಗೆ ಬರುವ ಮೇಲಾಧಿಕಾರಿಗಳೆಷ್ಟಿದ್ದಾರೆ? ಪ್ರಸ್ತುತ ಆಸ್ಪತ್ರೆಗಳು ಮತ್ತು ವೈದ್ಯರ ವಿರುದ್ಧ ಬರುತ್ತಿರುವ ದೋಷಾರೋಪಣೆಗಳನ್ನು ಗಮನಿಸಿದರೆ ಅದೊಂದು ಸುವರ್ಣಯುಗವೆಂದೇ ಪರಿಗಣಿಸಬಹುದು. ಆಸ್ಪತ್ರೆಗಳಲ್ಲಿನ ಸ್ಥಿತಿಗತಿ ಮತ್ತು ವೈದ್ಯವೃತ್ತಿಯವರ ನಡವಳಿಕೆಗಳಲ್ಲೂ ಅಪಾರ ಬದಲಾವಣೆಗಳಾಗಿರುವುದನ್ನು ಅಲ್ಲಗಳೆಯುವಂತೆಯೂ ಇಲ್ಲ.

## ಒಳಾಡಳಿತಗಳಲ್ಲಿನ ಸುಧಾರಣೆಗಳು

ಕೆ.ಜಿ.ಎಫ್. ಸಿವಿಲ್ ಆಸ್ಪತ್ರೆ ಹಾಗೂ ಆ ವಲಯದಲ್ಲಿರುತ್ತಿದ್ದ ಕೆಲವು ಚಿಕ್ಕಪುಟ್ಟ ದವಾಖಾನೆ (Dispensaries)ಗಳ ಒಟ್ಟಾರೆ ಆಡಳಿತ ನಿರ್ವಹಣೆ ಡಿ.ಎಂ.ಓ. ಅವರ ಆಡಳಿತ ವ್ಯಾಪ್ತಿಗೆ ಒಳಪಟ್ಟಿರುತ್ತಿದ್ದವು. ರಾಬರ್ಟ್‌ಸನ್ ಪೇಟೆಯ ಸಿವಿಲ್ ಆಸ್ಪತ್ರೆಯ ಒಳ ಆಡಳಿತ ವ್ಯವಸ್ಥೆಗಳು ನನ್ನ ಜವಾಬ್ದಾರಿಗೆ ಸೇರಿದವು. ಅಲ್ಲಿಗೆ ನಾನು ಹೋದ ಸಮಯದಲ್ಲಿ ಕೆಲವು ವಿಭಾಗಗಳ ನಿರ್ವಹಣೆ ಅಷ್ಟೊಂದು ಕರಾರುವಾಕ್ಕಾಗಿ ಜರುಗುತ್ತಿಲ್ಲವೆಂಬ ಭಾವನೆ ಯುಂಟಾಯಿತು. ಅದರಲ್ಲಿ ನೌಕರ ವರ್ಗದವರು ಕಾಲಕ್ಕೆ ಸರಿಯಾಗಿ ಬಂದು ಮತ್ತೆ ಹಿಂದಿರುಗಿ ಹೋಗುವುದರಲ್ಲಿ ವ್ಯತ್ಯಯಗಳು ಕಂಡು ಬರುತ್ತಿದ್ದವು. ಮೊದಲಿಗೆ ಬೆಳಿಗ್ಗೆ ಮತ್ತು ರಾತ್ರಿ ಅವರೆಲ್ಲರ ಹಾಜರಿ ಗುರುತು ಮಾಡುವ ಸಮಯದಲ್ಲಿ ಹಾಜರಿದ್ದು ಮುಂದೆ ಸಮಯಕ್ಕೆ ಸರಿಯಾಗಿ ಬಂದು ಹೋಗುವ ರೂಢಿಯಾಗುವಂತೆ ಮಾಡಿದೆ.

ಪ್ರತಿದಿನ ರಾತ್ರಿ ೮-೯ ಗಂಟೆ ಸಮಯದಲ್ಲಿ ಆಸ್ಪತ್ರೆಯ ವಾರ್ಡು ಮತ್ತಿತರ ಕಡೆ ತಿರುಗಾಟ ಮಾಡಿ ಎಲ್ಲವೂ ಸುವ್ಯವಸ್ಥಿತವಾಗಿ ಜರುಗುವಂತೆ ಮಾಡುತ್ತಿದ್ದೆ. ಅಂತಹ ಒಂದು ಸಂದರ್ಭ ಅಲ್ಲಿ ಬಹಳ ಕಾಲದಿಂದ ರಾತ್ರಿ ಪಾಳಿಯ ನರ್ಸ್ ಒಬ್ಬ ಸರಿಯಾಗಿ ಕಾರ್ಯ ನಿರ್ವಹಿಸದೆ ಇರುವುದು ಗಮನಕ್ಕೆ ಬಂದಿತು. ರಾತ್ರಿ ಪಾಳಿಯಲ್ಲಿ ಒಬ್ಬರೇ ನರ್ಸ್, ಕಾರ್ಯನಿರತವಾಗುವ ವ್ಯವಸ್ಥೆ ಅಲ್ಲಿಯದು. ಅದೇ ಊರಿನವನಾದ ವಡಿವೇಲು ಎಂಬ ಪುರುಷ ನರ್ಸ್ ಅವನ ರಾತ್ರಿ ಪಾಳಿ ಸಮಯದಲ್ಲಿ ಪೂರ್ಣ ಸಮಯ ಆಸ್ಪತ್ರೆಯಲ್ಲಿರುವುದಿಲ್ಲ ಎಂಬುದರ ಗುಮಾನಿ ತಿಳಿಯಿತು. ರಾತ್ರಿ ನಾನು ವಾರ್ಡುಗಳಲ್ಲಿದ್ದಾಗ ನನ್ನ ಜೊತೆ ಬರುತ್ತಿದ್ದು, ನಂತರ ರಾತ್ರಿ ರೋಗಿಗಳಿಗೆ ಕೊಡಬೇಕಾದ ಇಂಜಕ್ಷನ್ ಮಾತ್ರೆಗಳನ್ನು ನೀಡಿ, ಆವರಣದಲ್ಲೇ ಇದ್ದ ತನ್ನ ನಿವಾಸದಲ್ಲಿ ಮಲಗುವುದಕ್ಕೆ ಹೋಗುತ್ತಿದ್ದ. ಬೆಳಗಿನಜಾವ ಐದು ಗಂಟೆ ಸಮಯಕ್ಕೆ ಬಂದು ರೋಗಿಗಳ ಕೇಸ್ ಷೀಟುಗಳಲ್ಲಿ ದಾಖಲೆ ಮಾಡಬೇಕಾದ ತಾಪಮಾನ, ನಾಡಿ, ಉಸಿರಾಟಗಳನ್ನು ಮನಬಂದಂತೆ ಬರೆದು, ಉಳಿದ ಔಷಧಗಳನ್ನು ನೀಡಿ, ರಾತ್ರಿ ಎಲ್ಲರ ಪರಿಸ್ಥಿತಿ ಸರಿಯಾಗಿತ್ತೆಂದು ವರದಿ ಬರೆದು ಬಿಡುತ್ತಿದ್ದ. ಆಸ್ಪತ್ರೆಯಲ್ಲಿ ಬಹುಪಾಲು ಕನ್ನಡಿಗ ವೈದ್ಯರಿದ್ದು, ಜಬರ್ದಸ್ತಿನ ನಡವಳಿಕೆಯ ಅವನನ್ನು ಎದುರು ಹಾಕಿಕೊಳ್ಳಲು ಇಷ್ಟಪಡುತ್ತಿರಲಿಲ್ಲ. ನನಗೆ ವಿಷಯ ತಿಳಿದ ನಂತರ ನರ್ಸ್‌ಗಳ ಮೇಲ್ವಿಚಾರಣೆಯ ಮೇಟ್ರನ್‌ಗೆ ಅವನ ಬಗ್ಗೆ ನಿಗಾ ವಹಿಸಬೇಕೆಂದು ಸೂಚಿಸಿದೆ. ಮೇಟ್ರನ್ ವಿಷಯವನ್ನು ಅವನ ಹತ್ತಿರ ಪ್ರಸ್ತಾಪಿಸಿದಾಗ ಅದೆಷ್ಟೋ ವರ್ಷಗಳಿಂದ ತಾನು ಹಾಗೇ ಮಾಡುತ್ತಿರುವುದಾಗಿಯೂ, ಎಂತೆಂಥಾ ಘಟಾನುಘಟಿ ಆರ್.ಎಂ.ಓ.ಗಳ ಕಾಲದಲ್ಲೂ ಅವನಿಗೆ ಏನು ಮಾಡಲಾಗಲಿಲ್ಲ; ಈ ಎಳಸು ಆರ್.ಎಂ.ಓ. ಅವರಿಂದ ಏನಾಗುತ್ತದೆಂದು ಉಡಾಫೆಯ ಉತ್ತರ ನೀಡಿದನಂತೆ.

ಮುಂದೆ ರಾತ್ರಿ ವೇಳೆಯಲ್ಲಿ ಅವನ ಚಲನವಲನಗಳ ಮೇಲೆ ನಿಗಾ ವಹಿಸಿದೆ. ರಾತ್ರಿ ಬೇರೆ ಬೇರೆ ಸಮಯಗಳಲ್ಲಿ ವಾರ್ಡುಗಳಿಗೆ ಭೇಟಿ ಮಾಡಿ ಅವನಿಲ್ಲದಿರುವುದನ್ನು ಖಚಿತ ಮಾಡಿಕೊಂಡೆ. ವಿಷಯವನ್ನು ಡಿ.ಎಂ.ಓ. ಅವರಿಗೆ ವರದಿ ಮಾಡಿದೆ. ಅವರು ತಮ್ಮ ಎಂದಿನ ಗತ್ತಿನಲ್ಲಿ ಮಾತನಾಡಿದರು; ಲಿಖಿತ ದೂರು ಕೊಟ್ಟರೆ ಅವರು ಕ್ರಮ ತೆಗೆದುಕೊಳ್ಳುವುದಾಗಿ ಭರವಸೆ ಇತ್ತರು. ಅದರಂತೆ ದೂರನ್ನು ಬರೆದೂ ಕೊಟ್ಟೆ. ಅವರು ಮೇಟ್ರನ್ ಮತ್ತು ನರ್ಸ್ ಇಬ್ಬರನ್ನೂ ಒಟ್ಟಿಗೇ ಕರೆಸಿ ವಿಚಾರಿಸಿದರಂತೆ. ನರ್ಸ್‌ಗಳಿಂದ ಹಲವು ಆಮಿಷಗಳಿಗೆ ಒಳಗಾಗುತ್ತಿದ್ದ ಮೇಟ್ರನ್ ಗೊಣಗುತ್ತಾ ತೇಲಿಸಿ ತಮ್ಮ ಅಭಿಪ್ರಾಯವಿತ್ತರಂತೆ. ಡಿ.ಎಂ.ಓ.

ಅವರೂ ಸಹಾ ಅನಾವಶ್ಯಕವಾಗಿ ಸಮಸ್ಯೆಯೊಂದನ್ನು ಮೈಮೇಲೆ ಹಾಕಿಕೊಳ್ಳುವುದಕ್ಕೆ ತಯಾರಿದ್ದಂತಿರಲಿಲ್ಲ. ಅನುಭವವಿಲ್ಲದ ಆರ್.ಎಂ.ಓ. ಇಂತಹ ಚಿಲ್ಲರೆ ವಿಷಯಗಳನ್ನು ಗಂಭೀರವಾಗಿ ಪರಿಗಣಿಸುತ್ತಾರೋ ಏನೋ ಎಂದು ಮೇಟ್ರನ್ ಹತ್ತಿರ ಹೇಳಿದರಂತೆ. ವಡಿವೇಲುವಿಗೆ ಮೌಖಿಕವಾಗಿ ಎಚ್ಚರಿಕೆಯ ಮಾತುಗಳನ್ನಾಡಿ ಕಳುಹಿಸಿದರಂತೆ.

ಮುಂದಿನ ಕೆಲವು ದಿನಗಳಲ್ಲಿ ರಾತ್ರಿ ನನ್ನ ಮನೆಯ ಮೇಲೆ ಕಲ್ಲುಗಳ ತೂರಾಟ ಆರಂಭವಾಯಿತು. ಒಂದು ರಾತ್ರಿ ಕಲ್ಲುಗಳು ಬೀಳುತ್ತಿರುವಾಗಲೇ ಹಿಂದುಗಡೆ ಬಾಗಿಲು ತೆರೆದು ಟಾರ್ಚ್ ಬೆಳಕು ಹಾಯಿಸಿದೆ. ಕಲ್ಲು ತೂರುತ್ತಿದ್ದವನು ಆಸ್ಪತ್ರೆಯ ಧೋಬಿಯ ಮಗ ಎಂಬುದು ತಿಳಿಯಿತು. ಮರುದಿನ ಪೋಲೀಸರಿಗೆ ದೂರಿತ್ತೆ. ಅವನನ್ನು ಪೋಲೀಸ್ ಠಾಣೆಗೆ ಕರೆಸಿ ವಿಚಾರಣೆ ನಡೆಸಿದರು. ನರ್ಸ್ ವಡಿವೇಲುವಿನ ಪ್ರಚೋದನೆಯಿಂದ ಅವನು ಈ ಕೃತ್ಯವನ್ನು ಮಾಡುತ್ತಿದ್ದನೆಂಬುದು ಬಯಲಾಯಿತು. ಆಸ್ಪತ್ರೆಯ ಬಟ್ಟೆ ಬರೆಗಳನ್ನು ಸರಿಯಾಗಿ ಶುಚಿಮಾಡಿ ಕಾಲಕ್ಕೆ ಸರಿಯಾಗಿ ಕೊಡುತ್ತಿರಲಿಲ್ಲವಾದ್ದರಿಂದ ಅವನ ಮೇಲೂ ಕ್ರಮ ಜರುಗಿಸಿದ್ದು, ಅವನೂ ಈ ಕೃತ್ಯದಲ್ಲಿ ಕೈ ಜೋಡಿಸಿದ್ದರಲ್ಲಿ ಆಶ್ಚರ್ಯವಿರಲಿಲ್ಲ. ವಿಷಯವನ್ನು ಮತ್ತೆ ಡಿ.ಎಂ.ಓ. ಅವರ ಗಮನಕ್ಕೆ ತಂದೆ. ಮೇಟ್ರನ್ ಮತ್ತು ವಡಿವೇಲುವನ್ನು ಕರೆಸಿ ಮತ್ತೊಂದು ಸಾರಿ ಬಾಯಿ ಮಾತಿನಲ್ಲೇ ತೀವ್ರ ಎಚ್ಚರಿಕೆ ನೀಡಿದರಂತೆ! ಅದು ಅವರ ಆಡಳಿತದ ಅನುಭವದ ವೈಖರಿ ಇರಬೇಕು.

## ಇಲಾಖಾ ನಿರ್ದೇಶಕರ ವಾರ್ಷಿಕ ಪರಿಶೀಲನೆಯ ಪರಿ!

ಮುಂದಿನ ಕೆಲವೇ ದಿನಗಳಲ್ಲಿ ನಮ್ಮ ಇಲಾಖಾ ನಿರ್ದೇಶಕರಾದ ಡಾ॥ ವಿ. ಆರ್. ನಾಯ್ಡು ಅವರು ಆಸ್ಪತ್ರೆಯ ವಾರ್ಷಿಕ ಪರಿಶೀಲನೆಗೆ ಬರುವ ದಿನ ನಿಗದಿಯಾಯಿತು. ಕಟ್ಟುನಿಟ್ಟಾದ ಆಡಳಿತ ನಿರ್ವಹಣೆಗೆ ಹೆಸರಾದ ನಮ್ಮ ಡಿ.ಎಂ.ಓ. ಅವರು ಆಸ್ಪತ್ರೆಯ ಒಳಭಾಗಗಳನ್ನೇ ಅಲ್ಲದೇ ಹೊರವಲಯವನ್ನೂ ಸಹ ತಾವೇ ಮುತುವರ್ಜಿವಹಿಸಿ ಶುಚಿಗೊಳಿಸಿದರು. ಶಿಕಾರಿಪುರದಲ್ಲಿ ಡಿ.ಎಂ.ಓ. ಡಾ॥ ಶಾಮಣ್ಣನವರು ಎರಡು ಸಾರಿ ವಾರ್ಷಿಕ ಪರಿಶೀಲನೆ ನಡೆಸಿದಾಗಿನ ಅನುಭವದಿಂದ ನಾನೂ ಸಹ ಹಲವು ಬಗೆಯ ಏರ್ಪಾಡುಗಳನ್ನು ಮಾಡಿಸಿದ್ದೆ. ನಿಗದಿತ ದಿನ ಡಾ॥ ನಾಯ್ಡು ಬಂದರು. ಅದೊಂದು ತುಂಬಾ ಶಾಸ್ತ್ರೋಕ್ತವಾದ ವಾರ್ಷಿಕ ಪರಿಶೀಲನೆಯಂತಾಯಿತು.

ಮೊದಲಿಗೆ ಅವರು ಆಸ್ಪತ್ರೆ ಕಟ್ಟಡದ ವಿವಿಧ ಭಾಗಗಳು ನೆಲೆಯಾಗಿರುವ ವಿನ್ಯಾಸವನ್ನು ಅಂದಾಜು ಮಾಡಿಕೊಂಡರು. ಅನಂತರ ಅವುಗಳಲ್ಲಿ ಯಾವುದೇ ವಿಭಾಗ ಅವರ ಕಣ್ತಪ್ಪದಂತೆ ಯೋಜಿಸಿಕೊಂಡು, ಒಂದು ಕಡೆಯಿಂದ ಇನ್ನೊಂದು ಕಡೆಗೆ ನಡೆದಾಡಿದರು. ಕೆಲಕಡೆ ಧೂಳು ಕುಳಿತಿರುವುದನ್ನು ಕೈ ಬೆರಳುಗಳನ್ನಾಡಿಸಿ ನಮ್ಮ ಗಮನಕ್ಕೆ ತಂದರು. ಹೊರ ರೋಗಿಗಳ ವಿಭಾಗದಲ್ಲಿ ರೋಗಿಗಳಿಗೆ ಬರೆದುಕೊಡುತ್ತಿದ್ದ ಸಣ್ಣಪುಟ್ಟ ಚೀಟಿಗಳೂ ಅವರ ಕಣ್ಣಿಗೆ ಬಿದ್ದವು. ಅಂತಹ ಚೀಟಿಗಳನ್ನು ಬಿಟ್ಟು ಇಲಾಖೆಯವರು ಒದಗಿಸುವ ಚೀಟಿಗಳನ್ನು ತರಿಸಿ ಕೊಡಬೇಕೆಂದರು; ಅವೇನಾದರೂ ಆರೋಗ್ಯ ಮಂತ್ರಿಗಳ ಕಣ್ಣಿಗೆ ಬಿದ್ದರೆ ಕೆಂಡಾಮಂಡಲವಾಗುತ್ತಾರೆಂದು ಎಚ್ಚರದ ಮಾತುಗಳನ್ನಾಡಿದರು. ವಿವಿಧ ವಾರ್ಡುಗಳು, ಔಷಧ ಉಗ್ರಾಣ, ಅಡಿಗೆಮನೆ, ಆಸ್ಪತ್ರೆ ಕಚೇರಿ ಮುಂತಾದ ವಿಭಾಗಗಳನ್ನೆಲ್ಲಾ ಆಮೂಲಾಗ್ರವಾಗಿ ಪರಿಶೀಲಿಸಿದರು. ಕಚೇರಿಗೆ ಹೋದಾಗ ತಮ್ಮ ಕೋಟಿನ ಒಳ ಜೇಬಿನಿಂದ ಕಾಗದಗಳ ತೆಕ್ಕೆಯೊಂದನ್ನು ಹೊರ

ತೆಗೆದು ಬೆರಳಚ್ಚುಗಾರನ ಮುಂದೆ ಹಿಡಿದರು; ಅವುಗಳನ್ನೆಲ್ಲಾ ಬೆರಳಚ್ಚು ಮಾಡಿದವನು ಅವನೇ ಇರಬೇಕಲ್ಲವೇ, ಎಂದು ಕೈಗಿತ್ತರು. ಅವನು ಅಪರಾಧೀ ಮನೋಭಾವದಿಂದ ತಲೆ ಕೆಳಗು ಮಾಡಿದ; ಮೈ ಬೆವರಿ ಕೈ ನಡುಗಲಾರಂಭಿಸಿದವು. ಅಲ್ಲಿಂದ ಡಿ.ಎಂ.ಓ. ಅವರ ಕೊಠಡಿಗೆ ಬಂದರು. ಮೇಟ್ರನ್ ಹಾಗೂ ನನ್ನನ್ನೂ ಸಹ ಅಲ್ಲಿಗೆ ಕರೆಸಿದರು. ಆಸ್ಪತ್ರೆಯ ಆಡಳಿತ ಮತ್ತು ನ್ಯೂನತೆಗಳ ಬಗೆಗೆ ನಮ್ಮೊಡನೆ ಚರ್ಚಿಸಿದರು. ಆಸ್ಪತ್ರೆಯ ಬಗೆಗೆ ಅವರಿಗೆ ಆಗಾಗ್ಗೆ ಬರುತ್ತಿರುವ ಮೂಗರ್ಜಿಗಳ ವಿಷಯ ಪ್ರಸ್ತಾಪಿಸಿ, ಅವುಗಳಲ್ಲಿ ನಿಜಾಂಶಗಳೇನಾದರೂ ಇರಬಹುದೇ ಎಂದು ವಿಚಾರಿಸಿದರು. ಅವೆಲ್ಲಾ ಸುಳ್ಳಾಗಿರುವುದರ ಬಗೆಗೆ ಮನದಟ್ಟು ಮಾಡಿಕೊಟ್ಟೆವು. ಅನಂತರ ಕೊಠಡಿಯಿಂದ ಹೊರಬಂದು ಅಲ್ಲಿಗೆ ಆಸ್ಪತ್ರೆಯ ಸಿಬ್ಬಂದಿಯವರೆಲ್ಲಾ ಬರುವಂತೆ ಆದೇಶ ನೀಡಿದರು. ಮತ್ತು ಜೇಬಿನಿಂದ ಪತ್ರಗಳ ಕಂತೆಯನ್ನು ಹೊರತೆಗೆದು ತೋರಿಸಿದರು. "ನಿಮ್ಮ ಆಸ್ಪತ್ರೆಯಿಂದ ಪ್ರತಿದಿನ ನನಗೆ ಅನಾಮಧೇಯ ಪತ್ರಗಳು ಬರುತ್ತಿವೆ. ಅವುಗಳ ಬಗೆಗೆ ವಿಚಾರಣೆ ಮಾಡಿದ್ದೇನೆ. ಅವೆಲ್ಲಾ ಸುಳ್ಳು ಎಂಬುದು ನನಗೆ ಮನದಟ್ಟಾಗಿದೆ. ನಾಳೆಯಿಂದ ಇಂತಹ ಪತ್ರಗಳು ಬರುವುದು ಮುಂದುವರಿದರೆ ನೀವೆಲ್ಲಾ ಗುಲ್ಬರ್ಗಾ, ರಾಯಚೂರು, ಬೀದರ್‌ಗಳಲ್ಲಿರುತ್ತೀರಿ, ಹುಷಾರ್!" ಎಂದು ಹೇಳಿ ಕೊಠಡಿಯೊಳಗೆ ಹೋದರು.

ಮುಂದಿನ ದಿನಗಳಲ್ಲಿ ಮೂಗರ್ಜಿಗಳು ನಿಂತು ಹೋದವು. ನರ್ಸ್ ವಡಿವೇಲು ಇನ್ನೊಂದು ವಾರದಲ್ಲೇ ಕೋಲಾರದ ಆಸ್ಪತ್ರೆಯಲ್ಲಿ ಕೆಲಸಕ್ಕೆ ಹಾಜರಾಗುವಂತಾಯಿತು!

## ಹಾಲುಪರೀಕ್ಷೆಯಲ್ಲಿ ಕೈವಾಡ!

ಆಸ್ಪತ್ರೆಗೆ ಸರಬರಾಜಾಗುತ್ತಿದ್ದ ಹಾಲು ಮತ್ತಿತರ ಆಹಾರ ಸಾಮಗ್ರಿಗಳ ಗುಣಮಟ್ಟದ ಬಗೆಗೆ ಮೊದಲಿನಿಂದಲೂ ಅಸಮಾಧಾನವಿರುತ್ತಿತ್ತು. ಗುತ್ತಿಗೆದಾರರು ಹಸುಗಳನ್ನು ಆಸ್ಪತ್ರೆಯ ಆವರಣದಲ್ಲಿರುವ ಷೆಡ್‌ಗೇ ಕರೆತಂದು ಆಸ್ಪತ್ರೆಯ ಸಿಬ್ಬಂದಿಯೊಬ್ಬರ ಸಮಕ್ಷಮ ಹಾಲನ್ನು ಕರೆದುಕೊಡುತ್ತಿದ್ದರು. ವಾರದಲ್ಲಿ ಕೆಲವು ಸಾರಿ ನಾನೂ ಸಹ ಷೆಡ್‌ನಲ್ಲಿ ಹಾಜರಿದ್ದು ಮೇಲ್ವಿಚಾರಣೆ ನಡೆಸುತ್ತಿದ್ದ. ಆದರೆ ವಾರ್ಡುಗಳಲ್ಲಿ ವಿತರಿಸುವ ಹಾಲಿನ ಹಾಗೂ ಷೆಡ್‌ನಲ್ಲಿ ಕರೆದಾಗಿನ ಹಾಲಿನ ಗುಣಮಟ್ಟಗಳಲ್ಲಿ ವ್ಯತ್ಯಾಸಗಳಿರುವಂತೆ ಭಾಸವಾಗುತ್ತಿತ್ತು. ಕೆಲಸಾರಿ ವಾರ್ಡುಗಳಲ್ಲಿ ವಿತರಿಸುತ್ತಿದ್ದ ಹಾಲಿನ ಮಾದರಿಯನ್ನು ಬೆಂಗಳೂರಿನ ಕೆಮಿಕಲ್ ಪರೀಕ್ಷಾ ಪ್ರಯೋಗಾಲಕ್ಕೆ ಕಳುಹಿಸಿದ್ದೆ. ಪ್ರತಿಸಾರಿಯೂ "ಎಲ್ಲಾ ಚೆನ್ನಾಗಿವೆ, ಕಲಬೆರಕೆಯಾಗಿಲ್ಲ" ಎಂಬ ವರದಿಗಳೇ ಬರುತ್ತಿದ್ದವು. ಅದರಲ್ಲಿ ಗುತ್ತಿಗೆದಾರರ ಕೈವಾಡ ಇರಬಹುದೆಂಬ ಶಂಕೆ ನನ್ನನ್ನು ಬಾಧಿಸತೊಡಗಿತು.

ಒಂದು ಸಾರಿ ಷೆಡ್‌ನಲ್ಲಿ ಹಾಲು ಕರೆದಾಕ್ಷಣ ಸ್ವಲ್ಪ ಹಾಲನ್ನು ಬಾಟಲಿಯಲ್ಲಿ ಹಾಕಿ ಸೀಲ್ ಮಾಡಿಸಿದೆ. ಅದೇ ದಿನ ಮಧ್ಯಾಹ್ನ ವಾರ್ಡುಗಳಲ್ಲಿ ಹಾಲು ವಿತರಣೆ ನಡೆಯುತ್ತಿದ್ದಾಗ ಮತ್ತೆ ಸ್ವಲ್ಪ ಹಾಲಿನ ಮಾದರಿಯನ್ನು ಇನ್ನೊಂದು ಬಾಟಲಿಗೆ ಹಾಕಿ ಸೀಲ್ ಮಾಡಿಸಿದೆ. ಎರಡನ್ನೂ ಎಂದಿನಂತೆ ಬೆಂಗಳೂರಿಗೆ ಕಳುಹಿಸಿ ಕೊಟ್ಟೆ. ಕೆಲ ದಿನಗಳ ನಂತರ ಬಂದ ಫಲಿತಾಂಶ ನನ್ನನ್ನು ದಿಗ್ಭ್ರಮೆಗೊಳಿಸಿತು. "ಷೆಡ್‌ನಲ್ಲಿ ಕರೆದಾಗ ಸಂಗ್ರಹಿಸಿದ ಹಾಲು ಕಲಬೆರಕೆಯಾಗಿದೆ; ವಾರ್ಡ್‌ನಲ್ಲಿ ಸಂಗ್ರಹಿಸಿದ ಹಾಲು ಪರಿಶುದ್ಧವಾಗಿದೆ" ಎಂತಹ ಪವಾಡ! ಗುತ್ತಿಗೆದಾರರ ಕಾಣದ ಕೈ ಕೆಲಸ ಮಾಡಿತ್ತು. ನನ್ನ ಅನುಮಾನ ಗಟ್ಟಿಯಾಯಿತು.

ಅಷ್ಟಾಗಿ ನಾನು ಸುಮ್ಮನಿರಲಿಲ್ಲ; ಮುಂದೊಂದು ಸಾರಿ ಷೆಡ್ ಮತ್ತು ವಾರ್ಡುಗಳಲ್ಲಿ ಹಾಲಿನ ಮಾದರಿಗಳನ್ನು ಎರಡೆರಡು ಬಾಟಲುಗಳಲ್ಲಿ ಸಂಗ್ರಹಿಸಿ ಸೀಲು ಮಾಡಿಸಿದೆ. ಒಂದು ಜೊತೆ ಬಾಟಲುಗಳನ್ನು ಎಂದಿನಂತೆ ಬೆಂಗಳೂರಿಗೆ ಕಳುಹಿಸಿದೆ; ಇನ್ನೊಂದು ಜೊತೆ ಬಾಟಲುಗಳನ್ನು ಮೈಸೂರಿನ ಕೇಂದ್ರ ಆಹಾರ ಸಂಶೋಧನಾಲಯ (C.F.T.R.I.)ಕ್ಕೆ ಕಳುಹಿಸಿದೆ. ಬೆಂಗಳೂರಿನಿಂದ ಬಂದ ವರದಿ ಎಂದಿನಂತೆಯೇ ಇತ್ತು. ಮೈಸೂರು ಸಂಶೋಧನಾಲಯ ದವರು ಅಂತಹ ಪ್ರಕರಣಗಳಲ್ಲಿ ಕಾನೂನಿನ ಸಮಸ್ಯೆಗಳಿರಬಹುದಾದ್ದರಿಂದ ಆ ರೀತಿಯ ಪರೀಕ್ಷೆಗಳನ್ನು ಅಲ್ಲಿ ಕೈಗೊಳ್ಳುವುದಿಲ್ಲವೆಂದು ಉತ್ತರಿಸಿದರು. ಮುಂದೇನು ಮಾಡಲಾರದ ಸೋಲೊಪ್ಪಿಕೊಳ್ಳಬೇಕಾಯಿತು.

## ಆರೋಗ್ಯ ಮಂತ್ರಿಗಳ ಆಸ್ಪತ್ರೆ ಪರಿಶೀಲನೆ

ಆಗಿನ ಆರೋಗ್ಯ ಮಂತ್ರಿಗಳಾದ ಡಾ॥ ಕೆ. ಕೆ. ಹೆಗ್ಗಡೆಯವರ ಪ್ರಸ್ತಾಪ ಈಗಾಗಲೇ ಬಂದಿದೆ. ದಕ್ಷಿಣ ಕನ್ನಡ ಜಿಲ್ಲೆಯವರಾದ ಡಾ॥ ಹೆಗ್ಗಡೆಯವರು ಸ್ವತಃ ವೈದ್ಯ ಪದವೀಧರರು; ಅಜಾನುಬಾಹು ವ್ಯಕ್ತಿತ್ವ ಹಾಗೂ ಒಳ್ಳೆಯ ಆಡಳಿತಗಾರರೆಂದೂ ಹೆಸರು ಗಳಿಸಿದವರು. ಅವರೊಂದು ಸಾರಿ ನಮ್ಮ ಆಸ್ಪತ್ರೆಗೆ ಭೇಟಿ ನೀಡುವ ಕಾರ್ಯಕ್ರಮ ನಿಗದಿಯಾಯಿತು. ಮತ್ತೊಮ್ಮೆ ನಮ್ಮ ತಯಾರಿಗಳಾದವು.

ಮಧ್ಯಾಹ್ನ ಮೂರು ಗಂಟೆ ಸಮಯಕ್ಕೆ ಮಂತ್ರಿಗಳು ಆಸ್ಪತ್ರೆಗೆ ಬಂದು ಕಾರಿನಿಂದಿಳಿದರು. ಅವರಿಗೆ ಹಾಕುವುದಕ್ಕಾಗಿಯೇ ಅವರಷ್ಟೆತ್ತರದ ಹೂಹಾರವನ್ನು ಡಿ.ಎಂ.ಓ. ಅವರು ಏರ್ಪಾಡು ಮಾಡಿಸಿದ್ದರು. (ಆಸ್ಪತ್ರೆಯ ವೈದ್ಯರಲ್ಲಿ ತಲಾ ಐದು ರೂಪಾಯಿ ವಂತಿಗೆ ನೀಡಿ ವಿಶೇಷವಾಗಿ ತಯಾರಿಸಿದ್ದು!) ಮಂತ್ರಿಗಳು ಕಾರಿನಿಂದಿಳಿಯುತ್ತಲೇ ಕುಳ್ಳಗಿದ್ದ ಡಿ.ಎಂ.ಓ. ನೆಗೆದು ಆ ಬೃಹತ್ ಹಾರವನ್ನು ಅವರ ಕೊರಳಿಗೆ ಹಾಕುವ ಪ್ರಯತ್ನ ಮಾಡುವುದರಲ್ಲಿದ್ದರು. ಮಂತ್ರಿಗಳ ಮುಖ ಥಟ್ಟನೆ ಒಂದು ಪಕ್ಕಕ್ಕೆ ತಿರುಗಿತು. ಮುಖ ಕೆಂಪೇರಿದಂತಾಯಿತು: "ಅದಕ್ಕಾಗಿ (ಹಾರ ಸ್ವೀಕರಿಸುವ ಸಲುವಾಗಿ) ನಾನಿಲ್ಲಿಗೆ ಬಂದಿಲ್ಲ; ಆಸ್ಪತ್ರೆ ಪರಿಶೀಲನೆಗಾಗಿ ಬಂದಿರೋದು, ನಡೆಯಿರಿ ಮುಂದೆ....."

ಡಿ. ಎಂ. ಓ. ಅವರ ಮುಖ ಬಿಳಿಚಿತು; ಮೈ ಬೆವರಿತು; ಕಂಗಾಲಾದವರಂತೆ ಕಂಡರು; ನಾವೆಲ್ಲರೂ ಸಹ ಗಾಬರಿಯಾದೆವು. ಮಂತ್ರಿಗಳ ಜೊತೆ ಜಿಲ್ಲಾಧಿಕಾರಿಗಳಾದಿಯಾಗಿ ಅನೇಕ ಸರ್ಕಾರಿ ಅಧಿಕಾರಿಗಳು, ಸಾರ್ವಜನಿಕರ ದಂಡು ಆಸ್ಪತ್ರೆಯತ್ತ ಸಾಗಿತು. ಮೊದಲಿಗೆ ಪುರುಷರ ಹೊರ ರೋಗಿಗಳ ವಿಭಾಗದಲ್ಲಿ ಪಾದಾರ್ಪಣೆಯಾಯಿತು. ಅಲ್ಲಿ ಮೇಜಿನ ಮೇಲಿದ್ದ ಹೊರ ರೋಗಿಗಳಿಗೆ ಬರೆದು ಕೊಡುವ ಚೀಟಿಗಳತ್ತ ಅವರ ಮೊದಲ ದೃಷ್ಟಿ ಹರಿಯಿತು: "ಇವೆಯೋ ನೀವು ಹೊರ ರೋಗಿಗಳಿಗೆ ಬರೆದುಕೊಡುವ ಓ. ಪಿ. ಚೀಟಿಗಳು? ನಿಮಗೆ ನಾಚಿಕೆಯಾಗುವುದಿಲ್ಲವೇ?"

"ನಿಗದಿತ ನಮೂನೆಯ ಚೀಟಿಗಳು ಇಲಾಖೆಯಿಂದ ಸರಬರಾಜಾಗುತ್ತಿಲ್ಲ, ಸಾರ್, ಹಲವು ಸಾರಿ ಆ ಬಗೆಗೆ ಬರೆದು ಕೊಂಡಿದ್ದರೂ ಅವುಗಳನ್ನು ಕಳುಹಿಸುತ್ತಿಲ್ಲ."

"ಸುಳ್ಳು ಹೇಳುವುದಕ್ಕಾದರೂ ಚೆನ್ನಾಗಿ ಬರುತ್ತಲ್ಲ ನಿಮಗೆ. ಆ ಬಗೆಗೆ ಮಾಡಿದ ಪತ್ರ ವ್ಯವಹಾರದ ಕಡತ ತರಿಸಿ, ನೋಡೋಣ."

ಅಷ್ಟರಲ್ಲೇ ಜಿಲ್ಲಾಧಿಕಾರಿಗಳು ದನಿಗೂಡಿಸಿದರು". ಡಿ.ಎಂ.ಓ. ಅವರು ಹೇಳುವುದರಲ್ಲಿ ನಿಜಾಂಶ ಇದೆ ಸರ್. ಆ ದಿಸೆಯಲ್ಲಿ ನಮ್ಮ ಅನುಭವವೂ ಅದೇ" ಎಂದರು.

"ಹಾಗೇನು?" ಎಂದು ಆಪ್ತ ಕಾರ್ಯದರ್ಶಿಯನ್ನು ಕರೆದು ಅದನ್ನು ಗುರುತು ಹಾಕಿಕೊಳ್ಳುವಂತೆ ಆದೇಶ ನೀಡಿದರು. ಅಷ್ಟರಲ್ಲೇ ಸಂಬಂಧಿಸಿದ ಕಡತವನ್ನು ಹಾಜರು ಪಡಿಸಿದೆವು. ಅದರ ಮೇಲೆ ಕಣ್ಣಾಡಿಸಿ ಸುಮ್ಮನಾದರು.

ಮುಂದೆ ಒಳರೋಗಿಗಳ ವಾರ್ಡ್‌ಗಳತ್ತ 'ಮೆರವಣಿಗೆ' ಮುಂದುವರಿಯಿತು. ಅಲ್ಲೇ ಪಡಸಾಲೆಯಲ್ಲಿ ನಾಲ್ಕು ಗಾಲಿ ಕುರ್ಚಿಗಳನ್ನು ಸಾಲಾಗಿ ನಿಲ್ಲಿಸಿದ್ದು ಅವರ ಗಮನ ಸೆಳೆಯಿತು.

"ಅದೇನ್ರಿ ಈ ಚಿಕ್ಕ ಆಸ್ಪತ್ರೆಗೆ ನಾಲ್ಕು ಗಾಲಿ ಕುರ್ಚಿಗಳು?"

"ನನಗಿಂತ ಮೊದಲಿದ್ದವರು ದಾನಿಗಳಿಂದ ಧರ್ಮಾರ್ಥವಾಗಿ ಪಡೆದವಂತೆ ಸರ್"

"ಅವಶ್ಯಕತೆ ಇಲ್ಲದಿದ್ದಾಗ ಅವುಗಳನ್ನೇಕೆ ಸ್ವೀಕರಿಸಬೇಕಿತ್ತು" ಬೇರೆ ಏನನ್ನಾದರೂ ಪಡೆಯಬಹುದಿತ್ತಲ್ಲ?"

ಆಸ್ಪತ್ರೆಯ ಗೋಡೆಗಳ ಹಲವು ಕಡೆ ದೊಡ್ಡ ದೊಡ್ಡ ಫಲಕಗಳಿರುವುದು ಅವರ ಮುಂದಿನ ಕುತೂಹಲದ ಕಾರಣವಾಯಿತು. ಅವುಗಳಲ್ಲಿ ಇಂಗ್ಲೀಷ್, ಕನ್ನಡ ಮತ್ತು ತಮಿಳು ಭಾಷೆಗಳಲ್ಲಿ ಆಸ್ಪತ್ರೆಯ ಹೆಸರು, ಅದು ಕಾರ್ಯ ನಿರ್ವಹಿಸುವ ಸಮಯ ಮುಂತಾದ ವಿವರಗಳನ್ನು ಬರೆಸಲಾಗಿತ್ತು. ಅದರಲ್ಲಿ ಆಸ್ಪತ್ರೆ ಮಧ್ಯಾಹ್ನ ಒಂದು ಗಂಟೆಯ ತನಕ ಮಾತ್ರ ಕಾರ್ಯ ನಿರ್ವಹಿಸುತ್ತದೆಂದು ಬರೆದದ್ದು ಮಂತ್ರಿಗಳ ವಿಶೇಷ ಗಮನ ಸೆಳೆದಿರಬೇಕು.

"ಅದೇಕೆ ನಿಮ್ಮ ಆಸ್ಪತ್ರೆ ಕೇವಲ ಮಧ್ಯಾಹ್ನ ಒಂದು ಗಂಟೆಯವರೆಗೆ ಮಾತ್ರ ಕಾರ್ಯ ನಿರ್ವಹಿಸುತ್ತದೆ?" ಎಂದು ಏರಿದ ದನಿಯಲ್ಲೇ ಡಿ.ಎಂ.ಓ. ಅವರತ್ತ ತಿರುಗಿ ಕೇಳಿದರು.

ಕೆಲವು ತಿಂಗಳ ಹಿಂದೆ ಇಲಾಖೆಯವರಿಂದ ಸಿಟಿಗಳಲ್ಲಿರುವ ಆಸ್ಪತ್ರೆಗಳು ಮಧ್ಯಾಹ್ನ ಒಂದು ಗಂಟೆಯವರೆಗೆ ಮಾತ್ರ ಕಾರ್ಯ ನಿರ್ವಹಿಸತಕ್ಕದೆಂದು ಸುತ್ತೋಲೆ ಬಂದಿತ್ತು. ಕೆ.ಜಿ.ಎಫ್. ವಲಯವು ಸಹ ಒಂದು ಸಿಟಿಯೆಂದು ಪರಿಗಣಿತವಾಗಿದ್ದರಿಂದ ಹಾಗೇ ಮಾಡುತ್ತಿರುವುದೆಂದು ಉತ್ತರಿಸಿದರು. ಮಂತ್ರಿಗಳು ವ್ಯಂಗ್ಯವಾಗಿ "ಆ ಸುತ್ತೋಲೆ ಮೆಡಿಕಲ್ ಕಾಲೇಜುಗಳಿಗೆ ಹೊಂದಿಕೊಂಡಿರುವ ಬೋಧನಾ ಆಸ್ಪತ್ರೆಗಳಿಗೆ ಮಾತ್ರಾರೀ, ಇಲ್ಲಿ ಅದಾವ ಮೆಡಿಕಲ್ ಕಾಲೇಜ್ ಇದೇರೀ?"

"ಇಲಾಖೆಯವರಿಂದ ಆ ಬಗೆಗೂ ವಿವರಣೆ ಕೇಳಿ ಪತ್ರ ಬರೆದಿದ್ದೆವು ಸರ್. ಆದರೆ ಅಲ್ಲಿಂದ ಸರಿಯಾದ ಉತ್ತರ ಬರಲಿಲ್ಲ."

"ನೀವು ನಿಜವಾಗಿಯೂ ಇಲಾಖೆಯವರ ವಿವರಣೆ ಕೇಳಿ ಪತ್ರ ಬರೆದಿದ್ದೀರಾ? ಹಾಗಾದರೆ ಅಲ್ಲಿಂದ ಬಂದ ಉತ್ತರದ ಪ್ರತಿಯನ್ನು ತೋರಿಸ್ತೀರಾ?"

ಆಸ್ಪತ್ರೆಯ ಕಚೇರಿಗೆ ತತ್‌ಕ್ಷಣ ಬುಲಾವ್ ಹೋಯಿತು. ಕೆಲವೇ ಕ್ಷಣಗಳಲ್ಲಿ ಸಂಬಂಧಿಸಿದ ಕಡತ ಹಾಜರಾಯಿತು. ಮಂತ್ರಿಗಳು ಎಲ್ಲಾರಿಗೂ ಕೇಳಿಸುವಂತೆ ಪತ್ರ ಓದತೊಡಗಿದರು:

"ಸರ್ಕಾರದ ಆದೇಶ ಸಂ...... ದಿನಾಂಕ........... ದಲ್ಲಿ ನಮೂದಿಸಿರುವುದನ್ನು ತತ್ವಶಃ ಜಾರಿಗೆ ತರತಕ್ಕದ್ದು" ಓದಿ ಹೇಳಿದರು. ಅವರಿಗೆ ಸಿಟ್ಟು ನೆತ್ತಿಗೇರಿರಬೇಕು. "ಎಂಥಾ ಪ್ರಾರಬ್ಧ ಕರ್ಮ; ಅಲ್ಲಿಯೂ ಅಂತಹವರೇ ತುಂಬಿ ಹೋಗಿದ್ದಾರಲ್ಲ!" ಎಂದು ಉದ್ಗಾರವೆತ್ತಿದರು. ಆಪ್ತ ಕಾರ್ಯದರ್ಶಿಯನ್ನು ಉದ್ದೇಶಿಸಿ ಬೆಂಗಳೂರಿಗೆ ಹಿಂದಿರುಗಿದಾಕ್ಷಣ ಹಿಂದಿನ ಆದೇಶವನ್ನು

ತಿದ್ದುಪಡಿ ಮಾಡಿ ಮೆಡಿಕಲ್ ಕಾಲೇಜುಗಳಿಲ್ಲದ ಊರುಗಳಿಗೆ ಈ ನಿಯಮ ಅನ್ವಯಿಸುವುದಿಲ್ಲ ಎಂದು ಹೊಸದೊಂದು ಸುತ್ತೋಲೆ ಹೊರಡಿಸುವ ಏರ್ಪಾಡು ಮಾಡುವಂತೆ ಸೂಚಿಸಿದರು. ಡಿ.ಎಂ.ಓ. ಕಡೆ ತಿರುಗಿ ಮಾರನೇ ದಿನದಿಂದಲೇ ನಮ್ಮ ಆಸ್ಪತ್ರೆ ಮಧ್ಯಾಹ್ನದ ಪಾಳಿಯಲ್ಲಿ ಕಾರ್ಯ ನಿರ್ವಹಿಸತಕ್ಕದೆಂದು ಆದೇಶ ನೀಡಿದರು.

ವಿವಿಧ ವಾರ್ಡುಗಳು, ಶೌಚಾಲಯ ಮುಂತಾದ ಕಡೆಗಳಿಗೂ ಭೇಟಿ ನೀಡಿದರು. ಅವೆಲ್ಲಾ ಶುಚಿಯಾಗಿದ್ದು ಯಾವುದೇ ಟೀಕೆ ಮಾಡಲಿಲ್ಲ.

ಮುಂದಿನ ಭೇಟಿ ಔಷಧಗಳ ಉಗ್ರಾಣಕ್ಕೆ "ಮೆಡಿಕಲ್ ಉಗ್ರಾಣ ಯಾರ ಚಾರ್ಜ್‌ನಲ್ಲಿದೆ?"

"ನಾನು ಸರ್, ಆರ್. ಎಂ. ಓ." ಎಂದು ಮುಂದೆ ಬಂದೆ.

"ನಿಮ್ಮ ಉಗ್ರಾಣದಲ್ಲಿ ೧೮ ತಿಂಗಳ ಅವಶ್ಯಕತೆಗಳಿಗಿಂತ ಹೆಚ್ಚು ಔಷಧ ಸಾಮಾಗ್ರಿಗಳ ದಾಸ್ತಾನು ಇಲ್ಲವೆ? ಹಾಗೆ ಹೆಚ್ಚಾಗಿದ್ದರೆ ಹೇಗೆ ನಡೆದುಕೊಳ್ಳಬೇಕೆಂಬುದರ ಬಗೆಗೆ ಕಳುಹಿಸಿದ ಸುತ್ತೋಲೆಯಂತೆ ಕ್ರಮ ತೆಗೆದುಕೊಂಡಿದ್ದೀರಾ?"

"ಹೌದು ಸರ್, ಅದರಂತೆ ಹೆಚ್ಚಾಗಿದ್ದ ರಖಂಗಳನ್ನು ಬೇರೆ ಆಸ್ಪತ್ರೆಗಳಿಗೆ ಕಳುಹಿಸಲಾಗಿದೆ"

ಹೀಗೆ ಮಾತುಕತೆ ನಡೆಯುತ್ತಿರುವಾಗಲೇ ಔಷಧದ ಬಾಟಲುಗಳನ್ನು ಕೂಡಿಟ್ಟಿರುವ ರ್‍ಯಾಕ್(Rack)ಗಳತ್ತ ಕಣ್ಣು ಹಾಯಿಸುತ್ತಲೇ ಇದ್ದರು. ಒಂದು ಕ್ಷಣ ನನ್ನ ಕಡೆ ತಿರುಗಿ, ಅಲ್ಲಿ ನೋಡಿ, ಆ ರ್‍ಯಾಕ್‌ನಲ್ಲಿ ಬೆನಡಿಕ್ಟ್ ಸಲ್ಯೂಷನ್‌ನ ಬಾಟಲುಗಳು ಎಷ್ಟಿವೆ, ಎಣಿಸಿ ಹೇಳಿ (ಮೂತ್ರದಲ್ಲಿ ಸಕ್ಕರೆ ಪ್ರಮಾಣ ಕಂಡು ಹಿಡಿಯಲು ಬಳಸುವ ದ್ರಾವಣ). ಲೆಕ್ಕ ಹಾಕಿ ಹೇಳಿದೆ.

"ಮೂವತ್ತಾರು ಬಾಟಲುಗಳಿವೆ ಸರ್"

"ಈಗ ದಾಸ್ತಾನು ಪುಸ್ತಕ ನೋಡಿ ಹೇಳಿ; ನಿಮ್ಮ ಆಸ್ಪತ್ರೆಯಲ್ಲಿ ಅಂತಹ ಎಷ್ಟು ಬಾಟಲುಗಳು ಒಂದು ತಿಂಗಳಲ್ಲಿ ಖರ್ಚಾಗುತ್ತವೆ?"

ಪುಸ್ತಕ ತೆಗೆದು ನೋಡಿದೆ "ಕೇವಲ ಒಂದು ಬಾಟಲು ಸರ್" ಎಂದು ತಡವರಿಸುತ್ತಾ ಹೇಳಿದೆ.

"ಮತ್ತೆ ಈಗ ತಾನೇ ಹೇಳಿದಿರಲ್ಲಾ, ಹೆಚ್ಚಾಗಿದ್ದ ರಖಂಗಳನ್ನು ಬೇರೆ ಆಸ್ಪತ್ರೆಗಳಿಗೆ ಕಳುಹಿಸಲಾಗಿದೆ ಅಂತ? ಅಂತಹ ಪಟ್ಟಿಯನ್ನು ತಯಾರಿಸಿದ್ದು ನಿಜವೋ ಇಲ್ಲ ಸುಳ್ಳು ಹೇಳುತ್ತಿರುವಿರೋ? ಎಲ್ಲಿ ತೆಗೆದು ತೋರಿಸಿ" ಪಟ್ಟಿಯನ್ನು ಹುಡುಕಿ ತೆಗೆದು ಅವರ ಕೈಗಿತ್ತೆ. ಉದ್ದನೆಯ ಪಟ್ಟಿಯನ್ನು ಮೇಲಿಂದ ಕೆಳಗಿನವರೆಗೂ ವಿವರವಾಗಿ ನೋಡಿದರು. "ಇದರಲ್ಲಿ ಬೆನಡಿಕ್ಟ್ ಸಲ್ಯೂಷನ್‌ನ ಹೆಸರೇ ಇಲ್ಲವಲ್ರೀ?"

"ಸಾರಿ ಸರ್, ದಾಸ್ತಾನು ಪುಸ್ತಕವನ್ನು ಪರಿಶೀಲಿಸಿ ಪಟ್ಟಿ ತಯಾರಿಸುವಾಗ ಕಣ್ತಪ್ಪಿನಿಂದ ಅದು ಬಿಟ್ಟು ಹೋಗಿರಬೇಕು" ಎಂದು ಹೇಳಿ ಸಪ್ಪೆ ಮೋರೆ ಹಾಕಿದೆ.

"ಹೋಗಲಿ ಬಿಡಿ, ನೀವು ಇಷ್ಟಾದರೂ ಮಾಡಿದ್ದೀರಲ್ಲ, ಬಹಳಷ್ಟು ಆಸ್ಪತ್ರೆಗಳಲ್ಲಿ ನಮ್ಮ ಸುತ್ತೋಲೆಯನ್ನು ಗಮನಿಸಿಯೇ ಇಲ್ಲ." ಎಂದು ಹೇಳಿ ಮಂದಸ್ಮಿತರಾದರು. ನಮಗೆ ೧೮ ತಿಂಗಳಿಗೆ ಬೇಕಾಗುವಷ್ಟನ್ನು ಇರಿಸಿಕೊಂಡು ಉಳಿದ ಬಾಟಲುಗಳನ್ನು ಬೇರೆ ಆಸ್ಪತ್ರೆಗಳಿಗೆ ಕಳುಹಿಸಿ ಕೊಡಿ ಎಂದು ಸಲಹೆ ಮಾಡಿದರು. ಮತ್ತೆ ಹಲವಾರು ರಖಂಗಳನ್ನು ಮನಬಂದಂತೆ

(Random) ತಾಳೆನೋಡಿದರು. ಯಾವುದರಲ್ಲೂ ವ್ಯತ್ಯಯ ಕಂಡು ಬರಲಿಲ್ಲ. ಸದ್ಯ ಬಚಾವಾದೆ ಎಂದು ನಿರಾಳವಾಗಿ ಉಸಿರಾಡಿದೆ.

ತನಿಖೆಯ ಕಾರ್ಯ ಮುಗಿಯುವ ಹೊತ್ತಿಗೆ ಸಾಯಂಕಾಲವೇ ಆಗಿತ್ತು. ಸ್ಥಳೀಯ ಇಂಡಿಯನ್ ಮೆಡಿಕಲ್ ಅಸೋಸಿಯೇಷನ್‌ನವರು ವೃತ್ತಿ ಬಾಂಧವರಾದ ಆರೋಗ್ಯ ಸಚಿವರ ಗೌರವಾರ್ಥ ಸತ್ಕಾರ ಸಮಾರಂಭ ಏರ್ಪಡಿಸಿದ್ದರು. ಅದರಲ್ಲಿ ಭಾಗವಹಿಸಿದರು. ವೈದ್ಯಕೀಯ ವೃತ್ತಿ ಎದುರಿಸುತ್ತಿರುವ ಸಮಸ್ಯೆಗಳ ಬಗೆಗೆ ಹಲವಾರು ವೈದ್ಯರು ಪ್ರಶ್ನೆಗಳನ್ನು ಕೇಳಿದರು. ಅವುಗಳಿಗೆಲ್ಲಾ ಸಮಂಜಸ ಉತ್ತರಗಳನ್ನಿತ್ತರು. ಸಮಾರಂಭ ಮುಗಿಯುವ ಹಂತದಲ್ಲಿ ಡಾ॥ ತಂಗವೇಲು ಎದ್ದು ನಿಂತು ಗಣಿ ಕಾರ್ಮಿಕರೇ ಹೆಚ್ಚಾಗಿರುವ ಕೆ.ಜಿ.ಎಫ್.ಗೆ ಒಂದು ಮೆಡಿಕಲ್ ಕಾಲೇಜನ್ನು ಮಂಜೂರು ಮಾಡಿಕೊಡಬೇಕೆಂದು ಕೇಳಿದರು. "ಬೆಂಗಳೂರಿನಲ್ಲೇ ಸರ್ಕಾರಿ ಮೆಡಿಕಲ್ ಕಾಲೇಜು ತೆರೆಯಲಾಗದೆ, ಅಲ್ಲೀಗ ಖಾಸಗಿಯವರು ಒಂದು ಮೆಡಿಕಲ್ ಕಾಲೇಜು ನಡೆಸುತ್ತಿದ್ದಾರೆ. ಇಂತಹ ಊರುಗಳಿಗೆಲ್ಲಾ ಮೆಡಿಕಲ್ ಕಾಲೇಜು ಮಂಜೂರು ಮಾಡಲು ಸಾಧ್ಯವಾಗೊಲ್ಲಾರೀ" ಎಂದು ಸ್ಪಷ್ಟವಾಗಿ ಉತ್ತರಿಸಿದರು. ಅಷ್ಟಕ್ಕೇ ಸುಮ್ಮನಾಗದೇ ಡಾ॥ ತಂಗವೇಲು "ಕಡೇಪಕ್ಷ ಇಲ್ಲೊಂದು ಹೆಲ್ತ್ ಅಸಿಸ್ಟೆಂಟರ ತರಬೇತಿ ಶಾಲೆಯನ್ನಾದರೂ ಮಂಜೂರು ಮಾಡಿ" ಎಂದರು. "ಅದೆಂಥಾ, ಹೆಲ್ತ್ ಅಸಿಸ್ಟೆಂಟರ ಶಾಲೇರೀ, ನಮಗೆ ಬೇಕಾಗುವಷ್ಟು ಡಾಕ್ಟರುಗಳನ್ನೇ ತಯಾರಿಸಲು ಸಾಧ್ಯವಾಗುತ್ತಿಲ್ಲ. ಅವೆಲ್ಲಾ ಸಾಧ್ಯವಾಗದ ಮಾತುಗಳು" ಎಂದು ಹೇಳಿ ತಂಗವೇಲು ಅವರ ಬಾಯಿ ಮುಚ್ಚಿಸಿದರು.

## ಅಪರೂಪದ ಜಮೀನುದಾರರು

ದೊರೆಸ್ವಾಮಿ ನಾಯ್ಡು ಕೆ.ಜಿ.ಎಫ್.ಗೆ ೫-೬ ಮೈಲಿ ದೂರದ ಹಳ್ಳಿಯೊಂದರಲ್ಲಿ ಜಮೀನುದಾರರು; ಹಲವಾರು ಎಕರೆ ಲಿಂಬೇಹಣ್ಣಿನ ತೋಟದ ಮಾಲೀಕರು. ಜೊತೆಗೆ ರಾಜಕೀಯದಲ್ಲಿ ಸಕ್ರಿಯ ಪಾತ್ರ; ಹಲವು ಸ್ಥಳೀಯ ಸಂಸ್ಥೆಗಳಲ್ಲಿ ಉನ್ನತ ಸ್ಥಾನಮಾನ. ತಮ್ಮ ಜಮೀನು - ಮನೆ ವ್ಯವಹಾರಗಳ ಬಗೆಗೆ ಗಮನ ಹರಿಸಲಾಗದಷ್ಟು ಬಿಝಿ. ಅವರ ನಿಂಬೇ ತೋಟದಲ್ಲಿ ಹೇರಳವಾದ ಫಸಲು ಬೆಳೆಯುತ್ತಿತ್ತು: ಆದರೆ ಕೈಗೆ ಸಿಗುತ್ತಿದ್ದುದು ಅತ್ಯಲ್ಪ. ಕೆ.ಜಿ.ಎಫ್. ಕಡೆಯ ನಿರುದ್ಯೋಗಿ ಯುವಕರು ರಾತ್ರಿ ಅವರ ತೋಟಕ್ಕೆ ಲಗ್ಗೇ ಹಾಕಿ, ಲಿಂಬೇ ಹಣ್ಣುಗಳನ್ನು ಕಿತ್ತು ಸಾಗಿಸುತ್ತಿದ್ದುದು ಅನೂಚಾನವಾಗಿ ನಡೆಯುತ್ತಿದ್ದ ದಂಧೆ. ಕಾವಲುಗಾರರನ್ನೇ ಹೊಡೆದು ಬಡಿದು ತಮ್ಮ ಕಾರ್ಯ ಸಾಧಿಸುತ್ತಿದ್ದರು. ನಾಯ್ಡು ಅವರು ಒಂದು ರಾತ್ರಿ ಬಿಡುವು ಮಾಡಿಕೊಂಡು ಕೆಲವು ಕೆಲಸಗಾರರ ಜೊತೆ ತೋಟದಲ್ಲಿ ಕಾವಲು ಕೂತರು. ಕೈಯಲ್ಲಿ ಬಂದೂಕು ಇಟ್ಟುಕೊಳ್ಳಲು ಮರೆಯಲಿಲ್ಲ. ಸ್ವಲ್ಪ ಹೊತ್ತಿನಲ್ಲೇ ಕಳ್ಳರ ತಂಡ ತೋಟಕ್ಕೆ ನುಗ್ಗಿತು; ಮರಗಳಿಂದ ಲಿಂಬೆಹಣ್ಣುಗಳನ್ನು ಕೀಳುವುದರಲ್ಲಿ ಮಗ್ನರಾದರು. ಬೆದರಿಸಿ ಓಡಿಸಲು ನಾಯ್ಡು ಒಂದೆರಡು ಸಾರಿ ಗಾಳಿಯಲ್ಲಿ ಗುಂಡು ಹಾರಿಸಿದರು. ದರೋಡೆಕೋರರು ಅದಕ್ಕೆ ಜಗ್ಗುವ ಸ್ವಭಾವದವರಲ್ಲ; ಗುಂಡಿನ ಶಬ್ದ ಕೇಳಿ ಬಂದ ಕಡೆಗೇ ಕಲ್ಲು ತೂರಾಟ ಮಾಡಲಾರಂಭಿಸಿದರು. ಅವರೆಲ್ಲಾ ಹಿಂಜರಿಯದಿದ್ದರೆ ಅವರ ಮೇಲೆ ಗುಂಡು ಹಾರಿಸುವುದಾಗಿ ನಾಯ್ಡು ಕೂಗಿ ಕೂಗಿ ಹೇಳಿದರು; ಆದರೂ ಅವರ ಕಡೆ ಕಲ್ಲು ತೂರಾಟ ನಿಲ್ಲಲಿಲ್ಲ. ಅನ್ಯ ಮಾರ್ಗವಿಲ್ಲದೆ ಬಂದೂಕನ್ನು ಕೆಳಮುಖ ಮಾಡಿ ಕಲ್ಲುಗಳು ಬರುತ್ತಿದ್ದ ಕಡೆ ಒಂದೆರಡು ಸಾರಿ ಗುಂಡು ಹಾರಿಸಿವರು. ಒಬ್ಬ

ಹುಡುಗನ ಕಾಲಿಗೆ ಗುಂಡು ತಗುಲಿ ಚೀರಾಡುತ್ತಾ ನೆಲಕ್ಕುರುಳಿದ, ಮಿಕ್ಕವರು ದಿಕ್ಕಾಪಾಲಾಗಿ ಓಡಿದರು.

ಗಾಯದಿಂದ ರಕ್ತಸೋರುತ್ತಿದ್ದ ಆರ್ಮುಗಂ ಎಂಬ ೧೫ ವರ್ಷದ ಹುಡುಗನನ್ನು ನಾಯ್ಡು ಅವರ ಜೀಪಿನಲ್ಲಿ ತಕ್ಷಣ ಕೆ.ಜಿ.ಎಫ್‌ಗೆ ಕರೆತಂದರು; ಅವನನ್ನು ಆಸ್ಪತ್ರೆಯಲ್ಲಿ ಸೇರಿಸಿದರು. ಸುಮಾರು ರಾತ್ರಿ ಎರಡು ಗಂಟೆ ಸಮಯಕ್ಕೆ ನನ್ನ ನಿವಾಸಕ್ಕೆ ಬಂದು ಎಬ್ಬಿಸಿದರು. ನಡೆದ ವಿಚಾರವನ್ನು ವರದಿ ಮಾಡಿದರು. ಅವನಿಗೆ ಸಾಧ್ಯವಾದ ಎಲ್ಲಾ ಚಿಕಿತ್ಸೆಯನ್ನು ನೀಡಬೇಕೆಂತಲೂ, ಅದಕ್ಕೆ ಎಷ್ಟೇ ಖರ್ಚಾದರೂ ತಾವು ಭರಿಸುವುದಾಗಿ ಹೇಳಿದರು. ಹಾಗೂ ಆಗಲೇ ತಾವೇ ಪೊಲೀಸ್ ಠಾಣೆಗೆ ತೆರಳಿ ವರದಿ ಮಾಡುವುದಾಗಿ ಹೇಳಿ ಹೊರಟು ಹೋದರು.

ಕೂಡಲೇ ಆಸ್ಪತ್ರೆಗೆ ತೆರಳಿ ಆರ್ಮುಗಂನನ್ನು ಪರೀಕ್ಷೆ ಮಾಡಿದೆ. ಬಲಗಾಲು ಮಂಡಿಯ ಕೆಳಗಡೆ ಸಂಪೂರ್ಣವಾಗಿ ಜಜ್ಜಿ ಹೋಗಿತ್ತು. ಮೂಳೆ ಹಲವಾರು ಕಡೆ ಪುಡಿಪುಡಿಯಾದಂತಿತ್ತು. ರಕ್ತ ಸೋರುತ್ತಲೇ ಇದ್ದ ಗಾಯವನ್ನು ಶುಚಿಗೊಳಿಸಿ ಬ್ಯಾಂಡೇಜು ಮಾಡಿದೆ ಅವನು ಚೇತರಿಸಿ ಕೊಳ್ಳಲು ಕೆಲವು ಬೆಂಬಲೋಪಚಾರದ ವಿಧಾನಗಳನ್ನು ಅಳವಡಿಸಿದೆ. ಮಾರನೇ ದಿನ ಬೆಳಿಗ್ಗೆ ಡಿ.ಎಂ.ಓ ಮತ್ತು ನಾನೂ ಸೇರಿಕೊಂಡು ಗಾಯವನ್ನು ಮತ್ತೊಮ್ಮೆ ಅಜಮಾಯಿಶಿ ನೋಡಿದೆವು. ಕಾಲಿನ ಮೇಲ್ಭಾಗದಿಂದ ಮೂಳೆ ಸಂಪೂರ್ಣವಾಗಿ ಪುಡಿಪುಡಿಯಾಗಿದ್ದರಲ್ಲಿ ಸಂದೇಹವಿರಲಿಲ್ಲ; ಅದನ್ನು ಉಳಿಸಬಹುದಾದ ಸಾಧ್ಯತೆಗಳು ಕಂಡು ಬರಲಿಲ್ಲ. ಮುಂಗಾಲಿನ ಕೆಳಗೆ ಕಾಲನ್ನು ಕತ್ತರಿಸಲೇ ಬೇಕಾಗುತ್ತದೆಂದು ಸಲಹೆ ಮಾಡಿದೆವು. ಅವನ ಕಡೆಯವರು ಅದಕ್ಕೆ ಸಮ್ಮತಿಸಲಿಲ್ಲ. ಬೆಂಗಳೂರಿನ ದೊಡ್ಡ ಆಸ್ಪತ್ರೆಗಾದರೂ ಕೊಂಡು ಹೋಗಿ ಕಾಲನ್ನು ಉಳಿಸಲು ಸಾಧ್ಯವಾಗು ತ್ತದೆಯೇ ಎಂಬುದನ್ನು ನೋಡಬೇಕೆಂದು ವಾದಿಸತೊಡಗಿದರು. ಅಷ್ಟರಲ್ಲೇ ಅಲ್ಲಿಗೆ ಬಂದ ನಾಯ್ಡು, ಹುಡುಗನನ್ನು ಬದುಕಿಸಲು ಹಾಗೂ ಅವನ ಕಾಲನ್ನು ಉಳಿಸಲು ಎಷ್ಟೇ ಖರ್ಚಾದರೂ ತಾವು ಕೊಡುವುದಾಗಿ ಹೇಳಿದರು. ಕೆ.ಜಿ.ಎಫ್.ನಲ್ಲಿ ಆಗದಿದ್ದರೆ ಬೆಂಗಳೂರಿಗೆ ಅವರ ಜೀಪ್‌ನಲ್ಲೇ ಕರೆದುಕೊಂಡು ಹೋಗುವುದಾಗಿಯೂ ಭರವಸೆ ಇತ್ತರು. ಮರುದಿನವೇ ಅವನನ್ನು ತಾವೇ ಬೆಂಗಳೂರಿಗೆ ಕರೆದುಕೊಂಡು ಹೋದರು.

ಅನಂತರ ನಮ್ಮ ಹತ್ತಿರ ಮಾತನಾಡುತ್ತಾ ತಾವು ವರ್ಷವೆಲ್ಲಾ ಕಷ್ಟಪಟ್ಟು ಬೆಳೆಸಿದ ಫಸಲನ್ನು ಅವರೆಲ್ಲಾ ದೋಚುತ್ತಿರುವ ಪ್ರಸ್ತಾಪ ಮಾಡಿದರು. ಅದನ್ನು ತಡೆಗಟ್ಟಲು ಏನಾದರೂ ಮಾಡಲೇ ಬೇಕಾಗಿತ್ತು. ಕಾವಲುಗಾರರ ಮೇಲೇ ಹಲ್ಲೆ ಮಾಡಿ ದರೋಡೆ ಮಾಡುತ್ತಿದ್ದುದನ್ನು ಹೇಗಾದರೂ ಮಾಡಿ ತಡೆಯುವ ಅನಿವಾರ್ಯವಿತ್ತು. ಮೊದಲು ಬೆದರುಗುಂಡು ಹಾರಿಸಿ ದರೂ ಚದುರದಿದ್ದಾಗ ಅವರ ಕಡೆಯೇ ಗುಂಡು ಹಾರಿಸ ಬೇಕಾಯಿತೆಂದು ವಿಷಾದದಿಂದ ಹೇಳಿದರು; ಆದರೂ ಅವರು ಮಾನಸಿಕವಾಗಿ ವಿಚಲಿತರಾದಂತೆ ಕಂಡು ಬರಲಿಲ್ಲ. ಹುಡುಗನ ಮುಂದಿನ ಜೀವನಕ್ಕೆ ಸ್ವಲ್ಪ ಜಮೀನನ್ನು ಸಹ ಕೊಡುವ ಇಂಗಿತವನ್ನು ವ್ಯಕ್ತಪಡಿಸಿದರು. ಅಂದು ಸಂಜೆ ಮಂತ್ರಿಯೊಬ್ಬರ ಕಾರ್ಯಕ್ರಮದಲ್ಲಿ ಅವರೇ ಅಧ್ಯಕ್ಷತೆ ವಹಿಸಿದ್ದರಂತೆ!.

ಬೆಂಗಳೂರು ಆಸ್ಪತ್ರೆಯಲ್ಲೂ ಮೂಳೆ ರೋಗ ತಜ್ಞರು ಕಾಲನ್ನು ಕತ್ತರಿಸದೆ ಗತ್ಯಂತರ ವಿಲ್ಲವೆಂದರಂತೆ, ಆ ಕೆಲಸವನ್ನು ಅಲ್ಲಿ ಮಾಡಲು ಒಪ್ಪದೇ ಅವನನ್ನು ಮತ್ತೆ ನಮ್ಮ ಆಸ್ಪತ್ರೆಗೇ ಕ[illegible]ರು. ನಾವೇ ಆರ್ಮುಗಂನ ಕಾಲು ಕತ್ತರಿಸಿದೆವು. ಖರ್ಚನ್ನೆಲ್ಲಾ ನಾಯ್ಡು ಅವರೇ ಭರಿಸಿದರಲ್ಲದೆ, ನಂತರ ಮಾತಿನಂತೆ ೨-೩ ಎಕರೆ ಜಮೀನನ್ನು ಅವನ ಹೆಸರಿಗೆ ವರ್ಗಾಯಿಸಿದ

ರಂತೆ. ಅವರಂಥಾ ಉದಾರಿ ಜಮೀನುದಾರರು ಇರುತ್ತಾರಲ್ಲ! ಎಂಬುದಕ್ಕಾಗಿ ಈ ಪ್ರಕರಣವನ್ನು ಪ್ರಸ್ತಾಪಿಸಿದ್ದೇನೆ.

## ಶ್ವಾಸಕೋಶದೊಳಗಡೆ ಇಂಜಕ್ಷನ್ ಸೂಜಿ!

ಸುಬ್ರಹ್ಮಣ್ಯಂ, ರಿಸರ್ವ್ ಪೊಲೀಸ್ ಪಡೆಯಲ್ಲಿ ಒಬ್ಬ ಪೇದೆ. ಹಲವಾರು ತಿಂಗಳಿಂದ ಸದಾ ಗಂಟಲು ಕೆರೆಯುವಂತಿದ್ದು ಎಡೆಬಿಡದೆ ಕೆಮ್ಮುತ್ತಿದ್ದ. ಅದರ ಸಲುವಾಗಿ ಲಕ್ಷಣಸ್ವಾಮಿ ಎಂಬ ಖಾಸಗಿ ವೈದ್ಯರನ್ನು ನೋಡಿದ. ಡಾ|| ಲಕ್ಷಣಸ್ವಾಮಿ ಎಲ್.ಎಂ.ಪಿ. ಡಿಪ್ಲೋಮಾ ವೈದ್ಯರು. ಪರೀಕ್ಷೆ ಮಾಡಿದ ಅವರು, ಅವನ 'ಕಿರುನಾಲಿಗೆ' (Uvula) ಬಹಳ ಉದ್ದವಾಗಿ ಬೆಳೆದು ಕೊಂಡಿದೆ ಎಂತಲೂ, ಅದು ಗಂಟಲಿನ ತೆಳುಭಾಗವನ್ನು ಪದೇ ಪದೇ ತಾಗುತ್ತಿರುವುದರಿಂದ ಅವನು ಹಾಗೆ ಕೆಮ್ಮುತ್ತಿರುವುದೆಂಬ ಕಾರಣ ಹೇಳಿದರಲ್ಲದೆ, ಅದರ ತುದಿಯ ಸ್ವಲ್ಪ ಭಾಗವನ್ನು ಕತ್ತರಿಸಿ ಹಾಕಬೇಕಾಗುತ್ತದೆಂದು ಅಭಿಪ್ರಾಯಪಟ್ಟರು. ಸುಬ್ರಹ್ಮಣ್ಯಂ ಅದರ ಆಗುಹೋಗುಗಳ ಬಗೆಗೆ ಒಂದಿಷ್ಟೂ ಯೋಚಿಸದೆ ಸಮ್ಮತಿಸಿದ.

ಡಾ|| ಲಕ್ಷಣಸ್ವಾಮಿ, ಪೇದೆಯನ್ನು ಕುರ್ಚಿಯ ಮೇಲೆ ಕೂರಿಸಿ ಬಾಯಿ ತೆರಸಿದರು. ಕಿರುನಾಲಗೆಯ ಬುಡಕ್ಕೆ ಇಂಜಕ್ಷನ್ ಚುಚ್ಚಿ ಅವನಿಗೆ ನೋವಾಗದಂತೆ ಆಪರೇಷನ್ ಮಾಡುವ ಭರವಸೆ ಇತ್ತರು. ಇಂಜಕ್ಷನ್ ಬಾಟಲಿಯೊಂದಕ್ಕೆ ಸಿರಿಂಜ್ ಸೂಜಿಯನ್ನು ತೂರಿ, ಮದ್ದನ್ನು ಎಳೆದು ಕೊಂಡರು. ಸೂಜಿಯನ್ನು ಕಿರುನಾಲಿಗೆಯ ಬುಡಕ್ಕೆ ನಾಟಿಸಿ ಮದ್ದನ್ನು ಸೇರಿಸುವ ಪ್ರಯತ್ನ ಮಾಡಿದರು; ಒಡನೆಯೇ ಸೂಜಿ ಸಿರಂಜಿನಿಂದ ಕಳಚಿಕೊಂಡು ಗಂಟಲಿನೊಳಗಡೆ ಬಿದ್ದು ಬಿಟ್ಟಿತು. (ಸೂಜಿ ಮತ್ತು ಸಿರಿಂಜು ಒಂದಕ್ಕೊಂದು ಗಟ್ಟಿಯಾಗಿ ಬೆಸೆದುಕೊಳ್ಳುವ ಪ್ರಸ್ತುತ ಪ್ರಚಾರದಲ್ಲಿರುವ 'ಲಿವರ್ ಲಾಕ್' ಮಾದರಿಯದಾಗಿರದೆ, ಕೇವಲ ತುದಿಯಲ್ಲಿ ಸೇರಿಸುವ 'ರೆಕಾರ್ಡ್' ಮಾದರಿಯ ಸಿರಿಂಜನ್ನು ಅವರು ಬಳಸಿಕೊಂಡಿರಬೇಕು). ರೋಗಿ ಮೊದಲಿಗಿಂತಲೂ ತೀವ್ರವಾಗಿ ಕೆಮ್ಮಲಾರಂಭಿಸಿದ. ಸೂಜಿ, ಸಿರಿಂಜಿನಿಂದ ಕಳಚಿ ಬಿದ್ದು ಹೋಗಿದ್ದನ್ನು ಡಾ|| ಸ್ವಾಮಿ ಗಮನಿಸಿದರೂ ಅದನ್ನು ಪೇದೆಗೆ ತಿಳಿಸಲಿಲ್ಲ. ಗಾಬರಿಗೊಂಡರೂ ಅದನ್ನು ಬಹಿರಂಗವಾಗಿ ಪ್ರಕಟಿಸದೆ ಉಗಿಯಲು ಕೆಳಗಿರಿಸಿದ್ದ ಬಕೆಟ್ ಮತ್ತು ಸುತ್ತಮುತ್ತಲೆಲ್ಲಾ ಹುಡುಕಿದರು. ಆದರೂ ಅಲ್ಲೆಲ್ಲೂ ಅದು ಪತ್ತೆಯಾಗಲಿಲ್ಲ; ದೂರದ ಸಂದಿಗೊಂದಿನಲ್ಲೆಲ್ಲೋ ಬಿದ್ದಿರಬಹುದೆಂದು ಭಾವಿಸಿದರು. ಸುಬ್ರಮಣ್ಯಂಗೆ ಕೆಲವು ಇಂಜಕ್ಷನ್, ಕೆಮ್ಮಿನ ಸಿರಪ್ ಮುಂತಾದವನ್ನು ಕೊಟ್ಟು ಸಾಗಹಾಕಿದರು. ಹಿಂದಿನ ದಿನಗಳಿಗಿಂತಲೂ ಕೆಮ್ಮು ಹೆಚ್ಚಾದ ಸುಬ್ರಮಣ್ಯಂ ಮರುದಿನ ಮತ್ತೆ ಡಾ|| ಸ್ವಾಮಿಯ ಹತ್ತಿರ ಬಂದ ಆದಾಗಲೇ ಅಪರಾಧೀ ಮನೋಭಾವ ಆವರಿಸುತ್ತಿದ್ದ ಡಾ|| ಸ್ವಾಮಿ ದಿಕ್ಕು ತೋಚದೆ ಸರ್ಕಾರಿ ಆಸ್ಪತ್ರೆಯಲ್ಲಿ 'ಎಕ್ಸ್‌ರೇ ಪರದೆ ಪರೀಕ್ಷೆ' ಸ್ಕ್ರೀನ್(Screening) ಮಾಡಿಸುವುದಕ್ಕೆ ಅವನನ್ನು ಕರೆದೊಯ್ದರು. ಆಗಿದ್ದ ಆರ್.ಎಂ.ಓ. ಅವರಿಗೆ ವಿಷಯವನ್ನು ತಿಳಿಸಿ, 'ಸ್ಕ್ರೀನ್' ಮಾಡಿಸಿದರು. ಅವರು ಸೂಜಿ ಎದೆಗೂಡಿನ ಯಾವ ಭಾಗದಲ್ಲೂ ಕಾಣಿಸುತ್ತಿಲ್ಲವೆಂದು ವರದಿ ಮಾಡಿದರು. ಸದಾ ರಕ್ತ ತುಂಬಿಕೊಂಡಿರುವ ಹೃದಯ, ಹಿರಿಯ ಗಾತ್ರದ ರಕ್ತನಾಳಗಳು ಮತ್ತು ಉಸಿರುನಾಳಗಳು ದಟ್ಟವಾಗಿ ಕಿಕ್ಕಿರಿದು ನೆಲೆಯಾದ ವಲಯದಲ್ಲಿ ಲೋಹ ಪದಾರ್ಥಗಳು ಸ್ಕ್ರೀನಿಂಗ್‌ನಲ್ಲಿ ಗೋಚರವಾಗಲಾರವೆಂಬ ಮೂಲಭೂತ ಅರಿವು ಎಕ್ಸ್‌ರೇ ತಜ್ಞರಿಗದೇಕೆ ಹೊಳೆಯಲಿಲ್ಲವೋ! ಸರಿಯಾದ ಕ್ರಮವೆಂದರೆ ಅಂತಹವರಿಗೆ ಎಕ್ಸ್‌ರೇ ಫೋಟೋವನ್ನೇ ತೆಗೆಸುವುದಾಗಿತ್ತು.

ಈ ವಿಷಯವನ್ನು ಮುಂದುವರಿಸುವ ಮೊದಲು ಕೆ.ಜಿ.ಎಫ್. ಸಿವಿಲ್ ಆಸ್ಪತ್ರೆಯಲ್ಲಿ ಎಕ್ಸ್‌ರೇ ವಿಭಾಗದ ಕಾರ್ಯ ನಿರ್ವಹಣೆಯ ಬಗೆಗೆ ಸ್ವಲ್ಪ ವಿವರಗಳನ್ನು ನೀಡುವುದು ಸೂಕ್ತವೆನಿಸುತ್ತದೆ. ಅಲ್ಲಿಯ ಎಕ್ಸ್‌ರೇ ವಿಭಾಗದ ನಿರ್ವಹಣೆ ಹಿಂದಿನಿಂದಲೂ ಆರ್.ಎಂ.ಓ. ಅವರ ಜವಾಬ್ದಾರಿಯಾಗಿತ್ತು, ಅಬ್ದುಲ್ಲಾ ಎಂಬ ಜವಾನ ಅವರಿಗೆ ಸಹಾಯಕವಾಗಿದ್ದು, ಒಳ್ಳೆಯ ಎಕ್ಸ್‌ರೇ ಫೋಟೋಗಳನ್ನು ತೆಗೆಯುವ ಕಲೆಯಲ್ಲಿ ನುರಿತವನಾಗಿದ್ದ.

ಅಲ್ಲಿಯ 'ಒಳವ್ಯವಸ್ಥೆ' ಇನ್ನೂ ಸ್ವಾರಸ್ಯಕರ. ಸ್ಕ್ರೀನಿಂಗ್ ಪರೀಕ್ಷೆಗೊಳಗಾಗುವ ಪ್ರತಿಯೊಬ್ಬರೂ ಅವನಿಗೆ ಮೂರು ರೂಪಾಯಿಗಳನ್ನು (ಅನಧಿಕೃತವಾಗಿ) ಕೊಡುವ ರೂಢಿ ಹಿಂದಿನಿಂದಲೂ ಇತ್ತು. ಅದರಲ್ಲಿ ಎರಡು ರೂಪಾಯಿಗಳನ್ನು ಆರ್.ಎಂ.ಓ. ಅವರಿಗೆ ಕೊಟ್ಟು ತಾನು ಒಂದು ರೂಪಾಯಿಯನ್ನು ಇರಿಸಿಕೊಳ್ಳುತ್ತಿದ್ದ. ಖಾಸಗಿ ವೈದ್ಯರು ಎಕ್ಸ್‌ರೇ ಪಟಗಳನ್ನು ತೆಗೆಸಲು ಕಳುಹಿಸುತ್ತಿದ್ದ ರೋಗಿಗಳಿಂದ ೧೫ ರೂಪಾಯಿಗಳನ್ನು ಪಡೆದುಕೊಳ್ಳುತ್ತಿದ್ದ; ಅದರಲ್ಲಿ ೧೦ ರೂಪಾಯಿಗಳನ್ನು ಆರ್.ಎಂ.ಓ ಅವರಿಗೆ ಸಲ್ಲಿಸಿ ಐದು ರೂಪಾಯಿಗಳನ್ನು ತಾನು ಇರಿಸಿಕೊಳ್ಳುತ್ತಿದ್ದ. ಆದರೆ ಖಾಸಗಿ ವೈದ್ಯರು ಆ ಸಮಯದಲ್ಲಿ ತೆಗೆದ ಸೈಜಿನ ಒಂದು ಹಳೇ ಫಿಲಂನ್ನು ವಾಪಸು ಕೊಡಬೇಕಾಗಿತ್ತು, ಎಕ್ಸ್‌ರೇ ಫಿಲಂಗಳ ಲೆಕ್ಕವನ್ನು ಸರಿದೂಗಿಸಲು!

ನಾನು ಮೊದಲು ಕೆ.ಜಿ.ಎಫ್.ಗೆ ಹೋದಾಗ ಈ ಪರಿಸ್ಥಿತಿ ಧುತ್ತೆಂದು ಎದುರಾಯಿತು. ಅಂತಹ ಹಿನ್ನಲೆಯ ಎಕ್ಸ್‌ರೇ ವಿಭಾಗದ ಜವಾಬ್ದಾರಿಯನ್ನು ನಿಭಾಯಿಸಲು ನಾನು ತಯಾರಿರಲಿಲ್ಲ. ಆದರೆ ಆರ್.ಎಂ.ಓ. ಸುಪರ್ದಿನಲ್ಲೇ ಎಕ್ಸ್‌ರೇ ವಿಭಾಗ ಹಿಂದಿನಿಂದಲೂ ಇದ್ದ ಸಂಪ್ರದಾಯ ಒಂದು ಕಡೆ; ಈ ಮೊದಲು ಶಿಕಾರಿಪುರದಲ್ಲಿ ಎಕ್ಸ್‌ರೇ ಯಂತ್ರವನ್ನು ಬಳಸಿದ ಅನುಭವ ಇನ್ನೊಂದು ಕಡೆ. ಹಾಗಾಗಿ ಅದು ನನ್ನ ಚಾರ್ಜಿನಲ್ಲಿ ಇರುವುದು ಅನಿವಾರ್ಯವೆಂಬಂತೆ ಆಯಿತು. ಆದರೆ ರೂಢಿಯಲ್ಲಿದ್ದ ಫೀಸು ತೆಗೆದುಕೊಳ್ಳುವ ಅಭ್ಯಾಸವನ್ನು ನನ್ನ ಮಟ್ಟಿಗೆ ನಿರಾಕರಿಸಿದೆ. ಆದರೆ ಆ ಕೆಲಸ ನಿರ್ವಹಿಸುತ್ತಿದ್ದ ಜವಾನನ ಪಾಲನ್ನು ತೆಗೆದುಕೊಳ್ಳುವ ರೂಢಿಗೆ ಅಡ್ಡ ಬರಲಿಲ್ಲ.



ಪೊಲೀಸ್ ಪೇದೆಯ ಪ್ರಕರಣ ಜರುಗಿದ ಸಮಯದಲ್ಲಿ ಕೆ.ಜಿ.ಎಫ್.ನ ಒಂದು ಚಿನ್ನದ ಗಣಿ ಮುಚ್ಚುವ ಹಂತಕ್ಕೆ ಬಂದಿದೆ ಎಂಬ ಸುದ್ದಿ ಹರಡಿತ್ತಂತೆ. ಅದರಲ್ಲಿ ಕೆಲಸ ಮಾಡುತ್ತಿದ್ದ ಕಾರ್ಮಿಕರು ತೀವ್ರ ಒತ್ತಡಕ್ಕೊಳಗಾದರು. ಹಾಗೇನಾದರೂ ಗಣಿ ಮುಚ್ಚಿದಾಗ ಅವರಿಗೆ ಸಿಗಬಹುದಾದ ಪರಿಹಾರದ ಬಗೆಗೆ ಕುತೂಹಲಿಗಳಾದರು. ಚಿನ್ನದ ಗಣಿಗಳಲ್ಲಿ ಅವರು ಕಾರ್ಯ ನಿರ್ವಹಿಸಲು ಶುರು ಮಾಡಿದಾಗಿನಿಂದಲೂ ಅವರ ಸ್ವಾಸ್ಥ್ಯದ ಬಗೆಗೆ ನಾನಾ ವಿಧದ ಪರೀಕ್ಷೆಗಳನ್ನು ಆಗಾಗ್ಗೆ ಜರುಗಿಸುತ್ತಿರುವುದಲ್ಲದೆ, ವರ್ಷಕ್ಕೊಂದು ಸಾರಿ ಎದೆಯ ಎಕ್ಸ್‌ರೇ ಫೋಟೋ ತೆಗೆದು, ಅದನ್ನು ಸುರಕ್ಷಿತವಾಗಿ ಇರಿಸಿರುತ್ತಾರೆ. ಆಳವಾದ ಗಣಿಗಳಲ್ಲಿ ಕಾರ್ಯ ನಿರ್ವಹಿಸುವ ಕೂಲಿಗಾರರ ಶ್ವಾಸಕೋಶಗಳಲ್ಲಿ ಧೂಳಿನ ಕಣಗಳು ಶೇಖರವಾಗುತ್ತಿರುತ್ತವೆ. ಅವರಲ್ಲಿ ಕೆಮ್ಮು, ದಮ್ಮು, ಕ್ಷಯ ರೋಗ ಕಾಣಿಸಿಕೊಳ್ಳುವುದು ತೀರಾ ಸಾಮಾನ್ಯ. ಅವಕ್ಕಿಂತಲೂ ಧೂಳಿನ ಕಣಗಳ ಕೆರಳಿಕೆಯಿಂದ ಕಾಲಾನಂತರದಲ್ಲಿ "ಸಿಲಿಕೋಸಿಸ್" (Silicosis) ಎಂಬ ವ್ಯಾಧಿ ಉದ್ಭವಿಸುವುದೂ ತೀರಾ ಸಾಮಾನ್ಯ. ಅದರಿಂದ ಅವರ ಆರೋಗ್ಯದ ಮೇಲೆ ಸದಾ ನಿಗಾ ಇಟ್ಟುಕೊಂಡಿರುತ್ತಾರೆ; ಕಾಯಿಲೆಗಳು ಒಂದು ಹಂತವನ್ನು ತಲುಪಿದಾಗ ಅಂತಹವರಿಗೆ ಅದರ ಪ್ರಮಾಣಕ್ಕನುಗುಣವಾಗಿ ಪರಿಹಾರ ಧನವನ್ನು ನೀಡಿ ಅವರನ್ನು ಕೆಲಸದಿಂದ ಬಿಡುಗಡೆ ಮಾಡುತ್ತಾರೆ. ಗಣಿ ಮುಚ್ಚುವ ಊಹಾಪೋಹಗಳು ದಟ್ಟವಾಗಿ ಹರಡಿದಾಗ ತಮ್ಮಲ್ಲಿ ಕಾಯಿಲೆ ಪ್ರಮಾಣವೆಷ್ಟಿರಬಹುದು, ಹಾಗೂ ಎಷ್ಟು ಹಣ ಪರಿಹಾರವಾಗಿ ದೊರೆಯಬಹುದೆಂಬುದನ್ನು ಮೊದಲೇ ತಿಳಿಯುವ ಆತಂಕ ಉಂಟಾಗಿರಬೇಕು. ಆದರೆ ಗಣಿ ಆಸ್ಪತ್ರೆಯಲ್ಲಿ ಅವರು ಇಚ್ಛಿಸಿದಾಗಲೆಲ್ಲಾ ಎಕ್ಸ್‌ರೇ ಫೋಟೋ ತೆಗೆಯುವುದಿಲ್ಲ. ಸಿವಿಲ್ ಆಸ್ಪತ್ರೆಯಲ್ಲಿ ಎಕ್ಸ್‌ರೇ ಸ್ಕ್ರೀನಿಂಗ್ ಮಾಡಿಸುವುದರಿಂದ ಕಾಯಿಲೆಯ ಒಂದು ಅಂದಾಜು ಸಿಗಬಹುದೆಂಬ ವಿಷಯ ಪ್ರಚಾರವಾಗತೊಡಗಿತು. ಅವರೆಲ್ಲಾ ಸಿವಿಲ್ ಆಸ್ಪತ್ರೆಯತ್ತ ಧಾವಿಸಿದರು. ಸ್ಕ್ರೀನ್ ಮಾಡಿಸುವುದರಿಂದ ಸಿಲಿಕೋಸಿಸ್‌ನ ಪ್ರಮಾಣ ಗೊತ್ತು ಮಾಡಲು ಸಾಧ್ಯವಾಗುವುದಿಲ್ಲವೆಂಬ ನಿಜ ಸಂಗತಿಯನ್ನು ಸಂಬಂಧಪಟ್ಟವರು ಹೇಳುವ ಗೋಜಿಗೂ ಹೋಗಲಿಲ್ಲ. ಬಂದವರಿಗೆಲ್ಲಾ ಸ್ಕ್ರೀನ್ ಮಾಡಿ, ೪-೫ ರೂಪಾಯಿ ಫೀಜು ತೆಗೆದು ಕೊಂಡರು. ಅವರವರ ಸೇವಾ ಅವಧಿಯನ್ನು ತಿಳಿದುಕೊಂಡು ಅವರಿಗೆ ದೊರಕಬಹುದಾದ ಅಂದಾಜು ಪರಿಹಾರದ ಕನಸಿನಲ್ಲಿ ಕಾರ್ಮಿಕರು ನಲಿದಾಡಿದರು. ವೈದ್ಯಕೀಯ ಕ್ಷೇತ್ರ ಹಾಗೂ ಮನುಕುಲಕ್ಕೆ ವರಪ್ರಸಾದದಂತೆ ಒದಗಿ ಬಂದಿದ್ದ ಒಂದು ಸಾಧನ ಹೇಗೆ ಸ್ವಾರ್ಥ ಸಾಧಕರ ದುರ್ಲಾಭಕ್ಕೊಳಗಾಗಬಹುದು ಎಂಬುದಕ್ಕೆ ಇದೊಂದು ಒಳ್ಳೆಯ ಉದಾಹರಣೆ.

ಮತ್ತೆ ಪೊಲೀಸ್ ಪೇದೆ ಸುಬ್ರಮಣ್ಯಂನ ಪರಿಸ್ಥಿತಿಯತ್ತ ಗಮನ ಹರಿಸೋಣ. ಸ್ಕ್ರೀನಿಂಗ್‌ನಲ್ಲಿ ಸೂಜಿ ಪತ್ತೆಯಾಗದಿದ್ದರೆ ಅವನಲ್ಲಿ ಮುಂದುವರಿಯುತ್ತಿದ್ದ ಕೆಮ್ಮಿಗೆ ಅದು ಕಾರಣವಲ್ಲವೆಂಬ ನಿರ್ಧಾರವಾಯಿತು. ದಿನ ಕಳೆದಂತೆಲ್ಲಾ ಕೆಮ್ಮಿನ ಜೊತೆ ಜ್ವರವೂ ಬೆನ್ನು ಹತ್ತಿತ್ತು. ಡಾ|| ಸ್ವಾಮಿ ಕೊಡುತ್ತಿದ್ದ ಇಂಜಕ್ಷನ್ ಪರಿಣಾಮದಿಂದ ಕಾಯಿಲೆಯ ಕೆಲವು ಚಿಹ್ನೆಗಳು ಕೆಲಕಾಲ ಕಡಿಮೆಯಾದಂತೆ ಕಂಡರೂ ಅವು ಮತ್ತೆ ಮರುಕಳಿಸುತ್ತಲೇ ಇದ್ದವು. ಇತ್ತೀಚಿನ ಆರೇಳು ತಿಂಗಳ ನಂತರ ಕೆಮ್ಮಿನ ಜೊತೆ ರಕ್ತ, ಕೀವು, ಕಫದಲ್ಲಿ ಕಾಣಿಸಿಕೊಂಡವು; ಜೊತೆಗೆ ದುರ್ವಾಸನೆ ಕೂಡ ಸೇರಿಕೊಂಡಿತು. ಮುಂದೆ ವಾಸನೆ ಅವನ ಮನೆಗೆ ಮಾತ್ರ ಸೀಮಿತವಾಗಿರದೆ ಅಕ್ಕಪಕ್ಕದ ಮನೆಯವರೂ ಸಹಿಸಲಾರದಷ್ಟಾಯಿತು. ಅಲ್ಲೆಲ್ಲಾ ಪ್ರಸರಿಸುತ್ತಿದ್ದ ವಾಸನೆ ಹಾಗೂ ಬಡ ಪೇದೆಯ ದುರ್ಗತಿಯನ್ನು ಸಹಿಸಲಾಗದ ಅಕ್ಕಪಕ್ಕದವರೆಲ್ಲಾ ಸೇರಿ ಒಂದು ಸಾಯಂಕಾಲ ನಮ್ಮ ಆಸ್ಪತ್ರೆಗೆ

ದಾಖಲು ಮಾಡಿಸಿದರು. ಆಸ್ಪತ್ರೆಗೆ ಸೇರುವಾಗಲೇ ಅವನ ಪರಿಸ್ಥಿತಿ ವಿಕೋಪಕ್ಕೆ ಹೋಗುವಂತಿತ್ತು. ಆ ದಿನ ಬೆಂಬಲೋಪಚಾರಕ್ಕೆ ಏರ್ಪಾಡು ಮಾಡಿದೆ. ಮರುದಿನ ಎದೆಯ ಎಕ್ಸ್‌ರೇ ಪಟ ತೆಗೆಯುವಂತೆ ಸೂಚಿಸಿದೆ.

ಮಾರನೇ ದಿನ ಅಬ್ದುಲ್ಲಾ ಅವನ ಎಕ್ಸ್‌ರೇ ಪಟವನ್ನು ನನ್ನ ಕೊಠಡಿಗೆ ತಂದು ಎದುರಿಗೆ ಹಿಡಿದ; ನೋಡಿ ಸ್ತಂಭೀಭೂತನಾದೆ. ಎಕ್ಸ್‌ರೇ ಪಟ ತೆಗೆಯುವ ಸಂದರ್ಭದಲ್ಲಿ ರೋಗಿ ಷರಟು ಧರಿಸಿದ್ದನೇ ಎಂದು ವಿಚಾರಿಸಿದೆ. ಯಾವಾಗಲೂ ಬಟ್ಟೆ ಬರೆಗಳನ್ನು ತೆಗೆಸಿಯೇ ಎಕ್ಸ್‌ರೇ ಪಟ ತೆಗೆಯುವ ರೂಢಿಯಂತೆಯೆ ಬಟ್ಟೆ ತೆಗೆಸಿಯೇ ಫೋಟೋ ತೆಗೆದಿರುವುದಾಗಿ ಅಬ್ದುಲ್ಲಾ ಉತ್ತರಿಸಿದ. ಅಷ್ಟೆಲ್ಲಾ ವಿಚಾರಿಸುವುದಕ್ಕೆ ಪ್ರೇರಣೆಯೊಂದು ಎಕ್ಸ್‌ರೇ ಪಟದಲ್ಲಿತ್ತು. ಸುಬ್ರಮಣ್ಯಂನ ಎದೆಯ ಎಡಸ್ತನದ ಮಟ್ಟದಲ್ಲಿ ಇಂಜಕ್ಷನ್ ಸೂಜಿಯ ನೆರಳು ಸ್ಪಷ್ಟವಾಗಿ ಮೂಡಿ ಬಂದಿತ್ತು!

ಎಕ್ಸ್‌ರೇ ಪಟವನ್ನು ಕೈಯಲ್ಲಿ ಹಿಡಿದುಕೊಂಡು ಸುಬ್ರಮಣ್ಯಂ ಇದ್ದ ವಾರ್ಡಿಗೆ ಧಾವಿಸಿದೆ. ಅದನ್ನು ಅವನ ಎದುರು ಹಿಡಿದು ಅದೇನೆಂದು ವಿಚಾರಿಸಿದೆ. ಎಕ್ಸ್‌ರೇ ಪಟದಲ್ಲಿ ಅವನನ್ನೇ ಅಣಕಿಸುವಂತೆ ಇದ್ದ ಸೂಜಿಯ ನೆರಳು ಅವನನ್ನು ಬೆಚ್ಚಿ ಬೀಳಿಸಿತು. ಕೆಟ್ಟ ಕನಸಿನಿಂದ ಹಠಾತ್ತನೆ ಎಚ್ಚೆತ್ತವನಂತೆ ಬಿಕ್ಕಿ ಬಿಕ್ಕಿ ಅಳುವುದಕ್ಕಾರಂಭಿಸಿದ. "ಅಯ್ಯೋ ಕಡವಳೇ" (ದೇವರೆ) ಎಂದು ಎಡೆ ಎದೆ ಬಡಕೊಂಡ ಬಿಕ್ಕುತ್ತಾ ಸುಮಾರು ಎರಡು ವರ್ಷಗಳಿಂದ ಅವನ ನರಕ ಸದೃಶ ಯಾತನೆಯ ಕತೆಯ ಸುರುಳಿ ಬಿಚ್ಚಲಾರಂಭಿಸಿದ... ಡಾ|| ಸ್ವಾಮಿ ಕಿರುನಾಲಿಗೆ ಕತ್ತರಿಸುವ ಸಲುವಾಗಿ ಇಂಜಕ್ಷನ್ ಕೊಡುವ ಪ್ರಯತ್ನ ಶುರು ಮಾಡಿದಾರಭ್ಯದಿಂದ ಜರುಗಿದ ಘಟನೆಗಳ ಚಿತ್ರಣವನ್ನು ನಮ್ಮ ಮುಂದಿಟ್ಟ ತನ್ನ ಅದೃಷ್ಟವನ್ನು ಹಳಿದು ರೋದನವನ್ನು ಮುಂದುವರಿಸಿದ. ವಾಸನೆಯನ್ನು ಸಹಿಸಲಾರದೆ ಅವನ ಕೆಲವರು ಸಂಬಂಧಿಕರು ನನ್ನ ಕೊಠಡಿಗೆ ಬರುವಂತೆ ಹೇಳಿ ಹೊರಬಂದೆ. ಶ್ವಾಸಕೋಶದೊಳಗೆ ಸೂಜಿ ಸೇರಿಕೊಂಡಿರುವುದರಿಂದ ಅವನು ಅಷ್ಟೆಲ್ಲಾ ಯಾತನೆ ಪಡಬೇಕಾಯಿತೆಂದು ಅವರಿಗೆ ತಿಳಿಯ ಹೇಳಿದೆ. ಅವನನ್ನು ಕೂಡಲೇ ವೆಲ್ಲೂರಿನಂಥ ಹಿರಿಯ ಆಸ್ಪತ್ರೆಗೆ ಸಾಗಿಸುವ ಪ್ರಯತ್ನ ತುರ್ತಾಗಿ ಆಗಬೇಕೆಂದು ಒತ್ತಾಯ ಮಾಡಿದೆ. ಆ ಬಗೆಗೆ ಆರ್ಥಿಕವಾಗಿ ಅವರಿಗೆ ಸಾಧ್ಯವಾಗುವುದಿಲ್ಲವೆಂದು ಪರಿತಪಿಸಿದರು; ಪೋಲೀಸ್ ಪೇದೆ ಯಾಗಿದ್ದರಿಂದ ಸ್ಥಳೀಯ ಪೊಲೀಸ್ ವರಿಷ್ಠರಿಗೂ ಪತ್ರ ಬರೆಸಿದೆ. ಅವರು ಎಚ್ಚೆತ್ತು ಕಾರ್ಯನಿರತ ರಾಗುವಷ್ಟರಲ್ಲೇ ಸುಬ್ರಮಣ್ಯಂ ಇಹಲೋಕ ತ್ಯಜಿಸಿದ.

ಮುಂದಿನ ಕೆಲವು ದಿನಗಳು ಪೊಲೀಸ್ ಪೇದೆಗಳು ಗುಂಪು ಗುಂಪಾಗಿ ಡಾ|| ಲಕ್ಷಣ ಸ್ವಾಮಿಯ ಔಷಧಾಲಯಕ್ಕೆ ಮುತ್ತಿಗೆ ಹಾಕುತ್ತಿದ್ದರಂತೆ. ಮೃತ ಸುಬ್ರಮಣ್ಯಂನ ಕುಟುಂಬಕ್ಕೆ ಪರಿಹಾರ ಒದಗಿಸಬೇಕೆಂದು ಒತ್ತಾಯಿಸುತ್ತಿದ್ದರಂತೆ. ಅಂತಿಮವಾಗಿ ಏನಾಯಿತೋ ತಿಳಿಯಲಿಲ್ಲ.

ಕಿರುನಾಲಿಗೆ ಉದ್ದವಾಗಿ ಬೆಳೆದು ಅದನ್ನು ಕತ್ತರಿಸಿ ತೆಗೆಯಬೇಕಾಗುವ ಪ್ರಸಂಗಗಳ ಉಲ್ಲೇಖ ವೈದ್ಯಕೀಯ ಪುಸ್ತಕಗಳಲ್ಲಿದ್ದಂತಿಲ್ಲ. ಅದರಲ್ಲೂ ಡಿಪ್ಲೋಮ ಪಡೆದವರೊಬ್ಬರು ತಮ್ಮ ಖಾಸಗಿ ಕ್ಲಿನಿಕ್‌ನಲ್ಲಿ ಆಪರೇಷನ್ ಮಾಡಿ ಕತ್ತರಿಸುವ ವಿಲಕ್ಷಣಕ್ಕೆ ಏನೆನ್ನಬೇಕೋ. ಅದನ್ನು ಪತ್ತೆ ಮಾಡಲು ಬರೇ ಸ್ಕ್ರೀನಿಂಗ್ ಬಳಸಿದ ಎಕ್ಸ್‌ರೇ ವೈದ್ಯರ ಕಾರ್ಯ ಅವಿವೇಕದ ಪರಮಾವಧಿಯೇ ಸರಿ. ಪ್ರಸ್ತುತ ಜಾರಿಯಲ್ಲಿರುವ ಬಳಕೆದಾರರ ಹಿತರಕ್ಷಣಾ ಕಾನೂನಿನಂಥ ಕಾಯಿದೆ ಆ ಕಾಲದಲ್ಲಿ ಜಾರಿಯಲ್ಲಿರದಿದ್ದು ಅವರ ಸುದೈವ!

ತೀರಾ ಇತ್ತೀಚಿನ (೧೯೯೮) ಅಂತಹದೇ ಒಂದು ಪ್ರಕರಣ ಉಲ್ಲೇಖನೀಯ: ಧಾರವಾಡದ ಹತ್ತಿರದ ಧರ್ಮಸ್ಥಳ ದಂತ ವೈದ್ಯ ಕಾಲೇಜಿನಲ್ಲಿ ವೈದ್ಯರೊಬ್ಬರು ರೋಗಿಯ ಹಲ್ಲು ಕೀಳಬೇಕಾಯಿತು; ನಂತರ ನಿಲ್ಲಿಸಲಾಗದ ರಕ್ತಸ್ರಾವಕ್ಕೆ ಚಿಕಿತ್ಸೆ ನೀಡಲು ಅದೇ ಜಾಗಕ್ಕೆ ಒಂದು ಇಂಜಕ್ಷನ್ ನೀಡುವ ಪ್ರಯತ್ನ ಮಾಡಿದರು. ಸಿರಿಂಜಿನಿಂದ ಜಾರಿದ ಸೂಜಿ ಗಂಟಲಿನೊಳಕ್ಕೆ ಸರಿಯಿತು. ಆ ಬಗೆಗೆ ರೋಗಿ ದೂರಿದರೂ ವೈದ್ಯರು ಮುಂದೇನೂ ಮಾಡಲಿಲ್ಲ ವಂತೆ! ಕೆಲವು ದಿನಗಳ ಯಾತನೆ ಅನುಭವಿಸಿದ ರೋಗಿ ಮತ್ತೆ ಅದೇ ದಂತ ವೈದ್ಯರಲ್ಲಿಗೆ ಹೋದ. ಅವರು ಇನ್ನೊಂದು ಆಸ್ಪತ್ರೆಯಲ್ಲಿ ಎಕ್ಸ್‌ರೇ ಫೋಟೋ ತೆಗೆಸಿದಾಗ, ಗಂಟಲಲ್ಲಿ ಸೂಜಿ ಸಿಕ್ಕಿ ಹಾಕಿಕೊಂಡಿರುವುದು ಪತ್ತೆಯಾಯಿತು. ಅದೇ ಆಸ್ಪತ್ರೆಯಲ್ಲಿ ಅದನ್ನು ಹೊರ ತೆಗೆಯುವ ಪ್ರಯತ್ನ ಮಾಡುತ್ತಿದ್ದಾಗ, ಸೂಜಿ ಜಾರಿ ಜಠರಕ್ಕಿಳಿದು ಬಿಟ್ಟಿತು ಮುಂದೆ ಧಾರವಾಡದ ಸಿವಿಲ್ ಆಸ್ಪತ್ರೆಯಲ್ಲಿ ಉದರಕೋಶವನ್ನು ತೆರೆದು ಜಠರದಿಂದ ಸೂಜಿಯನ್ನು ಹೊರತೆಗೆದರು. ಈ ಎಲ್ಲದರ ಸಲುವಾಗಿ ಅವನು ೨೫ ದಿನಗಳು ಆಸ್ಪತ್ರೆಯಲ್ಲಿ ಕಳೆಯ ಬೇಕಾಯಿತು. ರೋಗಿ ಆ ಸಲುವಾಗಿ ಪರಿಹಾರವನ್ನು ಕೇಳಿದಾಗ ದಂತ ವೈದ್ಯರು ಹಾಗೂ ದಂತ ಆಸ್ಪತ್ರೆಯವರು ನಾನಾ ಸಬೂಬುಗಳನ್ನೊಡ್ಡಿ ನಿರಾಕರಿಸಿದರು. ರೋಗಿ ನ್ಯಾಯಾಲಯದ ಮೆಟ್ಟಿಲು ಹತ್ತಿದ, ನ್ಯಾಯಾಧೀಶರು ಅವನಿಗೆ ವೈದ್ಯರು ಮತ್ತು ಕಾಲೇಜಿನವರು ಒಂದು ಲಕ್ಷದ ಆರು ಸಾವಿರದ ಇಪ್ಪತ್ತು ರೂಪಾಯಿಗಳ ಪರಿಹಾರ ನೀಡಬೇಕೆಂದು ಆಜ್ಞೆ ಮಾಡಿದರು. ವೈದ್ಯಕೀಯ ವಿಜ್ಞಾನ ಮುಂದುವರಿದು, ಗ್ರಾಹಕರ ಹಿತರಕ್ಷಣೆಯ ಕಾನೂನುಗಳಿದ್ದರೂ ಮಾನವ(ದು)ಸ್ವಭಾವ ಬದಲಾಗಲಿಲ್ಲವಲ್ಲಾ! (Report : Deccan Herald 30th July 1999 ಆಧಾರಿತ)

## ಡಿ. ಎಂ. ಓ. ಅವರೊಂದಿಗೆ ಘರ್ಷಣೆ

ಒಂದು ದಿನ ನಾನು ಡಿ. ಎಂ. ಓ. ಮೇಟ್ರನ್ ಮತ್ತಿತರರ ಜೊತೆ ಆಸ್ಪತ್ರೆ ವಿವಿಧ ಭಾಗಗಳ ಪರಿವೀಕ್ಷಣೆ ಮಾಡುತ್ತಾ ಸಾಗುತ್ತಿದ್ದ ಸಂದರ್ಭ. ಡಿ.ಎಂ.ಓ. ಅವರು ಇದ್ದಕ್ಕಿದ್ದಂತೆ ಕೆಲವು ದಿನಗಳ ಹಿಂದೆ ಆಸ್ಪತ್ರೆಯ ಸಾಮಾನು ಸರಂಜಾಮುಗಳ ವಾರ್ಷಿಕ ತನಿಖೆಯ ಸಮಯದಲ್ಲಿ (Annual Stock Verification) ಕೆಲವು ಸಾಮಾನುಗಳು ನಾಪತ್ತೆಯಾಗಿರುವ ವಿಷಯ ಪ್ರಸ್ತಾಪ ಮಾಡಿದರು. ಅವರು ಆ ಬಗೆಗೆ ಮುಂದುವರಿದು ಆರ್.ಎಂ.ಓ. ಅವರು ಅದರಲ್ಲಿ ತಪ್ಪಿತಸ್ಥರಲ್ಲವೆಂಬುದು ನನಗೆ ಗೊತ್ತಿದೆ; ಆದರೆ ಅವರನ್ನು ಪಾರು ಮಾಡುವುದು ಹೇಗೆ ಎಂಬ ಉದ್ಗಾರವೆತ್ತಿದರು. ಅದನ್ನು ಕೇಳಿದಾಕ್ಷಣ ನನ್ನ ಮೈಮೇಲೆ ತಣ್ಣೀರೆರಚಿದಂತಾಯಿತು. ಹಿಂದೆ ಮುಂದೆ ಯೋಚಿಸದೆ ನನಗೆ ತೋಚಿದ್ದನ್ನು ಹೇಳಿಯೇ ಬಿಟ್ಟೆ. "ಅದು ಹೇಗೆ ನಾನು ತಪ್ಪಿತಸ್ಥನಾಗುತ್ತೇನೆ ಸರ್; ಅದರಿಂದ ನನ್ನನ್ನು ಪಾರು ಮಾಡುವುದೆಂದರೇನರ್ಥ? ಹಿಂದಿನ ಆರ್.ಎಂ.ಓ. ಅವರಿಂದ ಆಸ್ಪತ್ರೆಯ ಸಾಮಾನುಗಳ ವಿವರವಾದ ಚಾರ್ಜು ವಹಿಸಿಕೊಳ್ಳುವ ಸಲುವಾಗಿ ೩-೪ ದಿನಗಳು ಮುಂಚಿತವಾಗಿಯೇ ಬಂದಿದ್ದರೂ, ಡಾ|| ವೆಂಕಟೇಶ ನಾಯ್ಡು ಅವರು ಎಲ್ಲಾ ಸಾಮಾನು ಸರಂಜಾಮು ಮುಂತಾದವುಗಳ ಲೆಕ್ಕಪತ್ರಗಳನ್ನು ಸರಿಯಾಗಿ ಇಟ್ಟಿದ್ದಾರೆ; ನೀವು ಆ ಬಗೆಗೆ ಅನುಮಾನ ಪಡುವುದು ಬೇಡ; ಇಲ್ಲಿ ಹಾಜರಾಗಬೇಕಾದ ಕಡೆಯ ದಿನ ಚಾರ್ಜು ವಹಿಸಿಕೊಂಡರೆ ಸಾಕು, ಎಂದು ಹಿತವಚನ ನುಡಿದವರು ನೀವಲ್ಲವೇ" ಎಂದು ನೇರವಾಗಿ ನುಡಿದು ಬಿಟ್ಟೆ.

ಸದಾ ಸೌಮ್ಯ ಸ್ವಭಾವದ ಹಾಗೂ ವಿನಯಶೀಲನಾಗಿ ನಡೆದುಕೊಳ್ಳುತ್ತಿದ್ದ ನನ್ನಿಂದ ಅಂತಹ ಉತ್ತರ ನಿರೀಕ್ಷಿಸದ ಅವರು ದಂಗಾಗಿ ಬಿಟ್ಟರು. ಕೆಲ ಸಮಯ ಎಲ್ಲರ ಮಾತುಗಳೂ ನಿಂತು ಹೋದವು. ಸ್ವಲ್ಪ ಸಮಯದಲ್ಲೇ ಮೇಟ್ರನ್ ಮೌನವನ್ನು ಮುರಿದು ಮಾತಾಡಿದರು. "ಕಳೆದ ವರ್ಷ ದಾಸ್ತಾನುಗಳ ತನಿಖೆ ನಡೆದಾಗಲೂ ಈ ಸಾಮಾನುಗಳು ಕಡಿಮೆ ಇದ್ದವು ಸಾರ್; ಅದನ್ನು ತಮ್ಮ ಗಮನಕ್ಕೂ ತಂದಿದ್ದೆವು; ಅಲ್ಲೆಲ್ಲೋ ಇರಬೇಕು; ಮತ್ತೊಂದು ಸಾರಿ ಹುಡುಕಿ ನೋಡಿ ಎಂದಿದ್ದಿರಿ" ಎಂದು ನಿಜ ಸಂಗತಿಯನ್ನು ಬಯಲು ಮಾಡಿದರು. ನನ್ನ ನಿಲುವಿಗೆ ಇನ್ನೂ ಹೆಚ್ಚಿನ ಪುಷ್ಟಿ ದೊರೆತಂತಾಯಿತು. ಅದರಿಂದ ಆವೇಶಭರಿತನಾಗಿ "ಈ ಪ್ರಕರಣದಲ್ಲಿ ನಾನು ಮುಳುಗುವಂತಾದರೆ ಜೊತೆಗೆ ಇನ್ನೂ ಕೆಲವರನ್ನು ಹಿಡಿದುಕೊಂಡೇ ಮುಳುಗುತ್ತೇನೆ" ಎಂದು ಯಾರ ದಾಕ್ಷಿಣ್ಯವೂ ಇಲ್ಲದೆ ಹೇಳಿಬಿಟ್ಟೆ. ಈ ಪ್ರತ್ಯುತ್ತರ ಅವರನ್ನು ಚಿಂತೆಗೀಡು ಮಾಡಿರಬೇಕು. ಮುಂದೇನೂ ಮಾತಾಡದೆ ವೀಕ್ಷಣೆ ಮುಗಿಯಿತು.

ಮುಂದಿನ ದಿನಗಳಲ್ಲಿ ಡಿ.ಎಂ.ಓ. ನನ್ನೊಡನೆ ಸಿಡುಕಿನಿಂದ ವರ್ತಿಸುವುದು ಶುರುವಾಯಿತು. ಬಹುಶಃ ಸೇಡು ತೀರಿಸಿಕೊಳ್ಳಲು ಸಮಯ ಕಾಯುತ್ತಿದ್ದರೆನಿಸುತ್ತದೆ. ನಮ್ಮ ಪ್ರೊಬೇಷನರುಗಳ ಪಟ್ಟಿ ಅದು ಹೇಗೆ ದೊರೆಯಿತೊ, ಯಾರಾದರೂ ಕೊಟ್ಟರೋ ತಿಳಿಯದು. ಸುಮಾರು ಒಂದು ವರ್ಷದ ಹಿಂದೆ ನಮ್ಮ ಆಸ್ಪತ್ರೆಗೆ ಡಾ॥ ರಂಗೋಜಿ ಎಂಬ ಅಸಿಸ್ಟೆಂಟ್ ಸರ್ಜನ್ ಬಂದಿದ್ದರು. ಜ್ಯೇಷ್ಠತಾ ಪಟ್ಟಿಯಲ್ಲಿ ಅವರ ಹೆಸರು ನನ್ನದಕ್ಕಿಂತ ಹಲವು ಸ್ಥಾನಗಳ ಮೇಲಿತ್ತು. ಬಹುಶಃ ಅದನ್ನು ಗಮನಿಸಿದವರು ನನ್ನ ಮೇಲೆ ಸೇಡು ತೀರಿಸಿಕೊಳ್ಳುವುದಕ್ಕೊಂದು ಕಾರಣ ಸಿಕ್ಕಿದಂತಾಯಿತು.

ಮೆಡಿಕಲ್ ಕಾಲೇಜಿನಲ್ಲಿ ಡಾ॥ ರಂಗೋಜಿ ನನಗಿಂತಲೂ ಎರಡು ತರಗತಿಗಳು ಹಿಂದಿದ್ದವರು. ಆಗಿನಿಂದಲೂ ನಮ್ಮಿಬ್ಬರ ಸಹಯೋಗ ಉತ್ತಮವಾಗಿಯೇ ಇತ್ತು. ನಮ್ಮ ಆಸ್ಪತ್ರೆಗೆ ಬಂದಾಗಲೂ ಹಿಂದಿನ ಗೌರವಾದರಗಳಿಂದಲೇ ವರ್ತಿಸುತ್ತಿದ್ದರು. ಪಟ್ಟಿಯಲ್ಲಿನ ತಮ್ಮ 'ಜ್ಯೇಷ್ಠತೆಯ' ಬಗೆಗೆ ಪ್ರಸ್ತಾಪ ಮಾಡಲೂ ಇಲ್ಲ. ಡಿ.ಎಂ.ಓ. ತಿಂಗಳುಗಟ್ಟಲೆ ರಜೆ ಹೋದಾಗಲೂ ನನ್ನನ್ನು ಇನ್‌ಚಾರ್ಜ್ ಡಿ.ಎಂ.ಓ. ಆಗಿ ನೇಮಕ ಮಾಡಿದಾಗಲೂ ತಕರಾರು ಮಾಡಿರಲಿಲ್ಲ. ಇತರ ಅಸಿಸ್ಟೆಂಟ್ ಸರ್ಜನ್‌ರಂತೆ ಅವರ ಕಾರ್ಯವಿಧಾನಗಳನ್ನು ನಾನೇ ನಿರ್ಧರಿಸುತ್ತಿದ್ದರೂ ಅವರು ಯಾವತ್ತೂ ಅವಿಧೇಯರಂತೆ ವರ್ತಿಸಿರಲಿಲ್ಲ.

ಡಿ. ಎಂ. ಓ. ಮತ್ತು ನನ್ನ ನಡುವೆ ಮಾತಿನ ಚಕಮಕಿ ಜರುಗಿದ ಕೆಲವೇ ದಿನಗಳಲ್ಲಿ ಅವರು ಕೆಲವು ದಿನ ರಜೆಯಲ್ಲಿ ಹೋಗಬೇಕಾಯಿತು. ಈ ಸಾರಿ ಅವರ ಪರವಾಗಿ ಡಾ॥ ರಂಗೋಜಿ ಬದಲಿ ಡಿ.ಎಂ.ಓ. ಆಗಿರುತ್ತಾರೆಂದು ಆದೇಶ ಹೊರಡಿಸಿದರು. ವಿಷಯ ತಿಳಿದ ಮೇಲೆ ಡಿ.ಎಂ.ಓ. ಅವರಿಗೆ ಲಿಖಿತ ಮೂಲಕ ನನ್ನ ಆಕ್ಷೇಪವನ್ನು ವ್ಯಕ್ತಪಡಿಸಿದೆ. ಜ್ಯೇಷ್ಠತಾ ಪಟ್ಟಿಯಲ್ಲಿ ಡಾ॥ ರಂಗೋಜಿಯ ಹೆಸರು ನನ್ನದಕ್ಕಿಂತಲೂ ಮೇಲಿರುವುದರಿಂದ ಹಾಗೆ ಮಾಡಲಾಗಿದೆ ಎಂದು ಉತ್ತರಿಸಿದರು. ಹಾಗಿದ್ದರೆ ಅವರು ಇಲ್ಲಿ ಕೆಲಸಕ್ಕೆ ಹಾಜರಾದಾಗಲೇ ಆ ಬಗೆಗೆ ನಿರ್ಧಾರ ಮಾಡಬೇಕಾಗಿತ್ತು; ಅವರೀಗ ಸುಮಾರು ಒಂದು ವರ್ಷ ನನ್ನ ಕೆಳಗೆ ಕಾರ್ಯ ನಿರ್ವಹಿಸಿದ ನಂತರ ಅವರನ್ನು ನನ್ನ ಮೇಲಿನ ಪದವಿಯಲ್ಲಿ ನೇಮಿಸುವುದರಿಂದ ನನಗೆ ಮುಜುಗರವಾಗುತ್ತದೆ; ಆಸ್ಪತ್ರೆಗೆ ಬರುವ ಸಾರ್ವಜನಿಕರು ಏನೆಂದು ತಿಳಿದುಕೊಳ್ಳುತ್ತಾರೆಂದು ಹೇಳಿಕೊಂಡೆ. ಅದಾವ ತರ್ಕಗಳಿಗೂ ಅವರು ಒಪ್ಪಲಿಲ್ಲ. ಡಾ॥ ರಂಗೋಜಿಯವರನ್ನು ಬದಲಿ ಡಿ.ಎಂ.ಓ. ಆಗಿ ಆದೇಶ ನೀಡಿ ರಜೆಯ ಮೇಲೆ ಹೋದರು.

ಅಷ್ಟಕ್ಕೇ ನಾನು ಸುಮ್ಮನಾಗಲಿಲ್ಲ. ನಮ್ಮ ಇಲಾಖಾ ನಿರ್ದೇಶಕರಿಗೆ ನನ್ನ ಅಹವಾಲುಗಳನ್ನು ನಿವೇದಿಸಿ ಪತ್ರ ಬರೆದು ಡಿ.ಎಂ.ಓ. ಅವರ ಮೂಲಕವೇ ಕಳುಹಿಸಿದೆ. ನಿರ್ದೇಶಕರು ನಾನು ಹೇಳುವುದರಲ್ಲಿ ನ್ಯಾಯವಿರುವಂತಿದೆ. ಅವರಿಬ್ಬರ ಜ್ಯೇಷ್ಠತೆಯು ಬಗೆಗೆ ಡಾ॥ ರಂಗೋಜಿಯವರು ಕೆಲಸಕ್ಕೆ ಹಾಜರಾದ ಸಮಯದಲ್ಲೇ ನಿರ್ಧರಿಸಬೇಕಿತ್ತು; ಆಸ್ಪತ್ರೆಯ ಆಡಳಿತ ವ್ಯವಸ್ಥೆಯಲ್ಲಿ ಅನಾವಶ್ಯಕ ಸಮಸ್ಯೆಗಳನ್ನು ಸೃಷ್ಟಿಸುವ ಬದಲು ಬೇರೊಂದು ವ್ಯವಸ್ಥೆಯನ್ನು ಸೂಚಿಸಿ ಆದೇಶ ಕಳುಹಿಸಿದರು. ಸ್ವತಂತ್ರ ಆಡಳಿತದ ಹೆರಿಗೆ ಆಸ್ಪತ್ರೆಯ ಮಹಿಳಾ ವೈದ್ಯಾಧಿಕಾರಿಗಳು ಸೇವಾ ಹಿರಿತನದಲ್ಲಿ ನಮ್ಮಿಬ್ಬರಿಗೂ ಮೇಲಿನ ಸ್ಥಾನದಲ್ಲಿದ್ದಾರೆ; ಡಿ.ಎಂ.ಓ. ಅವರು ರಜೆ ಹೋಗುವ ಸಂದರ್ಭಗಳಲ್ಲಿ ಅವರನ್ನು ಬದಲಿ ಡಿ.ಎಂ.ಓ. ಆಗಿರುವಂತೆ ಏರ್ಪಾಡು ಮಾಡತಕ್ಕದೆಂದು ಪರ್ಯಾಯ ಸೂತ್ರವೊಂದನ್ನು ಸೂಚಿಸಿದ್ದರು. ಅದರಂತೆ ನಾನು ಪ್ರತಿಪಾದಿಸಿದ ವಾದವನ್ನು ನಿರ್ದೇಶಕರು ಎತ್ತಿ ಹಿಡಿದಂತಾಗಿತ್ತು; ಮುಂದೇನೂ ತಕರಾರೆತ್ತದೆ ನನ್ನ ಕೆಲಸ ಕಾರ್ಯಗಳಲ್ಲಿ ಮಗ್ನನಾದ.

ಮುಂದಿನ ಸಾರಿ ಡಿ. ಎಂ. ಓ ರಜೆ ಹೋದಾಗ, ಹೆರಿಗೆ ಆಸ್ಪತ್ರೆಯ ಮಹಿಳಾ ವೈದ್ಯಾಧಿಕಾರಿಗಳು ಕಾರ್ಯನಿರತರಾಗಿದ್ದರೂ ಲೆಕ್ಕಿಸದೆ, ನಿರ್ದೇಶಕರ ಆದೇಶಕ್ಕೆ ವ್ಯತಿರಿಕ್ತವಾಗಿ ಡಾ॥ ರಂಗೋಜಿಯವರನ್ನೇ ಬದಲಿ ಡಿ.ಎಂ.ಓ. ಆಗಿ ನೇಮಿಸಿ ಹೊರಟು ಹೋದರು! ಮುಂದೇನು ಮಾಡಬೇಕೆಂಬುದು ಕೆಲ ಸಮಯ ಹೊಳೆಯಲಿಲ್ಲ; ಒಂದೆರಡು ದಿನ ಯೋಚನಾಕ್ರಾಂತನಾಗಿದ್ದೆ. ಈ ಜ್ಯೇಷ್ಠತೆಯ ಸಮಸ್ಯೆ ಮುಂದೆಯೂ ಆಗಾಗ್ಗೆ ನನ್ನನ್ನು ಪೇಚಿಗೆ ಸಿಲುಕಿಸುತ್ತಲೇ ಇರುತ್ತದೆಂಬ ಜ್ಞಾನೋದಯವಾದಂತಾಯಿತು. ಆ ಬಗೆಗೆ ಅಂತಿಮ ನಿರ್ಧಾರ ತೆಗೆದುಕೊಳ್ಳುವುದಕ್ಕೆ ಇದೇ ಸರಿಯಾದ ಸಮಯವೆಂಬ ನಿರ್ಧಾರಕ್ಕೆ ಬಂದೆ. ಅಂದರೆ ಕೆಲಸಕ್ಕೆ ರಾಜೀನಾಮೆ ನೀಡುವುದೇ ಸರಿಯಾದ ಮಾರ್ಗವೆನಿಸಿತು. ಅಂತಹ ನಿರ್ಧಾರದ ಬಗೆಗೆ ಪತ್ನಿಯೊಡನೆಯೂ ಚರ್ಚಿಸಿದೆ. ಆಕೆಯೂ ಸಮ್ಮತಿಸಿದಳು. ಪ್ರೊಬೇಷನರಿ ಹುದ್ದೆಯನ್ನು ಪಡೆದುಕೊಳ್ಳುವಲ್ಲಿ ನಾನು ಪಟ್ಟ ಪಾಡನ್ನು ನೆನೆಸಿಕೊಂಡರೆ, ಎರಡೇ ವರ್ಷಗಳಲ್ಲಿ ರಾಜೀನಾಮೆ ನೀಡುವುದು ಅಷ್ಟೇನೂ ಸುಲಭದ ನಿರ್ಧಾರವಾಗಿರಲಿಲ್ಲ. ಆದರೆ ಅದೊಂದು ನನ್ನ ಸ್ವಾಭಿಮಾನದ ವಿಷಯವಾಗಿತ್ತು.

## ರಾಜೀನಾಮೆ ನೀಡಿದೆ!

ಡಿ.ಎಂ.ಓ. ರಜೆಯಿಂದ ಹಿಂದಿರುಗಿದ ಕೂಡಲೇ ನನ್ನ ರಾಜೀನಾಮೆ ಪತ್ರವನ್ನು ನಿರ್ದೇಶಕರಿಗೆ, ಅವರ ಮೂಲಕವೇ ಸಲ್ಲಿಸಿದೆ. ಡಿ.ಎಂ.ಓ ಅವರು ರಜೆಯಲ್ಲಿ ಹೋದಾಗ ಯಾವ ರೀತಿಯ ವ್ಯವಸ್ಥೆ ಮಾಡಬೇಕೆಂದು ನಿರ್ದೇಶಕರು ನೀಡಿದ ಆದೇಶವನ್ನು ಧಿಕ್ಕರಿಸಿ, ನಿರಂಕುಶ ಪ್ರವೃತ್ತಿಯಿಂದ ವರ್ತಿಸುತ್ತಿರುವುದನ್ನು ಅವರ ಗಮನಕ್ಕೆ ತಂದಿದ್ದೆ. ಅಂತಹ ಪರಿಸ್ಥಿತಿಯಲ್ಲಿ ನಾನು ಕಾರ್ಯನಿರ್ವಹಿಸುವುದಕ್ಕಾಗುತ್ತಿಲ್ಲ, ಅದರಿಂದ ರಾಜೀನಾಮೆಯನ್ನು ಸ್ವೀಕರಿಸಲು ಅಗತ್ಯವಾದ ಮೂರು ತಿಂಗಳ ಗಡುವಿನ ನಂತರ ನನ್ನನ್ನು ಕೆಲಸದಿಂದ ಬಿಡುಗಡೆ ಮಾಡಬೇಕೆಂದು ವಿನಂತಿಸಿ ಕೊಂಡಿದ್ದೆ.

ನಾನು ರಾಜೀನಾಮೆ ಪತ್ರ ನೀಡಿರುವುದನ್ನು ಡಿ.ಎಂ.ಓ. ಮೂರು ದಿನಗಳಾದರೂ ಬಹಿರಂಗಪಡಿಸಲಿಲ್ಲ. ನಮ್ಮ ಮನೆಗೆ ಅವರ ಪತ್ನಿಯನ್ನು (ಎಲ್.ಎಂ.ಪಿ. ಡಿಪ್ಲೋಮಾ ವೈದ್ಯೆಯಾದ ಅವರು ನಮ್ಮ ಆಸ್ಪತ್ರೆಯಲ್ಲೇ ಕಾರ್ಯ ನಿರ್ವಹಿಸುತ್ತಿದ್ದರು) ಕಳುಹಿಸಿ ನನ್ನ

ಶ್ರೀಮತಿಯ ಮೂಲಕ ಮನಪರಿವರ್ತನೆಗೆ ಪ್ರಯತ್ನಿಸಿದರು. ಆಕೆಯೂ ನಮ್ಮ ನಿಲುವಿನಿಂದ ಹಿಂಜರಿಯಲು ನಿರಾಕರಿಸಿದಳು. ಮುಂದೆ ಸುದ್ದಿ ಬಹಿರಂಗವಾಯಿತು. ಕಾಲ ಬದಲಾಗುತ್ತಿದೆ; ಸಿಂಹವೇ ಬಲೆಗೆ ಬೀಳುವಂತಾಗಿದೆ ಎಂದು ಡಿ.ಎಂ.ಓ. ಅವರೇ ಉದ್ಗರಿಸಲಾರಂಭಿಸಿದರಂತೆ. (ತಮ್ಮನ್ನು 'ಸಿಂಹ' ಎಂದು ಒಂದೊಂದು ಸಾರಿ ಬಡಾಯಿ ಕೊಚ್ಚಿಕೊಳ್ಳುತ್ತಿದ್ದುದುಂಟು!) ಸುದ್ದಿ ತಿಳಿದ ಆಸ್ಪತ್ರೆ ಸಿಬ್ಬಂದಿ ವರ್ಗದವರೆಲ್ಲಾ ದಂಗು ಬಡಿದಂತಾದರು. ಯಾರ ಹಿತವಚನ ಅಥವಾ ಒತ್ತಾಯಗಳಿಗೂ ನಾನು ಮಣಿಯಲಿಲ್ಲ. ಅದರಿಂದಾಗಿ ನನ್ನ ರಾಜೀನಾಮೆಯ ಪತ್ರವನ್ನು ಇಲಾಖಾ ನಿರ್ದೇಶಕರಿಗೆ ರವಾನಿಸುವುದು ಅನಿವಾರ್ಯವಾಯಿತು.

ಮುಂದಿನ ಎರಡು ತಿಂಗಳು ಈ ವಿಚಾರದಲ್ಲಿ ಯಾವುದೇ ನಿರ್ಧಾರವಾಗಲಿಲ್ಲ. ಈ ನಡುವೆ ಮೊದಲೇ ನಿರ್ಧಾರವಾದಂತೆ ಕೋಲಾರದ ಹತ್ತಿರದ ಒಂದು ಪ್ರಾಥಮಿಕ ಆರೋಗ್ಯ ಕೇಂದ್ರಕ್ಕೆ 'ಹೆಲ್ತ್ ಟ್ರೈನಿಂಗ್'ಗಾಗಿ ಹೋಗಬೇಕಿತ್ತು. ರಾಜೀನಾಮೆ ಅಂಗೀಕಾರವಾಗುವುದಾದರೆ ಅಂತಹ ತರಬೇತಿ ನನಗಾವ ಪ್ರಯೋಜನಕ್ಕೂ ಬರುತ್ತಿರಲಿಲ್ಲ. ಅದರಿಂದ ನನ್ನ ರಾಜೀನಾಮೆಯ ಬಗೆಗೆ ಯಾವುದಾದರೊಂದು ನಿರ್ಧಾರ ಮಾಡಬೇಕೆಂದು ನಿರ್ದೇಶಕರಿಗೆ ವಿನಂತಿಸಿ ಪತ್ರ ಬರೆದೆ. ಬಹುಶಃ ಈ ಎಲ್ಲಾ ವಿಚಾರಗಳನ್ನು ಗಮನಿಸುತ್ತಿದ್ದ ನಿರ್ದೇಶಕ ಡಾ|| ವಿ. ಆರ್. ನಾಯ್ಡು ಅವರು ಪತ್ರ ಬರೆದು ನಾನು ಬೆಂಗಳೂರಿನ ಅವರ ಕಚೇರಿಯಲ್ಲಿ ಭೇಟಿಯಾಗಬೇಕೆಂದು, ದಿನ, ಸಮಯಗಳನ್ನು ಸೂಚಿಸಿದರು.

ಡಾ|| ವಿ. ಆರ್. ನಾಯ್ಡು ಅವರು ನಾನು ಮೆಡಿಕಲ್ ಕಾಲೇಜಿನಲ್ಲಿ ಅಭ್ಯಾಸ ಮಾಡುತ್ತಿದ್ದಾಗ ಪೆಥಾಲಜಿ ವಿಭಾಗದಲ್ಲಿ (ರೋಗಶಾಸ್ತ್ರ) ಪ್ರಾಧ್ಯಾಪಕರಾಗಿದ್ದರು. ವಿಷಯ ಪ್ರಾವೀಣ್ಯತೆಯಲ್ಲಿ ಅಂತರರಾಷ್ಟ್ರೀಯ ಖ್ಯಾತಿ ಗಳಿಸಿದವರು. ನಿಗದಿತ ದಿನ ಅವರ ಕಚೇರಿಯಲ್ಲಿ ಭೇಟಿ ಮಾಡಿದೆ. ನನ್ನ ವಿಷಯದಲ್ಲಿ ಉಂಟಾದ ವಿವಾದದ ಸಂಪೂರ್ಣ ಅರಿವು ಅವರಿಗಿದ್ದಂತೆ ಇತ್ತು. ಅಂತಹ ಸಣ್ಣಪುಟ್ಟ ವಿಷಯಗಳಿಗೆ ಪ್ರಾಮುಖ್ಯತೆ ಕೊಟ್ಟು ಕೆಲಸಕ್ಕೆ ರಾಜೀನಾಮೆ ಕೊಡುವುದು ಸರಿಯಾದ ಮಾರ್ಗವಲ್ಲವೆಂದು ಹಿತವಚನ ನುಡಿದರು. ಕೆ.ಜಿ.ಎಫ್. ಆಸ್ಪತ್ರೆಯಲ್ಲಿದ್ದುಕೊಂಡು ಕಾರ್ಯ ನಿರ್ವಹಿಸುವುದು ಮುಜುಗರವಾಗುತ್ತದಾದರೆ, ಬೇರೊಂದು ದೊಡ್ಡ ಆಸ್ಪತ್ರೆಗೆ ವರ್ಗ ಮಾಡುವ ಭರವಸೆ ಇತ್ತರು. ಅದರಿಂದ ಅವರ ಎದುರೇ ಆ ಕ್ಷಣದಲ್ಲೇ ರಾಜೀನಾಮೆಯನ್ನು ಹಿಂದೆ ತೆಗೆದುಕೊಳ್ಳುವ ಪತ್ರ ಬರೆದು ಕೊಡಬೇಕೆಂದು ಆಗ್ರಹ ಪಡಿಸಿದರು. ಗುಮಾಸ್ತರಿಗೆ ಹೇಳಿ ಒಂದು ಕಾಗದದ ಹಾಳೆಯನ್ನು ನನ್ನ ಎದುರಿಗೆ ತಂದು ಇರಿಸಿದರು. ನನ್ನ ಬಗೆಗೆ ಅಷ್ಟೊಂದು ಕಾಳಜಿ ವಹಿಸುತ್ತಿರುವ ಇಲಾಖಾ ನಿರ್ದೇಶಕರ ಹಿತವಚನವನ್ನು ತಿರಸ್ಕರಿಸುವುದು ಸರಿಯಾದ ಮಾರ್ಗವಲ್ಲವೆನಿಸಿತು. ಅದರಂತೆ ಅವರೆದುರೇ ರಾಜೀನಾಮೆ ಪತ್ರವನ್ನು ಹಿಂದೆ ತೆಗೆದುಕೊಳ್ಳುವ ಪತ್ರ ಬರೆದುಕೊಟ್ಟೆ. ಕೆಲವು ತಿಂಗಳುಗಳಿಂದ ಇದ್ದ ಅನಿಶ್ಚಿತ ಪರಿಸ್ಥಿತಿ ಅಂದಿಗೆ ಕೊನೆಗೊಂಡಂತಾಯಿತು. ಕೆ.ಜಿ.ಎಫ್.ಗೆ ಹಿಂದಿರುಗಿ ಎಂದಿನಂತೆ ಕೆಲಸ ಕಾರ್ಯಗಳಲ್ಲಿ ತೊಡಗಿಸಿಕೊಂಡೆ. ಮುಂದಿನ ಮೂರ್ನಾಲ್ಕು ತಿಂಗಳಲ್ಲೇ ಮೈಸೂರಿನ ಕೃಷ್ಣ ರಾಜೇಂದ್ರ (ಕೆ. ಆರ್.) ಆಸ್ಪತ್ರೆಗೆ ವರ್ಗ ಮಾಡಿದ ಆದೇಶ ಬಂದಿತು.

## ಡಿ. ಎಂ. ಓ. ವಿರುದ್ಧ ದೂರು!

ತೀವ್ರ ರೀತಿಯ ಉದರಬೇನೆಯಿಂದ ನರಳುತ್ತಿದ್ದ ವಯೋವೃದ್ಧ ರೋಗಿಯೊಬ್ಬರನ್ನು ನನ್ನ ಪರಿಚಿತ ಖಾಸಗಿ ವೈದ್ಯ ಡಾ|| ಹನುಮಪ್ಪ ಒಂದು ಸಾಯಂಕಾಲ ಕಳುಹಿಸಿದರು. ಅವರನ್ನು

ಪರೀಕ್ಷಿಸಿ ಅಂತಹ ಗಂಭೀರ ಸಮಸ್ಯೆ ಏನೂ ಇಲ್ಲವೆಂದು ನಿರ್ಧರಿಸಿ ವಾರ್ಡಿಗೆ ದಾಖಲು ಮಾಡಿದೆ. ಸೂಕ್ತ ಬೆಂಬಲೋಪಚಾರ ವಿಧಾನಗಳನ್ನು ಅಳವಡಿಸಿದೆ. ಮರುದಿನ ವಾರ್ಡಿನ ವೀಕ್ಷಣೆಗೆ ಬಂದ ಡಿ.ಎಂ.ಓ., ಅವರನ್ನು ಪರೀಕ್ಷಿಸತೊಡಗಿದರು. ರೋಗಿಯು ಮುಖವನ್ನು ಸ್ವಲ್ಪ ಎಡ ಪಕ್ಕಕ್ಕೆ ತಿರುಗಿಸುವಂತೆ ಒಂದೆರಡು ಸಾರಿ ಹೇಳಿದರು. ವಯಸ್ಸಾಗಿ, ಕಿವಿಯೂ ಮಂದವಾಗಿದ್ದರಿಂದ ಅವರು ಕೂಡಲೇ ಸ್ಪಂದಿಸಲಿಲ್ಲ. ಡಿ.ಎಂ.ಓ ಸಾಹೇಬರಿಗೆ ಕೋಪ ಉಕ್ಕಿ ಬಂದಿತು. ಕೂಡಲೇ ರೋಗಿಯ ಬಲಕೆನ್ನೆಗೆ ಪಟಾರನೇ ಬಾರಿಸಿದರು. ವಾರ್ಡಿನ ಬಾಗಿಲಲ್ಲೇ ವೀಕ್ಷಿಸುತ್ತಿದ್ದ ಅವರ ಮಗನಿಗೆ ಕೋಪ ಉಕ್ಕೇರಿ ಬಂದಿರಬೇಕು. ಅವರು ವಾರ್ಡಿನೊಳಗೆ ನುಗ್ಗಿ ನಾವಿದ್ದ ಕಡೆಗೆ ಧಾವಿಸುವುದರಲ್ಲಿದ್ದರು. ಕೈ ಸನ್ನೆಯಿಂದ ಅವರು ಮುಂದುವರಿಯದೇ ಅಲ್ಲೇ ಇರಬೇಕೆಂದು ಸೂಚಿಸಿದೆ. ಡಿ.ಎಂ.ಓ. ಅವರು ವಾರ್ಡಿನಿಂದ ಹೊರಬರುತ್ತಲೇ ಅವರು ಮತ್ತೆ ಹಿಂಬಾಲಿಸಿ ಬರತೊಡಗಿದರು. ನಾನೇ ಅವರತ್ತ ಹೋಗಿ ಶಾಂತಿಯಿಂದ ಇರಬೇಕೆಂದೂ, ಅನಂತರ ನಾನು ಅವರ ಜೊತೆ ಮಾತಾಡುವುದಾಗಿ ಹೇಳಿ ಸಮಾಧಾನ ಪಡಿಸಿದೆ. ಆಸ್ಪತ್ರೆಯ ವೀಕ್ಷಣೆ ಮುಗಿದ ನಂತರ ಡಿ.ಎಂ.ಓ. ಜೈಲಿನ ಭೇಟಿಗಾಗಿ ಹೊರಟು ಹೋದರು.

ರೋಗಿಯ ಕುಟುಂಬದವರು ಅಲ್ಲಿ ದೊಡ್ಡ ಗುತ್ತಿಗೆದಾರರಲ್ಲೊಬ್ಬರಾಗಿದ್ದರು. ವಯಸ್ಸಾದ ತಂದೆಯನ್ನು ತುಂಬಾ ಗೌರವಾದರಗಳಿಂದ ನೋಡಿಕೊಳ್ಳುತ್ತಿದ್ದವರು. ನಾನು ಕೊಠಡಿಗೆ ಹಿಂದಿರುಗುತ್ತಿರುವಂತೆಯೇ ಅವರ ಮಗ ಮತ್ತಷ್ಟು ಜನರ ಸಹಿತ ಅಲ್ಲಿಗೆ ಬಂದರು. ಅವರು ತಮ್ಮ ತಂದೆಯನ್ನು ದೇವರ ಸಮಾನರಂತೆ ನೋಡಿಕೊಳ್ಳುತ್ತಿರುವುದಾಗಿಯೂ, ಕಾಯಿಲೆಯಿಂದ ನರಳುತ್ತಿದ್ದ ಅವರಿಗೆ ಒಳ್ಳೆಯ ಚಿಕಿತ್ಸೆಗಾಗಿ ಕರೆದುಕೊಂಡು ಬಂದಿದ್ದರೆಂತಲೂ, ಆಸ್ಪತ್ರೆಯ ಮುಖ್ಯಸ್ಥರಾದ ಉನ್ನತ ಅಧಿಕಾರಿ ಹಾಗೂ ಹಿರಿಯ ವೈದ್ಯರೆನಿಸಿಕೊಂಡವರು ಅವರಿಗೆ ಕಪಾಳಮೋಕ್ಷ ಮಾಡುವುದೆಂದರೇನು? ವಾರ್ಡಿನಿಂದ ಹೊರಬರುತ್ತಲೇ ಅವರಿಗೇ ಕಪಾಳಮೋಕ್ಷ ಹಿಂದಿರುಗಿಸಬೇಕೆಂದಿದ್ದ ನನ್ನನ್ನು ನೋಡಿ ಅವರ ಕೋಪವನ್ನು ತಡೆ ಹಿಡಿಯ ಬೇಕಾಯಿತಂತೆ. ಈ ದಿನ ಅವರ ಕಡೆಯವರು ಮನೆ ನುಗ್ಗಿ ಡಿ.ಎಂ.ಓ. ಅವರ ಮೇಲೆ ಸೇಡು ತೀರಿಸದೇ ಬಿಡುವುದಿಲ್ಲ ಎಂದು ಗಡುಸಾಗಿಯೇ ಮಾತನಾಡಿದರು. ನಾನೆಷ್ಟು ಸಮಾಧಾನಕರ ಮಾತುಗಳನ್ನಾಡಿದರೂ ಅವರು ಕೇಳುವ ಸ್ಥಿತಿಯಲ್ಲಿರಲಿಲ್ಲ. ಕೂಡಲೇ ರೋಗಿಯನ್ನು ಮೊದಲು ಆಸ್ಪತ್ರೆಗೆ ಸೇರಿಸಿಕೊಳ್ಳಲು ಕಳುಹಿಸಿದ ಡಾ|| ಹನುಮಪ್ಪನವರನ್ನು ಬರಹೇಳಿ ಕರೆಸಿಕೊಂಡೆ. ಅವರೂ ಶ್ರಮಪಟ್ಟು ರೋಗಿಯ ಮಗ ಮತ್ತು ಅವರ ಕಡೆಯವರನ್ನು ಸಮಾಧಾನ ಸ್ಥಿತಿಗೆ ತಂದರು. ಅಷ್ಟೆಲ್ಲಾ ನಡೆದ ಮೇಲೆ ಅವರ ತಂದೆಗೆ ನಮ್ಮ ಆಸ್ಪತ್ರೆಯಲ್ಲಿ ಚಿಕಿತ್ಸೆಯನ್ನು ಮುಂದುವರಿಸಲು ಇಷ್ಟಪಡದೆ ಬಿಡುಗಡೆ ಮಾಡಿಸಿ ಬೆಂಗಳೂರಿಗೆ ಕರೆದುಕೊಂಡು ಹೋದರು.

ಅವರ ಕಡೆಯವರು ಅಷ್ಟಕ್ಕೇ ಸುಮ್ಮನಾಗಲೂ ಇಲ್ಲ. ಅಂದೇ ಪೊಲೀಸ್ ಸೂಪರಿಂಟೆಂಡೆಂಟ್, ಮ್ಯಾಜಿಸ್ಟ್ರೇಟ್ ಮುಂತಾದವರಿಗೂ ದೂರು ಸಲ್ಲಿಸಿದರಂತೆ. ಸಾಯಂಕಾಲ ಈ ಅಧಿಕಾರಿಗಳೆಲ್ಲಾ ಎಲ್ಲೋ ಒಂದೆಡೆ ಸೇರಿದಾಗ ಈ ವಿಷಯ ಪ್ರಸ್ತಾಪವಾಗಿರಬೇಕು. ಡಿ.ಎಂ.ಓ. ತಮಗೇನೂ ಗೊತ್ತಿಲ್ಲವೆಂದು ಹೇಳಿರಬೇಕು. ಮರುದಿನ ಆಸ್ಪತ್ರೆಗೆ ಬಂದವರೇ ನನಗೆ ಹೇಳಿ ಕಳುಹಿಸಿ ಹಿಂದಿನ ದಿನ ನಾನಾವುದಾದರೂ ರೋಗಿಗೆ ಥಳಿಸಿದ್ದೇನೇ ಎಂದು ವಿಚಾರಿಸಿದರು! ಏನು ಹೇಳಬೇಕೆಂಬುದೇ ನನಗೆ ತೋಚಲಿಲ್ಲ. ಆದರೂ ಹಿಂದಿನ ದಿನ ಹೊಟ್ಟೆ ನೋವಿನಿಂದ ಬಳಲುತ್ತಿದ್ದ ವಯೋವೃದ್ಧ ರೋಗಿಯೊಬ್ಬನ ಕಪಾಳಕ್ಕೆ ಅವರೇ ಹೊಡೆದು ಮುಖ ತಿರುಗಿಸಿದ ಪ್ರಸಂಗವನ್ನು ಜ್ಞಾಪಿಸಿದೆ. "ಓಹೋ. ಅದಾ ಅವರೇನು ಮಾಡುತ್ತಾರೋ,

ನೋಡಿಕೊಳ್ಳುತ್ತೇನೆ" ಎಂಬುದಾಗಿ ಗತ್ತಿನ ಉತ್ತರ ಅವರ ಬಾಯಿಯಿಂದ ಹೊರಬಂದಿತು. ರೋಗಿಯ ಕಡೆಯವರು ಆರೋಗ್ಯ ಮಂತ್ರಿಗಳಿಗೆ ದೂರು ಸಲ್ಲಿಸುವವರೆಗೂ ಮುಂದುವರಿದರಂತೆ.

ಇನ್ನೊಂದು ತಿಂಗಳೊಳಗೇ ಪ್ರಕರಣದ ಬಗೆಗೆ ವಿಚಾರಣೆ ಮಾಡಲು ಇಲಾಖೆಯಿಂದ ಆದೇಶ ಬಂದಿತು. ನಾನಾಗಲೇ ಮೈಸೂರಿನ ಕೆ. ಆರ್. ಆಸ್ಪತ್ರೆಗೆ ವರದಿ ಮಾಡಿಕೊಳ್ಳಲು ಹೋಗಿದ್ದೆ. ಮನೆಯವರನ್ನು ಅಲ್ಲಿಗೆ ಕರೆದುಕೊಂಡು ಹೋಗಲಾಗಿರಲಿಲ್ಲ. ನಡುವೆ ಒಂದು ಸಾರಿ ಕೆ.ಜಿ.ಎಫ್.ಗೆ ಬಂದಿದ್ದಾಗ ಪ್ರಪಕರಣದ ಬಗೆಗೆ ಅಲ್ಲೇ ಸಾಕ್ಷಿಯಂತಿದ್ದ ನಾನೂ ಸಹ ಲಿಖಿತ ಹೇಳಿಕೆ ಕೊಡುವಂತೆ ಕೇಳಲಾಯಿತು. ಅವರಿಂದ ಕೆಲಸಾರಿ ಮುಜುಗರದ ಸನ್ನಿವೇಶಗಳುಂಟಾಗಿದ್ದರೂ, ಮೇಲಧಿಕಾರಿಯಾಗಿದ್ದವರೊಬ್ಬರ ನಡೆವಳಿಕೆ ಬಗೆಗೆ ಅವರಿಗೆ ಅವಮಾನ ಪರಿಸ್ಥಿತಿ ಉಂಟು ಮಾಡಲು ಮನಸ್ಸಾಗಲಿಲ್ಲ. ಡಿ.ಎಂ.ಓ. ಅವರು ರೋಗಿಯ ಕಪಾಳಕ್ಕೆ ಥಳಿಸಲಿಲ್ಲ, ಸ್ವಲ್ಪ ಬಿರುಸಿನಿಂದ ಒಂದು ಕಡೆಗೆ ತಿರುಗಿಸಿದರು ಎಂಬ ತಿಪ್ಪೇ ಸಾರಿಸುವ ಹೇಳಿಕೆ ಬರೆದುಕೊಟ್ಟೆ.

ತನಿಖೆಯ ಪರಿಣಾಮವೋ, ಇಲ್ಲವೆ ಕಾಕತಾಳೀಯವೋ ಎಂಬಂತೆ ಆ ಸಮಯದಲ್ಲಿ ಡಿ.ಎಂ.ಓ. ಡಾ।। ಸುಬ್ಬಯ್ಯನವರಿಗೂ ಅಲ್ಲಿಂದ ವರ್ಗಾವಣೆಯಾಯಿತು. ಆಸ್ಪತ್ರೆ ಸಿಬ್ಬಂದಿ ಯವರಿಗೆ ಇಬ್ಬರಿಗೂ ಒಂದೇ ಸಾರಿ ಬೀಳ್ಕೊಡಿಗೆ ಸಮಾರಂಭ ಏರ್ಪಡಿಸಲು ದಾರಿ ಸುಗಮವಾಯಿತು.

ಕೆ.ಜಿ.ಎಫ್.ನ ವಾಸ್ತವ್ಯದ ಎರಡು ವರ್ಷಗಳ ಅನುಭವ ನನ್ನ ಮೊದಲ ಶಿಕಾರಿಪುರದ ಅನುಭವಗಳಿಗಿಂತಲೂ ವಿಭಿನ್ನವಾದವು. ಅಲ್ಲಿ ಯಾವುದೇ ಸಮಸ್ಯೆಯನ್ನು ಸ್ವತಂತ್ರವಾಗಿ ಧೈರ್ಯದಿಂದ ಎದುರಿಸುವ ಸ್ಥೈರ್ಯವನ್ನು ತಂದು ಕೊಟ್ಟಿತ್ತು; ಇಲ್ಲಿ ಮೇಲಾಧಿಕಾರಿಯೊಬ್ಬರ ಮೇಲ್ವಿಚಾರಣೆಯ ಸೀಮಿತ ವ್ಯಾಪ್ತಿಯಲ್ಲಿ ಆಸ್ಪತ್ರೆಯ ಒಳಾಡಳಿತದ ವಿವಿಧ ಸ್ತರಗಳ ಅಂತರಂಗದ ವಿಷಯಗಳ ನೈಜ ಚಿತ್ರಣವನ್ನರಿತುಕೊಳ್ಳಲು ಸಹಕಾರಿಯಾಯಿತು. ಒಳಾಡಳಿತದ ವಿವಿಧ ಮಜಲುಗಳು, ಆಹಾರ ಸರಬರಾಜಿನ ಅವ್ಯವಸ್ಥೆಗಳ ಹಿಂದೆ ಅಡಗಿದ ಕಾಣದ ಕೈವಾಡಗಳು, ಔಷಧ ಉಗ್ರಾಣದ ಅರ್ಥಪೂರ್ಣ ನಿರ್ವಹಣೆ, ಆಸ್ಪತ್ರೆ ಹಾಗೂ ಸಿಬ್ಬಂದಿಗಳ ವಿರುದ್ಧ ಆಗಾಗ್ಗೆ ಉಂಟಾಗುತ್ತಿದ್ದ ಘರ್ಷಣೆ, ಹಾಗೂ ಅವುಗಳ ನಿರ್ವಹಣೆ, ಸಾರ್ವಜನಿಕ ಸಂಪರ್ಕ ಮುಂತಾದವುಗಳ ಬಗೆಗೆ ವ್ಯಾವಹಾರಿಕ ಅನುಭವ ಪಡೆಯಲು ಸಾಧ್ಯವಾಯಿತು. ಶಿಕಾರಿಪುರ ಮತ್ತು ಕೆ.ಜಿ.ಎಫ್.ನ ಆಸ್ಪತ್ರೆಗಳಲ್ಲಿ ಇಲಾಖಾ ಮುಖ್ಯಸ್ಥರು ಮತ್ತು ಆರೋಗ್ಯ ಮಂತ್ರಿಗಳಿಂದ ಜರುಗಿದ ವಾರ್ಷಿಕ ತನಿಖೆಗಳು ಆಡಳಿತ ವ್ಯವಸ್ಥೆಯ ಕುಂದುಕೊರತೆಗಳು, ಅಧಿಕಾರಶಾಹಿ ಯವರ ಅನಾಸಕ್ತ ನಡವಳಿಕೆ, ಆಡಳಿತ ಮಾರ್ಗದ ಒಳಹೊರಗಿನ ಸೂಕ್ಷ್ಮತೆಗಳ ಬಗೆಗೆ ಕಣ್ಣು ತೆರೆಸುವಂತೆ ಮಾಡಿದವು. ಮುಂದಿನ ವರ್ಷಗಳ ನನ್ನ ಕಾಯಕಗಳಲ್ಲಿ ಅವುಗಳಿಂದ ಬಹಳಷ್ಟು ಸಹಾಯವಾದುದನ್ನು ಮರೆಯಲಾರೆ. ಬಹುಪಾಲು ತಮಿಳರದೇ ಪ್ರಾಬಲ್ಯವಿದ್ದ ವಿಭಿನ್ನ ಪರಿಸರದಲ್ಲಿ ಅವರೊಡನೆ ವೈಯಕ್ತಿಕವಾಗಿ ಯಾವುದೇ ಸಮಸ್ಯೆಗೆ ಕಾರಣವಾಗಲಿಲ್ಲ. ಅಲ್ಲಿಯ ಜನಸಾಮಾನ್ಯರಿಗೆ ನಾನು ನಗುಮುಖದ 'ಚಿಣ್ಣದೊರೆ' ಎನಿಸಿಕೊಂಡಿದ್ದೆ! (ಡಿ.ಎಂ.ಓ. ಜಬರ್ದಸ್ತಿನ 'ಪೆರಿಯ ದೊರೆ')

ಮೇಲಾಧಿಕಾರಿಯ ಉದ್ಧಟ ವರ್ತನೆಯಿಂದ ಕೆಲ ಸಮಯ ಮಾನಸಿಕ ಕ್ಷೋಭೆ ಗೊಳಗಾಗುವಂತಾದರೂ ಸಮಸ್ಯೆಯನ್ನು ತೃಪ್ತಿಕರ ರೀತಿಯಲ್ಲಿ ನಿಭಾಯಿಸಲು ಸಾಧ್ಯವಾಗಿತ್ತು.

ಕೆಲಸಕ್ಕೆ ಸೇರುವ ಸಮಯದಲ್ಲಿ ನನಗೆಲ್ಲಾ ಯೋಗ್ಯತೆಗಳಿದ್ದರೂ ಜರುಗಿದ ಅನ್ಯಾಯದಿಂದ ಮೊದಲ ಕೆಲ ವರ್ಷಗಳಲ್ಲೇ ಜ್ಯೇಷ್ಠತೆಯ ಪೆಡಂಭೂತದ ಕಾಟ ಬೆನ್ನು ಹತ್ತುವ ಮುನ್ನೋಟದ ದರ್ಶನವಾಯಿತು. ಮುಂದೆ ನನ್ನ ಸೇವಾ ಅವಧಿಯುದ್ದಕ್ಕೂ ಅದು ನನಗೆ ಇರಿಸುಮುರಿಸು ಉಂಟು ಮಾಡಬಹುದೆಂಬುದರ ಅರಿವು ಮೂಡಲಾರಂಭಿಸಿತು. ಆ ಸಮಯದಲ್ಲೇ ನನ್ನ ಸ್ವಾಭಿಮಾನಕ್ಕೆ ಧಕ್ಕೆ ಉಂಟಾದಾಗ ಕೆಲಸಕ್ಕೆ ರಾಜೀನಾಮೆ ನೀಡುವ ನಿರ್ಧಾರಕ್ಕೆ ಬರಬೇಕಾಯಿತೆಂದರೆ ನನ್ನ ಮನಸ್ಸಿನಲ್ಲಾಗುತ್ತಿದ್ದ ಆತಂಕ, ತಳಮಳ, ಜುಗುಪ್ಸೆಗಳು ಅರ್ಥವಾಗಬಹುದು. ಆ ಸಮಯದಲ್ಲೇ ಭಾರತ ಪಾಕಿಸ್ತಾನಗಳ ನಡುವಿನ ವಿವಾದ ಪರಾಕಾಷ್ಠೆಗೆ ಬಂದಿತ್ತು. ಮಿಲಿಟರಿ ಸೇವೆಗೆ ಹೆಚ್ಚು ಸಂಖ್ಯೆಯ ವೈದ್ಯರ ಅವಶ್ಯಕತೆಯುಂಟಾಗಿತ್ತು. ಭಾರತ ಸರ್ಕಾರದವರು ಮಿಲಿಟರಿಯಲ್ಲಿ ಹಂಗಾಮಿ ಸೇವೆಗಾಗಿ (Short Service Regular Commission) ವೈದ್ಯರನ್ನು ನೇಮಿಸಿಕೊಳ್ಳುವ ಬಗೆಗೆ ಪ್ರಕಟಣೆ ಹೊರಡಿಸಿದ್ದರು. ಆ ಮೊದಲೇ ಸರ್ಕಾರಿ ಸೇವೆಯ ಜಂಜಡವನ್ನು ಅನುಭವಿಸುತ್ತಿದ್ದ ನಾನು ಆ ಸಲುವಾಗಿ ಅರ್ಜಿ ಹಾಕಿದೆ. ಸ್ವಲ್ಪ ಸಮಯದಲ್ಲೇ ದೆಹಲಿಯಲ್ಲಿ ಸಂದರ್ಶನಕ್ಕೆ ಹಾಜರಾಗಲು ಕರೆಯೂ ಬಂದಿತು. ತಾಯಿಯವರು ಆಗ ಕೆ.ಜಿ.ಎಫ್.ನಲ್ಲೇ ಇದ್ದು, ಈ ವಿಷಯ ಹೇಗೋ ಅವರ ಗಮನಕ್ಕೂ ಬಂದಿತು. ಎಂದಿನಂತೆ ನನ್ನ ಭವಿಷ್ಯ, ಸುರಕ್ಷತೆಗಳ ಆತಂಕಗಳು ಮತ್ತೆ ಮೇಲುಗೈ ಸಾಧಿಸಿದವು. ಅವರು ಸಪ್ಪೆ ಮೋರೆ ಹಾಕಿಕೊಂಡು, ಅಳುವುದಕ್ಕಾರಂಭಿಸಿದರು. ಮಿಲಿಟರಿಯಲ್ಲಿರುವ ಡಾಕ್ಟರು ಇತರ ಸೈನಿಕರಂತೆ ಹೊಡೆದಾಟಗಳಲ್ಲಿ ಭಾಗವಹಿಸುವುದಿಲ್ಲ, ಆದರಿಂದ ಅವರಿಗೆ ಯಾವ ರೀತಿಯ ಅಪಾಯಗಳಿರುವುದಿಲ್ಲವೆಂದು ಅದೆಷ್ಟು ಸಮಾಧಾನಪಡಿಸಲು ಪ್ರಯತ್ನಿಸಿದರೂ ಅವರ ಮನ ಒಲಿಸಲು ಸಾಧ್ಯವಾಗಲೇ ಇಲ್ಲ. ತನ್ನ ಜೀವಮಾನವೆಲ್ಲಾ ನನ್ನ ಶ್ರೇಯೋಭಿವೃದ್ಧಿಗಾಗಿ ಮುಡಿಪಿಟ್ಟ ಅವ್ವನ ಮನನೋಯಿಸಲು ಇಷ್ಟಪಡಲಿಲ್ಲ. ಹಾಗಾಗಿ ಸಂದರ್ಶನಕ್ಕೆ ಹಾಜರಾಗಲಿಲ್ಲ. ಮುಂದೆ ಆರು ತಿಂಗಳಲ್ಲಿ ಮೈಸೂರು ಸರ್ಕಾರದ ಮೂಲಕ ಮತ್ತೊಂದು ಸಾರಿ ಸಂದರ್ಶನದ ಕರೆ ಬಂದಿತು. ಮಿಲಿಟರಿ ಸೇವೆಗೆ ಸೇರುವ ನಿರ್ಧಾರವನ್ನು ಕೆಲವು ವೈಯಕ್ತಿಕ ಅನಾನುಕೂಲತೆಗಳಿಂದಾಗಿ ಬದಲಾಯಿಸಬೇಕಾಯಿತೆಂದು ವಿಷಾದ ವ್ಯಕ್ತಪಡಿಸಿ ಪತ್ರ ಬರೆದೆ.

---



ಶಿವಮೊಗ್ಗ - ಸಹೋದ್ಯೋಗಿಗಳ ಕೂಟ

# ೧೦. ಮರಳಿ ಮೈಸೂರಿಗೆ

ಕೆ.ಜಿ.ಎಫ್., ಸಿವಿಲ್ ಆಸ್ಪತ್ರೆಯಿಂದ ಬಿಡುಗಡೆಯಾಗಿ ೧೯೬೧ರ ನವೆಂಬರ್ ಮೊದಲ ವಾರದಲ್ಲಿ ಮೈಸೂರಿನ ಕೆ. ಆರ್. ಆಸ್ಪತ್ರೆಯಲ್ಲಿ ಕೆಲಸಕ್ಕೆ ಹಾಜರಾದೆ. ಕೆ. ಆರ್. ಆಸ್ಪತ್ರೆ ಹಾಗೂ ಮೈಸೂರು ಮೆಡಿಕಲ್ ಕಾಲೇಜುಗಳು ಆ ಕಾಲದ ಮೈಸೂರು ಸಂಸ್ಥಾನದ ವೈದ್ಯರ ತರಬೇತಿಯ ಗರಡಿ ಮನೆಗಳಂತಿದ್ದವು. ಎಂ.ಬಿ.ಬಿ.ಎಸ್., ಕಲಿಕೆ ಮತ್ತು ತರಬೇತಿಯ ಸುಮಾರು ಆರು ವರ್ಷಗಳ ಕಾಲ ಅವೆರಡೂ ಸಂಸ್ಥೆಗಳಲ್ಲಿ ಕಾರ್ಯನಿರತನಾಗಿದ್ದ ನನಗೆ ಅವುಗಳ ಮೂಲೆ ಮೂಲೆಗಳೂ ಸ್ವಂತ ಮನೆಯಷ್ಟೇ ಸುಪರಿಚಿತವಾಗಿದ್ದವು. ಕಷ್ಟಸುಖ, ದುಃಖ ದುಮ್ಮಾನಗಳಲ್ಲಿ ಮುಳುಗಿ ಎದ್ದು ಅಂತಿಮವಾಗಿ ಜಯಶೀಲನಾಗಿ ಭವಿಷ್ಯದ ಕನಸುಗಳನ್ನು ಕಾಣುತ್ತಾ ವಿಶಾಲ ಜಗತ್ತಿಗೆ ಅಡಿಯಿಡಲು ತಯಾರು ಮಾಡಿದ ಗರಡಿ ಮನೆ ನನ್ನ ಪಾಲಿಗೆ. ಈಗ ಮತ್ತೆ ತವರು ಮನೆಗೆ ಹಿಂತಿರುಗುವ ಸಡಗರ!

ಮೈಸೂರು ಸಂಸ್ಥಾನದಲ್ಲಿ ಎರಡನೇ ದೊಡ್ಡ ಆಸ್ಪತ್ರೆಯಾದ ಕೆ. ಆರ್. ಆಸ್ಪತ್ರೆಯಲ್ಲಿ ಮಾತ್ರ ಎಂ.ಬಿ.ಬಿ.ಎಸ್., ತರಬೇತಿಯ ಕೇಂದ್ರವಿದ್ದಿತ್ತು. ಅಲ್ಲಿ ಎರಡು ಬಗೆಯ ವೈದ್ಯ ಸಿಬ್ಬಂದಿಗಳಿದ್ದರು. ಆಸ್ಪತ್ರೆಯ ಒಟ್ಟಾರೆ ನಿರ್ವಹಣೆ ಸರ್ಕಾರದ ಮೆಡಿಕಲ್ ಇಲಾಖೆಗೆ ಸಂಬಂಧಿಸಿದ್ದು. ಆ ಸಲುವಾಗಿ ಆಸ್ಪತ್ರೆಯ ಸೂಪರಿಂಟೆಂಡೆಂಟ್ (ಮುಖ್ಯ ನಿರ್ವಹಣಾಧಿಕಾರಿ) ಆರ್.ಎಂ.ಓ. ಹಾಗೂ ಇನ್ನೂ ೧೦-೧೫ ಅಸಿಸ್ಟೆಂಟ್ ಸರ್ಜನ್ ಡಾಕ್ಟರುಗಳು ಒಂದು ಬಗೆಯವರು; ವೈದ್ಯಕೀಯ ತರಬೇತಿ ಪಡೆಯುವ ಮೆಡಿಕಲ್ ಕಾಲೇಜಿನ ವಿದ್ಯಾರ್ಥಿಗಳಿಗೆ ಬೋಧನೆ, ತರಬೇತಿ ನೀಡುವ ವಿವಿಧ ವಿಭಾಗಗಳ ಪ್ರಾಧ್ಯಾಪಕರು, ಪ್ರವಾಚಕರ ವಿವಿಧ ಶ್ರೇಣಿಯ ಬೋಧಕ ವರ್ಗ ಇನ್ನೊಂದು ಬಗೆಯದು. ಮೆಡಿಕಲ್ ವಿಭಾಗಕ್ಕೆ ಸೇರಿದ ಕೆಲವು ವಿಶೇಷ ತಜ್ಞರು ತಮ್ಮ ಎಂದಿನ ಕಾರ್ಯಕಲಾಪಗಳ ಜೊತೆಗೆ ಅರೆ-ಕಾಲಿಕವಾಗಿ ಬೋಧನೆ ಮಾಡುವ ಅವಕಾಶಗಳೂ ಇದ್ದವು. ಅಸಿಸ್ಟೆಂಟ್ ಸರ್ಜನ್ ಮಟ್ಟದ ನನ್ನಂತಹವರಿಗೆ ಬಹುಪಾಲು ಹೊರ ರೋಗಿಗಳ ವಿಭಾಗದಲ್ಲಿ ಅಪಘಾತ ಮತ್ತು ಇನ್ನಿತರ ವೈದ್ಯಕೀಯ ನ್ಯಾಯಶಾಸ್ತ್ರದ ಪ್ರಕರಣಗಳ ನಿರ್ವಹಣೆ ಹಾಗೂ ಚಿಕಿತ್ಸಾ ವಿಭಾಗದ ಕೆಲವು ಅಷ್ಟೇನೂ ಮಹತ್ವ ಪಡೆಯದ ಇಲಾಖೆಗಳಲ್ಲಿ ಕೆಲಸಮಯ ಹಂಗಾಮಿಯಾಗಿ ಕಾರ್ಯ ನಿರ್ವಹಿಸುವ ಅವಕಾಶಗಳು ದೊರೆಯಬಹುದಾಗಿತ್ತು.

ಅಸಿಸ್ಟೆಂಟ್ ಸರ್ಜನ್‌ಗಳ ಕೆಲಸ ಕಾರ್ಯಗಳ ನಿರ್ವಹಣೆ ಅಲ್ಲಿಯ ಆರ್.ಎಂ.ಓ. ಅವರ ಜವಾಬ್ದಾರಿ. ನಾನು ವರದಿ ಮಾಡಿಕೊಂಡಾಗ ಡಾ॥ ನಾರಾಯಣ ಸ್ವಾಮಿ ಶೆಟ್ಟಿ ಎಂಬವರು ಆರ್.ಎಂ.ಓ. ಆಗಿದ್ದರು. ಯಾವುದಾದರೂ ಸರ್ಜಿಕಲ್ ಇಲ್ಲವೇ ಮೆಡಿಕಲ್ ವಿಭಾಗಗಳಲ್ಲಿ ಕಾರ್ಯ ನಿರ್ವಹಿಸುವ ಅವಕಾಶ ಮಾಡಿಕೊಡಬೇಕೆಂದು ವಿನಂತಿ ಮಾಡಿಕೊಂಡೆ. ಆ ಸಮಯದಲ್ಲಿ ಅದು ಸಾಧ್ಯವಾಗುವಂತಿರಲಿಲ್ಲ. ಅಲ್ಲಿನ ಪದ್ಧತಿಯಂತೆ ಹೊರ ರೋಗಿಗಳ ವಿಭಾಗದಲ್ಲಿ ಕೆಲವು ಸಮಯ ಕಾರ್ಯ ನಿರ್ವಹಿಸುತ್ತಿರುವಂತೆಯೂ, ಮುಂದೆ ಅವಕಾಶ ಒದಗಿ ಬಂದಾಗ ನನ್ನ ಅಭಿಲಾಷೆಯನ್ನು ಈಡೇರಿಸುವುದಾಗಿಯೂ ಭರವಸೆ ಇತ್ತರು.

ಅಪಘಾತ ವಿಭಾಗದಲ್ಲಿ ಇತರ ಅಸಿಸ್ಟೆಂಟ್ ಸರ್ಜನರುಗಳ ಜೊತೆ ಸರದಿಯ ಪ್ರಕಾರ ಹಗಲು ರಾತ್ರಿಗಳಲ್ಲಿ ಮೂರು ತಿಂಗಳು ಕೆಲಸ ಮಾಡಿದೆ. ಅರಿವಳಿಕೆ (ಅನೆಸ್ಥೀಸಿಯಾ) ವಿಭಾಗದಲ್ಲಿ ಒಬ್ಬ ಸಹಾಯಕನ ಜಾಗ ಖಾಲಿಯಾದ್ದರಿಂದ ಸ್ವಲ್ಪ ಸಮಯ ಅಲ್ಲಿಗೆ ನೇಮಿಸಿದರು. ಆ ವಿಭಾಗದಲ್ಲಿ ಕೆಲಸ ಮಾಡುವುದೆಂದರೆ ದಿನವೆಲ್ಲಾ ಆಪರೇಷನ್ ಥಿಯೇಟರ್ (ಓ.ಟಿ.)ನಲ್ಲಿ ರೋಗಿಗಳನ್ನು ಪ್ರಜ್ಞೆ ತಪ್ಪಿಸುವ ತಜ್ಞರಿಗೆ ಸಹಾಯಕನಾಗಿರುವುದು. ಡಾ|| ಎಂ. ಎಂ. ಥಾಹಿರ್ ಎಂಬವರು ಅರಿವಳಿಕೆ ವಿಭಾಗದ ಮುಖ್ಯಸ್ಥರು; ಅದೊಂದು ಏಕವ್ಯಕ್ತಿ ಇಲಾಖೆ! ಅದರಿಂದಾಗಿ ಕೆಲವು ಅಸಿಸ್ಟೆಂಟ್ ಸರ್ಜನರನ್ನು ಅವರ ಸಹಾಯಕರಾಗಿ ನೇಮಿಸುತ್ತಿದ್ದರು. ಡಾ|| ಥಾಹಿರ್ ಅರಿವಳಿಕೆ ವಿಷಯದಲ್ಲಿ ಸ್ನಾತಕೋತ್ತರ ಎಂ. ಡಿ. ಪದವೀಧರರು. ಪ್ರಸ್ತುತ ಸಮಯದಲ್ಲಿ ಅರಿವಳಿಕೆ ತಜ್ಞರಿಗಿರುವಷ್ಟು ಬೇಡಿಕೆಯಾಗಲೀ, ಪ್ರಾಮುಖ್ಯತೆಯಾಗಲೀ ಅಂದಿನ ದಿನಗಳಲ್ಲಿ ಇರಲಿಲ್ಲ. ಅದೇ ರೀತಿಯ ಪ್ರಾವೀಣ್ಯತೆ ಪಡೆದ ಶಸ್ತ್ರಚಿಕಿತ್ಸಕರು (ಸರ್ಜನ್‌ರು), ಚಿಕಿತ್ಸೆ ವೈದ್ಯರು (ಫಿಜಿಶಿಯನ್) ಮತ್ತಿತರ ತಜ್ಞ ವೈದ್ಯರಿಗೆ ಸರ್ಕಾರದಿಂದ ದೊರೆಯುತ್ತಿದ್ದ ವೇತನದ ಜೊತೆಗೆ ಅವರ ಚಿಕಿತ್ಸೆ ಪಡೆದುಕೊಂಡ ರೋಗಿಗಳಿಂದಲೂ ಕೃತಜ್ಞತಾಪೂರ್ವಕ ಸಂಭಾವನೆಗಳು ದೊರೆಯುವ ಅವಕಾಶಗಳಿರುತ್ತಿದ್ದವು. ಕೆಲವರು ಖಾಸಗಿಯಾಗಿಯೂ ಪ್ರಾಕ್ಟೀಸ್ ಮಾಡಿ ಇನ್ನಷ್ಟು ಸಂಪಾದನೆ ಮಾಡಿಕೊಳ್ಳುತ್ತಿದ್ದರು. ಖಾಸಗಿ ನರ್ಸಿಂಗ್ ಹೋಮ್‌ಗಳು ಅಷ್ಟಾಗಿರದ ಆ ಸಮಯದಲ್ಲಿ ಅರಿವಳಿಕಾ ತಜ್ಞರು ಸರ್ಕಾರಿ ಆಸ್ಪತ್ರೆಗಳಲ್ಲಿ ಕಾರ್ಯ ನಿರ್ವಹಿಸುವುದನ್ನು ಹೊರತುಪಡಿಸಿದರೆ ಹೆಚ್ಚುವರಿ ಸಂಪಾದನೆ ಮಾಡುವ ಅವಕಾಶಗಳಿರುತ್ತಿರಲಿಲ್ಲ. ಅದರಿಂದ ಡಾ|| ಥಾಹಿರ್‌ರಂಥವರು ಒಂದು ರೀತಿಯಲ್ಲಿ ಅಸಂತುಷ್ಟರಾಗಿ ಇರುತ್ತಿದ್ದರು. ಎಲ್ಲಾ ವಿಧದ ಅರಿವಳಿಕೆಗಳನ್ನು ಬಹುಪಾಲು ಅವರೇ ನೀಡುತ್ತಿದ್ದರು. ನಾನೇನಿದ್ದರೂ ನಾಡಿ ಪರೀಕ್ಷೆ ಮಾಡುತ್ತಿರುವುದು, ಉಸಿರಾಟದ ಏರಿಳಿತಗಳನ್ನು ಗಮನಿಸುತ್ತಿರುವುದು, ಕೆಲ ಸಾರಿ ಇಂಜಕ್ಷನ್ ನೀಡುವಂಥ ಕಾರ್ಯಗಳಲ್ಲಿ ಮಗ್ನನಾಗಿರಬೇಕಿತ್ತು. ಆದರೂ ಕೆಲವು ದಿನಗಳು ಕಳೆದ ಮೇಲೆ ಚಿಕ್ಕ ಪುಟ್ಟ ಪ್ರಕರಣಗಳಲ್ಲಿ ಅವರ ಮೇಲ್ವಿಚಾರಣೆಯಲ್ಲಿ ಅರಿವಳಿಕೆ ನೀಡುವ ಅವಕಾಶ ಮಾಡಿಕೊಡುತ್ತಿದ್ದುದೂ ಉಂಟು. ಆದರೆ ಶ್ವಾಸನಾಳದ ಮೂಲಕ ನಳಿಕೆಯನ್ನು ತೂರಿಸಿ (Endotracheal) ಅರಿವಳಿಕೆ ನೀಡುವ ಇಲ್ಲವೆ ಬೆನ್ನು ಹುರಿಗೆ ಸೂಜಿ ತೂರಿಸಿ ಇಂಜಕ್ಷನ್ ನೀಡುವಂಥ (Spinal) ವಿಧಾನಗಳಿಗೆ ಹೆಚ್ಚಿನ ಅವಕಾಶಗಳಿರುತ್ತಿರಲಿಲ್ಲ. ಹಾಗೂ ಹೀಗೂ ಸುಮಾರು ಮೂರು ತಿಂಗಳಲ್ಲಿ ಕೆಲಸಾರಿ ನಾನೊಬ್ಬನೇ ಆಪರೇಷನ್ ಥಿಯೇಟರನ್ನು ನಿಭಾಯಿಸುವ ಮಟ್ಟವನ್ನು ತಲುಪಿದ್ದೆನೆನ್ನಬಹುದು.

## ಭೀಕರ ಅಪಘಾತ

ಡಾ|| ಥಾಹಿರ್ ಪ್ರತಿ ಶನಿವಾರ ಮೈಸೂರು ನಗರದ ಹೊರವಲಯದಲ್ಲಿದ್ದ ಕ್ಷಯ ರೋಗದ ಆಸ್ಪತ್ರೆ (ಸ್ಯಾನಿಟೋರಿಯಂ) ಯಲ್ಲಿ ಜರುಗುವ ಆಪರೇಷನ್‌ಗಳಿಗೆ ಅರಿವಳಿಕೆ ನೀಡುವ ಸಲುವಾಗಿ ಹೋಗಬೇಕಾಗುತ್ತಿತ್ತು. ಅಂತಹ ದಿನಗಳಲ್ಲಿ ಓ. ಟಿ. ಯನ್ನು ನಾನೇ ನಿರ್ವಹಿಸಬೇಕಾಗುತ್ತಿತ್ತು. ಅಂದರೆ ಬಹಳ ಗುರುತರದ ಆಪರೇಷನ್‌ಗಳು ಅಂದು ಆಗುತ್ತಿರಲಿಲ್ಲ. ಒಂದು ದಿನ ಬೆಳಿಗ್ಗೆ ಓ.ಟಿ.ಗೆ ಹೋದವನೆ ಎಂದಿನ ರೂಢಿಯಂತೆ ಅರಿವಳಿಕೆ ನೀಡುವ ಮೆಷಿನ್‌ಗಳ ಪರಿಶೀಲನೆ ಮಾಡಲಾರಂಭಿಸಿದೆ. ಒಂದು ಆಮ್ಲಜನಕದ ಸಿಲಿಂಡರ್‌ನ ಕವಾಟ (Valve) ಗಟ್ಟಿಯಾಗಿ ಕುಳಿತಿದ್ದು ಅದನ್ನು ತಿರುಗಿಸಿ ಪರಿಶೀಲಿಸುವುದು ಕಷ್ಟವೆನಿಸಿತು. ಅಲ್ಲಿದ್ದ ಸಹಾಯಕ

ವಾರ್ಡ್‌ಬಾಯ್ ಒಬ್ಬನಿಗೆ ಅದನ್ನು ತಿರುಗಿಸುವಂತೆ ಹೇಳಿದೆ. ಅವನು ಕವಾಟವನ್ನು ಕೈಯಿಂದ ತುಂಬಾ ಬಿರುಸಾಗಿ ಬಡಿದು ತಿರುಗಿಸಿದ. ತತ್‌ಕ್ಷಣವೇ ಒಂದು ಬಾಂಬು ಸಿಡಿಸಿದಷ್ಟು ಶಬ್ದವಾಯಿತು; ಅರಿವಳಿಕಾ ಮೆಷಿನ್‌ಗೆ ಬೆಂಕಿ ಹತ್ತಿಕೊಂಡು ಉರಿಯತೊಡಗಿತು. ಓ. ಟಿ. ಯಲ್ಲಾದ ಶಬ್ದ ಆಸ್ಪತ್ರೆಯ ಎಲ್ಲಾ ಕಡೆ ಕೇಳಿಸಿತಂತೆ. ಕೆಳಗಡೆ ವಾರ್ಡುಗಳಲ್ಲಿ ರೋಗಿಗಳ ಪರೀಕ್ಷೆಗಳಲ್ಲಿ ತೊಡಗಿದ್ದ ಸರ್ಜರಿ ಪ್ರಾಧ್ಯಾಪಕ ಡಾ|| ರಾಜಗೋಪಾಲನ್ ಆದಿಯಾಗಿ, ಬಹುಪಾಲು ಸಿಬ್ಬಂದಿಗಳು ಓ.ಟಿ.ಯತ್ತ ಧಾವಿಸಿ ಬಂದರು. ಆಪರೇಷನ್‌ಗಳಿಗೆ ಸಹಾಯ ಮಾಡಲು ಸಜ್ಜಾಗಿದ್ದ ೨-೩ ನರ್ಸ್‌ಗಳು ದೊಡ್ಡ ದೊಡ್ಡ ಬೋಗುಣಿಗಳಲ್ಲಿ ತುಂಬಿಸಿಕೊಂಡಿದ್ದ ದ್ರಾವಣಗಳನ್ನು ಹತ್ತಿಕೊಂಡು ಉರಿಯುತ್ತಿದ್ದ ಮೆಷಿನ್ ಕಡೆ ಚೆಲ್ಲಿದರು. ಬಹುಶಃ ಅದರಿಂದ ಬೆಂಕಿ ನಂದಿತು; ಬೇರೆ ಕಡೆಗಳಿಗೆ ಹರಡಲಿಲ್ಲ. ನಾನಂತೂ ಭಯಭೀತನಾಗಿ ನಡುಗುತ್ತಿದ್ದೆ. ನನ್ನ ಮುಖ, ತಲೆಯ ಭಾಗಗಳಲ್ಲಿ ಒಡೆದ ಗಾಜಿನ ಚೂರುಗಳಿಂದ ಸಣ್ಣಪುಟ್ಟ ಗಾಯಗಳಾಗಿದ್ದವು. ಪರಿಸ್ಥಿತಿಯನ್ನು ನೋಡಲು ಬಂದವರೆಲ್ಲಾ ಹೆಚ್ಚಿನ ಅನಾಹುತಗಳಾಗದಿದ್ದುದಕ್ಕೆ ನೆಮ್ಮದಿಯ ಉಸಿರಾಡಿದರು; ನಮ್ಮನ್ನೆಲ್ಲಾ ಸಂತೈಸಿ, ಧೈರ್ಯ ತುಂಬಿದರು.

ಆಪರೇಷನ್ ಥಿಯೇಟರಿನಲ್ಲಿ ಆದ ಅಂತಹ ಸ್ಫೋಟ ಮತ್ತು ಬೆಂಕಿ ಅನಾಹುತವಾಗಿದ್ದಕ್ಕೆ ಕೆಲವರು ವಿವಿಧ ಕಾರಣಗಳನ್ನಿತ್ತರು. ಹಲವಾರು ಇಲೆಕ್ಟ್ರಿಕ್ ತಂತಿಗಳು ಹಾಗೂ ಸ್ವಿಚ್ಚುಗಳ ಜಾಲವಿರುವ ಓ.ಟಿ.ಯಂಥ ಸ್ಥಳಗಳಲ್ಲಿ ಸ್ಥಾಯಿ ವಿದ್ಯುತ್(Static Electricity)ನ ಸ್ಥಿತಿ ಏರ್ಪಟ್ಟಿರುತ್ತದೆಂತಲೂ, ಹಠಾತ್ತಾಗಿ ಆಮ್ಲಜನಕದಂಥ ದಹನಾನುಕೂಲಿ ಅನಿಲ ಬಿಡುಗಡೆ ಯಾದಾಗ ಬೆಂಕಿ ಹೊತ್ತಿಕೊಂಡು ಸ್ಫೋಟ ಉಂಟಾಗುತ್ತದೆಂಬುದು ಎಲ್ಲರ ಒಟ್ಟಾಭಿಪ್ರಾಯ ವಾಗಿತ್ತು. ಮೆಷೀನ್‌ನನ್ನು ತೀವ್ರ ಪರಿಶೀಲನೆಗೊಳಪಡಿಸಿದಾಗ ಅದಕ್ಕೆ ಹಾಸಿದ ಮರದ ಹಲಗೆಯ ತಳಭಾಗದಲ್ಲಿ ಹಿಂದೊಂದು ಸಾರಿ ಬೆಂಕಿ ಹೊತ್ತಿಕೊಂಡಿದ್ದರ ಕುರುಹುಗಳು ಕಂಡು ಬಂದವು. ಅದರಿಂದ ಆ ಮೆಷೀನ್‌ಗೆ ಹಿಂದೆಯೂ ಒಂದು ಸಾರಿ ಅನಾಹುತವಾಗಿತ್ತೆಂಬುದು ಖಚಿತವಾಯಿತು.

ಅಪಘಾತ ಜರುಗಿದ ರೀತಿ ಮತ್ತಿತರ ವಿವರಗಳನ್ನು ವೈದ್ಯಕೀಯ ಇಲಾಖೆಗೇ ಅಲ್ಲದೆ ಅರಿವಳಿಕಾ ಮೆಷೀನನ್ನು ತಯಾರಿಸಿದ ಕಂಪನಿಯವರಿಗೂ ವರದಿ ಮಾಡಲಾಯಿತು. ಕೆಲವೇ ದಿನಗಳಲ್ಲಿ ಕಂಪನಿಯ ಪ್ರತಿನಿಧಿ ರಾಘವನ್ ಬಂದರು. ಮೆಷೀನನ್ನು ಪರಿಶೀಲಿಸಿ, ಅದರ ಕವಾಟ ಹಾಗೂ ಮತ್ತೆ ಕೆಲವು ಬಿಡಿಭಾಗಗಳನ್ನು ಕಂಪನಿಯ ಪ್ರಧಾನ ಕಚೇರಿಗೆ ಕಳುಹಿಸಿ ಕೊಟ್ಟರು. ಅಲ್ಲಿ ಅವುಗಳ ಪರಿಶೀಲನೆಯ ನಂತರ ಯಾವುದೇ ರೀತಿಯ ನ್ಯೂನತೆಗಳನ್ನು ಪತ್ತೆ ಹಚ್ಚಲು ಸಾಧ್ಯವಾಗಲಿಲ್ಲವಂತೆ. ಅದರಿಂದ ಕಂಪನಿಯ ಮೂಲ ಕಚೇರಿ ಇದ್ದ ಲಂಡನ್ನಿಗೂ ಕಳುಹಿಸಿದರಂತೆ. ನಂತರದ ವರ್ಷಗಳಲ್ಲಿ ನಾನಿರುತ್ತಿದ್ದ ಬೇರೆ ಬೇರೆ ಊರುಗಳಿಗೆ ಬರುತ್ತಿದ್ದ ಅದೇ ಪ್ರತಿನಿಧಿಯ ಭೇಟಿಯಾಗುತ್ತಿತ್ತು. ನಾನು ಮೆಷೀನ್‌ನ ನ್ಯೂನತೆಗಳ ಬಗೆಗೆ ವಿಚಾರಿಸಿ ದಾಗಲೆಲ್ಲಾ ರಾಘವನ್ ಅಂತಹ ವ್ಯತ್ಯಾಸಗಳೇನೂ ಕಂಡು ಬರಲಿಲ್ಲವಂತೆ ಎಂಬ ಹಾರಿಕೆ ಉತ್ತರ ಕೊಡುತ್ತಿದ್ದರು. ಅಂತಿಮವಾಗಿ ಮಂಗಳೂರಿನ ಲೇಡಿ ಗೋಷನ್ ಆಸ್ಪತ್ರೆಯಲ್ಲಿ ಆರ್.ಎಂ.ಓ. ಆಗಿದ್ದಾಗ ಅವರು ಅಧಿಕೃತವಾಗಿ ನನ್ನನ್ನು ಭೇಟಿ ಮಾಡಲೇ ಬೇಕಾಗುತ್ತಿತ್ತು. ಮಿಷನ್‌ನ ಕವಾಟವನ್ನು ಲಂಡನ್ನಿನಲ್ಲಿ ನಿಜವಾಗಿಯೂ ಪರೀಕ್ಷೆಗೊಳಪಡಿಸಿದರೇ, ಹಾಗಿದ್ದರೆ ಅದರ ಫಲಿತಾಂಶವೇನೆಂದು ಒತ್ತಾಯಪೂರ್ವಕವಾಗಿ ಕೇಳಿದೆ. ಅದೂ ಅಲ್ಲದೆ ಆ ಪ್ರಕರಣವನ್ನು ವಿವರವಾಗಿ ಅಭ್ಯಾಸ ಮಾಡಿದವರೊಬ್ಬರಿಂದ ನನಗೆ ಕೆಲವು ವಿಷಯಗಳು ತಿಳಿದು ಬಂದಿವೆ

ಯೆಂದು ಎಚ್ಚರಿಸುವ ಧಾಟಿಯಲ್ಲಿ ಮಾತಾಡಿ ಅವರನ್ನು ಪೇಚಿಗೆ ಸಿಲುಕುವಂತೆ ಮಾಡಿಬಿಟ್ಟೆ. ಆಗ ಗುಟ್ಟನ್ನು ಮುಚ್ಚಿಡಲು ಸಾಧ್ಯವಾಗಲಿಲ್ಲವೆನಿಸುತ್ತದೆ. ಲಂಡನ್ನಿನಲ್ಲಿ ಜರುಗಿಸಿದ ಪರೀಕ್ಷೆಗಳಿಂದ ಕವಾಟದಲ್ಲಿ ಕೆಲವು ಗುರುತರ ನ್ಯೂನತೆಗಳಿದ್ದುದನ್ನು ಬಹಿರಂಗ ಪಡಿಸಿದರು. ಅರಿವಳಿಕಾ ಮಿಷನ್‌ನಂತಹ, ರೋಗಿ ಹಾಗೂ ವೈದ್ಯರ ಜೀವಕ್ಕೇ ಸಂಚಕಾರ ತರಬಹುದಾದ ಸಲಕರಣೆಯ ಬಗೆಗೆ ನಿರ್ಲಕ್ಷ್ಯ ವಹಿಸಿದ ಕಂಪನಿ ಮತ್ತು ಅದರ ಪ್ರತಿನಿಧಿಯ ಬಗೆಗೆ ಜುಗುಪ್ಸೆ ಉಂಟಾಯಿತು. ಆದರೆ ಅಷ್ಟು ವರ್ಷಗಳು ಸಂದು ಹೋದ ಮೇಲೆ ಏನನ್ನೂ ಮಾಡಲಾಗದ ಪರಿಸ್ಥಿತಿ ಯುಂಟಾಗಿತ್ತು. ಅಂದಿನ ಅಪಘಾತದಲ್ಲಿ ನಾನೂ ಸೇರಿದಂತೆ ೪-೫ ಜನ ಸಿಬ್ಬಂದಿಗಳು ಪ್ರಾಣ ಕಳೆದುಕೊಳ್ಳುವ ಸಾಧ್ಯತೆಗಳಿಲ್ಲದಿರಲಿಲ್ಲ.

ಮಂಗಳೂರಿನಲ್ಲಿ ೧೯೬೩ರ ಸಮಯದಲ್ಲಿ ನಾನು ಸ್ನಾತಕೋತ್ತರ ವಿದ್ಯಾರ್ಥಿ ಯಾಗಿದ್ದಾಗ ಅದೆಷ್ಟು ಗುರುತರ ಅಪಘಾತವಾಗಿತ್ತೆಂಬುದರ ಅರಿವು ಉಂಟಾಗುವ ಸಂದರ್ಭ ಒದಗಿತು. ಅಲ್ಲಿ ಅರಿವಳಿಕೆ ತಜ್ಞರಾದವರೊಬ್ಬರ ಸಂಪರ್ಕವಾಯಿತು. ಲೋಕಾಭಿರಾಮವಾಗಿ ನನಗುಂಟಾದ ಅರಿವಳಿಕಾ ಮಿಷನ್‌ನ ಅಪಘಾತ ಪ್ರಸ್ತಾಪವಾಯಿತು. ಕಾಕತಾಳೀಯವೋ ಎಂಬಂತೆ ಅವರ ಸ್ನಾತಕೋತ್ತರ ಪದವಿಯ ವಿಶೇಷ ಅಧ್ಯಯನದ ವಿಷಯ "ಅರಿವಳಿಕೆಯ ಅಪಘಾತಗಳು" (Accidents in Anaesthesia) ಎಂಬುದಾಗಿದ್ದು ಮೈಸೂರು ಕೆ. ಆರ್. ಆಸ್ಪತ್ರೆಯಲ್ಲಿ ನಾನಿದ್ದಾಗ ಜರುಗಿದ ಅಪಘಾತದ ವಿವರಗಳು ಅವರ ಮಹಾಪ್ರಬಂಧದಲ್ಲಿ (Thesis) ಸೇರಿಸಿದ್ದನ್ನು ನನ್ನ ಗಮನಕ್ಕೆ ತಂದರು.

ಅನಿರೀಕ್ಷಿತವಾಗಿ ಜರುಗಿದ ಈ ಘಟನೆಯಿಂದ ದೈಹಿಕವಾಗಿ ನನಗೇನೂ ಆಗದಿದ್ದರೂ ಮಾನಸಿಕವಾಗಿ ನನ್ನನ್ನು ಅಲುಗಾಡಿಸಿ ಬಿಟ್ಟಿತ್ತೆಂದೇ ಹೇಳಬಹುದು. ಮುಂದಿನ ದಿನಗಳಲ್ಲಿ ಓ.ಟಿ.ಗೆ ಹೋಗುವುದಕ್ಕೆ ಭಯವಾಗುತ್ತಿತ್ತು. ಆಮ್ಲಜನಕದ ಸಿಲಿಂಡರನ್ನು ತೆರೆಯುವುದಕ್ಕೆ ನಾನಾಗಿ ಮುಂದಾಗುತ್ತಿರಲಿಲ್ಲ. ಬೇರೆಯವರು ತೆರೆಯುವ ಸಂದರ್ಭಗಳಲ್ಲಿ ಆದಷ್ಟು ದೂರದಲ್ಲಿರಲು ಹವಣಿಸುತ್ತಿದ್ದೆ!

ಈ ಅಪಘಾತ ಬೇರೊಂದು ರೀತಿಯಲ್ಲಿ ನನಗೆ ಸಹಾಯ ಮಾಡುವುದಕ್ಕೆ ಕಾರಣವಾಯಿತು. ಅದರಿಂದ ಮಾನಸಿಕವಾಗಿ ನನಗಾಗುತ್ತಿದ್ದ ತುಮುಲವನ್ನು ಆರ್.ಎಂ.ಓ. ಅವರ ಮುಂದೆ ಹೇಳಲಾರಂಭಿಸಿದೆ. ಬಹುಶಃ ನನ್ನ ಪರಿಸ್ಥಿತಿಯನ್ನು ಅರ್ಥ ಮಾಡಿಕೊಂಡ ಅವರು ಕೆಲವೇ ದಿನಗಳಲ್ಲಿ ಸರ್ಜಿಕಲ್ 'ಬಿ' ಘಟಕದಲ್ಲಿ ತೆರಪಾದ ಜಾಗಕ್ಕೆ ನನ್ನನ್ನು ಬದಲಾಯಿಸಿದರು.

## ಸರ್ಜನ್ ಆಗುವ ಅವಕಾಶ

ಡಾ|| ಪಿ. ಆರ್. ಸತ್ಯನಾರಾಯಣ ಶೆಟ್ಟಿಯವರು ಸರ್ಜಿಕಲ್ 'ಬಿ' ಘಟಕದ ಪ್ರಾಧ್ಯಾಪಕರು. ಮದ್ರಾಸಿನಲ್ಲಿ ಉನ್ನತ ವೈದ್ಯಕೀಯ ವಿದ್ಯಾಭ್ಯಾಸ ಮಾಡಿದ್ದು ಉತ್ತಮ ಹಾಗೂ ಧೈರ್ಯಶಾಲಿ ಸರ್ಜನ್ ಎಂಬ ಖ್ಯಾತಿ ಅವರದು; ಕಟ್ಟುನಿಟ್ಟಾದ ವರ್ತನೆ ಅವರ ಸ್ವಭಾವ. ಹಾಗಾಗಿ ಅವರ ಘಟಕದಲ್ಲಿ ಸಹಾಯಕರಾಗಿ ಕೆಲಸ ಮಾಡಲು ಸಹಾಯಕ ವೈದ್ಯರೇ ಅಲ್ಲದೆ ತರಬೇತಿ ಪಡೆಯುವ ವಿದ್ಯಾರ್ಥಿ ವೈದ್ಯರೂ (ಹೌಸ್ ಸರ್ಜನ್) ಸಹ ಹಿಂಜರಿಯುತ್ತಿದ್ದರೆಂಬ ಮಾತುಗಳು ಪ್ರಚಲಿತವಿದ್ದವು. ಕಷ್ಟಪಟ್ಟು ಕಾರ್ಯನಿರ್ವಹಿಸಲು ಹಿಂಜರಿಯುವ ಸ್ವಭಾವದವನಲ್ಲದ ನಾನು ಅನಾಯಾಸವಾಗಿ ದೊರಕಿದ ಅವಕಾಶವನ್ನು ತೆರೆದ ಮನಸ್ಸಿನಿಂದಲೇ

ಸ್ವಾಗತಿಸಿದೆ. ಕೆಲವು ಸಮಯ ಸರ್ಕಾರೀ ಆಸ್ಪತ್ರೆಗಳಲ್ಲಿ ಜವಾಬ್ದಾರಿಯುತ ಸ್ಥಾನಗಳಲ್ಲಿ ಕಾರ್ಯ ನಿರ್ವಹಿಸಿದವ ನಾನೆಂಬುದನ್ನು ಅರಿತ ಡಾ॥ ಶೆಟ್ಟರು ನನ್ನನ್ನು ಗೌರವಾದರಗಳಿಂದಲೇ ಕಾಣುತ್ತಿದ್ದರು. ನಾನೂ ಸಹ ಅವರು ವೈಯಕ್ತಿಕವಾಗಿ ಕಾರ್ಯ ನಿರ್ವಹಿಸುತ್ತಿದ್ದ ರೀತಿನೀತಿಗಳು, ಅವರ ಮನೋಗತಗಳನ್ನು ಅರಿತುಕೊಂಡು ಬೇಸರ ಉಂಟಾಗದ ರೀತಿಯಲ್ಲಿ ಘಟಕದ ಕೆಲಸ ಕಾರ್ಯಗಳನ್ನು ನಿರ್ವಹಿಸುತ್ತಿದ್ದೆ. ಅವರ ಘಟಕದಲ್ಲಿ ಕಾಲೇಜಿನ ವತಿಯಿಂದ ಇದ್ದ ಪ್ರವಾಚಕರು ಹೆಚ್ಚಿನ ಆಸಕ್ತಿ ವಹಿಸುತ್ತಿರಲಿಲ್ಲ. ಆದುದರಿಂದ ಘಟಕದ ಬಹುಪಾಲು ಜವಾಬ್ದಾರಿಗಳನ್ನೆಲ್ಲಾ ನಾನೇ ವಹಿಸಿಕೊಳ್ಳುವಂತಾಯಿತು. ಪ್ರತಿದಿನ ಆದಷ್ಟು ಬೇಗನೆ ವಾರ್ಡುಗಳಿಗೆ ಹೋಗಿ ಅಲ್ಲಿಯ ಕೆಲಸಗಳನ್ನು ಮುಗಿಸುತ್ತಿದ್ದೆ; ಅಲ್ಲಿಂದ ಹೊರ ರೋಗಿಗಳ ವಿಭಾಗಕ್ಕೋ, ಓ. ಟಿ.ಗೋ ಧಾವಿಸುತ್ತಿದ್ದೆ. ಅಲ್ಲಿ ನಾನು ಕಾರ್ಯಾರಂಭ ಮಾಡಿದ ಕೆಲವೇ ತಿಂಗಳಲ್ಲಿ ಪ್ರವಾಚಕರು ಬೆಂಗಳೂರಿಗೆ ವರ್ಗ ಮಾಡಿಸಿಕೊಂಡು ಹೋದರು. ಖಾಲಿಯಾದ ಅವರ ಜಾಗಕ್ಕೆ ನನ್ನ ಹುದ್ದೆಯ ಜೊತೆಗೆ ಕಾಲೇಜಿನ ಡೀನ್ ಅವರೇ ಅರೆಕಾಲಿಕ ಪ್ರವಾಚಕನನ್ನಾಗಿ ನನ್ನನ್ನು ಹಂಗಾಮಿಯಾಗಿ ನೇಮಕ ಮಾಡಿದರು. ಆದರ ಬಗೆಗೆ ಬೆಂಗಳೂರಿನಲ್ಲಿ ಇಲಾಖಾ ಮಟ್ಟದಲ್ಲಿ ಖಾಯಂ ಆಗಿ ಆಸಿಸ್ಟೆಂಟ್ ಸರ್ಜನ್ ಹಾಗೂ ಪ್ರವಾಚಕನೆಂದು (Asst. Surgeon cum Lecturer) ಆದೇಶ ಹೊರಡುವಂತೆ ಮಾಡುವುದರಲ್ಲೂ ಯಶಸ್ವಿಯಾದೆ. ಹಾಗೆ ಲಭಿಸಿದ ಬೋಧಕ ಹುದ್ದೆಯಿಂದ ಕೆಲಸ ಕಾರ್ಯಗಳ ವ್ಯಾಪ್ತಿಯೂ ವಿಸ್ತಾರವಾಯಿತು. ಬೆಳಿಗ್ಗೆ ವಿದ್ಯಾರ್ಥಿಗಳ ಹಾಜರಿ ದಾಖಲಿಸುವುದು, ಕೆಲವು ರೋಗಗಳ ಮೂಲಭೂತ ಲಕ್ಷಣಗಳನ್ನು ಸಂಬಂಧಿಸಿದ ರೋಗಿಗಳ ಹಾಸಿಗೆಗಳ ಪಕ್ಕದಲ್ಲೇ ಪ್ರದರ್ಶಿಸಿ (Bedside Clinic) ತೋರಿಸುವುದು, ವಾರದಲ್ಲಿ ಒಂದೆರಡು ಸಾರಿ ಕಿರಿಯ ವಿದ್ಯಾರ್ಥಿಗಳಿಗೆ ಕಾಲೇಜಿನಲ್ಲಿ ಸರ್ಜರಿಯ ಮೂಲಭೂತ ತತ್ವಗಳ ವಿಷಯದಲ್ಲಿ ಪ್ರವಾಚನ ಮಾಡುವುದು ಮುಂತಾದವು ನನ್ನ ಹಿಂದಿನ ಕರ್ತವ್ಯಗಳ ಜೊತೆ ಸೇರ್ಪಡೆಯಾದವು. ಈ ಅವಕಾಶಗಳನ್ನು ಅತ್ಯಂತ ಶ್ರದ್ಧೆಯಿಂದಲೇ ನಿರ್ವಹಿಸುತ್ತಿದ್ದೆ ; ಅಲ್ಲದೆ ಡಾ॥ ಶೆಟ್ಟರು ನೀಡುತ್ತಿದ್ದ ಯಾವುದೇ ಸಲಹೆ ಸೂಚನೆಗಳನ್ನು ನಿರ್ಲಕ್ಷ್ಯ ಮಾಡದೆ ನೇರವೇರಿಸುತ್ತಿದ್ದೆ. ಒಂದೊಂದು ಸಾರಿ ಸಾಯಂಕಾಲ ಅವರು ರೋಗಿಗಳನ್ನು ನೋಡಲು ಬರುವುದು ರಾತ್ರಿ ಎಂಟು ಗಂಟೆಗಳ ಮೇಲಾದರೂ ಕಾಯ್ದು ಕೊಂಡಿರುತ್ತಿದ್ದೆ. ಅದರಿಂದಾಗಿ ನನ್ನಲ್ಲಿ ನಂಬಿಕೆ ಹಾಗೂ ಒಳ್ಳೆಯ ಅಭಿಪ್ರಾಯ ಉಂಟಾಗಿತ್ತೆನಿಸುತ್ತದೆ. ಅವರು ಜರುಗುತ್ತಿದ್ದ ಎಲ್ಲಾ ಆಪರೇಷನ್‌ಗಳಿಗೆ ನಾನೇ ಮೊದಲ ಸಹಾಯಕನಾಗುವಂತಾಯಿತು. ಸಣ್ಣಪುಟ್ಟ ಆಪರೇಷನ್‌ಗಳನ್ನು ನಾನೇ ಸ್ವತಂತ್ರವಾಗಿ ಜರುಗಿಸಲು ಅವಕಾಶ ಕಲ್ಪಿಸಿ ಕೊಡುತ್ತಿದ್ದರು. ಅದರಿಂದಾಗಿ ಹರ್ನಿಯ, ಹೈಡ್ರೋಸೀಲ್, (ವೃಷಣ ನೀರ್ಬಾವು). ವ್ಯಾರೀಕೋಸ್ ವೀನ್ಸ್ (ಕಾಲಿನ ರಕ್ತನಾಳಗಳು ಉಬ್ಬಿ ಸುರುಳಿಯಂತಾಗುವುದು) ಮುಂತಾದ ಆಪರೇಷನ್‌ಗಳನ್ನು ನಾನೇ ಮಾಡುತ್ತಿದ್ದೆ. ಉದರಕೋಶವನ್ನು ತೆರೆಯುವುದು, ನಂತರ ಮುಚ್ಚಿ ಹೊಲಿಗೆ ಹಾಕುವುದಕ್ಕೂ ಸಾಕಷ್ಟು ಅವಕಾಶಗಳು ಸಿಗುತ್ತಿದ್ದವು. ಸ್ವತಃ ನಾನೇ ಜರುಗಿಸುತ್ತಿದ್ದ ಆಪರೇಷನ್‌ಗಳಲ್ಲಿ ಏನಾದರೂ ವ್ಯತ್ಯಯವಾದರೆ ಆಪರೇಷನ್ ಮಾಡಿದವರು ಡಾ॥ ಸತ್ಯನಾರಾಯಣ ಶೆಟ್ಟರೆಂದೇ ಬರೆದಿಡುವಷ್ಟು ಸ್ವಾತಂತ್ರ್ಯವನ್ನು ಕೊಟ್ಟಿದ್ದರು. ಕೆಲವು ವರ್ಷಗಳು ನಾನು ಅವರ ಸಹಾಯಕನಾಗಿ ಮುಂದುವರಿಯುವಂತಾದರೆ ನಾನೊಬ್ಬ ಸಮರ್ಥ ಸರ್ಜನ್ ಆಗುವಂತೆ ಮಾಡುವುದಾಗಿ ಕೆಲವರ ಜೊತೆ ಹೇಳುತ್ತಿದ್ದರಂತೆ.

ಒಂದು ಸಾರಿ ದಿನದ ಗುರುತರವಾದ ಆಪರೇಷನ್‌ಗಳೆಲ್ಲಾ ಮುಗಿದ ನಂತರ ಸಣ್ಣದೊಂದು ಆಪರೇಷನ್ ನಾನು ಜರುಗಿಸಬಹುದೆಂದು ಹೇಳಿ ಹೊರಟು ಹೋದರು. ಶ್ವಾಸಕೋಶ ದಲ್ಲಿ ಕ್ಷಯರೋಗ, ಕ್ಯಾನ್ಸರ್‌ಗಳಂತಹ ವ್ಯಾಧಿಗಳ ಅನುಮಾನವಿದ್ದವರ ಕುತ್ತಿಗೆಯ ಕೆಳಭಾಗದಲ್ಲಿ ಗಳಲೆಯಂಥ ಗಂಟುಗಳು ಉದ್ಭವಿಸಬಹುದು. ಅಂತಹ ಗಂಟನ್ನು ಹೊರತೆಗೆದು ಸೂಕ್ಷ್ಮದರ್ಶಕ ಯಂತ್ರದ ಮೂಲಕ ಪರೀಕ್ಷೆಗೊಳಪಡಿಸಿದರೆ (ಜೀವುಂಡಿಗೆ ಪರೀಕ್ಷೆ) ಶ್ವಾಸಕೋಶದ ವ್ಯಾಧಿಯ ಬಗೆಗೆ ಸುಳಿವು ಸಿಗುವ ಸಾಧ್ಯತೆಗಳಿರುತ್ತವೆ. ಅಂತಹ ಒಬ್ಬ ರೋಗಿಯ ಗಂಟನ್ನು ಸ್ಥಳೀಯ ಅರವಳಿಕೆಯ ಸಹಾಯದಿಂದಲೇ ಹೊರ ತೆಗೆಯುವ ಪ್ರಯತ್ನ ಮಾಡುತ್ತಿದ್ದೆ. ನಿರೀಕ್ಷಿಸಿದಷ್ಟು ಸುಲಭವಾಗಿ ಅದು ಹೊರಬರಲಿಲ್ಲ; ಶ್ರಮದಿಂದಲೇ ಹೊರ ತೆಗೆದೆನಾದರೂ, ತೆಗೆದ ಜಾಗದಿಂದ ಹಠಾತ್ತನೆ ವಿಪರೀತ ರಕ್ತಸ್ರಾವ ಉಂಟಾಗತೊಡಗಿತು. ಎಷ್ಟೇ ಪ್ರಯತ್ನ ಪಟ್ಟರೂ ಅದನ್ನು ಹತೋಟಿಗೆ ತರಲು ಸಾಧ್ಯವಾಗಲಿಲ್ಲ. ಆಸ್ಪತ್ರೆಯಲ್ಲಿ ಎಲ್ಲಿಯಾದರೂ ಡಾ|| ಶೆಟ್ಟರು ಇದ್ದರೆ, ಕರೆತರಲು ಹೇಳಿಕಳುಹಿಸಿದೆ; ಆದರೆ ಅಲ್ಲೆಲ್ಲೂ ಅವರು ಸಿಗಲಿಲ್ಲವಂತೆ. ಡಾ|| ಜೀವಂಧರ ಕುಮಾರ್ ಎಂಬ ಇನ್ನೊಬ್ಬ ಸರ್ಜನ್ ಸಹಾಯಕ್ಕೆ ಬಂದು ರಕ್ತಸ್ರಾವವನ್ನು ಹತೋಟಿಗೆ ತರಲು ಸಹಕರಿಸಿದರು. ಅಷ್ಟರಲ್ಲೇ ವಿಷಯ ತಿಳಿದ ಡಾ|| ಶೆಟ್ಟರು ಓ. ಟಿ.ಗೆ ಧಾವಿಸಿ ಬಂದರು. ಪ್ರಕರಣದ ವಿವರಗಳು ತಿಳಿದಾಗ ಅಂತಹ ಪರಿಸ್ಥಿತಿ ಯಾರಿಗಾದರೂ ಒಂದೊಂದು ಸಾರಿ ಆಗುತ್ತದೆಂದು ನನ್ನಲ್ಲಿ ಸ್ಥೈರ್ಯ ಉಂಟಾಗುವಂತೆ ಮಾಡಿದರು.

ಅಂತಾರಾಷ್ಟ್ರೀಯ ಸರ್ಜನ್ನರ ಸಮ್ಮೇಳನವೊಂದರಲ್ಲಿ ಭಾಗವಹಿಸಲು ಡಾ|| ಶೆಟ್ಟರು ಕೆಲವೇ ದಿನಗಳಲ್ಲಿ ಅಮೆರಿಕಾಕ್ಕೆ ಪ್ರಯಾಣ ಮಾಡುವುದರಲ್ಲಿದ್ದರು. ಇನ್ನೇನು ಹೊರಡುವುದು ೩-೪ ದಿನಗಳಿದ್ದಾಗ ಅತ್ಯಂತ ತುರ್ತಾಗಿ ನಿಭಾಯಿಸಬೇಕಾದ ಗಂಭೀರ ಸ್ವರೂಪದ ಪ್ರಕರಣ ವೊಂದನ್ನು ಎದುರಿಸಬೇಕಾಯಿತು. ಕೊಡಗಿನ ಕಡೆಯ ಇಪ್ಪತ್ತರ ಹರೆಯದ ಯುವಕನೊಬ್ಬ ಗುಂಡೇಟಿನಿಂದ ಗಾಯವಾಗಿ ನಮ್ಮ ಘಟಕಕ್ಕೆ ದಾಖಲಾದ. ಹೊಟ್ಟೆಯ ಎಡಬದಿಯಲ್ಲಿ ಒಳಕ್ಕೆ ಪ್ರವೇಶಿಸಿದ ಗುಂಡು ಬಲಗಡೆಯ ಎದೆಗೂಡಿನ ಮೇಲ್ಭಾಗದಲ್ಲಿ ಹೊರ ಹೋದಂತಿತ್ತು. ಅದು ಬಹುಶಃ ಸ್ಪ್ಲೀನ್ (Spleen ಗುಲ್ಮ), ಜಠರ, ಲಿವರ್ (ಯಕೃತ್ತು), ಹಾಗೂ ಬಲಗಡೆಯ ಶ್ವಾಸಕೋಶಗಳನ್ನು ತೂರಿಕೊಂಡು ಚಲಿಸಿರಬಹುದೆಂದು ಅಂದಾಜು ಮಾಡಬಹುದಾಗಿತ್ತು. ಅವುಗಳಲ್ಲಿ ಯಾವುದಕ್ಕಾದರೂ ಹಾನಿಯಾಗಿದ್ದು ಬಹುಶಃ ಆಪರೇಷನ್ ಮಾಡಿಯೇ ತೀರಬೇಕಾಗುತ್ತದೆಂಬುದು ನಮ್ಮಲ್ಲಿ ಕೆಲವರ ಅನಿಸಿಕೆಯಾಗಿತ್ತು. ಅವನ ಪರಿಸ್ಥಿತಿಯನ್ನು ಡಾ|| ಶೆಟ್ಟರು ತುಂಬಾ ಗಮನವಿಟ್ಟು ಶ್ರದ್ಧೆಯಿಂದ ಪರೀಕ್ಷೆ ಮಾಡಿದರು. ಹಲವು ಕೋನಗಳಿಂದ ಎಕ್ಸ್‌ರೇ ಪಟಗಳನ್ನು ತೆಗೆಸಿದರು.

ಅನಂತರ ಅವನಿಗೆ ಯಾವುದೇ ರೀತಿಯ ಆಪರೇಷನ್ ಮಾಡುವ ಅವಶ್ಯಕತೆ ಇಲ್ಲವೆಂಬ ನಿರ್ಧಾರಕ್ಕೆ ಬಂದರು! ಅವರ ಈ ನಿರ್ಧಾರದ ವಿಷಯ ತಿಳಿದ ಇತರ ಸರ್ಜಿಕಲ್ ಘಟಕ ದವರನ್ನು ಸಹ ಆಶ್ಚರ್ಯಚಕಿತರನ್ನಾಗಿಸಿತು. ಅಮೆರಿಕಾಕ್ಕೆ ಹೋಗುವ ತರಾತುರಿಯ ಸಂದರ್ಭದಲ್ಲಿ ಅಂತಹ ಗುರುತರ ಆಪರೇಷನ್ ಮಾಡಲು ಹಿಂಜರಿದು ಆ ನಿರ್ಧಾರಕ್ಕೆ ಬಂದಿರಬಹುದೆಂಬ ಟೀಕೆಗಳೂ ಕೇಳಿ ಬಂದವು; ಅವುಗಳಿಗಾವುದಕ್ಕೂ ಅವರು ಕಿವಿಗೊಡಲಿಲ್ಲ. ಆಶ್ಚರ್ಯವೋ ಎಂಬಂತೆ ರೋಗಿಗೂ ಯಾವ ಅಡ್ಡ ಪರಿಣಾಮಗಳು ಉಂಟಾಗಲಿಲ್ಲ. ನಿಗದಿತ ದಿನ ಅವರು ತಮ್ಮ ಪ್ರಯಾಣ ಕೈಗೊಂಡರು. ಅವರ ಬದಲಿಗೆ 'ಬ' ಘಟಕದ ನಿರ್ವಹಣೆಗೆ

ಬಂದ ಡಾ|| ಜೀವಂಧರ ಕುಮಾರ್ ಸಹಾ ಅದೇ ವಿಧಾನವನ್ನು ಮುಂದುವರಿಸಿದರು. ಆ ಯುವಕನ ದೈನಂದಿನ ಆರೈಕೆಗಳನ್ನು ಬಹುಪಾಲು ನಾನೇ ನೋಡಿಕೊಳ್ಳುತ್ತಿದ್ದೆ. ಮುಂದಿನ ೧೦-೧೨ ದಿನಗಳಲ್ಲಿ ಮತ್ತಾವುದೇ ತೊಂದರೆಗಳಾಗದೆ ಅವನು ಆಸ್ಪತ್ರೆಯಿಂದ ಬಿಡುಗಡೆಯಾದ. ಸಂಪ್ರೀತರಾದ ಅವನ ತಂದೆ-ತಾಯಿಯವರು ನನ್ನ ಮನೆಗೆ ಬಂದು ಒಳ್ಳೆಯ ಮೊತ್ತದ ಸಂಭಾವನೆ ಹಾಗೂ ಉಡುಗೊರೆಗಳನ್ನಿತ್ತು ಹೋದರು.

ಡಾ|| ಜೀವಂಧರ ಕುಮಾರ್ ಅದೇ ತಾನೇ ಇಂಗ್ಲೆಂಡಿನಲ್ಲಿ ಎಫ್.ಆರ್.ಸಿ.ಎಸ್., ಎಂಬ ಉನ್ನತ ಪದವಿಯನ್ನು ಗಳಿಸಿಕೊಂಡು ಸ್ವದೇಶಕ್ಕೆ ಹಿಂದಿರುಗಿದ್ದರು. ನಡೆ, ನುಡಿ, ಹಾಗೂ ವೃತ್ತಿಯಲ್ಲಿ ನಯ, ನಾಜೂಕಿನ ಕೌಶಲ್ಯ ಅವರದಾಗಿತ್ತು, ಹೊರದೇಶದ ತರಬೇತಿಯಿಂದ ಸಂಶೋಧನೆಗಳಲ್ಲಿ ಹೆಚ್ಚಿನ ಆಸಕ್ತಿ ಅವರಲ್ಲಿದ್ದಂತಿತ್ತು. ಅವರು ಯೋಜಿಸಿಕೊಂಡಿದ್ದ ಒಂದು ಸಂಶೋಧನೆಯ ಜವಾಬ್ದಾರಿಯನ್ನು ನನಗೆ ವಹಿಸಿದರು. ಪೆಪ್ಟಿಕ್ ಅಲ್ಸರ್ (ಜೀರ್ಣಕ ಹುಣ್ಣು) ಉಂಟಾದ ಅನುಮಾನವಿರುವ ರೋಗಿಗಳ ಜಠರದಲ್ಲಿ ಸ್ರವಿಕೆಯಾಗುವ ಹೈಡ್ರೋಕ್ಲೋರಿಕ್ ಆಮ್ಲದ ಮೊತ್ತವನ್ನು ಹಿಸ್ಟಮಿನ್ ಎಂಬ ಇಂಜಕ್ಷನ್ ನೀಡಿ ಪ್ರಚೋದಿಸಿ, ಅನಂತರ ವಿವಿಧ ಸಮಯಗಳ ಅಂತರದಲ್ಲಿ ಸ್ರವಿಕೆಯಾಗುವ ಆಮ್ಲದ ಪ್ರಮಾಣವನ್ನು ಕರಾರುವಕ್ಕಾಗಿ ಅಂದಾಜು ಮಾಡುವ ವಿಧಾನವೊಂದು "ಹಿಸ್ಟಮಿನ್ ಟೆಸ್ಟ್" (Augumented Histamine Test) ಆಗತಾನೇ ಇಂಗ್ಲೆಂಡ್ ಮುಂತಾದ ಹೊರದೇಶಗಳಲ್ಲಿ ಪ್ರಚಾರಕ್ಕೆ ಬಂದಿತ್ತು. ಅದನ್ನು ನಮ್ಮ ಘಟಕದಲ್ಲಿ ಕೈಗೊಳ್ಳುವ ನಿರ್ಧಾರವಾಯಿತು.

ರಾತ್ರಿಯೆಲ್ಲಾ ಖಾಲಿ ಹೊಟ್ಟೆಯಲ್ಲಿರಿಸಿದ ರೋಗಿಯ ಜಠರದೊಳಗಡೆ ಬೆಳಿಗ್ಗೆ ರಬ್ಬರ್ ನಳಿಕೆಯನ್ನು ತೂರಿಸುವುದು; ನಿಗದಿತ ಅವಧಿಗಳಲ್ಲಿ ಹಿಸ್ಟಮಿನ್ ಇಂಜಕ್ಷನ್ ನೀಡುತ್ತಾ ನಂತರ ಸ್ರವಿಸಿದ ಜಠರ ರಸವನ್ನು ಹೈಡ್ರೋಕ್ಲೋರಿಕ್ ಆಮ್ಲದ ಅಂದಾಜು ಮಾಡುವುದಕ್ಕೆ ಪ್ರಯೋಗಾಲಯಕ್ಕೆ ಕಳುಹಿಸುತ್ತಿರುವುದು, ಈ ಸಂಶೋಧನೆಯ ಪ್ರಮುಖ ಅಂಶಗಳು. ಬೆಳಗಿನ ಸಮಯ ಸುಮಾರು ಒಂದೂವರೆ ಗಂಟೆ ಆ ಕೆಲಸದಲ್ಲಿ ತಲ್ಲೀನರಾಗಿರಬೇಕಾಗುತ್ತಿತ್ತು. ಸುಮಾರು ೪೦-೫೦ ಜನ ರೋಗಿಗಳಿಗೆ ಆ ಪರೀಕ್ಷೆ ಜರುಗಿಸಿದ ನೆನಪಿದೆ. ಹಾಗೆ ದೊರೆತ ಫಲಿತಾಂಶವನ್ನನುಸರಿಸಿ ಅಂತಹವರಿಗೆ ಆಪರೇಷನ್ ಮಾಡುವಾಗ ಕತ್ತರಿಸಿ ತೆಗೆಯುವ ಜಠರದ ವಿಸ್ತಾರದ ಬಗೆಗೆ ನಿರ್ಧಾರ ಮಾಡಬಹುದಾಗಿತ್ತು.

ಕೆ. ಆರ್. ಆಸ್ಪತ್ರೆಯಲ್ಲಿ ಕೆಲಸ ಮಾಡಲಾರಂಭಿಸಿದಾಗಿನಿಂದಲೂ ಅದರ ಆಡಳಿತ ನಿರ್ವಹಣೆಯಲ್ಲಿ ಭಾಗವಹಿಸುವ ಅವಕಾಶಗಳು ಒದಗಿ ಬರುತ್ತಿದ್ದುದುಂಟು. ಬಹುಶಃ ಆ ಸಮಯದಲ್ಲಿ ಅಲ್ಲಿದ್ದ ಇತರ ಅಸಿಸ್ಟೆಂಟ್ ಸರ್ಜನ್ ಸಮೂಹದಲ್ಲಿದ್ದ ಇತರರಿಗಿಂತ ಆಡಳಿತ ವಿಷಯಗಳಲ್ಲಿ ಸ್ವಲ್ಪ ಮಟ್ಟಿಗಿನಅನುಭವವಿದ್ದವನು ನಾನೊಬ್ಬನೇ ಅನಿಸುತ್ತದೆ. ಆರ್.ಎಂ.ಓ. ಡಾ|| ನಾರಾಯಣಸ್ವಾಮಿ ಶೆಟ್ಟರ ವೈಯಕ್ತಿಕ ಸಂಪರ್ಕ ಹೆಚ್ಚಾದಂತೆಲ್ಲಾ ಅವರು ರಜೆ ಹೋಗುವ ಸಂದರ್ಭಗಳಲೆಲ್ಲಾ ನನ್ನನ್ನು ಅವರ ಬದಲಿಗೆ ಆರ್.ಎಂ.ಓ. ಕೆಲಸಗಳ ನಿರ್ವಹಣೆಗೆ ನೇಮಕ ಮಾಡಲು ಶುರು ಮಾಡಿದರು. ಸೇವಾ ಜ್ಯೇಷ್ಠತೆಯ ಬಗೆಗೆ ಅದಾಗಲೇ ಕಹಿ ಅನುಭವಗಳನ್ನನುಭವಿಸಿದ್ದ ನಾನು ಹಾಗೆ ಮಾಡಬಾರದೆಂದು ವಿನಂತಿಸುತ್ತಿದ್ದರೂ, ಆ ಬೃಹತ್ ಆಸ್ಪತ್ರೆಯ ವಾತಾವರಣದಲ್ಲಿ ಅಂತಹ ವಿಷಯಗಳ ಬಗೆಗೆ ಯಾರೂ ತಲೆ ಕೆಡಿಸಿಕೊಳ್ಳುವುದಿಲ್ಲ ಎಂದು ನನ್ನ ಬಾಯಿ ಮುಚ್ಚಿಸುತ್ತಿದ್ದರು. ಹೀಗೆ ಬದಲಿ ಕಾರ್ಯ ನಿರ್ವಹಿಸುವ ಸಂದರ್ಭಗಳಲ್ಲಿ ಆಡಳಿತ ಸಮಸ್ಯೆಗಳನ್ನು ಚರ್ಚಿಸಲು ಆಗ ಡೀನ್ ಆಗಿದ್ದ ಡಾ|| ಜೆ. ಜೆ. ಧರ್ಮರಾಜ್ ಅವರನ್ನು

ಭೇಟಿಯಾಗುವ ಸಂದರ್ಭಗಳಿರುತ್ತಿದ್ದವು. ದಕ್ಷ ಹಾಗೂ ಕಟ್ಟುನಿಟ್ಟಿನ ಆಡಳಿತಕ್ಕೆ ಅವರು ಹೆಸರಾಗಿದ್ದರು. ಆರ್.ಎಂ.ಓ. ಶೆಟ್ಟರು ಮುಂದೊಂದು ಸಾರಿ ಕೆಲವು ತಿಂಗಳು ರಜೆ ಹೋಗ ಬೇಕಾದಾಗ ಬದಲಿ ವ್ಯವಸ್ಥೆಯ ಬಗೆಗೆ ಡೀನ್ ಅವರ ಹತ್ತಿರ ಪ್ರಸ್ತಾಪಿಸಿದರಂತೆ. ಅವರು ನನ್ನನ್ನೇ ಆ ಜಾಗಕ್ಕೆ ಬದಲಿ ಏರ್ಪಾಡು ಮಾಡಬಹುದಲ್ಲಾ ಎಂದು ಸೂಚಿಸಿದರಂತೆ. ಆರ್.ಎಂ.ಓ. ಅವರು ನಾನೂ ಆಗಾಗ್ಗೆ ಜ್ಯೇಷ್ಠತೆಯ ಸಮಸ್ಯೆಯನ್ನು ಮುಂದೂಡಿ, ಅಂತಹ ವ್ಯವಸ್ಥೆಗೆ ಸಮ್ಮತಿಸದಿದ್ದಾಗ, ಅಂತಹ ಸಮಸ್ಯೆ ಬಂದಾಗ ನೋಡಿದರಾಯಿತು; ಅವರೀಗಾಗಲೇ ಕೆಲವು ಆಸ್ಪತ್ರೆಗಳನ್ನು ಸ್ವತಂತ್ರವಾಗಿ ನಿರ್ವಹಿಸಿದ ಅನುಭವವಿರುವಂತಿದೆ. ಸದ್ಯಕ್ಕೆ ಅವರನ್ನೇ ಬದಲಿಗೆ ನೇಮಿಸಿ ಅಂದರಂತೆ. ಕೆ. ಆರ್. ಆಸ್ಪತ್ರೆಗೆ ಬಂದಾಗಿನಿಂದ ಶೈಕ್ಷಣಿಕ ವಿಷಯಗಳತ್ತ ನಾನು ಗಮನ ಹರಿಸುವ ಅವಕಾಶಗಳು ಹೆಚ್ಚಾಗಿ ಸಿಗುತ್ತಿದ್ದು ಮತ್ತೊಮ್ಮೆ ಆಡಳಿತ ಸಮಸ್ಯೆಗಳ ಗೋಜಲು ಗಳಲ್ಲಿ ಸಿಲುಕಿ ಹಾಕಿಕೊಳ್ಳುವ ಆಕಾಂಕ್ಷೆ ನನಗಿರಲಿಲ್ಲ. ಹೇಗಾದರೂ ಮಾಡಿ ಅದರಿಂದ ತಪ್ಪಿಸಿ ಕೊಳ್ಳಬಹುದೆಂದು ಡೀನ್ ಧರ್ಮರಾಜ್ ಅವರನ್ನೇ ಖುದ್ದಾಗಿ ಭೇಟಿ ಮಾಡಿ ನನ್ನ ವಾದವನ್ನು ಮುಂದಿಟ್ಟೆ; ಅಲ್ಲದೆ ಆಸ್ಪತ್ರೆಯ ಹತ್ತಿರದಲ್ಲಿ ನಾನು ವಾಸವಾಗಿಲ್ಲವಾದುದರಿಂದ ಆವೇಳೆ ಹಾಗೂ ರಾತ್ರಿ ಆಸ್ಪತ್ರೆಯಲ್ಲಿ ಸಮಸ್ಯೆಗಳುದ್ಭವಿಸಿದರೆ ನಿಭಾಯಿಸುವುದು ಕಷ್ಟವಾಗುತ್ತದೆಂಬ ನೆಪವೊಡ್ಡಿದೆ. ಅದಕ್ಕವರು ನಾನಿರುವ ಮನೆಯ ವಿಳಾಸವನ್ನು ತಿಳಿಸಿ ಹೋಗಬಹುದೆಂದೂ, ನನ್ನ ಹಾಜರಿಯ ಅವಶ್ಯಕತೆ ಕಂಡು ಬಂದರೆ ಅಂಬುಲೆನ್ಸ್ ವಾಹನ ಕಳುಹಿಸಿ ಕರೆತರುವಂತೆ ಏರ್ಪಾಡು ಮಾಡುವುದಾಗಿ ಹೇಳಿ ನಾನು ಒಪ್ಪಿಕೊಳ್ಳುವಂತೆ ಮಾಡಿದರು.

ಬದಲಿ ಆರ್.ಎಂ.ಓ. ಆಗಿ ಕಾರ್ಯ ನಿರ್ವಹಿಸುವ ಸಂದರ್ಭದಲ್ಲಿ ಕೇವಲ ನಾಮಕಾವಸ್ಥೆಯವನಂತೆ ಉಳಿಯಲಿಲ್ಲ. ಒಳಾಡಳಿತ ವ್ಯವಸ್ಥೆಯಲ್ಲಿ ಕಂಡು ಬರುತ್ತಿದ್ದ ಕೆಲವು ನ್ಯೂನತೆಗಳನ್ನು ಸರಿಪಡಿಸುವ ಪ್ರಯತ್ನಗಳನ್ನು ಮಾಡಿದೆ. ವಾರ್ಡುಗಳಲ್ಲಿ ತುರ್ತು ಚಿಕಿತ್ಸಾ ಸಂದರ್ಭಗಳಲ್ಲಿ ಅತ್ಯವಶ್ಯಕವಾದ ಕೆಲವು ಇಂಜಕ್ಷನ್ ಮತ್ತಿತರ ಮದ್ದುಗಳನ್ನು ಪ್ರತ್ಯೇಕವಾಗಿ ಸದಾ ಇರಿಸಬೇಕಾದ ನಿಯಮವಿತ್ತು; ಅದಕ್ಕಾಗಿಯೇ 'ತುರ್ತು ಔಷಧಗಳ ಬೀರು' (Emergency Cupboard) ಸಹ ಒದಗಿಸಲಾಗಿರುತ್ತಿತ್ತು. ಆದರೂ ತುರ್ತಿನ ಸಂದರ್ಭಗಳಲ್ಲಿ ಜೀವ ರಕ್ಷಕ ಔಷಧಗಳು ಅಲ್ಲಿ ಲಭ್ಯವಿರದೆ ಪರದಾಡುವುದು ತಪ್ಪುತ್ತಿರಲಿಲ್ಲ. ಪರಿಸ್ಥಿತಿಯ ಅಭ್ಯಾಸ ಮಾಡಿ ಅಂತಹ ತುರ್ತು ಅವಶ್ಯಕ ಮದ್ದುಗಳ ಪಟ್ಟಿ ಮತ್ತು ಅವು ಸದಾ ಅಲ್ಲಿರಬೇಕಾದ ಮೊತ್ತವನ್ನು ನಿಗದಿ ಮಾಡಿದೆ. ನಂತರ ಪ್ರತಿಯೊಂದು ವಾರ್ಡುಗಳಲ್ಲಿ ಅವುಗಳನ್ನು ಇರಿಸುವಂತೆ ಮಾಡಿದೆನಲ್ಲದೆ, ಪ್ರತಿದಿನ ಖರ್ಚಾದ ರಖಂಗಳನ್ನು ಮರುದಿನ ಮೆಡಿಕಲ್ ಉಗ್ರಾಣದಿಂದ ತರಿಸಿ ಇಡಲೇ ಬೇಕೆಂದು ಕಡ್ಡಾಯ ಮಾಡಿದೆ; ಹಾಗೂ ಕೆಲ ಸಮಯ ಅವುಗಳನ್ನು ತಾಳೇ ನೋಡಿ, ಮರುದಿನ ಸರಿದೂಗಿಸಲೇ ಬೇಕೆಂದು ಕಡ್ಡಾಯ ಮಾಡಿದೆ. ಪದೇ ಪದೇ ಅವುಗಳನ್ನು ಪರಿವೀಕ್ಷಣೆ ಮಾಡುತ್ತಿದ್ದುದರಿಂದ ಹಿಂದಿನಂತೆ ಉದಾಸೀನದಿಂದಿರಲು ಸಾಧ್ಯವಾಗುತ್ತಿರಲಿಲ್ಲ; ಆಸ್ಪತ್ರೆಯ ವಾರ್ಡುಗಳಿಗೇ ಅಲ್ಲದೆ ವಿವಿಧ ಭಾಗಗಳಿಗೆ ಹಠಾತ್ತಾಗಿ ಭೇಟಿ ನೀಡಿ ಅಲ್ಲಿಯ ಅವ್ಯವಸ್ಥೆಗಳನ್ನು ಸರಿಪಡಿಸಲು ಪ್ರಯತ್ನಿಸುತ್ತಿದ್ದೆ. ನನ್ನ ಇಂತಹ ನಡೆವಳಿಕೆಗಳು ಕೆಲವು ನರ್ಸ್‌ಗಳು ಮತ್ತಿತರ ಸಿಬ್ಬಂದಿ ವರ್ಗದವರಿಗೆ ಕಿರಿ ಕಿರಿಯುಂಟು ಮಾಡಿರಬೇಕು, ಚೇಳಿಗೆ ಯಜಮಾನಿಕೆ ಕೊಟ್ಟಂತಾಗಿದೆಯೆಂದು ನನ್ನ ಹಿಂದೆ ಗೊಣಗಿಕೊಳ್ಳುತ್ತಿದ್ದರೆಂಬ ವಿಷಯ ತಿಳಿದಾಗ ಆ ಬಗೆಗೆ ಹೆಮ್ಮೆಯೇ ಆಯಿತು!

ಅಂತಹ ಒಂದು ಬದಲಿ ಕಾರ್ಯ ನಿರ್ವಹಣೆಯ ಕಾಲದಲ್ಲಿ ಸ್ಪೆಷಲ್ ವಾರ್ಡ್‌ನಲ್ಲಿ ಒಂದು ಮೋಸದ ಪ್ರಕರಣ ಬೆಳಕಿಗೆ ಬರುವಂತಾಯಿತು. ಕೊಡಗಿನ ಕಡೆಯ ಸಿರಿವಂತನೆಂದು ಹೇಳಿಕೊಂಡವನೊಬ್ಬ ಚಿಕಿತ್ಸೆಗಾಗಿ ಆಗಿನ ಕಾಲದ ಅತಿ ಹೆಚ್ಚು ಬಾಡಿಗೆಯ ಹತ್ತು ರೂಪಾಯಿ ವಾರ್ಡಿಗೆ ದಾಖಲಾಗಿ ಒಂದೆರಡು ತಿಂಗಳಾಗಿತ್ತು. ಗುರುತರವೆನಿಸುವ ಆಪರೇಷನ್ ಸಹ ಜರುಗಿಸಲಾಗಿತ್ತು. ಅವನ ಕಡೇ ದಿನಗಳಲ್ಲಿ ಅಲ್ಲಿಯ ನರ್ಸ್ ಮುಂತಾದವರ ಹತ್ತಿರ ಸಣ್ಣ ಪುಟ್ಟ ಸಾಲ ಪಡೆಯುತ್ತಿರುವನೆಂಬ ವಿಷಯ ಹೇಗೋ ನನ್ನ ಗಮನಕ್ಕೆ ಬಂದಿತು. ವಾರ್ಡಿಗೆ ಹೋಗಿ ಅವನು ಅಲ್ಲಿದ್ದ ಅವಧಿ, ಜರುಗಿದ ಆಪರೇಷನ್, ಆಸ್ಪತ್ರೆಗೆ ಆ ತನಕ ಅವನು ಮುಂಗಡವಾಗಿ ನೀಡಿದ್ದ ಮೊಬಲಗು ಮುಂತಾದವುಗಳ ಬಗೆಗೆ ವಿವರವಾಗಿ ತನಿಖೆ ಮಾಡಿದೆ. ಅಷ್ಟುದಿನ ಅಲ್ಲಿದ್ದರೂ ಆಸ್ಪತ್ರೆಗೆ ಅವನು ಒಂದು ಪೈಸೆ ಸಹ ಕಟ್ಟಿರಲಿಲ್ಲವೆಂಬ ಸೋಜಿಗದ ವಿಷಯ ಅದೇ ತಾನೇ ಬಯಲಾಯಿತು. ಯಾವುದೋ ಒಂದು ದಿನ ಆಸ್ಪತ್ರೆಯ ಕಚೇರಿ ಮುಚ್ಚಿದ ನಂತರ ವಾರ್ಡಿಗೆ ದಾಖಲಾಗಿದ್ದ. ಅದರಿಂದ ಕಾರ್ಯನಿರತ ನರ್ಸ್ ಅವನಿಂದ ಮುಂಗಡ ಹಣ ಪಡೆಯುವ ತಗಾದೆ ಮಾಡಲಿಲ್ಲ. ಮರುದಿನ ಕಾರ್ಯ ನಿರ್ವಹಿಸಲು ಬಂದವರು ಹಿಂದಿನ ದಿನ ಮುಂಗಡ ಕಟ್ಟಿರಬೇಕೆಂದು, ಆ ಬಗೆಗೆ ವಿಚಾರಿಸುವ ಗೊಡವೆಗೇ ಹೋಗಲಿಲ್ಲ. ಮುಂದಿನ ದಿನಗಳಲ್ಲಿ ಆಪರೇಷನ್ ಜರುಗಿದರೂ ಆಗಾಗ್ಗೆ ಆಸ್ಪತ್ರೆಗೆ ಕಟ್ಟಿಸಬೇಕಾದ ಹಣದ ಬಗೆಗೆ ಮತ್ತಾರೂ ರೋಗಿಯ ಕಡೆಯವರ ಮೇಲೆ ಒತ್ತಾಯ ಬೀರಲಿಲ್ಲ. ಅವನ್ನೆಲ್ಲಾ ಕ್ರೋಢೀಕರಿಸಿ ಅಂದಾಜು ಮಾಡಿದಾಗ ಅವನಿಂದ ಆಸ್ಪತ್ರೆಗೆ ಏಳೆಂಟು ಸಾವಿರ ರೂಪಾಯಿಗಳು ಸಂದಾಯ ವಾಗಬೇಕಿತ್ತು. ಬಹುಶಃ ಒಂದೆರಡು ದಿನಗಳಲ್ಲಿ ಅವನು ಎಲ್ಲರ ಕಣ್ತಪ್ಪಿಸಿ ವಾರ್ಡಿನಿಂದ ಪರಾರಿಯಾಗುವ ಸನ್ನಾಹದಲ್ಲಿದ್ದನೆನಿಸಿತು. ತಕ್ಷಣ ಡೀನ್ ಡಾ॥ ಧರ್ಮರಾಜ್ ಅವರನ್ನು ಭೇಟಿ ಮಾಡಿ ವರದಿ ಮಾಡಿದೆ. ವಿಷಯ ತಿಳಿದ ಅವರಂತೂ ಕೆಂಡಾಮಂಡಲವಾಗಿ ರೇಗಾಡಿದರು. ಕೂಡಲೇ ಅವನನ್ನು ಸಾಮಾನ್ಯರ ವಾರ್ಡಿಗೆ ಬದಲಾಯಿಸಿ, ಅವನು ತಪ್ಪಿಸಿಕೊಳ್ಳದಂತೆ ಪೊಲೀಸ್ ಪಹರೆಗೆ ಏರ್ಪಾಡು ಮಾಡಿದರು. ಆ ಪ್ರಕರಣದಲ್ಲಿ ಕರ್ತವ್ಯಭ್ರಷ್ಟರಾದ ಆಸ್ಪತ್ರೆಯ ಸಿಬ್ಬಂದಿಗಳನ್ನೆಲ್ಲಾ ಕಂಡು ಹಿಡಿದು ಅವರ ಮೇಲೆ ಕ್ರಮ ಜರುಗಿಸಲು ಆಸ್ಪತ್ರೆಯ ಕಚೇರಿಯ ಅಧಿಕಾರಿಗಳಿಗೆ ಆದೇಶ ನೀಡಿದರು. ಅವನ ಮನೆಯವರಿಗೆ ನೋಟೀಸ್ ಜಾರಿ ಮಾಡಿ ಬಾಕಿ ವಸೂಲಿಗೆ ಕ್ರಮ ತೆಗೆದು ಕೊಂಡರು.

## ಮತ್ತೊಂದು ಅನಿರೀಕ್ಷಿತ ತಿರುವು

ಜುಲೈ ತಿಂಗಳ (೧೯೬೩) ಕೊನೆಯ ವಾರದಲ್ಲೊಂದು ದಿನ ಹೊರ ರೋಗಿಗಳ ವಿಭಾಗದಲ್ಲಿ ಕಾರ್ಯನಿರತನಾಗಿದ್ದೆ. ಮೆಡಿಕಲ್ ಕಾಲೇಜಿನ ಕಾರ್ಯ ನಿರ್ವಾಹಕ ಕಾರ್ಯದರ್ಶಿಗಳು ತಮ್ಮನ್ನು ಕಾಣುವಂತೆ ನನಗೆ ಕರೆ ಕಳುಹಿಸಿದರು. ಕೂಡಲೇ ಹೋಗಿ ಭೇಟಿಯಾದೆ; ಅವರೊಂದು ಟೆಲಿಗ್ರಾಮ್‌ನ್ನು ನನ್ನ ಕೈಗಿತ್ತರು. ವೈದ್ಯಕೀಯ ಇಲಾಖೆಯಿಂದ ಬಂದಿದ್ದ ಆ ಟೆಲಿಗ್ರಾಮ್‌ನಲ್ಲಿ ನಾನು ಕೂಡಲೇ ಮಣಿಪಾಲ್‌ನ ಕಸ್ತೂರ್ಬಾ ಮೆಡಿಕಲ್ ಕಾಲೇಜಿನ ಸರ್ಜಿಕಲ್ ವಿಭಾಗದಲ್ಲಿ ಸ್ನಾತಕೋತ್ತರ ಎಂ.ಎಸ್. ಕೋರ್ಸ್‌ಗೆ ಸೇರಿಕೊಳ್ಳತಕ್ಕದೆಂದು ಆದೇಶ ಮಾಡಲಾಗಿತ್ತು. ಬೆರಗಾದವನಂತೆ ಕಾರ್ಯದರ್ಶಿಯವರತ್ತ ನೋಡುತ್ತಾ ಕುಳಿತೆ. ಮುಂದೇನು ಮಾಡುತ್ತೀರೆಂದು ಅವರು ಮಾತು ಶುರು ಮಾಡಿದಾಗಲೇ ನಾನು ಸಾವರಿಸಿಕೊಂಡು ಎಚ್ಚರವಾದದ್ದು! ಅದೀಗ ತಿಂಗಳ ಅಂತಿಮ ದಿನಗಳಾಗಿರುವುದರಿಂದ ಇನ್ನೊಂದೆರಡು ದಿನಗಳಲ್ಲಿ

ನಿರ್ಧಾರ ಮಾಡಿ ತಿಳಿಸುವೆನೆಂದು ಹೊರ ಬಂದೆ. ಅದಂತೂ ನನಗೆ ತೀರಾ ಹೊಸ ಹಾಗೂ ಅಚ್ಚರಿ ಹುಟ್ಟಿಸುವಂಥ ಬೆಳವಣಿಗೆಯಾಗಿತ್ತು. ಆಸ್ಪತ್ರೆಗೆ ಬಂದವನೇ ಡಾ|| ಸತ್ಯನಾರಾಯಣ ಶೆಟ್ಟರಿಗೆ ವಿಷಯವನ್ನು ವರದಿ ಮಾಡಿದೆ. ಹರ್ಷಚಿತ್ತರಾದ ಅವರು ನನಗೆ ಶುಭ ಕೋರಿದರು. ಹಿಂದಿನಿಂದಲೂ ಹಳೇ ಮೈಸೂರು ಸಂಸ್ಥಾನದ ವಾತಾವರಣದಲ್ಲೇ ಜೀವನ ಸಾಗಿಸಿದ ನನಗೆ ತೀರಾ ವಿಭಿನ್ನ ಪರಿಸರವೆನ್ನಬಹುದಾದ ದಕ್ಷಿಣ ಕನ್ನಡ ಸೀಮೆ, ಅದರಲ್ಲೂ ಮಣಿಪಾಲದಂಥ ಉನ್ನತ ಶಿಕ್ಷಣ ಕೇಂದ್ರದಲ್ಲೂ ಹೊಂದಿಕೊಳ್ಳಲು ಸಾಧ್ಯವಾಗಬಹುದೇ ಎಂಬ ಬಗೆಗೆ ಅನುಮಾನ ಉಂಟಾಗತೊಡಗಿತು. ಆದರೂ ಅದಾಗಿಯೇ ಒದಗಿಬಂದ ಅವಕಾಶವನ್ನು ನಿರಾಕರಿಸುವ ದಾರ್ಷ್ಟ್ಯ ನನ್ನಲ್ಲಿರಲಿಲ್ಲ.

ಮೈಸೂರಿಗೆ ಬಂದ ಸಮಯದಲ್ಲಿ ಬೆಂಗಳೂರು-ಮೈಸೂರು ಮೆಡಿಕಲ್ ಕಾಲೇಜುಗಳಲ್ಲಿ ಹಲವು ಸ್ನಾತಕೋತ್ತರ ಡಿಗ್ರಿ, ಡಿಪ್ಲೋಮಾ ಕೋರ್ಸ್‌ಗಳು ಆರಂಭವಾಗಿದ್ದವು. ಮಣಿಪಾಲದ ಕಸ್ತೂರ್ಬಾ ಮೆಡಿಕಲ್ ಕಾಲೇಜಿನಲ್ಲಿ ಆ ಮೊದಲೇ ಅಂತಹ ಕೋರ್ಸ್‌ಗಳು ಆರಂಭವಾಗಿದ್ದವು. ಮೈಸೂರಿಗೆ ಬಂದಾಗ ಅಲ್ಲಿ ಆಗತಾನೇ ಒಡಮೂಡುತ್ತಿದ್ದ ಅಕಾಡೆಮಿಕ್ ಪರಿಸರ, ಅದರತ್ತ ನನ್ನ ಆಸಕ್ತಿಯನ್ನು ಸೆಳೆಯಲಾರಂಭಿಸಿತು. ಆ ತನಕದ ಸರ್ಕಾರಿ ಸೇವಾ ಅವಧಿಯಲ್ಲಿ ಬೆನ್ನು ಹತ್ತಿದ ಜ್ಯೇಷ್ಠತೆಯ ಭೂತದ ಹಿಡಿತದಿಂದ ಪಾರಾಗಲು, ಸ್ನಾತಕೋತ್ತರ ಪದವಿಯೊಂದನ್ನು ಪಡೆದುಕೊಂಡರೆ ನನ್ನ ಮುಂದಿನ ದಾರಿ ಸುಗಮವಾಗಬಹುದೇ ಎಂಬ ಅಭಿಲಾಷೆ ನನ್ನಲ್ಲಿ ಚಿಗುರಲಾರಂಭಿಸಿತು. ಕೆ.ಜಿ.ಎಫ್.ನಲ್ಲಿದ್ದಾಗಲೇ ಮುಂಬೈನ ದಂತ ವೈದ್ಯ ಕಾಲೇಜಿನಲ್ಲಿ ಉನ್ನತ ವ್ಯಾಸಂಗದ ಅವಕಾಶಕ್ಕೆ ಪ್ರಯತ್ನ ಮಾಡಿದ್ದೆ. ಮಿಲಿಟರಿ ವೈದ್ಯ ಸೇವೆಗೆ ಸೇರುವ ನಿರ್ಧಾರವೂ ಅಂತಹ ಆಶಯದಿಂದಲೇ ಪ್ರೇರಣೆಯಾದದ್ದೆಂದು ಬೇರೆ ಹೇಳಬೇಕಾಗಿಲ್ಲ. ಬೆಂಗಳೂರು ಮೈಸೂರುಗಳಿಂದ ಪ್ರಾರಂಭವಾಗಲಿರುವ ಎಂ. ಎಸ್. ಕೋರ್ಸ್‌ಗೆ ಅರ್ಜಿ ಹಾಕಿದ್ದೆ. ಆದರೆ ಹಿಂದಿನಿಂದಲೂ ಆ ಊರುಗಳಲ್ಲಿ ತಳ ಊರಿದವರ ಪ್ರಭಾವಗಳ ಮುಂದೆ ನನ್ನದೇನೂ ನಡೆಯಲಿಲ್ಲ. ಇಲ್ಲಿ ಆಯ್ಕೆಯಾಗದಿದ್ದಾಗ ಲಕ್ನೋ ಮೆಡಿಕಲ್ ಕಾಲೇಜಿಗೂ ಆ ಬಗೆಗೆ ಅರ್ಜಿ ಹಾಕಿದೆ. ಅಲ್ಲಿಯ ಸರ್ಜರಿ ವಿಭಾಗದ ಪ್ರೊ|| ಮಿಶ್ರಾ ಎಂಬವರು ಕೆಲವು ವರ್ಷಗಳ ಹಿಂದೆ ಕೆ.ಆರ್. ಆಸ್ಪತ್ರೆಯಲ್ಲಿ ಆರ್.ಎಂ.ಓ. ಆಗಿದ್ದರಂತೆ. ಮೈಸೂರು ಕಡೆಯ ಕೆಲವರು ಇಂತಹ ಅವಕಾಶಗಳನ್ನು ಕೋರಿ ಬರೆದುಕೊಂಡಾಗ ಸಹಾನುಭೂತಿಯಿಂದ ಅಲ್ಲಿ ಅವಕಾಶಗಳನ್ನು ಕಲ್ಪಿಸಿಕೊಟ್ಟ ನಿದರ್ಶನಗಳ ಬಗೆಗೂ ಕೇಳಿದ್ದೆ. ನನ್ನ ಪತ್ರಕ್ಕೆ ಉತ್ತರಿಸಿ ಆ ವರ್ಷದ ಅವಧಿ ಮುಗಿದು ಹೋಗಿರುವುದಾಗಿಯೂ, ಮುಂದಿನ ವರ್ಷ ಯಾವ ತಿಂಗಳಲ್ಲಿ ಅರ್ಜಿ ಹಾಕಬೇಕೆಂಬುದರ ಬಗೆಗೆ ಮಾಹಿತಿ ನೀಡಿದ್ದರು.

ನನ್ನ ಹಾಗೆಯೇ ದೇಶದ ಇತರ ಕೇಂದ್ರಗಳಲ್ಲಿ ಆಗಾಗ್ಗೆ ಸ್ನಾತಕೋತ್ತರ ಪದವಿಗಳಿಗೆ ಹಲವು ಸರ್ಕಾರಿ ವೈದ್ಯರು ಅರ್ಜಿ ಸಲ್ಲಿಸುತ್ತಿದ್ದು, ಅವರು ಆಯ್ಕೆಯಾದಾಗಲೆಲ್ಲಾ ಅವರನ್ನು ಬಿಡುಗಡೆ ಮಾಡುವುದು ಸರ್ಕಾರಕ್ಕೆ ಕಷ್ಟವಾಗುತ್ತಿತ್ತು. ಅದರಿಂದ ಹಾಗೆ ಹೊರಗಡೆಯ ಕೇಂದ್ರಗಳಲ್ಲಿ ಸ್ನಾತಕೋತ್ತರ ಪದವಿಗಳಿಗೆ ಪ್ರಯತ್ನಿಸುವವರು ತಮ್ಮ ಹೆಸರುಗಳನ್ನು ಇಲಾಖೆಯಲ್ಲಿ ನೋಂದಣಿ ಮಾಡಿಸಬೇಕೆಂದು ಸುತ್ತೋಲೆಯನ್ನೂ ಹೊರಡಿಸಿದ್ದರು. ಒಂದು ದಿನ ಸಾಯಂಕಾಲ ಆಸ್ಪತ್ರೆಯಿಂದ ಹೊರಡುವ ಸಮಯದಲ್ಲಿ ಆ ಸುತ್ತೋಲೆಯನ್ನು ಆಸ್ಪತ್ರೆಯ ಜವಾನ ನನಗೆ ತೋರಿಸಿದ. ಆ ರಾತ್ರಿಯೇ ಸಂಬಂಧಿಯೊಬ್ಬರ ಮದುವೆಗೆ ರೈಲಿನಲ್ಲಿ ಸಂಸಾರ ಸಮೇತ ಶಿವಮೊಗ್ಗಕ್ಕೆ ಹೊರಡುವುದರಲ್ಲಿದ್ದೆ. ಸುತ್ತೋಲೆ ಪ್ರಕಾರ ಇಲಾಖೆಗೆ ಅರ್ಜಿ ಹಾಕಲು ಅಂದು

ಸಮಯವಿರಲಿಲ್ಲ. ಅದನ್ನು ಬೇರೆಲ್ಲರಿಗೂ ತೋರಿಸಿರುವುದಾಗಿ ಅವನು ತಿಳಿಸಿದ; ಅದರಿಂದ ಅದನ್ನು ಒಂದೆರಡು ದಿನಗಳ ಮಟ್ಟಿಗೆ ನನಗೆ ಕೊಡಬೇಕೆಂದು ಪಡೆದುಕೊಂಡೆ. ಮರುದಿನ ಶಿವಮೊಗ್ಗೆಗೆ ತಲುಪಿದವನೇ ಅದರಲ್ಲಿ ನಮೂದಿಸಲ್ಪಟ್ಟ ವಿವರಗಳನ್ನೆಲ್ಲ ಸೂಚಿಸಿ ಅರ್ಜಿಯನ್ನು ತಯಾರು ಮಾಡಿ ನೇರವಾಗಿ ಅಲ್ಲಿಂದಲೇ ಇಲಾಖೆಗೆ ರವಾನಿಸಿದೆ.

ಮಣಿಪಾಲ ಕಾಲೇಜಿನಲ್ಲಿ ಸ್ನಾತಕೋತ್ತರ ಪದವಿಗಳು ಆರಂಭವಾದಾಗ ಪ್ರತಿಯೊಂದು ವಿಭಾಗದಲ್ಲೂ ಸರ್ಕಾರದ ಇಬ್ಬರು ಅಭ್ಯರ್ಥಿಗಳಿಗೆ ಅವಕಾಶ ನೀಡಬೇಕೆಂಬ ಒಪ್ಪಂದ ವಾಗಿತ್ತಂತೆ. ಆದರೆ ಕಳೆದ ವರ್ಷ ಇಲಾಖೆಗೆ ಈ ಬಗೆಗೆ ಜ್ಞಾಪಕ ಮಾಡಿದ್ದರೂ ಸರ್ಕಾರ ತನ್ನ ಅಭ್ಯರ್ಥಿಗಳನ್ನು ನಿಯೋಜಿಸಿರಲಿಲ್ಲವಂತೆ. ಈ ಸಾರಿಯೂ ಸರ್ಕಾರಕ್ಕೆ ಆ ಬಗೆಗೆ ತಿಳಿಸಿದ್ದರೂ ಆ ದಿಸೆಯಲ್ಲಿ ಏನೂ ಮಾಡಿರಲಿಲ್ಲ. ಆದರೂ ಮಣಿಪಾಲ ಮೆಡಿಕಲ್ ಕಾಲೇಜಿನವರು ಅಂತಿಮವಾಗಿ ಪತ್ರ ಬರೆದು ಇನ್ನೊಂದು ವಾರದೊಳಗೆ ಅವರ ಅಭ್ಯರ್ಥಿಗಳನ್ನು ನಿಯೋಜಿಸದಿದ್ದರೆ ತಮ್ಮ ಕಡೆಯ ಅಭ್ಯರ್ಥಿಗಳಿಂದಲೇ ಆ ಜಾಗಗಳನ್ನು ಭರ್ತಿ ಮಾಡುವುದಾಗಿ ಹೇಳಿದ್ದರು. ಆ ಬಗೆಗೆ ಯಾವುದೇ ತಯಾರಿ ಮಾಡಿಕೊಂಡಿರದ ಇಲಾಖೆಯವರು ಈಗಾಗಲೇ ತಯಾರಿಸಿದ್ದ ನಮ್ಮ ಪಟ್ಟಿಯೊಂದಿದ್ದು ಅದರಲ್ಲಿದ್ದ ಕೆಲವರನ್ನು ತರಾತುರಿಯಿಂದ ಮಣಿಪಾಲದ ಕಾಲೇಜಿಗೆ ಸೇರಿ ಕೊಳ್ಳುವಂತೆ ಟೆಲಿಗ್ರಾಮ್ ನೀಡಿದ್ದರಂತೆ! ಅದರಿಂದಾಗಿ ನನ್ನ ಜೀವನ ಇನ್ನೂ ಒಂದು ಅನಿರೀಕ್ಷಿತ ತಿರುವು ಪಡೆಯಿತು.

ಡಾ॥ ಸತ್ಯನಾರಾಯಣ ಶೆಟ್ಟರು ಮತ್ತು ಸರ್ಜಿಕಲ್ 'ಬಿ' ಘಟಕದವರು ಮೈಸೂರು ದಾಸಪ್ರಕಾಶ್ ಹೋಟೆಲಿನಲ್ಲಿ ನನಗೆ ಆತ್ಮೀಯ ಬೀಳ್ಕೊಡುಗೆ ಸಮಾರಂಭ ಏರ್ಪಡಿಸಿ ಶುಭಕೋರಿ ಬೀಳ್ಕೊಟ್ಟರು. ಮರುದಿನವೇ ಮಣಿಪಾಲಿಗೆ ಪ್ರಯಾಣ ಬೆಳೆಸಿದೆ.



ಮಗನ ಮದುವೆಯ ಸಂಭ್ರಮ - ಮಕ್ಕಳೊಂದಿಗೆ

# ೧೧. ಮಂಗಳೂರು – ಮತ್ತೊಮ್ಮೆ ವಿದ್ಯಾರ್ಥಿ

ಆಗಸ್ಟ್ ತಿಂಗಳ (೧೯೬೩) ಎರಡನೇ ದಿನಾಂಕ ಮೈಸೂರಿಂದ ಮಣಿಪಾಲಿಗೆ ಪ್ರಯಾಣ ಮಾಡಿದೆ ಅಲ್ಲಿ ಕಸ್ತೂರ್ಬಾ ಮೆಡಿಕಲ್ ಕಾಲೇಜಿನ ರಿಜಿಸ್ಟ್ರಾರ್‌ರನ್ನು ಭೇಟಿಯಾದಾಗಲೇ ಎಂ.ಎಸ್. ಕೋರ್ಸ್ ಅವರ ಕಾಲೇಜಿನ ಕ್ಲಿನಿಕಲ್ ವಿಭಾಗ ಮಂಗಳೂರಿನಲ್ಲಿದ್ದು, ನಾನು ಅಲ್ಲಿಯೇ ವರದಿ ಮಾಡಿಕೊಳ್ಳಬೇಕೆಂಬುದು ನನಗೆ ತಿಳಿದದ್ದು. ಕೂಡಲೇ ಮಂಗಳೂರಿಗೆ ತೆರಳಿ ಮೆಡಿಕಲ್ ಕಾಲೇಜಿನ ಪ್ರಾಂಶುಪಾಲ ಡಾ|| ಎಂ. ವಿ. ಚಾರಿಯವರನ್ನು ಭೇಟಿ ಮಾಡಿದೆ. ಅವರು ವಾಸ್ತವವಾಗಿ ಸರ್ಜರಿ ವಿಭಾಗದ ಪ್ರಾಚಾರ್ಯರ ಮುಂದೆ ನಾನು ಹಾಜರಾಗಬೇಕೆಂದರು. ಅವರ ಮನೆಯ ಹತ್ತಿರವೇ ಸರ್ಜರಿಯ ಪ್ರಾಚಾರ್ಯ ಡಾ|| ಎಂ. ಪಿ. ಪೈಯವರ ಮನೆಯೂ ಇದ್ದು ಡಾ|| ಚಾರಿ ಯವರು ಮನೆಗೆ ಹೊರಡುವುದರಲ್ಲಿದ್ದು, ನನ್ನನ್ನು ಅವರ ಕಾರಿನಲ್ಲೇ ಬರಹೇಳಿ ತಮ್ಮ ಸೌಜನ್ಯ ಮೆರೆದರು.

ಡಾ|| ಪೈಯವರು ಅದೇ ಮೊದಲ ಬಾರಿಗೆ ಮೈಸೂರು ಕಡೆಯಿಂದ ಒಬ್ಬ ಸ್ನಾತಕೋತ್ತರ ವಿದ್ಯಾರ್ಥಿಯ ನಿರೀಕ್ಷೆಯಲ್ಲಿದ್ದರೆನಿಸುತ್ತದೆ. ಆಗಲೇ ಸ್ವಲ್ಪ ವಯಸ್ಸಾದವರಂತೆ ಕಂಡ ಅವರು ನನ್ನನ್ನು ತುಂಬಾ ಆದರದಿಂದ ಸ್ವಾಗತಿಸಿದರು. ನನ್ನ ಪೂರ್ವಾಪರಗಳನ್ನು ತಿಳಿದುಕೊಂಡ ನಂತರ ಯಾವುದೇ ಆತಂಕ ಅಥವಾ ಸಂಕೋಚವಿಲ್ಲದೆ ನಾನು ಅಭ್ಯಾಸ ನಿರತನಾಗಬಹುದೆಂದು ಹೇಳಿದರು; ಹಾಗೂ ಅವರ ಸರ್ಜಿಕಲ್ ಘಟಕದಲ್ಲೇ ನಾನು ತರಬೇತಿ ಪಡೆಯುವ ಏರ್ಪಾಡು ಮಾಡುವ ಭರವಸೆ ಇತ್ತರು. ಆನಂತರ ಕಾಲೇಜಿನ ಕಚೇರಿಗೆ ಹೋಗಿ ಫೀಜು ಕಟ್ಟಿ, ಮತ್ತೊಮ್ಮೆ ವಿದ್ಯಾರ್ಥಿ ಜೀವನಕ್ಕೆ ಅಡಿ ಇರಿಸಿದೆ.

ಪ್ರಾಂತ್ಯಗಳ ಪುನರ್ವಿಂಗಡನೆಯ ನಂತರ ಹಳೇ ಮೈಸೂರು ಪ್ರಾಂತ್ಯ ದುಪ್ಪಟ್ಟು ವಿಶಾಲವಾಯಿತು. ಆದರೆ ಮೈಸೂರು ನಗರದಲ್ಲಿದ್ದ ಸರ್ಕಾರಿ ಮೆಡಿಕಲ್ ಕಾಲೇಜು ಮಾತ್ರ ಏಕೈಕ ವೈದ್ಯರ ತರಬೇತಿಯ ತಾಣವಾಗಿತ್ತು. ಇನ್ನೊಂದು ಮೆಡಿಕಲ್ ಕಾಲೇಜನ್ನು ಆರಂಭಿಸು ವುದಕ್ಕೆ ಅಪಾರ ಹಣಕಾಸಿನ ಸಂಪನ್ಮೂಲದ ಅವಶ್ಯಕತೆಯನ್ನು ಸರ್ಕಾರ ಮನಗಂಡಂತಿತ್ತು. ಅಂತಹ ಪರಿಸ್ಥಿತಿಯಲ್ಲಿ ೧೯೫೩ರಲ್ಲಿ ಡಾ|| ಟಿ. ಎಂ. ಎ. ಪೈಯವರು ಉಡುಪಿಯ ಹತ್ತಿರದ ಬೋಳು ಗುಡ್ಡಗಾಡಿನಲ್ಲಿ ಮೆಡಿಕಲ್ ಕಾಲೇಜು ತೆರೆದಾಗ ಎಲ್ಲರೂ ಹುಬ್ಬೇರಿಸುವಂತಾಗಿತು. ತಮ್ಮ ಮಕ್ಕಳ ಉನ್ನತ ವಿದ್ಯಾಭ್ಯಾಸದ ವ್ಯವಸ್ಥೆಗೆ ಪೋಷಕರೇಕೆ ಭಾಗಿಗಳಾಗಬಾರದೆಂಬ ತಾತ್ವಿಕ ನೆಲಗಟ್ಟಿನ ಮೇಲೆ ಕಸ್ತೂರ್ಬಾ ಮೆಡಿಕಲ್ ಕಾಲೇಜು (ಕೆ.ಎಂ.ಸಿ.) ಅಸ್ತಿತ್ವಕ್ಕೆ ಬಂದದ್ದು. ಕೆ.ಎಂ.ಸಿ.ಯ ಹುಟ್ಟು ಬೆಳವಣಿಗೆ ಹಾಗೂ ಪ್ರಪಂಚದೆಲ್ಲೆಡೆ ವೈದ್ಯಕೀಯ ವಲಯದಲ್ಲಿ ಗಳಿಸಿಕೊಂಡಿರುವ ಸ್ಥಾನಮಾನಗಳು ವಿಶಿಷ್ಟರೀತಿಯ ದಾಖಲೆ ಸ್ವರೂಪದ್ದಾಗಿವೆ. ಅದೇ ತಾತ್ವಿಕ ಆಧಾರದ ಮೇಲೆ ಅನಂತರದ ವರ್ಷಗಳಲ್ಲಿ ಹಲವಾರು ಮೆಡಿಕಲ್ ಕಾಲೇಜುಗಳು ಜನ್ಮ ತಾಳಿರುವುವಾದರೂ ಅವುಗಳಲ್ಲಿ ಬಹುಪಾಲು ಅದರ ಮಟ್ಟಕ್ಕೆ ಬರುವುದರಲ್ಲಿ ವಿಫಲ ವಾಗಿವೆಯೆಂದೇ ಹೇಳಬಹುದು; ಬದಲಿಗೆ ಅವು ಮೆಡಿಕಲ್ ಪದವಿಗಳ ವ್ಯಾಪಾರೀಕರಣದ ಕೇಂದ್ರಗಳಾಗಿರುವುದು ದುರದೃಷ್ಟಕರ.

ಕೆ.ಎಂ.ಸಿಯ ಮೂಲ ಸಂಸ್ಥೆ ಮಣಿಪಾಲ್‌ನಲ್ಲಿ ಆರಂಭವಾಯಿತಾದರೂ ಅಲ್ಲಿ ಯಾವುದೇ ಆಸ್ಪತ್ರೆ ಇರಲಿಲ್ಲವಾದ್ದರಿಂದ ಮೊದಲ ಎರಡು ವರ್ಷದ ತರಗತಿಗಳು ಮಾತ್ರ ಅಲ್ಲಿ ಜರುಗುತ್ತಿದ್ದವು. ಅನಂತರ ಆಸ್ಪತ್ರೆಯಲ್ಲಿ ಪ್ರತ್ಯಕ್ಷವಾಗಿ ರೋಗಗಳ ಬಗೆಗೆ ಅಭ್ಯಾಸ ನಿರತರಾಗುವುದಕ್ಕೆ ಮಂಗಳೂರಿನಲ್ಲಿದ್ದ ಸರ್ಕಾರಿ ಸ್ವಾಮ್ಯದ ಆಸ್ಪತ್ರೆಗಳನ್ನು ಬಳಸಿಕೊಳ್ಳುವ ಅನಿವಾರ್ಯತೆ ಇತ್ತು. ಆ ಸಲುವಾಗಿ ಮಂಗಳೂರಿನ ವೆನ್‌ಲಾಕ್ ಆಸ್ಪತ್ರೆ ಮತ್ತು ಲೇಡಿ ಗೋಷನ್ ಆಸ್ಪತ್ರೆಗಳಲ್ಲಿ ಲಭ್ಯವಿದ್ದ ಸೌಲಭ್ಯಗಳನ್ನು ಬಳಸಿಕೊಳ್ಳಲು ಸರ್ಕಾರದ ಜೊತೆ ಒಪ್ಪಂದ ಮಾಡಿಕೊಂಡಿದ್ದರು. ಮುಂದೆ ಸ್ನಾತಕೋತ್ತರ ಪದವಿಗಳೂ ಸಹ ಅಲ್ಲೇ ಶುರುವಾದವು. ನಾನು ಅಲ್ಲಿಗೆ ಸೇರುವ ಹಿಂದಿನ ವರ್ಷ ಎಂ. ಎಸ್. ಕೋರ್ಸಿನ ಮೊದಲ ಪಂಗಡ ಕಾರ್ಯಾರಂಭ ಮಾಡಿತ್ತು.

## ಅಪರಿಚಿತ ಪರಿಸರ

ಡಾ|| ಎಂ. ಪಿ. ಪೈಗಳು ನೀಡಿದ ಭರವಸೆಯಂತೆ ಅವರ ಸರ್ಜಿಕಲ್ ಘಟಕದಲ್ಲೇ ಅಭ್ಯಾಸ ಮಾಡಲು ಎಡೆ ಮಾಡಿಕೊಟ್ಟರು. ಅವರ ಘಟಕದಲ್ಲಿ ನಾನಲ್ಲದೆ ಇನ್ನೂ ೩-೪ ಕೆ.ಎಂ.ಸಿ.ಯ ಅಭ್ಯರ್ಥಿಗಳೂ ಸಹ ಇದ್ದರು. ಅವರೆಲ್ಲಾ ಎಂ.ಬಿ.ಬಿ.ಎಸ್. ಪದವಿ ಗಳಿಸಿ ೨-೩ ವರ್ಷಗಳಾದ ಯುವ ವೈದ್ಯರು; ವೈದ್ಯಕೀಯ ಜ್ಞಾನ ಹಚ್ಚ ಹಸುರಾಗಿದ್ದು ಅತ್ಯಂತ ಚುರುಕಿನಿಂದ ಕಾರ್ಯನಿರ್ವಹಿಸುತ್ತಿದ್ದರು. ಪದವಿ ಪಡೆದು ೭-೮ ವರ್ಷಗಳಾಗಿದ್ದು ವಿವಿಧ ದರ್ಜೆಯ ಆಸ್ಪತ್ರೆಗಳ ಆಡಳಿತ ನಿರ್ವಹಣೆಯಲ್ಲಿ ತೊಡಗಿದ್ದ ನಾನು ಮತ್ತೆ ವಿದ್ಯಾರ್ಥಿಯಾಗಿದ್ದೆ. ಅಪರಿಚಿತ ವಾತಾವರಣದಲ್ಲಿ ವಿದ್ಯಾರ್ಥಿಯಂತೆ ಕಾರ್ಯ ನಿರ್ವಹಿಸುವುದಕ್ಕೆ ಮುಜುಗರ ಒಂದು ಕಡೆಯಾದರೆ, ಜ್ಞಾನ ಸಂಪತ್ತಿನ ಕೊರತೆಯಿಂದ ಯುವ ವೈದ್ಯ ಸಹಪಾಠಿಗಳ ಜೊತೆ ಪೈಪೋಟಿಯಲ್ಲಿ ವಿಫಲನಾಗುತ್ತಿದ್ದೆ. ಆ ಸಾರಿ ಸರ್ಕಾರದ ಕಡೆಯಿಂದ ಡಾ|| ಯು. ತಾರಾನಾಥ್ ಎಂಬ ಅಸಿಸ್ಟೆಂಟ್ ಸರ್ಜನ್ ಸಹ ಈ ಕೋರ್ಸಿಗೆ ಆಯ್ಕೆಯಾಗಿದ್ದರು. ಅವರು ಸಹ ಪದವಿ ಗಳಿಸಿ  ಹಲವು ವರ್ಷಗಳಾಗಿದ್ದವು; ಆದರೆ ಮೊದಲಿನಿಂದಲೂ ವೆನ್‌ಲಾಕ್ ಆಸ್ಪತ್ರೆಯಲ್ಲೇ ಖ್ಯಾತ ಶಸ್ತ್ರವೈದ್ಯ ಡಾ|| ಎಂ. ವಿ. ಶೆಟ್ಟಿಯವರ ಸಹಾಯಕರಾಗಿ ಕಾರ್ಯ ನಿರ್ವಹಿಸುತ್ತಿದ್ದವರು. ಶಸ್ತ್ರ ಚಿಕಿತ್ಸಾ ವಿಧಾನಗಳಲ್ಲಿ ಅಪಾರ ಅನುಭವ ಗಳಿಸಿದ್ದ ಅವರ ವಿಷಯ ಜ್ಞಾನ ಉತ್ತಮ ಮಟ್ಟದಲ್ಲಿತ್ತು. ಅವರೀಗ ನನ್ನ ಹಾಗೆ ವಿದ್ಯಾರ್ಥಿಯೇ ಆದರೂ ಅವರಿದ್ದ ಹಿಂದಿನ ಘಟಕದಲ್ಲೇ ಮುಂದುವರಿದರು; ಹಾಗೂ ಅವರ ಹಿಂದಿನ ಸ್ಥಾನಮಾನಗಳೂ ಅದೇ ರೀತಿಯಲ್ಲೇ ಮುಂದುವರಿದವು. ನನಗೆ ವಹಿಸಿದ್ದ ರೋಗಿಗಳ ರಕ್ತ ಮಲಮೂತ್ರಗಳನ್ನು ನಾನೇ ಪರೀಕ್ಷೆ ಮಾಡುವುದರಿಂದ ಹಿಡಿದು ತರಬೇತಿ ಪಡೆಯುವ ವಿದ್ಯಾರ್ಥಿಗಳ ಕೆಲಸವನ್ನು ನಿರ್ವಹಿಸ ಬೇಕಾಗುತ್ತಿತ್ತು. ವಾರ್ಡುಗಳಲ್ಲಿರುತ್ತಿದ್ದ ನರ್ಸ್, ವಾರ್ಡ್‌ಬಾಯ್‌ಗಳೂ ಸಹ, ಡಾ|| ತಾರಾನಾಥರಿಗೆ ತೋರುವಂಥ ಸೌಜನ್ಯಗಳನ್ನು ನನಗೆ ತೋರುತ್ತಿರಲಿಲ್ಲ. ಮೊದಲು ಕೆಲವು ದಿನಗಳು ಇಂತಹ ಪರಿಸ್ಥಿತಿ ನನ್ನ ಮನಸ್ಥೈರ್ಯ ಕುಗ್ಗುವಂತೆ ಮಾಡುತ್ತಿದ್ದರೂ, ಕಾಲಕ್ರಮೇಣ ಅದಕ್ಕೆಲ್ಲಾ ಒಗ್ಗಿ ಹೋದೆ. ಹಿಂದಿನ ಸ್ಥಾನಮಾನಗಳನ್ನು ಮರೆತು ತುಂಬಾ ಆಸಕ್ತಿಯಿಂದ ಅಭ್ಯಾಸ ನಿರತನಾದೆ; ಶ್ರಮವಹಿಸಿ ಕಾರ್ಯತತ್ಪರನಾದೆ. ಒಂದಾರು ತಿಂಗಳಲ್ಲಿ ಇತರ ವಿದ್ಯಾರ್ಥಿಗಳ ಸರಿಸಮಾನ ಹಂತವನ್ನು ತಲುಪಿದೆನೆನ್ನಬಹುದು.

ಮಂಗಳೂರು ಕೇವಲ ಒಂದು ಜಿಲ್ಲಾ ಕೇಂದ್ರವಾಗಿದ್ದು ಆಸ್ಪತ್ರೆಯೂ ಅದೇ ಮಟ್ಟದ್ದಾಗಿದ್ದರೂ ಅಲ್ಲಿಯ ವಾತಾವರಣ ಮೈಸೂರು ಸೀಮೆಯ ರೀತಿ ನೀತಿಗಳಿಗಿಂತ

ವಿಭಿನ್ನವಾಗಿದ್ದಿತೆಂದು ಹೇಳಬಹುದು. ಮೈಸೂರು ಸಂಸ್ಥಾನದಲ್ಲೇ ಹುಟ್ಟಿ ಬೆಳೆದು ಅಲ್ಲಿಯ ವಿವಿಧ ಕಡೆ ಕಾರ್ಯ ನಿರ್ವಹಿಸಿದ ಹಿನ್ನೆಲೆಯಲ್ಲಿ ನನಗೆ ದಕ್ಷಿಣ ಕನ್ನಡ ಜಿಲ್ಲೆಯವರ ಜೀವನ ಕ್ರಮ ವಿಚಿತ್ರವೆನಿಸಿದರೂ, ಕುತೂಹಲ ಕೆರಳಿಸುವಂತಿತ್ತು. ಅಲ್ಲಿ ಹಲವು ಜಾತಿ ಮತಗಳ ಸಂಗಮವಿತ್ತಾದರೂ, ಎಲ್ಲಾ ಕ್ಷೇತ್ರಗಳಲ್ಲೂ ಆರೋಗ್ಯಕರ ಪೈಪೋಟಿ ಇರುವಂತಿತ್ತು. ಅಬಾಲವೃದ್ಧರಾದಿಯಾಗಿ ಎಲ್ಲರೂ ಒಂದಲ್ಲ ಒಂದು ಉದ್ಯೋಗದಲ್ಲಿ ತೊಡಗಿಸಿಕೊಂಡಿರುತ್ತಿದ್ದರು. ಬಹುಶಃ ಅಂತಹ ಹಿನ್ನೆಲೆಯಿಂದಲೇ ದಕ್ಷಿಣ ಕನ್ನಡದ ಜನರು ದೇಶಾದ್ಯಂತ ಹರಡಿ ಹೋಗಿದ್ದು ಅಲ್ಲೂ ತಮ್ಮ ತಮ್ಮ ಕ್ಷೇತ್ರದಲ್ಲಿ ಮುಂಚೂಣಿಯಲ್ಲಿರುವುದನ್ನು ನೋಡಬಹುದು. ಆದರಿಂದ ಬೆಂಗಳೂರು, ಮೈಸೂರು ಕಾಲೇಜುಗಳಲ್ಲಿ ಅವಕಾಶ ವಂಚಿತನಾಗಿ ಇಲ್ಲಿಗೆ ಬಂದದ್ದು ಒಂದು ರೀತಿಯಲ್ಲಿ ಒಳ್ಳೆಯದೇ ಆಯಿತೆನಿಸಿತು.

ಮಂಗಳೂರಿನ ವೈದ್ಯಕೀಯ ಕ್ಷೇತ್ರವೂ ಸಹ ವಿಭಿನ್ನವಾಗಿತ್ತು. ಸರ್ಕಾರಿ ಸ್ವಾಮ್ಯದ ಸಾರ್ವಜನಿಕ ವೆನ್‌ಲಾಕ್ ಆಸ್ಪತ್ರೆ ಹಂಪನಕಟ್ಟೆಯಂತಹ ತುಂಬಾ ಬಿರುಸಿನ ಪ್ರದೇಶದಲ್ಲಿದ್ದರೆ ಮಹಿಳೆಯರು ಮತ್ತು ಮಕ್ಕಳ ಶುಶ್ರೂಷೆಗೆ ಮೀಸಲಾದ ಲೇಡಿ ಗೋಷನ್ ಆಸ್ಪತ್ರೆ ಸ್ವಲ್ಪ ದೂರದ ಟೌನ್‌ಹಾಲ್ ಪಕ್ಕದಲ್ಲಿತ್ತು. ಮೈಸೂರು ಮೆಡಿಕಲ್ ಕಾಲೇಜಿನಲ್ಲಿ ಆಸ್ಪತ್ರೆಯ ದೈನಂದಿನ ನಿರ್ವಹಣೆ ಹಾಗೂ ಬೋಧನಾ ವ್ಯವಸ್ಥೆಗಳಿಗೆ ಸರ್ಕಾರದ ಮೆಡಿಕಲ್ ಇಲಾಖೆಯ ಎರಡು ವಿಭಾಗಗಳಿಗೆ ಸೇರಿದ ಪ್ರತ್ಯೇಕ ವೈದ್ಯ ಸಮೂಹದ ವೈದ್ಯರು ನಿರ್ವಹಿಸುತ್ತಿದ್ದರು. ಪುನರ್ವಿಂಗಡಣೆಗೆ ಮೊದಲು ಮದ್ರಾಸು ಪ್ರಾಂತ್ಯದಲ್ಲಿದ್ದುದರಿಂದ ಆಸ್ಪತ್ರೆಗಳ ನಿರ್ವಹಣೆಯ ವಿಧಾನವೂ ಅದೇ ರೀತಿಯಲ್ಲಿ ಮಂಗಳೂರಿನಲ್ಲಿ ಮುಂದುವರಿದಿದ್ದವು. ಆಸ್ಪತ್ರೆಯ ನಿರ್ವಹಣೆ ಸೂಪರಿಂಟೆಂಡೆಂಟ್ (ಡಿ.ಎಂ.ಓ.) ಆರ್.ಎಂ.ಓ. ಮತ್ತು ಕೆಲವು ಅಸಿಸ್ಟೆಂಟ್ ಸರ್ಜನರುಗಳಿಂದ ಜರುಗುತ್ತಿತ್ತು. ಆದರೆ ಬೋಧನಾ ವಿಭಾಗ 'ಗೌರವ ವೈದ್ಯಾಧಿಕಾರಿಗಳು' (Honorary Medical Officers, ಎಚ್.ಎಂ.ಓ.) ಗಳೆಂಬ ಖಾಸಗಿ ವೈದ್ಯರು ಮತ್ತು ವೈದ್ಯ ಪರಿಣಿತರ ಸುಪರ್ದಿನಲ್ಲಿರುತ್ತಿತ್ತು. ಅವರಿಗೆ ಸರ್ಕಾರದ ವತಿಯಿಂದ ಸಾಂಕೇತಿಕವಾಗಿ ಅಲ್ಪ ಮೊತ್ತದ ಗೌರವಧನ ನೀಡಲಾಗುತ್ತಿತ್ತು; ಆದರೆ ಅವರು ಕೆ.ಎಂ.ಸಿ.ಯಿಂದ ಪೂರ್ಣ ಪ್ರಮಾಣದ ವೇತನ ಪಡೆಯುತ್ತಿದ್ದರು. ಸಾಮಾನ್ಯವಾಗಿ ಮಧ್ಯಾಹ್ನದ ತನಕ ಆಸ್ಪತ್ರೆಯಲ್ಲಿ ಕಾರ್ಯ ನಿರ್ವಹಿಸಬೇಕೆಂಬ ನಿಯಮವಿದ್ದರೂ ಅವಶ್ಯಕತೆ ಬಿದ್ದಾಗಲೆಲ್ಲಾ ಆಸ್ಪತ್ರೆಯಲ್ಲಿ ತಮ್ಮ ಜವಾಬ್ದಾರಿಯನ್ನು ನಿರ್ವಹಿಸುತ್ತಿದ್ದುದು ಒಂದು ವಿಶೇಷ.

ಕೆ.ಎಂ.ಸಿ.ಯ ಕ್ಲಿನಿಕಲ್ ವಿಭಾಗ ಮಂಗಳೂರಲ್ಲಿ ಕಾರ್ಯಾರಂಭ ಮಾಡಿದಾಗಿನಿಂದ ಅದನ್ನೊಂದು ಅತ್ಯುನ್ನತ ವೈದ್ಯಕೀಯ ಬೋಧನೆಯ ಕೇಂದ್ರವನ್ನಾಗಿ ರೂಪಿಸುವ ಪಣ ತೊಟ್ಟಂತಿತ್ತು. ಸ್ನಾತಕೋತ್ತರ ವಿಭಾಗಗಳು ಶುರುವಾದ ನಂತರವಂತೂ ಅವರೆಲ್ಲರೂ ಹಿಂದೆ ಮದ್ರಾಸಿನ ಅಂತಹ ಕೇಂದ್ರಗಳಿಂದಲೇ ಉನ್ನತ ಪದವಿ ಗಳಿಸಿಕೊಂಡ ಹಿನ್ನಲೆಯಲ್ಲಿ ಕೆ.ಎಂ.ಸಿ.ಯನ್ನು ಅದೇ ಮಟ್ಟದ ಕಲಿಕಾಕೇಂದ್ರವನ್ನಾಗಿಸಬೇಕೆಂಬ ಆಸಕ್ತಿ ವಹಿಸಿ ಕಾರ್ಯ ಕಲಾಪಗಳನ್ನು ರೂಪಿಸುತ್ತಿದ್ದರು. ನಮ್ಮ ಸರ್ಜರಿ ವಿಭಾಗದಲ್ಲಂತೂ ಎರಡು ಮೂರು ಸ್ನಾತಕೋತ್ತರ ಪದವಿ ಗಳಿಸಿ ಇಂಗ್ಲೆಂಡ್, ಅಮೆರಿಕಾದ ಪ್ರಖ್ಯಾತ ವೈದ್ಯಕೀಯ ಸಂಸ್ಥೆಗಳಲ್ಲಿ ಕಾರ್ಯನಿರತರಾಗಿ ಅನುಭವ ಗಳಿಸಿದವರನೇಕರಿದ್ದರು. ಸರ್ಜರಿ ವಿಭಾಗದ ಮುಖ್ಯಸ್ಥರೂ, ನಮ್ಮ ಘಟಕದ ಅಧ್ವರ್ಯರೂ ಆಗಿದ್ದ ಡಾ|| ಎಂ. ಪಿ. (ಪಾಂಡುರಂಗ) ಪೈಯವರು ಸರ್ಜಿಕಲ್ ವಿಷಯಗಳ ಹೆಚ್ಚಿನ ತಜ್ಞ ಪರಿಣಿತಿ ಇದ್ದು ಅವರಿಗೆ ರಾಷ್ಟ್ರಮಟ್ಟದ ಖ್ಯಾತಿ ಇತ್ತು. ಡಾ|| ಎಂ. ವಿ. ಶೆಟ್ಟರೂ ಸಹ ದಕ್ಷ

ಹಾಗೂ ಖ್ಯಾತಿವೆತ್ತ ಸರ್ಜನ್ ಆಗಿದ್ದರಲ್ಲದೆ ಉತ್ತಮ ಬೋಧಕರೆಂಬ ಹೆಸರು ಗಳಿಸಿದವರು. ಅಂತಹವರ ಸಹಾಯಕರಾಗಿ ಪ್ರತಿಭಾವಂತರಾದ ಡಾ|| ಎಂ. ಶ್ರೀನಿವಾಸನ್, ಡಾ|| ಯೋಗೀಶ್ ಪೈ, ಡಾ|| ಯು. ಕೆ. ಕಿಣಿ ಮುಂತಾದ ವಿದೇಶಗಳಲ್ಲಿ ಉನ್ನತ ಪದವಿ ಹಾಗೂ ಅನುಭವ ಗಳಿಸಿದ ಪ್ರಾಧ್ಯಾಪಕರುಗಳಿದ್ದರು. ನಮ್ಮ ವಿಭಾಗವನ್ನು ಮದ್ರಾಸು, ವೆಲ್ಲೂರುಗಳಲ್ಲಿದ್ದ ಕಲಿಕಾ ಕೇಂದ್ರಗಳ ಮಟ್ಟಕ್ಕೆ ಸರಿ ಸಮಾನವಾಗಿ ರೂಪಿಸಬೇಕೆಂಬ ಅಭಿಲಾಷೆಯಿಂದ ಒಮ್ಮತದಿಂದ ಟೊಂಕಕಟ್ಟಿ ಶ್ರಮಿಸುತ್ತಿದ್ದರು. ಆದರಿಂದ ಮೈಸೂರು - ಬೆಂಗಳೂರಿನ ಇಂತಹ ವಿಭಾಗಗಳು ಕೇವಲ ಸರ್ಕಾರದ ನಿಯಮಗಳನುಸಾರ ಕಾರ್ಯನಿರ್ವಹಿಸುತ್ತಿದ್ದುದನ್ನು ನೋಡಿದ್ದ ನನಗೆ ಅಚ್ಚರಿಯ ಜೊತೆಗೆ ಹೆಮ್ಮೆಯ ಭಾವನೆಯೂ ಉಂಟಾಯಿತು.



ಮಂಗಳೂರು ಎಂ. ಎಸ್. ವಿದ್ಯಾರ್ಥಿಗಳು ಮತ್ತು ಅಧ್ಯಾಪಕರು

ಸ್ನಾತಕೋತ್ತರ ಪದವಿಯ ತರಬೇತಿ ಮತ್ತು ಬೋಧನಾ ಕ್ರಮಗಳೂ ಸಹ ವಿಶಿಷ್ಟ ರೀತಿಯಲ್ಲಿ ನಿರ್ವಹಿಸಲ್ಪಡುತ್ತಿದ್ದವು. ಬೆಳಗಿನ ಮುಂಜಾನೆಯಲ್ಲೇ ಆಸ್ಪತ್ರೆಯ ಕಾರ್ಯಗಳು ಆರಂಭವಾಗುವುದರೊಳಗೇ ಕೆಲವು ತರಗತಿಗಳಿಗೆ ಹಾಜರಾಗಬೇಕಿತ್ತು, ಅನಂತರ ವಿವಿಧ ಘಟಕಗಳಲ್ಲಿ ಸರದಿಗನುಗುಣವಾಗಿ ಹೊರ ರೋಗಿಗಳ ವಿಭಾಗ, ವಾರ್ಡು, ಇಲ್ಲವೆ ಓ. ಟಿ.ಯಲ್ಲಿ ಕಾರ್ಯನಿರತರಾಗುತ್ತಿದ್ದೆವು. ತರಬೇತಿಯ ವಿಷಯದಲ್ಲಿ ಕೂಡ ಒಂದು ವಿಧಿಬದ್ಧ ಯೋಜನೆ ಗನುಸಾರ ಹಂತಹಂತವಾಗಿ ಕಲಿತುಕೊಳ್ಳುವ ಏರ್ಪಾಡು ಮಾಡಿದ್ದರು. ಸರ್ಜರಿ, ರೋಗಶಾಸ್ತ್ರ ಮುಂತಾದ ಹಲವು ವಿಷಯಗಳ ಬಗೆಗೆ ತಜ್ಞರಿಂದ ಪ್ರವಚನಗಳೂ, ಪ್ರಾತ್ಯಕ್ಷಿಕೆಗಳೂ ನಡೆಯುತ್ತಿದ್ದವು. ಜೊತೆಗೆ ಸೆಮಿನಾರುಗಳು, ಜರ್ನಲ್ ಕ್ಲಬ್ (Journal Club) ಮುಂತಾದ ಚಟುವಟಿಕೆಗಳು ರಾತ್ರಿ ೮-೧೦ ಗಂಟೆಗಳ ತನಕವೂ ಮುಂದುವರಿಯುತ್ತಿದ್ದವು. ಪ್ರತಿಯೊಬ್ಬ ಸ್ನಾತಕನು ಮೊದಲಿಗೆ ಕೆಲವು ಹಿರಿಯ ವಿದ್ಯಾರ್ಥಿ ಜೊತೆ, ಸಹಾಯಕ ಪ್ರಾಧ್ಯಾಪಕರು ಆಪರೇಷನ್ ಜರುಗಿಸುವಾಗ ಸಹಾಯಕನಾಗಿರಬೇಕು; ಅನಂತರ ಸಣ್ಣಪುಟ್ಟ ಆಪರೇಷನ್‌ಗಳು ಅವನೇ ಸ್ವತಃ ಜರುಗಿಸಬೇಕಾಗುತ್ತಿತ್ತು. ಎರಡನೆಯ ವರ್ಷಕ್ಕೆ ಬರುವಷ್ಟರಲ್ಲಿ ಗುರುತರ ಆಪರೇಷನ್‌ಗಳಿಗೆ ಪ್ರಾಧ್ಯಾಪಕರಿಗೆ ಸಹಾಯಕನಾಗಿರುವುದು, ಅನಂತರ ಕೆಲವು ಗುರುತರ ಆಪರೇಷನ್‌ಗಳನ್ನು ಪ್ರಾಧ್ಯಾಪಕರ ಮೇಲ್ವಿಚಾರಣೆಯಲ್ಲಿ ಸ್ವತಃ ಜರುಗಿಸುವುದು, ಹಾಗೂ

ಅಂತಿಮ ಹಂತಕ್ಕೆ ಬರುವಷ್ಟರಲ್ಲೇ ಕೆಲವು ಆಪರೇಷನ್‌ಗಳನ್ನು ಸ್ವತಂತ್ರವಾಗಿ ಜರುಗಿಸುವಷ್ಟು ಪರಿಣಿತಿಯುಂಟಾಗುವಂತೆ ಮಾಡುವುದು ಆ ಯೋಜನೆಗಳ ಉದ್ದೇಶ. ಇದಲ್ಲದೆ ಆಪರೇಷನ್ ಮಾಡುವುದೆಂದರೆ ಬರೇ ಚಾಕು, ಕತ್ತರಿಗಳನ್ನು ಹಿಡಿದು ಮನಬಂದಂತೆ ಕೊಯ್ದು ಕತ್ತರಿಸುವುದಲ್ಲ; ಪ್ರತಿ ಅಂಗಾಂಗದ ರಚನೆಯ ಪರಿಪೂರ್ಣ ಅರಿವಿದ್ದು, ಜರುಗಿಸಬೇಕಾದ ಆಪರೇಷನ್ ಮಾರ್ಗಪಥ (Road map) ದ ಸರಿಯಾದ ಅರಿವಿರಬೇಕು. ಕತ್ತರಿಸುವುದು, ರಕ್ತಸ್ರಾವವನ್ನು ಹತೋಟಿಗೆ ತರುವುದು, ಹೊಲಿಗೆ ಹಾಕುವಂಥ ಸೂಕ್ಷ್ಮ ಕಾರ್ಯಕ್ರಮಗಳ ಕಲಾಕೌಶಲ್ಯ (Technique) ಕರತಲಾಮಲಕವಾಗಿರಬೇಕು. ಸ್ವತಃ ಡಾ|| ಎಂ. ಪಿ. ಪೈಯವರೇ ನಾವು ಕಾರ್ಯ ನಿರ್ವಹಿಸುತ್ತಿರುವುದರ ಬಗೆಗೆ ನಮ್ಮರಿವಿಗೆ ಬಾರದಂತೆಯೇ ವೀಕ್ಷಿಸುತ್ತಿದ್ದು, ನಮ್ಮಲ್ಲಿಯ ಕೊರತೆಗಳನ್ನು ಸರಿಪಡಿಸಲು ಮಾರ್ಗದರ್ಶನ ನೀಡುತ್ತಿದ್ದರು.

ಶಾಲಾಕಾಲೇಜುಗಳಲ್ಲಿ ವಿದ್ಯಾರ್ಥಿಗಳು ಜರುಗಿಸುವ ಪ್ರಯೋಗಗಳ ವಿವರಗಳನ್ನು ದಾಖಲಿಸುವಂತೆ ನಮ್ಮ ಕೋರ್ಸ್‌ನಲ್ಲೂ ಆ ವಿಧಾನವನ್ನು ಜಾರಿಗೆ ತಂದಿದ್ದರು. ಅಂತಿಮ ಪರೀಕ್ಷೆಗೆ ಕುಳಿತು ಕೊಳ್ಳುವುದರೊಳಗೇ ಪ್ರತಿಯೊಬ್ಬ ವಿದ್ಯಾರ್ಥಿಯೂ ವೈದ್ಯಕೀಯ ನಿಯತ ಕಾಲಿಕಗಳಲ್ಲಿ (Medical Journals) ಸರ್ಜಿಕಲ್ ಪ್ರಕರಣ ಕುರಿತು ಒಂದೆರಡು ಲೇಖನಗಳನ್ನು ಪ್ರಕಟಿಸುವ ಪಾಂಡಿತ್ಯ ಪಡೆದಿರಬೇಕಿತ್ತು.

ಬೋಧಕ ವರ್ಗದವರೂ ಸಹ ಪ್ರತಿಯೊಬ್ಬ ವಿದ್ಯಾರ್ಥಿಯ ಕಲಿಕೆಯ ಮಟ್ಟವನ್ನು ಗುರುತಿಸಿ ಅವರು ಯಾವ್ಯಾವ ವಿಷಯಗಳಲ್ಲಿ ಹಿಂದಿದ್ದಾರೆ, ಯಾವ ವಿಷಯಗಳ ಬಗೆಗೆ ಹೆಚ್ಚುವರಿ ಅಭ್ಯಾಸ ಮಾಡಬೇಕಾಗುತ್ತದೆಂಬುದನ್ನು ನಿರ್ಧರಿಸುತ್ತಿದ್ದರು. ಅಂತಹ ವಿಷಯಗಳು ಯಾವ ಗ್ರಂಥಗಳು ಅಥವಾ ವೈದ್ಯಕೀಯ ನಿಯತಕಾಲಿಕಗಳಲ್ಲಿ ಪ್ರಕಟವಾಗಿವೆ ಎಂಬುದರ ಬಗೆಗೆ ಮಾಹಿತಿ ಒದಗಿಸುತ್ತಿರುತ್ತಿದ್ದರು. ಸೆಮಿನಾರುಗಳು, ಕ್ಲಿನಿಕಲ್ ಮೀಟಿಂಗುಗಳಲ್ಲಿ ಇತರ ವಿಭಾಗಗಳ ವಿದ್ಯಾರ್ಥಿಗಳೇ ಅಲ್ಲದೇ ಬೋಧಕ ವರ್ಗದವರೂ ಪಾಲ್ಗೊಳ್ಳುತ್ತಿದ್ದರು. ಅಂತಹ ಸಂದರ್ಭ ಗಳಲ್ಲಿ ನಾವೆಲ್ಲಾ ಯಾವ ರೀತಿ ತಯಾರಿ ಮಾಡಿಕೊಳ್ಳಬೇಕು, ಹಾಗೂ ನಮ್ಮ ವಿಷಯ ಪ್ರತಿಪಾದನೆಗಳನ್ನು ಯಾವುದೇ ರೀತಿಯ ಲಿಖಿತ, ಟಿಪ್ಪಣಿಗಳ ಸಹಾಯವಿಲ್ಲದೆ ಜ್ಞಾಪಕಶಕ್ತಿ ಯಿಂದಲೇ (Impromptu) ಮಂಡಿಸಬೇಕೆಂಬ ಡಾ|| ಎಂ. ಪಿ. ಪೈಗಳ ಕಟ್ಟಾಜ್ಞೆಯನ್ನು ಮೀರುವಂತಿರಲಿಲ್ಲ. ಈ ಎಲ್ಲಾ ಕಾರ್ಯಕ್ರಮಗಳಿಗೆ ಕಲಶವಿಟ್ಟಂತೆ ಅಂತಿಮ ಪರೀಕ್ಷೆಗೆ ಕುಳಿತು ಕೊಳ್ಳುವ ತಂಡದವರಿಗೆ ಪ್ರಾಯೋಗಿಕವಾಗಿ ಜರುಗಿಸುತ್ತಿದ್ದ ತರಬೇತಿ ಅನನ್ಯವಾದುದೆಂದೇ ಹೇಳಬೇಕು. ಇನ್ನೇನು ಪರೀಕ್ಷೆಯ ದಿನ ಎರಡು ತಿಂಗಳಿರುವಂತೆಯೇ, ಪರೀಕ್ಷಾ ಸಮಯದಲ್ಲಿ ಜರುಗುವ ಎಲ್ಲಾ ವಿಧಿವಿಧಾನಗಳನ್ನು 'ಅಣಕು ಪರೀಕ್ಷೆ' (Mock Examination) ರೀತಿಯಲ್ಲಿ ಮಾಡುತ್ತಿದ್ದರು; ಸುಮಾರು ಎರಡು ವಾರಗಳಷ್ಟು ಜರುಗುವ ಈ 'ಸಮರಾಭ್ಯಾಸ'ಕ್ಕೆ ಮದ್ರಾಸು, ವೆಲ್ಲೂರು, ತಿರುವಾಂಕೂರು ಕಾಲೇಜುಗಳ ವಿದ್ಯಾರ್ಥಿಗಳೂ ಭಾಗವಹಿಸುವಂತೆ ಆಹ್ವಾನ ನೀಡಿ ಕರೆಸುತ್ತಿದ್ದುದೂ ಉಂಟು. ಈ ಎಲ್ಲಾ ಕಾರಣಗಳಿಂದ ಜಿಲ್ಲಾ ಮಟ್ಟದಲ್ಲಿ ಜರುಗುತ್ತಿದ್ದ ನಮ್ಮ ಸ್ನಾತಕೋತ್ತರ ಕಲಿಕೆಯ ಪರಿ ಬೆಂಗಳೂರು - ಮೈಸೂರುಗಳೇ ಏಕೆ, ಭಾರತದ ಇತರ ಕಡೆಗಿಂತಲೂ ವಿಭಿನ್ನ ರೀತಿಯವಾಗಿದ್ದಿತೆಂದರೆ ಅತಿಶಯೋಕ್ತಿಯಲ್ಲ.

ಕೆ.ಎಂ.ಸಿ. ಆ ಕಾಲದಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ವ್ಯಾಪ್ತಿಗೊಳಪಟ್ಟಿದ್ದು ಮೂರು ವರ್ಷಗಳ ದೀರ್ಘ ಕೋರ್ಸಾಗಿತ್ತು. ಅಷ್ಟು ಸಮಯ ಹೋಟೆಲಿನಲ್ಲಿ ಕಾಲ ಹಾಕುವುದು ದುಸ್ತರವಾಗಬಹುದೆಂದು, ಮಂಗಳೂರಿಗೇ ಸಂಸಾರವನ್ನು ಕರೆತಂದೆ. ಡಾ|| ತಾರಾನಾಥ್ ಮತ್ತು

ನಾನು ಅದಾಗಲೇ ಸರ್ಕಾರದ ಸೇವೆಯಲ್ಲಿ ಕೆಲವು ವರ್ಷಗಳನ್ನು ಕಳೆದಿದ್ದರಿಂದ ಕೆಲವು ತಿಂಗಳ ನಂತರ ನಮ್ಮ ಕಲಿಕೆ ಅವಧಿಯನ್ನು ಎರಡೂವರೆ ವರ್ಷಗಳಿಗೆ ಇಳಿಸಲಾಯಿತು. ಸರ್ಕಾರದ ವತಿಯಿಂದಲೇ ಈ ತರಬೇತಿಗೆ ಅಧಿಕೃತವಾಗಿ ನಿಯೋಜಿಸಿದ್ದರೂ ನಮಗೆ ಕೇವಲ ಅರ್ಧ ಸಂಬಳ ಮಾತ್ರ ಕೊಡುತ್ತಿದ್ದರು. ಹಾಗಾಗಿ ಮತ್ತೊಮ್ಮೆ ಜೀವನ ನಡೆಸುವುದು ದುಸ್ತರವಾಯಿತು.

ಮುಂದೆ ಜ್ಞಾನಾರ್ಜನೆಗೆ ಅವಶ್ಯಕವಾದ ಅನುಕೂಲಗಳನ್ನೆಲ್ಲಾ ಒದಗಿಸಿಕೊಂಡೆ. ಕಾಲೇಜಿನ ವ್ಯವಸ್ಥಿತವಾದ ವೈದ್ಯಕೀಯ ಪುಸ್ತಕ ಭಂಡಾರವಿದ್ದು, ಬಿಡುವಿನ ಸಮಯಗಳಲ್ಲಿ ಅಲ್ಲಿ ಅಭ್ಯಾಸ ನಿರತನಾಗಿರುತ್ತಿದ್ದೆ. ಮದ್ರಾಸಿನ ಅಮೆರಿಕನ್ ಲೈಬ್ರರಿಯಲ್ಲಿ ನಮ್ಮ ಕಲಿಕೆಗೆ ಸಂಬಂಧಿಸಿದ ಉತ್ತಮ ಗ್ರಂಥಗಳಿದ್ದು ನಮ್ಮ ಪ್ರಾಧ್ಯಾಪಕರ ಶಿಫಾರಸ್ಸಿನಂತೆ ಅಲ್ಲಿಂದಲೂ ತರಿಸಿಕೊಂಡು ಅಭ್ಯಾಸ ಮಾಡುತ್ತಿದ್ದೆ. ಜೊತೆಗೆ ನನಗೆ ನಿಗದಿಪಡಿಸಿದ ಮಹಾ ಪ್ರಬಂಧ (ಥೀಸಿಸ್)ದ ವಿಷಯದ ಬಗೆಗೆ ತಯಾರಿಯೂ ಅವ್ಯಾಹತವಾಗಿ ಮುಂದುವರಿಯಿತು. ಎಂ.ಬಿ.ಬಿ.ಎಸ್., ಪದವಿಗೆ ಮುನ್ನ ಅಂಗರಚನಾ ಶಾಸ್ತ್ರದ (Anatomy) ಬಗೆಗೆ ಕಲಿತ್ತಿದ್ದ ವಿಷಯದ ಜ್ಞಾನ ಮಸುಕಾಗಿದ್ದು ಆ ಬಗೆಗೆ ಮತ್ತೆ ತಿಳಿದುಕೊಳ್ಳುವ ಪ್ರಯತ್ನವೂ ನಡೆಯಿತು. ನಮ್ಮ ಪಂಗಡದ ನಾಲ್ಕೈದು ಜನ ವಿದ್ಯಾರ್ಥಿಗಳು ಖಾಸಗಿಯಾಗಿ ಒಂದು ಶವವನ್ನು ಪಡೆದು ಕೊಂಡು ಅದರ ಅಂಗಛೇದನಾಭ್ಯಾಸ ಮಾಡಿದೆವು.

## ಪರೀಕ್ಷೆಗಳ ಪರಿ

ನಾವು ಸೇರಿದ ಸುಮಾರು ಒಂದೂವರೆ ವರ್ಷದಲ್ಲಿ ಮೊದಲನೆ ಪಂಗಡದ ಎಂ.ಎಸ್. ಪರೀಕ್ಷೆ ಜರುಗಿತು. ಮದ್ರಾಸು, ತಿರುವಾಂಕೂರುಗಳಿಂದ ಹೊರಗಿನ ಪರೀಕ್ಷಕರನ್ನು ಆಹ್ವಾನಿಸಿದ್ದರು. ಅವರಲ್ಲಿ ಕೆಲವರು ಡಾ॥ ಎಂ. ಪಿ. ಪೈಗಳಿಗೇ ಹಿಂದೆ ಗುರುಗಳಾಗಿದ್ದು, ತುಂಬಾ ವಯಸ್ಸಾದವರಾಗಿದ್ದರು. ಪರೀಕ್ಷಾ ವಿಧಾನಗಳನ್ನೆಲ್ಲಾ ತುಂಬಾ ಕಟ್ಟುನಿಟ್ಟಾಗಿ ಜರುಗಿಸಿದರಂತೆ. ಆ ಸಾರಿ ನಾಲ್ಕು ಜನ ಅಭ್ಯರ್ಥಿಗಳು ಪರೀಕ್ಷೆ ತೆಗೆದುಕೊಂಡಿದ್ದರು. ನಾಲ್ಕೂ ಜನರಿಗೆ ಒಂದೇ ರೀತಿಯ ಪ್ರಶ್ನೆಗಳನ್ನು ಕೇಳಿ, ಅವರು ನೀಡಿದ ಉತ್ತರಗಳನ್ನು ಬರೆದುಕೊಳ್ಳುತ್ತಿದ್ದರಂತೆ. ನಂತರ ತಕ್ಕಡಿಯಲ್ಲಿ ತೂಗುವ ರೀತಿಯಲ್ಲಿ ಮೌಲ್ಯಮಾಪನ ನಡೆಯಿತಂತೆ. ಆ ಸಲ ಎರಡು ಅಭ್ಯರ್ಥಿಗಳು ಮಾತ್ರ ತೇರ್ಗಡೆಯಾದರು.

ಮುಂದಿನ ವರ್ಷ ನಮ್ಮ ತಂಡದ ಪರೀಕ್ಷೆಯ ಸರದಿ. ಹಿಂದಿನಿಂದಲೂ ಎಲ್ಲಾ ವಿಷಯಗಳಲ್ಲೂ ಆಳವಾದ ಅಭ್ಯಾಸ ಮಾಡಿದ್ದೆ. ಈ ಸಾರಿ ಕೆಲವು ಹೊರಗಿನ ಪರೀಕ್ಷಕರ ಬದಲಾವಣೆಯಾಗಿತ್ತು. ಅವರ ಪೈಕಿ ಮುಂಬಯಿಯಲ್ಲಿ ಭಾರತದ ಮೊತ್ತ ಮೊದಲ ಬದಲಿ ಹೃದಯ ಜೋಡಣೆ ಮಾಡಿದ ಕೀರ್ತಿಯ (Heart Transplatation) ಡಾ॥ ಪಿ. ಕೆ. ಸೇನ್ ಒಬ್ಬರೆಂಬ ನೆನಪಿದೆ. ಹೃದಯ ಸಂಬಂಧೀ ಶಸ್ತ್ರಚಿಕಿತ್ಸಾ ವಿಧಾನಗಳಲ್ಲಿ ಹೆಚ್ಚಿನ ಪರಿಣಿತಿ ಅವರಿಗಿದ್ದರೂ ಸಾಮಾನ್ಯ ಶಸ್ತ್ರಚಿಕಿತ್ಸಾ ಕ್ರಮಗಳ (General Surgery) ರೀತಿ ನೀತಿಗಳಿಂದ ಬಹಳ ಸಮಯ ಸಂಬಂಧ ಕಳೆದುಕೊಂಡಂತಿತ್ತು. ಹಾಗಾಗಿ ಕ್ಲಿನಿಕಲ್ ಪರೀಕ್ಷೆಯ ಸಮಯದಲ್ಲಿ ರೋಗಿಯ ಗುಣಲಕ್ಷಣಗಳ ಬಗೆಗೆ ನಾನು ಪ್ರದರ್ಶಿಸಿ ತೋರುತ್ತಿದ್ದ ವಿಷಯಗಳನ್ನು ಅವರು ಒಪ್ಪಲು ತಯಾರಿದ್ದಂತಿರಲಿಲ್ಲ. ಮಿಕ್ಕೆಲ್ಲಾ ವಿಭಾಗಗಳಲ್ಲಿ ನನ್ನ ನಿರ್ವಹಣೆ ತೃಪ್ತಿಕರವಾಗಿತ್ತೆಂಬ ಭಾವನೆ ನನ್ನದಾಗಿತ್ತು. ಆದರೂ ಆಪರೇಟೀವ್ ಸರ್ಜರಿಯ ಕೆಲವು ಹಂತಗಳನ್ನು ವಿವರಿಸುವಲ್ಲಿ ನಾನು ಎಡವಿದ್ದೆನೆಂಬುದು ಪರೀಕ್ಷಾ ಫಲಿತಾಂಶ ಹೊರಬಂದಾಗ ತಿಳಿಯಿತು, ಅದರಿಂದ ನಾನು

ತೇರ್ಗಡೆಯಾಗಿರಲಿಲ್ಲ. ನನಗಿಂತ ಮಿಗಿಲಾಗಿ ಡಾ|| ತಾರಾನಾಥರೂ ಉತ್ತೀರ್ಣರಾಗಿರಲಿಲ್ಲ. ಕ್ಲಿನಿಕಲ್ ಪರೀಕ್ಷೆಯ ಸಮಯದಲ್ಲಿ ಸಮಂಜಸವಾಗಿ ರೋಗ ಲಕ್ಷಣಗಳನ್ನು ಪ್ರದರ್ಶಿಸಿ, ಸರಿಯಾದ ಉತ್ತರಗಳನ್ನು ನೀಡಿದ್ದರೂ ಅನಾಹುತ ನಡೆದು ಹೋಗಿತ್ತು. ಅದು ಹೇಗೋ ಅಭ್ಯರ್ಥಿಗೆ ಆ ರೋಗಿಯ ಬಗೆಗೆ ಮೊದಲೇ ಗೊತ್ತಾಗಿತ್ತೆಂಬ ಅನುಮಾನ (ವಾಸ್ತವವಾಗಿ ಹಾಗೇನೂ ಆಗಿರಲಿಲ್ಲ) ಪರೀಕ್ಷಕರಿಗುಂಟಾಗಿ ಅವರನ್ನು ತೇರ್ಗಡೆ ಮಾಡಲಿಲ್ಲ!

ಪರೀಕ್ಷೆ ಮುಗಿದ ನಂತರ ಸರ್ಕಾರದವರು ಉನ್ನತ ವಿದ್ಯಾಭ್ಯಾಸಕ್ಕಾಗಿ ನಿಯೋಜಿಸಿದ ಅವಧಿಯೂ ಮುಗಿಯಿತು ಮತ್ತೆ ಹಿಂದಿನ ಅಸಿಸ್ಟೆಂಟ್ ಸರ್ಜನ್ ಹುದ್ದೆಗೆ ವಾಪಾಸಾಗ ಬೇಕಾಗುತ್ತದೆ. ಪರೀಕ್ಷೆಯಲ್ಲಿ ತೇರ್ಗಡೆಯಾಗದಿದ್ದುದರಿಂದ ಇನ್ನೂ ಕೆಲಕಾಲ ವೆನ್‌ಲಾಕ್ ಆಸ್ಪತ್ರೆಯಲ್ಲೇ ಅಸಿಸ್ಟೆಂಟ್ ಸರ್ಜನ್ ಆಗಿ ಮುಂದುವರಿಯುವ ಮನಸ್ಸು ಮಾಡಿದೆ. ಕೂಡಲೇ ಬೆಂಗಳೂರಿಗೆ ತೆರಳಿ ಇಲಾಖಾ ನಿರ್ದೇಶಕರನ್ನು ಕಂಡು ಆ ಬಗೆಗೆ ಏರ್ಪಾಡು ಮಾಡಿಸಿಕೊಂಡು ಬಂದೆ.

ಮುಂದಿನ ಸಾರಿ ಪರೀಕ್ಷೆಯನ್ನು ಧೈರ್ಯದಿಂದಲೇ ಎದುರಿಸಿದೆ. ಎಲ್ಲಾ ವಿಭಾಗಗಳಲ್ಲಿ ತೃಪ್ತಿಕರವಾಗಿಯೇ ನಿರ್ವಹಿಸಿದ್ದೆ. ಆದರೂ ತೇರ್ಗಡೆಯಾಗದಿದ್ದುದರ ಬಗೆಗೆ ಸ್ಪಷ್ಟವಾದ ಕಾರಣ ನನಗಂತೂ ಹೊಳೆಯಲಿಲ್ಲ. ಈಗಂತೂ ಮಾನಸಿಕವಾಗಿ ತುಂಬಾ ತುಮುಲಕ್ಕೊಳಗಾದೆ. ಡಾ|| ತಾರಾನಾಥರು ತೇರ್ಗಡೆಯಾಗಿದ್ದರು. ಆದರೆ ನಾನು ಮಂಗಳೂರಿಗೆ ಬಂದ ಮುಂದಿನ ವರ್ಷ ಸರ್ಕಾರದಿಂದ ನಿಯೋಜಿತರಾಗಿ ಬಂದಿದ್ದ ಇನ್ನೊಬ್ಬ ಅಭ್ಯರ್ಥಿ ಅಚ್ಚರಿಯೆಂಬಂತೆ ತೇರ್ಗಡೆ ಯಾಗಿ ಬಿಟ್ಟಿದ್ದರು! ತರಗತಿಗಳಿಗೆ ನಿಯಮಿತವಾಗಿ ಹಾಜರಾಗದೆ, ತರಬೇತಿಯ ಕೆಲಸ ಕಾರ್ಯಗಳಲ್ಲಿ ಉದಾಸೀನ ಪ್ರವೃತ್ತಿಯನ್ನು ಪ್ರದರ್ಶಿಸಿ ಪ್ರಾಧ್ಯಾಪಕರಿಂದಲೇ ಆಗಾಗ್ಗೆ ಟೀಕೆಗೊಳಗಾಗುತ್ತಿದ್ದರೂ ಮೊದಲನೆ ಪ್ರಯತ್ನದಲ್ಲೇ ತೇರ್ಗಡೆಯಾದದ್ದು ಎಲ್ಲರೂ ಹುಬ್ಬೇರಿಸುವಂತಾಗಿತ್ತು. ಇದಲ್ಲದೆ ಅದೇ ಮೊದಲ ಸಾರಿ ಪ್ರಯತ್ನಿಸಿದ್ದ ಕೆ.ಎಂ.ಸಿ.ಯ ೩-೪ ಅಭ್ಯರ್ಥಿಗಳೂ ತೇರ್ಗಡೆಯಾಗಿದ್ದರು. ಅಂತಹ ಒಂದು ಪ್ರವಾಹದಲ್ಲಿ ನಾನು ದಡ ಸೇರದೆ ಕೊಚ್ಚಿ ಹೋದೆನೇನೋ ಅನ್ನಿಸಿತು.

ಈ ಹಂತದಲ್ಲಿ ಎಂ.ಬಿ.ಬಿ.ಎಸ್., ಪದವಿ ಪರೀಕ್ಷೆ ಎಂ.ಎಸ್., ಎಂ.ಡಿ., ಮುಂತಾದ ಸ್ನಾತಕೋತ್ತರ ಪರೀಕ್ಷೆಗಳ ರೀತಿನೀತಿಗಳ ಬಗೆಗೆ ಒಂದೆರಡು ಮಾತುಗಳನ್ನು ಹೇಳ ಬೇಕೆನಿಸುತ್ತದೆ. ನಮ್ಮ ಪ್ರೊಫೆಸರ್ ಎಂ.ಪಿ. ಪೈಗಳೇ ಆಗಾಗ್ಗೆ ಹೇಳುತ್ತಿದ್ದ "M.B.B.S., is given; M.S., is taken" (ಎಂ.ಬಿ.ಬಿ.ಎಸ್.ನ್ನು ಕೊಡಬಹುದು; ಎಂ.ಎಸ್.ನ್ನು ತೆಗೆದುಕೊಳ್ಳಬೇಕಾಗುತ್ತದೆ) ಎಂಬ ಅನಿಸಿಕೆ ತಾತ್ವಿಕವಾಗಿ ಸರಿಯಾದ ಅಭಿಪ್ರಾಯವೇ. ಎಂ.ಬಿ.ಬಿ.ಎಸ್. ವೈದ್ಯರು ಬಹುಪಾಲು ಸಾಮಾನ್ಯ ರೀತಿಯ ಚಿಕಿತ್ಸಾ ವಿಧಾನಗಳನ್ನು ಕೈಗೊಳ್ಳಬಹುದು; ಸಣ್ಣಪುಟ್ಟ ತಪ್ಪುಗಳಾದರೆ, ಗಂಭೀರ ಸ್ವರೂಪದ ಪರಿಣಾಮಗಳುಂಟಾಗಲಾರವು. ಆದರೆ ಎಂ.ಎಸ್., ಅಥವಾ ಎಂ.ಡಿ. ಗಳಂಥ ಪರಿಣಿತಿ ಪಡೆದವರು ಗುರುತರ ಹಾಗೂ ಜಟಿಲ ಸಮಸ್ಯೆಗಳ ಬಗೆಗೆ ಸರಿಯಾದ ನಿರ್ಣಯಗಳನ್ನು ಮಾಡಬೇಕಾಗುತ್ತದೆ; ಅದರಿಂದ ಉದ್ಭವಿಸುವ ಪರಿಣಾಮಗಳು ರೋಗಿಯ ಭವಿಷ್ಯ ಜೀವನವನ್ನೇ ಅಲ್ಲದೆ ಅವನ ಪರಿವಾರದವರಲ್ಲೂ ಗಂಭೀರ ಸ್ವರೂಪದ ಫಲಿತಾಂಶಗಳಿಗೆ ಕಾರಣವಾಗುವ ಸಾಧ್ಯತೆಗಳಿರುತ್ತವೆ. ಆದುದರಿಂದ ಅವರ ತರಬೇತಿಯೂ ತುಂಬಾ ಕಟ್ಟು ನಿಟ್ಟಾಗಿರಬೇಕಾಗುತ್ತದೆ; ಪರೀಕ್ಷಕರೂ ಸಹ ಯಾವುದೇ ರೀತಿಯ ಕನಿಕರ ತೋರುವ ಸ್ಥಿತಿಯಲ್ಲಿರಲು ಸಾಧ್ಯವಿಲ್ಲ. ಹಾಗೆ ಮಾಡಿ ಅರೆಬೆಂದ ಪರಿಣಿತರೆನಿಸಿಕೊಂಡವರಿಗೆ ಜನ ಸಮುದಾಯದ ಸ್ವಾಸ್ಥ್ಯ ರಕ್ಷಣೆಯ ಜವಾಬ್ದಾರಿ ವಹಿಸುವುದು ಸರಿಯಲ್ಲ. ಆದರೆ ಶಸ್ತ್ರಚಿಕಿತ್ಸಾ

ವಿಷಯದಲ್ಲಿ ಮೊದಲೇ ಸಾಕಷ್ಟು ಪರಿಣಿತಿ ಪಡೆದವರು ಕೇವಲ ಅನುಮಾನದಿಂದ ಮೊದಲ ಪ್ರಯತ್ನದಲ್ಲಿ ತೇರ್ಗಡೆಯಾಗದಿರುವುದು ಮತ್ತು ಮುಂದಿನ ವರ್ಷ ಅಧ್ಯಯನದಲ್ಲಿ ಉದಾಸೀನ ಪ್ರವೃತ್ತಿ ತಾಳಿದ್ದವರೊಬ್ಬರು ಮೊದಲ ಪ್ರಯತ್ನದಲ್ಲೇ ತೇರ್ಗಡೆಯಾಗುವುದು ಇಂಥ ಅಪವಾದಗಳಿಗೇನೆನ್ನಬೇಕೋ ತಿಳಿಯದು. ಮೈಸೂರಿನಲ್ಲೂ ಇಂತಹ ನಿದರ್ಶನಗಳಾಗಿದ್ದು ನನ್ನ ಗಮನಕ್ಕೆ ಬಂದಿದ್ದವು. ಅಂದರೆ ಎಷ್ಟೇ ಆದರ್ಶಮಯ ಹಾಗೂ ತಪ್ಪುಗಳಿಗವಕಾಶವಿರದೆಂದು (fool-proof) ಜಾರಿಗೆ ತಂದ ಪದ್ಧತಿಗಳಲ್ಲೂ ಇಂತಹ ವಿಪರ್ಯಾಸಗಳನ್ನು ತಪ್ಪಿಸಲಾಗದೆನಿಸುತ್ತದೆ. ಒಂದಲ್ಲ ಎರಡು ಪ್ರಯತ್ನಗಳಲ್ಲಿ ನಾನು ತೇರ್ಗಡೆಯಾಗದಿದ್ದುದಕ್ಕೆ ಕಾರಣ ಹುಡುಕುವ ಸಲುವಾಗಿ ಇಂತಹ ಪ್ರಕರಣಗಳ ಸಬೂಬುಗಳನ್ನು ಉಲ್ಲೇಖಿಸುತ್ತಿರುವೆನೆಂದು ಭಾವಿಸಬಾರದು. ವಸ್ತುಸ್ಥಿತಿಯನ್ನು ತೆರೆದಿಡಲು ಹೀಗೆ ಮಾಡಬೇಕಾಯಿತು, ಅಷ್ಟೇ. ಜೀವನ ಮಾರ್ಗದಲ್ಲಿ ಅದೂ ಒಂದು ಕಟು ವಾಸ್ತವವೆಂದುಕೊಂಡರೆ ಸಾಕು.

## ಸರ್ಜನ್ ಆದ ಮೊದಲ ದಿನವೇ....

ಅಂತಿಮವಾಗಿ ಎಂ. ಎಸ್. ಪರೀಕ್ಷೆಯಲ್ಲಿ ತೇರ್ಗಡೆಯಾದ ಮರುದಿನ ವೆನ್‌ಲಾಕ್ ಆಸ್ಪತ್ರೆಯ ಸೂಪರಿಂಟೆಂಡೆಂಟ್ ಆಗಿದ್ದ ಹಿಂದಿನಿಂದಲೂ ಪರಿಚಿತರಾಗಿದ್ದ ಡಾ|| ಎ. ಡಿ. ಪಾಲ್ ಅವರನ್ನು ನೋಡಲು ಹೋದೆ. ವಿಷಯ ತಿಳಿದ ಹರ್ಷಿತರಾದ ಅವರು ಆ ದಿನ ಮಧ್ಯಾಹ್ನ ಜರುಗಿಸಬೇಕಾಗಿರುವ ತುರ್ತು ಆಪರೇಷನ್ ಒಂದಕ್ಕೆ ಸಹಾಯಕನಾಗಿ ಬರಲು ಆಹ್ವಾನಿಸಿದರು. ಸಂತೋಷದಿಂದ ಸಮ್ಮತಿಸಿದೆ. ಮನೆಗೆ ಹಿಂದಿರುಗಿ ಊಟ ಮುಗಿಸಿ ಮಧ್ಯಾಹ್ನ ಎರಡು ಗಂಟೆ ಸಮಯಕ್ಕೆ ಆಸ್ಪತ್ರೆಗೆ ವಾಪಸಾದೆ.

ರೋಗಿಯನ್ನು ಅರಿವಳಿಕೆಗೊಳಪಡಿಸಿದರು. ಡಾ|| ಪಾಲ್ ಅವರೇ ಉದರಕೋಶವನ್ನು ತೆರೆದರು. ನಾನು ಸಹಾಯಕನಾಗಿ ಭಾಗಿಯಾದೆ. 'ಕರುಳು ತಡೆ' (Intestinal Obstruction) ಎಂದು ಮೊದಲೇ ಶಂಕಿಸಲಾಗಿತ್ತು. ವಾಸ್ತವವಾಗಿ ಕೆಲವು ವರ್ಷಗಳ ಹಿಂದೆ ಕುಟುಂಬ ಕಲ್ಯಾಣ ಯೋಜನೆಯ ಸಲುವಾಗಿ ಜರುಗಿಸಿದ ಟ್ಯುಬೆಕ್ಟಮಿ (Tubectomy) ಜರುಗಿದ ವಲಯದಲ್ಲಿ ಕರುಳಿನ ಸುರುಳಿಗಳು ಅಂಟಿಕೊಂಡಿದ್ದರಿಂದ ಕರುಳು ತಡೆ ಉಂಟಾಗಿತ್ತು. ಅದನ್ನೆಲ್ಲಾ ಬಿಡಿಸಿ ಯಥಾಸ್ಥಿತಿಯನ್ನುಂಟು ಮಾಡಲಾಯಿತು. ಡಾ|| ಪಾಲ್ ಅಂದು ಸಂಜೆ ಕಾಲೇಜಿನ ಸಮಾರಂಭವೊಂದರಲ್ಲಿ ಭಾಗವಹಿಸಬೇಕಾದುದರಿಂದ, ತೆರೆದ ಉದರಕೋಶವನ್ನು ಮುಚ್ಚಿ ಹೊಲಿಗೆ ಹಾಕುವ ಜವಾಬ್ದಾರಿಯನ್ನು ನನಗೆ ವಹಿಸಿ ಹೊರಟು ಹೋದರು. ಆ ಕೆಲಸವನ್ನು ಕ್ರಮವರಿತು ಮಾಡಿ, ಇನ್ನೇನು ಕಟ್ಟಕಡೆಯ ಹೊಲಿಗೆ ಹಾಕುತ್ತಿದ್ದೆ. ಅಷ್ಟರಲ್ಲೇ ರೋಗಿಯ ನಾಡಿಯ ಮೇಲೆ ಬೆರಳು ಇರಿಸಿಕೊಂಡಿದ್ದ ಸಹಾಯಕ ವೈದ್ಯರೊಬ್ಬರು ಆಕೆಯ ನಾಡಿಮಿಡಿತ ನಿಂತು ಹೋಗಿದೆ ಎಂದು ಗಟ್ಟಿಯಾಗಿ ಘೋಷಣೆ ಮಾಡಿದರು. ಅರಿವಳಿಕಾ ತಜ್ಞರೂ ಸಹಾ ರೋಗಿಯ ಎದೆಗೂಡಿನ ಮೇಲೆ ಸ್ಟೆಥಾಸ್ಕೋಪನ್ನಿರಿಸಿ ಆಲಿಸತೊಡಗಿದರು. ಹೃದಯ ಬಡಿತ ನಿಂತಿರುವುದನ್ನು ಅವರು ಸಹಾ ಖಚಿತಪಡಿಸಿಕೊಂಡರು. ಕೂಡಲೇ ಎದೆಗೂಡನ್ನು ಹೊರಗಡೆಯಿಂದಲೇ ಕ್ರಮವರಿತು ಉಜ್ಜಿ ಹೃದಯವನ್ನು ಉದ್ದೀಪನಗೊಳಿಸುವ ಪ್ರಯತ್ನವನ್ನು (External cardiac massage) ಮಾಡಲಾರಂಭಿಸಿದರು. ಅದಾಗಲೇ ಉಸಿರುನಾಳದಿಂದ ಹೊರಗೆಳೆದು ತೆಗೆದಿದ್ದ ರಬ್ಬರ್ ನಳಿಕೆಯನ್ನು ಪುನಃ ತೂರಿಸಿ ಶ್ವಾಸಕೋಶಗಳಿಗೆ ಆಮ್ಲಜನಕದ ಪ್ರವಾಹವನ್ನೇ ಹರಿಸಿದರು. ಅಷ್ಟರಲ್ಲೇ ಹೃದಯಸ್ತಂಭನವಾಗಿ (Cardiac arrest) ಒಂದೆರಡು ನಿಮಿಷಗಳು

ಸಂದು ಹೋಗಿದ್ದವು. ಆದರೂ ಹೃದಯ ಸ್ಪಂದಿಸಿ ಮತ್ತೆ ಬಡಿದುಕೊಳ್ಳುವ ಲಕ್ಷಣಗಳು ಕಂಡು ಬರಲಿಲ್ಲ. ಇನ್ನೆರಡು-ಮೂರು ನಿಮಿಷಗಳಲ್ಲಿ ಅದು ಪುನಃ ಕಾರ್ಯಾರಂಭ ಮಾಡದಿದ್ದರೆ ರೋಗಿ ಸತ್ತಂತೆಯೇ ಸರಿ. ಮೀನ ಮೇಷ ಎಣಿಸುವಷ್ಟು ಸಮಯವಿರಲಿಲ್ಲ. ಸಹಾಯ ಮಾಡುತ್ತಿದ್ದ ನರ್ಸ್‌ಗೆ ಎದೆಗೂಡನ್ನು ತೆರೆಯುವ ಸಲುವಾಗಿ ಕೆಲವು ಸಲಕರಣೆಗಳನ್ನು ನೀಡುವಂತೆ ಹೇಳಿದೆ. ಎದೆಗೂಡನ್ನು ಮುಚ್ಚಿದ್ದ ಬಟ್ಟೆಬರೆಗಳನ್ನು ತೆಗೆದು ಶುಚಿ ಮಾಡಿದೆ. ಎಡಗಡೆ ಸ್ತನದ ಕೆಳಭಾಗ ದಲ್ಲಿ ಉದ್ದನೆಯ ಕತ್ತರಿಕೆ ಮಾಡಿದೆ. ಒಂದು ಕೈ ಹಸ್ತವನ್ನು ಒಳತೂರಿ ಶ್ವಾಸಕೋಶವನ್ನು ಬದಿಗೆ ಸರಿಸಿ ಹೃದಯವನ್ನು ಸ್ಪರ್ಷಿಸಿದೆ. ತಾಯಿಯ ಗರ್ಭದಲ್ಲಿರುವಾಗಿನಿಂದಲೇ ಎಡೆಬಿಡದೇ ಬಡಿದು ಕೊಳ್ಳುತ್ತಿದ ಹೃದಯ ಅಲುಗಾಡದೇ ನಿಶ್ಯಬ್ಧವಾಗಿತ್ತು. ತಡಮಾಡದೇ ಇನ್ನೂ ಒಂದು ಹಸ್ತವನ್ನು ತೂರಿಸಿ, ಎರಡು ಹಸ್ತಗಳ ನಡುವೆ ಹೃದಯವನ್ನು ಹಿಡಿದುಕೊಂಡು ಕ್ರಮವಾಗಿ ಅದುಮಿ ತೀಡಲಾರಂಭಿಸಿದೆ. ಮುಂದಿನ ಒಂದೆರಡು ನಿಮಿಷಗಳಲ್ಲಿ ಹೃದಯ ತನ್ನಷ್ಟಕ್ಕೇ ಬಡಿದುಕೊಳ್ಳಲು ಆರಂಭಿಸಿತು. ಸ್ವಲ್ಪಕಾಲ ಅದರ ಮಿಡಿತದ ಗತಿಯನ್ನು ಅವಲೋಕಿಸುತ್ತಿದ್ದೆ. ಮತ್ತೆ ಅದು ಸ್ತಬ್ಧ ವಾಯಿತು. ಈ ಸಾರಿ ಅದುಮಿ ತೀಡುವುದನ್ನು ಐದು ನಿಮಿಷಗಳಿಗೂ ಹೆಚ್ಚು ಸಮಯ ಮುಂದು ವರಿಸಿದೆ ಮತ್ತೆ ಸ್ಪಂದಿಸಿ ಬಡಿದುಕೊಳ್ಳಲಾರಂಭಿಸಿತು. ಮತ್ತೂ ಎಂಟು ಹತ್ತು ನಿಮಿಷ ಅದು ಕಾರ್ಯವನ್ನು ಸ್ಥಗಿತಗೊಳಿಸದ್ದರಿಂದ ಎದೆಗೂಡನ್ನು ಶಾಸ್ತ್ರೋಕ್ತವಾಗಿ ಮುಚ್ಚಿ ಹೊಲಿಗೆ ಹಾಕಿದೆ.

ಶವ ಪರೀಕ್ಷೆ ಸಮಯದಲ್ಲಿ ಹೃದಯವನ್ನು ಮುಟ್ಟಿನೋಡಿ, ಕೊಯ್ದು ಪರೀಕ್ಷೆ ಮಾಡುವ ಅವಕಾಶಗಳಿದ್ದವು. ಎಕ್ಸ್‌ರೇ ಸ್ಕ್ರೀನಿಂಗ್ ಸಮಯದಲ್ಲಿ ಜೀವಂತ ಹೃದಯ ಬಡಿದು ಕೊಳ್ಳುವುದನ್ನೂ ನೋಡಿದ ಅನುಭವವಿತ್ತು. ಆದರೆ ಜೀವಂತ ಮಹಿಳೆಯೊಬ್ಬಳ ಸ್ಥಗಿತವಾಗಿದ್ದ ಹಾಗೂ ಅದನ್ನು ಕೈಯಿಂದ ಅದುಮಿ ತೀಡಿ ಮತ್ತೆ ಜೀವ ಬರಿಸುವಂಥ ಅವಕಾಶ (Internal cardiac massage) ಮಾಡಿದ ಅನುಭವ ರೋಮಾಂಚನಗೊಳಿಸುವಂತೆ ಮಾಡಿತು. ಎಂದೆಂದೂ ಮರೆಯಲಾಗದ ಸನ್ನಿವೇಶ!

ರೋಗಿಯೇನೋ ಬದುಕಿದಳು. ಇಲ್ಲದಿದ್ದಲ್ಲಿ ಬಹಳಷ್ಟು ಸಮಸ್ಯೆಗಳು ಸರಮಾಲೆಯಾಗಿ ಬರುತ್ತಿದ್ದವು. ಪಾನನಿಷೇಧ ಕಾಯಿದೆಯಡಿ ಜರುಗಿದ ಅಪರಾಧಕ್ಕಾಗಿ ಜೈಲುಶಿಕ್ಷೆ ಅನುಭವಿಸು ತ್ತಿದ್ದವಳು; ಅವಳ ಗಂಡನೂ ಅಂತಹದೇ ಅಪರಾಧಕ್ಕಾಗಿ ಇನ್ನೊಂದು ಊರಿನ ಜೈಲು ವಾಸಿ ಯಾಗಿದ್ದನಂತೆ. ಹತ್ತಿರದಲ್ಲಿ ಬೇರೆ ಯಾವ ಸಂಬಂಧಿಕರೂ ಇರಲಿಲ್ಲ. ಜೈಲಿನ ಕೈದಿಗಳಿಗೆ ಯಾವುದೇ ಆಪರೇಷನ್ ಜರುಗಿಸುವ ಮುನ್ನ ಬೆಂಗಳೂರಿನಲ್ಲಿರುವ ಬಂದೀಖಾನೆ ಇಲಾಖೆಯವರ ಪರವಾನಿಗಿ ಅವಶ್ಯಕವಂತೆ. ತುರ್ತು ಸಂದರ್ಭಗಳಲ್ಲಿ ಸ್ಥಳೀಯ ಜೈಲು ಸೂಪರಿಂಟೆಂಡೆಂಟ್‌ರ ಪರವಾನಿಗಿಯನ್ನಾದರೂ ಪಡೆದುಕೊಳ್ಳಬೇಕಂತೆ. ಆದರೆ ಡಾ|| ಪಾಲ್ ಅಂತಹ ಯಾವುದೇ ಕ್ರಮದ ಬಗೆಗೆ ಯೋಚನೆ ಮಾಡಿದವರೇ ಅಲ್ಲ! ನಮ್ಮ ಆಸ್ಪತ್ರೆಯ ಹಿರಿಯ ವೈದ್ಯರೊಬ್ಬರು ಆಗ ಜೈಲು ಸೂಪರಿಂಟೆಂಡೆಂಟ್ ಆಗಿದ್ದರಿಂದ ಬಚಾವಾದೆವು. ಅವರಿಂದ ಪೂರ್ವಾನ್ವಯವಾಗುವ ಹಾಗೆ ಪರವಾನಿಗೆ ಪಡೆದುಕೊಂಡೆವು. ಅಧಿಕೃತವಾಗಿ ಸರ್ಜನ್ ಎನಿಸಿಕೊಂಡ ದಿನವೇ ಅದೆಂತಹ ಸ್ವಾಗತ ನನಗೆ; ಅದೆಂಥಾ ಅನುಭವ!

## ವರ್ಗಾವಣೆ

ಸರ್ಕಾರದವರು ನಮ್ಮನ್ನು ಸ್ನಾತಕೋತ್ತರ ತರಬೇತಿಗೆ ನಿಯೋಜಿಸಿದ ಅವಧಿ ಮುಗಿದ ನಂತರ (೧೯೬೫), ವೆನ್‌ಲಾಕ್ ಆಸ್ಪತ್ರೆಯಲ್ಲೇ ಅಸಿಸ್ಟೆಂಟ್ ಸರ್ಜನ್ ಆಗಿ ಮುಂದುವರಿಯಲು

ಇಲಾಖೆಯ ಆದೇಶ ಪಡೆದುಕೊಂಡಿದ್ದನ್ನು ಈ ಹಿಂದೆ ಪ್ರಸ್ತಾಪಿಸಿರುವೆನಷ್ಟೆ, ಮುಂದೆ ಏಪ್ರಿಲ್ ೧೯೬೬ರಲ್ಲಿ ಎಂ.ಎಸ್. ಪರೀಕ್ಷೆಯಲ್ಲಿ ತೇರ್ಗಡೆಯಾಗುವವರೆಗೂ ಮುಂದುವರಿದೆ. ಸರ್ಕಾರದವರು ಅಲ್ಲಿಂದ ೧೯೬೭ರ ಮಾರ್ಚ್ ತಿಂಗಳ ಅಂತ್ಯದವರೆಗೂ ವರ್ಗಾವಣೆ ಮಾಡಲಿಲ್ಲ. ನನಗೂ ಅಲ್ಲೇ ಕೆಲ ಸಮಯ ಕಾರ್ಯ ನಿರ್ವಹಿಸಿ ಇನ್ನೂ ಹೆಚ್ಚಿನ ಅನುಭವ ಪಡೆದುಕೊಳ್ಳುವ ಅಭಿಲಾಷೆ ಇತ್ತು. ಆಸ್ಪತ್ರೆಯಲ್ಲಿ ಡಿ.ಎಂ.ಓ. ಅವರ ಹೆಸರಿನಲ್ಲಿ ಒಂದು ಘಟಕವಿದ್ದು ಅದರ ನಿರ್ವಹಣೆಯನ್ನು ಡಾ॥ ಎಸ್. ವಿ. ನಾಡಕರ್ಣಿಯೆಂಬ ಯುವ ಉತ್ಸಾಹೀ ರೀಡರ್ (Reader ಬೋಧಕರ ಶ್ರೇಣಿಯಲ್ಲಿ ಪ್ರಾಧ್ಯಾಪಕರ ಕೆಳಗಿನ ಹಂತ) ಮಾಡುತ್ತಿದ್ದರು. ಅವರ ಸಹಯೋಗದೊಂದಿಗೆ ನಾನೂ ಕಾರ್ಯಪ್ರವೃತ್ತನಾದೆ.

ಮುಂದಿನ ವರ್ಷದ ೧೯೬೭ರ ವಾರ್ಷಿಕ ವರ್ಗಾವಣೆಯ ಸಮಯದಲ್ಲಿ ಮಂಗಳೂರಿನಿಂದ ವರ್ಗ ಮಾಡಿಸಿಕೊಳ್ಳುವ ಯೋಜನೆ ಹಾಕಿಕೊಂಡಿದ್ದೆ. ಸ್ವಂತ ಜಿಲ್ಲೆಯ ಶಿವಮೊಗ್ಗಾದ ಮೆಗ್ಗಾನ್ ಆಸ್ಪತ್ರೆಯಲ್ಲಿ ಅಷ್ಟರತನಕ ಸರ್ಜರಿಯಲ್ಲಿ ಸ್ನಾತಕೋತ್ತರ ಎಂ.ಎಸ್. ಪಡೆದವರಾರನ್ನೂ ನೇಮಕ ಮಾಡಿರಲಿಲ್ಲವೆಂಬ ವಿಷಯ ತಿಳಿದಿತ್ತು. ಆ ಸಲುವಾಗಿ ಬೆಂಗಳೂರಿಗೆ ಹೋಗುವಷ್ಟರಲ್ಲೇ ಆ ಜಾಗಕ್ಕೆ ಬೇರೊಬ್ಬರ ನೇಮಕವಾಗಿ ಬಿಟ್ಟಿತ್ತು. ನನ್ನನ್ನು ಕೊಳ್ಳೇಗಾಲದ ಸರ್ಕಾರಿ ಆಸ್ಪತ್ರೆಗೆ ನೇಮಕ ಮಾಡಿ ಆದೇಶ ಹೊರಡಿಸಿಯಾಗಿತ್ತು.

ರಾಜ್ಯಗಳ ಪುನರ್ವಿಂಗಡಣೆಯ ಸಮಯದಲ್ಲಿ ಕನ್ನಡ ಪ್ರದೇಶವಾಗಿದ್ದ ಕೊಳ್ಳೇಗಾಲವನ್ನು ಮೈಸೂರಿಗೆ ವರ್ಗಾಯಿಸಲಾಗಿತ್ತು. ಸುಮಾರು ಎರಡು ತಾಲ್ಲೂಕುಗಳಿಗಿಂತಲೂ ಹೆಚ್ಚು ವಿಸ್ತೀರ್ಣವಾಗಿದ್ದ ಅಲ್ಲಿಯ ಆಸ್ಪತ್ರೆಯಲ್ಲಿ ಮದ್ರಾಸು ಸರ್ಕಾರದವರು ತಕ್ಕಮಟ್ಟಿಗೆ ಸುಸಜ್ಜಿತಗೊಳಿಸಿದ್ದರಂತೆ. ಆ ತನಕ ಎಂ.ಎಸ್., ಎಂ.ಡಿ.ಯಂತಹ ಪದವಿ ಗಳಿಸಿದವರನ್ನು ತಾಲ್ಲೂಕು ಆಸ್ಪತ್ರೆಗಳಿಗೆ ಅಷ್ಟಾಗಿ ನೇಮಕ ಮಾಡುವ ಪರಿಪಾಟವಿರಲಿಲ್ಲ. ಅಲ್ಲದೆ ಒಂದು ವೈದ್ಯಕೀಯ ವಿಷಯದಲ್ಲಿ ಆದರಲ್ಲೂ ಸರ್ಜರಿಯಂಥ ವಿಶೇಷ ಸೌಕರ್ಯ ಹಾಗೂ ಸಿಬ್ಬಂದಿಗಳ ಅವಶ್ಯಕತೆ ಇದ್ದ ಎಂ.ಎಸ್. ಪದವೀಧರರು ಅಂತಹ ಆಸ್ಪತ್ರೆಗಳಲ್ಲಿ ಕಾರ್ಯ ನಿರ್ವಹಿಸುವುದು ವ್ಯರ್ಥವೆಂಬ ಅಭಿಪ್ರಾಯವಿತ್ತು. ಆದುದರಿಂದ ಅಲ್ಲಿಂದ ಬದಲಾಯಿಸಿ ಬೇರೆ ಯಾವುದಾದರೂ ಜಿಲ್ಲಾ ಕೇಂದ್ರದ ಆಸ್ಪತ್ರೆಗೆ ಬದಲಾವಣೆ ಮಾಡಿಸಿಕೊಳ್ಳಲು ಪ್ರಯತ್ನ ಮಾಡಿದೆ. ಅದು ಸಫಲವಾಗಲಿಲ್ಲ. ಆದರಿಂದ ಮಂಗಳೂರಿಗೆ ಹಿಂದಿರುಗಿ ಮುಂದಿನ ದಾರಿಯ ಬಗೆಗೆ ಯೋಚಿಸತೊಡಗಿದೆ. ಕೊಳ್ಳೇಗಾಲದಲ್ಲಿ ಆಗ ವೈದ್ಯಾಧಿಕಾರಿಗಳಾಗಿದ್ದ ಡಾ॥ ಎಚ್.ಎನ್. ತಿಮ್ಮಶೆಟ್ಟರು ಮೆಡಿಕಲ್ ಕಾಲೇಜಿನಲ್ಲಿ ಸಮಕಾಲೀನರಾಗಿದ್ದವರು. ಅವರ ವರ್ಗಾವಣೆಯೇನಾದರೂ ರದ್ದಾಗುವ ಸಾಧ್ಯತೆಯಿದ್ದರೆ, ಮಂಗಳೂರಲ್ಲೇ ಇರುವೆನೆಂದು ಅವರಿಗೆ ಪತ್ರ ಬರೆದೆ. ಅವರು ಅಂತಹ ಸಾಧ್ಯತೆ ಇಲ್ಲವೆಂತಲೂ, ನಾನು ಅಲ್ಲಿಗೆ ಬರಬಹುದೆಂತಲೂ ಉತ್ತರಿಸಿದರು. ಆದರಿಂದ ಒಲ್ಲದ ಮನಸ್ಸಿನಿಂದ ಕೊಳ್ಳೇಗಾಲಕ್ಕೆ ಹೋಗುವ ನಿರ್ಧಾರ ಮಾಡಿದೆ. ವೆನ್‌ಲಾಕ್ ಆಸ್ಪತ್ರೆಯ ನಮ್ಮ ಘಟಕದವರು ಮೋತಿಮಹಲ್ ಹೋಟೆಲಿನಲ್ಲಿ ಸತ್ಕಾರ ಸಮಾರಂಭ ಏರ್ಪಡಿಸಿ ಬೀಳ್ಕೊಟ್ಟರು. ಆಸ್ಪತ್ರೆಯಿಂದಲೂ ಬಿಡುಗಡೆ ಮಾಡಿಸಿಕೊಂಡು ಶಿವಮೊಗ್ಗಕ್ಕೆ ಸಂಸಾರದವರನ್ನು ಕರೆದುಕೊಂಡು ಹೋಗಿ ಬಿಟ್ಟೆ, ನಾಲ್ಕಾರು ದಿನ ಅಲ್ಲಿದ್ದು ನಾನು ವರದಿ ಮಾಡಿಕೊಳ್ಳಬೇಕಾದ ಹಿಂದಿನ ದಿನ ಕೊಳ್ಳೇಗಾಲಕ್ಕೆ ಪ್ರಯಾಣ ಮಾಡಿದೆ.

# ೧೨. ಕೊಳ್ಳೇಗಾಲದ ಕೈಂಕರ್ಯ

ಶಿವಮೊಗ್ಗಾದಿಂದ ಕೊಳ್ಳೇಗಾಲ ಸುಮಾರು ಇನ್ನೂರು ಮೈಲಿಗಳ ದೂರದಲ್ಲಿದೆ. ಬಸ್ಸಿನಲ್ಲಿ ಮೈಸೂರಿಗೆ ಹೋಗಿ ಮತ್ತೆ ಬಸ್ಸು ಬದಲಾಯಿಸಿ ಕೊಳ್ಳೇಗಾಲವನ್ನು ಸಂಜೆ ನಾಲ್ಕೂವರೆ ಗಂಟೆ ಸಮಯಕ್ಕೆ ತಲುಪಿದೆ. ಡಾ॥ ತಿಮ್ಮಶೆಟ್ಟರು, ಡಾ॥ ವೆಂಕಟರಾಮಯ್ಯ ಮತ್ತು ಲೇಡಿ ಡಾಕ್ಟರ್ ಎಸ್. ಕೆ. ಕಾಂತಾ ಅವರೆಲ್ಲಾ ಆದರದಿಂದ ಸ್ವಾಗತಿಸಿದರು; ಆದರೂ ಅವರೆಲ್ಲರ ಮುಖ ಚರ್ಯೆಯಲ್ಲಿ ಏನೋ ಒಂದು ಬಗೆಯ ಕಾತರ ಇಲ್ಲವೆ ಅಳುಕಿನ ಛಾಯೆ ಇರುವ ಹಾಗೆ ಭಾಸವಾಯಿತು ನನಗೆ. ತಂಗುವುದಕ್ಕೆ ಆಸ್ಪತ್ರೆಯಲ್ಲೇ ಒಂದು ಕೊಠಡಿಯನ್ನು ಸಜ್ಜುಗೊಳಿಸಿದರು. ಊಟೋಪಚಾರಗಳಿಗೂ ಏರ್ಪಾಡು ಮಾಡಿದರು.

ಕತ್ತಲಾಗುತ್ತಿದ್ದಂತೆ ಊರಿನ ಮುಖಂಡರೆಂಬ ಕೆಲವರು ಬಂದು ಪರಿಚಯಿಸಿ ಕೊಂಡರು; ಆಸ್ಪತ್ರೆಯ ಡಾಕ್ಟರ್ ಸಂಬಂಧಿಯೆಂದುಕೊಂಡವರೊಬ್ಬರೂ ಬಂದು ಸೇರಿಕೊಂಡರು. ಲೋಕಾಭಿರಾಮವಾಗಿ ಸಂಭಾಷಣೆಗಳು ಸಾಗುತ್ತಿದ್ದವು. ಮುಖಂಡರೊಬ್ಬರು ಸಾರ್ವಜನಿಕರ ಒತ್ತಾಯದ ಮೇಲೆ ಡಾ॥ ತಿಮ್ಮಶೆಟ್ಟರನ್ನು ಕೊಳ್ಳೇಗಾಲದಲ್ಲೇ ಉಳಿಸಿಕೊಳ್ಳುವ ಪ್ರಯತ್ನಗಳಾಗುತ್ತಿರುವ ವಿಷಯವನ್ನು ನನ್ನ ಗಮನಕ್ಕೆ ತಂದರು; ಅವರು ಮುಂದುವರಿದು ನಾನು ಕೆಲವು ಸಮಯ ರಜೆ ತೆಗೆದುಕೊಳ್ಳುವುದು ಒಳಿತು ಎಂಬ ಸಲಹೆ ಮಾಡಿದರು. ಅದನ್ನು ಕೇಳಿ ಆಶ್ಚರ್ಯಚಕಿತನಾದೆ. ಮೊದಲಿಗೆ ಹೇಗೆ ಉತ್ತರಿಸಬೇಕೆಂಬುದೇ ಹೊಳೆಯಲಿಲ್ಲ. ಅವರು ಮುಂದುವರಿದು ನಾನು ಗಳಿಸಿಕೊಂಡಿರುವ ತಜ್ಞತೆಯ ವ್ಯಾಪ್ತಿಗೆ ತಾಲ್ಲೂಕು ಕೇಂದ್ರದ ಆಸ್ಪತ್ರೆ ಏನೇನೂ ಸಾಲದೆಂದು ಅಭಿಪ್ರಾಯ ವ್ಯಕ್ತಪಡಿಸಿದರು. ಅವರಲ್ಲೊಬ್ಬರಿಗೆ ಆರೋಗ್ಯ ಸಚಿವರು ಆತ್ಮೀಯ ಸಂಬಂಧಿಗಳಾಗಿರುವುದಾಗಿಯೂ, ನನಗೆ ಜಿಲ್ಲಾ ಆಸ್ಪತ್ರೆಯೊಂದಕ್ಕೆ ಬದಲಾಯಿಸಿ ಕೊಡುವ ಭರವಸೆ ಇತ್ತರು. ಅವರು ಅಂದು ರಾತ್ರಿಯೇ ಬೆಂಗಳೂರಿಗೆ ಹೋಗಿ ಈ ಕೆಲಸವನ್ನು ಮಾಡಿಕೊಂಡು ಬರುವುದಾಗಿಯೂ, ನಾನು ವರದಿ ಮಾಡಿಕೊಳ್ಳುವುದನ್ನು ಒಂದೆರಡು ದಿನ ಮುಂದೆ ಹಾಕಬೇಕೆಂದು ಕೇಳಿಕೊಂಡರು. ಆ ತನಕ ಕುತೂಹಲದಿಂದ ಆಲಿಸುತ್ತಿದ್ದ ನಾನು ಮೌನ ಮುರಿಯಲೇ ಬೇಕಾಯಿತು; ಹೇಳಬೇಕೆಂದು ಕೊಂಡಿದ್ದನ್ನು ನೇರವಾಗಿ ಹೇಳಿದೆ. "ಕೊಳ್ಳೇಗಾಲಕ್ಕೆ ಬರುವ ಬಗೆಗೆ ಡಾ॥ ತಿಮ್ಮಶೆಟ್ಟರಿಗೆ ಪತ್ರ ಬರೆದಿದ್ದೆ. ಅವರು ಇಲ್ಲಿಯೇ ಮುಂದುವರಿಯುವ ಸಾಧ್ಯತೆಗಳಿದ್ದರೆ ತಿಳಿಸಬೇಕು; ಇಲ್ಲದ್ದಿದ್ದರೆ ನಾನು ಮಂಗಳೂರಿನಲ್ಲೇ ಇನ್ನೂ ಒಂದು ವರ್ಷ ಮುಂದುವರಿಯುತ್ತೇನೆ; ಅವರ ತೀರ್ಮಾನದ ಬಗೆಗೆ ತಿಳಿಸಬೇಕೆಂದು ಕೋರಿದ್ದೆ. ಅದಕ್ಕೆ ಉತ್ತರ ಬರೆದ ಅವರು ಇಲ್ಲಿ ಮುಂದುವರಿಯುವುದಿಲ್ಲವೆಂತಲೂ, ನಾನು ಬಂದ ದಿನವೇ ಚಾರ್ಜು ವಹಿಸಿಕೊಡಲು ಸಿದ್ಧರಿದ್ದಾರೆಂದು ತಿಳಿಸಿದ್ದರು; ಅದರಂತೆಯೇ ಇಂದು ಬಂದಿರುವುದು; ವರದಿ ಮಾಡಿಕೊಳ್ಳುವುದಕ್ಕೆ ನಾಳೆಯೇ ಕಡೆಯ ಗಡುವು. ಅದರಿಂದ ಈ ವಿಷಯದಲ್ಲಿ ನಾನೇನೂ ಮಾಡಲು ಸಾಧ್ಯವೇ ಇಲ್ಲ. ಅದರಿಂದ ನಾಳೆ ನಾನು ವರದಿ ಮಾಡಿಕೊಳ್ಳುತ್ತೇನೆ; ಹಾಗೇನಾದರೂ ಡಾ॥ ತಿಮ್ಮಶೆಟ್ಟರನ್ನು ಇಲ್ಲಿ ಮುಂದುವರಿಸುವ ಆದೇಶ ಬಂದು ನನಗೆ ಬೇರೊಂದು ಜಿಲ್ಲಾ ಆಸ್ಪತ್ರೆಯಲ್ಲಿ ಅವಕಾಶ ಮಾಡಿಕೊಟ್ಟರೆ ತಿರುಗಿ ಚಾರ್ಜು ವಹಿಸಲು ತಯಾರಿದ್ದೇನೆ" ಎಂದು

ಖಡಾಖಂಡಿತವಾಗಿ ಹೇಳಿಬಿಟ್ಟೆ. ಅವರಿಗೂ ನನ್ನ ಹೇಳಿಕೆ ಅನಿರೀಕ್ಷಿತವಾಗಿ ಕಾಣಿಸಿರಬೇಕು. ಬೇರೆ ಇನ್ನಾವುದೋ ಸಮಾಧಾನಕರ ಸಬೂಬುಗಳನ್ನು ಮುಂದಿಟ್ಟು ವಾದ ಮಾಡತೊಡಗಿದರು. ನನ್ನ ನಿಲುವಿನಿಂದ ಹಿಂಸರಿಯುವ ಪ್ರಶ್ನೆಯೇ ಇಲ್ಲವೆಂದು ಪಟ್ಟು ಹಿಡಿದು ಕುಳಿತೆ. ಆ ರಾತ್ರಿ ಹತ್ತೂವರೆ ಗಂಟೆಯವರಿಗೂ ಊರಿನ ಇನ್ನೂ ಕೆಲವು ಮುಖಂಡರೆಂದುಕೊಂಡವರು ನನ್ನನ್ನು ಸಂಧಿಸಿ ಅದೇ ವಿಷಯದ ಬಗೆಗೆ ನನ್ನ ಮನ ಒಲಿಸಲು ಪ್ರಯತ್ನಿಸಿದರು. ಅವಾವುದರಿಂದಲೂ ಪ್ರಯೋಜನವಾಗುವುದಿಲ್ಲವೆಂದು ಅವರೆಲ್ಲಾ ವಾಪಸ್ಸು ಹೋದರು.

ಮರುದಿನ ಬೆಳಿಗ್ಗೆ (೪ ಏಪ್ರಿಲ್ ೧೯೬೭) ನನ್ನ ಹಾಜರಾತಿಯ ವರದಿಗೆ ಸಹಿ ಹಾಕಿದೆ; ಡಾ॥ ತಿಮ್ಮಶೆಟ್ಟರು ಯಾವುದೇ ರೀತಿಯ ಅಸಮಾಧಾನ ವ್ಯಕ್ತಪಡಿಸದೆ ಚಾರ್ಜು ವಹಿಸಿಕೊಟ್ಟರು. ಕೆಲವು ದಿನಗಳ ನಂತರ ತಿಳಿದು ಬಂದ ಪ್ರಕಾರ ಡಾ॥ ತಿಮ್ಮಶೆಟ್ಟರು ಮುಂದಿನ ಊರಿಗೆ ಹೋಗಲು ತಯಾರಿದ್ದರಂತೆ; ಕೆಲವು ಪಟ್ಟಭದ್ರ ಹಿತಾಸಕ್ತಿಗಳನ್ನು ಬೆಳಸಿಕೊಂಡವರು ಕಡೇ ಗಳಿಗೆಯಲ್ಲಿ ಇಂತಹ ಒಂದು ಪ್ರಯತ್ನ ಮಾಡುವ ಹುನ್ನಾರ ನಡೆಸಿದ್ದೆಂದು ತಿಳಿಯಿತು!

ಮದ್ರಾಸಿನಿಂದ ರಾಜ್ಯ ಪುನರ್ವಿಂಗಡನೆಯ ಸಮಯದಲ್ಲಿ ಕೊಳ್ಳೇಗಾಲ ಮೈಸೂರು ಪ್ರಾಂತ್ಯಕ್ಕೆ (ನಂತರ ಮೈಸೂರು ಜಿಲ್ಲೆಗೆ) ಸೇರ್ಪಡೆಯಾಯಿತೆಂಬ ಪ್ರಸ್ತಾಪ ಮೊದಲೇ ಬಂದಿದೆ. ಹೆಚ್ಚು ಕಡಿಮೆ ಕೊಡಗು ಜಿಲ್ಲೆಯಷ್ಟೇ ವಿಸ್ತಾರವಾದ ಪ್ರದೇಶ. ರೇಷ್ಮೆ ಬೆಳೆ ಮತ್ತು ನೂಲು ತಯಾರಿಕೆಯ ಪ್ರಮುಖ ಕೇಂದ್ರ. ಪೂರ್ವದ ಕರಾವಳಿ ಕಡೆಯಿಂದ ಸಾಮಾನ್ಯವಾಗಿ ಬರುವ ಹಿಂಗಾರು ಮಳೆಯೇ ಅಲ್ಲಿಯ ಕೃಷಿಕರ ಜೀವನಾಧಾರ. ಅದೂ ಕಾಲಕಾಲಕ್ಕೆ ಸರಿಯಾಗಿ ಬರುವುದು ಅಪರೂಪ; ಉತ್ತು ಬಿತ್ತಿದ ಬೇಳೆ ಕೈಗೆ ಬಾರದ ಅನಿಶ್ಚಿತ ಪರಿಸ್ಥಿತಿ ಅಲ್ಲಿಯ ರೈತರದ್ದು. ರೇಷ್ಮೆ ಬೆಳೆ ಮತ್ತು ವಹಿವಾಟು ಕೆಲವೇ ಶ್ರೀಮಂತರ ಸ್ವಾಧೀನದಲ್ಲಿರುವಂತಿದೆ; ಸಣ್ಣ ಪುಟ್ಟ ರೈತರೂ ಅದೇ ವ್ಯವಸಾಯದಲ್ಲಿ ತೊಡಗುವುವರಾದರೂ ಅನಿಶ್ಚಿತತೆಯ ನೆರಳಿನಲ್ಲಿ ಬಾಳುವೆ ಸಾಗಿಸುವ ಅನಿವಾರ್ಯತೆ. ಹಾಗಾಗಿ ಇಡೀ ವಲಯದವರು ಬಡತನದ ಬೇಗೆಯಲ್ಲೇ ಬದುಕುತ್ತಾರೆ. ಕೊಳ್ಳೇಗಾಲ ಪಟ್ಟಣ ಸ್ವಲ್ಪ ದೊಡ್ಡ ಊರು; ಅತಿ ಹೆಚ್ಚು ಜನ ಸಂಖ್ಯೆಯಿಂದ ತುಂಬಿ ತುಳುಕುತ್ತಿತ್ತು. ಕರ್ನಾಟಕದ ತಿರುಪತಿಯೆಂದು ಪ್ರಖ್ಯಾತಿ ಪಡೆದ ಮಲೈ ಮಹದೇಶ್ವರ ಬೆಟ್ಟ (ಕ್ಷೇತ್ರ) ಅಲ್ಲಿಂದ ಸುಮಾರು ೫೦ ಮೈಲಿ ದೂರದಲ್ಲಿ, ಮದ್ರಾಸು ಪ್ರಾಂತ್ಯದ ಗಡಿಯ ಸನಿಹದಲ್ಲಿದೆ. ಮಹದೇಶ್ವರ ಬೆಟ್ಟದಲ್ಲಿ ಪ್ರತಿ ವರ್ಷ ಐದು ಬೃಹತ್ ಜಾತ್ರಾ ಮಹೋತ್ಸವಗಳು ಜರುಗುತ್ತವೆ: ಮಹಾಲಯ ಅಮವಾಸ್ಯೆ, ನವರಾತ್ರಿ, ದೀಪಾವಳಿ, ಶಿವರಾತ್ರಿ ಹಾಗೂ ಯುಗಾದಿ ಹಬ್ಬಗಳ ಸಮಯದಲ್ಲಿ ನಾಡಿನ ಮೂಲೆ ಮೂಲೆಗಳಿಂದ ಭಕ್ತಾದಿಗಳ ಪರಿಷೆ ಅಲ್ಲಿ ಸೇರುತ್ತದೆ. ಬಹುಪಾಲು ಜನ ಕಾಲ್ನಡಿಗೆಯಲ್ಲಿ ಪ್ರಯಾಣ ಮಾಡಿ, ಭಜನೆ, ಹಾಡು ಹೇಳಿಕೊಂಡು ಕುಣಿಯುತ್ತಾ ಬೆಟ್ಟವೇರುತ್ತಾರೆ. ದಾರಿಯುದ್ದಕ್ಕೂ ಸಿಕ್ಕ ಕೆರೆ-ತೊರೆಗಳಲ್ಲಿ ನೀರು ಕುಡಿದು ವಾಂತಿ ಭೇದಿ, ಕಾಲರಾದಿಂದ ನರಳುತ್ತಾರೆ. ಹಾಗಾಗಿ ಕಾಲರಾ ಪಿಡುಗು ಕೊಳ್ಳೇಗಾಲದಲ್ಲಿ ಸದಾ ಮನೆ ಮಾಡಿದಂತಿತ್ತು. ಅವರನ್ನೆಲ್ಲಾ ನಮ್ಮ ಆಸ್ಪತ್ರೆಯಲ್ಲೇ ದಾಖಲು ಮಾಡಿಕೊಂಡು ಚಿಕಿತ್ಸೆ ಮಾಡುವುದು; ಹಿಂಡುಗಟ್ಟಲೆ ಬರುವ ರೋಗಿಗಳಿಗೆ ಜಾಗ ಸಾಲದೆ ಶೆಡ್ಡುಗಳನ್ನು ನಿರ್ಮಾಣ ಮಾಡಬೇಕಾಗುತ್ತಿತ್ತು. ಅಂತಿಮವಾಗಿ ವಿಶಾಲವಾದ ನೆಲಗಟ್ಟನ್ನು ನಿರ್ಮಿಸಿದ್ದು, ರೋಗಿಗಳ ಸಂಖ್ಯೆ ಹೆಚ್ಚಾದಂತೆಲ್ಲಾ ಅದರ ಮೇಲೆ ಹಂಗಾಮಿ ಕಟ್ಟಡವನ್ನು ನಿರ್ಮಿಸಲಾಗುತ್ತಿತ್ತು. ಜಾತ್ರಾ ಸಮಯಗಳಲ್ಲಿ ಕೊಳ್ಳೇಗಾಲದ ಮುಖಾಂತರ ಪ್ರಯಾಣಿಸುವವರನ್ನು ಟೋಲ್‌ಗೇಟ್‌ನಲ್ಲೇ

ತಡೆದು ಕಾಲರಾ ವ್ಯಾಕ್ಸಿನೇಷನ್ ಕಡ್ಡಾಯವಾಗಿ ಜರುಗಿಸಲಾಗುತ್ತಿತ್ತು. ಅದರ ಜವಾಬ್ದಾರಿ ಆಸ್ಪತ್ರೆ ಸಿಬ್ಬಂದಿಯದೆ.

ಮಹದೇಶ್ವರ ಬೆಟ್ಟಕ್ಕೆ ಕಾಲ್ನಡಿಗೆಯಿಂದ ಪ್ರಯಾಣಿಸುವವರು ಕಾಲರಾ ಬೇನೆಯಿಂದ ನರಳಿ, ಆಸ್ಪತ್ರೆ ಸೇರುವ ಒತ್ತಡ ಒಂದು ರೀತಿಯದಾದರೆ, ಕಾರು ಬಸ್ಸುಗಳಲ್ಲಿ ಹೋಗುವವರಿಂದ ಇನ್ನೊಂದು ಬಗೆಯ ಅನಿವಾರ್ಯತೆ ಉಂಟಾಗುತ್ತಿತ್ತು. ಪ್ರತಿ ಜಾತ್ರಾ ಸಮಯದಲ್ಲೂ ಬೆಟ್ಟ ಏರುವ ವಾಹನಗಳು ಅಪಘಾತಕ್ಕೀಡಾಗಿ ಬಹಳಷ್ಟು ಜನರನ್ನು ಆಸ್ಪತ್ರೆಗೆ ತರುತ್ತಿದ್ದರು. ಬೆಟ್ಟವೇರಿ, ಇಳಿಯುವಾಗ ಉರುಳುವ ಬಸ್ಸುಗಳಲ್ಲಿದ್ದ ೪೦-೫೦ ಗಾಯಾಳುಗಳನ್ನು ತುರ್ತಾಗಿಸಿ ಚಿಕಿತ್ಸೆಗೊಳಪಡಿಸಬೇಕಾಗುತ್ತಿತ್ತು. ಅಂತಹ ಹಬ್ಬ ಹರಿದಿನಗಳು ಸರ್ಕಾರಿ ರಜೆ ದಿನಗಳಾಗಿರುತ್ತಿದ್ದುದರಿಂದ ಬಹು ಪಾಲು ಆಸ್ಪತ್ರೆ ಸಿಬ್ಬಂದಿ ವರ್ಗದವರೂ ರಜೆ ಮೇಲೆ ಹೋಗುತ್ತಿದ್ದು ಆ ದಿನಗಳು ಉಳಿದುಕೊಂಡಿದ್ದ ಸಿಬ್ಬಂದಿಯವರಿಗೆ ಎಲ್ಲಿಲ್ಲದ ಒತ್ತಡ ಉಂಟಾಗುತ್ತಿತ್ತು.

ಆಗಿನ ಮದ್ರಾಸು ಪ್ರಾಂತ್ಯದ ಒಂದು ಮೂಲೆಯಲ್ಲಿದ್ದ ಕೊಳ್ಳೇಗಾಲ, ಅಲ್ಲಿಯ ಜಿಲ್ಲಾ ಆಸ್ಪತ್ರೆಯಿಂದಲೂ ಬಹಳ ದೂರದಲ್ಲಿತ್ತು. ಬಹುಶಃ ಅದರಿಂದಲೋ ಏನೋ ಸುಮಾರು ೭೫ ಹಾಸಿಗೆಗಳ ಹಿರಿದಾದ ಆಸ್ಪತ್ರೆಯನ್ನು ನಿರ್ಮಿಸಿ ಉತ್ತಮ ಸಾಧನ ಸಲಕರಣೆಗಳಿಂದ ಸಜ್ಜುಗೊಳಿಸಿದ್ದರು. ಒಬ್ಬ ಮೆಡಿಕಲ್ ಆಫೀಸರ್, ಒಬ್ಬ ಲೇಡಿ ಡಾಕ್ಟರ್, ಹಾಗೂ ಇನ್ನೊಬ್ಬ ಸಹಾಯಕ ವೈದ್ಯರು ಅಲ್ಲಿರುತ್ತಿದ್ದರು. ನಾನು ಅಲ್ಲಿಗೆ ಹೋದ ಒಂದೆರಡು ವರ್ಷಗಳಲ್ಲೇ ದಂತ ವೈದ್ಯರೊಬ್ಬರ ಸೇವೆಯೂ ಲಭ್ಯವಾಯಿತು. ನಾಲ್ಕು ಜನ ಸ್ಟಾಫ್ ನರ್ಸ್‌ಗಳು, ಮೂರು ಸೂಲಗಿತ್ತಿಯರು, ಎಕ್ಸ್‌ರೇ ಸಹಾಯಕ, ಗುಮಾಸ್ತರು ಮುಂತಾದ ಸಿಬ್ಬಂದಿ ವರ್ಗವಿತ್ತು. ಎಕ್ಸ್‌ರೇ ಯಂತ್ರ, ಆಪರೇಷನ್ ಥಿಯೇಟರ್, ಪ್ರಯೋಗಾಲಯ ಮುಂತಾದ ಸೌಲಭ್ಯಗಳಿದ್ದವು. ವಿಶಾಲವಾದ ಆವರಣದಲ್ಲಿ ವಾರ್ಡುಗಳು ಮತ್ತಿತರ ಕಟ್ಟಡಗಳು ಯಾವುದೇ ನಿಯಮಕ್ಕನುಗುಣವಾಗಿರದೆ ಚೆಲ್ಲಾಪಿಲ್ಲಿಯಾಗಿ ನಿರ್ಮಾಣಗೊಂಡಿದ್ದವು. ಸಿಬ್ಬಂದಿ ವರ್ಗದವರು ದೂರ ದೂರ ಇರುವ ವಾರ್ಡುಗಳು ಮತ್ತಿತರ ಸೌಲಭ್ಯವಿರುವ ತಾಣಗಳಿಗೆ ತಿರುಗಾಡಿ ಕಾರ್ಯನಿರ್ವಹಿಸುವುದು, ಅದರಲ್ಲೂ ರಾತ್ರಿ ಸಮಯದಲ್ಲಿ ದುಸ್ತರವಾಗುತ್ತಿತ್ತು.

ಕೊಳ್ಳೇಗಾಲ ಮತ್ತು ಅದರ ಸುತ್ತಲ ತಾಲ್ಲೂಕುಗಳಲ್ಲಿ ಕುಷ್ಠರೋಗ (Leprosy) ಸ್ಥಳಿಕವಾಗಿ ಹರಡಿದ ಪಿಡುಗಾಗಿತ್ತು (Endemic). ಅದರ ನಿವಾರಣೆ, ಚಿಕಿತ್ಸೆಗಳ ಸಲುವಾಗಿ ಒಂದು ಚಿಕಿತ್ಸಾ ಕೇಂದ್ರ ಮತ್ತು ಅದರ ಬಗೆಗೆ ವೈದ್ಯರು ಮತ್ತು ಸಿಬ್ಬಂದಿ ವರ್ಗದವರಿಗೆ ತರಬೇತಿ ನೀಡಲು ತರಬೇತಿ ಕೇಂದ್ರ (L.T.C.)ಗಳೆಂಬ ಪ್ರತ್ಯೇಕ ಘಟಕಗಳಿದ್ದವು. ಅವೆರಡಕ್ಕೂ ಕೊಳ್ಳೇಗಾಲವೇ ಕೇಂದ್ರವಾಗಿದ್ದು ಎರಡೂ ಘಟಕಗಳು ನಮ್ಮ ಆಸ್ಪತ್ರೆಯ ಆವರಣದಲ್ಲಿಯೇ ಸ್ಥಾಪನೆಯಾಗಿದ್ದವು. ಅವೆರಡಕ್ಕೂ ಪ್ರತ್ಯೇಕ ವೈದ್ಯಾಧಿಕಾರಿಗಳು ಮತ್ತಿತರ ಸಿಬ್ಬಂದಿ ವರ್ಗದವರೂ ಇದ್ದರು. ಇವೆಲ್ಲದರ ಜೊತೆಗೆ ಬಹಳ ಕಾಲದಿಂದ ಚಿಕಿತ್ಸೆ ಪಡೆಯುತ್ತಿದ್ದ, ದಿಕ್ಕುದೆಸೆ ಇಲ್ಲದ ಹಲವಾರು ಕುಷ್ಠರೋಗಿಗಳು ಆಸ್ಪತ್ರೆಯ ಆವರಣದಲ್ಲೇ ತಂಗುತ್ತಿದ್ದು, ಆಸ್ಪತ್ರೆ ಹಗಲು ರಾತ್ರಿಯೆನ್ನದೇ ಸದಾ ಜನಜಂಗುಳಿಯಿಂದ ತುಂಬಿರುತ್ತಿತ್ತು.

## ಶಸ್ತ್ರ ಚಿಕಿತ್ಸಾ ಸೌಲಭ್ಯಗಳು

ಇನ್ನು ಅಲ್ಲಿ ನನ್ನ ಕಾರ್ಯಾರಂಭದ ಕಡೆಗೆ ಗಮನ ಹರಿಸಿದೆ. ಅದರಲ್ಲೂ ನಾನು ಪಡೆದುಕೊಂಡ ಶಸ್ತ್ರ ಚಿಕಿತ್ಸಾ ಪರಿಣಿತಿಯನ್ನು ಕಾರ್ಯರೂಪಕ್ಕಿಳಿಸುವುದಕ್ಕೆ ಆದ್ಯತೆ ನೀಡುವತ್ತ

ಕ್ರಮಗಳನ್ನು ಜರುಗಿಸಲಾರಂಭಿಸಿದೆ. ಹೊರರೋಗಿಗಳ ವಿಭಾಗದ ಸನಿಹದಲ್ಲೇ ಒಂದು ಆಪರೇಷನ್ ಥಿಯೇಟರ್(ಓ.ಟಿ.) ಸಮುಚ್ಚಯ ನಿರ್ಮಾಣವಾಗಿತ್ತು. ಅಲ್ಲೊಂದು ಒಳ್ಳೆಯ ಹೈಡ್ರಾಲಿಕ್ (Hydraulic) ತಂತ್ರಾಧಾರಿತ ಆಪರೇಷನ್ ಟೇಬಲ್ ಇತ್ತು. ಆಪರೇಷನ್‌ಗಳನ್ನು ಜರುಗಿಸಲು ಅಗತ್ಯವಾದ ಇತರ ಸಾಧನ ಸಲಕರಣೆಗಳು - ಆಟೋಕ್ಲೇವ್ (Autoclave), ಆಪರೇಷನ್‌ಗೆ ಬಳಸುವ ಬಟ್ಟೆಬರೆ ಮತ್ತಿತರ ಉಪಕರಣಗಳನ್ನು "ಜೀವಿ ಶುದ್ಧಿಕರಿಸುವ" (Sterilization) ಯಂತ್ರ,- ಒಳ್ಳೆಯ ಬೆಳಕನ್ನು ನೀಡುವ ನೆರಳು ರಹಿತ ದೀಪ ವ್ಯವಸ್ಥೆ (Shadowless lamp) - ಅಲ್ಲಿದ್ದವು. ಮೊದಲು ಅಲ್ಲಿದ್ದ ಡಾ॥ ತಿಮ್ಮಶೆಟ್ಟರು ನೇತ್ರ ತಜ್ಞರಾಗಿದ್ದು, ಕಣ್ಪರೆ (Cataract) ಮುಂತಾದ ಆಪರೇಷನ್‌ಗಳನ್ನು ಯಾವುದೇ ಅಡ್ಡ ಪರಿಣಾಮಗಳಾಗದೆ ಮಾಡುತ್ತಿದ್ದರಂತೆ. ಅಲ್ಲಿದ್ದ ಸಲಕರಣೆಗಳನ್ನು ನೋಡಿದಾಗ ಹಿಂದೆ ಮದ್ರಾಸು ಪ್ರಾಂತ್ಯದ ಆಡಳಿತದಲ್ಲಿದ್ದಾಗಲೂ, ಆಪರೇಷನ್‌ಗಳನ್ನು ಜರುಗಿಸುವಂಥ ತಜ್ಞ ವೈದ್ಯರು ಇರುತ್ತಿದ್ದರೆನಿಸಿತು. ಆದುದರಿಂದ ನಾನು ಸಾಮಾನ್ಯ ಶಸ್ತ್ರ ಚಿಕಿತ್ಸೆ (General Surgery) ಗಳನ್ನು ಅಡ್ಡ ಪರಿಣಾಮಗಳ ಭಯವಿಲ್ಲದೆ ಜರುಗಿಸಬಹುದೆಂಬ ಭರವಸೆಯುಂಟಾಯಿತು. ರೋಗಿಗಳಿಗೆ ಆಪರೇಷನ್ ಸಮಯದಲ್ಲಿ ಪ್ರಜ್ಞೆ ತಪ್ಪಿಸುವ ಅರಿವಳಿಕಾ ತಜ್ಞರಿಲ್ಲದಿದ್ದುದು ಒಂದು ಕೊರತೆಯಾಗಿತ್ತು. ಆದರೆ ಲೇಡಿ ಡಾಕ್ಟರು ಮತ್ತು ಡಾ॥ ವೆಂಕಟರಾಮಯ್ಯನವರು ಉಸಿರಿನ ಮೂಲಕ ಈಥರ್ (Ether) ಎಂಬ ಅರಿವಳಿಕೆಯುಂಟು ಮಾಡುವ ಅನಿಲವನ್ನು ನೀಡುವಷ್ಟು ಅನುಭವ ಪಡೆದಿದ್ದರು. ಬೆನ್ನಿನಲ್ಲಿ ಇಂಜಕ್ಷನ್ ನೀಡಿ ದೇಹದ ಕೆಳಭಾಗವನ್ನು ನಿಶ್ಚೇತನಗೊಳಿಸುವ ಸ್ಪೈನಲ್ ಅನೆಸ್ಥೇಸಿಯಾ ಉಂಟುಮಾಡುವ ಪರಿಣಿತಿ ಹಿಂದೆ ಮೈಸೂರಿನಲ್ಲಿರುವಾಗ ನಾನು ಗಳಿಸಿಕೊಂಡಿದ್ದೆ. ಕೊಳ್ಳೇಗಾಲದ ಆಸ್ಪತ್ರೆಯಲ್ಲಿ ಆ ಸಲುವಾಗಿ ನೀಡುವ ನ್ಯೂಪರ್‌ಕೇನ್ (Nupercaine) ಎಂಬ ಮದ್ದಿನ ಒಂದು ನೂರಕ್ಕಿಂತ ಹೆಚ್ಚು ಇಂಜಕ್ಷನ್ ಟ್ಯೂಬ್‌ಗಳ ದಾಸ್ತಾನು ಇತ್ತು! ಆದರೆ ಅವು ತಯಾರಾಗಿದ್ದು ಹತ್ತು ವರ್ಷಗಳಷ್ಟು ಹಿಂದೆ. ಮೊತ್ತಮೊದಲು ಶಸ್ತ್ರಚಿಕಿತ್ಸೆಗಳನ್ನು ಜರುಗಿಸುವ ನಾನು ಅವುಗಳನ್ನು ಬಳಸಿಕೊಂಡರೆ ಮುಂದೇನಾದರೂ ಅಡ್ಡ ಪರಿಣಾಮಗಳಾಗಬಹುದೇ ಎಂಬ ಅನುಮಾನ ಉಂಟಾಯಿತು. ಮುಂದಿನ ಕೆಲವೇ ದಿನಗಳಲ್ಲಿ ಮನೆಯ ಸಾಮಾನು ಸರಂಜಾಮುಗಳನ್ನು ಕೊಳ್ಳೇಗಾಲಕ್ಕೆ ಸಾಗಿಸುವ ಸಲುವಾಗಿ ಮಂಗಳೂರಿಗೆ ಹೋಗಬೇಕಾಯಿತು. ಅಲ್ಲಿ ಮೊದಲೇ ಪರಿಚಯವಿದ್ದ ಅರಿವಳಿಕಾ ತಜ್ಞರನ್ನು ಆ ಬಗೆಗೆ ವಿಚಾರಿಸಿದೆ. ಹಾಗೂ ಅವರ ಹತ್ತಿರ ಕೆಲವು ನ್ಯೂಪರ್‌ಕೇನ್ ಟ್ಯೂಬ್‌ಗಳನ್ನಿತ್ತೆ. ಅವರು ಒಂದು ದಿನ ಆಪರೇಷನ್ ಜರುಗಿಸಿದ ಕೆಲವರಿಗೆ ಅವುಗಳನ್ನು ಬಳಸಿಕೊಂಡರಂತೆ. ಅದರಿಂದ ಯಾವುದೇ ಅಡ್ಡ ಪರಿಣಾಮಗಳು ಕಂಡು ಬರಲಿಲ್ಲವಂತೆ. ನಾನೂ ಸಹಾ ಕೊಳ್ಳೇಗಾಲದಲ್ಲಿ ಬಳಸಿಕೊಳ್ಳಬಹುದೆಂದು ಆಶ್ವಾಸನೆ ನೀಡಿದರು.

ಆಪರೇಷನ್ ಟೇಬಲ್‌ನಲ್ಲಿಯೂ ಒಂದು ತೊಂದರೆ ಇತ್ತು. ಅದರ ಪೆಡಲನ್ನು ಯಾರೋ ನಿರ್ಲಕ್ಷ್ಯದಿಂದ ಒತ್ತಿ ತುಳಿದಿದ್ದರ ಪರಿಣಾಮವಾಗಿ ಟೇಬಲ್ಲಿನ ಮೇಲುಭಾಗ ಓ.ಟಿ.ಯ ಮೇಲ್ಚಾವಣಿಯವರೆಗೂ ಏರಿ, ಅಲ್ಲೇ ಸ್ಥಗಿತವಾಗಿ ನಿಂತು ಬಿಟ್ಟಿತ್ತು! ಅದರಿಂದ ಅದನ್ನು ತತ್‌ಕ್ಷಣ ಬಳಸಿಕೊಳ್ಳಲು ಸಾಧ್ಯವಾಗುವಂತಿರಲಿಲ್ಲ. ಕೊಳ್ಳೇಗಾಲದಲ್ಲಿ ರೇಷ್ಮೆ ನೂಲು ಬಿಡಿಸುವ ಹಲವು ಕಾರ್ಖಾನೆಗಳಿದ್ದು, ಅವುಗಳಲ್ಲಿನ ಬಾಯ್ಲರ್(Boiler) ನಿರ್ವಹಿಸುವ ಫೋರ್‌ಮನ್ (Foreman) ಗಳಿದ್ದರು. ಅವರಲ್ಲೊಬ್ಬರನ್ನು ಕರೆಸಿ ಹೈಡ್ರಾಲಿಕ್ ಟೇಬಲನ್ನು ದುರಸ್ತಿ ಮಾಡಿಸಿದೆ.

## ಕಾರ್ಯಾರಂಭ

ಮತ್ತೆ ತಡಮಾಡದೇ ಕಾರ್ಯಾರಂಭ ಮಾಡಲನುವಾದೆ. ನಾನು ಅಲ್ಲಿಗೆ ಹೋಗುವ ಕೆಲವೇ ದಿನಗಳ ಹಿಂದೆ ಡಾ|| ತಿಮ್ಮಶೆಟ್ಟರು ಕಿಬ್ಬೊಟ್ಟೆಯ ನೋವಿನಿಂದ ಬಳಲುತ್ತಿದ್ದ ಬಾಲಕನೊಬ್ಬನಿಗೆ ಎಕ್ಸ್‌ರೇ ಫೋಟೊ ತೆಗೆಸಿದ್ದರು. ಅವನ ಮೂತ್ರಕೋಶದಲ್ಲಿ ಕಲ್ಲು ಉದ್ಭವವಾಗಿರುವುದು ದೃಢಪಟ್ಟಿತ್ತು. ನಾನು ಅಲ್ಲಿಗೆ ಹೋದ ಕೆಲವೇ ದಿನಗಳಲ್ಲಿ ಹರಿಜನ ಬಾಲಕ - ಪುಟ್ಟರಾಜುವಿನ ತಂದೆ ಎಕ್ಸ್‌ರೇ ಪಟದೊಂದಿಗೆ ಮಗನನ್ನು ನನ್ನೆದುರು ಹಾಜರುಪಡಿಸಿದ. ಆಪರೇಷನ್ ಟೇಬಲ್ ದುರಸ್ತಿಯಾದೊಡನೆ ಕೊಳ್ಳೇಗಾಲದಲ್ಲಿ ಅದೇ ನನ್ನ ಮೊದಲ ಶಸ್ತ್ರ ಚಿಕಿತ್ಸೆಗೆ ನಾಂದಿಯಾಯಿತು. ದಿನಾಂಕ ೨೮-೪-೬೭ ರಂದು ಆಪರೇಷನ್‌ಗೆ ಓ.ಟಿ.ಯಲ್ಲಿ ಎಲ್ಲಾ ಸಜ್ಜಾಯಿತು. ಕುತೂಹಲ ಭರಿತರಾದ ಆಸ್ಪತ್ರೆಯ ಸಿಬ್ಬಂದಿಯವರೂ ಅಲ್ಲಿ ನೆರೆದಿದ್ದರು. ಡಾ|| ವೆಂಕಟರಾಮಯ್ಯನವರು ಬಾಲಕನಿಗೆ ಈಥರ್ ಅರಿವಳಿಕೆ ನೀಡಿದರು. ಲೇಡಿ ಡಾಕ್ಟರು ಸಹಾಯ ಮಾಡುತ್ತಿದ್ದರು. ಕಿಬ್ಬೊಟ್ಟೆಯಲ್ಲಿ ಕತ್ತರಿಕೆ ಮಾಡಿ ಸಣ್ಣ ಕೋಳಿ ಮೊಟ್ಟೆ ಗಾತ್ರದ ಕಲ್ಲನ್ನು ಮೂತ್ರ ಕೋಶದಿಂದ ಹೊರತೆಗೆದೆ. ಕುತೂಹಲದಿಂದ ವೀಕ್ಷಿಸುತ್ತಿದ್ದ 'ನರ್ಸ್' ಒಬ್ಬ 'ಪುಟ್ಟ ಹುಡುಗ ಅಷ್ಟು ದೊಡ್ಡ ಕಲ್ಲನ್ನು ನುಂಗಿದ್ದನಾ ಸಾರ್'- ಎಂದು ಜೋರಾಗಿಯೇ ಉದ್ಗರಿಸಿದ. ಅಲ್ಲಿದ್ದವರೆಲ್ಲಾ ಗೊಳ್ಳೆಂದು ನಕ್ಕು ಬಿಟ್ಟರು. ನಾನೂ ಸಹ ಮುಖ ಪಟ್ಟಿಯ ಹಿಂದೆಯೇ ಮುಗುಳ್ನಕ್ಕೆ!

ಹೀಗೆ ಆರಂಭವಾದ ಆಪರೇಷನ್‌ಗಳ ಸರಣಿ ಮುಂದೆ ಎಡೆಬಿಡದೆ ಮುಂದುವರಿಯಿತು. ಅಲ್ಲಿದ್ದ ಮೂರು ಜನ ವೈದ್ಯರ ತಂಡ ಪರಸ್ಪರ ಸಹಕಾರದಿಂದ ಕಾರ್ಯ ನಿರ್ವಹಿಸಲಾರಂಭಿಸಿದೆವು. ನಿಗದಿತ ಕಾಲದಲ್ಲಿ ಹೊರರೋಗಿಗಳನ್ನು ನೋಡುವ ಒತ್ತಡವಿರುತ್ತಿದ್ದುದರಿಂದ ಕೆಲವು ದಿನಗಳಲ್ಲಿ ಬೆಳಗಿನ ಏಳು ಗಂಟೆಯ ಸಮಯಕ್ಕೆ ಆಪರೇಷನ್ ಮಾಡುತ್ತಿದ್ದುದೂ ಉಂಟು. ಅನಂತರ ಒಂಭತ್ತು ಗಂಟೆ ಸಮಯಕ್ಕೆ ಹೊರರೋಗಿಗಳ ವಿಭಾಗಕ್ಕೆ ಧಾವಿಸುತ್ತಿದ್ದೆವು. ಕೆಲಸಾರಿ ಮಧ್ಯಾಹ್ನ ಎರಡೂವರೆ ಗಂಟೆಗಯವರೆಗೂ ಕಾರ್ಯ ನಿರ್ವಹಿಸಿ, ಊಟ ಮುಗಿದ ನಂತರ ಮತ್ತೆ ಆಸ್ಪತ್ರೆ ಕೆಲಸಗಳಿಗೆ ಹಾಜರಾಗುತ್ತಿದ್ದೆವು; ಸಾಯಂಕಾಲ ಐದೂವರೆ ಗಂಟೆಯವರೆಗೂ ರೋಗಿಗಳ ತಪಾಸಣೆ ಮುಂದುವರಿಯುತ್ತಿತ್ತು. ಒಂದೊಂದು ಸಾರಿ ಸಾಯಂಕಾಲದ ಕೆಲಸದ ನಂತರವೂ ಆಪರೇಷನ್ ಮಾಡಬೇಕಾದ ಸಂದರ್ಭಗಳು ಒದಗಿ ಬರುತ್ತಿದ್ದವು. ಹೀಗೆ ಎಡಬಿಡದೇ ಜರುಗುತ್ತಿದ್ದ ಕಾರ್ಯಕ್ರಮಗಳಲ್ಲಿ ಅಲ್ಲಿ ಕಾರ್ಯನಿರತ ರಾಗಿರುತ್ತಿದ್ದ ಕುಷ್ಠರೋಗ ವಿಭಾಗದ ವೈದ್ಯರ ನೆರವನ್ನೂ ಕೆಲಸಾರಿ ಪಡೆದುಕೊಳ್ಳುತ್ತಿದ್ದುದುಂಟು. ಅವರ ಪೈಕಿ ಕುಷ್ಠರೋಗ ತರಬೇತಿ ಶಾಲೆಯ ವೈದ್ಯ ಡಾ|| ಯಡಿಯೂರಪ್ಪನವರು ಪುರುಸೊತ್ತಿದ್ದಾಗಲೆಲ್ಲಾ ನಮ್ಮ ಕಾರ್ಯಕ್ರಮಗಳಲ್ಲಿ ಅತ್ಯಂತ ಹರ್ಷದಿಂದ ಭಾಗವಹಿಸುತ್ತಿದ್ದರು. ಎಲ್ಲರೊಡನೆ ಒಳ್ಳೆಯ ಸ್ನೇಹ ಸಂಬಂಧವಿಟ್ಟುಕೊಂಡಿದ್ದ ಡಾ|| ಯಡಿಯೂರಪ್ಪನವರು ಎಳೆಯ ವಯಸ್ಸಿನಲ್ಲೇ ಕೆಲವೇ ವರ್ಷಗಳಲ್ಲಿ ಗುಣಪಡಿಸಲಾಗದಂಥ ಕಾಯಿಲೆಯಿಂದ ನರಳಿ ತೀರಿಕೊಂಡ ಸಮಾಚಾರ ತಿಳಿದಾಗ ನಾನು ಬಹಳಷ್ಟು ಪರಿತಪಿಸಿದ್ದೆ. ಇವರಲ್ಲದೆ ಚಾಮರಾಜನಗರದ ಹತ್ತಿರದ ಉಮ್ಮತ್ತೂರಿನಲ್ಲಿ ಸರ್ಕಾರಿ ವೈದ್ಯರಾಗಿದ್ದ ಡಾ|| ಗೋಪಿನಾಥರಾವ್ ಮೂಲತಃ ಕೊಳ್ಳೇಗಾಲದವರಾಗಿದ್ದು, ಅವರು ಊರಿಗೆ ಬಂದಾಗಲೆಲ್ಲಾ ನಮ್ಮೊಡನೆ ಸಹಕರಿಸಲು ಮುಂದಾಗುತ್ತಿದ್ದರು.

## ಪ್ರಥಮ ಸವಾಲು

ನಾನು ಕೊಳ್ಳೇಗಾಲಕ್ಕೆ ಹೋಗುವ ಕೆಲವು ತಿಂಗಳುಗಳ ಹಿಂದೆ ವಿಧಾನಸಭಾ ಚುನಾವಣೆ ನಡೆದಿತ್ತು. ಹಿಂದೆ ಎರಡು ಸಾರಿ ಆಯ್ಕೆಯಾಗಿದ್ದ ಒಂದು ಕೋಮಿನ ಧುರೀಣ ರೊಬ್ಬರನ್ನು ಇನ್ನೊಂದು ಕೋಮಿನ ಮುಂದಾಳು ಸೋಲಿಸಿದ್ದರಂತೆ. ಅದರಿಂದಾಗಿ ಎರಡೂ ಕೋಮುಗಳ ನಡುವೆ ವೈಷಮ್ಯ ಹೊಗೆಯಾಡುತ್ತಿತ್ತು. ಬಹುಶಃ ಅದರಿಂದಲೇ ಸಣ್ಣ ಪುಟ್ಟ ಗಲಭೆಗಳಾಗುತ್ತಿದ್ದುದಲ್ಲದೆ, ಒಂದು ಕೋಮಿಗೆ ಸೇರಿದ ಅಧಿಕಾರಿಗಳನ್ನು ವರ್ಗಾವಣೆ ಮಾಡುವ ಹುನ್ನಾರ ನಡೆಯುತ್ತಿವೆಯೆಂಬ ದಟ್ಟ ವದಂತಿಗಳೂ ಇದ್ದವು. ಅದೆಷ್ಟು ದೂರ ಹೋಗಿತ್ತೆಂದರೆ ವರ್ಗಾವಣೆಯಾಗಲಿರುವವರ ಪಟ್ಟಿಯಲ್ಲಿ ನಾನೂ ಸೇರಿದ್ದು ನನ್ನ ಹೆಸರು ಹನ್ನೊಂದನೆಯ ಸ್ಥಾನದಲ್ಲಿದೆ ಎಂದು ಕೆಲವರು ಎಚ್ಚರಿಕೆ ನೀಡುತ್ತಿದ್ದುದೂ ಉಂಟು. ಅವರಿಗೆಲ್ಲಾ 'ನಾನೇನು ಈ ಊರಿಗೆ ಬರಲೇಬೇಕೆಂದು ಇಷ್ಟಪಟ್ಟು ವರ್ಗ ಮಾಡಿಸಿಕೊಂಡು ಬಂದವನಲ್ಲ. ವರ್ಗವಾದರೆ ಮರುದಿನವೇ ಹೊರಡಲು ಸಿದ್ದ' ಎಂದು ಉತ್ತರಿಸಿ ನನ್ನ ಕೆಲಸದಲ್ಲಿ ತೊಡಗುತ್ತಿದ್ದೆ. ಕೊಳ್ಳೇಗಾಲಕ್ಕೆ ಆದ ವರ್ಗಾವಣೆಯನ್ನು ಬದಲಿಸುವ ಸಲುವಾಗಿ ನನ್ನ ಬಂಧುವೊಬ್ಬರಿಗೆ ಪರಿಚಯವಿದ್ದ ಈ ಕಡೆಯ ಕೆಲವು ಮುಖಂಡರೊಡನೆ ವಿಚಾರ ವಿನಿಮಯ ಮಾಡಿಕೊಳ್ಳುವ ಸಂದರ್ಭ ಒದಗಿತ್ತು. ಅವರೂ ಸಹ ಇಲ್ಲಿಯ ಪರಿಸ್ಥಿತಿಯನ್ನು ವಿವರಿಸಿ ನಾನು ಅಲ್ಲಿಗೆ ಬರಲು ಪ್ರಶಸ್ತ ಸಮಯ ಅದಲ್ಲವೆಂದು ಅಭಿಪ್ರಾಯ ಪಟ್ಟಿದ್ದರಂತೆ. ಅದನ್ನು ಗಣನೆಗೆ ತೆಗೆದುಕೊಳ್ಳದೆ ಕೊಳ್ಳೇಗಾಲಕ್ಕೆ ಬಂದಿದ್ದೆ.

ಕೊಳ್ಳೇಗಾಲದಲ್ಲಿ ಕಾರ್ಯಾರಂಭ ಮಾಡಿದ ಒಂದೆರಡು ತಿಂಗಳಲ್ಲೇ ನನ್ನ ಸತ್ವ ಪರೀಕ್ಷೆಯ ಸಂದರ್ಭ ಒದಗಿ ಬಂದಿತು. ಕೊಳ್ಳೇಗಾಲ ಪಟ್ಟಣದಿಂದ ಬಹು ದೂರದಲ್ಲಿ ಮದ್ರಾಸ್‌ನ ಗಡಿಗೆ ಅಂಟಿಕೊಂಡಂತಿದ್ದ ದುರ್ಗಮ ಪ್ರದೇಶದಲ್ಲಿ ಶ್ಯಾಘ್ಯವೆಂಬ ಹಳ್ಳಿ ಇದೆ. ಅಲ್ಲಿಯ ಪ್ರಮುಖ ವ್ಯಕ್ತಿ ಶಿವಲಿಂಗಯ್ಯ ಒಂದು ದಿನ ಸಾಯಂಕಾಲ ಬಸ್ಸಿನಲ್ಲಿ ಊರಿಗೆ ಹಿಂದಿರುಗುತ್ತಿದ್ದರು. ಚುಮುಚುಮು ಕತ್ತಲಾವರಿಸುತ್ತಿತ್ತು. ಬಸ್ಸು ನಿಧಾನವಾಗಿ ಚಲಿಸುತ್ತಿತ್ತು. ಪಕ್ಕದ ಅಡ್ಡಲಾಗಿದ್ದ ಆಸನದಲ್ಲಿ ಕುಳಿತ್ತಿದ್ದ ವ್ಯಕ್ತಿಯೊಬ್ಬ ಹಠಾತ್ತನೆ ಎದ್ದು ನಿಂತು ಶಿವಲಿಂಗಯ್ಯ ನವರ ಎದೆಗೆ ಚೂರಿಯಿಂದ ತಿವಿದುಬಿಟ್ಟ. ಬಸ್ಸಿನಲ್ಲಿ ಹಾಹಾಕಾರ ಉಂಟಾಯಿತು. ಬಸ್ಸು ನಿಲ್ಲುವಷ್ಟರಲ್ಲೇ ಆ ವ್ಯಕ್ತಿ ಬಾಗಿಲಿನಿಂದ ಹಾರಿ ಪರಾರಿಯಾದ.

ರಾತ್ರಿ ಎಂಟು ಗಂಟೆಯ ಹೊತ್ತಿಗೆ ಶಿವಲಿಂಗಯ್ಯನವರನ್ನು ನಮ್ಮ ಆಸ್ಪತ್ರೆಗೆ ಕರೆತಂದರು. ಅವರು ಬಂದ ಸುದ್ದಿ ತಿಳಿದಾಕ್ಷಣ ಕೊಳ್ಳೇಗಾಲದ ಅವರ ಬೆಂಬಲಿಗರನೇಕರು ಆಸ್ಪತ್ರೆಯಲ್ಲಿ ಜಮಾಯಿಸಿದರು. ಅವರನ್ನು ನಾನಿನ್ನೂ ಪರೀಕ್ಷಿಸುವಷ್ಟರಲ್ಲೇ ನನ್ನ ಕೆಲವು ಪರಿಚಿತರು ಶಿವಲಿಂಗಯ್ಯನವರ ಹಿನ್ನೆಲೆಯನ್ನು ವಿವರಿಸಿ ಆ ಘಟನೆಯ ಹಿಂದೆ ರಾಜಕೀಯ ಮತ್ತು ಕೋಮು ವೈಷಮ್ಯ ಇರಬಹುದಾದುದರಿಂದ ನಾನೂ ಜಾಗರೂಕತೆಯಿಂದ ವರ್ತಿಸುವು ದೊಳ್ಳೆಯದೆಂದು ಹಿತವಚನ ನುಡಿದರು. ಮದ್ರಾಸ್ ಪ್ರಾಂತ್ಯದ ಆಡಳಿತದ ಸಮಯದಲ್ಲಿ ಅವರು ಗ್ರಾಮದ 'ಮಣೆಗಾರ'ರಾಗಿದ್ದು, (ಗೌರವ ಮ್ಯಾಜಿಸ್ಟ್ರೇಟ್) ಆ ವಲಯದ ಪ್ರಭಾವಶಾಲಿ ವ್ಯಕ್ತಿ ಯಾಗಿದ್ದರಂತೆ. ಹಿಂದಿನ ಚುನಾವಣೆಯಲ್ಲಿ ಗೆಲುವು ಸಾಧಿಸಿದ ಅಭ್ಯರ್ಥಿಯ ಗೆಲುವಿನ ರೂವಾರಿ ಗಳಲ್ಲೊಬ್ಬರಾಗಿದ್ದು, ಅವರ ಮೇಲೆ ಸೇಡು ತೀರಿಸಿಕೊಳ್ಳುವ ಪ್ರಕರಣ ಇದಾಗಿರಬಹುದೆಂದು ಕೆಲವರು ಅಭಿಪ್ರಾಯಪಟ್ಟರು. ಅಲ್ಲದೆ ಅವರ ಪರಿಸ್ಥಿತಿ ವಿಕೋಪಕ್ಕೆ ತಿರುಗಿದರೆ ಅದು ನನ್ನ ಮೇಲೂ ಪ್ರಭಾವ ಬೀರಬಹುದೆಂದು ಎಚ್ಚರಿಕೆಯ ಮಾತುಗಳನ್ನೂ ಹೇಳಿದರು.

ಯಾವುದೇ ನಿರ್ಧಾರಕ್ಕೆ ಬರುವ ಮೊದಲು ಶಿವಲಿಂಗಯ್ಯನವರನ್ನೊಂದು ಸಾರಿ ವಿವರವಾಗಿ ಪರೀಕ್ಷೆ ಮಾಡಲು ನಿರ್ಧರಿಸಿದೆ. ಅವರ ನಾಡಿ ಮಿಡಿತ, ಹೃದಯ ಬಡಿತ, ರಕ್ತದೊತ್ತಡ, ಉಸಿರಾಟ ಮುಂತಾದವೆಲ್ಲಾ ಸಹಜ ಗತಿಯಲ್ಲಿದ್ದವು. ಎಡಗಡೆ ಮೊಲೆತೊಟ್ಟಿನ ಕೆಳಗಡೆ ಗಾಯವಿದ್ದು ರಕ್ತ ಹೆಪ್ಪುಗಟ್ಟಿಕೊಂಡಿತ್ತು. ಗಾಯದ ಆಳವಿಸ್ತಾರಗಳನ್ನು ಅಂದಾಜು ಮಾಡಲು ಓ.ಟಿ.ಯೊಳಗಡೆ ಏರ್ಪಾಡು ಮಾಡಿಸಿದೆ. ಅಷ್ಟರಲ್ಲೇ ಕೊಳ್ಳೇಗಾಲದ ಖಾಸಗಿ ವೈದ್ಯರೊಬ್ಬರು ಬಂದು - ಡಾ॥ ಶಿವರುದ್ರ ಸ್ವಾಮಿ - ಪರಿಚಯ ಮಾಡಿಕೊಂಡರು. ಹಾಗೂ ಶಿವಲಿಂಗಯ್ಯನವರ ಪರಿಸ್ಥಿತಿಯ ಬಗೆಗೆ ವಿಚಾರಿಸಿದರು. ಆ ತನಕ ನಾನು ಜರುಗಿಸಿದ ಪರೀಕ್ಷೆಗಳ ಫಲಿತಾಂಶ ತಿಳಿಸಿ, ಅವರ ಗಾಯವನ್ನು ಓ.ಟಿ.ಯ ಒಳಗಡೆ ಪರೀಕ್ಷಿಸುವ ನನ್ನ ಯೋಜನೆಯನ್ನು ತಿಳಿಸಿದೆ. ಅಲ್ಲದೆ ಅವರೂ ಸಹಾ ಓ.ಟಿ.ಯಲ್ಲಿ ಹಾಜರಿರಬಹುದೆಂದು ಆಹ್ವಾನಿಸಿದೆ.

ಸಾಮಾನ್ಯವಾಗಿ ಆಪರೇಷನ್ ತಯಾರಿ ಮಾಡುವ ರೀತಿಯಲ್ಲೇ ಏರ್ಪಾಟುಗಳನ್ನು ಮಾಡಿದೆ. ಎಡಗಡೆ ಸ್ತನದ ಕೆಳಗೆ ಒಂದಂಗುಲದಷ್ಟಿದ್ದ ಗಾಯವನ್ನು ಶುಚಿಗೊಳಿಸಿದೆ. ಶುದ್ಧೀಕರಿಸಿದ ಲೋಹದ ಕಡ್ಡಿಯಂಥ ಸಲಕರಣೆ (Probe)ಯನ್ನು ಗಾಯದೊಳಗೆ ನಿಧಾನ ಗತಿಯಲ್ಲಿ ತೂರಿಸಿದೆ. ಅದು ಸುಮಾರು ಮುಕ್ಕಾಲು ಅಂಗುಲದಷ್ಟು ಒಳಗಡೆ ಸಲೀಸಾಗಿ ಹೋಯಿತು. ಅಲ್ಲಿಂದ ಮುಂದೆ ಮಾರ್ಗವಿದ್ದಂತಿರಲಿಲ್ಲ. ಹಾಗೂ ನಿರೀಕ್ಷಿಸಿದಂತೆ ಹೊಸದಾಗಿ ರಕ್ತಸ್ರಾವವಾಗುವ ಚಿಹ್ನೆಗಳೂ ಕಂಡುಬರಲಿಲ್ಲ. ಆದರಿಂದ ಚೂರಿಯ ಇರಿತವು ಎದೆ ಗೂಡಿನ ಭಿತ್ತಿಗೆ ಮಾತ್ರ ಸೀಮಿತವಾಗಿದ್ದು ಹೃದಯಕ್ಕೆ ಯಾವುದೇ ರೀತಿಯ ಗಾಯ ಅಥವಾ ಅಪಾಯ ಉಂಟಾಗಿಲ್ಲವೆಂಬುದು ದೃಢಪಟ್ಟಂತಾಯಿತು. ಶಿವಲಿಂಗಯ್ಯನವರ ಗಾಯವನ್ನು ಕೊಳ್ಳೇಗಾಲದಲ್ಲೇ ಚಿಕಿತ್ಸೆಗೊಳಪಡಿಸಲು ಸಾಧ್ಯವೆಂದು, ಅವರನ್ನು ಮೈಸೂರಿಗೆ ಕರೆದುಕೊಂಡು ಹೋಗುವ ಅವಶ್ಯಕತೆ ಇಲ್ಲವೆಂಬ ಅಭಿಪ್ರಾಯವನ್ನು ಡಾ॥ ಶಿವರುದ್ರಸ್ವಾಮಿಯವರಿಗೆ ತಿಳಿಸಿದೆ. ಅವರು ಸಹ ಸಮ್ಮತಿಸಿದರು. ಅವರು ಹೊರಗೆ ಹೋಗಿ ಪರೀಕ್ಷೆಯ ಫಲಿತಾಂಶವನ್ನು ಶಿವಲಿಂಗಯ್ಯನವರ ಕಡೆಯವರಿಗೆ ತಿಳಿಸಿದರು. ಅಲ್ಲದೆ, ಈಗಿನ ಮೆಡಿಕಲ್ ಆಫೀಸರ್ ಶಸ್ತ್ರ ಚಿಕಿತ್ಸಾ ವಿಷಯದಲ್ಲಿ ವಿಶೇಷ ತರಬೇತಿ ಪಡೆದವರಾಗಿದ್ದು ಅವರ ಬಗೆಗೆ ಅನುಮಾನ ಪಡಬೇಕಾಗಿಲ್ಲವೆಂದು ಭರವಸೆ ನೀಡಿದರಂತೆ. ಮುಂದೆ ಗಾಯಕ್ಕೆ ಹೊಲಿಗೆ ಹಾಕಿ ಮುಚ್ಚಿದೆ. ವಾರ್ಡಿಗೆ ದಾಖಲು ಮಾಡಿಕೊಂಡೆ.

ಶಿವಲಿಂಗಯ್ಯನವರು ೮-೧೦ ದಿನಗಳು ಆಸ್ಪತ್ರೆಯಲ್ಲಿದ್ದರು. ಅವರು ಮತ್ತು ನನ್ನ ನಡುವೆ ಒಳ್ಳೆಯ ಗೌರವ-ವಿಶ್ವಾಸಗಳ ನಂಟು ಬೆಳೆಯಿತು. ಆಸ್ಪತ್ರೆಯಿಂದ ಹೊರಡುವಾಗ ನಾನು ಅವರ ಊರಿಗೆ ಬಂದು ಆತಿಥ್ಯವನ್ನು ಸ್ವೀಕರಿಸಬೇಕೆಂದು ಪ್ರೀತಿ ವಿಶ್ವಾಸದಿಂದ ಆಗ್ರಹಪಡಿಸಿದರು. ಕೊಳ್ಳೇಗಾಲಕ್ಕೆ ಬಂದಾಗಲೆಲ್ಲಾ ನನ್ನನ್ನು ಭೇಟಿಯಾಗುತ್ತಿದ್ದರು. ಅಂತಹ ಒಂದು ಕೋಲಾಹಲಕರ ಪ್ರಕರಣವನ್ನು ಯಶಸ್ವಿಯಾಗಿ ನಿಭಾಯಿಸಿದ್ದು ನನ್ನ ಬಗೆಗೆ ಒಳ್ಳೆಯ ಅಭಿಪ್ರಾಯ ಮೂಡಿಸಲು ಸಹಾಯಕವಾಯಿತು.

## ಹೊರರೋಗಿಗಳ ನಿರ್ವಹಣೆ

ಪುರುಷ ಮತ್ತು ಮಹಿಳಾ ಹೊರರೋಗಿಗಳ ಪರೀಕ್ಷೆಗೆ ಎರಡು ವಿಭಾಗಗಳಿದ್ದು ಅವೆರಡರ ನಡುವೆ ವಿಶಾಲವಾದ ಔಷಧ ವಿತರಣಾ ಕೊಠಡಿ (ಕಾಂಪೌಂಡಿಂಗ್ ವಿಭಾಗ) ಇತ್ತು. ಪುರುಷರ ವಿಭಾಗದಲ್ಲಿ ಸೇರುತ್ತಿದ್ದ ಜನಸಂದಣಿ ಅತಿ ಹೆಚ್ಚಾಗಿದ್ದು ಸರಿಯಾದ ರೀತಿಯಲ್ಲಿ ಕುಳಿತುಕೊಳ್ಳಲು ಜಾಗ ಸಾಕಾಗುತ್ತಿರಲಿಲ್ಲ. ಕೊಠಡಿಯ ಮಧ್ಯಭಾಗದಲ್ಲಿ ಇರಿಸಿದ್ದ ಒಂದು

ಮೇಜಿನ ಎರಡು ಕಡೆಗಳಲ್ಲಿ ಡಾ॥ ವೆಂಕಟರಾಮಯ್ಯ ಮತ್ತು ನಾನು ಕುಳಿತುಕೊಂಡು ರೋಗಿಗಳ ತೊಂದರೆಗಳ ಬಗೆಗೆ ವಿಚಾರಿಸಿ ತಿಳಿದುಕೊಳ್ಳುತ್ತಿದ್ದೆವು. ಅವರ ದೈಹಿಕ ಪರೀಕ್ಷೆಯನ್ನು ಪಕ್ಕದಲ್ಲಿದ್ದ ಸಣ್ಣದೊಂದು ಕೊಠಡಿಯಲ್ಲಿ ಮಾಡುತ್ತಿದ್ದೆವು. ವಿಭಾಗಕ್ಕೆ ನಾವು ಬೆಳಿಗ್ಗೆ ಹೋಗುವುದರೊಳಗೇ ಜನಸಂದಣಿ ನೆರೆದಿರುತ್ತಿತ್ತು. ನಾವು ಕುಳಿತುಕೊಂಡಾಕ್ಷಣ ಜನ ನಮ್ಮನ್ನು ಸುತ್ತುವರಿದು ನಿಂತುಬಿಡುತ್ತಿದ್ದರು. ಜನರ ಉಸಿರು, ಬೆವರು ಹಾಗೂ ಗಾಳಿಯಾಡದ ವಾತಾವರಣದಲ್ಲಿ ಕುಳಿತುಕೊಳ್ಳುವುದೇ ಸಂಕಟ ಉಂಟುಮಾಡುತ್ತಿತ್ತು. ಮುಂದೆ ಜನ ಸಂದಣಿ ಹೆಚ್ಚಾದಂತೆಲ್ಲಾ ಆ ಬಗೆಗೆ ಏನಾದರೊಂದು ಪರಿಹಾರ ಕಂಡುಕೊಳ್ಳುವ ಪ್ರಯತ್ನ ಮಾಡಬೇಕಾಯಿತು. ಔಷಧಗಳ ವಿತರಣೆ ಕೊಠಡಿ ವಿಶಾಲವಾಗಿದ್ದು, ಅದರಲ್ಲಿನ ಕಾರ್ಯಕ್ರಮಗಳಿಗೆ ಅಷ್ಟೊಂದು ಜಾಗದ ಅವಶ್ಯಕತೆ ಇರಲಿಲ್ಲ. ಅದರ ಮಧ್ಯ ಭಾಗದಲ್ಲಿ ಅಡ್ಡಗೋಡೆ ಹಾಕಿಸಿ ಎರಡು ಭಾಗ ಮಾಡಲಾಯಿತು. ಪುರುಷ ಹೊರರೋಗಿಗಳ ವಿಭಾಗಕ್ಕೆ ಹೊಂದಿಕೊಂಡಿದ್ದ ಭಾಗದಲ್ಲಿ ನಾವಿಬ್ಬರು ಕುಳಿತುಕೊಳ್ಳುವ ವ್ಯವಸ್ಥೆಯಾಯಿತು. ಅದರಿಂದ ನಮ್ಮ ಸುತ್ತ ನಿಂತುಕೊಳ್ಳುತ್ತಿದ್ದ ಜನರ ಒತ್ತಡ ಕಡಿಮೆಯಾಯಿತು; ಹಿಂದೆ ನಾವು ಕುಳಿತುಕೊಳ್ಳುತ್ತಿದ್ದ ವಿಭಾಗದಲ್ಲಿ ರೋಗಿಗಳು ಹಾಯಾಗಿ ಕುಳಿತುಕೊಳ್ಳಲು ಸಾಧ್ಯವಾಯಿತು.

ಶಸ್ತ್ರ ಚಿಕಿತ್ಸಾ ವಿಷಯಗಳಲ್ಲಿ ಪರಿಣಿತಿ ಪಡೆದುಕೊಂಡಿದ್ದರೂ ಮೆಡಿಕಲ್ ವ್ಯಾಧಿಗಳ ಚಿಕಿತ್ಸೆಯನ್ನು ಕೊಳ್ಳೇಗಾಲದಂತಹ ಆಸ್ಪತ್ರೆಯಲ್ಲಿ ಕಡೆಗಣಿಸುವಂತಿರಲಿಲ್ಲ. ಹಾಗೆ ನೋಡಿದರೆ ಅಲ್ಲಿಗೆ ಬರುತ್ತಿದ್ದವರು ತೀರಾ ಸಾಮಾನ್ಯ ಕಾಯಿಲೆಗಳೆನ್ನಬಹುದಾದ ಜ್ವರ, ಕೆಮ್ಮು, ವಾಂತಿ ಭೇದಿ, ಕಾಲರಾ ಮುಂತಾದವುಗಳೇ ಹೆಚ್ಚಿನ ಸಂಖ್ಯೆಯಲ್ಲಿರುತ್ತಿದ್ದುದು. ಎಂ. ಎಸ್. ಪದವಿ ಗಳಿಸುವ ಮೊದಲು ಅಂತಹವರನ್ನು ಚಿಕಿತ್ಸೆ ಮಾಡುತ್ತಿದ್ದ ಅನುಭವವಿದ್ದರೂ ನಂತರದ ಕೆಲವು ಸಮಯ ಅವಕಾಶಗಳು ತಪ್ಪಿ ಹೋಗಿ ಕೆಲಸಾರಿ ಮೆಡಿಕಲ್ ಕೇಸುಗಳ ನಿರ್ವಹಣೆ ಕಷ್ಟಕರವಾಗುತ್ತಿತ್ತು. ಆ ಬಗೆಗೆ ಲಭ್ಯವಿದ್ದ ಇತ್ತೀಚಿನ ಗ್ರಂಥಗಳನ್ನು ಪರಾಂಬರಿಸಿ ಹೆಚ್ಚಿನ ವಿಷಯಗಳನ್ನು ಸಂಗ್ರಹಿಸಿಕೊಳ್ಳುತ್ತಿದ್ದೆ.

ಬಾಲಕ ಪುಟ್ಟರಾಜುವಿನ ಮೂತ್ರಕೋಶದಿಂದ ಕಲ್ಲು ತೆಗೆದ ನಂತರ ಸರ್ಜರಿಗೆ ಸಂಬಂಧಿಸಿದ ಪ್ರಕರಣಗಳನ್ನು ಹಂತ ಹಂತವಾಗಿ ಆಪರೇಷನ್ ಮಾಡುವ ಪರಿಪಾಟ ಶುರುವಾಯಿತು. ಮೊದಲಿಗೆ ಹರ್ನಿಯ, ಹೈಡ್ರೋಸೀಲ್, ವ್ಯಾರೀಕೋಸ್‌ವೀನ್ಸ್, ಅಪೆಂಡಿಸೈಟಿಸ್, ಜಠರ ಹಾಗೂ ಕರುಳುಗಳಿಗೆ ಸಂಬಂಧಿಸಿದ ವ್ಯಾಧಿಗಳ ಆಪರೇಷನ್ ಜರುಗಲಾರಂಭವಾದವು. ಹೀಗೆ ನಡೆಯುತ್ತಿದ್ದ ಆಪರೇಷನ್‌ಗಳ ಯಶಸ್ಸು ಮತ್ತು ಓ.ಟಿ. ಮತ್ತು ಸಿಬ್ಬಂದಿ ವರ್ಗದವರ ಕಾರ್ಯ ನಿರ್ವಹಣಾ ರೀತಿನೀತಿಗಳ ಬಗೆಗೆ ಆತ್ಮ ವಿಶ್ವಾಸ ಬೆಳೆದಂತೆಲ್ಲಾ ಇನ್ನೂ ಗುರುತರ ಕಾಯಿಲೆಗಳ ಆಪರೇಷನ್‌ಗಳನ್ನು ಜರುಗಿಸಲಾರಂಭಿಸಿದೆ. ಪ್ರಾಸ್ಟೇಟ್, ಥೈರಾಯಿಡ್ ಗ್ರಂಥಿಗಳಿಗೆ ಸಂಬಂಧಿಸಿದ ಪ್ರಕರಣಗಳನ್ನೂ ಸಹಾ ಜರುಗಿಸಲು ಸಾಧ್ಯವಾಯಿತು.

## ಸಿಸೇರಿಯನ್ ಆಪರೇಷನ್‌ಗಳ ದ್ವಂದ್ವ

ಕೊಳ್ಳೇಗಾಲಕ್ಕೆ ಹೋದ ಸಮಯದಿಂದಲೂ ಒಂದು ವಿಲಕ್ಷಣ ಎನ್ನಬಹುದಾದ ಸಮಸ್ಯೆ ಎದುರಾಗತೊಡಗಿತು. ಗರ್ಭಿಣಿಯರಿಗೆ ಸಹಜ ಹೆರಿಗೆ ಅಸಾಧ್ಯವೆನಿಸಿದಾಗ ಆಪರೇಷನ್ ಮಾಡಿ - ಸಿಸೇರಿಯನ್ ಸೆಕ್ಷನ್ - ಶಿಶುವನ್ನು ಹೊರತೆಗೆಯುವ ವಿಧಾನ ಅನಾದಿಯಿಂದಲೂ ಪ್ರಚಲಿತವಿದೆಯಷ್ಟೆ. ಅದರ ಉಗಮ ಮತ್ತು ಪ್ರಸ್ತುತ ಅದು ಬಳಕೆಯಾಗುತ್ತಿರುವ ಐತಿಹಾಸಿಕ

ಬೆಳವಣಿಗೆ ರೋಚಕವಾಗಿದೆ*. ಈಗ ಕೆಲವು ವರ್ಷಗಳವರೆಗೂ ಶಸ್ತ್ರಚಿಕಿತ್ಸಾ ವಿಧಾನಗಳನ್ನು ಜರುಗಿಸುವ ಅನುಭವವಿರುವವರೆಲ್ಲಾ ಅದನ್ನು ಜರುಗಿಸುತ್ತಿದ್ದರು. ಪ್ರಸ್ತುತ ಶಸ್ತ್ರ ಚಿಕಿತ್ಸಾ ವಿಭಾಗದಲ್ಲಿ ಹಲವು ಶಾಖೋಪಶಾಖೆಗಳು ಟಿಸಿಲೊಡೆದು ಬಿಟ್ಟಿವೆ. ಅದರಿಂದ ಈಗ ಸಿಸೇರಿಯನ್ ಸೆಕ್ಷನ್‌ಗಳನ್ನು ಸಾಮಾನ್ಯವಾಗಿ ಸ್ತ್ರೀರೋಗ ತಜ್ಞರು ಮಾಡುತ್ತಾರೆ. ಆದರೆ ಎಲ್ಲಾ ಕಡೆ ಅಂತಹ ವಿಶೇಷ ಪರಿಣಿತಿ ಪಡೆದುಕೊಂಡಿರುವ ಸ್ತ್ರೀರೋಗ ತಜ್ಞರು ಲಭ್ಯ ಇರುವುದು ಅಸಾಧ್ಯ. ಅದರಿಂದ ಸಾಮಾನ್ಯ ತಜ್ಞ ವೈದ್ಯರೇ (General Surgeons) ಅಲ್ಲದೆ ಅನುಭವ ವಿರುವ ವೈದ್ಯರೂ ತುರ್ತು ಸಂದರ್ಭಗಳಲ್ಲಿ ಕೈಗೊಳ್ಳುತ್ತಾರೆ. ಕೇವಲ ಮೆಡಿಕಲ್ ನೀತಿ ತತ್ವದ ದೃಷ್ಟಿಕೋನದಲ್ಲಿ (Medical Ethics) ಪರಿಗಣಿಸಿದಾಗ ಇಂತಹ ನಡೆವಳಿಕೆ ಅಷ್ಟೊಂದು ಸಮಂಜಸವೆನಿಸಲಾರದು. ಆದರೆ ಎರಡು ಜೀವಗಳ ಜೀವನ್ಮರಣ ಸಮಸ್ಯೆ ಎದುರಾದಾಗ ಅಂತಹ ನೀತಿನಿಯಮಗಳಿಗೆ ಕಟ್ಟುನಿಟ್ಟಾಗಿ ಅಂಟಿಕೊಳ್ಳುವುದು ಮಾನವೀಯತೆ ಎನಿಸಲಾರದು. ಅದರಿಂದ ಶಸ್ತ್ರ ಚಿಕಿತ್ಸಾ ವಿಧಾನಗಳಲ್ಲಿ ಅನುಭವವಿರುವವರು ಸಿಸೇರಿಯನ್ ಸೆಕ್ಷನ್ ಮಾಡುವುದರಲ್ಲಿ ಮೆಡಿಕಲ್ ನೀತಿತತ್ವವನ್ನು ಉಲ್ಲಂಘಿಸಿದಂತಾಗುವುದಿಲ್ಲವೆಂಬುದೇ ನನ್ನ ಅಭಿಪ್ರಾಯ. ಈ ಹಿನ್ನೆಲೆಯಲ್ಲಿ ನಾನೇ ಒಂದು ರೀತಿಯಲ್ಲಿ ಯೋಗ್ಯವೆನ್ನಬಹುದಾದ ಮಾರ್ಗ ಅನುಸರಿಸಿರಲಿಲ್ಲವೆಂದೆನಿಸಿತು. ಎಂ.ಎಸ್. ತರಬೇತಿಯ ಸಮಯದಲ್ಲಿ ಸಾಮಾನ್ಯ ಶಸ್ತ್ರ ಚಿಕಿತ್ಸೆಗಳಿಗೆ ಸಂಬಂಧಿಸಿದ ವಿಷಯಗಳಿಗೆ ಮಾತ್ರ ಗಮನ ಹರಿಸಿದ್ದೆ. ಹೆರಿಗೆ ಆಸ್ಪತ್ರೆ ವೆನ್‌ಲಾಕ್ ಆಸ್ಪತ್ರೆಗಿಂತ ಸ್ವಲ್ಪ ದೂರದಲ್ಲಿದ್ದುದರಿಂದ ಸಿಸೇರಿಯನ್ ಆಪರೇಷನ್‌ಗಳು ಜರುಗುವ ಸಮಯಗಳಲ್ಲಿ ಹಾಜರಿರುವ ಅವಕಾಶಗಳು ಇರುತ್ತಿರಲಿಲ್ಲ. ಎಲ್ಲೋ ಒಂದೆರಡು ಸಾರಿ ನೋಡಿದ್ದನ್ನು ಬಿಟ್ಟರೆ ಆ ದಿಸೆಯಲ್ಲಿ ನನಗೆ ಹೆಚ್ಚಿನ ಅನುಭವವಿರಲಿಲ್ಲ. ಆದರೆ ಕೊಳ್ಳೇಗಾಲದಂತಹ ತಾಲ್ಲೂಕು ಆಸ್ಪತ್ರೆಯಲ್ಲಿ ಮಿಕ್ಕೆಲ್ಲಾ ಆಪರೇಷನ್ ಜರುಗುತ್ತಿದ್ದು, ಇಂತಹ ಒಂದು ಮಾನವೀಯ ಹಾಗೂ ತುರ್ತಾಗಿ ಜರುಗಬೇಕಾಗಿದ್ದ ಆಪರೇಷನ್ ಮಾಡುವುದಕ್ಕಾಗುತ್ತಿಲ್ಲ ಎಂದು ತಿರಸ್ಕರಿಸುವುದು ಸರಿಯಲ್ಲ. ಅಲ್ಲದೆ ಹೆರಿಗೆ ನೋವಿನಿಂದ ಒಂದೆರಡು ದಿನ ಗೋಳಾಡುತ್ತಿರುವವರನ್ನೆಲ್ಲಾ ದೂರದ ಮೈಸೂರಿಗೆ ಸಾಗಹಾಕುವುದೂ ಇನ್ನೂ ಅಮಾನವೀಯವೇ. ಅದರಿಂದ ಸಿಸೇರಿಯನ್ ಆಪರೇಷನ್‌ಗಳನ್ನು ಮಾಡುವ ನಿರ್ಧಾರವಾಯಿತು. ಆ ದಿಸೆಯಲ್ಲಿ ಲೇಡಿ ಡಾಕ್ಟರು ನನ್ನ ಬೆಂಬಲಕ್ಕೆ ನಿಂತು ಸಹಕರಿಸಿದರು. ಮೊತ್ತ ಮೊದಲು ಕೊಳ್ಳೇಗಾಲದ ಹತ್ತಿರದ ಮಧುವನ ಹಳ್ಳಿಯ ಮಹಿಳೆಯೊಬ್ಬಳಿಗೆ ಯಶಸ್ವಿಯಾಗಿ ಸಿಸೇರಿಯನ್ ಸೆಕ್ಷನ್ ಜರುಗಿಸಿದಾಗ ಅವರ ಮನೆ ಮಂದಿಯೆಲ್ಲಾ ಸಂತಸದ ನಿಟ್ಟುಸಿರು ಬಿಡುತ್ತಿದ್ದ ದೃಶ್ಯ ಇನ್ನೂ ಕಣ್ಣ ಮುಂದಿರುವಂತೆ ಇದೆ. ಆನಂತರದ ದಿನಗಳಲ್ಲಿ ಅವಶ್ಯಕತೆ ಇದ್ದಾಗಲೆಲ್ಲಾ ಸಿಸೇರಿಯನ್ ಆಪರೇಷನ್‌ಗಳು ಜರುಗಲಾರಂಭಿಸಿದವು.

## ಅಪರೂಪದ ಸಿಸೇರಿಯನ್ - ಮನಮಿಡಿದ ಪ್ರಸಂಗ

ಸುಮಾರು ೩೫ ವರ್ಷ ವಯಸ್ಸಿನ ಮಹಿಳೆಯೊಬ್ಬಳು ಅದೇ ಮೊದಲ ಬಾರಿಗೆ ಗರ್ಭಿಣಿಯಾಗಿದ್ದಳು. ತುಂಬಾ ವಯಸ್ಸಾದ ನಂತರ ಗರ್ಭಧರಿಸಿದ್ದರ ಜೊತೆಗೆ ಅವಳಲ್ಲಿ ಇನ್ನೊಂದು ವಿಶೇಷತೆಯೂ ಇತ್ತು. ಬಾಲ್ಯದಿಂದಲೇ ಆಕೆಯ ಬೆನ್ನು ಬಾಗಿದ್ದು, ಎರಡೂ ಕೈ

*ನೋಡಿ : ಸಾಮಾನ್ಯ ಶಸ್ತ್ರ ವೈದ್ಯದ ಕಾಯಿಲೆಗಳು (೧೯೯೩) ಡಾ|| ಎಚ್. ಡಿ. ಚಂದ್ರಪ್ಪಗೌಡ (ಸಿಸೇರಿಯನ್ ಸೆಕ್ಷನ್ ಅಧ್ಯಾಯ). ಪ್ರಕಟ : ಕನ್ನಡ ವಿಶ್ವವಿದ್ಯಾಲಯ, ಹಂಪಿ, ಬಳ್ಳಾರಿ ಜಿಲ್ಲೆ.

ಮತ್ತು ಕಾಲುಗಳನ್ನು ಬಳಸಿ ಚತುಷ್ಪಾದಿಯಂತೆ ನಡೆದಾಡುವ ಸ್ಥಿತಿಯಲ್ಲಿದ್ದಳು. ಬಾಲ್ಯದಲ್ಲಿ ಬೆನ್ನು ಮೂಳೆಗಳಿಗೆ (Spinal column) ಕ್ಷಯರೋಗ ತಗುಲಿದ್ದರೆ ಕೆಲ ಸಾರಿ ಅಂತಹ ಅಂಗವಿಕಲತೆಯಾಗಬಹುದು. ಮದುವೆಯಾಗಿ ೧೦-೧೫ ವರ್ಷಗಳಾಗಿದ್ದರೂ ಮಕ್ಕಳಾಗದಿದ್ದ ಅವಳು ಅಪರೂಪಕ್ಕೆ ಈ ಸಾರಿ ಗರ್ಭಧರಿಸಿದ್ದಳು. ಅವಳಿದ್ದ ಸ್ಥಿತಿಯಲ್ಲಿ ಸಹಜವಾಗಿ ಹೆರಿಗೆ ಆಗಲಾರದೆಂದು ಲೇಡಿ ಡಾಕ್ಟರು ಅಭಿಪ್ರಾಯಪಟ್ಟಿದ್ದರು. ಅದರಿಂದ ಹೆರಿಗೆಗೆ ನಿಗದಿತ ಅವಧಿಗಿಂತ ಹಲವು ವಾರಗಳ ಮೊದಲು ಆಕೆಯನ್ನು ಆಸ್ಪತ್ರೆಗೆ ದಾಖಲು ಮಾಡಿಕೊಂಡಿದ್ದೆವು.

ಹೆರಿಗೆ ನೋವು ಆರಂಭವಾದ ನಂತರ ಸಹಜ ಹೆರಿಗೆಯಾಗಬಹುದೇ ಎಂದು ಸ್ವಲ್ಪ ಸಮಯ ಕಾಯ್ದು ನೋಡಿದ್ದೂ ಆಯಿತು; ಅನಂತರ ಸಿಸೇರಿಯನ್ ಆಪರೇಷನ್‌ಗೆ ತಯಾರು ಮಾಡಿದ್ದೂ ಆಯಿತು. ಮೇಜಿನ ಮೇಲೆ ಅಂಗಾತ ಮಲಗಿಸಿ ಈಥರ್ ಅರಿವಳಿಕೆ ನೀಡುವುದಕ್ಕೆ ಸಾಧ್ಯವಾಗುವಂತಿರಲಿಲ್ಲ. ಮೊದಲೇ ಬಾಗಿದ್ದ ಬೆನ್ನಿನ ಭಾಗದಲ್ಲಿ ಸ್ಪೈನಲ್ ಅರಿವಳಿಕೆ ನೀಡುವುದು ಅಪಾಯಕರವೆಂದೆನಿಸಿದರೂ ಹೇಗೋ 'ಸರ್ಕಸ್' ಮಾಡಿ ಸೂಜಿ ತೂರಿಸಿ ಯಶಸ್ವಿಯಾಗಿ ಸ್ಪೈನಲ್ ಅರಿವಳಿಕೆ ನೀಡಿದೆ. ಆಪರೇಷನ್ ಮಾಡುವಾಗ ಆಕೆಯನ್ನು ಒಂದು ಬದಿಯಲ್ಲಿ ಓರೆಯಾಗಿ ಮಲಗಿಸಿ ಸಿಸೇರಿಯನ್ ಜರುಗಿಸಿದೆವು. ಹೊರ ಬಂದ ಮುದ್ದಾದ ಗಂಡು ಶಿಶು ನೋಡುವವರ ಕಣ್ಮನ ತಣಿಸುವಂತಿತ್ತು. ಅದಾಗಲೇ ವಯಸ್ಸಾದ ಆಕೆ ಮತ್ತೊಮ್ಮೆ ಗರ್ಭಧರಿಸಿದರೆ ಇನ್ನೂ ಒಂದು ಸಾರಿ ಆಪರೇಷನ್ ಜರುಗಿಸುವುದು ಕಷ್ಟವಾಗಬಹುದೆಂದು ಮುಂದೆ ಮಕ್ಕಳಾಗದಂತೆ ಟ್ಯೂಬೆಕ್ಟಮಿ ಆಪರೇಷನ್ ಸಹಾ ಮಾಡಿದೆ. ಆ ಬಗೆಗೆ ದಂಪತಿಗಳು ಮೊದಲೇ ಲಿಖಿತ ಸಮ್ಮತಿ ಬರೆದುಕೊಟ್ಟಿದ್ದರು. ಶಸ್ತ್ರಚಿಕಿತ್ಸಾನಂತರ ಯಾವುದೇ ತೊಡಕುಗಳುಂಟಾಗಲಿಲ್ಲ. ಹೊಲಿಗೆ ತೆಗೆದಾದ ಮೇಲೆ ಊರಿಗೆ ತೆರಳಿದರು.

ಮುಂದಿನ ಆರು ತಿಂಗಳಲ್ಲೇ ಆ ಎಳೆಯ ಮಗುವನ್ನು ಚಿಂತಾಜನಕ ಸ್ಥಿತಿಯಲ್ಲಿ ಆಸ್ಪತ್ರೆಗೆ ಕರೆತಂದರು. ಮಗುವಿಗೆ ೨-೩ ದಿನಗಳಿಂದ ವಾಂತಿ-ಭೇದಿಯಾಗುತ್ತಿದ್ದು ತೀರಾ ಮುಂದುವರಿದ 'ನಿರ್ಜಲ ಸ್ಥಿತಿ' ತಲುಪಿತ್ತು. ಲಭ್ಯವಿದ್ದ ಚಿಕಿತ್ಸೆಗಳನ್ನೆಲ್ಲಾ ನೀಡಿದೆವು. ಆದರೂ ಮಗುವನ್ನು ಉಳಿಸಿಕೊಳ್ಳಲಾಗಲಿಲ್ಲ. ಕೇವಲ ಆರು ತಿಂಗಳ ಹಿಂದೆ ಸಿಸೇರಿಯನ್ ಮಾಡಿ ಅದನ್ನು ಹೊರ ಜಗತ್ತಿಗೆ ಜೀವಂತವಾಗಿ ತರಲು ಸಹಕರಿಸಿದ್ದ ನಾವು ವೈದ್ಯರೇ ಅಲ್ಲದೆ, ಆಸ್ಪತ್ರೆಯ ಸಿಬ್ಬಂದಿ ವರ್ಗದವರೆಲ್ಲಾ ಮಮ್ಮಲ ಮರಗುವಂತಾಯಿತು. ಆಕೆಗೆ ಮುಂದೆ ಮಕ್ಕಳಾಗದಿರುವಂತೆ ಆಪರೇಷನ್ ಸಹ ಜರುಗಿಸಿದ್ದ ನಾನು ಅಪರಾಧೀ ಪ್ರಜ್ಞೆಯಿಂದ ಬಿಸುಸುಯ್ಯುವಂತಾಯಿತು.

## ಮಿಸ್ಸಿಂಗ್ ಲೂಪ್!

"ಕೀರ್ತಿಗೊಂದು ಗಂಡು ಆರತಿಗೊಂದು ಹೆಣ್ಣು" ಎಂಬಂತೆ ಇಬ್ಬರು ಮಕ್ಕಳನ್ನು ಪಡೆದಾದ ಮೇಲೆ ಶಾರದಮ್ಮ ಸಂತಾನ ನಿಯಂತ್ರಣದ ಸಲುವಾಗಿ 'ವಂಕಿ'(loop) ಅಳವಡಿಸಿಕೊಂಡಿದ್ದಳು. ಅವಳ ಕಿರಿಯ ಮಗಳು ೩-೪ ವರ್ಷಗಳ ನಂತರ ಆಕಸ್ಮಿಕವಾಗಿ ತೀರಿಕೊಂಡಳು. ಮತ್ತೊಂದು ಮಗುವನ್ನು ಪಡೆಯುವ ಅಭಿಲಾಷೆಯಿಂದ ವಂಕಿಯನ್ನು ತೆಗೆಸುವ ಸಲುವಾಗಿ ಲೇಡಿ ಡಾಕ್ಟರನ್ನು ಕಂಡಳು. ಅದನ್ನು ಹೊರತೆಗೆಯುವ ಸಲುವಾಗಿ ಅವರು ಪರೀಕ್ಷೆ ಮಾಡಿದಾಗ, ಸಾಮಾನ್ಯವಾಗಿ ಕೈಗೆಟಕುವ ಸಲುವಾಗಿ ಅಳವಡಿಸಿದ್ದ ದಾರ ಸಿಗಲಿಲ್ಲ. ವಂಕಿ ಏನಾಗಿದ್ದಿರಬಹುದೆಂಬುದನ್ನು ತಿಳಿಯಲು ಆಕೆಯ ಕಿಬ್ಬೊಟ್ಟೆಯ ಭಾಗದ ಎಕ್ಸ್‌ರೇ ಪಟ ತೆಗೆಸಿದರು. ವಂಕಿಯೇನೋ ಗೋಚರವಾಯಿತು. ಆದರೆ ಗರ್ಭಕೋಶದ ವಲಯದಲ್ಲಲ್ಲ;

ಅಲ್ಲಿಂದ ದೂರದ ಎಡ ಕಿಬ್ಬೊಟ್ಟೆಯಲ್ಲಿ! ಅಂದರೆ ವಂಕಿ ಗರ್ಭಕೋಶದ ಭಿತ್ತಿಯನ್ನು ತೂರಿ ಹೊರಗಡೆ ಬಂದಿತ್ತು!



ಮಿಸ್ಸಿಂಗ್ ಲೂಪ್

ಅದನ್ನು ನೋಡಿದ ಶಾರದಮ್ಮ ಮತ್ತವಳ ಕಡೆಯವರು ಮತ್ತೊಂದು ಮಗುವಾಗ ಬೇಕೆನ್ನುವ ಅಭಿಲಾಷೆಗಿಂತ, ವಂಕಿಯನ್ನು ಹೇಗಾದರೂ ಮಾಡಿ ಉದರಕೋಶದಿಂದ ತೆಗೆಯಬೇಕೆಂದು ದುಂಬಾಲು ಬಿದ್ದರು. ಅಂತಹ ೩-೪ ಪ್ರಕರಣಗಳು ವರದಿಯಾಗಿದ್ದನ್ನು ಮೆಡಿಕಲ್ ನಿಯತಕಾಲಿಕೆಗಳಲ್ಲಿ ಓದಿದ್ದೆ. ಉದರಕೋಶವನ್ನು ತೆರೆದು ಅದನ್ನು ಹೊರ ತೆಗೆಯುವುದು ಅಂತಹ ತೊಡಕಿನ ಸಮಸ್ಯೆಯಾಗಿರಲಿಲ್ಲ. ಆದರೆ ಕುಟುಂಬ ಕಲ್ಯಾಣ ಯೋಜನೆಗೆ ಸಂಬಂಧಿಸಿದ ಪ್ರಕರಣವಾದುದರಿಂದ ಮೇಲಧಿಕಾರಿಗಳಾದ ಮೈಸೂರಿನ ಜಿಲ್ಲಾ ಆರೋಗ್ಯಾಧಿ ಕಾರಿಗಳ (ಡಿ.ಎಚ್.ಓ.) ಗಮನಕ್ಕೆ ತಂದೆ. ಅದರಿಂದ ಮತ್ತೇನಾದರೂ ತೊಡಕುಗಳುಂಟಾದರೆ ಸುದ್ದಿ ಮಾಧ್ಯಮಗಳಲ್ಲಿ ರಾದ್ಧಾಂತವಾಗಬಹುದೆಂಬ ಮುನ್ನೆಚ್ಚರಿಕೆಗಾಗಿ ಅವರಿಗೆ ಮೊದಲೇ ತಿಳಿಸಿರುವುದು ಒಳಿತೆನಿಸಿತು. ಅವರು ವಂಕಿಯನ್ನು ಆಪರೇಷನ್ ಮಾಡಿ ತೆಗೆಯಬಹುದೆಂತಲೂ, ನನಗೆ ನೈತಿಕ ಬೆಂಬಲ ನೀಡುವ ಸಲುವಾಗಿ ಆ ದಿನ ಕೊಳ್ಳೇಗಾಲಕ್ಕೆ ಬರುವುದಾಗಿಯೂ ಭರವಸೆ ನೀಡಿದರು.

ಆಪರೇಷನ್‌ಗೆ ದಿನ ನಿಗದಿತವಾಯಿತು. ಡಿ.ಎಚ್.ಓ. ಬೆಳಿಗ್ಗೆ ಆಸ್ಪತ್ರೆಗೆ ಬಂದು ಶಾರದಮ್ಮಳನ್ನು ಮಾತಾಡಿಸಿ ಧೈರ್ಯ ತುಂಬಿ, ಹಳ್ಳಿಗಳ ಭೇಟಿ ಮಾಡಿಬರುವುದಾಗಿ ಹೋದರು. ಸ್ಪೈನಲ್ ಅರಿವಳಿಕೆ ನೀಡಿ ಕಿಬ್ಬೊಟ್ಟೆಯ ಉದರಕೋಶವನ್ನು ತೆರೆದೆವು. ಎಕ್ಸ್‌ರೇ ಪಟದಲ್ಲಿ ವಂಕಿ ನೆಲಯಾಗಿ ಕಾಣಿಸುತ್ತಿದ್ದ ತಾಣದಲ್ಲಿ ಅದರ ಹುಡುಕಾಟ ಮಾಡಿದೆವು; ಅಲ್ಲೆಲ್ಲೂ ಅದು ಸಿಗಲಿಲ್ಲ! ಗರ್ಭಕೋಶದ ಸುತ್ತಮುತ್ತ, ಹಿಂದೆ-ಮುಂದೆ ಎಲ್ಲಾ ಕಡೆ ತಡಕಾಡಿದೆವು. ಅಲ್ಲೆಲ್ಲಾ ವಂಕಿ ನಾಪತ್ತೆ!

ಒಂದಲ್ಲ ಅಂತ ಎರಡು ಮೂರು ಸಾರಿ ಅದೇ ಪ್ರಯತ್ನಗಳನ್ನು ಮುಂದುವರಿಸಿದೆವು. ಅನಾವಶ್ಯಕವಾಗಿ ಆಕೆಯನ್ನು ಆಪರೇಷನ್‌ಗೆ ಗುರಿ ಮಾಡಿದೆನೋ ಎಂಬ ಅಳುಕು ನನ್ನಲ್ಲುಂಟಾಗುತ್ತಿತ್ತು. ಅಷ್ಟರಲ್ಲೇ ಸ್ಪೈನಲ್ ಅರಿವಳಿಕೆಯ ಪ್ರಭಾವ ಇಳಿಮುಖವಾಗುತ್ತಾ ಬಂದು, ಆಕೆ ನೋವಾಗುತ್ತದೆಂದು ನರಳಲಾರಂಭಿಸಿದಳು. ನನ್ನ ದಕ್ಷತೆಯನ್ನೇ ಒರೆಗೆ ಹಚ್ಚುವ ಪ್ರಸಂಗ ವಾಯಿತಲ್ಲಾ ಎಂಬ ಆತಂಕ; ಮೇಲಧಿಕಾರಿಗಳನ್ನು ಕರೆಸಿದಾಗಲೇ ಒಂದು ರೀತಿಯ ಮುಖಭಂಗ ವಾಗುತ್ತದೆಂಬ ಕೊರಗು; ನೋವನ್ನು ರೋಗಿ ತಡೆದುಕೊಳ್ಳಲಾಗದ ಸ್ಥಿತಿ ತಲುಪಿದಂತಾಗಿತ್ತು. ನನ್ನ ಪ್ರತಿಷ್ಠೆಯ ಸಲುವಾಗಿ ಆಕೆಯ ಸಂಕಟವನ್ನು ಮುಂದುವರಿಸುವ ಮನಸ್ಸಾಗಲಿಲ್ಲ! ಸೋಲೊಪ್ಪಿಕೊಂಡು ಉದರಕೋಶವನ್ನು ಮುಚ್ಚುವ ಸನ್ನಾಹ ಮಾಡಿಕೊಳ್ಳಲಾರಂಭಿಸಿದೆವು. ಮೊದಲು ಉದರಕೋಶವನ್ನು ತೆರೆದಾಗ ಕಿಬ್ಬೊಟ್ಟೆಯ ಪ್ರದೇಶವನ್ನು ಆವರಿಸಿಕೊಂಡಿದ್ದ ಕರುಳಿನ ಸುರುಳಿಗಳು, ನೆಣಮಾಲೆ ಮುಂತಾದವನ್ನೆಲ್ಲಾ ಬಟ್ಟೆಯಲ್ಲಿ ಮುಚ್ಚಿ ಉದರಕೋಶದ ಮೇಲ್ಭಾಗಕ್ಕೆ ತಳ್ಳಿದ್ದೆವು. ಅವನ್ನೀಗ ಸ್ವಸ್ಥಳಕ್ಕೆ ಇಳಿಸುವ ಸಲುವಾಗಿ ಕೆಳಗೆ ತರುವ ಕಾರ್ಯ ನಡೆಯುತ್ತಿತ್ತು. ನೆಣಮಾಲೆಯನ್ನು ಕೆಳಗಿಳಿಸುವಾಗ ತಂತಿಯಂತೆ ಬಿರುಸಾದ ವಸ್ತುವೊಂದು ಕೈಗೆಟುಕಿದಂತಾ ಯಿತು. ಬಿಡಿಸಿ ನೋಡಿದರೆ ವಂಕಿ ಅದರಲ್ಲಿ ಸಿಲುಕಿಕೊಂಡಿತ್ತು! ಉದರ ಕೋಶದ 'ಪೋಲಿಸ್ ಪೇದೆ' ಎಂಬ ಅಣುಕು ನುಡಿಯಿಂದ ನೆಣಮಾಲೆಯನ್ನು ಕರೆಯುವುದುಂಟು ಅಂದರೆ ಉದರ ಕೋಶದ ವಲಯದಲ್ಲಿ ಯಾವುದೇ ರೀತಿಯ ಅನಾಹುತ ಸಂಭವಿಸಿದಾಗ ಅದು ಅಲ್ಲಿಗೆ ಧಾವಿಸಿ ಆ ವಲಯವನ್ನು ಸುತ್ತುವರಿದು 'ಗಲಭೆ' ಬೇರೆ ಕಡೆಗೆ ಹಬ್ಬದಂತೆ ರಕ್ಷಿಸುತ್ತದೆ. ಗರ್ಭಕೋಶದಿಂದ ವಂಕಿ ಹೊರಬಂದಾಗ 'ಪೋಲಿಸ್ ಪೇದೆ' ನೆಣಮಾಲೆ ತನ್ನ ಕರ್ತವ್ಯ ನಿರ್ವಹಿಸಿತ್ತು. ವಂಕಿಯನ್ನು ಸುತ್ತುವರಿದು ಬಂಧಿಸಿ ಹಿಡಿದಿತ್ತು! ಮುಂದೆ ವಂಕಿಯನ್ನು ನೆಣಮಾಲೆಯಿಂದ ಬೇರ್ಪಡಿಸಿ ತೆಗೆಯಲಾಯಿತು.

ಮುಂದೆ ಇನ್ನೊಂದು ವರ್ಷದಲ್ಲೇ ಶಾರದಮ್ಮ ಮತ್ತೆ ಗರ್ಭವತಿಯಾದಳು. ನಮ್ಮ ಆಸ್ಪತ್ರೆ ಯಲ್ಲೇ ಹೆರಿಗೆಯಾಯಿತು. ಆಕೆಯ ಇಚ್ಛೆಯಂತೆ ಆರತಿ ಬೆಳಗಿಸಿದಳು. ಹಿಂದಿನ ಸಾರಿ ಆಪರೇಷನ್ ಸಮಯದ ನೋವನ್ನು ಮರೆತು ಈ ಸಾರಿ ಟ್ಯೂಬೆಕ್ಟಮಿ ಮಾಡಿಸಿಕೊಂಡೇ ಹೋದಳು.

## ತಟಸ್ಥ ಧೋರಣೆ

ಕೊಳ್ಳೇಗಾಲದಲ್ಲಿ ಕಾರ್ಯಾರಂಭ ಮಾಡಿದಾಗಿನಿಂದ ವೈದ್ಯಕೀಯ ನ್ಯಾಯಶಾಸ್ತ್ರದ ಪ್ರಕರಣಗಳನ್ನು ನೋಡುವ ಅವಕಾಶಗಳು ಹೇರಳವಾದವು. ಕೊಳ್ಳೇಗಾಲದ ಸುತ್ತಲ ೩-೪ ಸರ್ಕಾರಿ ಆಸ್ಪತ್ರೆಗಳಲ್ಲೆಲ್ಲಾ ಒಬ್ಬೊಬ್ಬರೇ ವೈದ್ಯರಿರುತ್ತಿದ್ದರೂ, ಅಂತಹ ಪ್ರಕರಣಗಳನ್ನು ವಿಧಿಬದ್ಧ ವಾಗಿ ನಿಭಾಯಿಸಲು ಎಲ್ಲಾ ಸಮಯಗಳಲ್ಲೂ ಅವರು ಸಿಗುತ್ತಿರಲಿಲ್ಲ. ಇಲ್ಲಿ ಸಾಮಾನ್ಯವಾಗಿ ೨-೩ ವೈದ್ಯರಿರುತ್ತಿದ್ದು, ಎಲ್ಲಾ ಸಮಯಗಳಲ್ಲಿ ಒಬ್ಬರಾದರೂ ಸಿಗುವ ಸಾಧ್ಯತೆಗಳಿರುತ್ತಿದ್ದವು. ಅದರಿಂದ ಅಕ್ಕ ಪಕ್ಕದ ತಾಲ್ಲೂಕುಗಳಿಂದಲೂ ಪೋಲೀಸರು ಅಂತಹ ಪ್ರಕರಣಗಳನ್ನು ನಮ್ಮಲ್ಲಿಗೇ ಕರೆತರುತ್ತಿದ್ದರು. ಹೊಡೆದಾಟ, ಶವಪರೀಕ್ಷೆ ಮುಂತಾದವುಗಳನ್ನು ದಾಖಲು ಮಾಡಿಕೊಂಡ ಮೇಲೆ ಮುಂದೆ ಕೋರ್ಟುಗಳಲ್ಲಿ ಸಾಕ್ಷಿ ಹೇಳಲು ಹಾಜರಾಗುವುದು ಅನಿವಾರ್ಯ; ಅಂತಹ ಕೆಲವು ಪ್ರಕರಣಗಳಲ್ಲಿ ಅವರವರಿಗೆ ಅನುಕೂಲವಾಗುವಂತೆ ದಾಖಲಾತಿಗಳನ್ನು ಬರೆಯು ವಂತೆಯೊ, ಅವರಿಗೆ ಅನುಕೂಲವಾಗುವಂತೆ ದೃಢೀಕರಣ ಪತ್ರ, ನೀಡುವಂತೆಯೊ ಇಲ್ಲವೆ

ಕೋರ್ಟುಗಳಲ್ಲಿ ಅವರ ಪರ ಸಾಕ್ಷಿ ಹೇಳುವಂತೆಯೋ ಪ್ರತ್ಯಕ್ಷ ಇಲ್ಲವೆ ಪರೋಕ್ಷವಾಗಿ ಒತ್ತಡ ಹೇರುವ ಪ್ರಯತ್ನಗಳಾಗುತ್ತಿದ್ದವು. ಆ ದಿಸೆಯಲ್ಲಿ ನನ್ನನ್ನು ಭೇಟಿಯಾಗುತ್ತಿದ್ದ ಮುಖಂಡರ ಹತ್ತಿರ ನನ್ನ ನಿಲುವನ್ನು ಸ್ಪಷ್ಟವಾಗಿ ಹೇಳುತ್ತಿದ್ದೆ; ಅಲ್ಲದೆ ಅದರಂತೆ ನಡೆದುಕೊಳ್ಳುತ್ತಿದ್ದೆ. ಮುಂದೆ ಅವರ ಚೇಲಾಗಳು ನನ್ನ ಮೇಲೆ ಪ್ರಭಾವ ಬೀರುವಂತೆ ಕೇಳಿಕೊಂಡಾಗ, ಡಾಕ್ಟರು ತಮಗೆ ನ್ಯಾಯವೆನ್ನಿಸಿದ್ದನ್ನೇ ಹೇಳುತ್ತಾರೆಂಬ ನಂಬಿಕೆ ತಮಗಿದೆಯಂತಲೂ, ಅವರಿಗೆ ಹೇಳುವುದರಿಂದ ಯಾವ ಪ್ರಯೋಜನವೂ ಆಗುವುದಿಲ್ಲವೆಂದು ಹೇಳಿ ಸುಮ್ಮನಾಗಿಸಿ ಬಿಡುತ್ತಿದ್ದರಂತೆ. ಒಂದು ಕೊಲೆ ಪ್ರಕರಣದಲ್ಲಿ ಶವಪರೀಕ್ಷೆ ಜರುಗಿಸಿದ ನಾನು ಮೈಸೂರಿನ ಸೆಷೆನ್ಸ್ ನ್ಯಾಯಾಲಯದಲ್ಲಿ ಸಾಕ್ಷಿ ಹೇಳಬೇಕಾಗಿತ್ತು. ಅಪರಾಧಿ ಕಡೆಯವರು ಕೊಳ್ಳೇಗಾಲದಲ್ಲಿ ನನ್ನ ಆಪ್ತ ವಲಯದ ಉನ್ನತ ಅಧಿಕಾರಿಯೊಬ್ಬರನ್ನು ಭೇಟಿಯಾಗಿ ಅಪರಾಧಿಗೆ ಅನುಕೂಲವಾಗುವ ರೀತಿಯಲ್ಲಿ ನನ್ನಿಂದ ಹೇಳಿಕೆ ನೀಡಿಸುವ ಬಗೆಗೆ ವಿಚಾರಿಸಿದರಂತೆ. ಹಾಗೆ ಭೇಟಿಯಾದವರು ಪ್ರಭಾವಶಾಲಿ ವ್ಯಕ್ತಿಯಾದರೂ ಆ ಅಧಿಕಾರಿ, ನಮ್ಮ ಡಾಕ್ಟರರ ಹತ್ತಿರ ಅಂತಹದ್ದೆಲ್ಲಾ ನಡೆಯುವುದಿಲ್ಲ; ಯಾವುದೇ ಪ್ರಕರಣದ ಬಗೆಗೆ ಅವರೇನು ಕಂಡು ಕೊಂಡಿದ್ದಾರೋ ಅದನ್ನೇ ಹೇಳುತ್ತಾರೆ. ಅದರಿಂದ ಅಂತಹ ಪ್ರಯತ್ನ ಮಾಡಲೇ ಬಾರದೆಂದು ಹೇಳಿ ಕಳುಹಿಸಿದರಂತೆ. ಪ್ರಕರಣದ ವಿಚಾರಣೆಯೆಲ್ಲಾ ಮುಗಿದು, ತೀರ್ಪು ಹೊರಬಿದ್ದ ಮೇಲೆ ಆ ಅಧಿಕಾರಿಯೇ ವಿಷಯವನ್ನು ನನ್ನ ಹತ್ತಿರ ಬಹಿರಂಗ ಪಡಿಸಿದರು.

ಅದೊಂದು ಜಟಿಲವಾದ ಪ್ರಕರಣವಾಗಿತ್ತು. ಅಪರಾಧಿಯ ಪರ ವಾದಿಸುವುದಕ್ಕೆ ಬೆಂಗಳೂರಿನಿಂದ ವಯಸ್ಸಾದ ಹಾಗೂ ಪ್ರಖ್ಯಾತರೆನಿಸಿದ ಕ್ರಿಮಿನಲ್ ಕೇಸು ನಡೆಸುವುದರಲ್ಲಿ ಪರಿಣತಿ ಪಡೆದವರನ್ನು ಕರೆಸಿದ್ದರು. ಅವರಿಗೆ ದಿನಕ್ಕೆ ನಾಲ್ಕೋ, ಐದೋ ಸಾವಿರ ರೂಪಾಯಿ ಫೀಜು ಕೊಡುತ್ತಿದ್ದರಂತೆ. ಅವರ ಪ್ರಶ್ನೆಗಳು ಮತ್ತು ವಾದವನ್ನು ಕೇಳಿದ ಮೇಲೆ ಅವರ ಅನುಭವ ಮತ್ತು ವಿದ್ವತ್ತನ್ನು ಮೆಚ್ಚತಕ್ಕದ್ದೇ ಎಂದೆನಿಸಿತು ನನಗೆ. ಇತರ ಕೆಲವು ಲಾಯರುಗಳಂತೆ ಸುತ್ತಿ ಬಳಸಿ, ಇಲ್ಲವೇ ಜಬರ್ದಸ್ತಿನಿಂದ ಪ್ರಶ್ನೆಗಳನ್ನು ಅವರು ಕೇಳಲಿಲ್ಲ. ವಾದದಲ್ಲಿ ಅವರ ಕಕ್ಷಿದಾರರಿಗೂ ವಿರೋಧಿಗಳಿಗೂ ಜಗಳವಾದದ್ದನ್ನು ಒಪ್ಪಿಕೊಂಡರು. ಆದರೆ ಮೃತನ ಸಾವಿಗೆ ಕಾರಣವಾದ ತಲೆಬುರಡೆ ಮತ್ತು ಮುಖದ ಮೇಲಿದ್ದ ಗಾಯಗಳು ಅವರ ಕಕ್ಷಿದಾರರು ಹೊಡೆದುದರಿಂದಾದುವಲ್ಲ; ಅವನನ್ನು ಅಟ್ಟಿಸಿಕೊಂಡು ಓಡುತ್ತಿದ್ದಾಗ ಮೃತನು ಚರಂಡಿಗೆ ಬಿದ್ದಾಗ ಆ ಗಾಯಗಳಾಗಿದ್ದು; ಅದರಿಂದಲೇ ಅವನು ಸಾಯುವಂತಾದುದೆಂಬ ಅಭಿಪ್ರಾಯವನ್ನು ನನ್ನ ಮುಂದಿಟ್ಟು, ತಮ್ಮ ವಾದವನ್ನು ಸಮರ್ಥಿಸಿಕೊಳ್ಳಲು ಹಲವು ಪ್ರಶ್ನೆಗಳನ್ನು ಹಾಕತೊಡಗಿದರು. ಅವನ ಮುಖ ಮತ್ತು ಕಣ್ಣುಗುಡ್ಡೆಯ ಹತ್ತಿರ ಆಗಿರುವ ಗಾಯಗಳು ಅವರು ಹೇಳುವಂತೆ ಆಗಬಹುದಾದರೂ, ತಲೆಯನೆತ್ತಿಯ ಮೇಲೆ ಬುರುಡೆ ಒಡೆದು ಮಿದುಳು ಹೊರಬರುವಷ್ಟು ಆಳವಾದ ಗಾಯ ಕೇವಲ ಚರಂಡಿಯಲ್ಲಿ ಬೀಳುವುದರಿಂದ ಆಗುವುದಿಲ್ಲವೆಂದು ಸ್ಪಷ್ಟವಾಗಿ ಉತ್ತರಿಸಿದೆ. ಆದರೂ ನನ್ನ ಅಭಿಪ್ರಾಯವನ್ನು ಬದಲಿಸಲು ಸಾಧ್ಯವಾಗಬಹುದೆಂತಲೊ, ಇಲ್ಲವೆ ಅಡ್ಡ ಗೋಡೆಯ ಮೇಲೆ ದೀಪವಿಟ್ಟಂತೆ ಅನುಮಾನಾಸ್ಪದ ಅಭಿಪ್ರಾಯಕ್ಕೆ ನನ್ನನ್ನು ಒಪ್ಪಿಸಬಹುದೆಂತಲೊ ಪ್ರಶ್ನೆಗಳನ್ನು ವಿವಿಧ ರೀತಿಯಲ್ಲಿ ತಿರುಚಿ ಕೇಳುತ್ತಿದ್ದರು. ಆದರೂ ನನ್ನ ಸ್ಪಷ್ಟ ಅಭಿಪ್ರಾಯವನ್ನು ಬದಲಿಸಲೇ ಇಲ್ಲ. ನಮ್ಮ ವಾಗ್ವಾದಗಳನ್ನು ಆ ತನಕ ಏಕಾಗ್ರತೆಯಿಂದ ಆಲಿಸುತ್ತಿದ್ದ ಸೆಷನ್ಸ್ ನ್ಯಾಯಾಧೀಶರು, "ಅಂತಹ ಜಾಗದಲ್ಲಿ ಆಳವಾಗಿರುವ ಗಾಯವು ಬೀಳುವುದರಿಂದ ಆಗುವುದೇ ಇಲ್ಲ ಎಂದು ಸ್ಪಷ್ಟವಾದ ಅಭಿಪ್ರಾಯ ನೀಡುತ್ತಿರುವಾಗ ನೀವೇಕೆ

ಅಷ್ಟೊಂದು ಪಟ್ಟು ಹಿಡಿದು ಅದೊಂದರ ಬಗೆಗೇ ಕೇಳುತ್ತಿರುವಿರಿ? ಬೇರೆ ಇನ್ನೇನಾದರೂ ವಿಷಯಗಳಿದ್ದರೆ ಕೇಳಿ, ಮುಂದುವರಿಯಿರಿ" ಎಂದು ಹೇಳಿದರು. ಲಾಯರು "ಇನ್ನೇನು ಕೇಳುವುದಿಲ್ಲ ಯುವರ್ ಆನರ್" ಎಂದು ಕುಳಿತುಕೊಂಡರು. ವೈದ್ಯಕೀಯ ನ್ಯಾಯಶಾಸ್ತ್ರದ ಪ್ರಕರಣಗಳಲ್ಲಿ ವೈದ್ಯರಾದವರು ಅದೆಷ್ಟು ನಿಷ್ಪಕ್ಷಪಾತದಿಂದಿರಬೇಕೆಂಬುದಕ್ಕೆ ಇಷ್ಟು ವಿವರಿಸ ಬೇಕಾಯಿತು.

## ಅಭಿವೃದ್ಧಿಯತ್ತ...

ಈ ನಡುವೆ ಆಸ್ಪತ್ರೆಯ ಕುಂದುಕೊರತೆಗಳ ನಿವಾರಣೆ, ಅದರ ಅಭಿವೃದ್ಧಿ ಹಾಗೂ ವಿಸ್ತರಣೆಗಳ ಬಗೆಗೂ ಗಮನ ಹರಿಸುತ್ತಲೇ ಇದ್ದೆ. ಖಾಲಿ ಇದ್ದ ಸಿಬ್ಬಂದಿಗಳ ಜಾಗವನ್ನು ಭರ್ತಿ ಮಾಡಲು ಡಿ.ಎಚ್.ಓ. ಅವರನ್ನು ಆಗಾಗ್ಗೆ ಭೇಟಿಮಾಡಿ ನನ್ನ ಬೇಡಿಕೆಗಳನ್ನು ಮುಂದಿಡುತ್ತಿದ್ದೆ. ನನ್ನ ಕೆಲಸ ಕಾರ್ಯಗಳ ಬಗೆಗೆ ತೃಪ್ತಿ ವ್ಯಕ್ತ ಪಡಿಸುತ್ತಿದ್ದರೂ ಕೂಡಲೇ ಅವರೇನೂ ಮಾಡು ವಂತಿರಲಿಲ್ಲ. ಆದರೂ ವಾರ್ಷಿಕ ವರ್ಗಾವಣೆಯ ಸಮಯದಲ್ಲಿ ಪಟ್ಟು ಹಿಡಿದು ಕೆಲವನ್ನು ಭರ್ತಿಮಾಡಿಸಿದೆ.

ಆಸ್ಪತ್ರೆಗೆ ಔಷಧ ಮತ್ತಿತರ ಸಾಮಾನುಗಳಿಗಾಗಿ ಆ ತನಕ ಮಂಜೂರಾಗುತ್ತಿದ್ದ ಹಣಕಾಸಿನ ಮೊತ್ತ ಏನೇನೂ ಸಾಕಾಗುತ್ತಿರಲಿಲ್ಲ. ಆಗಂತೂ ಹೆಚ್ಚಿನ ಸಂಖ್ಯೆಯಲ್ಲಿ ಜರುಗುತ್ತಿದ್ದ ಶಸ್ತ್ರಚಿಕಿತ್ಸೆಗಳಿಗೆ ಗ್ಲೂಕೋಸ್ ಬಾಟಲುಗಳು, ಜೀವಿರೋಧಕ ಮದ್ದುಗಳು, ಈಥರ್, ಆಮ್ಲಜನಕ, ಬ್ಯಾಂಡೇಜು ಬಟ್ಟೆ ಮುಂತಾದವುಗಳ ಅವಶ್ಯಕತೆ ಇರುತ್ತಿತ್ತು. ಇತಂಹವುಗಳಿಗೆ ಬೇಕಾಗುವ ಹೆಚ್ಚಿನ ಮೊತ್ತವನ್ನು ಇಲಾಖಾ ನಿರ್ದೇಶಕರೇ ಮಂಜೂರು ಮಾಡಬೇಕಾಗುತ್ತಿದ್ದುದರಿಂದ ಡಿ.ಎಚ್.ಓ. ಮಟ್ಟದಲ್ಲಿ ಹೆಚ್ಚಿನ ಸಹಾಯ ದೊರೆಯುವಂತಿರಲಿಲ್ಲ. ಆ ದಿಸೆಯಲ್ಲಿ ಮುಂದೆ ಒಂದು ವರ್ಷದ ನಂತರ ಡಿ.ಎಚ್.ಓ. ಆಗಿ ಬಂದ ಡಾ॥ ಎಸ್. ಶಿವಣ್ಣನವರು ವಿನೂತನ ರೀತಿಯಲ್ಲಿ ನಮ್ಮ ಆಸ್ಪತ್ರೆಗೆ ಕೆಲವು ಔಷಧ ಸಾಮಗ್ರಿಗಳು ಸರಬರಾಜಾಗುವಂತೆ ಮಾಡಿದರು. ಜಿಲ್ಲೆಯ ಇತರ ಆಸ್ಪತ್ರೆ, ದವಾಖಾನೆಗಳಿಗೆ ಆ ಕಾಲದಲ್ಲಿ 'ಪ್ಯಾಕೇಜ್ ಇಂಡೆಂಟ್' (Package Indent) ಎಂಬುದೊಂದು ಯೋಜನೆಯನ್ವಯ ಔಷಧ ಸಾಮಗ್ರಿಗಳನ್ನು ಸರಬರಾಜು ಮಾಡುವ ಪರಿಪಾಟವಿತ್ತು. ಜಿಲ್ಲೆಯ ಅಂತಹ ಆಸ್ಪತ್ರೆ/ದವಾಖಾನೆಗಳನ್ನು ಕೆಲವು ನಿಯಮಗಳನ್ವಯ ವರ್ಗೀಕರಿಸಿ ಕೆಲವು ರಖಂ ಔಷಧ ಸಾಮಗ್ರಿಗಳನ್ನು ನಿಗದಿತ ಪ್ರಮಾಣದಲ್ಲಿ ಪ್ರತಿವರ್ಷವೂ ಸರಬರಾಜು ಮಾಡುತ್ತಿದ್ದರು. ಅಂತಹ ಸಂಸ್ಥೆಗಳಲ್ಲಿ, ಈಥರ್, ಬ್ಯಾಂಡೇಜು, ಗ್ಲೂಕೋಸ್ ಬಾಟಲುಗಳಂತಹವು ಬಹುಪಾಲು ಖರ್ಚಾಗುತ್ತಲೇ ಇರಲಿಲ್ಲ. ಹಿಂದಿನ ವರ್ಷದ ದಾಸ್ತಾನು ಇದ್ದರೂ ಮುಂದಿನ ವರ್ಷವೂ ನಿಯೋಜಿತ ಯೋಜನೆಯಂತೆ ಇಲಾಖೆಯವರೇ ಲಾರಿಗಳಲ್ಲಿ ಇಳಿಸಿ ಹೋಗಿ ಬಿಡುತ್ತಿದ್ದರು! ಡಾ॥ ಕೆ. ಕೆ. ಹೆಗ್ಗಡೆಯಂಥ ಆರೋಗ್ಯಮಂತ್ರಿಗಳ ಕಾಲದಲ್ಲಿ ಆಸ್ಪತ್ರೆಗಳಲ್ಲಿ ದಾಸ್ತಾನು ಇಡಬೇಕಾದ ಔಷಧ ಸಾಮಗ್ರಿಗಳ ಬಗೆಗೆ ನಿರೂಪಿಸಿದ್ದ ನೀತಿ ನಿಯಮಗಳು ಗಾಳಿಯಲ್ಲಿ ತೂರಿ ಹೋಗಿದ್ದವು!

ಡಿ.ಎಚ್.ಓ. ಡಾ॥ ಶಿವಣ್ಣನವರು ಜಿಲ್ಲೆಯ ವಿವಿಧ ಆರೋಗ್ಯ ಘಟಕಗಳಿಗೆ ಆಗಾಗ್ಗೆ ಭೇಟಿ ನೀಡುತ್ತಿದ್ದಾಗ ಅಲ್ಲಿಯ ಔಷಧ ಉಗ್ರಾಣಗಳಲ್ಲಿ ಈಥರ್, ಬ್ಯಾಂಡೇಜು ಬಟ್ಟೆ, ಹತ್ತಿ ಮುಂತಾದ ಸಾಮಗ್ರಿಗಳು 'ಕೊಳೆಯುತ್ತಾ' ಬಿದ್ದಿರುವುದನ್ನು ನೋಡುತ್ತಿದ್ದರು. ಅಂತಹ ಸಾಮಗ್ರಿಗಳು ನಮ್ಮ ಆಸ್ಪತ್ರೆಯಲ್ಲಿ ಕೊರತೆಯಾಗಿರುವುದನ್ನೂ ಸಹ ಗಮನಿಸಿದ್ದರು. ಅಂತಹ

ಘಟಕಗಳಲ್ಲಿ ಬಳಕೆಯಾಗದ ಸಾಮಗ್ರಿಗಳನ್ನು ತಮ್ಮ ವಾಹನದಲ್ಲಿ ತುಂಬಿಕೊಂಡು ಮೈಸೂರಿನ ಅವರ ಕಚೇರಿಯಲ್ಲಿ ಸೇರಿಸಿಡುತ್ತಿದ್ದರು; ಮುಂದಿನ ಸಾರಿ ಅವರಾಗಲಿ, ಅವರ ಇಲಾಖೆಯ ವಾಹನಗಳಾಗಲಿ ಕೊಳ್ಳೇಗಾಲದ ಕಡೆ ಬರುವಾಗ ಆ ಸಾಮಗ್ರಿಗಳು ನಮಗೆ ತಲುಪುವಂತೆ ಏರ್ಪಾಡು ಮಾಡುತ್ತಿದ್ದರು; ಅವುಗಳನ್ನು ತಂದ ಆಸ್ಪತ್ರೆಗಳಿಗೆ ನಮ್ಮಿಂದ ಸ್ವೀಕೃತಿ ಪತ್ರಗಳನ್ನು ಬರೆಸುತ್ತಿದ್ದರು. ಇದರಿಂದಾಗಿ ನಮ್ಮ ಆಸ್ಪತ್ರೆಗೆ ಅತ್ಯವಶ್ಯಕವಾದ ಬ್ಯಾಂಡೇಜು, ಹತ್ತಿ, ಈಥರ್‌ನಂಥ ಸಾಮಗ್ರಿಗಳ ಕೊರತೆಯುಂಟಾಗದಂತೆ ನೋಡಿಕೊಳ್ಳುತ್ತಿದ್ದರು.

ಈ ದಿಸೆಯಲ್ಲಿ ನನ್ನ ನೆನಪಿನಲ್ಲಿ ಹಚ್ಚಹಸುರಾಗಿರುವ ಪ್ರಕರಣವೊಂದು ಉಲ್ಲೇಖಾರ್ಹ. ಚಾಮರಾಜನಗರದ ಹತ್ತಿರದ ಹಳ್ಳಿಯ ದವಾಖಾನೆಗೆ ಅನೀಮಿಯಾ (ರಕ್ತಹೀನತೆ) ಚಿಕಿತ್ಸೆಗಾಗಿ ಬಳಕೆಯಾಗುವ ೨೦ ಸೀಸೆ ಲಿವರ್ ಎಕ್ಸಟ್ರ್ಯಾಕ್ಟ್ (Liver Extract) ಇಂಜೆಕ್ಷನ್ ಟ್ಯೂಬುಗಳನ್ನು (ಒಂದೊಂದರಿಂದ ಐದು ಡೋಸ್ ಇಂಜೆಕ್ಷನ್ ಲಭ್ಯವಿರುವ) ಹಿಂದಿನ ವರ್ಷ ಸರಬರಾಜು ಮಾಡಲಾಗಿತ್ತು. ಒಂದು ವರ್ಷದ ಅವಧಿಯಲ್ಲಿ ಕೇವಲ ಒಂದು ಸೀಸೆ ಖರ್ಚು ಮಾಡಿದ್ದು ಉಳಿದ ೧೯ ಸೀಸೆಗಳು ದಾಸ್ತಾನಿನಲ್ಲಿದ್ದವು. ಅದನ್ನು ಗಮನಿಸಿದ ಡಿ.ಎಚ್.ಓ. ಅವರು ಅಲ್ಲಿಯ ಬಳಕೆಗೆ ಒಂದು ಸೀಸೆಯನ್ನು ಬಿಟ್ಟು ಉಳಿದ ೧೮ ಸೀಸೆಗಳನ್ನು ನಮ್ಮ ಆಸ್ಪತ್ರೆಗೆ ರವಾನಿಸಿದರು. ಸರ್ಕಾರದಿಂದ ಸರಬರಾಜಾದ ಇಂತಹ ಇಂಜೆಕ್ಷನ್ ಪುಕ್ಕಟೆಯಾಗಿ ನೀಡಲಾರಂಭಿಸಿದರೆ ಮುಂದೆ ಯಾವುದೇ ಇಂಜೆಕ್ಷನ್ ನೀಡಿದರೂ ಅವರಿಂದ ಹಣ ಪಡೆಯಲಾಗದು. ಬಹುಶಃ ಅಂತಹ ಕಾರಣದಿಂದಾಗಿ ಕೆಲವು ಕಡೆ ಅವು ಉಳಿದುಕೊಂಡು ಬಿಡುತ್ತವೆ. ನಮ್ಮ ಆಸ್ಪತ್ರೆಗೆ ಬಂದ ಲಿವರ್ ಎಕ್ಸ್‌ಟ್ರ್ಯಾಕ್ಟ್‌ನ ಕೆಲವು ಟ್ಯೂಬ್‌ಗಳನ್ನು ಹೊರ ರೋಗಿಗಳ ವಿಭಾಗದಲ್ಲಿರಿಸಿ, ಅದರ ಅವಶ್ಯಕತೆ ಇರುವವರಿಗೆಲ್ಲಾ ಕೊಡುವ ಏರ್ಪಾಡು ಮಾಡಿದೆ. ನಮ್ಮ ಆಸ್ಪತ್ರೆಗೆ ಇಂಜೆಕ್ಷನ್ ಟ್ಯೂಬುಗಳನ್ನು ಕಳುಹಿಸಿದ ಊರಿನ ಮಹಿಳೆಯೊಬ್ಬಳು ಚಿಕಿತ್ಸೆಗಾಗಿ ನಮ್ಮಲ್ಲಿಗೆ ಬಂದಿದ್ದಳು. ಅವಳಿಗೆ ಇತರ ತೊಂದರೆಗಳ ಜೊತೆಗೆ ರಕ್ತ ಹೀನತೆ ಕೂಡಾ ಇದ್ದು, ಲಿವರ್ ಎಕ್ಸ್‌ಟ್ರ್ಯಾಕ್ಟ್‌ನ ಒಂದು ಡೋಸ್ ಇಂಜೆಕ್ಷನ್ ನೀಡಿ, ಸೀಸೆಯಲ್ಲಿ ಉಳಿದ ನಾಲ್ಕು ಡೋಸ್‌ಗಳನ್ನು ಆಕೆಯ ಊರಿನ ಆಸ್ಪತ್ರೆಯಲ್ಲೇ ಮಾಡಿಸಿಕೊಳ್ಳುವಂತೆ ಸೂಚಿಸಿ ಕಳುಹಿಸಿಕೊಟ್ಟೆವು!

ಕೊಳ್ಳೇಗಾಲದ ಆಸ್ಪತ್ರೆಯ ವಿವಿಧ ವಾರ್ಡುಗಳು ಮತ್ತಿತರ ವಿಭಾಗಗಳು ವಿಶಾಲವಾದ ಆವರಣದಲ್ಲಿ ಹರಡಿ ಹೋಗಿದ್ದು, ಅವುಗಳಲ್ಲಿ ಕಾರ್ಯ ನಿರ್ವಹಿಸುವುದರ ಕಷ್ಟದ ಬಗೆಗೆ ಹಿಂ... ಪ್ರಸ್ತಾಪಿಸಲಾಗಿದೆ. ಅವುಗಳಲ್ಲಿ ಆಸ್ಪತ್ರೆ ಹಿಂಭಾಗದ ಅಂಚಿನಲ್ಲಿದ್ದ ಪುರುಷರ ವಾರ್ಡು ಮ... ಎಕ್ಸ್‌ರೇ ವಿಭಾಗಗಳನ್ನಾದರೂ, ಹೊರರೋಗಿಗಳ ವಿಭಾಗ, ಹೆರಿಗೆ ವಿಭಾಗದ ಕಟ್ಟಡಗಳ ಸನ್ನಿ... ದಲ್ಲಿ ಹೊಸದಾಗಿ ನಿರ್ಮಿಸುವ ಸಾಧ್ಯತೆಗಳ ಬಗೆಗೆ ಇಲಾಖೆಗೆ ಸಲಹೆಗಳನ್ನಿತ್ತು ಪ್ರಯತ್ನವನ್ನೇನೊ ಮಾಡಿದೆ. ಆದರೆ ಹಣಕಾಸಿನ ಪರಿಸ್ಥಿತಿಯಿಂದ ಅದು ಸಾಧ್ಯವಾಗಲಿಲ್ಲ. ಸುಮಾರು ಅರ್ಧ ಮೈಲು ದೂರದಲ್ಲಿದ್ದ ಶವಾಗಾರದ ಬದಲು ಹೊಸತೊಂದನ್ನು ಆಸ್ಪತ್ರೆಯ ಆವರಣದಲ್ಲೇ ನಾನಿರುವಾಗಲೇ ಕಟ್ಟಿಸುವಲ್ಲಿ ಯಶಸ್ವಿಯಾಗಿದ್ದೆ.

ಆಪರೇಷನ್ ಥಿಯೇಟರ್ ಕಟ್ಟಡ ಹೊರರೋಗಿಗಳ ವಿಭಾಗದಿಂದ ೪೦-೫೦ ಅಡಿಗಳ ದೂರದಲ್ಲಿ ನಿರ್ಮಾಣವಾಗಿತ್ತು. ಅದರ ಸುತ್ತ ಯಾವುದೇ ಪಡಸಾಲೆ ಇರದೆ ಇದ್ದುದರಿಂದ ಹೊರಗಡೆ ಮಣ್ಣು ದೂಳಿನಲ್ಲಿ ನಡೆದುಕೊಂಡೇ ಹೋಗುವ ಪರಿಸ್ಥಿತಿ ಇತ್ತು. ಅವೆರಡೂ ವಿಭಾಗಗಳನ್ನು ಸೇರಿಸಿ ಮೇಲ್ಚಾವಣಿ ಹಾಕಿಸಿ, ನೆಲಕ್ಕೆ ಸಿಮೆಂಟ್ ಹಾಕಿಸುವ ಯೋಜನೆ

ಯನ್ನು ರೂಪಿಸಿದ್ದೆ. ನೆಲಕ್ಕೆ ಸಿಮೆಂಟ್ ಹಾಕಿಸುವುದರಲ್ಲಿ ಯಶಸ್ವಿಯಾದೆ; ಮೇಲ್ಛಾವಣಿ ಸಾಧ್ಯವಾಗಲಿಲ್ಲ. ಅದರಿಂದ ಆಪರೇಷನ್ ಥಿಯೇಟರನ್ನು ಆದಷ್ಟು ದೂಳು ಮುಕ್ತವಾಗುವಂತೆ ಮಾಡಲು ಅನುಕೂಲವಾಯಿತು.

## ಕುಟುಂಬ ಕಲ್ಯಾಣ ಯೋಜನೆಯ ಒತ್ತಡ

ಕೊಳ್ಳೇಗಾಲಕ್ಕೆ ಹೋದಾಗಿನಿಂದ ಕುಟುಂಬ ಯೋಜನೆಗೆ ಸಂಬಂಧಿಸಿದ ವ್ಯಾಸಕ್ಟಮಿ ಮತ್ತು ಟ್ಯುಬೆಕ್ಟಮಿಗಳನ್ನು ಅವಕಾಶವಿದ್ದಾಗಲೆಲ್ಲ ಮಾಡಲಾರಂಭಿಸಿದೆ. ಆ ಮೊದಲು ಮೈಸೂರಿನಿಂದ ತಜ್ಞರನ್ನು ಕರೆಸಿ ಶಿಬಿರಗಳಲ್ಲಿ ಅಂತಹ ಕ್ರಮಗಳನ್ನು ಜರುಗಿಸಲಾಗುತ್ತಿತ್ತು. ಮೈಸೂರು ಜಿಲ್ಲೆಯ ಇತರ ತಾಲ್ಲೂಕುಗಳಲ್ಲೂ ಶಿಬಿರಗಳನ್ನೇರ್ಪಡಿಸಿ ಮೈಸೂರಿನ ತಜ್ಞರಿಂದ ಆಪರೇಷನ್‌ಗಳನ್ನು ಜರುಗಿಸುವ ಪರಿಪಾಟವಿತ್ತು. ಮೈಸೂರಿನ ಆಸ್ಪತ್ರೆಯ ತಜ್ಞರು ಡಿ.ಎಚ್.ಓ. ಅವರ ಅಧೀನದಲ್ಲಿರುತ್ತಿರಲಿಲ್ಲವಾದ್ದರಿಂದ ಅಂತಹ ಏರ್ಪಾಡು ಮಾಡುವಲ್ಲಿ ಹಲವು ತೊಡಕುಗಳಿರುತ್ತಿದ್ದವು. ಕೊಳ್ಳೇಗಾಲಕ್ಕೆ ಬಂದಾಗಿನಿಂದ ಡಿ.ಎಚ್.ಓ. ಅವರು ಜಿಲ್ಲೆಯಲ್ಲಿ ಅವರ ಅಧೀನದಲ್ಲಿದ್ದ ಎಲ್ಲಾ ಆರೋಗ್ಯ ಘಟಕಗಳಿಗೂ ಆ ಸಲುವಾಗಿ ನನ್ನನ್ನೇ ಕಳುಹಿಸುವ ಏರ್ಪಾಡು ಮಾಡಲಾರಂಭಿಸಿದರು. ಜಿಲ್ಲೆಯಲ್ಲಿದ್ದ ೮-೯ ತಾಲ್ಲೂಕುಗಳೇ ಅಲ್ಲದೆ ಕೆಲವು ಹೋಬಳಿ ಕೇಂದ್ರಗಳಲ್ಲೂ ಜರುಗುವ ಶಿಬಿರಗಳಿಗೆ ನಾನೇ ಹೋಗುವ ರೂಢಿಯಾಗಿ ಬಿಟ್ಟಿತು. ಅದರಿಂದಾಗಿ ಕೊಳ್ಳೇಗಾಲದಲ್ಲಿ ನಾನು ಸಿಗುವುದೇ ಅಪರೂಪವೆಂಬಂತಾಯಿತು. ಅಲ್ಲದೆ ದೂರದ ಊರುಗಳಲ್ಲಿ ಆಪರೇಷನ್ ಮಾಡಿದವರ ಆರೈಕೆಯ ಅವಕಾಶ ನಮಗಿರದಿದ್ದರೂ, ಹೆಚ್ಚು ಕಡಿಮೆಯಾದರೆ ನಾನೇ ಜವಾಬ್ದಾರನಾಗುವಂತಾಯಿತು. ಅದರಿಂದ ಡಿ.ಎಚ್.ಓ. ಅವರ ಮೇಲೆ ಒತ್ತಡ ಬೀರಿ ಕೊಳ್ಳೇಗಾಲ ಹಾಗೂ ಹತ್ತಿರದ ೨-೩ ತಾಲ್ಲೂಕುಗಳಿಗೆ ಮಾತ್ರ ನನ್ನನ್ನು ನಿಯೋಜಿಸುವಂತೆ ನೋಡಿಕೊಂಡೆ.

## ವಿಶಿಷ್ಟ ರೀತಿಯ ರಕ್ತಪೂರಣಾ ವ್ಯವಸ್ಥೆ

ಕೊಳ್ಳೇಗಾಲದಲ್ಲಿ ಜರುಗುತ್ತಿದ್ದ ಆಪರೇಷನ್‌ಗಳ ವೈವಿಧ್ಯತೆ ಹೆಚ್ಚಿದಂತೆಲ್ಲಾ ಕೆಲವರಿಗೆ ತುರ್ತಾಗಿ 'ರಕ್ತಪೂರಣೆ' (Blood Transfusion) ಮಾಡಬೇಕಾದ ಅನಿವಾರ್ಯತೆ ದುತ್ತೆಂದು ಎದುರಾಗಿ ಬಿಡುತ್ತಿತ್ತು. ಪರಿಸ್ಥಿತಿ ವಿಕೋಪಕ್ಕೆ ತಿರುಗಿ, ರಕ್ತಪೂರಣೆಯ ಸಹಾಯವಿಲ್ಲದೆ ಆಪರೇಷನ್ ಮಾಡುವುದರಿಂದ ಪ್ರಾಣಕ್ಕೇ ಸಂಚಕಾರವಾಗಲೂಬಹುದು; ಅಂತಹವರನ್ನು ಮೈಸೂರಿಗೆ ಹೋಗಲು ಸೂಚಿಸಿದರೂ, ಅಲ್ಲಿಗೆ ಹೋಗಲಾರದ ಅಸಹಾಯಕತೆ ಕೆಲವರದಾಗಿರುತ್ತಿತ್ತು. ಪ್ರಾಣ ಹೋದರೂ ನಮ್ಮನ್ನು ದೂರುವುದಿಲ್ಲವೆಂತಲೂ, ನಮ್ಮ ಪ್ರಯತ್ನ ಮಾಡಬೇಕೆಂದು ದುಂಬಾಲು ಬೀಳುತ್ತಿದ್ದುದೂ ಅಪರೂಪವೇನಲ್ಲ. ಒಂದು ಸಾರಿ ಹಾಗೆಯೇ ಆಯಿತು. ತುಂಬಾ ಬಿಳಿಚಿಕೊಂಡಿದ್ದ ಮುಸ್ಲಿಂ ಗರ್ಭಿಣಿಯೊಬ್ಬಳಿಗೆ ಸಹಜ ಹೆರಿಗೆ ಅಸಾಧ್ಯವೆಂಬಂತಾಯಿತು. ರಕ್ತಪೂರಣೆ ಇಲ್ಲದೆ ಸಿಸೇರಿಯನ್ನು ಮಾಡಲು ನಿರಾಕರಿಸಿದೆವು. ಅವಳ ಕಡೆಯವರು ಮೈಸೂರಿಗೆ ಕರೆದುಕೊಂಡು ಹೋಗಲು ಸುತಾರಾಂ ಆಗುವುದಿಲ್ಲವೆಂದು ಅಂಗಾಲಾಚಿದರು. ತಾಯಿ ಅಥವಾ ಮಗು ಅಸುನೀಗುವಂತಾದರೂ ನಮ್ಮನ್ನು ಹೊಣೆ ಮಾಡುವುದಿಲ್ಲವೆಂದು ಬರೆದು ಕೂಡ ಕೊಟ್ಟರು. ಒಲ್ಲದ ಮನಸ್ಸಿನಿಂದ ಸಿಸೇರಿಯನ್ ಆಪರೇಷನ್ ಮಾಡಿದೆವು. ಮುಂದಿನ ಕೆಲವೇ ಗಂಟೆಗಳಲ್ಲಿ ತಾಯಿ ಅಸುನೀಗಿದಳು. ಮಗುವನ್ನು ಜೀವಂತವಾಗಿ ಉಳಿಸುವುದರಲ್ಲಿ ಯಶಸ್ವಿ

ಯಾಗಿದ್ದೆವು. ನಾವಲ್ಲಿ ಸಿಸೇರಿಯನ್ ಮಾಡುವ ಸಾಧ್ಯತೆಗಳುಂಟಾದಾಗ ಇಂತಹ ಹೃದಯ ವಿದ್ರಾವಕ ಪರಿಸ್ಥಿತಿಗಳನ್ನೆದುರಿಸಬೇಕಾದ ಪರಿಸ್ಥಿತಿ ಆಗಾಗ್ಗೆ ಉಂಟಾಗುತ್ತಿದ್ದಿತು. ಇವಲ್ಲದೆ ಥೈರಾಯಿಡ್ ಗ್ರಂಥಿ, ಪ್ರೊಸ್ಟೇಟ್ ಗ್ರಂಥಿ ಮುಂತಾದವುಗಳ ಆಪರೇಷನ್, ಅಪಘಾತ, ಹೊಡೆದಾಟಗಳಲ್ಲಿ ತೀವ್ರವಾಗಿ ಗಾಯವಾದವರಿಗೆ ರಕ್ತ ಪೂರಣೆಯ ಅಗತ್ಯ ಇದ್ದೇ ಇರುತ್ತಿತ್ತು.

ಈ ದಿಸೆಯಲ್ಲಿ ಸರಿ ಸುಮಾರು ಕೊಳ್ಳೇಗಾಲದಲ್ಲಿ ನಾನು ಇದ್ದ ಸಮಯದಲ್ಲೇ ಪೇಟೆ ಪಟ್ಟಣಗಳಿಂದ ದೂರವಿದ್ದ ನಮ್ಮ ತರಹದ ಆಸ್ಪತ್ರೆ, ಕಾಫಿ, ಟೀ ಎಸ್ಟೇಟು ಆಸ್ಪತ್ರೆಗಳಲ್ಲಿ ಹೇಗೆ ರಕ್ತ ಪೂರಣೆಯ ವ್ಯವಸ್ಥೆ ಮಾಡಿಕೊಳ್ಳಬಹುದೆಂಬುದರ ಬಗೆಗೆ Indian Journal of Surgeryಯಲ್ಲಿ ಓದಿದ್ದ ಒಂದು ಲೇಖನ ನೆನಪಿಗೆ ಬಂದಿತು. ಹಿಂದೆ ಮದ್ರಾಸ್ ಮೆಡಿಕಲ್ ಕಾಲೇಜಿನಲ್ಲಿ ಸರ್ಜರಿ ವಿಭಾಗದ ಮುಖ್ಯಸ್ಥರಾಗಿ ನಿವೃತ್ತರಾದ ಪ್ರೊ॥ ಆರ್. ಮಹದೇವನ್ ೧೯೬೯ರ ಸಾಲಿನ ಅಖಿಲ ಭಾರತ ಶಸ್ತ್ರ ಚಿಕಿತ್ಸಾ ತಜ್ಞರ ಸಮ್ಮೇಳನದಲ್ಲಿ ಅಧ್ಯಕ್ಷ ಭಾಷಣ ಅದಾಗಿತ್ತು. ನಿವೃತ್ತರಾದ ನಂತರ ಅವರು ಕೇರಳದ ಮುನ್ನಾರ್ ಟೀ ಎಸ್ಟೇಟ್ ಆಸ್ಪತ್ರೆಯ ಸರ್ಜನ್ ಹಾಗೂ ಮುಖ್ಯ ವೈದ್ಯಾಧಿಕಾರಿಗಳಾಗಿ ಕಾರ್ಯ ನಿರ್ವಹಿಸುತ್ತಿದ್ದರು. ಆಸ್ಪತ್ರೆ ಸುಮಾರು ೨೦೦ ಹಾಸಿಗೆಗಳದ್ದಾಗಿದ್ದು ಎಸ್ಟೇಟ್ ಕಾರ್ಮಿಕರ ಎಲ್ಲಾ ಬಗೆಯ ಸ್ವಾಸ್ಥ್ಯ ಸಮಸ್ಯೆಗಳಿಗೆ ಪರಿಹಾರ ಒದಗಿಸುವುದು ಅದರ ಜವಾಬ್ದಾರಿಯಾಗಿತ್ತು. ಸೀಮಿತ ಸಂಖ್ಯೆಯ ವೈದ್ಯ ಸಮುದಾಯ ಅಲ್ಲಿದ್ದು ಎಲ್ಲಾ ತರಹದ ಶಸ್ತ್ರ ಚಿಕಿತ್ಸೆಗಳೇ ಅಲ್ಲದೆ ಇತರ ವಿಶೇಷ ಚಿಕಿತ್ಸಾ ವಿಧಾನಗಳನ್ನು ಜರುಗಿಸುತ್ತಿದ್ದರು. ಆ ತನಕ ಅಲ್ಲಿ ೧೧೩೭* ಜನರಿಗೆ ಕೇವಲ ಸ್ವಪ್ರೇರಣೆಯಿಂದಲೇ (Voluntary) ರಕ್ತಪೂರಣೆ ಯಾಗುತ್ತಿದ್ದುದು ಒಂದು ವಿಶೇಷ! ಅಲ್ಲಿ ಜರುಗಿಸಲಾಗುತ್ತಿದ್ದ ಮಾದರಿಯಲ್ಲೇ ಕೊಳ್ಳೇಗಾಲ ದಲ್ಲೂ ಉಪಕ್ರಮಿಸಬಹುದೇ ಎಂಬ ಬಗೆಗೆ ಯೋಚಿಸತೊಡಗಿದೆ.

ಕೊಳ್ಳೇಗಾಲದ ಆಸ್ಪತ್ರೆಯಲ್ಲಿ ಹಿಂದೆ ಇದ್ದ ಇಬ್ಬರು ವೈದ್ಯರಿಗೆ ವರ್ಗವಾಗಿದ್ದು ಬಹುಶಃ ಆಗತಾನೇ ಮೆಡಿಕಲ್ ಕಾಲೇಜಿನಿಂದ ಹೊರಬಂದ ಯುವ ವೈದ್ಯರಿಬ್ಬರು ಬದಲಿಗೆ ಬಂದಿದ್ದರು. ಡಾ॥ ಮುಕುಂದ ಮತ್ತು ಡಾ॥ ಎ. ವಿ. ಸರೋಜ ಅವರು ಅದೇ ತಾನೇ ವೃತ್ತಿಗೆ ಕಾಲಿರಿಸುತ್ತಿದ್ದು ಹೆಚ್ಚಿನ ಅನುಭವಗಳಿಸುವ ಉತ್ಸುಕತೆ ಇದ್ದವರಂತೆ ಕಂಡರು. ಅಲ್ಲದೆ ತಾಲ್ಲೂಕು ಮಟ್ಟದ ಆಸ್ಪತ್ರೆ ಯಲ್ಲಿ ಸರ್ಜರಿಯಲ್ಲಿ ಸ್ನಾತಕೋತ್ತರ ಪದವಿ ಗಳಿಸಿದವರು ವೈದ್ಯಾಧಿಕಾರಿಯಾಗಿದ್ದು ಅವರೊಡನೆ ಸಹಕರಿಸಿದರೆ ಹೆಚ್ಚಿನ ಅನುಭವ ಪಡೆದುಕೊಳ್ಳುವ ಅಭಿಲಾಷೆಯೂ ಅವರಲ್ಲಿತ್ತೆನಿಸುತ್ತದೆ. ನಾನೂ ಸಹ ಅವರು ತಿಳಿದುಕೊಳ್ಳಬೇಕಾದ ವಿಷಯಗಳಲ್ಲಿ ಸಾಧ್ಯವಾದ ಎಲ್ಲಾ ಅವಕಾಶಗಳನ್ನು ಒದಗಿಸಿ ಕೊಡಲಾರಂಭಿಸಿದೆ. ಹಾಗಾಗಿ ಪರಸ್ಪರ ಸಹಕಾರ ಮನೋಭಾವದ ಒಂದು ತಂಡ (Team) ಅಲ್ಲಿ ತಯಾರಾಯಿತು.

ಮುನ್ನಾರ್ ಮಾದರಿಯಲ್ಲಿ ಸ್ವಯಂಪ್ರೇರಿತ ರಕ್ತಪೂರಣೆಯ ವ್ಯವಸ್ಥೆಯನ್ನು ಆರಂಭಿಸಲು ಏನೆಲ್ಲಾ ಅನುಕೂಲತೆಗಳು ಬೇಕು, ಯಾವ ಸಲಕರಣೆ, ರಾಸಾಯನಿಕಗಳು ಬೇಕಾಗುತ್ತವೆಂಬುದರ ಬಗೆಗೆ ಮೂವರೂ ವಿಚಾರ ವಿನಿಮಯ ಮಾಡಿಕೊಂಡೆವು. ರಕ್ತದ ಗುಂಪುಗಳನ್ನು ಕಂಡು ಹಿಡಿಯುವುದು, ಗುಂಪುಗಳ ನಡುವೆ ಹೊಂದಾಣಿಕೆ ಮಾಡುವ ವಿಧಾನಗಳನ್ನು (Cross matching) ಮೆಡಿಕಲ್ ಕಾಲೇಜಿನ ತರಬೇತಿ ಸಮಯದಲ್ಲಿ ನಾವೆಲ್ಲಾ ತಿಳಿದುಕೊಂಡಿದ್ದೆವು. ದಾನಿಯಿಂದ ಪಡೆದ ರಕ್ತ ಹೆಪ್ಪುಗಟ್ಟದಂತೆ (Clotting) ಬಳಸಬೇಕಾದ

---

* MAHADEVAN, R : INDIAN JOURNAL OF SURGERY :
32: 113(1970) - How Best to carry Medical Facilities to the Villages with the present resources of the country.

ಸಿಟ್ರೇಟ್ ದ್ರಾವಣದ (Citrate solution) ತಯಾರಿಕೆಗೆ ಮೈಸೂರಿನಿಂದ ರಾಸಾಯನಿಕಗಳು ಹಾಗೂ ಲಸಿಕೆ (Serum)ಗಳನ್ನು ತರಿಸಿಕೊಂಡೆವು. ಈ ಎಲ್ಲಾ ವಿಚಾರಗಳ ಬಗೆಗೆ ಪ್ರತ್ಯಕ್ಷ ಅನುಭವವಿರದಿದ್ದುದರಿಂದ, ಪ್ರಾತ್ಯಕ್ಷಿಕಾ ರೀತಿಯಲ್ಲಿ ಕೆಲವರ ಗುಂಪುಗಳನ್ನು ಗುರುತಿಸಿ, ಹೊಂದಾಣಿಕೆಗಳ ಬಗೆಗೂ ತಿಳಿದುಕೊಂಡೆವು. ನಮ್ಮ ಆಸ್ಪತ್ರೆಯ ಪ್ರಯೋಗಾಲಯದಲ್ಲಿ ಸೂಕ್ಷ್ಮ ದರ್ಶಕ ಯಂತ್ರ (Microscope) ಇದ್ದು ಒಬ್ಬ ತಂತ್ರ ಕುಶಲಿ ಆ ಸಮಯದಲ್ಲಿದ್ದರು. ರಕ್ತವನ್ನು ಕೆಲ ಸಮಯ ಶೇಖರಿಸಿಡಲು ಶೀತಲ ಪೆಟ್ಟಿಗೆ (Refrigerator) ಕೂಡಾ ಇತ್ತು. ನಾವು ಅನುಸರಿಸುತ್ತಿದ್ದ ವಿಧಾನವನ್ನು ಪದೇ ಪದೇ ಮಾಡಿ, ಅದರ ಸುರಕ್ಷತೆಯ ಬಗೆಗೆ ಖಾತರಿ ಮಾಡಿಕೊಂಡೆವು. ರಕ್ತಪೂರಣೆಗೆ ಸೂಕ್ತವಾಗ ...ದುದಾದ ರೋಗಿಯ ಆಯ್ಕೆ ಮುಂದಿನ ಹೆಜ್ಜೆ. ಅದು ಈ ತನಕ ಜರುಗಿಸಿದ ಕಾರ್ಯಕ್ರಮಗಳಿಗಿಂತ ತುಂಬಾ ಜಟಿಲವಾದುದೇ ಅಲ್ಲದೆ ಅಪಾಯಕಾರಿ ಕೂಡ ಎಂಬುದರ ಅರಿವು ನಮಗಿಲ್ಲದಿರಲಿಲ್ಲ. ತುರ್ತಾಗಿ ರಕ್ತದ ಅವಶ್ಯಕತೆ ಇರುವವರಿಗೆ ಆಪರೇಷನ್ ಸಮಯದಲ್ಲಿ ನೀಡಿ, ಅವನೇನಾದರೂ ಸಾಯುವಂತಾದರೆ, ಅವನಾಗಲೇ ತಲುಪಿದ ವಿಷಮ ಪರಿಸ್ಥಿತಿಯಿಂದಲೇ ಸಾವಿಗೀಡಾದನೊ, ಇಲ್ಲವೆ ರಕ್ತಪೂರಣೆಯ ಅಡ್ಡ ಪರಿಣಾಮದಿಂದ ಸತ್ತನೊ ಎಂಬುದನ್ನು ದೃಢಪಡಿಸುವುದು ಕಷ್ಟ. ಯಾರಾದರೂ ತೀವ್ರ ರಕ್ತ ಹೀನತೆಯಿಂದ ಬಳಲುವವರು ಲಭ್ಯವಾದರೆ ಅವರಿಗೆ ನಾವು ಜರುಗಿಸುವ ರಕ್ತಪೂರಣೆಯ ಅಪಾಯಗಳ ಬಗೆಗೂ ವಿವರಿಸಿ, ಅನಂತರ ಮುಂದಿನ ಹೆಜ್ಜೆ ಇಡುವುದೆಂಬ ನಿರ್ಧಾರ ಮಾಡಿದೆವು.

## ಅಪಾಯದ ಅಂಚಿಗೆ

ಕೆಲವೇ ದಿನಗಳಲ್ಲಿ ತೀವ್ರ ರಕ್ತಹೀನತೆಯಿಂದ ಬಳಲುತ್ತಿದ್ದ ಮಹಿಳೆಯೊಬ್ಬಳು ಆಸ್ಪತ್ರೆಗೆ ದಾಖಲಾದಳು. ಇಂಜಕ್ಷನ್ ಇಲ್ಲವೆ ಮಾತ್ರೆಗಳನ್ನು ನೀಡಿ ಆಕೆಯ ಪರಿಸ್ಥಿತಿಯನ್ನು ಸುಧಾರಿಸುವುದು ಅಸಾಧ್ಯವೆಂಬಂತಾಗಿತ್ತು. ರಕ್ತಪೂರಣೆ ಮಾಡುವ ಹಂತವನ್ನು ತಲುಪಿದ್ದೆವಾದರೂ ಆಕೆ ಇದ್ದ ಪರಿಸ್ಥಿತಿ ಗಾಬರಿ ಹುಟ್ಟಿಸುವಂತಿತ್ತು. ಆ ಸಲುವಾಗಿ ಮೈಸೂರಿಗೆ ಹೋಗುವ ಸಲಹೆಯನ್ನೂ ಮಾಡಲಾಯಿತು. ಆಕೆಯ ಗಂಡ ಅವಶ್ಯಕವಾದ ಕೆಲವು ಮದ್ದುಗಳನ್ನು ಕೊಂಡು ತರಲು ಸಾಧ್ಯವಾಗುತ್ತಿಲ್ಲ, ಅಂತಹದರಲ್ಲಿ ಮೈಸೂರಿಗೆ ಕೊಂಡು ಹೋಗುವ ಸ್ಥಿತಿಯಲ್ಲಿಲ್ಲವೆಂದು ಕೈಚೆಲ್ಲಿ ಕುಳಿತ. ಏನಾದರಾಗಲೆಂದು ನಮ್ಮ ಯೋಜನೆಯ ವಿವರಗಳನ್ನು ಅವನು ಹಾಗೂ ಅವರಿಬ್ಬರ ಸಂಬಂಧಿಕರ ಮುಂದಿಟ್ಟೆವು. ಅದರಿಂದ ಉದ್ಭವಿಸಬಹುದಾದ ಅಡ್ಡ ಪರಿಣಾಮಗಳು, ಅಂತಿಮವಾಗಿ ರೋಗಿಯು ಸಾಯಬಹುದಾದ ಸಾಧ್ಯತೆಯನ್ನೂ ವಿವರಿಸಿದೆವು. ಅಂತಹ ಯಾವುದೇ ಪರಿಸ್ಥಿತಿಗೆ ಅವರು ಸಿದ್ಧವಾಗಿರುವುದಾಗಿಯೂ, ಅವರಿಗೆ ಸಹಾಯ ಮಾಡುವ ಯಾವುದೇ ಉದ್ದೇಶವನ್ನು ನಿರಾಕರಿಸುವುದಿಲ್ಲವೆಂದು ಭರವಸೆ ಇತ್ತರು ಹಾಗೂ ಅದನ್ನು ಲಿಖಿತ ಮೂಲಕ ಬರೆದು ಕೊಡಲು ಸಹ ಸಿದ್ಧರಾದರು.

ಅಷ್ಟೆಲ್ಲಾ ಮಾತುಕತೆಗಳಾದ ಮೇಲೆ ಮುಂದಿನ ಕ್ರಮಗಳನ್ನು ಹಂತ ಹಂತವಾಗಿ ಕೈಗೊಂಡೆವು. ಮೊದಲಿಗೆ ಆಕೆಯ ರಕ್ತದ ಗುಂಪನ್ನು ನಿರ್ಧರಿಸಲಾಯಿತು. ರಕ್ತದಾನದ ಬಗೆಗೆ ಮೊದಲೇ ಪ್ರೇರೇಪಿಸುತ್ತಿದ್ದ ಪರಿಚಿತ ಕೆಲವು ಯುವಕರನ್ನು ಆಕೆಯ ರಕ್ತ ಹೊಂದಾಣಿಕೆಯಾಗುತ್ತಿದೆಯೋ ಎಂಬುದನ್ನು ಖಚಿತ ಮಾಡಿಕೊಂಡು ೨-೩ ಜನರನ್ನು ಆಯ್ಕೆ ಮಾಡಿಕೊಂಡೆವು. ಮುಂದೆ ಸಿಟ್ರೇಟ್ ದ್ರಾವಣ ತಯಾರಿಸಿ, ಬಾಟಲುಗಳ ಶುದ್ಧೀಕರಣ (ಸ್ಟೆರಿಲೈಸೇಷನ್) ಮುಂತಾದ ಕ್ರಿಯೆಗಳನ್ನೆಲ್ಲಾ ತುಂಬಾ ಗಮನವಿಟ್ಟು ಮಾಡಿದೆವು. ಮುಂದಿನ ಭಾನುವಾರ ಬೆಳಿಗ್ಗೆ



ಮೊದಲ ರಕ್ತದಾನಿಯಿಂದ ರಕ್ತ ಸ್ವೀಕಾರ

ಆಸ್ಪತ್ರೆಗೆ ಬಂದಾಕ್ಷಣ ದಾನಿಯಿಂದ ರಕ್ತ ಪಡೆದುಕೊಂಡೆವು. ರೋಗಿಯನ್ನು ಮತ್ತೊಮ್ಮೆ ಮೂಲಭೂತ ಪರೀಕ್ಷೆಗಳಿಗೊಳಪಡಿಸಿ ರಕ್ತ ಪೂರಣೆಗೆ ಸಜ್ಜು ಮಾಡಿದೆವು. ರಕ್ತ ಪೂರಣೆ ಆರಂಭಿಸುವ ಮೊದಲು ಪ್ರತಿಕ್ರಿಯೆಗಳನ್ನು (ರಿಯಾಕ್ಷನ್) ತಡೆಯಲು ಸಾಮಾನ್ಯವಾಗಿ ನೀಡುವ ಇಂಜಕ್ಷನ್‌ಗಳನ್ನು ನೀಡಿದೆವು. ತೋಳಿನ ರಕ್ತನಾಳವೊಂದರೊಳಗೆ ಗ್ಲೂಕೋಸ್ ಡ್ರಿಪ್‌ನ್ನು ಶುರುಮಾಡಿ ನಂತರ ರಕ್ತದ ಬಾಟಲನ್ನೂ ಸೇರಿಸಿದೆವು. ರಕ್ತದ ಹನಿಗಳು ಆಕೆಯ ಶರೀರ ಸೇರುತ್ತಿದ್ದಂತೆಲ್ಲಾ ನಾವು ಆತಂಕ ಪಡುವಂತಾಗಿತ್ತು. ಮೊದಲ ೧೦-೧೫ ನಿಮಿಷಗಳು ಯಾವ ತರಹದ ತೊಂದರೆಗಳೂ ಕಂಡು ಬರಲಿಲ್ಲ. ಅಷ್ಟರಲ್ಲಿ ಒಬ್ಬ ವೈದ್ಯರನ್ನು ಹೊರ ರೋಗಿಗಳ ವಿಭಾಗದಲ್ಲಿ ಕಾರ್ಯ ನಿರ್ವಹಿಸಲು ಕಳಿಸಿದ್ದಾಯಿತು. ಇನ್ನಿಬ್ಬರು ಮುಂದಾಗಬಹುದಾದ ಬೆಳವಣಿಗೆಗಳನ್ನು ನಿಭಾಯಿಸಲು ವಾರ್ಡಿನಲ್ಲಿ ಆಕೆಯ ಪಕ್ಕದಲ್ಲೇ ಕುಳಿತೆವು. ಮುಂದಿನ ಅರ್ಧ ಗಂಟೆಯಲ್ಲಿ ರೋಗಿಗೆ ಚಳಿ, ನಡುಕ ಶುರುವಾಯಿತು. ರಕ್ತಪೂರಣೆಯ ಸಮಯದಲ್ಲಿ ಕೆಲ ಸಾರಿ ಹಾಗಾಗುವುದು ಅಪರೂಪವೇನಲ್ಲ; ಉಪಶಮನಕ್ಕಾಗಿ ಮತ್ತೂ ಕೆಲವು ಇಂಜಕ್ಷನ್‌ಗಳನ್ನು ನೀಡಲಾಯಿತು. ಚಳಿ ನಡುಕ ಸ್ವಲ್ಪ ಸಮಯ ಕಡಿಮೆಯಾದಂತಾದರೂ ಸಂಪೂರ್ಣವಾಗಿ ಸ್ಥಗಿತವಾಗಲಿಲ್ಲ; ಮುಂದೆ ಪ್ರತಿಕ್ರಿಯೆ ಲಕ್ಷಣಗಳು ಮತ್ತೂ ಉಲ್ಬಣವಾಗುವಂತೆ ಕಂಡವು. ಆಕೆಯ ನಾಡಿ ಬಡಿತ, ಉಸಿರಾಟಗಳ ಗತಿ ಹೆಚ್ಚಾಗಲಾರಂಭಿಸಿದವು. ತಣ್ಣಗೆ ಬೆವರಲಾರಂಭಿಸಿದಳು. ರಕ್ತದ ಹರಿವನ್ನು ತಾತ್ಕಾಲಿಕವಾಗಿ ನಿಲ್ಲಿಸಿ, ಇನ್ನೊಂದು ತೋಳಿನ ರಕ್ತನಾಳದ ಮೂಲಕ ಗ್ಲೂಕೋಸ್ ಡ್ರಿಪ್ ಶುರು ಮಾಡಿದೆವು. ಆದರೂ ರೋಗಿಯ ಸ್ಥಿತಿ ಸುಧಾರಿಸುವ ಹಾಗೆ ಕಾಣಲಿಲ್ಲ. ರಕ್ತದ ಬಾಟಲನ್ನು ತೆಗೆದು ಹಾಕಿ ಅವಳ ಸ್ಥಿತಿಯನ್ನು ಉತ್ತಮ ಪಡಿಸಲು ಶಕ್ತಿಶಾಲಿ ಇಂಜಕ್ಷನ್ ಮತ್ತಿತರ ಬೆಂಬಲೋಪಚಾರದ ವಿಧಾನಗಳನ್ನು ಆರಂಭಿಸಿದೆವು. ಕೆಲ ಸಮಯ ಪರಿಸ್ಥಿತಿ ಹತೋಟಿಗೆ ಬಂದಂತಾದರೂ ಮತ್ತೆ ಮತ್ತೆ ಹಿಂದಿನಂತೆಯೇ ಆಗಿಬಿಡುತ್ತಿತ್ತು. ನಡು ನಡುವೆ ಆಮ್ಲಜನಕ ಸೇವನೆಯೂ ನಡೆಯುತ್ತಿತ್ತು. ದಿನವೆಲ್ಲಾ ಪರಿಸ್ಥಿತಿ ಹಾಗೆ ಮುಂದುವರಿಯು

ತ್ತಿದ್ದುದರಿಂದ ನಾವು ಮೂವರೂ ಊಟಕ್ಕೂ ಮನೆಗಳಿಗೆ ಹೋಗದೆ ಅಲ್ಲಿ ಸರ್ಪಗಾವಲಿರಿಸಿದಂತೆ ಕುಳಿತಿದ್ದೆವು. ಒಂದು ಒಳ್ಳೆಯ ಉದ್ದೇಶದಿಂದ ಪ್ರಾರಂಭಿಸಿದ್ದು, ಆಕೆಗೆ ಏನಾದರೂ ತೊಂದರೆ ಸಂಭವಿಸಿದರೆ ಪರಿಣಾಮ ನಮ್ಮ ಮೇಲೂ ಆಗದಿರುತ್ತಿರಲಿಲ್ಲ. ಮುಂದುವರಿದ ಚಿಕಿತ್ಸಾ ಕ್ರಮಗಳಿಂದ ಸಾಯಂಕಾಲದ ಹೊತ್ತಿಗೆ ಆಕೆಯ ಸ್ಥಿತಿ ಅಪಾಯವಾಗಲಾರದಂತಹ ಸುರಕ್ಷಿತ ಮಟ್ಟವನ್ನು ತಲುಪಿದಂತಾಯಿತು. ಮುಂದೆ ಸರದಿಯ ಮೇರೆಗೆ ಒಬ್ಬೊಬ್ಬರಾಗಿ ಮನೆಗೆ ಹೋಗಿ ಬಂದೆವು. ರಾತ್ರಿ ಒಂದೆರಡು ಸಾರಿ ವಾರ್ಡಿನಲ್ಲಿ ಅವಳನ್ನು ನೋಡಿ ಬಂದ ನಂತರವೇ ನಾನು ನಿದ್ರೆ ಮಾಡಲು ಸಾಧ್ಯವಾಗಿದ್ದು. ಅದೊಂದು ಮರೆಯಲಾಗದ ಭಾನುವಾರವಾಗಿ ನನ್ನ ಸ್ಮೃತಿ ಪಟಲದಲ್ಲುಳಿದುಕೊಂಡಿದೆ! ನಮ್ಮ ವಿಧಾನಗಳಲ್ಲಿ ಎಲ್ಲಿ ತಪ್ಪಿ ಹೋಗಿರಬಹುದೆಂಬುದರ ಬಗೆಗೆ ಚರ್ಚಿಸಿದೆವು. ಆದರೆ ಅಂತಹ ದುಸ್ಸಾಹಸಕ್ಕೆ ಮುಂದೆಂದೂ ಕೈ ಹಾಕಬಾರದೆಂಬ ನಿರ್ಧಾರ ಮಾಡಿದೆವು.

## ಶಾನುಭೋಗರ ತಾಯಿ!

ಈ ಪ್ರಕರಣ ಜರುಗಿದ ಒಂದು ತಿಂಗಳೊಳಗೇ ಮೂರು ದಿನಗಳಿಂದ ರಕ್ತ ವಾಂತಿಯಾಗುತ್ತಿದ್ದ ೬೦-೬೫ ವಯಸ್ಸಿನ ಮಹಿಳೆಯೊಬ್ಬರು ಆಸ್ಪತ್ರೆಗೆ ದಾಖಲಾದರು. ಪಕ್ಕದ ಹಳ್ಳಿಯ ನನಗೆ ಪರಿಚಿತ ಶಾನುಭೋಗರ ತಾಯಿ ಅವರು. ಕಾಗದದಂತೆ ಬಿಳಿಚಿಕೊಂಡಿದ್ದ ಅವರ ನಾಡಿ ಬಡಿತ ರಕ್ತದೊತ್ತಡಗಳನ್ನೂ ಗುರುತಿಸಲಾಗದಷ್ಟು ವಿಷಮ ಸ್ಥಿತಿ ತಲುಪಿದ್ದಿತು. ನಮ್ಮ ಆಸ್ಪತ್ರೆಯಲ್ಲಿ ಚಿಕಿತ್ಸೆ ಜರುಗಿಸಬಹುದಾದ ಹಂತ ಮೀರಿ ಹೋಗಿತ್ತು. ಶಾನುಭೋಗರನ್ನು ಹೊರಗೆ ಕರೆದು ಅವರ ತಾಯಿಯ ಸ್ಥಿತಿಯನ್ನು ವಿವರಿಸಿದೆ. ಆದಷ್ಟು ಬೇಗ ಅವರನ್ನು ಮೈಸೂರಿಗೆ ಕರೆದೊಯ್ಯುವುದು ಒಳ್ಳೆಯದೆಂದು ಸ್ಪಷ್ಟವಾಗಿ ತಿಳಿಸಿದೆ. ನನ್ನ ಹಿತವಚನವನ್ನು ಆಲಿಸಿದರಾದರೂ, ಅವರ ತಾಯಿ ಮೈಸೂರು ತಲುಪುವುದರೊಳಗೇ ಹಾದಿ ಹೆಣವಾಗುವುದು ಅವರಿಗಿಷ್ಟವಿಲ್ಲವೆಂದರು. ಸರಿಯಾದ ಸಮಯದಲ್ಲಿ ಅವರನ್ನು ಆಸ್ಪತ್ರೆಗೆ ತರಲಾಗುದುದಕ್ಕೆ ಪರಿತಪಿಸಿದರು. ನಮ್ಮ ಆಸ್ಪತ್ರೆಯಲ್ಲೇ ಸಾಧ್ಯವಾದ ಚಿಕಿತ್ಸೆಯನ್ನು ನೀಡಿ ಪ್ರಯತ್ನಿಸಬೇಕೆಂದು ದುಂಬಾಲು ಬಿದ್ದರು. ನಾನು ರಕ್ತ ಪೂರಣೆ ಅವಶ್ಯಕತೆಯನ್ನು ಎತ್ತಿದೆ. ಆದರೆ ಕೆಲ ದಿನಗಳ ಹಿಂದೆ ಆ ಬಗೆಗೆ ಪ್ರಯತ್ನ ನಡೆದದ್ದು ಅವರಿಗೆ ಅದು ಹೇಗೋ ತಿಳಿದು ಬಿಟ್ಟಿತ್ತು! ಅದೇ ರೀತಿಯಲ್ಲಿ ತಮ್ಮ ತಾಯಿಗೂ ಮಾಡಬೇಕೆಂದು ಒತ್ತಾಯಿಸಲಾರಂಭಿಸಿದರು. ಆ ದುಸ್ಸಾಹಸದ ಬಗೆಗೆ ವಿವರಿಸಿ ಮುಂದೆಂದೂ ಅದನ್ನು ಮಾಡುವುದಿಲ್ಲವೆಂಬ ನಮ್ಮ ನಿರ್ಧಾರದ ಬಗೆಗೆ ತಿಳಿಸಿದೆ. ಅದಕ್ಕವರು ಸಮ್ಮತಿಸಲು ತಯಾರಿರಲಿಲ್ಲ. ನಾವು ಚಿಕಿತ್ಸೆ ಮಾಡುತ್ತಿರುವುದು ಈಗಲೋ ಆಗಲೋ ಜೀವ ಹೋಗಬಹುದಾದ ಅವರ ವಯಸ್ಸಾದ ತಾಯಿಗೆ; ನಮ್ಮ ಪ್ರಯತ್ನದ ನಂತರವೂ ಅವರು ಅಸುನೀಗಿದರೆ ಅದಕ್ಕೆ ನಮ್ಮನ್ನು ದೂರುವುದಿಲ್ಲ; ಅದಕ್ಕೆಲ್ಲಾ ಅವರೇ ಜವಾಬ್ದಾರರು. ಅಂತಹ ಕಾರ್ಯದಿಂದ ನಮಗಾರಿಗೂ ತೊಂದರೆಯುಂಟಾಗದಂತೆ ನೋಡುವುದು ಅವರ ಕರ್ತವ್ಯ; ಅದರಿಂದ ಮತ್ತೊಂದು ಸಾರಿ ರಕ್ತಪೂರಣೆ ಪ್ರಯತ್ನ ಮಾಡಬೇಕೆಂದು ಪಟ್ಟು ಹಿಡಿದರು. ನಾನಾಗ ಅವರ ಇಚ್ಛೆಗೆ ಮಣಿಯದೇ ಗತ್ಯಂತರವಿರಲಿಲ್ಲ.

ನಮ್ಮ ತಂಡ ತುರ್ತಾಗಿ ಆ ಬಗೆಗೆ ಚರ್ಚೆ ನಡೆಸಿತು. ಅದು ಹೇಗೆ ಮತ್ತೊಮ್ಮೆ ನಮ್ಮ ಕರ್ತವ್ಯ ನಿರ್ವಹಿಸುವ ಅನಿವಾರ್ಯತೆಯುಂಟಾಗಿದೆ ಎಂಬುದನ್ನು ವಿವರಿಸಿದೆ. ಅವರಿಬ್ಬರೂ ನನ್ನ ಸಲಹೆಗೆ ಸಮ್ಮತಿಸಿದರು; ಕೂಡಲೇ ಕಾರ್ಯೋನ್ಮುಖರಾದೆವು. ಪ್ರಯೋಗ ಶಾಲೆಯಲ್ಲಿ ಜರುಗಬೇಕಾದ ಕಾರ್ಯಗಳೆಲ್ಲಾ ಮಿಂಚಿನ ವೇಗದಲ್ಲಿ ಸಾಗಿದವು. ಶಾನುಭೋಗರ

ಸಹೋದರರು, ಮಕ್ಕಳುಗಳೆಲ್ಲಾ ರಕ್ತ ನೀಡಲು ಮುಂದೆ ಬಂದರು. ಅಂತಹ ಒಂದಿಬ್ಬರ ರಕ್ತ ಹೊಂದಾಣಿಕೆ ಯಾಯಿತು. ಅವರೊಬ್ಬರಿಂದ ಒಂದು ಬಾಟಲು ತೆಗೆಯಲಾಯಿತು.

ರೋಗಿ ಆಸ್ಪತ್ರೆಗೆ ದಾಖಲಾಗುತ್ತಲೇ ಗ್ಲೂಕೋಸ್ ಡ್ರಿಪ್ ಮುಂತಾದ ಬೆಂಬಲೋಪಚಾರಗಳನ್ನು ಶುರುಮಾಡಿದ್ದೆವು. ರಕ್ತಪೂರಣೆ ಮುನ್ನ ನೀಡಬೇಕಾದ ಇಂಜಕ್ಷನ್‌ಗಳನ್ನೆಲ್ಲಾ ನೀಡಿದೆವು. ರಕ್ತದ ಬಾಟಲನ್ನು ನೇತುಹಾಕಿ. ಬಹಳ ನಿಧಾನಗತಿಯಲ್ಲಿ ಹರಿಯುವ ಏರ್ಪಾಡು ಮಾಡಿದೆವು. ಸುಮಾರು ಅರ್ಧ ಬಾಟಲಿನಷ್ಟು ರಕ್ತ ಹರಿದರೂ ಪ್ರತಿಕ್ರಿಯೆಯ ಯಾವುದೇ ಲಕ್ಷಣಗಳು ಪ್ರಕಟವಾಗಲಿಲ್ಲ. ಮುಂದೆ ರಕ್ತ ಹರಿಯುವ ಗತಿಯನ್ನು ಚುರುಕು ಮಾಡಿದೆವು. ಅದು ಯಶಸ್ವಿಯಾದ್ದರಿಂದ ಮತ್ತೊಬ್ಬರು, ಮಗದೊಬ್ಬರಿಂದ ರಕ್ತ ತೆಗೆದು ಒಂದಾದರ ಮೇಲೊಂದರಂತೆ ನೀಡುತ್ತಾ ಹೋದೆವು. ಸಾಯಂಕಾಲದ ಹೊತ್ತಿಗೆ ಯಾವುದೇ ಅಡೆತಡೆಗಳಾಗದೆ ಮೂರು ಬಾಟಲು ರಕ್ತ ಶಾನುಭೋಗರ ತಾಯಿಯ ಶರೀರ ಸೇರಿದ್ದವು. ಅಜ್ಜಿ ಕಣ್ಣು ಬಿಟ್ಟು ಅವರಿವರ ಕಡೆ ದೃಷ್ಟಿಹಾಯಿಸಿ ಮುಗಳ್ನಗೆ ಬೀರಿದಳು! ರಾತ್ರಿಯ ಸಲುವಾಗಿ ನಾಲ್ಕನೆಯ ಬಾಟಲನ್ನು ನೇತು ಹಾಕಿ ನಾವೆಲ್ಲಾ ಮನೆ ಕಡೆ ಕಾಲು ಹಾಕಿದೆವು.

ಮರುದಿನ ಬೆಳಿಗ್ಗೆ ಆಸ್ಪತ್ರೆಗೆ ಹೋಗುವ ದಾರಿಯಲ್ಲೇ ಶಾನುಭೋಗರು ಮಂದಹಾಸ ಬೀರಿ ಕೈಮುಗಿದರು. ನನ್ನೆರಡು ಕೈಗಳನ್ನು ಹಿಡಿದುಕೊಂಡು "ಎಂಥಾ ಪವಾಡ ಮಾಡಿ ಬಿಟ್ಟಿರಿ ಡಾಕ್ಟ್ರೇ, ನನ್ನ ತಾಯಿಯ ಜೀವ ಉಳಿಸಿದ್ದಕ್ಕೆ ನಾನೆಷ್ಟು ಋಣಿಯಾದರು ಸಾಲದು" ಎಂದು ಅಭಿನಂದಿಸಿದರು. ವಾರ್ಡಿಗೆ ಹೋದರೆ ಶಾನುಭೋಗರ ತಾಯಿ ಎದ್ದು ಕುಳಿತು ಮೊಮ್ಮಕ್ಕಳು, ಮರಿಮಕ್ಕಳ ಜೊತೆ ಸಂತಸದಿಂದ ನಕ್ಕು ನಲಿದಾಡುತ್ತಿದ್ದರು. ನಾವು ಮೂರು ಮಂದಿ ಡಾಕ್ಟರುಗಳಿಗೆ ಅಲ್ಲದೆ ಆಸ್ಪತ್ರೆಯ ಸಿಬ್ಬಂದಿ ವರ್ಗದವರಿಗೆಲ್ಲಾ ಅಂದು ಸಂತಸ, ಸಂತೃಪ್ತಿಯ ಅನುಭವ.

ಆಕಸ್ಮಿಕವೋ ಎಂಬಂತೆ ಯಶಸ್ವಿಯಾದ ಶಾನುಭೋಗರ ತಾಯಿಯ ರಕ್ತಪೂರಣೆಯಿಂದ ಕೊಳ್ಳೇಗಾಲದ ಆಸ್ಪತ್ರೆಯಲ್ಲಿ ಕಾಯಂ ಆಗಿ ಅಂತಹ ಒಂದು ವ್ಯವಸ್ಥೆಯನ್ನು ಮುನ್ನಾರ್ ಟೀ ಎಸ್ಟೇಟ್ ಆಸ್ಪತ್ರೆಯ ಮಾದರಿಯಲ್ಲಿ ಹುಟ್ಟು ಹಾಕಬಹುದೆಂಬ ನನ್ನ ಯೋಚನಾ ಲಹರಿ ಹರಿಯತೊಡಗಿತು. ಅಲ್ಲಿರುವಂತೆಯೇ ವೈದ್ಯರು ಮತ್ತಿತರ ಸಿಬ್ಬಂದಿಗಳು ಹಾಗೂ ಅವಶ್ಯ ಪರಿಕರಗಳು ನಮ್ಮಲ್ಲಿದ್ದವು. ಆದರೆ ತುರ್ತು ಸಂದರ್ಭಗಳಲ್ಲಿ ಒಡನೆಯೇ ಸಜ್ಜುಗೊಳಿಸುವುದು ಕಷ್ಟವಾಗುತ್ತಿತ್ತು. ಕಾಯಂ ವ್ಯವಸ್ಥೆ ಮಾಡಲು ಹಣಕಾಸಿನ ನೆರವೂ ಬೇಕಾಗುತ್ತಿತ್ತು. ಸರ್ಕಾರ ಇಂತಹ ಸಾಹಸಗಳಿಗೆ ಹಣಕಾಸು ಒದಗಿಸುವ ಭರವಸೆ ಇರಲಿಲ್ಲ. ಅದರಿಂದ ಸ್ಥಳೀಯವಾಗಿಯೇ ಸಂಪನ್ಮೂಲಗಳನ್ನು ಒದಗಿಸಿಕೊಳ್ಳುವ ಯೋಚನೆ ಮಾಡಿದೆವು.

ಇಂಡಿಯನ್ ಮೆಡಿಕಲ್ ಅಸೋಸಿಯೇಷನ್‌ನ ಶಾಖೆಯೊಂದು ಬಹಳ ಹಿಂದಿನಿಂದಲೂ ಅಲ್ಲಿ ಅಸ್ತಿತ್ವದಲ್ಲಿತ್ತು. ಅಲ್ಲಿಯ ಖಾಸಗಿ ವೈದ್ಯರ ಪರಿಚಯ, ಒಡನಾಟ, ಸಖ್ಯ ಸಾಕಷ್ಟು ಹಿತಕರವಾಗಿ ಬೆಳೆದಿತ್ತು. ಅಲ್ಲಿಗೆ ಹೋದ ಮರು ವರ್ಷವೇ ನನ್ನನ್ನು ಅಧ್ಯಕ್ಷನನ್ನಾಗಿ ಆರಿಸಿದ್ದರು; ಚಟುವಟಿಕೆಗಳೂ ಚುರುಕುಗೊಂಡಿದ್ದವು. ಅದರ ತಿಂಗಳ ಸಭೆಯಲ್ಲಿ ನಾವು ಜರುಗಿಸಿದ ಯಶಸ್ವಿ ರಕ್ತಪೂರಣೆಯ ವರದಿ ಮಾಡಿದೆ. ಅಲ್ಲದೆ ಅಲ್ಲೊಂದು ವಿಶಿಷ್ಟ ರೀತಿಯ, ಪುಟ್ಟ ರಕ್ತ ಭಂಡಾರವನ್ನು (Blood Bank) ಸ್ಥಾಪಿಸುವ ಬಗೆಗೆ ಮುನ್ನಾರ್ ಮಾದರಿಯ ನನ್ನ ವಿಚಾರ ಧಾರೆಯನ್ನು ಅವರೆಲ್ಲರ ಮುಂದೆ ತೆರೆದಿಟ್ಟೆ. ಅವರೆಲ್ಲರೂ ಅದನ್ನು ಅನುಮೋದಿಸಿದರು.

ಮುಂದಿನ ದಿನಗಳಲ್ಲಿ ಯೋಜನೆಯ ರೂಪ ರೇಷೆಗಳು ತಯಾರಾದವು. ಅದೊಂದು 'ಸ್ವಯಂ ಪ್ರೇರಿತ ರಕ್ತಪೂರಣಾ ವ್ಯವಸ್ಥೆ' (Voluntary Blood Transfusion Service) ಯಾಗಬೇಕೇ ಹೊರತು ಇತರ ಕಡೆ ಇರುವ ವೃತ್ತಿ ದಾನಿಗಳಿಂದ ಹಣಕೊಂಡು ಪಡೆಯುವ ಬ್ಲಡ್ ಬ್ಯಾಂಕ್ ಆಗಬಾರದೆಂದು ನಿರ್ಧರಿಸಿದೆವು. ಅದಕ್ಕೆ ಅವಶ್ಯಕವಾಗಿ ಬೇಕಾಗುವ ಸಿಟ್ರೇಟ್ ದ್ರಾವಣ, ಡ್ರಿಪ್‌ಸೆಟ್ಟುಗಳು (Dripsets), ರಕ್ತದ ಗುಂಪು ಕಂಡು ಹಿಡಿದು ಹೊಂದಾಣಿಕೆ ಮಾಡಲು ಬೇಕಾಗುವ ಸೀರಮ್ ಮುಂತಾದವುಗಳನ್ನು ಒದಗಿಸಿಕೊಳ್ಳಲು ಬೇಕಾಗುವ ಹಣ ಸಂಗ್ರಹ ಮುಂತಾದ ಹಲವು ವಿಚಾರಗಳ ಬಗೆಗೆ ಚರ್ಚೆಗಳಾದವು. ಸಾರ್ವಜನಿಕರಿಂದ ಹಣ ಸಂಗ್ರಹಿಸುವ ನಿರ್ಧಾರವೂ ಆಯಿತು.

ಮುಂದಿನ ಕೆಲವೇ ದಿನಗಳಲ್ಲಿ ಇಂಡಿಯನ್ ಮೆಡಿಕಲ್ ಅಸೋಸಿಯೇಷನ್‌ನ ಸದಸ್ಯರೆಲ್ಲಾ ಕೊಳ್ಳೇಗಾಲದ ಪ್ರಮುಖ ಬೀದಿಗಳಲ್ಲಿ ಪಾದಯಾತ್ರೆ ನಡೆಸಿದೆವು. ಸಾರ್ವಜನಿಕರ ಪ್ರತಿಕ್ರಿಯೆ ನಮ್ಮನ್ನು ದಂಗು ಬಡಿಸುವಂತಿತ್ತು. ಅಲ್ಲಿದ್ದ ಸಣ್ಣ, ದೊಡ್ಡ ಅಂಗಡಿ ಮುಂಗಟ್ಟಿನವರು, ಔಷಧ ವ್ಯಾಪಾರಿಗಳು ಮತ್ತಿತರ ಸಾರ್ವಜನಿಕರು ತೆರೆದ ಮನಸ್ಸಿನಿಂದ ವಂತಿಗೆ ನೀಡಿದರು. ಅಷ್ಟೇ ಅಲ್ಲದೆ ಸಿನೆಮಾ ಮಂದಿರವೊಂದರಲ್ಲಿ ಸಹಾಯಾರ್ಥ ಸಿನೆಮಾ ಪ್ರದರ್ಶನವನ್ನು ಸಹ ('ಮಿಸ್ ಲೀಲಾವತಿ') ಏರ್ಪಡಿಸಿದೆವು. ಈ ಎಲ್ಲಾ ಕಾರ್ಯಕ್ರಮಗಳಿಂದ ಸುಮಾರು ಹದಿನೆಂಟು ಸಾವಿರ ರೂಪಾಯಿಗಳು ಸಂಗ್ರಹವಾಗಿದ್ದವೆಂಬ ನೆನಪಿದೆ. ಎಪ್ಪತ್ತರ ದಶಕದಲ್ಲಿ ತಾಲ್ಲೂಕು ಕೇಂದ್ರದಲ್ಲಿ ಅಷ್ಟೊಂದು ಹಣ ಶೇಖರಣೆ ನಮ್ಮ ನಿರೀಕ್ಷೆಗೂ ಮೀರಿತ್ತು. ಏರ್ಪಾಡುಗಳಿಗಾಗಿ ಖರ್ಚು ಮಾಡಿದ ಮೂರು ಸಾವಿರಗಳನ್ನುಳಿದು ಹದಿನೈದು ಸಾವಿರ ರೂಪಾಯಿಗಳನ್ನು ಮೆಡಿಕಲ್ ಅಸೋಸಿಯೇಷನ್ ಹೆಸರಿನಲ್ಲಿ 'ಅವಧಿ ಠೇವಣಿ' ರೂಪದಲ್ಲಿ ಇರಿಸಿದೆವು. ಅದರಿಂದ ಲಭ್ಯವಾಗುವ ಬಡ್ಡಿಯಿಂದ ರಕ್ತಪೂರಣಾ ವ್ಯವಸ್ಥೆಯ ಖರ್ಚು ವೆಚ್ಚಗಳನ್ನು ಭರಿಸುವ ಯೋಜನೆಯನ್ನು ತಯಾರಿಸಿದ್ದೆವು.

ಮುಂದಿನ ಕೆಲವು ದಿನಗಳಲ್ಲೇ ಇಂಡಿಯನ್ ಮೆಡಿಕಲ್ ಅಸೋಸಿಯೋಷನ್ ವತಿಯಿಂದ ಕೊಳ್ಳೇಗಾಲದಲ್ಲಿ ಆಸ್ಪತ್ರೆ ಆವರಣದಲ್ಲಿ - **ಸ್ವಯಂ ಪ್ರೇರಿತ ರಕ್ತಪೂರಣಾ ಸೇವಾ ವ್ಯವಸ್ಥೆ** - ಎಂಬ ಘಟಕವನ್ನು ಮೈಸೂರಿನ ಡಿ.ಎಚ್.ಓ. ಅವರಿಂದ ಉದ್ಘಾಟನೆ ಮಾಡಿಸಿದೆವು. ಅದೇ ಹೆಸರಿನ ನಾಮಫಲಕವನ್ನು ಆಸ್ಪತ್ರೆ ಎದುರು ಅನಾವರಣ ಮಾಡಿದೆವು.

ರಕ್ತದಾನದ ಮಹತ್ವವನ್ನು ಜನ ಸಮುದಾಯದಲ್ಲಿ ಪ್ರಚಾರ ಮಾಡಲು ಅಲ್ಲಿಯ ರೋಟರಿ, ಲಯನ್ಸ್ ಕ್ಲಬ್‌ಗಳು ಮತ್ತು ಶಾಲಾ ಕಾಲೇಜುಗಳಲ್ಲಿ ಆಗಾಗ್ಗೆ ಭಾಷಣ ಮಾಡುತ್ತಿದ್ದೆ. ಈ ಎಲ್ಲಾ ಬೆಳವಣಿಗೆಗಳಿಂದ ವೃತ್ತಿದಾನಿಗಳ ಅವಶ್ಯಕತೆಯೇ ಉಂಟಾಗದೆ ರೋಗಿಯ ಸಂಬಂಧಿಕರು, ಸ್ನೇಹಿತರು ಹಾಗೂ ಮಾನವೀಯ ಆದರ್ಶಗಳ ಬಗೆಗೆ ಅನುಕಂಪ ಇರುವ ಸಾರ್ವಜನಿಕರೂ ಸಹ ಆಸ್ಪತ್ರೆಯಿಂದ ಕರೆ ಬಂದಾಗಲೆಲ್ಲಾ ರಕ್ತದಾನ ಮಾಡಲು ಮುಂದೆ ಬರುತ್ತಿದ್ದರು. ಬಹು ಪಾಲು ಸಂಬಂಧಿಕರು ಮತ್ತಿತರ ಸಂಭಾವಿತರೆನ್ನಬಹುದಾದ ವ್ಯಕ್ತಿಗಳಿಂದಲೇ ರಕ್ತ ಪಡೆಯುತ್ತಿದ್ದುದರಿಂದ ಲೈಂಗಿಕ ಮೂಲದ ರೋಗ ರುಜಿನಗಳನ್ನು ದಾನಿಗಳಿಂದ ಪಡೆಯುವ ಸಾಧ್ಯತೆಗಳಿರಲಿಲ್ಲ. ಇಂದಿನ ಭಯಾನಕ ಏಡ್ಸ್(AIDS) ಆಗಿನ್ನೂ ಅವತರಿಸಿರಲಿಲ್ಲ. ಜಾಂಡಿಸ್, ಮಲೇರಿಯಾ ಗಳಂಥ ವ್ಯಾಧಿಗಳು ಹರಡುವ ಸಾಧ್ಯತೆಗಳನ್ನು ತಳ್ಳಿಹಾಕುವಂತಿರಲಿಲ್ಲವಾದರೂ, ಅಲ್ಲಿ ನಾನಿರುವ ವರೆಗೂ ಅಂತಹ ಪ್ರಕರಣಗಳು ಸಂಭವಿಸಿರಲಿಲ್ಲ. ಪ್ರಸ್ತುತ ಸಮಯದಲ್ಲಿ ರಕ್ತ ದಾನದ ಸಮಸ್ಯೆ ಅದೆಷ್ಟು ಜಟಿಲ ಹಾಗೂ ಅಪಾಯಕರ ಹಂತವನ್ನು ತಲುಪಿದೆ ಎಂದರೆ ಅಂತಹ

ಒಂದು ಯೋಜನೆ ಬಗೆಗೆ ಕನಸು ಮನಸ್ಸಿನಲ್ಲೂ ಯೋಚಿಸಲಾಗದಂತಾಗಿದೆ. ಅನಂತರದ ಕೆಲವು ವರ್ಷಗಳಲ್ಲಿ ಆ ವ್ಯವಸ್ಥೆ ಮುಂದುವರಿಯಲಿಲ್ಲವೆಂದು ತಿಳಿದು ಬಂದಾಗ ಮನಸ್ಸಿಗೆ ಖೇದವೇನೋ ಆಯಿತು; ಆದರೆ ಇಂದಿನ ಸ್ಥಿತಿಯಲ್ಲಿ ಅದು ಅಂತ್ಯವಾದುದು ಒಳ್ಳೆಯದೇ ಆಯಿತು.

## ಸಂದಿಗ್ಧ ಪರಿಸ್ಥಿತಿ - ಸ್ಪೇಷಲ್ ವಾರ್ಡ ನಿರ್ಮಾಣಕ್ಕೆ ಪ್ರೇರಣೆ

ಮಹದೇವಪ್ರಭು, ಅಲ್ಲಿಯ ಕೋರ್ಟಿನ ಪಬ್ಲಿಕ್‌ಪ್ರಾಸಿಕ್ಯೂಟರ್. ನಾನು ಆಗಾಗ್ಗೆ ಕೋರ್ಟನಲ್ಲಿ ಸಾಕ್ಷಿ ನೀಡುವ ಅವಕಾಶವಿರುತ್ತಿದ್ದು, ಅವರೊಡನೆ ಒಳ್ಳೆಯ ಸ್ನೇಹ ಸಂಬಂಧವಿತ್ತು. ತುಂಬಾ ವಯಸ್ಸಾಗಿದ್ದ ಅವರ ತಂದೆಯವರು ಹೃದಯಾಘಾತದ ಲಕ್ಷಣಗಳಿಂದ ಆಸ್ಪತ್ರೆಗೆ ದಾಖಲಾದರು. ನಮ್ಮ ಆಸ್ಪತ್ರೆಯಲ್ಲಿ ಪುರುಷರಿಗಾಗಿ ಸ್ಪೆಷಲ್ ವಾರ್ಡುಗಳಿರಲಿಲ್ಲ. ಪುರುಷರ ವಾರ್ಡಿನಲ್ಲೇ ಪ್ರತ್ಯೇಕವಾದ ಕೊಠಡಿಯೊಂದಿದ್ದು ಅದರಲ್ಲೇ ಅವರಿಗೆ ಚಿಕಿತ್ಸೆ ಮಾಡುತ್ತಿದ್ದೆ. ಕೊಠಡಿ ಬೇರೆಯಾಗಿರುವುದನ್ನು ಬಿಟ್ಟರೆ ಬೇರಾವ ಅನುಕೂಲತೆಗಳೂ ಅದರಲ್ಲಿರಲಿಲ್ಲ. ಆದರೆ ಹೆರಿಗೆ ವಿಭಾಗದಲ್ಲಿ ಮಹಿಳೆಯರಿಗಾಗಿಯೇ ಎರಡು ಸ್ಪೆಷಲ್ ವಾರ್ಡುಗಳಿದ್ದು, ಅದರಲ್ಲಿ ಒಂದರಲ್ಲಿ ಅವರ ತಂದೆಯವರಿಗೆ ಅವಕಾಶ ಮಾಡಿಕೊಡಬೇಕೆಂದು ಪ್ರಭುಗಳು ಪರಿಪರಿಯಾಗಿ ಕೇಳಿಕೊಳ್ಳ ಲಾರಂಭಿಸಿದರು. ಕೊಳ್ಳೇಗಾಲದ ಪ್ರಮುಖ ರೇಷ್ಮೇ ಉದ್ಯಮಿಗಳೂ ಕೊಡುಗೈ ದಾನಿಗಳೂ ಆಗಿದ್ದ ಗುರ್ಕಾರ್ ಮಾದಪ್ಪ ಎಂಬವರು, ದಿವಂಗತ ಅವರ ಪತ್ನಿಯ ಜ್ಞಾಪಕಾರ್ಥ ವಾಗಿ ಇಡೀ ಹೆರಿಗೆ ವಿಭಾಗ ಮತ್ತು ಸ್ಪೆಷಲ್ ವಾರ್ಡ್ ಕಟ್ಟಿಸಿದ್ದರು. ಆ ಎರಡು ವಾರ್ಡುಗಳನ್ನು ಲಿಂಗಾಯಿತ ಮಹಿಳೆಯರ ಚಿಕಿತ್ಸೆಗೆ ಮಾತ್ರ ಕೊಡತಕ್ಕದೆಂಬ ನಿಯಮವನ್ನು ವಿಧಿಸಿ, ಅದೇ ರೀತಿ ಕಲ್ಲಿನಲ್ಲಿ ಕೆತ್ತಿಸಿ, ಗೋಡೆಯಲ್ಲಿ ಅನಾವರಣ ಮಾಡಿಬಿಟ್ಟಿದ್ದರು! ಹಿಂದಿನಿಂದಲೂ ಆ ನಿಯಮ ಪಾಲನೆಯಾಗುತ್ತಿದ್ದು, ನಾನೂ ಸಹ ಅದನ್ನೆಂದೂ ಮೀರಿದ್ದಿರಲಿಲ್ಲ. ಪ್ರಸ್ತುತ ರೋಗಿಯೂ ಲಿಂಗಾಯಿತ ಪಂಗಡದವರೇ ಆಗಿದ್ದು, ಪುರುಷರಾಗಿದ್ದರಿಂದ ಅದನ್ನವರಿಗೆ ಕೊಡಲು ನಿರಾಕರಿಸಿದೆ. ನಮ್ಮಿಬ್ಬರ ನಡುವೆ ಸ್ನೇಹವಿದ್ದರೂ ಆ ವಿಷಯದಲ್ಲಿ ಅಷ್ಟೊಂದು ಕಟ್ಟು ನಿಟ್ಟಾಗಿ ವರ್ತಿಸಿದ್ದಕ್ಕೆ ಪ್ರಭುಗಳಿಗೆ ನನ್ನ ಮೇಲೆ ಮನಸ್ತಾಪ ಉಂಟಾಗಿದ್ದನ್ನು ಗುರುತಿಸಬಹು ದಾಗಿತ್ತು. ಒಂದೆರಡು ದಿನಗಳಲ್ಲಿ ಅವರ ತಂದೆ ತೀರಿಕೊಂಡರು.

ತತ್ಸಂಬಂಧವಾಗಿ ಪ್ರಭುಗಳು ತಮ್ಮ ತಂದೆಯ ಶಿವಗಣಾರಾಧನೆ ಸಮಾರಂಭವನ್ನು ಏರ್ಪಡಿಸಿದರು. ಅದಕ್ಕೆ ನನ್ನನ್ನೂ ಆಹ್ವಾನಿಸಿ, ಆ ದಿನ ಭಾಗವಹಿಸಲೇ ಬೇಕೆಂದು ಆಗ್ರಹ ಪಡಿಸಿದರು. ಮೊದಲೇ ವ್ಯಗ್ರ ಮನಸ್ಕರಾಗಿದ್ದ ಅವರನ್ನು ಸಂತುಷ್ಟ ಪಡಿಸುವ ಸಲುವಾಗಿ ನಾನೂ ಹೋಗಿದ್ದೆ. ಅಂದಿನ ವಿಧಿ ವಿಧಾನಗಳೆಲ್ಲಾ ಶಾಸ್ತ್ರೋಕ್ತವಾಗಿ ಜರುಗಿ ಭೋಜನ ಸಮಾರಂಭವೂ ಮುಗಿಯಿತು. ಮಹದೇವ ಪ್ರಭುಗಳು ನೆರೆದಿದ್ದ ಬಂಧು ಬಾಂಧವರನ್ನು ಉದ್ದೇಶಿಸಿ ಅವರ ಪೂಜ್ಯ ತಂದೆಯವರ ಬಗೆಗೆ ಒಂದೆರಡು ಮಾತಾಡುವುದಾಗಿ ಎದ್ದು ನಿಂತರು. ಅವರ ಬಗೆಗಿದ್ದ ಪ್ರೀತ್ಯಾದರ ಹಾಗೂ ಸಮಾಜದಲ್ಲಿ ಗಳಿಸಿಕೊಂಡಿದ್ದ ಸ್ಥಾನ ಮಾನಗಳ ಬಗೆಗೆ ಉದ್ವೇಗ ಭರಿತರಾಗಿ ಮಾತನಾಡಿದರು. ಆದರೆ ಅವರ ಕೊನೆ ದಿನಗಳಲ್ಲಿ ಊರಿನ ಆಸ್ಪತ್ರೆಯಲ್ಲಿ ಸರಿಯಾದ ಅನುಕೂಲ ಗಳನ್ನೊದಗಿಸಿ ಉಪಚರಿಸಲು ಸಾಧ್ಯವಾಗದ ಪರಿಸ್ಥಿತಿಯ ಬಗೆಗೆ ವಿಷಾದದ ಮಾತುಗಳನ್ನಾಡಿ ದರು. ಆ ಬಗೆಗೆ ನನಗೂ ಅವರಿಗೂ ನಡೆದ ತರ್ಕ ವಿತರ್ಕಗಳನ್ನು ಪ್ರಸ್ತಾಪಿಸಲು ಮರೆಯಲಿಲ್ಲ; ಆದರೆ ವೈಯಕ್ತಿಕವಾಗಿ ನನ್ನ ಮೇಲೆ ದೋಷಾರೋಪಣೆ ಮಾಡಲಿಲ್ಲ, ಬದಲಿಗೆ ನನ್ನ ಕರ್ತವ್ಯ ಪರತೆಯ ಬಗೆಗೆ ಪ್ರಶಂಸೆಯ ಮಾತುಗಳನ್ನೇ ಆಡಿದರು. ಆ ಹಿನ್ನೆಲೆಯಲ್ಲಿ ತಮ್ಮ ತಂದೆಯ

ಜ್ಞಾಪಕಾರ್ಥ ಸರ್ಕಾರಿ ಆಸ್ಪತ್ರೆಯಲ್ಲಿ ಸ್ಪೆಷಲ್ ವಾರ್ಡ್‌ನ್ನು ಕಟ್ಟಿಸಿ ಕೊಡುವ ತಮ್ಮ ನಿರ್ಧಾರವನ್ನು ಪ್ರಕಟಿಸಿದರು. ಅಲ್ಲದೆ ಅವರ ಹಿಂಭಾಗದಲ್ಲಿ ದೊಡ್ಡ ಹರಿವಾಣವೊಂದರಲ್ಲಿ ಕಲಾತ್ಮಕವಾಗಿ ಜೋಡಿಸಿದ್ದ ಹತ್ತು ಸಾವಿರ ರೂಪಾಯಿ ನೋಟುಗಳನ್ನು ನನ್ನತ್ತ ಹಿಡಿದು ಸ್ವೀಕರಿಸ ಬೇಕೆಂದು ಕೇಳಿಕೊಂಡರು. ಆ ಬಗೆಗೆ ಯಾವುದೇ ಮುನ್ಸೂಚನೆ ನನಗಿರಲಿಲ್ಲವಾದ್ದರಿಂದ ಏನು ಮಾಡಬೇಕೆಂಬುದು ತತ್‌ಕ್ಷಣ ಹೊಳೆಯಲಿಲ್ಲ. ಆದರೂ ಸಾವರಿಸಿಕೊಂಡು ಹರಿವಾಣವನ್ನು ಕೈಗೆ ತೆಗೆದುಕೊಂಡೆ. ಸರ್ಕಾರಿ ಅಧಿಕಾರಿಗಳು ಮೇಲಧಿಕಾರಿಗಳ ಒಪ್ಪಿಗೆ ಪಡೆಯದೇ ಆ ರೀತಿಯಲ್ಲಿ ಸಾರ್ವಜನಿಕರಿಂದ ಹಣ ಸ್ವೀಕರಿಸಬಾರದೆಂಬ ನಿಯಮವಿರುವುದರ ಅರಿವು ನನಗಿತ್ತು. ಅದರಿಂದ ಸಾರ್ವಜನಿಕರೆದುರೇ ಪ್ರಭುಗಳಿಗೆ ಆ ಹರಿವಾಣವನ್ನು ಹಿಂತಿರುಗಿಸಿ, ಮೇಲಧಿಕಾರಿಗಳಿಂದ ಒಪ್ಪಿಗೆ ಬಂದ ನಂತರ ಮತ್ತೆ ಸ್ವೀಕರಿಸುವ ಭರವಸೆ ಇತ್ತೆ.

ಆ ದಿನವೇ ಮೈಸೂರಿನ ಡಿ.ಎಚ್.ಓ. ಅವರಿಗೆ ವಿಷಯವನ್ನು ತಿಳಿಸಿದೆ. ನಾನು ನಡೆದು ಕೊಂಡ ರೀತಿಯ ಬಗೆಗೆ ಮೆಚ್ಚುಗೆ ವ್ಯಕ್ತ ಪಡಿಸಿದರು. ಪ್ರಭುಗಳು ತಮ್ಮ ಇರಾದೆಯನ್ನು ಇಲಾಖಾ ನಿರ್ದೇಶಕರಿಗೆ ಲಿಖಿತ ಮೂಲಕ ತಿಳಿಸುವಂತೆ ಹೇಳಿದರು. ಅವರಿಂದ ಪರವಾನಿಗೆ ಬಂದ ನಂತರ ಅದನ್ನು ಸರ್ಕಾರಿ ಖಜಾನೆಗೆ ಡಿಪಾಸಿಟ್ ಮಾಡುವ ಏರ್ಪಾಡು ಮಾಡಲಾಗುತ್ತದೆಂದರು. ಮುಂದಿನ ಕೆಲವೇ ದಿನಗಳಲ್ಲಿ ಆ ವ್ಯವಸ್ಥೆ ಸರಾಗವಾಗಿ ಜರುಗಿತು. ಆದರೂ ಪ್ರಚಲಿತ ಅಧಿಕಾರ ಶಾಹಿಯ ವಿಲಕ್ಷಣ ರೀತಿಯ ಕಾರ್ಯವಿಧಾನದಿಂದ ವಾರ್ಡ್ ನಿರ್ಮಾಣ ಹಲವು ವರ್ಷಗಳು ಮುಂದೆ ಹೋಗುವಂತಾಯಿತು. ನಿರ್ಮಾಣ ವೆಚ್ಚ ಮೊದಲಿನ ಅಂದಾಜಿಗಿಂತ ದುಪ್ಪಟ್ಟು ಏರಿಕೆ ಯಾಯಿತು. ಮಹದೇವ ಪ್ರಭುಗಳು ಇನ್ನೂ ಹತ್ತೆಂಟು ಸಾವಿರ ರೂಪಾಯಿಗಳನ್ನು ತುಂಬ ಬೇಕಾಯಿತಂತೆ. ಅಷ್ಟರಲ್ಲೇ ನನಗೂ ವರ್ಗಾವಣೆಯಾಗಿತ್ತು. ಎರಡು ಕೊಠಡಿಗಳ ವಾರ್ಡು ೧೯೭೭ರಲ್ಲಿ ತಯಾರಾಯಿತು. ಅದರ ನಿರ್ಮಾಣಕ್ಕೆ ಒಂದು ರೀತಿಯಲ್ಲಿ ಕಾರಣವಾಗಿದ್ದ ನಾನು ಉದ್ಘಾಟನೆಯ ದಿನ ಹಾಜರಿರಲೇ ಬೇಕೆಂದು ಪತ್ರ ಬರೆದು ಒತ್ತಾಯಿಸಿದ್ದರು. ರಾಜ್ಯ ಸರ್ಕಾರ ಸಚಿವರೊಬ್ಬರು, ಮತ್ತು ಅವರ ಮಠದ ಗುರುಗಳೊಬ್ಬರ ಸಮ್ಮುಖದಲ್ಲಿ ಜರುಗಿದ ಸಮಾರಂಭ ದಲ್ಲಿ ಹಾಜರಿದ್ದೆ. ವಾರ್ಡ್ ನಿರ್ಮಾಣವಾದ ಹಿನ್ನೆಲೆಯನ್ನು ಪ್ರಭುಗಳು ವಿವರಿಸಿ, ನನಗೆ ಸನ್ಮಾನ ಮಾಡಿದರು.

## ಮತ್ತೆ ಸೇವಾ ಹಿರಿತನದ ಪೇಚು

ಕೊಳ್ಳೇಗಾಲದಲ್ಲಿ ಕಾರ್ಯ ನಿರ್ವಹಿಸುವುದಕ್ಕಾರಂಭಿಸಿ ಮೂರು ವರ್ಷಗಳಷ್ಟಾಗಿರ ಬಹುದು. ಆಸ್ಪತ್ರೆಯ ಹಲವು ವಿಧಗಳಲ್ಲಿ ಮುನ್ನಡೆಸಿ, ಚಿಕಿತ್ಸಾ ವಿಧಾನಗಳನ್ನು ಉತ್ತಮ ಮಟ್ಟಕ್ಕೆ ಏರಿಸಲು ಸಾಧ್ಯವಾಗಿತ್ತು; ಜನಪ್ರಿಯತೆಯೂ ಉತ್ತುಂಗ ಮಟ್ಟಕ್ಕೇರಿತ್ತು. ಹಿಂದಿನ ವರ್ಷದ ಆಯ-ವ್ಯಯದ ಬಗೆಗೆ, ವಿಧಾನ ಸಭೆಯಲ್ಲಿ ರಾಜ್ಯಾದ್ಯಂತದ ಆಸ್ಪತ್ರೆಗಳು ಮತ್ತು ವೈದ್ಯರ ಕಾರ್ಯ ವೈಖರಿಯ ಬಗೆಗೆ ಕಟು ಟೀಕೆಗಳಾದವಂತೆ. ಆದರೆ ಕೊಳ್ಳೇಗಾಲದ ವಿಧಾನ ಸಭಾ ಸದಸ್ಯರು ನಮ್ಮ ಆಸ್ಪತ್ರೆಯು ಕಾರ್ಯ ನಿರ್ವಹಿಸುತ್ತಿರುವ ರೀತಿ ಹಾಗೂ ವೈದ್ಯಾಧಿಕಾರಿಯಾದ ನನ್ನ ಬಗೆಗೂ ಮುಕ್ತ ಕಂಠದಿಂದ ಮೆಚ್ಚುಗೆಯ ಮಾತುಗಳನ್ನಾಡಿದ್ದರಂತೆ. ವಿಧಾನ ಸಭೆಯಲ್ಲಿ ಆ ದಿನ ಹಾಜರಿದ್ದ ಡಾ॥ ಎಂ. ರಾಜಶೇಖರಪ್ಪನವರು ಮುಂದಿನ ಸಾರಿ ಭೇಟಿಯಾದಾಗ ಆ ವಿಷಯ ತಿಳಿಸಿ ಅಭಿನಂದಿಸಿದ್ದರು. ಆ ವರ್ಷ ನಮ್ಮ ಊರ ಕಡೆಯ ಆಸ್ಪತ್ರೆಯೊಂದಕ್ಕೆ ವರ್ಗ ಮಾಡಿಸಿಕೊಳ್ಳುವ ಬಗೆಗೆ ಪ್ರಯತ್ನ ನಡೆಸಿದ್ದೆ. ವಿಷಯ ತಿಳಿದ ವಿಧಾನ ಸಭಾ ಸದಸ್ಯ ಎಚ್. ನಾಗಪ್ಪನವರು ಆಗಿನ

ಮುಖ್ಯಮಂತ್ರಿಗಳನ್ನು ಭೇಟಿ ಮಾಡಿ ಹಾಗಾಗದಂತೆ ನೋಡಿಕೊಂಡಿದ್ದರಂತೆ. ಹೀಗೆ ಅಲ್ಲಿಯ ಕಾರ್ಯಕ್ಷೇತ್ರದಲ್ಲಿ ಉತ್ತುಂಗ ಮಟ್ಟದಲ್ಲಿರುವಾಗಲೇ ಡಾ॥ ಜೈಬುನ್ನೀಷಾ ಬೇಗಂ ಎಂಬವರು ಅಲ್ಲಿಯ ಮಹಿಳಾ ವೈದ್ಯರ ಜಾಗಕ್ಕೆ ವರ್ಗವಾಗಿ ಬಂದರು. ಕಾಲೇಜಿನ ವಿದ್ಯಾಭ್ಯಾಸ ಮತ್ತು ಪ.ಸ.ಕ. ಆಯ್ಕೆ ಎರಡರಲ್ಲೂ ಹಿರಿತನದಲ್ಲಿ ಅವರು ನನಗಿಂತಲೂ ಮೇಲಿದ್ದವರೆ. ಅವರ ವಿಷಯದಲ್ಲಿ ವೈಯಕ್ತಿಕವಾಗಿ ಯಾವುದೇ ದ್ವೇಷ ಭಾವನೆಗಳಿರಲಿಲ್ಲ. ಅವರ ವರ್ಗಾವಣೆಯ ಆದೇಶದಲ್ಲಿ ಅವರನ್ನೇನು ನನ್ನ ಬದಲಿಗೆ ಮೆಡಿಕಲ್ ಆಫೀಸರ್ ಎಂದು ಅಂಕಿತ ಮಾಡಿರಲಿಲ್ಲ. ಆದರೂ ಆ ಸ್ಥಾನ ಪಡೆಯಲು ಅದಾಗಲೇ ನೇರವಾಗಿ ಡಿ.ಎಚ್.ಓ. ಮೂಲಕ ಇಲಾಖೆಗೆ ಮನವಿ ಮಾಡಿಕೊಂಡಂತಿತ್ತು. ವಿಷಯ ತಿಳಿದ ನಂತರ ನನ್ನನ್ನು ಬೇರೆ ಕಡೆಗೆ ವರ್ಗಾಯಿಸಬೇಕೆಂದು ಇಲಾಖೆಗೆ ಅರ್ಜಿ ಸಲ್ಲಿಸಿದ್ದೆ. ಸ್ವತಃ ಡಾ॥ ಬೇಗಂ ಅವರ ಬಗೆಗೆ ವಿರೋಧವಿರದಿದ್ದರೂ ಆ ತನಕ ಸಂಸ್ಥೆಯ ಆಡಳಿತಾಧಿಕಾರಿಯಾಗಿದ್ದು, ಮತ್ತೆ ಅಲ್ಲಿ ಇನ್ನೊಬ್ಬರ ಅಡಿಯಾಳಾಗಿರುವುದು ಅದು ಏಕೋ ಸರಿಯೆನಿಸಲಿಲ್ಲ; ಬಹುಶಃ ಹಿಂದಿರುಗಿ ನೋಡಿದರೆ ಆಗ ನಾನಿದ್ದ ಸ್ಥಿತಿಯಲ್ಲಿ ಸ್ವಪ್ರತಿಷ್ಠೆಯ ಪ್ರಭಾವ ನನ್ನ ಮನಸ್ಸಿನಲ್ಲಿ ಕೆಲಸ ಮಾಡಿರಬೇಕು. ನಾನು ವರ್ಗಾವಣೆಗೆ ಇಲಾಖೆಗೆ ಅರ್ಜಿ ಸಲ್ಲಿಸಿದ್ದು ಕೆಲವು ಸಾರ್ವಜನಿಕರ ಗಮನಕ್ಕೂ ಬಂದಿರಬೇಕು. ಹಲವರು ನನ್ನನ್ನು ಭೇಟಿಯಾಗಿ ಆ ದಿಸೆಯಲ್ಲಿ ಮುಂದುವರಿಯ ಬಾರದೆಂದು ಒತ್ತಡ ತರಲಾರಂಭಿಸಿದರು. ವಿಧಾನ ಸಭಾ ಸದಸ್ಯ ನಾಗಪ್ಪನವರೂ ಸಹ ಇಲಾಖೆಯ ವರಿಷ್ಠರನ್ನು ಭೇಟಿಯಾಗಿ ಹೊಸದಾಗಿ ಬಂದಿದ್ದ ಡಾ॥ ಬೇಗಂ ಅವರನ್ನು ಬೇರೆ ಕಡೆ ವರ್ಗಾಯಿಸಲು ಕೇಳಿಕೊಂಡರಂತೆ. ಆದರೆ ಅವರು ಅಲ್ಲಿಗೆ ಬಂದು ಕೆಲವೇ ದಿನಗಳಾದುದರಿಂದ ಹಾಗೆಲ್ಲಾ ಅಕಾಲಿಕ ವರ್ಗಾವಣೆ ಮಾಡುವುದು ಕಾನೂನಿಗೆ ವಿರೋಧ ವಾಗುತ್ತದೆಂದು ಸಮಜಾಯಿಷಿ ನೀಡಿದರಂತೆ. ಪ್ರಸ್ತುತ ಇರುವ ವೈದ್ಯಾಧಿಕಾರಿಗಳನ್ನು ಅಲ್ಲೇ ಉಳಿಸಿಕೊಳ್ಳಲೇ ಬೇಕೆಂದರೆ ಆಸ್ಪತ್ರೆಯನ್ನು ಪುರುಷರು ಮತ್ತು ಮಹಿಳೆಯರ ವಿಭಾಗ ಗಳಾಗಿ ವಿಂಗಡಿಸಿ ಇಬ್ಬರೂ ಸ್ವತಂತ್ರವಾಗಿ ಕಾರ್ಯ ನಿರ್ವಹಿಸುವ ಏರ್ಪಾಡು ಮಾಡಬಹುದೆಂದ ರಂತೆ. ಕೆಲವು ತಿಂಗಳ ಹಿಂದೆ ಆರೋಗ್ಯ ಇಲಾಖಾ ನಿರ್ದೇಶಕರಾದ ಡಾ॥ ಶ್ಯಾಮಾ ಶಾಸ್ತ್ರಿಗಳು ನಮ್ಮ ಆಸ್ಪತ್ರೆಗೆ ಭೇಟಿ ಇತ್ತು ಅಲ್ಲಿಯ ಕೆಲಸ ಕಾರ್ಯ ಹಾಗೂ ಪ್ರಗತಿಯನ್ನು ಅಜಮಾಯಿಶಿ ದ್ದರು; ಹಾಗೂ ಒಂದು ದಿನ ಅಲ್ಲೇ ತಂಗಿದ್ದರು. ಅಂದು ಪ್ರವಾಸಿ ಮಂದಿರದಲ್ಲಿ ಭೇಟಿ ಯಾದಾಗ ಆಸ್ಪತ್ರೆಯ ಕಾರ್ಯ ವಿಧಾನಗಳ ಬಗೆಗೆ ಮೆಚ್ಚಿಗೆ ವ್ಯಕ್ತಪಡಿಸಿದ್ದಲ್ಲದೆ, ನನ್ನ ವೈಯಕ್ತಿಕ ಹಿನ್ನೆಲೆ, ಮುಂದೇನಾದರೂ ಯೋಜನೆಗಳ ಆಲೋಚನೆ ನನಗಿದೆಯೇ ಎಂದು ವಿಚಾರಿಸಿದ್ದರು. ನಾನು ಇಷ್ಟ ಪಡುವುದಾದರೆ ಡಿ.ಪಿ.ಎಚ್. ಕೋರ್ಸಿಗೆ (ಡಿಪ್ಲೋಮಾ ಇನ್ ಪಬ್ಲಿಕ್ ಹೆಲ್ತ್) ಕಲ್ಕತ್ತೆಗೆ ಆಯ್ಕೆ ಮಾಡಿ ಕಳುಹಿಸುವ ಅಭಿಪ್ರಾಯ ವ್ಯಕ್ತಪಡಿಸಿದ್ದರು; ಅದರಿಂದ ಇಲಾಖೆಯಲ್ಲಿ ನನ್ನ ಸ್ಥಾನಮಾನಗಳು ಉತ್ತಮಗೊಳ್ಳುವ ಅವಕಾಶಗಳುಂಟಾಗುತ್ತದೆಂಬ ಆಮಿಷವನ್ನೂ ಒಡ್ಡಿದ್ದರು. (ನಾನು ಗಳಿಸಿಕೊಂಡಿರುವ ಪದವಿಗಳಿಗೆ ಸೂಕ್ತ ಸ್ಥಾನ ದೊರೆಯದಿರುವ ಹಿನ್ನೆಲೆಯಲ್ಲಿ) ಅವರ ಪ್ರಸ್ತಾವವನ್ನು ವಿನಯದಿಂದಲೇ ನಿರಾಕರಿಸಿದ್ದೆ. ಕೊಳ್ಳೇಗಾಲಕ್ಕೆ ಬಂದಾಗ ನನ್ನ ಬಗೆಗೆ ಉಂಟಾಗಿರಬಹುದಾದ ಸದಭಿಪ್ರಾಯದಿಂದ ಬಹುಶಃ ಆಸ್ಪತ್ರೆಯನ್ನು ಇಬ್ಭಾಗ ಮಾಡುವ ಸಲಹೆ ಮುಂದಿಟ್ಟಿರಬಹುದೇನೋ. ಆಸ್ಪತ್ರೆಯನ್ನು ಒಂದು ಹಂತಕ್ಕೆ ತಂದ ನನ್ನೆದುರಿಗೆ ಇಬ್ಭಾಗವಾಗಿ ಅಧೋಗತಿಗಿಳಿಯುವುದು ನನ್ನ ಉದ್ದೇಶವಲ್ಲದ್ದರಿಂದ ಆ ಪ್ರಸ್ತಾಪವನ್ನು ನಿರಾಕರಿಸಿದ್ದೆ.

ವರ್ಗಾವಣೆ ಸುಲಭವಾಗಿ ಆಗಲಾರದೆಂಬ ಅನುಮಾನ ಉಂಟಾಗಿ ದೀರ್ಘಕಾಲದ ರಜೆ ಮಂಜೂರು ಮಾಡುವಂತೆ ಅರ್ಜಿ ಸಲ್ಲಿಸಿದೆ. ಈ ವಿಷಯ ತಿಳಿದ ಪಕ್ಕದ ಯಳಂದೂರು ಕ್ಷೇತ್ರದ ವಿಧಾನ ಸಭಾ ಸದಸ್ಯರಾದ ಬಸವಯ್ಯನವರು ಅದೇ ಮೊದಲ ಸಾರಿಗೆ ಭೇಟಿಯಾದರು. ಆಗಿನ ಆರೋಗ್ಯ ಸಚಿವರಲ್ಲಿ ಅವರು ಹೆಚ್ಚಿನ ಪ್ರಭಾವ ಬೀರುವ ಸಾಧ್ಯತೆ ಇರುವುದರಿಂದ, ಕೊಳ್ಳೇಗಾಲ ಆಸ್ಪತ್ರೆಯಲ್ಲಾಗಿರುವ ಬದಲಾವಣೆಗಳನ್ನು ಸರಿಪಡಿಸುವುದಾಗಿಯೂ ಆ ಸಲುವಾಗಿ ನಾನೇನೂ ತಿರುಗಾಟ ಮಾಡಬೇಕಿಲ್ಲವೆಂದು ಹೇಳಿ ರಜೆಯ ಮೇಲೆ ತೆರಳದಂತೆ ಒತ್ತಾಯ ಹೇರಿದರು. ಹಿಂದೆಂದೂ ನನ್ನ ಸಂಪರ್ಕಕ್ಕೆ ಬಾರದಿದ್ದ ಪಕ್ಕದ ತಾಲ್ಲೂಕಿನ ಮುಖಂಡರೊಬ್ಬರು ಅಷ್ಟೊಂದು ಕಾಳಜಿ ವಹಿಸುತ್ತಿರುವಾಗ ಆ ದಿಸೆಯಲ್ಲಿ ಮುಂದುವರಿಯುವುದು ಸಾಧುವಲ್ಲ ವೆನಿಸಿತು. ಡಾ|| ಜೈಬುನ್ನಿಷಾ ಬೇಗಂ ಅವರಿಗೆ ಮುಂದಿನ ೩-೪ ವಾರಗಳಲ್ಲಿ ಬೇರೊಂದು ಆಸ್ಪತ್ರೆಗೆ ವರ್ಗವಾಯಿತು!

## ಸೇನಾಧಿಕಾರಿಗೆ ತುರ್ತು ಚಿಕಿತ್ಸೆ

ಕೊಳ್ಳೇಗಾಲ - ಮದ್ರಾಸು ಪ್ರಾಂತ್ಯದ ಗಡಿ ಪ್ರದೇಶದಲ್ಲಿ ಗಾಣಿಗಮಂಗಲ ವೆಂಬ ನಿರ್ಜನ ಪ್ರದೇಶವೊಂದಿದೆ. ಮಿಲಿಟರಿಯವರು ಬಂದೂಕಿನ ಗುರಿ ತರಬೇತಿಗಾಗಿ ಆಯ್ಕೆ ಮಾಡಿಕೊಂಡ ಪ್ರದೇಶ ಅದು (Shooting Range). ವರ್ಷದಲ್ಲಿ ಹಲವಾರು ಸಾರಿ ಮಿಲಿಟರಿ ಟ್ರಕ್ಕುಗಳು ಸಾಲುಸಾಲಾಗಿ ಆ ಕಡೆ ಸಾಗುವುದನ್ನು ನಿಬ್ಬೆರಗಾಗಿ ನೋಡುವುದನ್ನು ಬಿಟ್ಟರೆ, ಅಲ್ಲೇನಾಗುತ್ತದೆಂಬುದರ ಸ್ಪಷ್ಟ ಚಿತ್ರಣ ಅಲ್ಲಾರಿಗೂ ಇರುವುದಿಲ್ಲ. ಸುಮಾರು ಒಂದೂವರೆ ವರ್ಷದ (ಜುಲೈ ೧೯೬೮) ಒಂದು ರಾತ್ರಿ ಎರಡು ಗಂಟೆ ಸಮಯಕ್ಕೆ ಹಲವಾರು ಮಿಲಿಟರಿ ವಾಹನಗಳು ಆಸ್ಪತ್ರೆಯ ಆವರಣದೊಳಗೆ ಧಾವಿಸಿ ಬಂದವು. ಆಸ್ಪತ್ರೆಯಿಂದ ನನಗೂ ತುರ್ತು ಕರೆ ಬಂದಿತು; ಕೂಡಲೇ ಧಾವಿಸಿದೆ. ಸುಮಾರು ೪೫-೫೦ ವರ್ಷ ವಯಸ್ಸಿನ ಮೇಜರ್ ಹುದ್ದೆಯ ಘೋ... ಎಂಬ ಉನ್ನತಾಧಿಕಾರಿ ಎದೆ ನೋವಿನಿಂದ ಒದ್ದಾಡುತ್ತಿದ್ದರು. ಅವರನ್ನು ವಿವರವಾಗಿ ಪರೀಕ್ಷೆಗೊಳಪಡಿಸಿದೆ. ತೀವ್ರ ಹೃದಯಾಘಾತ ಉಂಟಾಗಿರುವ ಲಕ್ಷಣಗಳಿರುವಂತಿದ್ದವು. ಆದರೆ ಖಚಿತಪಡಿಸಲು ನಮ್ಮಲ್ಲಿ ಇ.ಸಿ.ಜಿ.(E.C.G.) ಯಂಥ ಸಲಕರಣೆ ಇರಲಿಲ್ಲ. ಮೇಲಾಗಿ ನನ್ನಲ್ಲೂ ಅಂಥ ತಜ್ಞತೆಯೂ ಇರಲಿಲ್ಲ. ಪುರುಷರ ವಾರ್ಡಿನಲ್ಲಿ ಪ್ರತ್ಯೇಕವಾಗಿದ್ದ ಕೊಠಡಿಯಲ್ಲಿ ಅವರನ್ನಿಟ್ಟು ಚಿಕಿತ್ಸೆ ಆರಂಭಿಸಿದೆ. ಎದೆ ನೋವಿನ ಪರಿಹಾರಕ್ಕೆ ಇಂಜಕ್ಷನ್, ಸಾಮಾನ್ಯ ಸ್ಥಿತಿಯನ್ನು ಸುಧಾರಿಸಲು ಗ್ಲೂಕೋಸ್ ಮುಂತಾದ ಬೆಂಬಲೋಪಚಾರಗಳನ್ನು ಅಳವಡಿಸಿದೆ. ಅವರ ಪರಿಸ್ಥಿತಿಯನ್ನು ಸತತವಾಗಿ ಗಮನಿಸಲು ಪ್ರತ್ಯೇಕ ಸಿಬ್ಬಂದಿಗಳನ್ನು ನೇಮಿಸಿದೆ. ಮರುದಿನ ಬೆಳಿಗ್ಗೆ ಕುಷ್ಠರೋಗ ಆಸ್ಪತ್ರೆಯಲ್ಲಿನ ತರಬೇತಿ ಪಡೆದ ದಾದಿಯೊಬ್ಬರನ್ನು ಅವರ ಪರಿಸ್ಥಿತಿಯನ್ನು ಗಮನವಿಟ್ಟು ನೋಡಿಕೊಳ್ಳಲು ನೇಮಕ ಮಾಡಿಸಿದೆ.

ಮೇಜರ್ ಘೋ... ಅವರು ಗಾಣಿಗ ಮಂಗಲದಲ್ಲಿ ಜರುಗುವ ಕಾರ್ಯಾಚರಣೆಗಳ ಮುಖ್ಯ ಅಧಿಕಾರಿ. ಆ ಜವಾಬ್ದಾರಿಯನ್ನವರೀಗ ನಿರ್ವಹಿಸುವ ಸ್ಥಿತಿಯಲ್ಲಿರದಿದ್ದುದರಿಂದ ಲೆಫ್ಟಿನೆಂಟ್ ಲೇ... ಎಂಬುವರು ಅವರ ಚಾರ್ಜನ್ನು ವಹಿಸಿಕೊಂಡರು. ಆಸ್ಪತ್ರೆ ಆವರಣದಲ್ಲೇ ವೈರ್‌ಲೆಸ್ ವ್ಯವಸ್ಥೆಯನ್ನು ಸ್ಥಾಪಿಸಿ ಬೆಂಗಳೂರಿನ ಮಿಲಿಟರಿ ಆಸ್ಪತ್ರೆಗೆ ಸಂಪರ್ಕ ಕಲ್ಪಿಸಿಕೊಂಡರು. ತುರ್ತು ಚಿಕಿತ್ಸಾ ಘಟಕವನ್ನು ಕೂಡಲೇ ಕೊಳ್ಳೇಗಾಲಕ್ಕೆ ರವಾನಿಸುವ ಏರ್ಪಾಡು ಮಾಡ ತೊಡಗಿದರಂತೆ. ಅಂದಿನ ಸಾಯಂಕಾಲದ ಹೊತ್ತಿಗೆ ಸುಸಜ್ಜಿತ ಆಂಬುಲೆನ್ಸ್ ವಾಹನದಲ್ಲಿ

ಪರಿಣಿತರು ಬಂದಿಳಿದರು. ಅವರೂ ಸಹ ಹೃದಯಾಘಾತವೇ ಆಗಿರಬಹುದೆಂದು ಖಚಿತ ಪಡಿಸಿಕೊಂಡು, ಅಂದೇ ಮೇಜರ್ ಘೋ... ಅವರನ್ನು ಬೆಂಗಳೂರಿಗೆ ಸಾಗಿಸಿದರು.

ಅವರ ವಾಹನಗಳೆಲ್ಲಾ ನಿರ್ಗಮಿಸಿದ ಒಂದರ್ಧ ಗಂಟೆಯಲ್ಲೇ ಅವರ ಚಾರ್ಜ್ ವಹಿಸಿಕೊಂಡಿದ್ದ ಲೆಫ್ಟಿನೆಂಟ್ ಲೇ...ಯವರು ಬಂದು ಮತ್ತೆ ಭೇಟಿ ಮಾಡಿದರು. ಅವರ ವಾಹನವೊಂದು ದಾರಿಯಲ್ಲಿ ಕೆಟ್ಟುನಿಂತಿರುವುದಾಗಿಯೂ, ದುರಸ್ತಿಗೆ ೫೦ ರೂಪಾಯಿಗಳು ಬೇಕಾಗಿದ್ದು, ಅಷ್ಟನ್ನು ಸಾಲವಾಗಿ ಕೊಟ್ಟರೆ ಬೆಂಗಳೂರಿಗೆ ತಲುಪಿದಾಕ್ಷಣ ಮಣಿಯಾರ್ಡರ್ ಮಾಡುವುದಾಗಿ ದೈನ್ಯದಿಂದ ಕೇಳಲಾರಂಭಿಸಿದರು. ಅಷ್ಟು ದೊಡ್ಡ ಮಿಲಿಟರಿ ವ್ಯವಸ್ಥೆಯವರಿಗೆ ಕೇವಲ ೫೦ ರೂಪಾಯಿಗಳು ಇರಲಿಲ್ಲವೆಂಬುದನ್ನು ನಂಬುವುದಾದರೂ ಹೇಗೆ? ಅವರು ಮೋಸ ಮಾಡುತ್ತಿರಬಹುದೆಂಬ ಅನುಮಾನ ಉಂಟಾಗದಿರಲಿಲ್ಲ; ಆದರೂ ರಾಷ್ಟ್ರದ ರಕ್ಷಣಾ ಪಡೆಯಲ್ಲಿರುವವರು ಕಷ್ಟದ ಪರಿಸ್ಥಿತಿಯಲ್ಲಿದ್ದಾಗ ಸಹಾಯ ಮಾಡುವುದು ನನ್ನ ಆದ್ಯ ಕರ್ತವ್ಯವೆಂದು ಹಣವನ್ನು ಕೊಟ್ಟೆ. ಮುಂದೆ ಒಂದೆರಡು ತಿಂಗಳು ಉರುಳಿದರೂ ಹಣ ವಾಪಸು ಬರಲಿಲ್ಲ. ಅದೊಂದು ಮೋಸದ ಪ್ರಸಂಗವೇ ಆಗಿರಬಹುದೆಂದು ಬೆಂಗಳೂರಿನ ಮಿಲಿಟರಿ ಆಸ್ಪತ್ರೆಯ ಮುಖ್ಯಸ್ಥರಿಗೆ ಆ ಬಗೆಗೆ ಪತ್ರ ಬರೆದೆ. ಸಂಬಂಧಿಸಿದ ಅಧಿಕಾರಿ ದೇಶದ ಪೂರ್ವ ವಲಯದಲ್ಲಿ ಕಾರ್ಯ ನಿರತರಾಗಿರುವುದಾಗಿಯೂ, ಕೆಲವೇ ದಿನಗಳಲ್ಲಿ ನನ್ನಿಂದ ಪಡೆದುಕೊಂಡಿರುವ ಹಣವನ್ನು ಹಿಂತಿರುಗಿಸಲಾಗುವುದೆಂದು ಉತ್ತರಿಸಿದ್ದರು. ಹಾಗೂ ಮೇಜರ್ ಘೋ... ಅವರನ್ನು ಯಶಸ್ವಿಯಾಗಿ ನಿಭಾಯಿಸಿದ್ದಕ್ಕೆ ಕೃತಜ್ಞತೆಯನ್ನು ಸಲ್ಲಿಸಿದ್ದರು. ಮುಂದಿನ ೫-೬ ತಿಂಗಳಲ್ಲಿ ನನ್ನ ಹಣ ವಾಪಸು ಬಂದಿತು. ಆದರೆ ನಾನಾಗ ಸಣ್ಣತನ ಪ್ರದರ್ಶಿಸಿದೆನೋ ಎಂಬ ಅಪರಾಧಿ ಭಾವನೆ ಇನ್ನೂ ಕಾಡಿಸುತ್ತಿದೆ.

## ಮೌನವ್ರತದ ಮುನಿಗೆ ಶಸ್ತ್ರ ಚಿಕಿತ್ಸೆ

ಕೊಳ್ಳೇಗಾಲದ ಹತ್ತಿರದ ಬಿಳಿಗಿರಿ ರಂಗನ ಬೆಟ್ಟದಲ್ಲಿ ಸ್ವಾಮಿ ನಿರ್ಮಲಾನಂದಜೀ ಎಂಬುವರು 'ವಿಶ್ವ ಶಾಂತಿನಿಕೇತನ' ಎಂಬ ಆಶ್ರಮ ನಿರ್ಮಿಸಿಕೊಂಡು ಆಧ್ಯಾತ್ಮಿಕ ಜೀವನ ನಡೆಸುತ್ತಿದ್ದರು. 'ಜೆನ್ ಬುದ್ಧಿಸಂ'(Zen Bhuddhism)ನ ತತ್ವಗಳಿಗೆ ಆಕರ್ಷಿತರಾದ ಅವರು ಬಹಳ ವರ್ಷಗಳಿಂದ ಮೌನವ್ರತಧಾರಿಗಳು. ತಮ್ಮ ಅಭಿಪ್ರಾಯಗಳನ್ನು ಕೈಸನ್ನೆ, ಬಾಯಿಸನ್ನೆಗಳಿಂದಲೊ, ಚೀಟಿಗಳಲ್ಲಿ ಬರೆದು ವ್ಯಕ್ತಪಡಿಸುವುದೊ, ಇಲ್ಲವೆ ಧರ್ಮಗ್ರಂಥಗಳ ಪುಟಗಳನ್ನು ತೆರೆದು ವಿಷಯಕ್ಕೆ ಸಂಬಂಧಿಸಿದ ಕಂಡಿಕೆಗಳತ್ತ ಗಮನ ಹರಿಸುವಂತೆ ಮಾಡುತ್ತಿದ್ದರು. ಮಿತ ಆಹಾರ, ಅದರಲ್ಲೂ ಒಣಗಿಸಿದ ದ್ರಾಕ್ಷಿ, ಉತ್ತುತ್ತೆ, ಅಂಜೂರ ಮುಂತಾದವುಗಳ ಸೇವನೆ ಅವರ ಇನ್ನೊಂದು ವೈಶಿಷ್ಟ್ಯ. ಮೈಸೂರು, ಚಾಮರಾಜನಗರದ ವಲಯಗಳಿಂದಲೇ ಅಲ್ಲದೆ ವಿದೇಶಗಳಲ್ಲೂ ಅವರ ಶಿಷ್ಯರಿದ್ದರು. ಬಿಳಿಗಿರಿ ರಂಗನ ಬೆಟ್ಟದ ಸುತ್ತಲ ಆದಿವಾಸಿ ಸೋಲಿಗರ ಏಳಿಗೆಯ ಬಗೆಗೂ ಹೆಚ್ಚಿನ ಆಸಕ್ತಿ ಉಳ್ಳವರಾಗಿದ್ದರು.

ಸ್ವಾಮಿಗಳ ವಿಚಿತ್ರ ರೀತಿಯ ಆಹಾರ ವಸ್ತುಗಳ ಸೇವನೆಯಿಂದಲೋ ಏನೊ ಬಹಳ ಕಾಲದಿಂದ ಮಲಬದ್ಧತೆ ಅವರನ್ನು ಕಾಡಿಸುತ್ತಿತ್ತು. ಪರಿಸ್ಥಿತಿ ಮುಂದುವರಿದು ಮೂಲವ್ಯಾಧಿಯೂ ಅವರಲ್ಲುಂಟಾಯಿತು. ಕೆಲವು ಗಿಡ ಮೂಲಿಕಾ ಮದ್ದುಗಳು, ಪಥ್ಯಾಹಾರಗಳಿಂದ ಕೆಲಸಮಯ ಪರಿಸ್ಥಿತಿಯನ್ನು ಉಪಶಮನಗೊಳಿಸುತ್ತಿದ್ದರೂ, ಮುಂದಿನ ವರ್ಷಗಳಲ್ಲಿ ಪರಿಸ್ಥಿತಿ ವಿಕೋಪಕ್ಕೆ ತಿರುಗುತ್ತಿತ್ತು. ಮೂಲವ್ಯಾಧಿಯ ಮೊಳೆಗಳು ಹೊರ ಚಾಚಲಾರಂಭಿಸಿದವು. ಅವರಿಗೆ

ಪರಿಚಯವಿದ್ದ ಶಿಷ್ಯರು ಮೈಸೂರಲ್ಲಿ ಆಪರೇಷನ್ ಮಾಡಿಸುವಂತೆ ಒತ್ತಾಯ ಮಾಡಿಸುತ್ತಲೂ ಇದ್ದರು. ಕೊಳ್ಳೇಗಾಲಕ್ಕೆ ನಾನು ಬಂದಾಗಿನಿಂದಲೂ ಜರುಗಿಸುತ್ತಿದ್ದ ಆಪರೇಷನ್ ಮತ್ತಿತರ ಚಿಕಿತ್ಸೆಗಳ ಬಗೆಗೂ ಅವರು ಕೇಳಿದ್ದರಂತೆ. ಹತ್ತಿರದ ಆರೋಗ್ಯ ಘಟಕದಲ್ಲಿದ್ದ ಡಾ|| ಅನಂತ ರಾಮಯ್ಯನವರು ಒಂದು ಸಲ ಅವರನ್ನು ನಮ್ಮ ಆಸ್ಪತ್ರೆಗೆ ಕರೆತಂದರು.

ಬಡಕಲು ದೇಹದ ಪೇಲವ ವ್ಯಕ್ತಿಯಾಗಿ ಸ್ವಾಮೀಜಿ ಕಂಡರು. ಆದರದಿಂದ ಬರಮಾಡಿಕೊಂಡು ಅವರ ಬಗೆಗೆ ವಿಚಾರಿಸಿದೆ. ಕೈಸನ್ನೆಯಿಂದಲೇ ಅವರ ಬಗೆಗೆ ವಿಚಾರ ವಿನಿಮಯಗಳಾದವು. ಅವರ ಸಾಮಾನ್ಯ ಆರೋಗ್ಯದ ಸ್ಥಿತಿ ಹಾಗೂ ಮೂಲ ವ್ಯಾಧಿಯ ಬಗೆಗೂ ಪರೀಕ್ಷೆಗಳನ್ನು ಜರುಗಿಸಿದೆ. ಸಾಮಾನ್ಯವಾಗಿ ಆಪರೇಷನ್ ಜರುಗಿಸದೇ ಪಥ್ಯಾಹರಗಳ ನೆರವಿನಿಂದ ಚಿಕಿತ್ಸೆ ಮಾಡುವ ಹಂತ ದಾಟಿದ ಮೂಲವ್ಯಾಧಿ ಅದಾಗಿತ್ತು. ಅಂದರೆ ಪಾಯಖಾನೆ ಮಾಡುವಾಗಲೆಲ್ಲಾ ಮೊಳೆಗಳು ಹೊರಚಾಚಿ ನಂತರ ಒತ್ತಿ ಹಿಂದಕ್ಕೆ ಕಳುಹಿಸುವ ಮೂರನೆ ಹಂತದ ವ್ಯಾಧಿ (Third degree) ಅದಾಗಿತ್ತು. ಅದರ ನಿವಾರಣೆಗೆ ಆಪರೇಷನ್ ಮಾಡಿಸಿಕೊಳ್ಳುವುದೊಂದೇ ಮಾರ್ಗ ಎನ್ನುವುದನ್ನು ಮನದಟ್ಟು ಮಾಡಿದೆ. ಬಹುಶಃ ಅವರಿಗೂ ಅಂತರಂಗದಲ್ಲಿ ಅದೇ ಅಭಿಪ್ರಾಯ ಇದ್ದಂತಿತ್ತು; ಅದೀಗ ಅನಿವಾರ್ಯವೆಂಬುದು ಖಾತ್ರಿಪಟ್ಟ ಮೇಲೆ ಮನಸ್ಸಿಲ್ಲದಿದ್ದರೂ ಒಪ್ಪಲೇ ಬೇಕಾಯಿತು. ನನ್ನ ಮೇಲೆ ವಿಶ್ವಾಸವಿಟ್ಟು ಅಲ್ಲಿಗೆ ಬಂದ ಪರಿಶುದ್ಧ ವ್ಯಕ್ತಿಗೆ ನೆರವಾಗುವುದು ನನ್ನ ಕರ್ತವ್ಯವೆಂದೇನೊ ಭಾವಿಸಿದೆ. ಆದರೆ ಜೀವಮಾನವೆಲ್ಲಾ ಅರೆ ಹೊಟ್ಟೆಯ ಜೀವನ ನಡೆಸಿದ ಸ್ವಾಮಿಗಳ ಆರೋಗ್ಯ ತೃಪ್ತಿಕರವಾಗಿದೆ ಎನ್ನುವಂತೆಯೂ ಇರಲಿಲ್ಲ; ಆಪರೇಷನ್ ತಡೆದುಕೊಳ್ಳುತ್ತಾರೋ ಇಲ್ಲವೊ ಎಂಬ ಅನುಮಾನವೂ ಒಂದು ಕಡೆ ಇತ್ತು. ಆದರೂ ಧೈರ್ಯ ಮಾಡಿ ಮುಂದಿನ ವಾರವೇ ಆಪರೇಷನ್ ಮಾಡತಕ್ಕದೆಂದು ನಿರ್ಧಾರ ಮಾಡಿದೆ.

ನಿಗದಿತ ದಿನ ಸ್ವಾಮೀಜಿಯವರು ಡಾ|| ಅನಂತ ರಾಮಯ್ಯನವರ ಜೊತೆ ಬಂದು ಆಸ್ಪತ್ರೆಗೆ ದಾಖಲಾದರು. ಆ ದಿನವೆಲ್ಲಾ ಅವರ ರಕ್ತ, ಮೂತ್ರ ಹಾಗೂ ಇತರ ಪರೀಕ್ಷೆಗಳು ಜರುಗಿದವು. ಕರುಳನ್ನು ಆದಷ್ಟು ಖಾಲಿಯಾಗಿಟ್ಟುಕೊಳ್ಳಬೇಕೆಂಬ ಉದ್ದೇಶದಿಂದ ಹಿಂದಿನ ದಿನದಿಂದಲೇ ಉಪವಾಸವಿದ್ದರಂತೆ. ಅಲ್ಲದೆ ಪ್ರತಿದಿನವೂ ಎನಿಮಾ ಕೂಡ ತೆಗೆದುಕೊಳ್ಳುತ್ತಿದ್ದರಂತೆ!

ಮರುದಿನ ಬೆಳಿಗ್ಗೆ ಸ್ಪೈನಲ್ ಅರಿವಳಿಕೆ ನೀಡಿ ಆಪರೇಷನ್ ಮಾಡಲಾಯಿತು. ಯಾವುದೇ ತೊಡಕಿಲ್ಲದೆ ಆಪರೇಷನ್ ಜರುಗಿತು. ಸ್ವಾಮೀಜಿಯವರು ತುಂಬಾ ಸಹನೆಯಿಂದ ನಮ್ಮೊಡನೆ ಸಹಕರಿಸಿದರು. ವಾರ್ಡಿಗೆ ಹಿಂದಿರುಗಿದ ಕೆಲ ಸಮಯದ ನಂತರ ನೋವು ಪ್ರಕಟವಾದರೂ ತುಂಬಾ ಗುಟ್ಟು ಮಾಡಿ ಸಹಿಸಿಕೊಂಡರು. ಮುಂದೆ ಅವರು ಹೇಗೆ ನಡೆದುಕೊಳ್ಳಬೇಕೆಂಬುದರ ಬಗೆಗೆ ವಿವರಿಸಿ ಮಧ್ಯಾಹ್ನ ಮನೆಗೆ ಹೋದೆವು.

ಸಾಯಂಕಾಲ ಅವರನ್ನು ನೋಡಲು ಹೋದಾಗ ಆಶ್ಚರ್ಯ ಕಾದಿತ್ತು; ಆಪರೇಷನ್ ಮಾಡಿ ಬ್ಯಾಂಡೇಜ್ ಮಾಡಿದ ಜಾಗವೆಲ್ಲಾ ರಕ್ತಮಯವಾಗಿತ್ತು. ಇಂತಹ ಆಪರೇಷನ್ ಆದವರಿಗೆ ಅಲ್ಪ ಪ್ರಮಾಣದಲ್ಲಿ ರಕ್ತ ಒಸರುವುದು ಸಾಮಾನ್ಯವಾದರೂ ಅವರಿಗೆ ಸ್ವಲ್ಪ ಅತಿಯಾಗಿಯೇ ಆದ ಲಕ್ಷಣಗಳಿದ್ದವು. ಅದು ಹಾಗೇ ಮುಂದುವರಿಯಲು ಬಿಟ್ಟರೆ ಅಪಾಯವಾಗಬಹುದೆಂದು ಭಾವಿಸಿ ಮತ್ತೆ ಆಪರೇಷನ್ ಥಿಯೇಟರ್‌ಗೆ ಕರೆದುಕೊಂಡು ಹೋದೆವು. ಈ ಸಾರಿ ಈಥರ್ ಅರಿವಳಿಕೆ ನೀಡಿ ಪ್ರಜ್ಞೆ ತಪ್ಪಿಸಿದೆವು. ಗಾಯವನ್ನು ಬಿಡಿಸಿ ನೋಡಿದಾಗ ಪರಿಸ್ಥಿತಿಯ ಅರಿವಾಯಿತು. ಆಪರೇಷನ್ ಮುಗಿದ ನಂತರ ಬಟ್ಟೆ ಸುತ್ತಿದ ರಬ್ಬರ್ ನಳಿಕೆಯೊಂದನ್ನು ಆಪರೇಷನ್

ಆದ ಜಾಗದಲ್ಲಿ ರಕ್ತ ಒಸರದಂತೆ ಒತ್ತಡ ಉಂಟು ಮಾಡಲು ತುರುಕಿ ಇಟ್ಟಿದ್ದು, ಜಾರಿಕೊಂಡು ಮೇಲ್ಭಾಗಕ್ಕೆ ಸರಿದು ಕೊಂಡಿತ್ತು! ಸದ್ಯ ರಕ್ತ ಸ್ರಾವ ಮುಂದುವರಿಯುತ್ತಿರಲಿಲ್ಲ. ಮೇಲೆ ಜಾರಿದ ರಬ್ಬರ್ ನಳಿಕೆಯನ್ನು ಹೊರತೆಗೆದು, ಗಾಯವನ್ನು ಶುಚಿ ಮಾಡಲಾಯಿತು. ಹಾಗೂ ಮತ್ತೊಂದು ರಬ್ಬರ್ ನಳಿಕೆಯನ್ನಿಟ್ಟು ಬ್ಯಾಂಡೇಜು ಮಾಡಿ ವಾರ್ಡಿಗೆ ಹಿಂದಿರುಗಿಸಿದೆವು.

ವಾರ್ಡಿನಲ್ಲಿ ಎಚ್ಚರವಾದಾಗ, ರಬ್ಬರ್ ನಳಿಕೆ ಜಾರಿ ಮೇಲೆ ಹೋಗಿದ್ದರಿಂದ ರಕ್ತ ಸ್ರಾವವಾಗಿತ್ತೆಂಬುದನ್ನು ಅವರ ಗಮನಕ್ಕೆ ತರಲಾಯಿತು. ಸ್ವಾಮಿಗಳು ಮುಗುಳ್ನಕ್ಕು ಅವರ ಸಂಜ್ಞಾ ಭಾಷೆಯಲ್ಲಿ ವಿವರಿಸತೊಡಗಿದರು. ಮಧ್ಯಾಹ್ನ ನಾವೆಲ್ಲಾ ಮನೆಗಳಿಗೆ ಹಿಂತಿರುಗಿದ ನಂತರ ಮಲ ವಿಸರ್ಜನೆ ಮಾಡುವ ತೀವ್ರ ಒತ್ತಡ ಉಂಟಾಯಿತಂತೆ; ಮಂಚದ ತುದಿಯಲ್ಲಿ ಒಂದು ಸಾರಿ ಆಸನ ಊರಿ ಕುಳಿತುಕೊಂಡರಂತೆ. ಸ್ವಲ್ಪ ಸಮಯದಲ್ಲೇ ಒತ್ತಡ ಕಮ್ಮಿಯಾದ್ದರಿಂದ ಮತ್ತೆ ಮಲಗಿದರಂತೆ! ಅನಿರೀಕ್ಷಿತವಾಗಿ ಹೆಚ್ಚು ರಕ್ತ ಒಸರಿದ್ದರ ಗುಟ್ಟು ರಟ್ಟಾಯಿತು. ಬಹುಶಃ ನಮ್ಮ ನಡುವೆ ಸರಿಯಾದ ಸಂವಹನೆಯ ಕೊರತೆ ಇದ್ದುದರಿಂದ ಹಾಗೇ ಎದ್ದು ಕುಳಿತುಕೊಳ್ಳಬಾರ ದೆಂದು ನೇರವಾಗಿ ಹೇಳಿರಲಾರೆವು. ಅವರೂ ಬಾಯಿ ಬಿಟ್ಟು ಎಲ್ಲಾ ವಿಚಾರಗಳ ಬಗೆಗೆ ಕೇಳಿರಲೂ ಇಲ್ಲ. ಅಂತೂ ಸರಿಯಾದ ಸಮಯದಲ್ಲಿ ಪರಿಸ್ಥಿತಿಯ ಅರಿವಾದ್ದರಿಂದ ಜರುಗುವ ಅನಾಹುತ ತಪ್ಪಿತ್ತೆಂದು ನಿರಾಳವಾಗಿ ಉಸಿರಾಡುವಂತಾಯಿತು. ಆ ಸಮಯದಲ್ಲಿ ನಮ್ಮ ಆಸ್ಪತ್ರೆಯಲ್ಲಿ ರಕ್ತಪೂರಣಾ ವ್ಯವಸ್ಥೆಯೂ ಸಜ್ಜಾಗಿರಲಿಲ್ಲ. ಮೈಸೂರಿನ ಸುಸಜ್ಜಿತ ಆಸ್ಪತ್ರೆಗಳಲ್ಲಿ, ನುರಿತ ಶಸ್ತ್ರ ವೈದ್ಯರಿಂದ ಚಿಕಿತ್ಸೆಗೊಳಗಾಗುವುದರ ಬದಲು ಹಳ್ಳಿಗಾಡಿನ ಆಸ್ಪತ್ರೆಯಲ್ಲಿ ನನ್ನಂತಹವನಿಂದ ಸಂತನೊಬ್ಬನ ಜೀವ ಹಾನಿಯಾಗಿ ಬಿಡುತ್ತಿತ್ತೋ ಎಂದು ಸ್ವಲ್ಪ ಸಮಯ ಖಿನ್ನತೆ ನನ್ನನ್ನು ಆವರಿಸಿತ್ತು. ಸುಖಾಂತವಾದದ್ದು ಹರ್ಷ ಉಂಟುಮಾಡಿತು.

ಹೀಗೆ ಆರಂಭವಾದ ನಮ್ಮಿಬ್ಬರ ನಡುವಿನ ಗೌರವಾದರಗಳ ಸಂಬಂಧ ಅವರ ಅಂತ್ಯದ ದಿನಗಳವರೆಗೂ ಮುಂದುವರಿದಿತ್ತು. ಆರಂಭದ ದಿನಗಳಲ್ಲಿ ತಿಂಗಳಲ್ಲಿ ಒಂದೆರಡು ಸಾರಿ ಯಾದರೂ ಅವರಿಂದ ಚೇತೋಹಾರಿ ಪತ್ರಗಳು ಕೈಸೇರುತ್ತಿದ್ದವು. ಬಹುಶಃ ನನ್ನಲ್ಲಿದ್ದಿರಲಾರದ 'ಮಂದಹಾಸ, ಮಧುರ ಸ್ವಭಾವ' ಹಾಗೂ ಕಾರ್ಯವೈಖರಿಗಳನ್ನು ಬಣ್ಣಿಸಿ ಬರೆಯುತ್ತಿದ್ದ ಕಾಗದದ ಕಂತೆಗಳು ನನ್ನಲ್ಲಿ ಉಳಿದುಕೊಂಡಿವೆ. ಅವರ ವಿದೇಶಿ ಶಿಷ್ಯರಿಂದ ಬರುತ್ತಿದ್ದ ಅಂಚೆ ಚೀಟಿಗಳು, ಬಣ್ಣದ ಪೆನ್ಸಿಲ್‌ಗಳು, ದ್ರಾಕ್ಷಿ, ಉತ್ತುತ್ತೆಗಳನ್ನು ನನ್ನ ಮಕ್ಕಳಿಗೂ ತಲುಪಿಸುತ್ತಿದ್ದರು. ನಾನೂ ಸಹ ಒಂದೆರಡು ಸಾರಿ ಸಂಸಾರ ಸಮೇತ ಆಶ್ರಮಕ್ಕೆ ಹೋಗಿ ಅವರ ಆತಿಥ್ಯವನ್ನು ಸ್ವೀಕರಿಸಿದ್ದೆ. ಈಗ್ಗೆ ೩-೪ ವರ್ಷಗಳ ಹಿಂದೆ ವಿಶಿಷ್ಟ ರೀತಿಯ '**ಪ್ರಾಯೋಪವೇಶ**' (ಉಪವಾಸ ದಿಂದ ಪ್ರಾಣ ತ್ಯಜಿಸುವುದು) ಮಾಡಿ ಇಹಲೋಕ ಯಾತ್ರೆ ಮುಗಿಸಿದಾಗ ಅದೊಂದು ಸುದ್ದಿಯಾಗಿತ್ತು. ಮೊದಲಿಗೆ ದುಃಖವಾದರೂ ಸಂತನೊಬ್ಬ ಗಾಂಭೀರ್ಯದಿಂದ ಪ್ರಾಣ ತ್ಯಾಗ ಮಾಡಿದ್ದು ಮೆಚ್ಚುವಂತಾಯಿತು.

## ಸಿ.ಸಿ.ಎ. ರೂಲ್ಸು ಜಾರಿ!

ಆಸ್ಪತ್ರೆಗಳ ನೌಕರರ ವಿರುದ್ಧ ಸಾರ್ವಜನಿಕರು ದೂರುವುದು ಹಿಂದಿನಿಂದಲೂ ನಡೆದು ಬರುತ್ತಿರುವುದೇ. ಕೆಲವರು ದೂರುವುದರಲ್ಲಿ ಸತ್ಯಾಂಶಗಳಿರುವುದಾದರೂ ಆಸ್ಪತ್ರೆ, ಮತ್ತು ಅಲ್ಲಿಯ ನೌಕರರ ಮೇಲೆ ಶಿಸ್ತಿನ ಕ್ರಮ ಜರುಗಿಸುವುದು ಅಷ್ಟೇನೂ ಸುಲಭ ಸಾಧ್ಯವಲ್ಲ. ತಮಗುಂಟಾಗಿರಬಹುದಾದ ಅನಾದರ, ಅನ್ಯಾಯಗಳಿಂದ ಕುಪಿತರಾದ ಭರದಲ್ಲಿ ಕೂಡಲೇ

ದೂರು ನೀಡುವುದಾದರೂ ಮುಂದೆ ಯಾವ ಯಾವುದೋ ಕಾರಣಗಳಿಂದಾಗಿ ಸುಮ್ಮನಾಗಿ ಬಿಡುತ್ತಾರೆ, ಇಲ್ಲವೇ ವಿಚಾರಣೆ ಸಮಯದಲ್ಲಿ ಸಹಕರಿಸುವುದಿಲ್ಲ. ಸರ್ಕಾರ ತನ್ನ ನೌಕರ ವರ್ಗದವರ ನೀತಿ-ನಡುವಳಿಕೆಗಳನ್ನು ನಿಯಂತ್ರಿಸಲು ಕಟ್ಟುನಿಟ್ಟಾದ ವಿಧಿವಿಧಾನಗಳನ್ನು ರೂಪಿಸಿದೆ. ಅವುಗಳ ಉಲ್ಲಂಘನೆ ಮಾಡುವವರನ್ನು ವಿಚಾರಿಸಿ, ಶಿಕ್ಷೆಗೆ ಗುರಿ ಮಾಡಲು ನಿಯಮಗಳನ್ನೂ ನಿಯೋಜಿಸಿದೆ. ಸಿ.ಸಿ.ಎ. ರೂಲ್ಸು (ಶಿಸ್ತುಕ್ರಮ ನಿಯಮಾವಳಿ ಮತ್ತು ಮೇಲ್ಮನವಿ (Classification, Control and Appeal Rules))ಗಳೆಂದು ಕರೆಯುವ ಅವುಗಳನ್ನು ಕಟ್ಟುನಿಟ್ಟಾಗಿ ಜಾರಿಗೆ ತರುವುದು ಸುಲಭ ಸಾಧ್ಯವಲ್ಲ. ಬಹುಪಾಲು ಮೇಲಧಿಕಾರಿಗಳು ಅವನ್ನು ಜಾರಿಗೆ ತರುವ ಗೊಡವೆಗೆ ಕೈಹಾಕುವುದಿಲ್ಲ. ಅಂತಹ ಒಂದು ನಿದರ್ಶನವನ್ನು ಉಲ್ಲೇಖಿಸಬಹುದೆ ನಿಸುತ್ತದೆ.

ಪುಟ್ಟಸ್ವಾಮಿಯೆಂಬ ಶಾಲಾ ಮಾಸ್ತರೊಬ್ಬರಿಗೆ ಮೂಲವ್ಯಾಧಿ ಆಪರೇಷನ್ ಮಾಡಿದ್ದೆ. ಆ ದಿನರಾತ್ರಿ ಅವರನ್ನು ನೋಡಿಕೊಳ್ಳುವ ಬಗೆ ಹಾಗೂ ನೀಡಬೇಕಾದ ಇಂಜಕ್ಷನ್ ಮುಂತಾದವುಗಳನ್ನು ರಾತ್ರಿ ಪಾಳಿಯ ನರ್ಸ್ ನಾಗರಾಜಯೆಂಬುವರಿಗೆ ತಿಳಿಸಲಾಗಿತ್ತು. ಆದರೆ ರೋಗಿಗೆ ರಾತ್ರಿ ಒಂದು ಸಾರಿ ನಿದ್ರೆಬರಿಸುವ ಇಂಜಕ್ಷನ್ ನೀಡಿದ ನಂತರ ಬೆಳಗಿನವರೆಗೂ ಮತ್ತೆ ನೋಡಲೇ ಇಲ್ಲವಂತೆ. ರಾತ್ರಿಯೆಲ್ಲಾ ನೋವಿನಿಂದ ಬಸವಳಿದು ನಿದ್ರೆ ಮಾಡಲಾಗದೆ, ತಮ್ಮ ಮಗನನ್ನು ಕಳುಹಿಸಿ ನರ್ಸ್‌ನ್ನು ಕರೆತರುವಂತೆ ಹೇಳಿದರೂ ಬಗಲಿಲ್ಲವಂತೆ. ಬೆಳಗಿನ ಜಾವ ವಾರ್ಡಿಗೆ ಬಂದು ಕೇಸ್ ಷೀಟಿನಲ್ಲಿ ಕಾಲಕಾಲಕ್ಕೆ ಗುರುತು ಹಾಕಬೇಕಾದವನ್ನು ಬರೆದು ಮನೆಗೆ ಹೋದರೆಂತಲೂ, ಅವರ ಮೇಲೆ ಶಿಸ್ತಿನ ಕ್ರಮ ಜರುಗಿಸಬೇಕೆಂದು ರೋಗಿ ಆಗ್ರಹ ಪಡಿಸಿದರು. ಅಲ್ಲದೆ ಆ ದಿನವೇ ದೂರನ್ನು ಬರೆದೂ ಸಹ ಕೊಟ್ಟರು.

ರಾತ್ರಿ ಪಾಳಿ ಕೆಲಸಕ್ಕೆ ಬಂದಾಗ ನಾಗರಾಜರನ್ನು ದೂರಿನ ಬಗೆಗೆ ವಿಚಾರಿಸಿದೆ. ಎಂದಿನ ರೀತಿಯ ಉಡಾಫೆಯಿಂದಲೇ ಎಲ್ಲವನ್ನು ಅಲ್ಲಗಳೆದರು. ಕೇಸ್ ಷೀಟಿನಲ್ಲಿ ಗುರುತಿಸಿರುವಂತೆ ಎಲ್ಲಾ ಕ್ರಮಗಳನ್ನೂ ಜರುಗಿಸಿರುವುದಾಗಿ ಖಡಾ ಖಂಡಿತವಾಗಿ ಹೇಳಿದರು. ಮಾಸ್ತರ್ ಪುಟ್ಟಸ್ವಾಮಿಯವರು ಸಾಕ್ಷಾಧಾರ ಸಹಿತ ಲಿಖಿತ ದೂರು ಕೊಟ್ಟಿರುವುದಾಗಿಯೂ, ಈಗಲಾದರೂ ತಪ್ಪೊಪ್ಪಿಕೊಂಡರೆ ಅವರಿಂದ ದೂರು ವಾಪಸು ಪಡೆಯುವಂತೆ ಮಾಡಲು ಸಾಧ್ಯ; ಇಲ್ಲದಿದ್ದರೆ ಕಾನೂನು ಪ್ರಕಾರ ಮುಂದಿನ ಕ್ರಮ ತೆಗೆದುಕೊಳ್ಳಬೇಕಾಗುತ್ತದೆಂದು ಎಚ್ಚರಿಕೆ ನೀಡಿದೆ. ಅದನ್ನೂ ಲೆಕ್ಕಕ್ಕೆ ತೆಗೆದುಕೊಳ್ಳದೇ ಅವನ್ನೆಲ್ಲಾ ಎದುರಿಸುವುದಾಗಿ ಮತ್ತಷ್ಟು ಉಡಾಫೆಯಿಂದಲೇ ಉತ್ತರಿಸಿದರು.

ನನಗಿನ್ನೇನು ಬದಲಿ ಮಾರ್ಗಗಳಿಲ್ಲದೆ ಪುಟ್ಟಸ್ವಾಮಿ ನೀಡಿದ ದೂರಿನ ಅಂಶಗಳ ಬಗೆಗೆ ನರ್ಸ್ ನಾಗರಾಜರಿಗೆ ಸಿ.ಸಿ.ಎ. ರೂಲ್ಸ್ ಪ್ರಕಾರ ನೋಟೀಸು ಜಾರಿಮಾಡಿದೆ. ಒಂದು ವಾರದ ಗಡುವು ಕೊಟ್ಟು ಅಷ್ಟರೊಳಗೆ ಉತ್ತರ ಕೊಡಬೇಕೆಂದು ಅದರಲ್ಲಿ ತಿಳಿಸಲಾಗಿತ್ತು. ನೋಟೀಸಿಗೆ ಉತ್ತರವನ್ನೇನೋ ಕೊಟ್ಟರು. ಆದರೆ ನಾವು ಆರೋಪಿಸಿದ ವಿಷಯಗಳಿಗೆ ನೇರವಾದ ಉತ್ತರ ನೀಡದೆ ಹಾರಿಕೆ ಉತ್ತರ ಅದಾಗಿತ್ತು. ಅದನ್ನು ಪರಿಶೀಲಿಸಿ ನಾಗರಾಜರ ಉತ್ತರ ಮೇಲ್ನೋಟಕ್ಕೆ ಸಮರ್ಪಕವಾಗಿ ಕಂಡುಬರುತ್ತಿಲ್ಲ. ಆದರಿಂದ ಅದೇ ರೂಲ್ಸುಗಳ ಪ್ರಕಾರ ಸಾಕ್ಷಿಗಳೆದುರು ವಿಚಾರಣೆ ಜರುಗಿಸಲಾಗುತ್ತದೆಯೆಂತ ತಿಳಿಸಿ, ಅದಕ್ಕೊಂದು ದಿನ ನಿಗದಿ ಪಡಿಸಲಾಯಿತು. ಪ್ರಕರಣದಲ್ಲಿ ಅವರ ಪರ ಸಾಕ್ಷಿ ಹೇಳುವವರಿದ್ದಲ್ಲಿ ಅವರ ಹೆಸರು ವಿಳಾಸವನ್ನು ನಮಗೆ ತಿಳಿಸಬೇಕೆಂದು ಮತ್ತೊಂದು ನೋಟೀಸು ಜಾರಿಮಾಡಿದೆವು. ಮಾಸ್ತರ್ ಪುಟ್ಟಸ್ವಾಮಿಯವರಿಗೂ

ಅದೇ ರೀತಿ ನೋಟೀಸು ಜಾರಿ ಮಾಡಿ ಅವರ ಪರವಾಗಿ ಸಾಕ್ಷಿ ಹೇಳುವವರಿದ್ದರೆ ಅಂತಹವರ ಹೆಸರು ವಿಳಾಸಗಳನ್ನು ತಿಳಿಸುವಂತೆ ನಮೂದಿಸಿದ್ದೆವು. ಅವರು ಸಾಕ್ಷಿ ಹೇಳಬಹುದಾದ ಎರಡು ಜನರ ವಿಳಾಸಗಳನ್ನು ತಿಳಿಸಿದರು. ಅವರೆಲ್ಲರಿಗೂ ನೋಟೀಸು ನೀಡಿದೆವು; ವಿಚಾರಣೆಯ ದಿನ ಹಾಜರಿದ್ದು ಸಹಕರಿಸಬೇಕೆಂದು ಕೇಳಿಕೊಂಡಿದ್ದೆವು. ನಾಗರಾಜರಿಗೆ ಮತ್ತೊಂದು ನೋಟೀಸು ಜಾರಿಮಾಡಿದರೂ ಕಡೆಯವರೆಗೂ ಯಾರ ಹೆಸರನ್ನು ತಿಳಿಸಲಿಲ್ಲ. ಆದರೆ ಆ ತನಕ ಜಾರಿ ಮಾಡುತ್ತಿದ್ದ ನೋಟೀಸು ಪರಿಣಾಮ ಬೀರಿರಬೇಕು. ಆ ಸಮಯದಲ್ಲಿ ನನ್ನ ಸಹಾಯಕರಾಗಿ ಕಾರ್ಯ ನಿರ್ವಹಿಸುತ್ತಿದ್ದ ಡಾ॥ ಕೃಷ್ಣಪ್ಪನವರು ಒಂದು ಸಂಜೆ ಮನೆಯಲ್ಲಿ ಭೇಟಿ ಮಾಡಿ ನಾಗರಾಜರಿಗೆ ತಮ್ಮ ತಪ್ಪಿನ ಅರಿವಾಗಿದೆಯಂತಲೂ ಅದೊಂದು ಸಾರಿ ಕ್ಷಮಿಸಿ ಬಿಡಬೇಕೆಂದು ಕೇಳಿಕೊಂಡರು. ಅದಾಗಲೇ ಕ್ಷಮಿಸುವ ಹಂತ ಮೀರಿ ಹೋಗಿದೆಯಂತಲೂ, ವಿಚಾರಣೆಯನ್ನು ಎದುರಿಸಿದ ನಂತರ ಹೇಗಾಗುತ್ತದೆಯೋ ನೋಡಿಕೊಳ್ಳಬಹುದೆಂದು ಅವರನ್ನು ಸಾಗುಹಾಕಿದೆ.

ನಿಗದಿತ ದಿನ ಆಸ್ಪತ್ರೆಯ ಸಿಬ್ಬಂದಿ ವರ್ಗದವರಿಗಾಗಲೀ, ರೋಗಿಗಳಿಗಾಗಲೀ ಬಹಿರಂಗವಾಗದಂತೆ ದೂರದ ಎಕ್ಸ್‌ರೇ ವಿಭಾಗದಲ್ಲಿ ವಿಚಾರಣೆ ಆರಂಭವಾಯಿತು. ಸಾಮಾನ್ಯ ವಾಗಿ ಕೋರ್ಟುಗಳಲ್ಲಿ ಕಾರ್ಯಕ್ರಮ ಜರುಗುವಂತೆ ವಿಚಾರಣೆ ನಡೆಸಿದೆ. ಮೊದಲಿಗೆ ಪುಟ್ಟಸ್ವಾಮಿಯವರ ಹೇಳಿಕೆಯನ್ನು ದಾಖಲು ಮಾಡಿಕೊಂಡು ಅದಕ್ಕೆ ಅವರಿಬ್ಬರ ಸಹಿ ಹಾಕಿಸಿಕೊಂಡೆ. ಪುಟ್ಟ ಸ್ವಾಮಿಯವರು ಹಾಜರು ಮಾಡಿದ್ದ ಎರಡು ಜನ ಸಾಕ್ಷಿಗಳ ಹೇಳಿಕೆಯನ್ನೂ ದಾಖಲಿಸಿ, ಎಲ್ಲರ ಸಹಿಗಳನ್ನು ಹಾಕಿಸಿದೆ. ಅವರೆಲ್ಲರಿಗೂ ನಾಗರಾಜರೇನಾದರೂ ಪ್ರತಿ ಪ್ರಶ್ನೆಗಳನ್ನು ಕೇಳಬಹುದೆಂದು ಅವಕಾಶ ಮಾಡಿಕೊಟ್ಟೆ. ಅಷ್ಟರಲ್ಲೇ ಅವರ ಮನಸ್ಥೈರ್ಯ ಕುಸಿದು ತತ್ತರಿಸಿದಂತೆ ಕಂಡರು. ಸಪ್ಪೆಮೋರೆ ಮಾಡಿಕೊಂಡು ತಾವು ಕೇಳುವಂತಹದ್ದೇನೂ ಇಲ್ಲವೆಂದರು. ಹಾಗೂ ತಮ್ಮ ಪರ ಸಾಕ್ಷಿಗಳೂ ಇಲ್ಲವೆಂದರು. ವಿಚಾರಣೆ ಮುಕ್ತಾಯವಾಯಿತು.

ವಿಚಾರಣೆ ಸಮಯದಲ್ಲಿ ವ್ಯಕ್ತಪಟ್ಟ ಸಾಕ್ಷ್ಯಾಧಾರಗಳ ಮೇಲೆ ನಾಗರಾಜರ ಮೇಲಿನ ಆರೋಪಗಳೆಲ್ಲಾ ಸಾಬೀತಾಗಿರುವುದಾಗಿಯೂ, ಆದುದರಿಂದ ಅವರ ಸಂಬಳದಲ್ಲಿ ಒಂದು ಸಾರಿಯ 'ಬಡತಿ- ಭತ್ಯೆ'(Increment) ಯನ್ನು ಅದೇಕೆ ತಡೆಹಿಡಿಯ ಬಾರದೆಂಬುದಕ್ಕೆ ಸಮಂಜಸ ಉತ್ತರ ಕೊಡಬೇಕೆಂದು ಮತ್ತೂ ಒಂದು ನೋಟೀಸು ಜಾರಿ ಮಾಡಲಾಯಿತು. ತತ್ತರಿಸಿ ಹೋದ ನಾಗರಾಜಯ್ಯ ಅದೇ ರಾತ್ರಿ ಡಾ॥ ಕೃಷ್ಣಪ್ಪನವರ ಜೊತೆ ನನ್ನ ನಿವಾಸಕ್ಕೆ ಬಂದು ಕಣ್ಣೀರು ಹಾಕತೊಡಗಿದರು. ಸಂಸಾರವಂದಿಗನಾದ ಅವರ ಹೊಟ್ಟೆ ಮೇಲೆ ಹೊಡೆಯಬಾರದೆಂದು ಮುಂದೆಂದೂ ಅಂತಹ ಬೇಜವಾಬ್ದಾರಿತನದಿಂದ ನಡೆದುಕೊಳ್ಳುವುದಿಲ್ಲವೆಂದು ಪರಿಪರಿಯಾಗಿ ಬೇಡಿಕೊಂಡರು. ಇನ್ನೂ ಅವರನ್ನು ಬಗ್ಗಿಸುವುದು ತರವಲ್ಲವೆಂದು ಪುಟ್ಟಸ್ವಾಮಿಯವರೊಂದಿಗೆ ನಡೆದುಕೊಂಡ ಬಗೆಗೆ ಲಿಖಿತ ಕ್ಷಮಾಪಣೆ ನೀಡುವುದಾದರೆ, ಅವರು ಮುಂದುವರಿಯದಂತೆ ಸಮಾಧಾನ ಪಡಿಸಲು ಪ್ರಯತ್ನಿಸುವುದಾಗಿ ಹೇಳಿದೆ. ನಾಗರಾಜ ಅದರಂತೆ ಮಾಡಿದರು. ಪುಟ್ಟಸ್ವಾಮಿಯವರನ್ನು ಆಸ್ಪತ್ರೆಗೆ ಕರೆಸಿ, ಆಸ್ಪತ್ರೆಯಲ್ಲಿ ಅವರಿಗಾದ ಭೀಕರ ಸಂಕಷ್ಟಕ್ಕೆ ಸಹಾನುಭೂತಿ ವ್ಯಕ್ತಪಡಿಸಿ, ನಾಗರಾಜ ಕೂಡ ಪಶ್ಚಾತ್ತಾಪ ವ್ಯಕ್ತಪಡಿಸಿರುವುದರಿಂದ ಅದನ್ನು ಮರೆಯುವಂತೆ ಸಾಂತ್ವನಗೊಳಿಸಿದೆ. ಮುಂದಿನ ದಿನಗಳಲ್ಲಿ ಇತರ ನೌಕರರು ಎಚ್ಚೆತ್ತುಕೊಳ್ಳು ವುದಕ್ಕೆ ಇದೊಂದು ಉದಾಹರಣೆಯಾಯಿತು.

# ಅಪರೂಪದ ಮುತ್ಸದ್ದಿ

ಜಿ. ವಿ. (ವೆಂಕಟೇ) ಗೌಡರು ಒಂದು ಕಾಲದಲ್ಲಿ ಕೊಳ್ಳೇಗಾಲದ ಕಡೆಯ ಸಮಾಜವಾದಿ ನಿಲುವಿನ ಮುತ್ಸದ್ದಿಯೆಂದು ಅಲ್ಲಿಗೆ ಹೋಗುವ ಮೊದಲೇ ತಿಳಿದಿತ್ತು. ಶುದ್ಧ ಹಸ್ತರೆನಿಸಿದ ಜನಾನುರಾಗಿ ಮುಖಂಡರು. ಖ್ಯಾತ ವಕೀಲರಾಗಿದ್ದರು, ಒಳ್ಳೆಯ ವಾಗ್ಮಿಗಳು; ಹಿಂದಿನ ಎರಡು ಚುನಾವಣೆಗಳಲ್ಲಿ ಗೆದ್ದಿದ್ದರೂ ಪ್ರಸಕ್ತ ಸಮಯದಲ್ಲಿ ಸೋಲನ್ನನುಭವಿಸಿದ್ದರು. ರಾಜಕೀಯ ಪಗಡೆಯಾಟದಲ್ಲಿ ಒಂದೊಂದು ಸಾರಿ ಹಾಗಾಗುವುದು ಅಪರೂಪವಲ್ಲ. ನಾನು ಅನುಸರಿಸುತ್ತಿದ್ದ ತಟಸ್ಥ ಧೋರಣೆಯಿಂದ ಅವರ ಬಗೆಗೆ ವಿಶೇಷ ಆಸಕ್ತಿಯನ್ನು ತೋರಿಸುತ್ತಿರಲಿಲ್ಲ.

ನಾನು ಅಲ್ಲಿಗೆ ಹೋದ ಆರು ತಿಂಗಳಲ್ಲಿ ಅವರನ್ನು ಸಾಮಾನ್ಯವಾಗಿ ಚಿಕಿತ್ಸೆ ಮಾಡುತ್ತಿದ್ದ ಕುಟುಂಬ ವೈದ್ಯರು ಎದೆ ನೋವಿನ ಸಲುವಾಗಿ ಸ್ಕ್ರೀನಿಂಗ್ ಮಾಡಿಸಲು ನಮ್ಮ ಆಸ್ಪತ್ರೆಗೆ ಕಳುಹಿಸಿದರು. ಮೊದಲಿಗೆ ಅವರನ್ನು ನಾನೊಂದು ಸಾರಿ ವಿವರವಾದ ಪರೀಕ್ಷೆಗೊಳಪಡಿಸಿದೆ. ಅವರ ರಕ್ತದೊತ್ತಡ ವಿಪರೀತವಾಗಿ ಏರಿದ ಮಟ್ಟದಲ್ಲಿತ್ತು. ಸ್ಕ್ರೀನಿಂಗ್ ಮಾಡಿಸಿದಾಗ ಹೃದಯದ ಗಾತ್ರವೂ ತುಂಬಾ ವಿಶಾಲವಾಗಿ ಹಿಗ್ಗಿಕೊಂಡಿತ್ತು. ಅವೆರಡು ಪರಿಸ್ಥಿತಿಗಳಿಗೆ ಪರಸ್ಪರ ಸಂಬಂಧವಿರುವುದರಿಂದ ಬೆಂಗಳೂರಿನಲ್ಲಿ ಹೃದ್ರೋಗ ತಜ್ಞರಿಂದ ಪರೀಕ್ಷೆ ಮಾಡಿಸಿಕೊಳ್ಳುವುದು ಸೂಕ್ತವೆಂದು ಸಲಹೆ ಮಾಡಿದೆ.

ನನ್ನ ಸಲಹೆಯನ್ನು ಪಾಲಿಸಿದರಂತೆ. ಖ್ಯಾತ ತಜ್ಞರೊಬ್ಬರಿಂದ ಪರೀಕ್ಷೆಗೊಳಗಾಗಿ ಅವರ ಸೂಚನೆಯಂತೆ ತಪ್ಪದೆ ಔಷಧೋಪಚಾರ ಮುಂದುವರಿಸುತ್ತಿದ್ದರಂತೆ. ಅದೇ ಸಮಯದಲ್ಲಿ ರಾಜ್ಯಾದ್ಯಂತ ತಾಲ್ಲೂಕು ಬೋರ್ಡ್ ಚುನಾವಣೆ ನಡೆಯಲಾರಂಭಿಸಿತು. ಹಿಂದಿನ ಸಾರಿ ಸ್ವತಃ ಅವರೇ ಸೋತಿದ್ದರಿಂದ, ಅವರ ಪಕ್ಷದ ಅಭ್ಯರ್ಥಿಗಳ ಗೆಲುವಿಗಾಗಿ ಶಕ್ತಿ ಮೀರಿ ಕೆಲಸ ಮಾಡಿದರು. ಬಹುಪಾಲು ಅವರ ಕಡೆಯವರದೇ ಬಹುಮತವೂ ಬಂದಿರಬೇಕು. ಆದರೆ ದೈಹಿಕವಾಗಿ ಬಳಲಿದ್ದರು.

ಇಸ್ಪೀಟಾಡುವುದು, ಸಿಗರೇಟು ಸೇದುವುದು ಅವರ ಎರಡು ದುರ್ಬಲ ಹವ್ಯಾಸಗಳಂತೆ. ಚುನಾವಣೆ ಸಮಯದಲ್ಲಿ ಕಾರ್ಯನಿರತರಾಗಿದ್ದ ಬೇಸರವನ್ನು ಕಳೆಯಲು ಕೆಲವು ಸ್ನೇಹಿತರನ್ನು ಸೇರಿಸಿಕೊಂಡು ದಿನವೆಲ್ಲಾ ಇಸ್ಪೀಟಾಟದಲ್ಲಿ ತಲ್ಲೀನರಾದರು. ರಾತ್ರಿಯಾದಂತೆಲ್ಲಾ ಕೆಲವರು ಮನೆಗೆ ಹೋದರು; ಉಳಿದ ೨-೩ ಜನರೊಡನೆ ಅವರ ಆಟ ಮುಂದುವರಿಯಿತು. ಮಧ್ಯ ರಾತ್ರಿಯ ಹೊತ್ತಿಗೆ ಅವರ ಕತ್ತು ಒಂದು ಕಡೆ ವಾಲುತ್ತಿರುವುದನ್ನು ಸಂಗಡಿಗರೊಬ್ಬರು ಗಮನಿಸಿದರು. ಒಂದು ಕಡೆ ವಾಲಿ ಇನ್ನೇನು ಕುರ್ಚಿಯಿಂದ ಕೆಳಗೆ ಬೀಳುವಷ್ಟರಲ್ಲೇ ಸಂಗಡಿಗರು ತಡೆದರು; ಪಕ್ಕದಲ್ಲಿದ್ದ ಬೆಂಚಿನ ಮೇಲೆ ಮಲಗಿಸಿ ಕೂಡಲೇ ವಾಹನವೊಂದರಲ್ಲಿ ಆಸ್ಪತ್ರೆಗೆ ಕರೆತಂದರು. ಸುದ್ದಿ ತಿಳಿದು ನಾನೂ ಧಾವಿಸಿದೆ. ಅದಾಗಲೇ ಅರೆ ಪ್ರಜ್ಞಾವಸ್ಥೆಯಲ್ಲಿದ್ದ ಅವರ ಬಾಯಿಯಿಂದ ನೊರೆ ಬರುತ್ತಿತ್ತು. ಉಸಿರಾಟದ ಗತಿ ಕಡಿಮೆ ಇತ್ತು. ರಕ್ತದೊತ್ತಡ ಗಗನಕ್ಕೇರಿತ್ತು. ಎಡ ಪಾರ್ಶ್ವ ನಿಶ್ಚೇತನವಾಗಿತ್ತು; ಅಂದರೆ ಅವರಿಗೆ 'ಲಕ್ವ'(paralysis) ಹೊಡೆದಿತ್ತು!

ಮೊದಲಿಗೆ ಬಾಯಿ, ಗಂಟಲುಗಳಲ್ಲಿ ತುಂಬಿಕೊಂಡಿದ್ದ ಎಂಜಲು ದ್ರವವನ್ನು ಹೊರಗೆ ಹೀರಿ ಶುಚಿಗೊಳಿಸಿ, ಆಮ್ಲಜನಕ ಸೇವನೆ ಆರಂಭ ಮಾಡಿದೆವು; ಗ್ಲೂಕೋಸ್ ಡ್ರಿಪ್ ಮತ್ತಿತರ ಬೆಂಬಲೋಪಚಾರ ವಿಧಾನಗಳನ್ನು ಅಳವಡಿಸಿದೆವು. ಬೆಳಗಾಗುವುದರೊಳಗೆ ಸುತ್ತಲ ಪರಿಸರವನ್ನು ಗುರುತಿಸುವಷ್ಟು ಚೇತರಿಸಿಕೊಂಡಿದ್ದರು. ರಾತ್ರಿಯೇ ಬೆಂಗಳೂರು, ಮೈಸೂರುಗಳ ಕೆಲವು

ತಜ್ಞ ವೈದ್ಯರನ್ನು ಕರೆಸಲು ತುರ್ತು ಕ್ರಮಗಳನ್ನು ತೆಗೆದುಕೊಂಡರು. ಬೆಳಿಗ್ಗೆ ಮೈಸೂರಿನಿಂದ ಫಿಜಿಷಿಯನ್ ಒಬ್ಬರು ಬಂದು, ಆರಂಭಿಕ ಚಿಕಿತ್ಸಾ ವಿಧಾನಗಳನ್ನು ಶುರುಮಾಡಿದರು. ಸಾಯಂಕಾಲದ ಹೊತ್ತಿಗೆ ಬೆಂಗಳೂರಲ್ಲಿ ಅವರ ಹೃದಯದ ಕಾಯಿಲೆಗೆ ಚಿಕಿತ್ಸೆ ನೀಡುತ್ತಿದ್ದ ತಜ್ಞ ವೈದ್ಯರೂ ತಮ್ಮ ತಂಡದವರೊಂದಿಗೆ ಬಂದಿಳಿದರು. ಅವರ ಪರಿಸ್ಥಿತಿಯನ್ನು ಅಜಮಾಯಿಶಿದ ಅವರು ಮರುದಿನವೇ ಬೆಂಗಳೂರಿಗೆ ಕಳುಹಿಸುವ ಏರ್ಪಾಡು ಮಾಡುವ ಸಲಹೆ ಇತ್ತರು.

ಮರುದಿನ ಅವರನ್ನು ಬೆಂಗಳೂರಿಗೆ ಕಳುಹಿಸಲಾಯಿತು. ಅಲ್ಲಿ ಸಾಧ್ಯವಾದ ಎಲ್ಲಾ ಬಗೆಯ ಚಿಕಿತ್ಸೆಗಳನ್ನು ನೀಡಿದರೂ ಲಕ್ವ ಕಾಯಂ ಆಗಿ ಉಳಿದುಕೊಂಡಿತು; ಮಾತಿನಲ್ಲಿ ತೊದಲು ಇತ್ತು. ನಡೆಯುವಾಗ ಲಕ್ವದ ಅಂಗವಿಕಲತೆ ಗೋಚರವಾಗುವಂತಿತ್ತು. ಆದರೆ ಬೌದ್ಧಿಕ ಮಟ್ಟದಲ್ಲಿ ಅಂತಹ ಬದಲಾವಣೆಗಳಾದಂತಿರಲಿಲ್ಲ. ಜನಪ್ರಿಯತೆ ಇನ್ನೂ ಹೆಚ್ಚಾಗತೊಡಗಿತ್ತು. ಇನ್ನೊಂದು ವರ್ಷದಲ್ಲೇ ವಿಧಾನ ಪರಿಷತ್ ಚುನಾವಣೆಯಲ್ಲಿ ಸ್ಪರ್ಧಿಸಿ ಗೆಲುವು ಸಾಧಿಸಿದರು; ಆಗಾಗ್ಗೆ ಭೇಟಿಯಾಗಿ ವಿಚಾರಿಸುತ್ತಿದ್ದೆ. ನಾನು ಕೊಳ್ಳೇಗಾಲ ಬಿಟ್ಟ ನಂತರದ ಕೆಲವು ವರ್ಷಗಳಲ್ಲಿ ಕಾಲವಶರಾದುದು ತಿಳಿದು ವಿಷಾದವಾಯಿತು.

## ನಕಲಿ ವೈದ್ಯರ ವಿರುದ್ಧ ಸೆಣಸಾಟ

ಕೊಳ್ಳೇಗಾಲದಲ್ಲಿ ನಾನಿದ್ದ ಮಧ್ಯಂತರ ಸಮಯವಿರಬೇಕು. ಮಧ್ಯ ವಯಸ್ಸು ದಾಟಿದ ರಂಗಯ್ಯ ಎಂಬವನನ್ನು ಆಸ್ಪತ್ರೆಗೆ ತಂದರು. ಅವನ ಕಿಬ್ಬೊಟ್ಟೆ, ಹೊರ ಜನನಾಂಗಗಳೆಲ್ಲಾ ಕಪ್ಪಿಟ್ಟು ಊದಿಕೊಂಡು ದುರ್ಗಂಧ ಒಸರುತ್ತಿತ್ತು. ವಿಚಾರಿಸಿದಾಗ ಅವನ ಮೂತ್ರ ವಿಸರ್ಜನೆ ನಿಂತು ಹೋಗಿ ಎರಡು ಮೂರು ದಿನಗಳಾಗಿವೆಯೆಂಬುದು ತಿಳಿಯಿತು. ಸ್ವಲ್ಪ ಗಮನವಿಟ್ಟು ಪರೀಕ್ಷೆ ಮಾಡಿದಾಗ ವೃಷಣ ಚೀಲ, ಶಿಶ್ನ, ಹಾಗೂ ಕಿಬ್ಬೊಟ್ಟೆ ಭಾಗಗಳೆಲ್ಲಾ ಊದಿಕೊಂಡಿದ್ದೇ ಅಲ್ಲದೆ ಅಲ್ಲಲ್ಲೇ ಕೊಳೆತು ಕೀವು ಹೊರಬರುವಂತಿತ್ತು. ಶಿಶ್ನದ ಮುಂದೊಗಲನ್ನು ಯಾರೋ ಕತ್ತರಿಸಿ ದಪ್ಪದಾರದಿಂದ ಹೊಲಿಗೆ ಹಾಕಿರುವುದೂ ಸಹಾ ಗೋಚರಿಸಿತು. ಮತ್ತೊಮ್ಮೆ ಅವನ ಮುಖದ ಕಡೆ ನೋಡಿದಾಗ ಹಿಂದೊಮ್ಮೆ ನೋಡಿದ ನೆನಪಾಯಿತು. ಹೌದು, ಹಿಂದಿನ ವಾರ ಆಸ್ಪತ್ರೆಗೆ ಬಂದಿದ್ದ; ಶಿಶ್ನದ ಮುಂದೊಗಲಿನ ದ್ವಾರ ತುಂಬಾ ಕಿರಿದಾಗಿದ್ದು, ಮೂತ್ರ ವಿಸರ್ಜನೆಗೆ ಕಷ್ಟ ವಾಗುತ್ತಿತ್ತು. ಆ ಸಲುವಾಗಿ 'ಸುನ್ನತಿ' ಆಪರೇಷನ್ ಮಾಡಬೇಕಾಗುತ್ತ ದೆಂದು ಸೂಚಿಸಿದ್ದೆ. ಒಂದೆರಡು ದಿನಗಳಲ್ಲಿ ಬಂದು ಸೇರಿಕೊಳ್ಳುವುದಾಗಿ ಹೇಳಿದವನು ನಾಪತ್ತೆಯಾಗಿದ್ದ. ಅವನ ಹಿತೈಷಿಗಳಲ್ಲಿ ಕೆಲವರು ಅದಕ್ಕೆಲ್ಲಾ ಆಸ್ಪತ್ರೆಗೆ ಹೋಗಬೇಕಾಗಿಲ್ಲ; ಹಿಂದೆ ಆಸ್ಪತ್ರೆಯಲ್ಲಿ ಕೆಲಸ ಮಾಡುತ್ತಿದ್ದು ಈಗ 'ಡಾಕ್ಟರ್' ಮಾದಪ್ಪನಾಗಿ ಪ್ರಾಕ್ಟೀಸ್ ಮಾಡುತ್ತಿರುವವನ ಹತ್ತಿರವೇ ಮಾಡಿಸುವುದು ಲೇಸು ಎಂದರಂತೆ. ಅವನಿಂದಲೇ ಸುನ್ನತಿ ಮಾಡಿಸಿಕೊಂಡ!

ನಾನು ಕೊಳ್ಳೇಗಾಲಕ್ಕೆ ಹೋಗುವ ಒಂದೆರಡು ವರ್ಷಗಳ ಹಿಂದೆ ಮಾದಪ್ಪ ನಮ್ಮ ಆಸ್ಪತ್ರೆಯಲ್ಲಿ ವಾರ್ಡ್‌ಬಾಯ್ ಆಗಿ ಸೇವೆ ಸಲ್ಲಿಸುತ್ತಿದ್ದವನು. ಬಿಡುವಿನ ಸಮಯದಲ್ಲಿ ಅವರಿವರಿಗೆ ಮಾತ್ರೆ, ಇಂಜಕ್ಷನ್ ನೀಡುವ ಅಭ್ಯಾಸವಿಟ್ಟುಕೊಂಡು, ಒಂದು ಬಗೆಯ 'ಖಾಸಗಿ' ಪ್ರಾಕ್ಟೀಸ್‌ನಲ್ಲಿ ತೊಡಗಿಸಿಕೊಂಡಿದ್ದ. ಮುಂದೆ ಆಸ್ಪತ್ರೆ ಕೆಲಸ ಕಾರ್ಯಗಳಲ್ಲಿ ಅಡಚಣೆಯಾಗು ತ್ತಿದ್ದುದರಿಂದ ಸ್ವಯಂ ನಿವೃತ್ತಿ ಪಡೆದು ಪೂರ್ಣಪ್ರಮಾಣದ ಖಾಸಗಿ ಪ್ರಾಕ್ಟೀಸ್ ಆರಂಭಿಸಿದ. ಮದರಾಸಿನಲ್ಲಿದ್ದ ಹೋಮಿಯೋಪಥಿಕ್ ಸಂಸ್ಥೆಯೊಂದರೊಡನೆ ಪತ್ರವ್ಯವಹಾರ ನಡೆಸಿ

'ಡಾಕ್ಟರ್' ಆದ. ಆ ಸಲುವಾಗಿ ಅವರು ನೀಡಿದ ಚಿತ್ತಾಕರ್ಷಕ ಪದವೀ ದೃಢೀಕರಣ ಪತ್ರ ಅವನ ಕ್ಲಿನಿಕ್‌ನಲ್ಲಿ ರಾರಾಜಿಸುತ್ತಿತ್ತಂತೆ!

ಆಸ್ಪತ್ರೆಯಲ್ಲಿದ್ದಾಗ ವೈದ್ಯರು ಸಾಮಾನ್ಯವಾಗಿ ಮುಸ್ಲಿಂ ಮಕ್ಕಳಿಗೆ ಜರುಗಿಸುತ್ತಿದ್ದ 'ಮುಂಜಿ'(ಸುನ್ನತಿ)ಯ ಕ್ರಮಗಳನ್ನು ವೀಕ್ಷಿಸುತ್ತಿದ್ದ. ರಂಗಯ್ಯ ಅವನನ್ನು ನೋಡಲು ಹೋದಾಗ ಅಂತಹ ಮುಂಜಿಯನ್ನು ತಾನು ಮಾಡುತ್ತೇನೆಂದು ಭರವಸೆ ನೀಡಿದ. ಹಾಗೂ ಸ್ಥಳೀಯ ಅರಿವಳಿಕೆ ಇಂಜಕ್ಷನ್ ನೀಡಿ ಮುಂದೊಗಲನ್ನು ಕತ್ತರಿಸಿ, ಬಹುಶಃ ತನ್ನಲ್ಲೇ ಇದ್ದ ದಪ್ಪ ದಾರದಿಂದ ಕೆಲವು ಹೊಲಿಗೆಗಳನ್ನೂ ಹಾಕಿದ. ಆಪರೇಷನ್ ಆದ ನಂತರವೂ ರಂಗಯ್ಯನಿಗೆ ಮೂತ್ರ ಮಾಡುವ ಕಷ್ಟ ಕಡಿಮೆಯಾಗಲಿಲ್ಲ. ಮೂತ್ರ ದ್ವಾರದಲ್ಲೇನೋ ಅಡಚಣೆ ಇರಬೇಕೆಂದು ತನ್ನಲ್ಲಿದ್ದ ಉದ್ದನೆ ಲೋಹದ ಕಡ್ಡಿಯನ್ನು ತೂರಿದ. ಅದು ಸ್ವಲ್ಪ ದೂರ ಸಾಗಿದ ನಂತರ ಮುಂದೆ ಹೋಗಲಿಲ್ಲ. ಸ್ವಲ್ಪ ಬಲವಂತವನ್ನೂ ಮಾಡಿರಬೇಕು. ಮೂತ್ರ ದ್ವಾರದ ಮೂಲಕ ರಕ್ತ ಹೊರಬರಲಾರಂಭಿಸಿತು. ಇನ್ನೊಂದು ದಿನದಲ್ಲಿ ಮೂತ್ರ ಹರಿದು ಬರುತ್ತದೆಂದು ಕಳುಹಿಸಿಕೊಟ್ಟ. ಮೂತ್ರ ಬರುವ ಬದಲಿಗೆ ರಂಗಯ್ಯನ ಶಿಶ್ನ, ವೃಷಣ ಚೀಲ ಮುಂತಾದವೆಲ್ಲಾ ಶೀಘ್ರಗತಿಯಲ್ಲಿ ಊದಲಾರಂಭಿಸಿದವು. ಮೂತ್ರ ವಿಸರ್ಜನೆಯಾಗದ ತೊಂದರೆ ಒಂದು ಕಡೆಯಾದರೆ, ಜನನಾಂಗದ ಭಾಗವೆಲ್ಲಾ ಊದಿಕೊಂಡ ಬೇನೆ ಇನ್ನೊಂದು ಕಡೆಯಿಂದಾಗಿ ಬಳಲಿ ಬಸವಳಿದ. ಒಂದೆರಡು ದಿನಗಳಲ್ಲಿ ಕೊಳೆತ ಕೀವು ಒಸರಿ ದುರ್ಗಂಧ ಬೀರಲಾರಂಭಿಸಿತು. ಇನ್ನು ತಡೆಯಲಾಗದೆ ಆಸ್ಪತ್ರೆಗೆ ಬರುವುದು ಅನಿವಾರ್ಯವಾಯಿತು.

ಮೂತ್ರನಾಳಕ್ಕೆ ಲೋಹದ ಕಡ್ಡಿಯನ್ನು ತುರುಕಿದಾಗ ಅದರ ಭಿತ್ತಿ ಹರಿದಿದ್ದರಿಂದ ಮತ್ತೆ ಬರುವ ಮೂತ್ರವೆಲ್ಲಾ ಆ ಗಾಯದ ಮೂಲಕ ನಿಧಾನಗತಿಯಲ್ಲಿ ಸೋರಿ ಅಂಗಾಂಶಗಳಲ್ಲಿ (tissues) ಶೇಖರಣೆಯಾಗುತ್ತದೆ. ಮೂತ್ರದಂಥ ತೀಕ್ಷ್ಣ ನಮೂನೆ ಹಾಗೂ ರೋಗ ಜನಕ ಮಿಣೆಜೀವಿ (microbe) ಮಿಶ್ರಿತ ಮೂತ್ರ ಅಂಗಾಂಶಗಳಲ್ಲಿ ಸೇರಿದಾಗ ಅವೆಲ್ಲಾ ಕೊಳೆತು ಕೀವು ಗಟ್ಟುವುದು ಸ್ವಾಭಾವಿಕ. ರಂಗಯ್ಯನಿಗೆ ಉಂಟಾಗಿದ್ದುದು ಅದೇ ಪರಿಸ್ಥಿತಿ!

ನನ್ನ ಮನಸ್ಸಿನಲ್ಲಿ ಒಂದು ತರಹೆಯ ದ್ವಂದ್ವ ಆಲೋಚನೆಗಳುಂಟಾದವು. ಅಂತಹ ಪರಿಸ್ಥಿತಿಯಲ್ಲಿ ಸಹಾಯ ಕೋರಿ ಬಂದಾಗ ಸೂಕ್ತ ಚಿಕಿತ್ಸೆ ನೀಡುವುದು ನಮ್ಮ ಕರ್ತವ್ಯ. ಆದರೆ ರಂಗಯ್ಯನಲ್ಲಿ ಅಂತಹ ಸ್ಥಿತಿಯುಂಟು ಮಾಡಿದವನು ವೈದ್ಯಕೀಯ ವಿಷಯಗಳ ತರಬೇತಿ ಪಡೆಯದ 'ನಕಲಿ-ವೈದ್ಯ' (Quack 'Doctor'). ಆ ನಕಲಿ ವೈದ್ಯ ಅದೆಷ್ಟು ಜನರಿಗೆ ಅಂತಹ ಚಿಕಿತ್ಸೆಗಳನ್ನು ನೀಡಿರುವನೋ; ಮುಂದೆ ಅದೇ ರೀತಿ ಸಮಾಜಕ್ಕೆ ಅಪಾಯಕಾರಿಯಾಗಿ ಪರಿಣಮಿಸಬಹುದು. ತರಬೇತಿ ಪಡೆಯದ ಅಂತಹವರು ಶಸ್ತ್ರ ಚಿಕಿತ್ಸೆಯಂಥ ವೈಜ್ಞಾನಿಕ ಕ್ರಮವನ್ನು ಜರುಗಿಸುವುದು ನ್ಯಾಯ ಬಾಹಿರ; ಕಾನೂನು ಪ್ರಕಾರ ಶಿಕ್ಷಾರ್ಹ. ಇಷ್ಟೆಲ್ಲಾ ಮಂಥನ ಮಾಡಿ ರಂಗಯ್ಯನಿಗೆ ಚಿಕಿತ್ಸೆ ನಡೆಸಿದವನು ನ್ಯಾಯ ಬಾಹಿರ ಕಾರ್ಯ ಜರುಗಿಸಿದ್ದಾನೆ. ಅಂತಹ ರೋಗಿಗೆ ಮುಂದುವರಿದ ಚಿಕಿತ್ಸೆ ನಾನು ಜರುಗಿಸಿ ಅವನೇನಾದರು ಸಾವಿಗೀಡಾದರೆ ಅದರ ಜವಾಬ್ದಾರಿ ನನ್ನ ಮೇಲೆ ಬರಬಹುದು. ಅಲ್ಲದೆ ಅವನ ಪರಿಸ್ಥಿತಿಯೂ ಅಷ್ಟೇನೂ ಉತ್ತಮವಾಗಿಲ್ಲ; ಅದರಿಂದ ಮೈಸೂರಿನಂಥ ದೊಡ್ಡ ಆಸ್ಪತ್ರೆಗೆ ಕೊಂಡೊಯ್ಯುವುದು ಸೂಕ್ತವೆಂದು ಅವನ ಕಡೆಯವರಿಗೆ ಹೇಳಿದೆ. ಅದೆಲ್ಲಾ ಅವರಿಗೆ ಸಾಧ್ಯವಾಗದ ಕೆಲಸ; ಏನೇ ಆಗುವುದಾದರೂ ಅವರೇ ಜವಾಬ್ದಾರಿ ವಹಿಸಿಕೊಳ್ಳುತ್ತಾರೆಂದು ಭರವಸೆ ನೀಡಿದರು. ಆಗಲೂ ನಾನು ಒಂದು ನಿಬಂಧನೆ ವಿಧಿಸಿದೆ. ಅವನನ್ನು ನಾನೇ ಚಿಕಿತ್ಸೆ ಗೊಳಪಡಿಸಬೇಕಾದರೆ ಪ್ರಕರಣದ ಬಗೆಗೆ

ಪೋಲೀಸರಿಗೆ ದೂರು ನೀಡುತ್ತೇನೆ. ನಡೆದದ್ದರ ಬಗೆಗೆ ನಿಜ ಸಂಗತಿಯ ಹೇಳಿಕೆ ನೀಡಬೇಕು. ಹಾಗೂ ಮುಂದೆ ಕೋರ್ಟಿನಲ್ಲಿ ವಿಚಾರಣೆ ಸಮಯದಲ್ಲಿ ಅದರಂತೆ ನಡೆದುಕೊಳ್ಳಬೇಕೆಂದು ಹೇಳಿದೆ. ಅದಕ್ಕೂ ಅವರೆಲ್ಲಾ ಸಮ್ಮತಿಸಿದರು. ಪೋಲೀಸರಿಗೆ ದೂರು ಸಲ್ಲಿಸಿದೆ. ಅವರು ಅವನ ಹೇಳಿಕೆ ತೆಗೆದುಕೊಂಡರು. ನಾನೂ ಸಹ ಅಪಘಾತಗಳ ಪುಸ್ತಕದಲ್ಲಿ ವಿವರಗಳನ್ನು ದಾಖಲು ಮಾಡಿಕೊಂಡೆ.

ರಂಗಯ್ಯನ ಮೂತ್ರನಾಳ ಹರಿದು, ಅದರ ಮೂಲಕ ತತ್‌ಕ್ಷಣ ಮೂತ್ರ ಹರಿಯುವಂತೆ ಮಾಡುವುದು ಸಾಧ್ಯವಿರಲಿಲ್ಲ. ಅದರಿಂದ ಕಿಬ್ಬೊಟ್ಟೆ ಪ್ರದೇಶದಲ್ಲಿ ತೂತುಮಾಡಿ ರಬ್ಬರ್ ನಳಿಕೆಯನ್ನು (Catheter) ಮೂತ್ರಕೋಶದೊಳಗೆ ತೂರಿಸಿದೆ. ಅದರಿಂದ ಶೇಖರವಾದ ಮೂತ್ರವೆಲ್ಲಾ ಹೊರಬರುವಂತಾಯಿತು. ಅದನ್ನೊಂದು ಬಾಟಲಿಗೆ ಇಳೀಬಿಟ್ಟು ಕೆಲವು ದಿನಗಳು ಮಾತ್ರ ಅಲ್ಲೇ ಹರಿಯುವಂತೆ ಮಾಡಿದೆ. ಊದಿಕೊಂಡು ಕೊಳೆತ ಅಂಗಾಂಶಗಳನ್ನು ಕತ್ತರಿಸಿ ತೆಗೆದು ಶುಚಿಮಾಡಿದೆವು. ಈ ಎಲ್ಲಾ ಕ್ರಮಗಳಿಂದ ಅವನು ಚೇತರಿಸಿಕೊಂಡು ಆಸ್ಪತ್ರೆಯಿಂದ ಬಿಡುಗಡೆಯಾಗುವುದಕ್ಕೆ ಎರಡು ತಿಂಗಳೇ ಹಿಡಿಯಿತು.

ಪೋಲೀಸರು 'ಡಾಕ್ಟರ್' ಮಾದಪ್ಪನನ್ನು ವಿಚಾರಣೆಗೊಳಪಡಿಸಿದರು; ಅವನಿಗೆ 'ಡಾಕ್ಟರಾಗಿ' ಪ್ರಾಕ್ಟೀಸ್ ಮಾಡಲು ಅನುಮತಿ ನೀಡಿದ ಮದ್ರಾಸಿನ ಸಂಸ್ಥೆಯ ವಿವರಗಳನ್ನು ಪಡೆದುಕೊಂಡರು. ಅವನು ಆಪರೇಷನ್‌ಗೆ ಬಳಸಿದ (ಹಿಂದೆ ಆಸ್ಪತ್ರೆಯಿಂದ ಕದ್ದು ಸಾಗಿಸಿದ್ದ) ಸಲಕರಣೆಗಳನ್ನು ವಶಪಡಿಸಿಕೊಂಡರು. ಸಬ್ ಇನ್ಸ್‌ಪೆಕ್ಟರ್ ಒಬ್ಬರು ಮದ್ರಾಸಿಗೆ ತೆರಳಿ ಅವನಿಗೆ ಪ್ರಾಕ್ಟೀಸ್ ಮಾಡಲು ಅನುಮತಿ ನೀಡಿದ ಹೋಮಿಯೋಪಥಿಕ್ ಸಂಸ್ಥೆಯನ್ನು ಜಾಲಾಡಿಸಿದರು. ಅವರು ನೀಡಿದ ದೃಢೀಕರಣ ಪತ್ರದ ಪ್ರಕಾರ ಮಾದಯ್ಯ ಮಾತ್ರೆಗಳನ್ನು ಕೊಡಬಹುದೇ ಹೊರತು ಇಂಜಕ್ಷನ್ ನೀಡುವ ಅಥವಾ 'ಆಪರೇಷನ್' ಮಾಡುವ ತರಬೇತಿ ನೀಡಿರುವುದಿಲ್ಲವೆಂದು ಸ್ಪಷ್ಟ ಪಡಿಸಿದರಂತೆ.

ಕೊಳ್ಳೇಗಾಲದ ಕೋರ್ಟಿನಲ್ಲಿ ಕೇಸು ದಾಖಲಾಯಿತು. ಹಾಗೂ ಬಹಳ ಕಾಲ ಮುಂದುವರಿಯುತ್ತಲೇ ಇತ್ತು. ನಡುವೆ 'ಡಾಕ್ಟರ್' ಮಾದಪ್ಪನಿಗೆ ಒಂದು ಸಾರಿ ಮೂತ್ರ ಬಂದ್ ಆಗಿ ನನ್ನ ಹತ್ತಿರವೇ ಬರುವಂತಾಯಿತು. ತತ್‌ಕ್ಷಣದ ಉಪಶಮನಕ್ಕಾಗಿ ರಬ್ಬರ್ ನಳಿಕೆಯನ್ನು ಮೂತ್ರ ಕೋಶಕ್ಕೆ ತೂರಿಸಿ, ಶೇಖರಣೆಯಾದ ಮೂತ್ರವನ್ನು ಹೊರಬಿಟ್ಟೆ. ಮುಂದುವರಿದ ಪರೀಕ್ಷೆಯಿಂದ ಪ್ರೋಸ್ಟೇಟ್ ಗ್ರಂಥಿಯ ಊತದಿಂದ (ಮೂತ್ರ ಕೋಶದ ಹಿಂಭಾಗದಲ್ಲಿರುವ ಪ್ರೋಸ್ಟೇಟ ಗ್ರಂಥಿ ಊದಿಕೊಂಡು ಮೂತ್ರನಾಳದ ಮೇಲೆ ಒತ್ತಡ ಉಂಟು ಮಾಡುವುದರಿಂದ ಉದ್ಭವಿಸುವ ಸ್ಥಿತಿ) ಉದ್ಭವಿಸಿರುವ ಆ ಸ್ಥಿತಿಗೆ ಆಪರೇಷನ್ ಜರುಗಿಸಿ ಗಡ್ಡೆಯನ್ನು ತೆಗೆಯ ಬೇಕಾಗುತ್ತದೆ. ಆ ಕಾಲದಲ್ಲಿ ಅದನ್ನು ಎರಡು ಹಂತಗಳಲ್ಲಿ ಜರುಗಿಸುತ್ತಿದ್ದು, ಕೆಲಸಾರಿ ರಕ್ತ ಪೂರಣೆಯ ಅವಶ್ಯಕತೆಯೂ ಇರುತ್ತಿತ್ತು (ನಮ್ಮಲ್ಲಿ ಆಗಿನ್ನೂ ರಕ್ತ ಪೂರಣೆಯ ವ್ಯವಸ್ಥೆ ಯಾಗಿರಲಿಲ್ಲ). ಅದಕ್ಕಿಂತ ಈಗಲೂ ಮತ್ತೊಂದು ತರಹೆಯ ದ್ವಂದ್ವ ಉದ್ಭವಿಸಿತು. ಕೋರ್ಟಿನಲ್ಲಿ ಮಾದಪ್ಪನ ವಿರುದ್ಧ ನನ್ನ ದೂರಿನಿಂದಲೇ ಕೇಸೊಂದು ಮುಂದುವರಿಯುತ್ತಿದೆ. ಆಪರೇಷನ್‌ನಿಂದ ಅವನೇನಾದರೂ ಸಾಯುವಂತಾದರೆ, ಉದ್ದೇಶ ಪೂರ್ವಕವಾಗಿ ನನ್ನ ನಿರ್ಲಕ್ಷ್ಯದಿಂದಾಗಿದ್ದೆಂದು ಸಂಬಂಧಿಕರು ನನ್ನನ್ನೇ ತಪ್ಪಿತಸ್ಥನನ್ನಾಗಿಸುವ ಸಾಧ್ಯತೆಗಳನ್ನು ತಳ್ಳಿ ಹಾಕುವಂತಿರಲಿಲ್ಲ. ಈ ವಿವರಗಳನ್ನೆಲ್ಲಾ ಅವನ ಸಂಬಂಧಿಗಳಿಗೆ ವಿವರಿಸಿ ಮುಂದುವರಿದ ಚಿಕಿತ್ಸೆಗೆ ಮೈಸೂರಿಗೆ ಕೊಂಡಯ್ಯುವಂತೆ ಆಗ್ರಹ ಪಡಿಸಿದೆ. ಮಾದಪ್ಪ ಮತ್ತು ಅವನ ಸಂಬಂಧಿಗಳು ನನ್ನ

ಬಗೆಗೆ ಅವರಿಗೆಲ್ಲಾ ಸಂಪೂರ್ಣ ನಂಬಿಕೆ ಇರುವುದಾಗಿಯೂ ಆಪರೇಷನ್ ನಾನೇ ಮಾಡಬೇಕೆಂದು ದುಂಬಾಲು ಬಿದ್ದರು. ಆಪರೇಷನ್‌ನಿಂದಾಗಿ ಯಾವುದೇ ಕಷ್ಟನಷ್ಟಗಳು ಸಂಭವಿಸಿದರೂ ಅವಕ್ಕೆಲ್ಲಾ ತಾವೇ ಜವಾಬ್ದಾರರೆಂದು ಬರೆದು ರುಜು ಮಾಡಿಕೊಟ್ಟರು. ಅವನಿಗೆ ಎರಡು ಹಂತಗಳಲ್ಲಿ ಪ್ರೋಸ್ಟೇಟ್ ಗ್ರಂಥಿಯ ಆಪರೇಷನ್ ಮಾಡಿದೆ. ಗುಣಮುಖನಾಗಿ ಮನೆಗೆ ಹಿಂದಿರುಗಿದ.

ಕೋರ್ಟಿನಲ್ಲಿ 'ಡಾಕ್ಟರ್' ಮಾದಪ್ಪನ ವಿರುದ್ಧದ ಕೇಸು ಒಂದೂವರೆ-ಎರಡು ವರ್ಷ ಮುಂದುವರೆದಿತ್ತು. ಇನ್ನೇನು ಕೊಳ್ಳೇಗಾಲದಿಂದ ನಾನು ನಿರ್ಗಮಿಸುವ ಸಮಯ ಹತ್ತಿರ ಬರುತ್ತಿದೆಯೆಂಬ ಭಾವನೆಯುಂಟಾಗುವ ಹಂತ ಮುಟ್ಟಿತ್ತೆನಿಸುತ್ತದೆ. ಅವನ ಪರ ಲಾಯರು ವಾದಿ ರಂಗಯ್ಯನ ಕಡೆಯವರೊಡನೆ ರಾಜೀ ಸಂಧಾನ ನಡೆಸಿದರಂತೆ. ಯಾರೇ ಸರ್ಕಾರದ ವೈದ್ಯರು ಕೆಲವು ವರ್ಷಗಳಿದ್ದ ನಂತರ ಬೇರೆ ಊರಿಗೆ ವರ್ಗವಾಗಿ ಹೋಗುತ್ತಾರೆ; ಊರು ಮನೆಯವರಾದ ಅವರು ಎಂದಾದರೂ ಒಂದಾಗಿರಬೇಕಾಗುತ್ತದೆ. ಅದರಿಂದ ಕೇಸನ್ನು ವಾಪಸು ಪಡೆಯುವಲ್ಲಿ ತನ್ನ ಆಕ್ಷೇಪಣೆ ಇಲ್ಲವೆಂದು ಅರ್ಜಿ ಸಲ್ಲಿಸಲಿ ಎಂದು ಮನ ಒಲಿಸಿದರಂತೆ. ಮುಂದೆ ಅದರಂತೆಯೇ ಆಯಿತು! ನಾನು ಮೂಕ ವಿಸ್ಮಿತನಾದೆ.

ಕ್ರಿಮಿನಲ್ ಗರ್ಭಪಾತ ಜರುಗಿಸಿದ ಇನ್ನೊಂದು ಪ್ರಕರಣ ಈ ಸಂದರ್ಭದಲ್ಲಿ ಉಲ್ಲೇಖಾರ್ಹ. ಅದಾಗಲೇ ಮೂರು ಮಕ್ಕಳಿದ್ದ ಸರೋಜಮ್ಮ ಎಂಬ ಪಕ್ಕದ ಹಳ್ಳಿಯ ಮಹಿಳೆ; ನಾಲ್ಕನೇ ಸಾರಿ ಗರ್ಭಿಣಿಯಾಗಿದ್ದಳು. ಗರ್ಭಪಾತಕ್ಕೊಳಗಾಗಿ ಮಗುವನ್ನು ತೆಗೆಸುವ ನಿರ್ಧಾರವಾಯಿತು. ಆಗಿನ್ನೂ ನ್ಯಾಯಯುತವಾಗಿ ವೈದ್ಯಕೀಯ ಗರ್ಭಪಾತ ಜರುಗಿಸುವ ಕಾನೂನು ಜಾರಿಗೆ ಬಂದಿರಲಿಲ್ಲ. ಆಕೆಯ ಊರಿನಲ್ಲಿ ಮಿಲಿಟರಿಯಿಂದ ಬಿಡುಗಡೆ ಹೊಂದಿದ್ದ ಯೋಧನ ಹೆಂಡತಿಯೊಬ್ಬಳು ತಾನೂ ಒಬ್ಬ ಮಿಡ್‌ವೈಫ್ (ಸೂಲಗಿತ್ತಿ) ಎಂದು ಹೇಳಿಕೊಳ್ಳುತ್ತಾ ಕದ್ದುಮುಚ್ಚಿ ಗರ್ಭಪಾತ ಮಾಡಿಸುತ್ತಿದ್ದಳು. ಸರೋಜಮ್ಮನೂ ಅವಳ ಬಲೆಗೆ ಬಿದ್ದಳು. ಅದಾವುದೋ ಮದ್ದುಗಳನ್ನು ನೀಡಿ ಮೊದಲ ಪ್ರಯತ್ನ ಮಾಡಿದಳು. ರಕ್ತಸ್ರಾವವಾದರೂ ಭ್ರೂಣ ಹೊರಗೆ ಬಂದಂತೆ ಕಾಣಲಿಲ್ಲ. ಉದ್ದನೆಯ ಲೋಹದ ಕಡ್ಡಿಯನ್ನು ಜನನ ದ್ವಾರದೊಳಗೆ ತೂರಿಸಿ ಹಲವು ಸಾರಿ ಜಾಲಾಡಿಸಿದಳು. ಭ್ರೂಣ ಹೊರಬರಬಹುದೆಂದು ಮತ್ತೆ ಮೂರ್‍ನಾಲ್ಕು ದಿನ ಕಾಯ್ದು ನೋಡಿದಳು; ಭ್ರೂಣದ ಬದಲಿಗೆ ಜನನ ದ್ವಾರದ ಮೂಲಕ ಹೊಕ್ಕಳ ಬಳ್ಳಿಯ ತರಹದ 'ಕಪ್ಪು ಬಳ್ಳಿ'ಯೊಂದು ಹೊರ ಚಾಚಿತು. ಸರೋಜಮ್ಮನ ಕಿಬ್ಬೊಟ್ಟೆಯೂ ಊದಿಕೊಂಡು ಬಾಧೆಯುಂಟಾಗತೊಡಗಿತು. ಗಾಬರಿಯಾದ ಅವಳ ಕಡೆಯವರು ನಮ್ಮ ಆಸ್ಪತ್ರೆಗೆ ಕರೆ ತಂದರು. ಲೇಡಿ ಡಾಕ್ಟರು ಮತ್ತು ನಾನೂ ಸಹ ಜಂಟಿಯಾಗಿ ಅವಳನ್ನು ಪರೀಕ್ಷೆ ಮಾಡಿದೆವು. ಗವಸು (Glove) ಧರಿಸಿದ ಕೈಯನ್ನು ಜನನ ದ್ವಾರದ ಮೂಲಕ ತೂರಿಸಿದಾಗ ಅದು ಸರಾಗವಾಗಿ ಗರ್ಭಕೋಶದೊಳಗೆ ಹೊಗಿದ್ದಲ್ಲದೆ ಗರ್ಭಕೋಶದ ಭಿತ್ತಿಯಲ್ಲಿದ್ದ ಛಿದ್ರದ ಮೂಲಕ ಉದರ ಕೋಶದೊಳಗೂ ಪ್ರವೇಶಿಸಿತು. ಕೈಬೆರಳುಗಳಿಂದ ಕರುಳಿನ ಸುರುಳಿಗಳನ್ನು ಗುರುತಿಸಬಹುದಾಗಿತ್ತು.

ಪ್ರಕರಣದ ಬಗೆಗೆ ಸಂಬಂಧಿಗಳನ್ನು ವಿಚಾರಿಸಿದಾಗ 'ಮಿಲಿಟರಿ' ಸೂಲಗಿತ್ತಿ ಜರುಗಿಸಿದ ಕ್ರಮಗಳ ವಿವರಗಳನ್ನು ತೆರೆದಿಟ್ಟರು. ನನ್ನ ಕಾನೂನು ಪ್ರಜ್ಞೆ ಮತ್ತೆ ಎಚ್ಚರವಾಯಿತು. ಆ ಪ್ರಕರಣದಲ್ಲಿ ಹೊಟ್ಟೆಯನ್ನು ತೆರೆದು ಆಪರೇಷನ್ ಜರುಗಿಸಬೇಕೇಕಿತ್ತು; ಗರ್ಭಕೋಶ ಇಲ್ಲವೆ ಕರುಳಿನ ಸ್ವಲ್ಪ ಭಾಗವನ್ನು ಕತ್ತರಿಸಿ ತೆಗೆಯುವ ಪ್ರಮೇಯ ಒದಗಿಬರಬಹುದಾಗಿತ್ತು. ಮೇಲಾಗಿ

ರೋಗಿಯ ಸಾಮಾನ್ಯ ಸ್ಥಿತಿಯೂ ಕ್ಷೀಣವಾಗಿತ್ತು. ಅದರಿಂದ ಅವಳನ್ನು ಮೈಸೂರಿಗೆ ಸಾಗಿಸುವಂತೆ ಸಲಹೆ ಮಾಡಿದೆ. ಎಂದಿನಂತೆ ಅವರು ತಮ್ಮ ಅಸಹಾಯಕತೆಯನ್ನು ಮುಂದೊಡ್ಡಿ, ಗೋಗರಿಯ ಲಾರಂಭಿಸಿದರು. ಕ್ರಿಮಿನಲ್ ಗರ್ಭಪಾತದ ಪ್ರಕರಣಗಳೊಳ್ಳೊದಗಬಹುದಾದ ಕಾನೂನಿನ ತೊಡಕುಗಳನ್ನು ವಿವರಿಸಿದೆ. ಅವಕ್ಕೆಲ್ಲಾ ಅವರೇ ಜವಾಬುದಾರರೆಂದು ಬರೆದು ಕೊಡುವುದಕ್ಕೂ ಮುಂದಾದರು. ಅಂತಿಮವಾಗಿ ಪೋಲೀಸಿಗೆ ತಿಳಿಸುವ ಪ್ರಸ್ತಾವವನ್ನೂ ಮಾಡಿದೆ. ಅದೆಲ್ಲಕ್ಕೂ ಸಮ್ಮತಿಸಿದರು. ಪೋಲಿಸರು ಬಂದು ಪ್ರಕರಣ ದಾಖಲೆ ಮಾಡಿಕೊಂಡು, ಆಕೆಯ ಹೇಳಿಕೆ ಪಡೆದುಕೊಂಡರು. ನಮ್ಮ ಅಪಘಾತ ಪುಸ್ತಕದಲ್ಲೂ ದಾಖಲು ಮಾಡಲಾಯಿತು.

ನಮ್ಮಲ್ಲಿ ಆದಾಗಲೇ ರಕ್ತಪೂರಣ ವ್ಯವಸ್ಥೆ ಏರ್ಪಾಟಾಗಿತ್ತು. ಆಪರೇಷನ್‌ಗೆ ಮೊದಲೇ ಒಂದು ಬಾಟಲು ರಕ್ತ, ಹಾಗೂ ಕೆಲವು ಗ್ಲೂಕೋಸ್ ಬಾಟಲು, ಮತ್ತಿತರ ಬೆಂಬಲೋಪಚಾರದ ಕ್ರಮಗಳು ಜರುಗಿದವು. ಆಪರೇಷನ್‌ಗಾಗಿ ಉದರ ಕೋಶದ ಭಿತ್ತಿಯನ್ನು ತೆರೆದಾಗ ಅಚ್ಚರಿಯ ದೃಶ್ಯ ಕಾದಿತ್ತು. ಕಿಬ್ಬೊಟ್ಟೆಯೆಲ್ಲಾ ದುರ್ಗಂಧಭರಿತ ಕೀವು ಮಯವಾಗಿತ್ತು. ನಿರೀಕ್ಷಿಸಿ ದಂತೆ ಗರ್ಭಕೋಶ ಹರಿದು ಹೋಗಿತ್ತು. ಅಲ್ಲಿಯ ತೂತಿನ ಮೂಲಕ ಸಣ್ಣಕರುಳಿನ ಸುರುಳಿಗಳು ನುಸುಳಿ, ಜನನ ದ್ವಾರದ ಮೂಲಕ ನೇತಾಡುತ್ತಿದ್ದುದು ಈಗ ಸ್ಪಷ್ಟವಾಯಿತು. ಸಣ್ಣ ಕರುಳಿನ ಉಳಿದ ಕೆಲವು ಕಡೆಗಳಲ್ಲೂ ತೂತುಗಳಾಗಿದ್ದವು. ಮುಂದೆ ಕೊಳೆತು ಹೋಗಿದ್ದ ಭ್ರೂಣದ ಚೂರುಗಳ ಸಹಿತ ಉದರಕೋಶವನ್ನು ಶುಚಿ ಮಾಡಿದೆವು. ತೂತುಗಳಾಗಿ ಕೊಳೆತು ಕಪ್ಪಾಗಿದ್ದ ಕರುಳಿನ ಭಾಗವನ್ನು ಕತ್ತರಿಸಿ ಹೊರತೆಗೆದೆ. ಕತ್ತರಿಸಿದ ಎರಡು ಕರುಳಿನ ತುದಿಗಳನ್ನು ಜೋಡಿಸಿ ಹೊಲಿಗೆ ಹಾಕಿದೆ. ಹಾಗೆ ಹರಿದು ಕೊಂಡಿದ್ದ ಗರ್ಭಕೋಶವನ್ನು ತೆಗೆದು ಹಾಕುವುದೇ ಸರಿಯಾದ ಚಿಕಿತ್ಸಾ ವಿಧಾನವೆನಿಸಿದರೂ ರೋಗಿ ಇದ್ದ ವಿಷಮ ಸ್ಥಿತಿಯಲ್ಲಿ ಅಪಾಯಕಾರಿಯೆಂದು ನಿರ್ಧರಿಸಿ, ಹರಿದ ತೂತನ್ನು ಮಾತ್ರ ಮುಚ್ಚಲಾಯಿತು. ಆಪರೇಷನ್ ಜರುಗಿಸುವ ಸಮಯದಲ್ಲಿ ಇನ್ನೊಂದು ಬಾಟಲು ಹಾಗೂ ನಂತರ ಮತ್ತೂ ಒಂದು ಬಾಟಲು ರಕ್ತಪೂರಣೆ ಮಾಡಿದೆವು. ಆಪರೇಷನ್ ಮುಗಿಸುವ ಮುನ್ನ ಮತ್ತೆ ಮಕ್ಕಳಾಗದಂತೆ ಟ್ಯೂಬೆಕ್ಟಮಿ ಮಾಡಲು ಮರೆಯಲಿಲ್ಲ. ನಂತರ ಕೆಲವು ದಿನಗಳು ಸರೋಜಮ್ಮ ಸಾವು-ಬದುಕಿನ ನಡುವೆ ಸೆಣಸಾಡಿದಳು; ಅಂತಿಮವಾಗಿ ಚೇತರಿಸಿ ಕೊಂಡಳು.

ಹಿಂದೆ ಉಲ್ಲೇಖಿಸಿದ ಪ್ರಕರಣದಂತೆ ಇದೂ ಸಹ ಕೋರ್ಟಿನಲ್ಲಿ ಬಹಳ ಸಮಯ ಮುಂದುವರಿಯಿತು. ಕೆಲವು ತಿಂಗಳುಗಳ ನಂತರ ನನಗೂ ವರ್ಗವಾಯಿತು. ಮುಂದೆ ದೊರೆತ ಸಮಾಚಾರದ ಪ್ರಕಾರ ಅದೂ ರಾಜಿಯಲ್ಲಿ ಪರ್ಯವಸಾನವಾಯಿತೆಂದಾಗ ಅಚ್ಚರಿಯೇನೂ ಆಗಲಿಲ್ಲ! ನನ್ನ ಸೇವಾ ಅವಧಿಯಲ್ಲಿ ಇಂತಹ ಪ್ರಕರಣಗಳು ಬೆಂಬಿಡದೆ ಕಾಡಿಸಿವೆ. ಕೆಲವು ವರ್ಷಗಳ ನಂತರ ನಾನು ಸೇವೆಯಿಂದ ನಿವೃತ್ತನಾಗುವ ಹಿಂದಿನ ದಿನ ಇಂತಹದೇ ಒಂದು ಪ್ರಕರಣ ಚಿಕ್ಕಮಗಳೂರಿನಲ್ಲಿ ಜರುಗಿತು. ಸೂಲಗಿತ್ತಿಯ ಕೃತ್ಯದಿಂದಲೇ ಯುವತಿಯೊಬ್ಬಳು ಸಾವಿಗೀಡಾಗಿದ್ದಳು. ಅದರಲ್ಲಿ ನಾನು ನೇರವಾಗಿ ಭಾಗಿಯಾಗದಿದ್ದರೂ, ನನ್ನ ಆಡಳಿತದ ಅವಧಿಯಲ್ಲಿ ಜರುಗಿದ್ದು, ಅದರ ಬಗೆಗೆ ಕಿರಿಯ ವೈದ್ಯರಿಗೆ ಹೇಳಿ ಮಾಡಿಸಿದ್ದೆಂಬುದರಿಂದ ನಿವೃತ್ತಿಯಾದ ಮೂರು ವರ್ಷಗಳ ನಂತರ ಕೋರ್ಟಿಗೆ ಹಾಜರಾಗಿ ಸಾಕ್ಷ್ಯ ನೀಡಿದ್ದೆ. ಅದರ ಹಣೇಬರವೂ ಇದೇ ರೀತಿಯಲ್ಲಿ ಅಂತ್ಯವಾಯಿತಂತೆ!

ನಮ್ಮ ದೇಶದಲ್ಲೀಗ ಪರಿಪೂರ್ಣವಾಗಿ ತರಬೇತಿ ಪಡೆದ ಪದವೀಧರ ವೈದ್ಯರ (ಎಂ.ಬಿ.ಬಿ.ಎಸ್) ಸಂಖ್ಯೆ ಮಿತಿ ಮೀರಿ ಬೆಳೆದಿದೆ. ಆದರೂ ನಕಲಿ ವೈದ್ಯರ ಹಾವಳಿ ದಿನೇ

ದಿನೇ ಹೆಚ್ಚಾಗುತ್ತಲೇ ಇರುವುದೊಂದು ವಿಪರ್ಯಾಸವೇ ಸರಿ. ಈ ದಿಸೆಯಲ್ಲಿ ಬರೇ ಸರ್ಕಾರವನ್ನಾಗಲೀ, ಸಾರ್ವಜನಿಕರನ್ನಾಗಲೀ, ವೈದ್ಯ ಸಮೂಹವನ್ನಾಗಲೀ ಪ್ರತ್ಯೇಕವಾಗಿ ದೂರುವುದರಲ್ಲಿ ಯಾವುದೇ ಪ್ರಯೋಜನವಾಗಲಾರದು. ವೈದ್ಯ ಸಮೂಹದವರು, ವೈದ್ಯರು ಲಭ್ಯವಿರದ ಹಳ್ಳಿಗಾಡಿನಂಥ ಪ್ರದೇಶಗಳಲ್ಲಿ ನೆಲಸಿ ನಾವು ಪ್ರತಿಪಾದಿಸುತ್ತಿರುವ ಮಾನವೀಯ ಹಾಗೂ ವೈಜ್ಞಾನಿಕ ವೈದ್ಯಕೀಯ ಸೌಲಭ್ಯಗಳು ದೊರಕುವಂತೆ ಮಾಡಬೇಕು. ವ್ಯಕ್ತಿಗತವಾಗಿ ಒಬ್ಬೊಬ್ಬ ವೈದ್ಯರೇ ಅಲ್ಲದೆ ಸಂಘಟನೆಗಳೂ ಸಹ ತಮ್ಮ ಜವಾಬ್ದಾರಿಯನ್ನು ನಿರ್ವಹಿಸುವಂತಾಗ ಬೇಕು. ಇಂದಿನ ಪರಿಸ್ಥಿತಿಯಲ್ಲಿ ನಮ್ಮ ದೇಶಬಾಂಧವರಾರೂ ವೈಜ್ಞಾನಿಕ ಚಿಕಿತ್ಸಾ ವಿಧಾನಗಳಿಂದ ವಂಚಿತರಾಗದಂತಹ ಪರಿಸರ ನಿರ್ಮಿಸುವುದರಲ್ಲಿ ನಮ್ಮ ಹೊಣೆಯನ್ನು ನಿರ್ವಹಿಸುವಂತೆ ಆಗಬೇಕು. ಹಾಗೆ ಮಾಡಲಾಗದಿದ್ದಲ್ಲಿ ಅಸಹಾಯಕ, ಅಮಾಯಕ ಬಡ ರೋಗಿಗಳು ನಕಲಿ ವೈದ್ಯರ ಹತ್ತಿರ ಹೋಗದೆ ಬೇರೇನು ಮಾಡಲು ಸಾಧ್ಯವಿದೆ? ಸರ್ಕಾರದವರು ಯಾವ ಯಾವ ವಲಯಗಳಲ್ಲಿ ಸೇವೆ ಸಲ್ಲಿಸಲು ಯಾವ ದರ್ಜೆಯ ವೈಜ್ಞಾನಿಕ ತರಬೇತಿ ಪಡೆದ ವೈದ್ಯ ವರ್ಗದವರ ಅವಶ್ಯಕತೆ ಇದೆ ಎಂಬುದನ್ನು ಗುರುತಿಸಿ, ಅಲ್ಲೆಲ್ಲಾ ಅವರು ನೆಲಸುವಂತೆ ಮಾಡಬೇಕು. ಅಂತಹವರಿಗೆ ಉತ್ತೇಜನಕರ ಭತ್ಯೆ, ವಸತಿ, ಮತ್ತಿತರ ಸೌಲಭ್ಯಗಳನ್ನು ಒದಗಿಸಲು ಮುಂದಾಗಬೇಕು. ಸಾರ್ವಜನಿಕರು, ರೋಗಗಳು ಮತ್ತು ಅವುಗಳ ಚಿಕಿತ್ಸೆಯ ಬಗೆಗೆ ತಿಳುವಳಿಕೆ ಇಲ್ಲದ ಅಮಾಯಕರಿಗೆ ವೈಜ್ಞಾನಿಕ ರೀತಿಯ ಚಿಕಿತ್ಸೆಗೊಳಗಾಗುವ ಪ್ರಯೋಜನಗಳನ್ನು ಮನದಟ್ಟು ಮಾಡಿಕೊಡಬೇಕು. ವಿದ್ಯಾವಂತರಾದ ವಕೀಲರು, ಪೋಲೀಸರು, ವೈದ್ಯರೇ ಮುಂತಾದವರೆಲ್ಲಾ ತಮ್ಮ ತಮ್ಮ ವೃತ್ತಿಯ ಅಥವಾ ಸ್ವಹಿತಾಸಕ್ತಿಯನ್ನು ಗುರಿಯಾಗಿಟ್ಟುಕೊಳ್ಳದೆ ನಕಲಿ ವೈದ್ಯರಿಂದಾಗುತ್ತಿರುವ ಹಾನಿಯನ್ನು ತಪ್ಪಿಸಲು ತಮ್ಮ ನೈತಿಕ ಕರ್ತವ್ಯಗಳಿಗೆ ಬದ್ಧರಾಗಿರಬೇಕು. ದುರದೃಷ್ಟಕರ ಸಂಗತಿಯೆಂದರೆ ಇದಾವ ವರ್ಗದವರೂ ಇಂತಹ ಅಂಶಗಳ ಬಗೆಗೆ ಗಮನ ಹರಿಸದೆ ವಾಗ್ವೈಖರಿ ಪ್ರದರ್ಶಿಸುತ್ತಾ ಮುಸುಕಿನ ಗುದ್ದಾಟ ಮಾಡುತ್ತಿರುವಂತಿದೆ.

## ವೈದ್ಯಕೀಯ-ನ್ಯಾಯ ಪ್ರಕರಣಗಳ ವೈವಿಧ್ಯತೆ

ಮೊದಲ ಬಾರಿಗೆ ಸರ್ಕಾರಿ ಕೆಲಸಕ್ಕೆ ಸೇರಿದಾಗ ಶಿಕಾರಿಪುರವನ್ನು ಹೊರತು ಪಡಿಸಿದರೆ ಕೊಳ್ಳೇಗಾಲದಲ್ಲಿ ಅತಿ ಹೆಚ್ಚು ಸಂಖ್ಯೆಯ ವೈದ್ಯಕೀಯ ನ್ಯಾಯಪ್ರಕರಣಗಳನ್ನು, (ಮೆಡಿಕೋ ಲೀಗಲ್ ಕೇಸುಗಳು) ಅದರಲ್ಲೂ ಶವಪರೀಕ್ಷೆಗಳನ್ನು ಜರುಗಿಸುವ ಅವಕಾಶ ದೊರತದ್ದು. ಕೊಳ್ಳೇಗಾಲ ಆಸ್ಪತ್ರೆಯು ನೆಲೆಯಾಗಿರುವ ವಿಶಿಷ್ಟ ವಲಯ ಮತ್ತು ಅಲ್ಲಿರುತ್ತಿದ್ದ ವೈದ್ಯರ ಸಂಖ್ಯೆಯೇ ಇಂತಹ ಪರಿಸ್ಥಿತಿಗೆ ಕಾರಣವೆಂಬ ವಿಚಾರ ಮೊದಲೇ ಪ್ರಸ್ತಾಪವಾಗಿದೆ. ಅವುಗಳಲ್ಲಿ ಕೆಲವನ್ನು ಪ್ರಸ್ತಾಪಿಸಬಹುದಾಗಿದೆ.

ಸೆಷನ್ಸ್ ಕೋರ್ಟಿನಲ್ಲಿ ನಾನು ಸಾಕ್ಷ್ಯ ಹೇಳಬೇಕಾದ ಪ್ರಕರಣವೊಂದರಲ್ಲಿ ನನ್ನ ಮೇಲೆ ಪರೋಕ್ಷವಾಗಿ ಪ್ರಭಾವ ಬೀರಲು ಪ್ರಯತ್ನಿಸಿದ ಪ್ರಕರಣವೊಂದು ಈಗಾಗಲೇ ಪ್ರಸ್ತಾಪವಾಗಿದೆ. ಆ ಕೊಲೆ ಕೊಳ್ಳೇಗಾಲದಿಂದ ಸಾಕಷ್ಟು ದೂರದ ಹಳ್ಳಿಯಲ್ಲಿ ಹಿಂದಿನ ದಿನ ಸಾಯಂಕಾಲ ಜರುಗಿತ್ತು. ಪೋಲಿಸರು ಅಂದೇ ಹಳ್ಳಿಗೆ ಹೋಗಿ ಮಹಜರು ನಡೆಸಿದರು. ಮರುದಿನ ಬೆಳಿಗ್ಗೆ ನಾನು ಸ್ಥಳಕ್ಕೇ ಬಂದು ಶವಪರೀಕ್ಷೆ ಜರುಗಿಸಬೇಕೆಂದು ಕೋರಿಕೆ ಪತ್ರ ಕಳುಹಿಸಿದರು. ಸಾಮಾನ್ಯವಾಗಿ ಸಾವು ಸಂಭವಿಸಿ ೩-೪ ದಿನಗಳಾಗಿದ್ದು ಅದು ಕೊಳೆತು ಅಲ್ಲಿಂದ ಎತ್ತಿ ಆಸ್ಪತ್ರೆಗೆ ಸಾಗಿಸಲಾಗದ ಸಂದರ್ಭಗಳಲ್ಲಿ ಅಂತಹ ಕೋರಿಕೆ ಬರುತ್ತದೆ. ಅಂತಹ ಕೋರಿಕೆಗಳನ್ನು

ನಿರ್ಲಕ್ಷಿಸದೆ ನಾನೇ ಸ್ಥಳಕ್ಕೆ ಹೋಗಿ ಹಲವಾರು ಶವಪರೀಕ್ಷೆ ಮಾಡಿದ್ದೆ. ಆದರೆ ಈ ಪ್ರಕರಣದಲ್ಲಿ ಹಿಂದಿನ ದಿನ ಕೊಲೆಯಾದ ಹೆಣವನ್ನು ಆಸ್ಪತ್ರೆಗೆ ತರದೆ ಅಲ್ಲಿಗೇ ಬರುವಂತೆ ಕರೆ ಬಂದದ್ದು ಸ್ವಲ್ಪ ಅತಿಯೆನಿಸಿತು. ಪೋಲೀಸರಿಗೆ ಜವಾಬು ಕಳುಹಿಸಿ ಹಿಂದಿನ ದಿನ ಅಸು ನೀಗಿದ ವ್ಯಕ್ತಿಯ ಶವ ಪರೀಕ್ಷೆಗೆ ವೈದ್ಯರು ಸ್ಥಳಕ್ಕೆ ಹೋಗುವ ಅವಶ್ಯಕತೆ ಇರುವುದಿಲ್ಲವೆಂತಲೂ, ಅಂತಹ ಪರಿಸ್ಥಿತಿಗೆ ಸ್ಪಷ್ಟವಾದ ಕಾರಣವನ್ನೂ ಸೂಚಿಸಿಲ್ಲವಾದ್ದರಿಂದ ಶವವನ್ನು ಆಸ್ಪತ್ರೆಗೆ ತಂದರೆ ಪರೀಕ್ಷೆ ಮಾಡುವುದಾಗಿ ಬರೆದೆ. ಅಲ್ಲದೆ ಈ ಪ್ರಕರಣದ ಬಗೆಗೆ ಮೇಲಧಿಕಾರಿಗಳಾದ ಮೈಸೂರಿನ ಡಿ.ಎಚ್.ಓ. ಅವರ ಗಮನಕ್ಕೂ ತಂದು ನಾನು ವರ್ತಿಸಿದ ರೀತಿಯ ವರದಿ ಮಾಡಿದೆ.

ಅಂದೇ ಮಧ್ಯಾಹ್ನ ಮೂರು ಗಂಟೆಯ ಸಮಯಕ್ಕೆ ಶವವನ್ನು ಆಸ್ಪತ್ರೆಗೇ ತಂದರು. ವಾಡಿಕೆಯಂತೆ ಶವಪರೀಕ್ಷೆಯನ್ನೂ ಜರುಗಿಸಿದೆ. ಶವಾಗಾರದಿಂದ ಹೊರಬಂದಾಗ ಎದುರಾದ ಪೋಲೀಸ್ ಅಧಿಕಾರಿಯೊಬ್ಬರು, ನಾನು ಅಲ್ಲಿಗೇ ಬಂದಿದ್ದರೆ ಒಳ್ಳೆಯ ಊಟ ಹಾಕಿಸುತ್ತಿದ್ದ ರೆಂದೂ, ನಾನು ತಪ್ಪಿಸಿಕೊಂಡಿದ್ದಕ್ಕೆ ಅಚ್ಚರಿ ವ್ಯಕ್ತ ಪಡಿಸಿದರು. ಅಂತಹ ಊಟಗಳು ನನಗೆ ಇಷ್ಟ ವಾಗುವುದಿಲ್ಲವೆಂದು ಕಟುವಾಗಿಯೇ ಉತ್ತರಿಸಿದೆ.

ಇನ್ನೊಂದು ಪ್ರಕರಣದಲ್ಲಿ ಪಕ್ಕದ ತಾಲ್ಲೂಕಿನಿಂದ ಹೊಟ್ಟೆಯ ಮುಂಗಡೆ ಉದ್ದನೆ ಗಾಯವಾದ ವ್ಯಕ್ತಿಯೊಬ್ಬನನ್ನು ಹಿಂದಿನ ದಿನ ಸಾಯಂಕಾಲ ಆಸ್ಪತ್ರೆಗೆ ಸೇರಿಸಿದ್ದರು. ಅಂದು ನಾನು ಊರಲ್ಲಿರಲಿಲ್ಲ. ಸಹಾಯಕ ವೈದ್ಯರು ಗಾಯಕ್ಕೆ ಹೊಲಿಗೆ ಹಾಕಿ ತಕ್ಕ ಚಿಕಿತ್ಸೆ ಜರುಗಿಸಿದ್ದರು. ಮರುದಿನ ಎಂದಿನಂತೆ ರೋಗಿಗಳನ್ನು ನೋಡುತ್ತಿದ್ದಾಗ ಆ ವ್ಯಕ್ತಿಯನ್ನೂ ಪರೀಕ್ಷೆ ಮಾಡಿದೆ. ಬ್ಯಾಂಡೇಜನ್ನು ತೆಗೆಸಿದಾಗ ಗಾಯದಿಂದ ಗಾಳಿ ಮಿಶ್ರಿತ ನೊರೆ ಹಾಗೂ ಕೆಂಪು ದ್ರವ ಒಸರುತ್ತಿತ್ತು. ಅದರರ್ಥ ಉದರಕೋಶದೊಳಗಿನ ಜಠರಕ್ಕೋ, ಕರುಳಿಗೋ ತೂತಾಗಿದೆ ಎಂಬುದನ್ನು ಬೇರೆ ಹೇಳಬೇಕಾಗಿರಲಿಲ್ಲ. ಆ ಗಾಯವಾದ ರೀತಿಯ ಬಗೆಗೆ ವಿಚಾರಿಸಿದಾಗ ಹಿಂದಿನ ದಿನ ಹೇಳಿದಂತೆ, ಹಿಪ್ಪುನೇರಳೇ ಸೊಪ್ಪು ಕತ್ತರಿಸುವ ಚಾಕುವಿನ ಮೇಲೆ ಆಕಸ್ಮಾತ್ತಾಗಿ ಎಡವಿ ಬಿದ್ದಿದ್ದರಿಂದ ಹಾಗಾಯಿತು ಎಂದು ಮತ್ತೆ ಹೇಳಿದ. ಸೊಪ್ಪು ಕತ್ತರಿಸುವ ಚಾಕುವಿನ ಪರಿಚಯವಿದ್ದು ಅಂತಹದರ ಮೇಲೆ ಬೀಳುವುದರಿಂದ ಜಠರ ಅಥವಾ ಕರುಳನ್ನು ಗಾಯ ಪಡಿಸುವಷ್ಟು ಆಳವಾಗ ಲಾರದೆಂಬ ಭಾವನೆ ನನ್ನದಾಯಿತು. ಉದ್ದೇಶ ಪೂರ್ವಕವಾಗಿಯೇ ಯಾರೋ ಚೂರಿಯಿಂದ ರಭಸವಾಗಿ ತಿವಿದಿದ್ದರಿಂದ ಅದಾಗಿದ್ದರ ಬಗೆಗೆ ಸಂದೇಹವಿರಲಿಲ್ಲ. ರೋಗಿಯನ್ನೇ ಅಲ್ಲದೆ ಅವನ ಸಂಬಂಧಿ ಗಳನ್ನು ಆ ಬಗೆಗೆ ಮತ್ತೆ ಮತ್ತೆ ವಿಚಾರಿಸಿದೆ. ಗಿಣಿ ಪಾಠ ಒಪ್ಪಿಸುವಂತೆ ಎಲ್ಲರೂ ಹೇಳಿದ್ದನ್ನೇ ಹೇಳುತ್ತಿದ್ದರು. ಪೋಲೀಸರು ಹಿಂದಿನ ದಿನವೇ ಅವನ ಹೇಳಿಕೆಯನ್ನು ದಾಖಲು ಮಾಡಿಕೊಂಡಿ ದ್ದರೂ, ನನಗುಂಟಾದ ಅನುಮಾನವನ್ನು ಪೋಲೀಸರಿಗೂ ಫೋನ್ ಮಾಡಿ ತಿಳಿಸಿದೆ. ತೂತಾಗಿರ ಬಹುದಾದ ಜಠರ ಅಥವಾ ಕರುಳಿಗೆ ಹೊಲಿಗೆ ಹಾಕಬೇಕಾಗಿರುವುದರಿಂದಲೂ, ಅಂತಹ ಕ್ರಮದಲ್ಲಿ ಅಡಗಿರುವ ಅಪಾಯದ ಬಗೆಗೂ ರೋಗಿಯ ಕಡೆಯವರಿಗೆ ವಿವರಿಸಿದೆ. ಮೈಸೂರಿನ ದೊಡ್ಡಾಸ್ಪತ್ರೆಗೆ ಅವನನ್ನು ಕೊಂಡು ಹೋಗಬಹುದೆಂದು ಒತ್ತಾಯಿಸಿದೆ. ಅದಾಗಲಾರದೆಂದು ಅವರ ಅಸಹಾಯಕತೆಯನ್ನು ವ್ಯಕ್ತಪಡಿಸಿದರು. ಆದರೂ ಮುಂದಾಗಬಹುದಾದ ಅಪಾಯಗಳಿಗೆ ಅವರೇ ಜವಾಬ್ದಾರರೆಂದು ಬರೆಸಿಕೊಂಡೆ.

ಅದೇ ಮಧ್ಯಾಹ್ನ ಆಪರೇಷನ್ ಮಾಡಿದೆವು. ಹೊಟ್ಟೆಯ ಭಿತ್ತಿಯನ್ನು ತೂರಿಕೊಂಡು ಒಳಹೋಗಿದ್ದ ಚೂರಿ, ಜಠರದೊಳಗೂ ನುಗ್ಗಿ ತೂತು ಮಾಡಿತ್ತು. ಅದರಿಂದಲೇ ಜಠರ ರಸ, ಆಹಾರದ ತುಣುಕುಗಳು ಹೊರಬಂದು ಉದರಕೋಶದೊಳಗೆಲ್ಲಾ ಆವರಿಸಿಕೊಂಡಿದ್ದವು.

ಉದರ ಕೋಶವನ್ನು ಶುಚಿಗೊಳಿಸಿ, ಜಠರದಲ್ಲಾದ ತೂತನ್ನು ಮುಚ್ಚಿ, ಹೊಲಿಗೆ ಹಾಕಿ ಉದರ ಕೋಶವನ್ನು ಮುಚ್ಚಲಾಯಿತು. ಸ್ವಲ್ಪ ವಯಸ್ಸಾಗಿದ್ದ ಅವನ ಸ್ಥಿತಿ ಸ್ವಲ್ಪ ಗಂಭೀರವಾಗಿಯೇ ಇತ್ತು.

ಮರುದಿನ ಬೆಳಗಾಗುತ್ತಲೇ ಅವನ ಊರಿನಿಂದ ಮುಸ್ಲಿಂ ಜನಾಂಗದ ಹೆಂಗಸರು-ಗಂಡಸರ ಗುಂಪು ಆಸ್ಪತ್ರೆಯ ಆವರಣದಲ್ಲಿ ನೆರೆದಿತ್ತು. ಗುಂಪು ಗುಂಪಾಗಿ ಚರ್ಚೆ, ವಾದ-ವಿವಾದಗಳಾಗುತ್ತಿದ್ದುದನ್ನು ಗಮನಿಸಬಹುದಾಗಿತ್ತು. ಅದೇ ಊರಿಂದ ಹಿಂದಿನಿಂದಲೂ ನಮ್ಮ ಆಸ್ಪತ್ರೆಗೆ ಬರುತ್ತಿದ್ದ ಪರಿಚಿತ ರೋಗಿಯೊಬ್ಬರನ್ನು ಗುಟ್ಟಾಗಿ ಮಾತಾಡಿಸಿದೆ. ಆ ಪ್ರಕರಣದ ಬಗೆಗೆ ಅವರಿಗೇನಾದರೂ ತಿಳಿದಿರಬಹುದೇ ಎಂದು ವಿಚಾರಿಸಿದೆ. ಅದರಿಂದ ಅದರ ಹಿಂದಿನ ಮರ್ಮ ತಿಳಿಯಿತು. ಕೆಲವು ವರ್ಷಗಳ ಹಿಂದೆ ತನ್ನ ಪಾಲಿನ ಆಸ್ತಿಯನ್ನು ಪಡೆದುಕೊಂಡು ಊರುಬಿಟ್ಟು ಹೋದ ತಮ್ಮ, ಅದನ್ನೆಲ್ಲಾ ಕಳೆದುಕೊಂಡು ಒಂದು ವಾರದ ಹಿಂದೆ ಊರಿಗೆ ಬಂದಿದ್ದ. ಆಸ್ತಿಯಲ್ಲಿ ಮತ್ತಷ್ಟು ಪಾಲು ಕೊಡಬೇಕೆಂದು ಅಣ್ಣನ ಹತ್ತಿರ ತಕರಾರು ಎತ್ತಿದ್ದ. ಅದರ ಸಲುವಾಗಿ ಜಗಳವಾಗುತ್ತಿದ್ದ ಸಮಯದಲ್ಲಿ ತಮ್ಮ ಅಣ್ಣನ ಹೊಟ್ಟೆಯ ಭಾಗಕ್ಕೆ ಚೂರಿಯಿಂದ ತಿವಿದಿದ್ದರಿಂದ ಆ ಗಾಯವಾಗಿತ್ತೆಂದು ಅವರು ವಿವರಿಸಿದರು. ಇಷ್ಟು ಖಚಿತವಾದ ವಿಷಯ ತಿಳಿದ ಮೇಲೆ ಮತ್ತೆ ಪೋಲೀಸರಿಗೆ ಫೋನ್ ಮಾಡಿ ಸುದ್ದಿ ಮುಟ್ಟಿಸಿದೆ. ಪಕ್ಕದ ತಾಲ್ಲೂಕಿನದ್ದಾದರಿಂದ, ಅಲ್ಲಿಯ ಪೋಲಿಸರಿಗೆ ಈ ವಿಷಯವನ್ನು ತಿಳಿಸುವುದಾಗಿ ಹೇಳಿದರು. ಆದರೆ ಆ ದಿಸೆಯಲ್ಲಿ ಮುಂದೇನಾಯಿತೋ ತಿಳಿಯದಾಯಿತು.

ಆಪರೇಷನ್ ನಂತರದ ದಿನಗಳಲ್ಲಿ ರೋಗಿಯ ಸ್ಥಿತಿ ಅಷ್ಟೇನೂ ತೃಪ್ತಿಕರವಾಗಿ ಮುಂದುವರಿಯಲಿಲ್ಲ. ಒಂದು ವಾರದವರೆಗೂ ಅಸ್ಥಿರತೆಯ ಅಂಚಿನಲ್ಲೇ ಇತ್ತು. ಪ್ರತಿ ದಿನ ಪರೀಕ್ಷೆ ಸಮಯದಲ್ಲಿ ಅವನಿಗೆ ಗಾಯ ಸಂಭವಿಸಿದ ಬಗೆಗೆ ಪರೋಕ್ಷವಾಗಿ ವಿಚಾರಿಸುತ್ತಲಿದ್ದೆ; ಅವನು ಹಿಂದಿನ ಮಾತನ್ನೇ ಪುನರುಚ್ಚರಿಸುತ್ತಿದ್ದ. ಬಹುಶಃ ಏಳನೆಯ ದಿನ ಇರಬೇಕು. ಸಾಯಂಕಾಲ ಆರೂವರೆ ಗಂಟೆ ಸಮಯ. ಮನೆಗೆ ತೆರಳುವ ಮುನ್ನ ಅವನನ್ನೊಂದು ಸಾರಿ ನೋಡಲು ವಾರ್ಡಿಗೆ ಹೋದೆ. ಎಂದಿನಂತೆ ನನ್ನ ಪ್ರಶ್ನೆಗೆ "ಇಲ್ಲಾ ಸ್ವಾಮಿ, ನಾನೇಕೆ ಸುಳ್ಳು ಹೇಳಲಿ. ದಿನಾ ಅದನ್ನೇ ಹೇಳ್ತಿದ್ದರೂ ನನ್ಮೇಲೆ ಅನುಮಾನನೇ ಹೋಗಿಲ್ವಾ?" ಎಂದು ಹೇಳ ತೊಡಗಿದ. ಅವನ ನಾಡಿಯ ಮೇಲೆ ಬೆರಳಿಟ್ಟಾಗ ಅದು ಸ್ವಲ್ಪ ಕ್ಷೀಣವಾಗಿ, ಚುರುಕಾಗಿರುವಂತೆ ಭಾಸವಾಯಿತು. ಸ್ವಲ್ಪ ಎದೆಯೊಳಗೆ ನೋವಾದಂತಾಗುತ್ತದೆಯೆಂದು ಎದೆ ಮೇಲೆ ಕೈ ಇಟ್ಟ. ರಕ್ತದೊತ್ತಡ ಪರೀಕ್ಷಿಸಲು ದಾದಿ ಅದರ ಪಟ್ಟಿಯನ್ನು ಒಂದು ತೋಳಿಗೆ ಸುತ್ತಿದಳು. ಅದರಡಿ ಸ್ಟೆಥಾಸ್ಕೋಪ್ ತೂರಿಸಿ ಬಡಿತಗಳನ್ನು ಆಲಿಸುವತ್ತ ಗಮನಹರಿಸಿದೆ. ಶಬ್ದಗಳು ಕೇಳಿಸುತ್ತಿರಲಿಲ್ಲ. ಮತ್ತೊಮ್ಮೆ ಪಟ್ಟಿಯನ್ನು ಸರಿಪಡಿಸಿ ಕಟ್ಟಿ ಕೇಳುವಿಕೆಯನ್ನು ಮುಂದುವರಿಸಿದೆ. ಆದಾಗ್ಗೂ ನಾಡಿಮಿಡಿತದ ಶಬ್ದಗಳು ನಾಪತ್ತೆ. ಸ್ಟೆಥಾಸ್ಕೋಪನ್ನು ಎದೆ ಮೇಲೆ ಇಟ್ಟು ಹೃದಯ ಬಡಿತದ ಶಬ್ದಗಳನ್ನು ಆಲಿಸಲು ಪ್ರಯತ್ನಿಸಿದೆ. ಒಂದು ಕೈಯಿಂದ ಎದೆಯನ್ನು ಬಿಗಿಯಾಗಿ ಹಿಡಿದದ್ದು ಹಾಗೇ ಇತ್ತು. ಹೃದಯ ಬಡಿತದ ಶಬ್ದಗಳೂ ಕೇಳಿಸುತ್ತಿರಲಿಲ್ಲ. ಉಸಿರಾಟವೂ ನಿಂತು ಹೋಗಿತ್ತು. ಅಕ್ಷರಶಃ ನನ್ನ ಕಣ್ಣು ಮುಂದೆಯೇ ಅವನ ಪ್ರಾಣ ಪಕ್ಷಿ ಹಾರಿ ಹೋಗಿತ್ತು. ಸ್ತಂಭೀಭೂತನಾದ ನನಗೆ ಏನನ್ನಬೇಕೋ ತಿಳಿಯದಾಯಿತು. ಮೈಮೇಲೆ ಬೆಡ್‌ಷೀಟ್ ಎಳೆದು ಮುಚ್ಚಿ ವಸ್ತು ಸ್ಥಿತಿಯನ್ನು ಹೊರಗೆ ನಿಂತಿದ್ದ ಸಂಬಂಧಿಕರಿಗೆ ಬಹಿರಂಗ ಪಡಿಸಿದೆ. ಅಂತಹ ಸಾವಿನ ಕಾರಣದ ಬಗೆಗೆ ಯೋಚಿಸುತ್ತಾ ಮನೆಕಡೆ ಕಾಲು ಹಾಕಿದೆ. ಮನಸ್ಸಿನಲ್ಲಿ ಒಂದು

ಹೊಳಹು ಸ್ಫುರಿಸಿದಂತಾಯಿತು. ಆ ರೀತಿಯ ಆಪರೇಷನ್, ಮತ್ತು ಹೆರಿಗೆಯಾದವರಿಗೂ ಸಹ ಕಾಲುಗಳಲ್ಲಿ ರಕ್ತ ಹೆಪ್ಪುಗಟ್ಟುವುದುಂಟು; (Thrombosis) ಅದರ ತುಣುಕುಗಳು ನಿಧಾನ ಗತಿಯಲ್ಲಿ ಚಲಿಸಿ, ಸರಿಸುಮಾರು ವಾರದ ಅವಧಿಯಲ್ಲಿ ಶ್ವಾಸಕೋಶಗಳ ಪ್ರಮುಖ ರಕ್ತನಾಳ ಗಳಲ್ಲಿ ಸಿಲುಕಿಕೊಂಡು ಉಸಿರು ನಿಂತು, ಹೃದಯದ ಕಾರ್ಯವೂ ಸ್ಥಗಿತವಾಗುವುದುಂಟು - 'ಪಲ್‌ಮೋನರಿ ಎಂಬಾಲಿಸಮ್' (Pulmonary Embolism). ಮರುದಿನ ಪೋಲಿಸರ ಕೋರಿಕೆಯಂತೆ ಶವಪರೀಕ್ಷೆಯನ್ನು ನಾನೇ ಜರುಗಿಸಿದೆ. ನನ್ನ ಅನುಮಾನಕ್ಕೆ ಸ್ಪಷ್ಟೀಕರಣ ದೊರೆಯಿತು. ಶ್ವಾಸಕೋಶಕ್ಕೆ ರಕ್ತ ತರುವ ರಕ್ತನಾಳಗಳಲ್ಲಿ ಹೆಪ್ಪುಗಟ್ಟಿದ ರಕ್ತದ ಉದ್ದನೆಯ ಕೆನೆಯನ್ನು ಹೊರತೆಗೆದೆ. ಆಸ್ಪತ್ರೆಗೆ ತಂದು (ಶವಾಗಾರ ಆಗ ಆಸ್ಪತ್ರೆಯಿಂದ ದೂರದಲ್ಲಿತ್ತು) ಸಹೋದ್ಯೋಗಿಗಳಿಗೆ ಪ್ರದರ್ಶಿಸಿದೆ.

ಈ ಪ್ರಕರಣದಲ್ಲಿ ಇನ್ನೊಂದು ವಿಶೇಷತೆಯೂ ಇತ್ತು. ಸಾಮಾನ್ಯವಾಗಿ ಸಾಯುವ ಹಂತ ಸಮೀಪಿಸುತ್ತಿರುವಾಗ ಯಾರೇ ಆಗಲಿ ನಿಜಸ್ಥಿತಿಯನ್ನು ಹೊರಗೆಡಹುತ್ತಾರೆಂಬ ನಂಬಿಕೆ ಇದೆ. ಈ ನಂಬಿಕೆ ಸರಿಯೋ ತಪ್ಪೋ ನನಗೆ ತಿಳಿಯದು. ಆದರೆ ಸಾಯುವ ಮುನ್ನ ತಮ್ಮ ಕೊನೆ ಆಸೆಯನ್ನು ಬಹಿರಂಗ ಪಡಿಸಲು ಕಾನೂನಿನಲ್ಲಿ ಅವಕಾಶವಿದೆ. ಮರಣದಂಡನೆಗೆ ಗುರಿಯಾದ ಅಪರಾಧಿಗೆ ಅವನ ಕೊನೆ ಆಸೆ ಏನೆಂದು ಕೇಳುವುದುಂಟು. ಅದನ್ನು ವ್ಯಕ್ತಿಯ 'ಅಂತಿಮ ಹೇಳಿಕೆ' (Dying declaration) ಎಂಬುದಾಗಿ ಕೋರ್ಟುಗಳಲ್ಲಿ ಕೆಲ ಸಾರಿ ಗಣನೆಗೆ ತೆಗೆದುಕೊಳ್ಳು ವುದುಂಟು. ಆ ನಂಬಿಕೆ ಅಂದು ಹುಸಿಯಾಯಿತೇನೋ ಅನ್ನಿಸಿತು!

ಇನ್ನೊಂದು ಪ್ರಕರಣದಲ್ಲಿ ಕೃತ್ಯ ನಡೆದ ಸ್ಥಳಕ್ಕೇ ಹೋಗಿ ಶವಪರೀಕ್ಷೆ ನಡೆಸ ಬೇಕಾಯಿತು. ಪಕ್ಕದ ತಾಲ್ಲೂಕಿನ ಹಳ್ಳಿಯ ಜೋಳದ ಹೊಲದಲ್ಲಿ ಕೊಳೆತು ನಾರುವ ಹೆಣ ಪತ್ತೆಯಾಯಿತು. ಅದರ ಒಂದು ಕಾಲನ್ನು ನಾಯಿಗಳು ಹೊಲದಿಂದ ಹೊರತಂದು ತಿನ್ನುತ್ತಿರು ವುದು ಹಳ್ಳಿಗರ ಗಮನ ಸೆಳೆಯಿತು. ಪೋಲೀಸರಿಗೆ ದೂರು ಹೋಯಿತು. ಅಕ್ಕ ಪಕ್ಕದಲ್ಲಿನ ದವಾಖಾನೆಯ ವೈದ್ಯರೂ ರಜಾ ಹಾಕಿದ್ದರಂತೆ! ಅದರಿಂದಾಗಿ ನನಗೆ ಕೋರಿಕೆ ಕಳುಹಿಸ ಬೇಕಾಯಿತಂತೆ.

ಒಂದು ಬೆಳಗಿನ ಹೊತ್ತು ಪೋಲೀಸರು ಜೀಪಿನಲ್ಲಿ ಸುಮಾರು ೨೦ ಮೈಲಿ ದೂರದ ಹಳ್ಳಿಗೆ ಕರೆದುಕೊಂಡು ಹೋದರು. ಹೊಲವನ್ನು ಸಮೀಪಿಸುತ್ತಿರುವಂತೆಯೇ ದುರ್ವಾಸನೆ ಮೂಗಿಗೆ ಬಡಿಯುತ್ತಿತ್ತು. ಹೊಲದ ನಡುವಿನ ಕಾಲು ದಾರಿಯ ಸನಿಹದಲ್ಲೇ ಹೆಣ ಬಿದ್ದಿತ್ತು. ಅಸಂಖ್ಯಾತ ನೊಣಗಳು ದೇಹವನ್ನು ಆವರಿಸಿಕೊಂಡಿದ್ದವು. ಅತಿ ಪ್ರಯಾಸದಿಂದ ಅದನ್ನು ಹೊರತಂದು ಪೊದೆಗಳಿಂದ ಮರೆಯಾದ ಸ್ವಲ್ಪ ತೆರಪಿನ ಜಾಗದಲ್ಲಿ ಮಲಗಿಸಿದರು. ಇನ್ನೂ ಯೌವನಾವಸ್ಥೆಯಲ್ಲಿದ್ದ ಯುವಕನ ಶವ; ತುಂಬು ಕೈತೋಳಿನ ಟೆರಿಲೀನ್ ಷರಟು, ಅದರ ಮೇಲೆ ಉಲ್ಲನ್ ಸ್ವೆಟರ್, ಕುತ್ತಿಗೆಯ ಸುತ್ತ ಉಲ್ಲನ್ ಮಫ್ಲರ್, ಹಾಗೂ ಟೆರಿಲಿನ್ ಪ್ಯಾಂಟು ಧರಿಸಿದ್ದನಾತ. ಅವನು ಧರಿಸಿದ್ದ ಉಡುಪುಗಳನ್ನೆಲ್ಲಾ ಕತ್ತರಿಸಿ ತೆಗೆಯಲಾಯಿತು. ಅವುಗಳಲ್ಲಿದ್ದ ನೋಟು ಪುಸ್ತಕ, ಪ್ಯಾಂಟಿನ ಜೇಬಿನಲ್ಲಿದ್ದ ಸ್ವಲ್ಪ ಚಿಲ್ಲರೆ ಹಣ ಮುಂತಾದವನ್ನೆಲ್ಲಾ ಪಂಚಾಯಿತಿ ದಾರರ ಸಮಕ್ಷಮ ತೆಗೆದು ಪೋಲಿಸರಿಗೆ ನೀಡಲಾಯಿತು. ಎಡಗಾಲು ಮುಂಗಾಲಿನಿಂದ ಕೆಳಗಡೆ ಭಾಗ ಅದರಲ್ಲಿರಲಿಲ್ಲ. ದೇಹದ ಬಹುಪಾಲು ಕೊಳೆತುಹೋಗಿದ್ದರೂ ಎದೆ ಗೂಡು, ಹೊಟ್ಟೆ ಕುತ್ತಿಗೆಯ ಭಾಗಗಳು ಸಾಕಷ್ಟು ಸುರಕ್ಷ ಸ್ಥಿತಿಯಲ್ಲಿರುವಂತಿದ್ದವು. ಕುತ್ತಿಗೆಯ ಸುತ್ತ ಪುಂಡಿನಾರಿನ ಹಗ್ಗದಿಂದ ಬಿಗಿಯಲಾಗಿತ್ತು.

ಕುತ್ತಿಗೆ ಭಾಗವನ್ನು ಮೊದಲು ಪರೀಕ್ಷೆಗೊಳಮಾಡಿದೆ. ಅದರ ಸುತ್ತಲಿದ್ದ ಹಗ್ಗವನ್ನು ಸಡಿಲಿಸಿ ಹೊರ ತೆಗೆಯಲಾಯಿತು. ಆ ಭಾಗ ಮೊದಲೇ ಪ್ರಸ್ತಾಪಿಸಿದಂತೆ ದೇಹದ ಇತರ ಭಾಗಗಳಷ್ಟು ಕೊಳೆತಿರಲಿಲ್ಲ. ಅದರ ಸುತ್ತ ಇದ್ದ ಸ್ವೆಟರ್ ಹಾಗೂ ಟೆರಿಲಿನ್ ಷರಟು ಹೊರಗಿನ ಶೀತಲ ವಾತಾವರಣದಿಂದ ಸ್ವಲ್ಪ ಮಟ್ಟಿಗೆ ರಕ್ಷಣೆ ಒದಗಿಸಿರಬೇಕು. ಆ ಭಾಗವನ್ನು ವಿಧಿವತ್ತಾಗಿ ಕತ್ತರಿಸಿ ಪರೀಕ್ಷೆ ಮಾಡಿದೆ. ಸಾಮಾನ್ಯವಾಗಿ ಜೀವಂತವಾಗಿರುವ ವ್ಯಕ್ತಿಯು ನೇಣುಹಾಕಿ ಕೊಂಡಾಗ, ಇಲ್ಲವೆ ಬಲಪ್ರಯೋಗದಿಂದ ಹಗ್ಗ ಬಿಗಿದು ಕಟ್ಟಿದಾಗ (strangulation) ಉಂಟಾಗಿರಬಹುದಾದ ಲಕ್ಷಣಗಳನ್ನು ಗುರುತಿಸಬಹುದಾಗಿತ್ತು. ಮುಂದೆ ಎದೆ ಗೂಡನ್ನೂ ತೆರೆದು ಪರೀಕ್ಷಿಸಿದೆ. ಆ ಭಾಗವೂ ಸಾಕಷ್ಟು ಉಡುಪಿನಿಂದ ರಕ್ಷಣೆಗೊಳಪಟ್ಟು ಅಷ್ಟಾಗಿ ಕೊಳೆತಂತಿರಲಿಲ್ಲ. ಶ್ವಾಸಕೋಶ, ಹೃದಯಗಳಲ್ಲಿ ವ್ಯಕ್ತಿಯನ್ನು ಉಸಿರು ಕಟ್ಟಿ ಸಾಯಿಸಿದಾಗಿನ ಲಕ್ಷಣಗಳನ್ನು (asphyxia) ನೋಡಬಹುದಾಗಿತ್ತು. ದೇಹದ ಇತರ ಭಾಗಗಳು ಬಹಳಷ್ಟು ಕೊಳೆತಿದ್ದವು. ಮೃತನು ಧರಿಸಿದ್ದ ಸುಭದ್ರ ಉಡಿಗೆ ತೊಡಿಗೆ ಹಾಗೂ ಡಿಸೆಂಬರ್ ತಿಂಗಳ ಚಳಿ ಈ ಭಾಗಗಳಿಗೆ ಪ್ರಕೃತಿಯ ವಿನಾಶದ ಕ್ರಿಯೆಯಿಂದ ಸುರಕ್ಷತೆ ಒದಗಿಸಿತ್ತೆನಿಸಿತು. ಇವೆಲ್ಲಾ ಕಾರಣಗಳಿಂದ ಕುತ್ತಿಗೆಗೆ ಹಗ್ಗ ಬಿಗಿದು ಉರುಲು ಹಾಕಿದ್ದರಿಂದ ಉಸಿರು ಕಟ್ಟಿದ ಪರಿಣಾಮದಿಂದ ಸಾವು ಉಂಟಾಗಿರಬೇಕೆಂಬ ಅಭಿಪ್ರಾಯ ನೀಡಿದೆ.

ಈ ಪ್ರಕರಣದ ಹಿಂದಿನ ಕತೆಯೂ ಕುತೂಹಲಕರವಾಗಿದೆ. ಮೈಸೂರಿನ ಅಬ್ದುಲ್ ರಜಾಕ್ ಭತ್ತ ಖರೀದಿಸಲು ಪ್ರತಿ ವರ್ಷ ಆ ಊರಿಗೆ ಬರುತ್ತಿದ್ದ. ಆ ಊರಿನ ಸೈಕಲ್ ಷಾಪಿನ ರಹಿಮಾನ್ ಸಾಮಾನ್ಯವಾಗಿ ಅವನ ಜೊತೆ ಹಳ್ಳಿಗಳಿಗೆ ಹೋಗಿ ವ್ಯಾಪಾರ ಕುದುರಿಸಲು ಸಹಕರಿಸುತ್ತಿದ್ದ. ಒಂದು ವಾರದ ಹಿಂದೆ ಬಂದಿದ್ದು ಹಳ್ಳಿಗಳಿಗೆ ಹೋಗಿ ಬರುತ್ತಿದ್ದರು. ಅವರಿಬ್ಬರೂ ಐದಾರು ದಿನಗಳ ಹಿಂದೆ ಒಂದು ಹಳ್ಳಿಗೆ ಹೋಗುತ್ತಿದ್ದುದನ್ನು ನೋಡಿದವರಿದ್ದರು; ಅಂದು ಸಾಯಂಕಾಲ ರಹಿಮಾನ್ ಒಬ್ಬನೇ ಜೋಳದ ಹೊಲದ ಒಳದಾರಿಯಿಂದ ಹೊರ ಬಂದಿದ್ದನ್ನು ನೋಡಿದ್ದ ಬೇರೆಯವರೂ ಇದ್ದರು. ರಜಾಕ್‌ನ ಶವ ಪತ್ತೆಯಾದಾಗ ಪೋಲೀಸರು ವಿಚಾರಣೆಗೆ ಬಂದಾಗಲೆಲ್ಲಾ ರಹಿಮಾನ್ ಅವರ ಜೊತೆ ನಿಕಟವಾಗಿ ತಿರುಗಾಡುತ್ತಿದ್ದು, ಅವರ ಊಟೋಪಚಾರಗಳ ಬಗೆಗೂ ಮುತುವರ್ಜಿ ವಹಿಸುತ್ತಿದ್ದ. ವಿಚಾರಣೆಯ ಒಂದು ಹಂತದಲ್ಲಿ ಅವರಿಬ್ಬರೂ ಹಳ್ಳಿ ಕಡೆ ಹೋಗುತ್ತಿದ್ದುದು ಹಾಗೂ ಸಂಜೆ ಅವನೊಬ್ಬನೇ ಜೋಳದ ಹೊಲದಿಂದ ಹೊರಬಂದದ್ದನ್ನು ನೋಡಿದವರ ಹೇಳಿಕೆಗಳು ದಾಖಲಾಗುತ್ತಿದ್ದಂತಲೇ ಸಬ್ ಇನ್ಸ್‌ಪೆಕ್ಟರ್ ರಹಿಮಾನನ್ನು ದಸ್ತಗಿರಿ ಮಾಡಿಬಿಟ್ಟರು! ಮುಂದೆ ಅವನನ್ನು ತೀವ್ರ ತನಿಖೆಗೊಳಪಡಿಸಿದಾಗ ಅವನು ಜರುಗಿಸಿದ ಕೃತ್ಯದ ವಿವರಗಳನ್ನೆಲ್ಲಾ ತೆರೆದಿಟ್ಟನಂತೆ.

ಮೈಸೂರು ಸೆಷನ್ಸ್ ನ್ಯಾಯಾಲಯದಲ್ಲಿ ಪ್ರಕರಣದ ವಿಚಾರಣೆ ಸಮಯದಲ್ಲಿ ಹಾಜರಾಗಲು ಸಮನ್ಸ್ ಜಾರಿಯಾಯಿತು. ಶವ ಪರೀಕ್ಷೆಯ ವರದಿಯನ್ನು ಮತ್ತೊಂದು ಸಾರಿ ತಿರುವು ಹಾಕಿ, ಅನುಮಾನವಿರಬಹುದಾದ ಅಂಶಗಳ ಬಗೆಗೆ ಪುಸ್ತಕಗಳಲ್ಲಿನ ಉಲ್ಲೇಖಗಳ ಪರಾಮರ್ಶೆ ಮಾಡಿದೆ. ಸುಮಾರು ೩-೪ ದಿನಗಳ ಹಿಂದೆ ಸತ್ತು ಕೊಳೆತ ಹೆಣಗಳ ಬಗೆಗೆ ಎಷ್ಟೋ ಸಾರಿ ಸ್ಪಷ್ಟ ಅಭಿಪ್ರಾಯ ನೀಡುವುದು ಕಷ್ಟ. ಅಂತಹದ್ದರಲ್ಲಿ ಸತ್ತು ಐದಾರು ದಿನಗಳಾದ ನಂತರ ಈ ಪ್ರಕರಣದಲ್ಲಿ ಸ್ಪಷ್ಟ ಅಭಿಪ್ರಾಯ ನೀಡಿದ್ದು ಅದೆಂತಾ ಅವಿವೇಕತನ ನನ್ನದು ಅನ್ನಿಸಿತು. ಆದರೂ ಶವಪರೀಕ್ಷಾ ಸಮಯದಲ್ಲಿ ನನಗೆ ಹೃದ್ಗೋಚರವಾದ ನೈಜ ಚಿತ್ರಣದ ಬಗೆಗೆ ನಂಬಿಕೆ ಇತ್ತು. ಅಂತಹ ನಿರ್ಣಯಕ್ಕೆ ಬರಲು ಆ ಸಮಯದ ಹವಾಗುಣ ಹಾಗೂ ಅವನು ತೊಟ್ಟಿದ್ದ

ವಿಶಿಷ್ಟ ರೀತಿಯ ಉಡುಪುಗಳು ನನ್ನ ನಿರ್ಧಾರಕ್ಕೆ ಇಂಬು ಕೊಡುವಂತಿದ್ದವೆಂದು ಬೇರೆ ಹೇಳಬೇಕಾಗಿರಲಿಲ್ಲ. ವಿರೋಧಿ ವಕೀಲರು ಅಷ್ಟೊಂದು ದಿನಗಳ ನಂತರ ನಾನು ನೀಡಿದ ಸ್ಪಷ್ಟ ಅಭಿಪ್ರಾಯಗಳ ಬಗೆಗೆ ಅನುಮಾನ ವ್ಯಕ್ತಪಡಿಸಿದರೆ ನನ್ನ "ಬತ್ತಳಿಕೆ"ಯಲ್ಲಿದ್ದ ಈ "ಬಾಣಗಳನ್ನು" ಪ್ರಯೋಗಿಸುವುದೆಂದು ಸ್ಥಿರಮನಸ್ಕನಾದೆ.

ಕೋರ್ಟಿನ ಕಟಕಟೆ ಹತ್ತಿ ಪ್ರಮಾಣ ವಚನ ಮಾಡಿದೆ. ಸರ್ಕಾರದ ಪರ ವಕೀಲರು ಕೇಳಿದ ಪ್ರಶ್ನೆಗಳಿಗೆಲ್ಲಾ ಸರಾಗವಾಗಿ ಉತ್ತರಿಸಿದೆ. ಅಪರಾಧಿ ಪರ ವಕೀಲರತ್ತ ನ್ಯಾಯಾಧೀಶರು ತಿರುಗುವುದರಲ್ಲಿದ್ದರು. ಸರ್ಕಾರಿ ವಕೀಲರು ಪ್ರಶ್ನೆ ಕೇಳಲು ಶುರುಮಾಡಿದಾಗ ಅಲ್ಲಿದ್ದವರು ಆಗ ಪತ್ತೆ ಇರಲಿಲ್ಲ. ಕೋರ್ಟಿನ ಗುಮಾಸ್ತರು ಹೊರಗಡೆ ಕಣ್ಣು ಹಾಯಿಸಿದರು. ಪಡಸಾಲೆಯ ಒಂದು ಮೂಲೆಯಲ್ಲಿ ಸಿಗರೇಟು ಸೇದುತ್ತಾ ನಿಂತಿದ್ದು ಗಮನಿಸಿ ಕೂಡಲೇ ಕರೆದರು. ಅವಸರ ದಿಂದ ಒಳಬಂದ ಲಾಯರು ಅವರ ಮುಂದೆ ಮೇಜಿನ ಮೇಲೆ ಇರಿಸಿಕೊಂಡಿದ್ದ ಗ್ರಂಥವೊಂದರ ಪುಟ ತೆರೆದು ಅದರಲ್ಲಿರುವ ಒಂದು ಚಿತ್ರದ ಕಡೆ ನನ್ನ ಗಮನ ಸೆಳೆದರು. ಹಾಗೂ "ನೋಡಿ ಡಾಕ್ಟ್ರೇ ಐದಾರು ದಿನಗಳ ಹಿಂದೆ ಸಾವಿಗೀಡಾಗಿದ್ದ ಹೆಣ ಕೊಳೆತಿರುವುದನ್ನು ಈ ಚಿತ್ರ ತೋರಿಸುತ್ತದೆ. ಆದರೆ ನೀವು ಬರೆದ ವರದಿಯಲ್ಲಿ ಶವ ಸಂಪೂರ್ಣವಾಗಿ ಹಾಗಿದ್ದಂತಿಲ್ಲವಲ್ಲ? ಅದು ಹೇಗೆ ಉಸಿರು ಕಟ್ಟಿದ್ದರಿಂದ ಸಾವು ಉಂಟಾಯಿತೆಂದು ಅಭಿಪ್ರಾಯ ನೀಡಿದಿರಿ?" ನಾನು ಉತ್ತರಿಸುವ ಮೊದಲೇ ನ್ಯಾಯಾಧೀಶರು ಬಾಯಿ ಹಾಕಿದರು. "ಅದು ಸರಿ, ಈ ಪ್ರಕರಣದ ಪ್ರಮುಖ ಸಾಕ್ಷಿ ಶವ ಪರೀಕ್ಷೆ ಮಾಡಿದ ವೈದ್ಯರು; ಅವರು ಅಭಿಪ್ರಾಯಕ್ಕೆ ಬರಲು ಸಹಕಾರಿಯಾದ ಅಂಶಗಳ ಬಗೆಗೆ ವಿವರಣೆ ನೀಡುತ್ತಿದ್ದಾಗ ಹೊರಗಡೆ ಹೋಗಿದ್ದಿರಿ. ಪುಸ್ತಕದಲ್ಲಿರುವ ಚಿತ್ರ ಯಾವುದೋ ದೇಶದಲ್ಲಿ ಇನ್ನಾವ ಪರಿಸ್ಥಿತಿಯಲ್ಲೋ ತೆಗೆದ ಫೋಟೋ. ಇಂತಹ ಎಲ್ಲಾ ಪ್ರಕರಣಗಳಲ್ಲೂ ಹಾಗೇ ಇರುತ್ತದೆಂಬ ನಿಯಮವೇನಾದರೂ ಇದೆಯೇನ್ರೀ" ಅಂದರು. ನ್ಯಾಯಾಧೀಶರು ಮುಂದುವರಿದು "ಡಾಕ್ಟರು ಆ ಬಗೆಗೆಲ್ಲಾ ವಿವರವಾದ ಹೇಳಿಕೆ ನೀಡಿದ್ದಾರೆ; ಅವನ್ನೆಲ್ಲಾ ಪರಿಶೀಲಿಸಿ ನಿಮ್ಮ ವಾದದ ಸಮಯದಲ್ಲಿ ಮಂಡಿಸಬಹುದು. ಅದಲ್ಲದೆ ಬೇರೆ ಇನ್ನಾವುದಾದರೂ ಅಂಶಗಳಿದ್ದರೆ ಕೇಳಿ, ಮುಂದುವರಿಯಿರಿ", ಎಂದರು. "ಇನ್ನೇನು ಇಲ್ಲ ಯುವರ್ ಆನರ್" ಎಂದು ವಕೀಲರು ಕುಳಿತು ಬಿಟ್ಟರು! ಆದರೂ ಅಂತಿಮವಾಗಿ ತೀರ್ಮಾನ ಹೊರಬಂದಾಗ ರಹಿಮಾನ್ ಬಿಡುಗಡೆಯಾದನಂತೆ. ಕೊಲೆ ನಡೆದಾಗ ಪ್ರತ್ಯಕ್ಷ ಸಾಕ್ಷಿಗಳಿರಲಿಲ್ಲ; ಅಲ್ಲದೆ ರಜಾಕನ ಕೆಲವು ವೈಯಕ್ತಿಕ ಸ್ವತ್ತುಗಳು ತಾನು ಬಚ್ಚಿಟ್ಟಿದೆಂದು ರಹಿಮಾನ್ ತೋರಿಸಿದ ಜಾಗಗಳು ಸಾರ್ವಜನಿಕರ ಸಂಪರ್ಕಕ್ಕೆ ಬರುವ ತಾಣಗಳಾದ್ದರಿಂದ ಅವನ್ನು ಬೇರೆ ಯಾರಾದರೂ ಇಟ್ಟಿರಬಹುದೆಂಬ ಅನುಮಾನ ಉಂಟಾಯಿತಂತೆ. ಕೇವಲ ಅನುಮಾನದ ಮೇಲೆ ಶಿಕ್ಷೆ ವಿಧಿಸುವುದು ಸರಿಯಲ್ಲ ಎಂಬ ತತ್ವ ಅವನ ಖುಲಾಸೆಗೆ ಕಾರಣವಾಗಿತ್ತಂತೆ!

## ಮತ್ತಷ್ಟು ಸುಧಾರಣೆಗಳು

ಕೊಳ್ಳೇಗಾಲದ ಆಸ್ಪತ್ರೆಯಲ್ಲಿ ಆಗಾಗ್ಗೆ ಸುಧಾರಣೆಗಳನ್ನು ಜರುಗಿಸುತ್ತಿದ್ದ ಪ್ರಸ್ತಾಪ ಗಳಾಗಿವೆ. ಮತ್ತೆ ಕೆಲವನ್ನು ಈಗ ಪ್ರಸ್ತಾಪಿಸ ಬಯಸುತ್ತೇನೆ.

ಆಸ್ಪತ್ರೆಗಳಿಗೆ ಆಹಾರ ಸರಬರಾಜಿನ ಬಗೆಗೆ ನನಗಿರುತ್ತಿದ್ದ ಆಸಕ್ತಿ ಈಗಾಗಲೇ ಪ್ರಸ್ತಾಪವಾಗಿವೆ. ಆ ದಿಸೆಯಲ್ಲಿ ಕೊಳ್ಳೇಗಾಲದಲ್ಲಿ ಅದಕ್ಕೆ ಸಂಬಂಧಿಸಿದ ಮೂಲ ಸಮಸ್ಯೆಯ ಬಗೆಗೆ ಗಮನ ಹರಿಸಿದೆ. ಸಾಮಾನ್ಯವಾಗಿ ಪ್ರತಿವರ್ಷ ಆರ್ಥಿಕ ವರ್ಷದ ಅಂತಿಮದ ಕೆಲವು

ದಿನಗಳಲ್ಲಿ ಆ ಬಗೆಗೆ ಟೆಂಡರು ಸ್ವೀಕರಿಸುವ ಪ್ರಕ್ರಿಯೆ ಆರಂಭವಾಗುತ್ತದೆ. ಮಾರ್ಚ್ ತಿಂಗಳ ಎರಡು ಅಥವಾ ಮೂರನೆ ವಾರದಲ್ಲಿ ಜರುಗುವ ಈ ಪ್ರಕ್ರಿಯೆ ಜಿಲ್ಲಾ ಮತ್ತು ಕೆಲವು ಹಿರಿಯ ತಾಲ್ಲೂಕು ಆಸ್ಪತ್ರೆಗಳಲ್ಲಿ ಒಂದೆರಡು ದಿನಗಳ ಅಂತರದಲ್ಲಿ ನಿಗದಿಯಾಗಿರಬಹುದು. ಒಂದೊಂದು ಊರಲ್ಲಿ ಒಬ್ಬರೇ ಗುತ್ತಿಗೆದಾರರು ಹಲವು ವರ್ಷಗಳಿಂದ ಎಡೆಬಿಡದೆ ಅದು ಹೇಗೋ ಗುತ್ತಿಗೆಯನ್ನು ಗಿಟ್ಟಿಸಿಕೊಳ್ಳುವುದು ಅಚ್ಚರಿಯೆನಿಸದಿರಲಾರದು. ಅಂದರೆ ಇತರ ಸ್ಪರ್ಧಿಗಳಿರುತ್ತಿರಲಿಲ್ಲವೆಂದಲ್ಲ. ಇದ್ದರೂ ಬಹುಪಾಲು ಅಂತಹವರು ಮಾಮೂಲು ಗುತ್ತಿಗೆದಾರರಿಂದ ಪ್ರಯೋಜನ ಗಿಟ್ಟಿಸಿಕೊಂಡು ಅನಂತರ ಹಿಂಸರಿದು ಬಿಡುವ ಒಂದು ಜಾಲವೇ ಇರುವಂತಿದೆ. ಅಂತಹವರು ಗುತ್ತಿಗೆ ಟೆಂಡರು ನಿಗದಿಯಾದ ಒಂದೆರಡು ದಿನಗಳ ಹಿಂದೆ ಆ ಊರಿನ ಗುತ್ತಿಗೆದಾರರನ್ನು ಸಂಪರ್ಕಿಸಿ ಅವರಿಗಿಂತಲೂ ಕಡಿಮೆ ದರಗಳನ್ನು ನಮೂದಿಸುವ ಸೂಚನೆ ನೀಡುತ್ತಾರೆ. ಮುಂದೆ ಸಂಧಾನಗಳ ಮೂಲಕ ಹಲವಾರು ಸಾವಿರ ರೂಪಾಯಿಗಳು ಕೈಬದಲಾವಣೆಯಾಗಬಹುದು. ನಾಮಕಾವಸ್ಥೆ ರೂಪದಲ್ಲಿ ಅವರೂ ಟೆಂಡರುಗಳನ್ನು ಸಲ್ಲಿಸುತ್ತಾರೆ. ಅವರ ದರ ಅತಿ ಹೆಚ್ಚಾಗಿರುತ್ತದೆ. ಇಲ್ಲವೆ ಟೆಂಡರು ಹಾಕಲು ಅನುಸರಿಸಬೇಕಾದ ನಿಯಮಗಳನ್ನು ಅನುಸರಿಸದೇ ಹಾಕಿರುತ್ತಾರೆ. ನಿಗದಿತ ಸಮಯದಲ್ಲಿ ಟೆಂಡರ್‌ಗಳನ್ನು ತೆರೆಯುವಾಗ ಹಾಜರಿದ್ದಂತೆ ಮಾಡಿ, ನಂತರ ಸ್ಥಳೀಯರೊಬ್ಬರನ್ನು ತಮ್ಮ ಪ್ರತಿನಿಧಿಯೆಂದು ಕೂರಿಸಿ ಅಲ್ಲಿಂದ ಜಾಗ ಖಾಲಿ ಮಾಡುತ್ತಾರೆ. ನಾನು ಕೊಳ್ಳೇಗಾಲದಲ್ಲಿದ್ದ ಸಮಯದಲ್ಲಿ ಬೆಂಗಳೂರು, ತುಮಕೂರು ಮುಂತಾದ ಕಡೆಯ ಕೆಲವರು ಇಂತಹ ಒಂದು ಹವ್ಯಾಸ ಮಾಡಿಕೊಂಡಂತಿತ್ತು. ಮುಂದಿನ ವರ್ಷಗಳಲ್ಲಿ ಟೆಂಡರು ಹಾಕಿದವರೇ ಕೊನೆಯವರೆಗೂ ಇರಬೇಕೆಂಬ ನಿಯಮ ಜಾರಿಗೆ ತಂದೆ. ಅನಂತರ ಅಂತಹವರ ಹಾವಳಿ ಸ್ವಲ್ಪ ಕಡಿಮೆಯಾಯಿತು.

ಒಬ್ಬರೇ ಗುತ್ತಿಗೆದಾರರು ಪ್ರತಿ ವರ್ಷವೂ ಹಾಲು, ಬ್ರೆಡ್ಡು ಮುಂತಾದ ರಖಂಗಳ ಗುತ್ತಿಗೆಯು ಸದಾ ದೊರೆಯುವಂತೆ ಅದು ಹೇಗೋ ಏರ್ಪಾಡು ಮಾಡಿಕೊಂಡು ಬಿಡುತ್ತಿದ್ದರು. ಒಂದು ವರ್ಷ ಸ್ಥಳೀಯ ಬ್ರೆಡ್ ಅಂಗಡಿ ಮಾಲೀಕರು ಸಹಾ ಸ್ಪರ್ಧಿಸುವಂತೆ ಪರೋಕ್ಷವಾಗಿ ಸ್ಫೂರ್ತಿ ನೀಡಿದೆ. ಇಂತಹ ರಖಂಗಳು ಆ ವರ್ಷವಿಡೀ ಬೇಕಾಗುವ ಮೊತ್ತವನ್ನು ನಿಗದಿ ಪಡಿಸಿ, ಅದಕ್ಕೆ ಅವರು ಸೂಚಿಸುವ ಬೆಲೆಯ ಶೇ. ೧೦ರಷ್ಟು ಭದ್ರತಾ ಠೇವಣಿ ಇರಿಸಬೇಕೆಂಬ ನಿಯಮವಿರುತ್ತದೆ. ಆ ಹೊಸ ಗುತ್ತಿಗೆದಾರರು ತಾವು ಸೂಚಿಸುವ ದರದಿಂದಾಗುವ ಒಟ್ಟು ಮೊಬಲಗನ್ನು ಕರಾರುವಕ್ಕಾಗಿ ಲೆಕ್ಕ ಹಾಕಿ ಸರಿಯಾದ ಮೊತ್ತವನ್ನು ಬ್ಯಾಂಕಿಗೆ ಕಟ್ಟಿದರು. ಹಿಂದಿನ ಗುತ್ತಿಗೆದಾರರು ಬ್ಯಾಂಕಿನಲ್ಲಿ ಯಾರಿಂದಲೋ ಅದನ್ನು ತಿಳಿದುಕೊಂಡು ಪ್ರತಿಯೊಂದು ರಖಂಗೂ ಒಂದೆರಡು ಪೈಸೆ ಕಡಿಮೆ ದರದಲ್ಲಿ ದರಗಳನ್ನು ಸೂಚಿಸಿದರು. ಅದರಿಂದ ಅದೇ ಮೊದಲ ಸಾರಿಗೆ ಪ್ರಯತ್ನ ಮಾಡಿದವರು ಆ ಸಾರಿ ವಿಫಲವಾದರು. ಮುಂದಿನ ವರ್ಷ ಅವರು ಟೆಂಡರು ಹಾಕದವರಂತೆ ನಟಿಸಿ, ಮೊದಲಿನವರು ಠೇವಣಿ ಭರ್ತಿ ಮಾಡಿದ್ದನ್ನು ತಿಳಿದುಕೊಂಡು ಅವರೂ ಸಹ ಸ್ವಲ್ಪ ಕಡಿಮೆ ಬೆಲೆ ನಮೂದಿಸಿ ಟೆಂಡರು ಹಾಕಿದರು. ಅದೇ ಮೊದಲ ಸಾರಿಗೆ ಬಹಳ ವರ್ಷದಿಂದ ಆ ರಖಂಗಳ ಗುತ್ತಿಗೆ ಹಿಡಿಯುತ್ತಿದ್ದವರ ಕೈ ತಪ್ಪುವಂತಾದದ್ದು ಎಲ್ಲರಿಗೂ ಅಚ್ಚರಿ ಉಂಟು ಮಾಡಿತು! ಉತ್ತಮ ಗುಣಮಟ್ಟದ ಆಹಾರ ವಸ್ತುಗಳನ್ನು ನ್ಯಾಯ ಬೆಲೆಯಲ್ಲಿ ಆಸ್ಪತ್ರೆಗೆ ಸರಬರಾಜು ಮಾಡುವಲ್ಲಿ ಪೈಪೋಟಿ ಹುಟ್ಟಿಸಲು ಹೀಗೆ ಮಾಡಬೇಕಾಯಿತೇ ಹೊರತು ಬೇರಿನ್ನಾವ ವೈಯಕ್ತಿಕ ಲಾಭಕ್ಕಲ್ಲವೆಂದು ವಿನಮ್ರತೆಯಿಂದ ಸ್ಪಷ್ಟ ಪಡಿಸುತ್ತೇನೆ. ಅದೇ ಆಸ್ಪತ್ರೆ ಆವರಣದಲ್ಲಿದ್ದ ಹಲವು ಮಾವಿನ ಫಲಗಳ ಹರಾಜಿನಲ್ಲೂ ಕೆಲವೇ ಜನ ಭಾಗವಹಿಸಿ,

ಅವರವರೊಳಗೇ ಗುಟ್ಟಾಗಿ ಒಪ್ಪಂದ ಮಾಡಿಕೊಂಡು ತೀರಾ ಕಡಿಮೆ ಬೆಲೆಗೆ ಹರಾಜಾಗುವಂತೆ ಮಾಡುತ್ತಿದ್ದರು. ಮುಂದಿನ ವರ್ಷಗಳಲ್ಲಿ ಕೊಳ್ಳೇಗಾಲದ ಎಲ್ಲ ಹಣ್ಣಿನ ವ್ಯಾಪಾರಿಗಳೂ ಭಾಗವಹಿಸುವಂತೆ ಮಾಡಿ ಹರಾಜಿನ ಮೊತ್ತವನ್ನು ದ್ವಿಗುಣ, ತ್ರಿಗುಣ ಮಾಡಲು ಸಾಧ್ಯವಾಯಿತು.

## ಎಕ್ಸ್‌ರೇ ಅಪಾಯ ... ರಜೆ ಮತ್ತು ಭತ್ಯೆ!

ಎಕ್ಸ್‌ರೇ ಕಿರಣಗಳ ನೇರ ಸಂಪರ್ಕ ಬಹಳ ಕಾಲವಿರುವವರಿಗೆ 'ವಿಕಿರಣತೆ' (Radiation) ಯಿಂದ ಹಲವು ತರಹದ ದೈಹಿಕ ತೊಂದರೆಗಳುಂಟಾಗುತ್ತವೆಂಬುದು ಸಾಬೀತಾದ ವಿಷಯ. ಆದರಿಂದ ಪ್ರಪಂಚದಾದ್ಯಂತ ಎಕ್ಸ್‌ರೇ ವಿಭಾಗದಲ್ಲಿ ಕಾರ್ಯ ನಿರ್ವಹಿಸುವ ವೈದ್ಯರೇ ಅಲ್ಲದೆ ಇತರ ಸಿಬ್ಬಂದಿಗಳಿಗೆ ಪ್ರತಿ ಆರು ತಿಂಗಳಿಗೊಮ್ಮೆ ಹದಿನೈದು ದಿನಗಳು ಕಡ್ಡಾಯವಾಗಿ ರಜೆ ಮೇಲೆ ಕಳುಹಿಸುತ್ತಾರೆ. ಹಾಗೂ ಯಂತ್ರದ ಸಾಮರ್ಥ್ಯಕ್ಕನುಗುಣವಾಗಿ "ಅಪಾಯದ ಭತ್ಯ" (Risk allowance) ಸಹ ನೀಡುವ ಪರಿಪಾಟವಿರುತ್ತದೆ. ಕೊಳ್ಳೇಗಾಲದಲ್ಲಿ ಬಹಳಷ್ಟು ಜನ ವೈದ್ಯರು ಎಕ್ಸ್‌ರೇ ಯಂತ್ರ ನಿರ್ವಹಣೆ ಮಾಡಿದ್ದರೂ ಯಾರಿಗೂ ಅಂತಹ ಸೌಲಭ್ಯ ಮಂಜೂರಾಗಿರಲಿಲ್ಲ. ನಾನು ಹೋದ ಮೇಲೆ ಇಲಾಖೆಗೆ ಈ ಬಗೆಗೆ ಒಂದೆರಡು ಸಾರಿ ಪತ್ರ ಬರೆದು ಮನವಿ ಮಾಡಿಕೊಂಡೆ. ಕಡೆಯದಾಗಿ ಒಂದು ಸಾರಿ ಕೆಲವು ತಿಂಗಳ ಗಡುವಿನಲ್ಲಿ 'ಅಪಾಯದ ರಜೆ' (Risk leave) ಹಾಗೂ ಭತ್ಯೆಯನ್ನು ಮಂಜೂರು ಮಾಡದಿದ್ದರೆ ನಾನು ಎಕ್ಸ್‌ರೇ ಯಂತ್ರ ನಿರ್ವಹಣೆ ಮಾಡುವುದಿಲ್ಲವೆಂದು ಇಲಾಖೆಗೆ ತಿಳಿಸಿದೆ. ನಾನು ತಿಳಿಸಿದ ಗಡುವಿನೊಳಗೆ ಪ್ರತಿ ಆರು ತಿಂಗಳಿಗೊಮ್ಮೆ ೧೫ ದಿನಗಳ ರಜೆ ಮತ್ತು ಪ್ರತಿ ತಿಂಗಳು ೫೦ ರೂಪಾಯಿಗಳ ಅಪಾಯದ ಭತ್ಯ ಮಂಜೂರಾಗಿ ಬಂದಿತು! ವಿಷಯ ತಿಳಿದ ನನಗೂ ಮೊದಲಿದ್ದ ಡಾ॥ ತಿಮ್ಮಶೆಟ್ಟರು, ಹಾಗೂ ತಿಪಟೂರಿನಲ್ಲಿ ಇಂತಹುದೇ ಸನ್ನಿವೇಶದಲ್ಲಿ ಕಾರ್ಯ ನಿರತರಾಗಿದ್ದ ಡಾ॥ ಆರ್. ಲಕ್ಷ್ಮಣರಾಯರು ನನ್ನಿಂದ ಸರ್ಕಾರಿ ಆದೇಶದ ಪ್ರತಿಯನ್ನು ತರಿಸಿಕೊಂಡು, ಅವರೂ ಕೂಡ ಈ ಸೌಲಭ್ಯಗಳನ್ನು ಪಡೆಯಲು ಸಾಧ್ಯವಾಯಿತಂತೆ!

## ವರ್ಗಾವಣೆ

ಕೊಳ್ಳೇಗಾಲಕ್ಕೆ ವರ್ಗವಾಗಿ ಬಂದು ನಾಲ್ಕು ವರ್ಷಗಳ ಅವಧಿ(೧೯೭೧)ಯ ಸಮಯಕ್ಕೆ ಜಿಲ್ಲಾ ಆಸ್ಪತ್ರೆಯೊಂದಕ್ಕೆ ವರ್ಗಮಾಡಿಸಿಕೊಳ್ಳುವ ಅಭಿಲಾಷೆಯುಂಟಾಯಿತು. ಪ್ರಸ್ತುತ ಅಲ್ಲಿ ಇತರ ವಿಷಯಗಳಲ್ಲಿ ಸಂತೃಪ್ತಿಯಿಂದ ಕಾರ್ಯ ನಿರ್ವಹಿಸುತ್ತಿದ್ದರೂ ನಾನು ಗಳಿಸಿಕೊಂಡಿದ್ದ ವಿಶೇಷ ಪರಿಣತಿಯ ಪೂರ್ಣ ಪ್ರಯೋಗಕ್ಕೆ ತಕ್ಕ ಅವಕಾಶಗಳಿರಲಿಲ್ಲವೆಂಬ ಭಾವನೆ ಮೊದಲಿನಿಂದಲೂ ಇತ್ತು. ಬಹುಶಃ ಹಾಗೇ ಕೆಲವು ವರ್ಷಗಳು ಮುಂದುವರಿಯುವಂತಾದರೆ ನನ್ನ ತಜ್ಞತೆಯ ವಿಷಯಗಳು ಮರೆತುಹೋಗಬಹುದಾದ ಸಾಧ್ಯತೆಗಳನ್ನು ತಳ್ಳಿಹಾಕುವಂತಿರಲಿಲ್ಲ. ವೈಯಕ್ತಿಕವಾಗಿಯೂ ನಮ್ಮ ಊರಿನಿಂದ ಬಹಳ ದೂರವಿದ್ದು ಬಂಧುವರ್ಗದವರ ಸಂಪರ್ಕವೂ ಕಷ್ಟವಾಗುತ್ತಿತ್ತು. ಆದರಿಂದ ಆ ವರ್ಷದ ವಾರ್ಷಿಕ ವರ್ಗಾವಣೆಯ ಸಂದರ್ಭದಲ್ಲಿ ಜಿಲ್ಲಾ ಆಸ್ಪತ್ರೆಯೊಂದಕ್ಕೆ ವರ್ಗ ಮಾಡಿಸಿಕೊಳ್ಳುವ ಮನಸ್ಸಾಯಿತು. ಆ ದಿಸೆಯಲ್ಲಿ ಇಲಾಖಾ ಮಟ್ಟದಲ್ಲಿ ನನ್ನ ಇಂಗಿತವನ್ನೂ ವ್ಯಕ್ತಪಡಿಸಿದ್ದಲ್ಲದೆ, ಸ್ಥಳೀಯವಾಗಿಯೂ ಕೆಲವು ಪ್ರಭಾವೀ ವ್ಯಕ್ತಿಗಳಿಗೆ ನನಗೆ ವರ್ಗವಾದರೆ ಅಡ್ಡ ಬರಬಾರದೆಂದು ನನ್ನ ಇಂಗಿತವನ್ನು ವ್ಯಕ್ತಪಡಿಸಿದ್ದೆ.

ನಿರೀಕ್ಷಿಸಿದಂತೆ ೧೯೭೧ರ ಮೇ ತಿಂಗಳಲ್ಲಿ ಚಿಕ್ಕಮಗಳೂರಿನ ಜಿಲ್ಲಾ ಆಸ್ಪತ್ರೆಗೆ ವರ್ಗ ಮಾಡಿರುವ ಸರ್ಕಾರೀ ಆದೇಶ ಬಂದಿತು. ಚಿಕ್ಕಮಗಳೂರಿನಲ್ಲಿ ನನಗೆ ಚಾರ್ಜುವಹಿಸಿ ಕೊಡ ಬೇಕಾದ ವೈದ್ಯರು ಅಲ್ಲಿ ಬಹಳ ಕಾಲದಿಂದ ತಳ ಊರಿದ್ದರು; ಈ ಸಾರಿಯೂ ಅವರ ವರ್ಗಾವಣೆ ಯನ್ನು ರದ್ದು ಮಾಡಿಸುವ ಪ್ರಯತ್ನಕ್ಕಿಳಿದಿದ್ದಾರೆಂಬ ವಿಷಯ, ಅಲ್ಲಿದ್ದ ಪರಿಚಿತ ವೈದ್ಯರು ತಂತಿ ಸಂದೇಶದ ಮೂಲಕ ತಿಳಿಸಿದರು; ಅಲ್ಲದೆ ಕೊಂಚವೂ ತಡ ಮಾಡದೆ ಹೊರಟು ಬಂದು ವರದಿ ಮಾಡಿಕೊಳ್ಳುವಂತೆ ಸಲಹೆ ಮಾಡಿದ್ದರು. ಹೀಗೆ ಒದಗಿ ಬಂದ ಅವಕಾಶವನ್ನು ಹಗುರವಾಗಿ ಪರಿಗಣಿಸದೇ ಅಂದೇ ಸಾಯಂಕಾಲ ಲೇಡಿ ಡಾಕ್ಟರಿಗೆ ಚಾರ್ಜು ವಹಿಸಿಕೊಟ್ಟೆ. ಮರುದಿನ ಮುಂಜಾನೆ ಮೈಸೂರಿಗೆ ತೆರಳುವ ಬಸ್ಸಿಗೆ ಹೊರಟು, ಅಲ್ಲಿಂದ ಚಿಕ್ಕಮಗಳೂರಿಗೆ ಪ್ರಯಾಣ ಮುಂದುವರಿಸಿದೆ. ಚಿಕ್ಕಮಗಳೂರನ್ನು ಅಂದೇ ಮಧ್ಯಾಹ್ನ ಮೂರುವರೆ ಗಂಟೆ ಸಮಯಕ್ಕೆ ತಲುಪಿದೆ.

ಮೊದಲೇ ಪರಿಚಿತ ಡಾಕ್ಟರೊಬ್ಬರ ಮನೆಯಲ್ಲಿ ಸಾಮಾನುಗಳನ್ನಿರಿಸಿ ಕೂಡಲೇ ಮಲ್ಲೇಗೌಡ ಜನರಲ್ ಆಸ್ಪತ್ರೆಗೆ ಹೋಗಿ ಡಿ.ಎಂ.ಓ. ಅವರನ್ನು ಭೇಟಿ ಮಾಡಿದೆ. ಹಾಗೂ ಆ ದಿನವೇ ನಾನು ಕೆಲಸಕ್ಕೆ ಹಾಜರಾಗುವ ವರದಿಯನ್ನು ಸಲ್ಲಿಸುವುದಾಗಿ ಹೇಳಿದೆ. ಡಾ॥ ರಹಿಮಾನ್ ಖಾನ್ ಎಂಬವರು ಡಿ.ಎಂ.ಓ(ಜಿಲ್ಲಾ ಸರ್ಜನ್) ಆಗಿದ್ದರು. ನಾನು ಕೆಲಸಕ್ಕೆ ವರದಿ ಮಾಡಿಕೊಳ್ಳು ವುದಕ್ಕೆ ಇನ್ನೂ ಒಂದು ವಾರದ ಗಡುವು ಇರುವುದರಿಂದ, ಗಡುವು ಮುಗಿಯುವ ಹೊತ್ತಿಗೆ ವರದಿ ಮಾಡಿಕೊಳ್ಳಬಹುದೆಂಬ ಸಲಹೆ ಮಾಡಿದರು. ಅವರ ನಡೆವಳಿಕೆ ಹಾಗೂ ಮಾತುಗಳಿಂದ ಅವರೊಬ್ಬ ವಿಲಕ್ಷಣ ಗುಣಗಳ ವ್ಯಕ್ತಿಯೆಂದು ಕಂಡು ಬಂದರು. ಅದಕ್ಕೆ ಸಮ್ಮತಿಸದೆ ವರ್ಗವಾಗಿ ಬಂದ ವ್ಯಕ್ತಿ ವರದಿ ಮಾಡಿಕೊಂಡಾಕ್ಷಣ, ಅಲ್ಲಿದ್ದವರನ್ನು ಬಿಡುಗಡೆ ಮಾಡುವುದು ಸರ್ಕಾರಿ ನಿಯಮ; ಅದರಿಂದ ಅವರು ಆ ರೀತಿ ಹೇಳುವುದು ಸರಿಯಲ್ಲವೆಂದು ವಾದಿಸಿದೆ. ಬಹುಶಃ ಅಷ್ಟರಲ್ಲೇ ನನ್ನ ಸೇವಾ ಹಿರಿತನ ಮುಂತಾದ ವಿಷಯಗಳ ಬಗೆಗೆ ಸಾಕಷ್ಟು 'ಸಂಶೋಧನೆ' ನಡೆದಿತ್ತೆನಿಸುತ್ತದೆ. ಪ್ರಸ್ತುತ ಬಿಡುಗಡೆಯಾಗಬೇಕಾದವರು ಆರ್.ಎಂ.ಓ. ಹುದ್ದೆಯಲ್ಲಿರುವವ ರೆಂದೂ, ಮುಂದೆ ಆ ಸ್ಥಾನವನ್ನು ಪಡೆದುಕೊಳ್ಳಲು ಅರ್ಹರಾದ ಡಾ॥ ನಾಗರಾಜಗೌಡರು ರಜೆಯಲ್ಲಿರುವುದರಿಂದ, ಅವರು ಬರುವವರೆಗೂ ಪ್ರಸ್ತುತ ಆರ್.ಎಂ.ಓ. ಅವರನ್ನು ಬಿಡುಗಡೆ ಮಾಡಲಾಗುವುದಿಲ್ಲವೆಂಬ ವಾದವನ್ನು ಮುಂದಿಟ್ಟರು. ಆದರೆ ವರ್ಗಾವಣೆಯ ಆದೇಶದಲ್ಲಿ ಆರ್.ಎಂ.ಓ. ಹುದ್ದೆಯ ಬಗೆಗೆ ಯಾವುದೇ ಪ್ರಸ್ತಾಪವಿಲ್ಲ. ಹಾಗೂ ನಾನೇನು ಆರ್.ಎಂ.ಓ. ಆಗುವ ಸಲುವಾಗಿ ಬಂದಿಲ್ಲ. ಡಾ॥ ನಾಗರಾಜ ಗೌಡರು ಕೆಲಸಕ್ಕೆ ಹಾಜರಾದ ಮೇಲೆ ಈಗಿನ ಆರ್.ಎಂ.ಓ. ಅವರಿಂದ ಪಡೆದುಕೊಂಡಿದ್ದ ಅದರ ಚಾರ್ಜನ್ನು ಅವರಿಗೆ ಒಪ್ಪಿಸುತ್ತೇನೆಂದು ನಾನೆಷ್ಟು ಹೇಳಿದರೂ, ಅದನ್ನು ಕೇಳುವ ಸ್ಥಿತಿಯಲ್ಲಿ ದ್ದಂತಿರಲಿಲ್ಲ. ಅದಾಗಲೇ ಕಚೇರಿಯ ಸಮಯ ಮುಗಿದದ್ದರಿಂದ ನಾಳೆ ಮಾತಾಡಬಹುದೆಂದರು.

ಮರುದಿನ ಮತ್ತೆ ಡಿ.ಎಂ.ಓ. ಅವರನ್ನು ನೋಡಿದೆ. ಅವರು ಹಿಂದಿನ ದಿನದ ವಿತಂಡ ವಾದವನ್ನೇ ಮುಂದುವರಿಸುತ್ತಿದ್ದರು. ಕಡೆಯದಾಗಿ ನಾನೊಂದು ಹೇಳಿದೆ: "ನಾನೀಗ ಕೆಲಸಕ್ಕೆ ಹಾಜರಾಗಿರುವುದಾಗಿ ವರದಿ ಬರೆದು ರುಜು ಮಾಡಿಕೊಡುತ್ತೇನೆ. ಅದರಿಂದ ಬಿಡುಗಡೆಯಾಗ ಬೇಕಾದವರನ್ನು ಹಾಗೆ ಮಾಡುತ್ತೀರೋ ಇಲ್ಲವೋ ಎಂಬುದು ನಿಮಗೆ ಬಿಟ್ಟದ್ದು. ಆದರೆ ನಾನು ಸಲ್ಲಿಸುವ ವರದಿ ಫಾರಂಗಳ ಮೇಲೆ ನೀವು 'ಮೇಲು ಸಹಿ' (Counter signature) ಮಾಡಿ ಇಲಾಖಾ ನಿರ್ದೇಶಕರು ಹಾಗೂ ಅಕೌಂಟೆಂಟ್ ಜನರಲ್ ಮುಂತಾದವರಿಗೆ ಕಳುಹಿಸುವ

ಜವಾಬ್ದಾರಿ ನಿಮ್ಮದಾಗುತ್ತದೆ. ಅಲ್ಲದೆ ಮುಂದಾಗಬಹುದಾದ ಬೆಳವಣಿಗೆಗಳಿಗೆಲ್ಲಾ ನೀವೇ ಜವಾಬ್ದಾರರಾಗ ಬೇಕಾಗುತ್ತದೆ" ಎಂದು ಸ್ವಲ್ಪ ಕಟುವಾಗಿಯೇ ಹೇಳಿದೆ. ಹಾಗೂ ಆಸ್ಪತ್ರೆಯ ಕಚೇರಿಯಲ್ಲಿ ಛಾರ್ಜು ವಹಿಸುವ ಫಾರಂಗಳನ್ನು ಪಡೆದುಕೊಂಡು ಭರ್ತಿ ಮಾಡಿ, ನನ್ನ ಸಹಿ ಮಾಡಿ ಡಿ.ಎಂ.ಓ. ಅವರ ಮೇಜಿನ ಮೇಲಿಟ್ಟು 'ಮೇಲು ಸಹಿ ಮಾಡಿ' ಕಳುಹಿಸಿ ಕೊಡಿ ಎಂದು ಪಟ್ಟು ಹಿಡಿದು ಕುಳಿತೆ. ಎಷ್ಟಾದರೂ ಬಿಡುವ ಆಸಾಮಿ ನಾನಲ್ಲವೆನಿಸಿತೋ ಏನೋ, ಅದರಿಂದ ಉಂಟಾಗುವ ಪರಿಣಾಮಗಳ ಅರಿವೂ ಉಂಟಾಗಲಿಲ್ಲವೆನಿಸುತ್ತದೆ. ಮರು ಮಾತಾಡದೆ ಮೇಲು ಸಹಿಗಳನ್ನು ಮಾಡಿದರು. ಜವಾನನ್ನು ಕರೆಸಿ ಗುಮಾಸ್ತರಿಗೆ ಕೊಡುವಂತೆ ನನ್ನೆದುರಿಗೇ ಹೇಳಿದರು. ಅಂದಿನಿಂದಲೇ ಹಾಜರಿ ಪುಸ್ತಕದಲ್ಲಿ ರುಜು ಹಾಕಲಾರಂಭಿಸಿದೆ. ಮುಂದೆ ಡಾ॥ ನಾಗರಾಜ ಗೌಡರು ಹಿಂದಿರುಗುವವರೆಗೂ ನನಗೆ ಯಾವುದೇ ಕೆಲಸ ನಿಯೋಜಿಸಲಿಲ್ಲ. ಆಸ್ಪತ್ರೆಯಲ್ಲೇ ತಿರುಗಾಡಿಕೊಂಡಿದ್ದೆ. ಅವರು ಬಂದ ನಂತರ ಅವರಿಬ್ಬರ ನಡುವೆ ಅಧಿಕಾರ ವಿನಿಮಯ ವಾಗಿರಬೇಕು. ನನಗೆ ಸರ್ಜಿಕಲ್ ವಿಭಾಗವನ್ನು ನಿರ್ವಹಿಸುವ ಜವಾಬ್ದಾರಿ ವಹಿಸಿದರು.

ಮುಂದೆ ಆರು ತಿಂಗಳ ನಂತರ ಅಕೌಂಟೆಂಟ್ ಜನರಲ್ಲರಿಂದ ನಾನು ಚಾರ್ಜ್ ವಹಿಸಿಕೊಂಡ ಸರಿಯಾದ ದಿನಾಂಕದ ಬಗೆಗೆ ಮಾಹಿತಿ ಕೇಳಿದರು. ಅದನ್ನು ತಿಳಿಸಿದೆ. ಅದರಿಂದ ನನಗಾವ ಅನಾನುಕೂಲಗಳೂ ಉಂಟಾಗಲಿಲ್ಲ.

## ಬೀಳ್ಕೊಡುಗೆ ಸಮಾರಂಭಗಳ ಮಹಾಪೂರ

ಚಿಕ್ಕಮಗಳೂರಿನಲ್ಲಿ ಒಂದು ವಾರಕ್ಕೂ ಹೆಚ್ಚು ದಿನ ಕಳೆದು ಕೊಳ್ಳೇಗಾಲಕ್ಕೆ ವಾಪಸು ಬಂದೆ. ವರ್ಗಾವಣೆಯ ಆದೇಶ ಬಂದು, ಅದು ಬಹಿರಂಗವಾಗುವುದರೊಳಗೇ ಮುಂದಿನ ಊರಿಗೆ ತೆರಳಿದ್ದರಿಂದ, ವರ್ಗಾವಣೆಯನ್ನು ರದ್ದುಗೊಳಿಸುವ ಅವಕಾಶ ದೊರೆಯದಿದ್ದುದಕ್ಕೆ ಹಲವು ನಾಗರಿಕರು ಪರಿತಪಿಸಿದರು. ಹಲವರು ಮನೆಗೆ ಬಂದು ನಾನು ಹಾಗೆ ಮಾಡಿದ್ದಕ್ಕೆ ವಿಷಾದ ವ್ಯಕ್ತಪಡಿಸಿದರು; ಹಾಗೂ ಅಷ್ಟು ವರ್ಷಗಳ ಕಾಲ ಅವರೆಲ್ಲರ ಕಷ್ಟಸುಖಗಳಲ್ಲಿ ಭಾಗಿಯಾಗಿ ಸಹಕರಿಸಿದ್ದಕ್ಕೆ ಕೃತಜ್ಞತೆ ಸಲ್ಲಿಸಲಾರಂಭಿಸಿದರು.

ಇನ್ನು ಬೀಳ್ಕೊಡುಗೆ ಸಮಾರಂಭಗಳ ಮಹಾಪೂರ; ಆಸ್ಪತ್ರೆ ಸಿಬ್ಬಂದಿ ವರ್ಗದವರ ಸಮಾರಂಭ ನಾನು ನಿರೀಕ್ಷಿಸಿದ್ದಕ್ಕಿಂತ ತುಂಬಾ ಆತ್ಮೀಯವಾಗಿತ್ತು. ನಾಲ್ಕು ವರ್ಷಗಳು



ಕೊಳ್ಳೇಗಾಲ - ಅಧಿಕಾರಿ ಮಿತ್ರರೊಂದಿಗೆ

ಅವರೊಡನೆ ಪ್ರೀತಿ ವಿಶ್ವಾಸದಿಂದ ನಡೆದುಕೊಂಡೆನೆಂದು ಒಳ್ಳೆಯ ಮಾತುಗಳನ್ನಾಡಿದರು. ಆಸ್ಪತ್ರೆಯನ್ನು ಅಭಿವೃದ್ಧಿಪಡಿಸಿ, ಜನಪ್ರಿಯಗೊಳಿಸಿದ ಬಗೆಗೆ ತಮ್ಮೆಲ್ಲರ ಮೆಚ್ಚಿಗೆ ವ್ಯಕ್ತಪಡಿಸಿದರು. ನನ್ನ ಸರದಿ ಬಂದಾಗ ಎಂದಿನಂತೆ ಭಾವುಕನಾದೆ; ಅವರೆಲ್ಲರೂ ನನ್ನೊಡನೆ ಸಹಕರಿಸಿದ್ದರೂ ಕೆಲವು ಸಾರಿ ಕರ್ತವ್ಯಲೋಪವಾದಾಗಲೋ ಅಥವಾ ಶಿಸ್ತು ಉಲ್ಲಂಘನೆಯಾದಾಗಲೋ ಕಠಿಣ ವಾಗಿ ವರ್ತಿಸುತ್ತಿದ್ದುದರ ನೆನಪಾಗಿ ಆ ಬಗೆಗೆ ಅವರ ಕ್ಷಮೆ ಕೇಳಿದೆ. ತಮ್ಮ ಕಷ್ಟಸುಖ, ಸಮಯಾ ಸಮಯಗಳನ್ನು ಬದಿಗೊತ್ತಿ ಹಗಲು ರಾತ್ರಿಗಳ ಪರಿವೆ ಇಲ್ಲದೆ ನನ್ನೆಲ್ಲಾ ಕಾರ್ಯಗಳಿಗೆ ಹೆಗಲೆಣೆ ಯಾಗಿ ಕಾರ್ಯ ನಿರ್ವಹಿಸಿದ್ದಕ್ಕೆ ಅವರೆಲ್ಲರಿಗೂ ಹೃತ್ಪೂರ್ವಕ ಕೃತಜ್ಞತೆಗಳನ್ನರ್ಪಿಸಿದೆ. ಆಸ್ಪತ್ರೆ ಉತ್ತುಂಗ ಮಟ್ಟಕ್ಕೇರಲು ನನಗಿಂತಲೂ ಅವರ ಶ್ರಮಗಳೇ ಕಾರಣವೆಂದು ಅವರ ಕರ್ತವ್ಯಪರತೆ ಯನ್ನು ಕೊಂಡಾಡಿದೆ.



ಕೊಳ್ಳೇಗಾಲ - ಬೀಳ್ಕೊಡಿಗೆ ಸಮಾರಂಭ

ಕೊಳ್ಳೇಗಾಲದ ಪುರಸಭೆಯವರ ಸಮಾರಂಭವಂತೂ ಹೃದಯಸ್ಪರ್ಶಿಯಾಗಿತ್ತು. ಬಹು ಪಾಲು ನಾಗರಿಕರು ಅಲ್ಲಿ ನೆರದಂತಿತ್ತು. ಪುರಸಭಾಧ್ಯಕ್ಷರು ಮಾತಾಡಿ ಅವರಿಗೆ ನೆನಪಿರುವ ಮಟ್ಟಿಗೆ ಸರ್ಕಾರಿ ಅಧಿಕಾರಿಯೊಬ್ಬರಿಗೆ ಅಷ್ಟೊಂದು ಆತ್ಮೀಯ ಬೀಳ್ಕೊಡಿಗೆ ಸಮಾರಂಭ ಜರುಗಿದ್ದ ನೆನಪಿಲ್ಲವೆಂದರು. ಅವರೂರಿನ ಆಸ್ಪತ್ರೆಯನ್ನು ಒಂದು ಸೇವಾ ಕೇಂದ್ರವನ್ನಾಗಿ ಮಾರ್ಪಡಿಸಿದ್ದಕ್ಕೆ ಅವರೆಲ್ಲಾ ಋಣಿಯೆಂದರು. ಪವಾಡ ಸದೃಶ ಕಾರ್ಯ ಅಲ್ಲಿ ಜರುಗಿದೆಯೆಂದು ಹೇಳಿ ಬೀಟೆ ಮರದ ಕರಂಡವನ್ನಿತ್ತು ಗೌರವಿಸಿದರು. ಸುಮಾರು ೮೦-೮೫ ವರ್ಷದ ವಯೋವೃದ್ಧ ವಕೀಲರೊಬ್ಬರು ಅಷ್ಟೊಂದು ಜನಪ್ರಿಯತೆ ಗಳಿಸಿದ ವೈದ್ಯರೊಬ್ಬರು ಅಲ್ಲಿಯ ಆಸ್ಪತ್ರೆಯಲ್ಲಿ ಕಾರ್ಯ ನಿರ್ವಹಿಸಿದ್ದನ್ನು ನೋಡಿರಲಿಲ್ಲವೆಂದರು. ಉತ್ತರವಾಗಿ ಕೊಳ್ಳೇಗಾಲದ ಜನ ಸಾಮಾನ್ಯರೇ ಅಲ್ಲದೆ ಎಲ್ಲಾ ಸ್ತರದ ಮುಖಂಡರು ನನ್ನ ಕೆಲಸ ಕಾರ್ಯಗಳಲ್ಲಿ ಹಸ್ತಕ್ಷೇಪ ಮಾಡದೇ ಸಹಕರಿಸಿದ್ದಕ್ಕೆ ನನ್ನ ಕೃತಜ್ಞತೆಗಳನ್ನರ್ಪಿಸಿದೆ.

ಕೊಳ್ಳೇಗಾಲದಲ್ಲಿ ನಿಕಟವಾಗಿದ್ದವರೆಲ್ಲಾ ಸತ್ಕಾರ ಸಮಾರಂಭವೇರ್ಪಡಿಸಿದರೂ ಅವುಗಳಲ್ಲಿ ಮರೆಯಲಾಗದ ಒಂದನ್ನು ಸಂಕ್ಷಿಪ್ತವಾಗಿ ಉಲ್ಲೇಖಿಸ ಬಯಸುತ್ತೇನೆ. ಅಲ್ಲಿಗೆ

ಮೂರು ಮೈಲಿ ದೂರದ ಮುಡಿಗುಂಡಂ ಎಂಬ ಪುಟ್ಟ ಹಳ್ಳಿಯ ವಯೋವೃದ್ಧ ಗುರ್ಕಾರ್ ಮಾದಪ್ಪನವರ ಆತಿಥ್ಯ ವಿಶಿಷ್ಟ ಹಾಗೂ ಶಾಸ್ತ್ರೋಕ್ತವಾಗಿತ್ತು. ಆಸ್ಪತ್ರೆಯ ಹೆರಿಗೆ ವಿಭಾಗದ ದಾನಿಗಳಾಗಿದ್ದ ಅವರು ಇಳಿ ವಯಸ್ಸಿನಲ್ಲೂ ಆಸ್ಪತ್ರೆಯ ಅಭಿವೃದ್ಧಿಯ ಬಗೆಗೆ ಕಾಳಜಿ ವಹಿಸುತ್ತಿದ್ದರು. ವಿದುರರಾಗಿದ್ದ ಅವರ ಮನೆಯಲ್ಲಿ ಬೇರಿನ್ನಾರೂ ಇರಲಿಲ್ಲ (ಬೆಂಗಳೂರಿನ ರಸಾಯನ ಶಾಸ್ತ್ರದ ಹೆಸರಾಂತ ಪ್ರೊ. ಷಡಕ್ಷರ ಸ್ವಾಮಿಯವರು ಅವರ ಅಳಿಯ). ಸಂಪ್ರದಾಯ ಶರಣ, ಸರಳ ಜೀವನ ಕ್ರಮ ಅವರದು. ಕೊಳ್ಳೇಗಾಲಕ್ಕೆ ಹೋದಾಗಿನಿಂದಲೂ ನಮ್ಮಿಬ್ಬರದು ಪರಸ್ಪರ ಗೌರವಾದರಗಳ ಸಂಬಂಧ. ವರ್ಗವಾದ ಸುದ್ದಿ ತಿಳಿದಾಗ ತುಂಬಾ ನೊಂದುಕೊಂಡರಂತೆ. ಅವರ ಮನೆಗೆ ಬಂದು ಆತಿಥ್ಯವನ್ನು ಸ್ವೀಕರಿಸಲೇಬೇಕೆಂದು ಒತ್ತಾಯ ಪೂರ್ವಕ ಆಹ್ವಾನ. ಅವರೇ ಕಾರೊಂದನ್ನು ಕಳುಹಿಸಿ ಪತ್ನಿ ಮತ್ತು ನನ್ನನ್ನು ಶಾಸ್ತ್ರೋಕ್ತವಾಗಿ ಸ್ವಾಗತಿಸಿದರು. ಮೈಸೂರಿನಿಂದ ತರಿಸಿದ್ದ ಮಲ್ಲಿಗೆ ಮೊಗ್ಗಿನ ಮಾಲಾರ್ಪಣೆ ಮನೆಬಾಗಿಲಿನಲ್ಲಿ. ಮನೆಯಲ್ಲಿ ಯಾರೂ ಇಲ್ಲದ್ದರಿಂದ ಮೈಸೂರಿನಿಂದ ಸತ್ಕಾರಕ್ಕಾಗಿ ತರಿಸಿದ ಬಗೆಬಗೆಯ ಭಕ್ಷ್ಯ ಭೋಜ್ಯಗಳ ಉಪಚಾರ. ಆಸ್ಪತ್ರೆಯಲ್ಲಿ ಸೇವೆ ಸಲ್ಲಿಸಿದ ಬಗೆಗೆ ಪ್ರಾಮಾಣಿಕ ಹಾಗೂ ಮುಕ್ತ ಕಂಠದ ಹೊಗಳಿಕೆ. ಗೌರವಾನ್ವಿತ ವಯೋವೃದ್ಧರ ಹೊಗಳಿಕೆ ಹಾಗೂ ಆಶೀರ್ವಾದದಿಂದ ಕಣ್ಣುಗಳು ತೇವಗೊಂಡವು. ಅಂತಹ ವಿಶ್ವಾಸ ಪೂರ್ವಕ ಬೀಳ್ಕೊಡಿಗೆಗೆ ನಾನು ಹಿಂದೆ ಇಲ್ಲವೆ ಮುಂದೆಯೂ ಪಾತ್ರನಾಗಲಿಲ್ಲ.

ಕೊಳ್ಳೇಗಾಲದಿಂದ ವರ್ಗ ಮಾಡಿಸಿಕೊಳ್ಳುವ ಅಭಿಲಾಷೆಪಟ್ಟಿದ್ದೆನಾದರೂ ಹೊರಡುವ ಸಮಯದಲ್ಲಿ ನಾನೇಕೆ ಹಾಗೆ ಮಾಡಿದೆಯೆಂದೆನಿಸದಿರಲಿಲ್ಲ.




---

ಸುಮಾರು ಅರ್ಧ ಶತಮಾನಕಾಲ ಕೊಳ್ಳೇಗಾಲ ವಲಯದಲ್ಲಿ ಕ್ರಿಶ್ಚಿಯನ್ ಮಿಶನರಿಯಾಗಿ ಸೇವೆ ಸಲ್ಲಿಸಿ ಸ್ವದೇಶಕ್ಕೆ ಹಿಂದಿರುಗುವಾಗ ಗ್ರೀಸ್‌ನಿಂದ ಮಿಸ್ ಕೆ. ಎಲ್. ಆಂಡರ್‌ಸನ್ ಬರೆದ ಪತ್ರ. ದಿನಾಂಕ ೨೯-೩-೧೯೭೧ರಲ್ಲಿ ತಲುಪಿತ್ತು.

Dear Doctor Friend,

I thought of you when I visited this place, because it was founded by a 'Des Aesculapius'* son of Apollo of Greek Mythology. I think I would prefer the Medical Officer in Kollegal!! But people come from all over the mediterranean to this place to be cured. Greece is an interesting place but full of ruins.

Kind regards,

(* Aesculapius is the God of Healing)

(Sd/-)
K.L. Anderson.

# ೧೩. ಚಿಕ್ಕಮಗಳೂರು - ವೃತ್ತಿ ಸಂತೃಪ್ತಿ

ಚಿಕ್ಕಮಗಳೂರಿನಲ್ಲಿ ಜಿಲ್ಲಾ ಸಾರ್ವಜನಿಕ ಆಸ್ಪತ್ರೆ ಆಗಲೇ ಅರ್ಧ ಶತಮಾನದಿಂದಲೂ ಅಸ್ತಿತ್ವದಲ್ಲಿತ್ತು. ಕಾಫಿ ಪ್ಲಾಂಟರ್ ಅರಳಗುಪ್ಪೆ ಮಲ್ಲೇಗೌಡರ ಜ್ಞಾಪಕಾರ್ಥ ಕಟ್ಟಿಸಿದ್ದರಿಂದ ಅವರ ಹೆಸರು ಆಸ್ಪತ್ರೆಗೆ. ಅದೊಂದು ಹಲವು ರೀತಿಗಳಲ್ಲಿ ಯೋಜನಾ ಬದ್ಧವಾಗಿ ನಿರ್ಮಾಣವಾದ ಆಸ್ಪತ್ರೆ. ಊರಿನ ಕೇಂದ್ರ ಭಾಗದಲ್ಲಿ ಪ್ರಮುಖ ರಸ್ತೆಗಳು ಸಂಧಿಸುವ ತಾಣ - ಅಜಾದ್ ಪಾರ್ಕ್-ದಲ್ಲೇ ಇದ್ದರೂ ಅಷ್ಟೊಂದು ಗೌಜು ಗದ್ದಲಗಳ ತೊಂದರೆಗಳಿರಲಿಲ್ಲ. ರಸ್ತೆಗೆ ಎದುರಾಗಿದ್ದ ಭವ್ಯ ಕಟ್ಟಡದ ತಳಮನೆ ಆಸ್ಪತ್ರೆಯ ಆಡಳಿತ ಕಚೇರಿಗಳು, ಅಕ್ಕ ಪಕ್ಕದಲ್ಲಿ ಪುರುಷರು ಹಾಗೂ ಮಹಿಳೆಯರ ವಾರ್ಡುಗಳು, ಎಕ್ಸ್‌ರೇ ಸಮುಚ್ಚಯಗಳಿದ್ದರೆ, ಮೊದಲ ಮಹಡಿಯಲ್ಲಿ ಮೂರು ಕಡೆ ಸ್ವಾಭಾವಿಕ ಬೆಳಕಿಗೆ ಅಡೆತಡೆಗಳಿಲ್ಲದ ವಿಶಾಲವಾದ ಆಪರೇಷನ್ ಥಿಯೇಟರ್; ಐದು ದಶಕಗಳ ಹಿಂದೆ ನೆಲಕ್ಕೆ ಅಮೃತ ಶಿಲೆಯ ಹಾಸು. ಓ.ಟಿ.ಯ ಮುಂಭಾಗದಲ್ಲಿ ಆಪರೇಷನ್ ಜರುಗಿಸಿದ ರೋಗಿಗಳ ಶುಶ್ರೂಷೆಗೆ ಮೀಸಲಾದ ಪುರುಷರು ಹಾಗೂ ಮಹಿಳೆಯರಿಗೆ ಪ್ರತ್ಯೇಕ ವಾರ್ಡುಗಳು; ಇವುಗಳನ್ನು ಹೊರತುಪಡಿಸಿದರೆ ಆ ಮಹಡಿಯಲ್ಲಿ ಇನ್ನಾವ ಚಟುವಟಿಕೆಗಳಿಗೂ ಅವಕಾಶವಿಲ್ಲದಂಥ ಯೋಜನೆ. ಈ ಕಟ್ಟಡದ ಹಿಂಭಾಗದ ಸ್ವಲ್ಪ ದೂರದಲ್ಲೇ ನೇತ್ರ ರೋಗಗಳ ಚಿಕಿತ್ಸೆಗಾಗಿ ದಾನಿಗಳೊಬ್ಬರು ಕಟ್ಟಿಸಿದ ಕಣ್ಣಾಸ್ಪತ್ರೆಯ ಸಮುಚ್ಚಯ. ಇನ್ನು ಹೊರ ರೋಗಿಗಳ ವಿಭಾಗ ಎದುರುಗಡೆಯ ಕಟ್ಟಡದ ಒಂದು ಪಕ್ಕಕ್ಕೆ ಜೋಡಿಸಲ್ಪಟ್ಟ ಕಟ್ಟಡ. ಸ್ಪೆಷಲ್ ವಾರ್ಡುಗಳು, ಪ್ರಯೋಗಶಾಲೆ, ಆರ್.ಎಂ.ಓ. ಅವರ ವಸತಿ ಕಟ್ಟಡಗಳೆಲ್ಲಾ ಈ ಆವರಣದಲ್ಲೇ ನಿರ್ಮಾಣವಾಗಿದ್ದವೆಂದರೆ ಅದೊಂದು ಆದರ್ಶ ಯೋಜನೆಯೆಂದೇ ಹೇಳಬಹುದು. ಆದರೂ ಹೆರಿಗೆ ಆಸ್ಪತ್ರೆ, ಮಕ್ಕಳ ಆಸ್ಪತ್ರೆಗಳು ಅಜಾದ್ ಪಾರ್ಕಿನ ರಸ್ತೆಗಳಾಚೆ ಇನ್ನೊಂದು ಸಮುಚ್ಚಯದಲ್ಲಿ. ಅಲ್ಲಿ ಹೆರಿಗೆ ಆಸ್ಪತ್ರೆ - ಮೈಸೂರು ಲಚ್ಚಯ್ಯ ಶೆಟ್ಟಿ ಎಂಬವರು ದಾನವಾಗಿ ಕಟ್ಟಿಸಿದ್ದು; ಅದರ ಒಂದು ಪಕ್ಕದಲ್ಲಿ ಕಲ್ಮನೆ ಮನೆತನದವರ ಧರ್ಮಾರ್ಥ ಮಕ್ಕಳ ಆಸ್ಪತ್ರೆ. ಹೆರಿಗೆ ಆಸ್ಪತ್ರೆಯ ಆವರಣದಲ್ಲೇ ಮಹಿಳಾ ವೈದ್ಯಾಧಿಕಾರಿಗಳ ವಸತಿಗೃಹ. ಆಸ್ಪತ್ರೆಯ ಒಟ್ಟಾರೆ ಆಡಳಿತ ನಿರ್ವಹಣೆಯ ದೃಷ್ಟಿಯಿಂದ ಸ್ವಲ್ಪ ಅನಾನುಕೂಲತೆಗಳನ್ನು ಹೊರತುಪಡಿಸಿದರೆ ಅದೊಂದು ಆದರ್ಶ ಸನ್ನಿವೇಶವೇ ಸರಿ. ಆರ್.ಎಂ.ಓ. ಮತ್ತು ಮಹಿಳಾ ವೈದ್ಯಾಧಿಕಾರಿಗಳಿಗಲ್ಲದೆ ಬೇರಾರಿಗೂ ಅಲ್ಲಿ ವಸತಿ ಅನುಕೂಲತೆಗಳಿಲ್ಲದಿದ್ದೊಂದು ಕೊರತೆ. ಹೊಸಮನೆಯೆಂಬ ದೂರದ ಬಡಾವಣೆಯಲ್ಲಿ ಜಿಲ್ಲಾ ಸರ್ಜನ್‌ರಿಗೆ ಬಹಳ ಹಿಂದೆಯೇ ನಿರ್ಮಾಣವಾದ ಬಂಗಲೆ. ಆಸ್ಪತ್ರೆಯ ಬಲ ಭಾಗದ ಕಾಂಪೌಂಡು ಗೋಡೆಗೆ ತಗಲಿದಂತೆ ಅದರ ಹೊರ ಆವರಣದಲ್ಲಿ ಜಿಲ್ಲಾಧಿಕಾರಿಗಳು, ಪೋಲೀಸ್ ಸೂಪರಿಂಟೆಂಡೆಂಟ್, ಮ್ಯಾಜಿಸ್ಟ್ರೇಟರುಗಳು, ಜಿಲ್ಲಾಧಿಕಾರಿಗಳ ಸಹಾಯಕರು ಮುಂತಾದವರ ವಸತಿಗಳು ನಿರ್ಮಾಣವಾಗಿದ್ದವಾದರೂ, ಆಸ್ಪತ್ರೆಯ ಇತರ ವೈದ್ಯರಾರಿಗೂ ಸನಿಹದಲ್ಲಿ ವಸತಿ ಅನುಕೂಲವಿರಲಿಲ್ಲ. ದೂರದ ಬಡಾವಣೆಗಳಲ್ಲಿ ಬಾಡಿಗೆ ಮನೆಗಳಲ್ಲಿರಬೇಕಾದ ಪರಿಸ್ಥಿತಿ. ತುರ್ತು ಪರಿಸ್ಥಿತಿಗಳಲ್ಲಿ ವೈದ್ಯರನ್ನು ಅದರಲ್ಲೂ ರಾತ್ರಿ ಕರೆಸುವುದು ಪ್ರಮುಖ ಸಮಸ್ಯೆ.

ಸಿಬ್ಬಂದಿಗಳ ವಿಷಯದಲ್ಲಿ ಚಿಕ್ಕಮಗಳೂರಿನಲ್ಲೊಂದು ವಿಶೇಷತೆ. ಬೇರೆಲ್ಲಾ ಜಿಲ್ಲೆಗಳಲ್ಲಿ ಸರ್ಜನ್ ಶ್ರೇಣಿಯ ಒಬ್ಬರಿದ್ದರೆ, ಇಲ್ಲಿ ಮಹಿಳಾ ವೈದ್ಯಾಧಿಕಾರಿಗಳೂ ಸರ್ಜನ್ ಶ್ರೇಣಿಯವರೇ ಆಗಿರುತ್ತಿದ್ದರು. ಇವರಲ್ಲದೆ ೮-೧೦ ಜನ ಅಸಿಸ್ಟೆಂಟ್ ಸರ್ಜನರಿರುತ್ತಿದ್ದರು.

## ವೃತ್ತಿ ನಿರ್ವಹಣೆಗೆ ಮುಕ್ತ ಅವಕಾಶ

ಮೊದಲ್ಲಿದ್ದ ಆರ್.ಎಂ.ಓ. ಅವರು ವೃತ್ತಿಪರ ಸರ್ಜನ್‌ರೆ ಆಗಿದ್ದುದರಿಂದ ಅವರ ಕೊಠಡಿಯಲ್ಲೇ ಶಸ್ತ್ರ ಚಿಕಿತ್ಸಾರೋಗಿಗಳನ್ನು ನೋಡಿಕೊಳ್ಳುತ್ತಿದ್ದರು. ಪ್ರಸ್ತುತ ಅವೆರಡೂ, ಬೇರೆ ಬೇರೆಯವರಿಂದ ನಿರ್ವಹಣೆಯಾಗಬೇಕಾದ್ದರಿಂದ ನನಗೆ ಹೊರ ರೋಗಿಗಳ ವಿಭಾಗದಲ್ಲಿ ಚಿಕ್ಕ ಆಪರೇಷನ್ ಥಿಯೇಟರ್ ಪಕ್ಕದಲ್ಲೆ ರೋಗಿಗಳನ್ನು ನೋಡುವ ಅವಕಾಶ ಕಲ್ಪಿಸಿಕೊಡಲಾಯಿತು. ಅದೇ ಮೊದಲ ಬಾರಿಗೆ ಆಸ್ಪತ್ರೆಯ ಆಡಳಿತ ನಿರ್ವಹಣೆಯ ಜವಾಬ್ದಾರಿಯಿಂದ ಮುಕ್ತನಾಗಿ ಒಂದು ರೀತಿಯ ಸ್ವಾತಂತ್ರ್ಯ ಲಭಿಸಿದಂತಾಯಿತು. ವೈದ್ಯಕೀಯದ ಇತರ ಎಲ್ಲಾ ಇಲಾಖೆಗಳಂತೆ ಸರ್ಜಿಕಲ್ ವಿಷಯಕ್ಕೂ ಒಂದೇ ಘಟಕ ಅಲ್ಲಿತ್ತು. ಅದರಿಂದ ದಿನವಿಡೀ ಕೈತುಂಬಾ ಕೆಲಸ ಇರುತ್ತಿತ್ತು. ಪ್ರತಿದಿನವೂ ಹೊರರೋಗಿಗಳ ವಿಭಾಗದಲ್ಲಿ ಕಾರ್ಯನಿರತನಾಗಲೇಬೇಕಿತ್ತು. ವಾರದಲ್ಲಿ ಎರಡು ದಿನಗಳು ಆಪರೇಷನ್ ಥಿಯೇಟರಿನಲ್ಲಿ ಕಾರ್ಯನಿರ್ವಹಣೆ; ಆಪರೇಷನ್‌ಗಳ ಕಾರ್ಯ ಸಾಮಾನ್ಯವಾಗಿ ಮಧ್ಯಾಹ್ನ ೨.೩೦ - ೩.೦೦ ಗಂಟೆಗಳ ತನಕ ಮುಂದುವರಿಯುತ್ತಿದ್ದಿತು. ನನ್ನ ವಿಷಯಕ್ಕೆ ಸಂಬಂಧಿಸಿದ ಸರ್ಜಿಕಲ್ ರೋಗಿಗಳನ್ನು ಇತರ ವೈದ್ಯರು ನೋಡಿಕೊಳ್ಳುತ್ತಿರಲಿಲ್ಲ ಆದ್ದರಿಂದ ಅವರಲ್ಲಿ ಬಹುಪಾಲು ಬೆಳಗಿನಿಂದ ಕಾಯ್ದು ಕುಳಿತಿರುತ್ತಿದ್ದರು. ಅದರಿಂದ ಮನೆಗೆ ಊಟಕ್ಕೆ ಹೋಗಲು ಸಾಧ್ಯವಾಗುತ್ತಿರಲಿಲ್ಲ. ನನಗೆ ಸಹಾಯಕರಾಗಿ ಓ.ಟಿ.ಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಇನ್ನೊಬ್ಬ ವೈದ್ಯರು ಮತ್ತು ನಾನು ಹತ್ತಿರದ ಹೋಟೆಲು ಒಂದರಲ್ಲಿ ಲಘು ಉಪಹಾರ ಮಾಡಿ, ಮತ್ತೆ ಹೊರರೋಗಿಗಳ ವಿಭಾಗಕ್ಕೆ ಬಂದು ಕಾರ್ಯನಿರತರಾಗುವುದು ಅನಿವಾರ್ಯವಾಗುತ್ತಿತ್ತು. ಅಂದಿನ ಕೆಲಸಗಳನ್ನೆಲ್ಲಾ ಮುಗಿಸಿ ಮನೆಗೆ ಹಿಂದಿರುಗುವಾಗ ೫.೩೦-೬.೦೦ ಗಂಟೆಗಳೇ ಸಂದಿರುತ್ತಿದ್ದವು. ನಮ್ಮ ಆಸ್ಪತ್ರೆಯ ದೈನಂದಿನ ಕೆಲಸಕಾರ್ಯಗಳ ಜೊತೆಗೆ ಹೆರಿಗೆ ಆಸ್ಪತ್ರೆಯ ತುರ್ತು ಕಾರ್ಯಭಾರಗಳನ್ನೂ ನಾನೇ ನಿಭಾಯಿಸುವ ಸಂದರ್ಭಗಳು ಒದಗಿ ಬರುತ್ತಿದ್ದುದು ಅಪರೂಪವಾಗೇನಿರಲಿಲ್ಲ. ಮಹಿಳಾ ವೈದ್ಯಾಧಿಕಾರಿಗಳ ಜಾಗ ಬಹಳ ದಿನ ಭರ್ತಿಯಾಗದೇ ಖಾಲಿ ಇದ್ದೋ, ಅಥವಾ ಇದ್ದವರು ಬಹಳ ದಿನ ರಜೆಯಲ್ಲಿರುತ್ತಿದ್ದುದ ರಿಂದಲೋ, ಅದರ ತುರ್ತು ಸಂದರ್ಭಗಳನ್ನಾದರೂ ನಾನು ನಿಭಾಯಿಸಬೇಕಾಗುತ್ತಿತ್ತು. ಹಗಲು-ರಾತ್ರಿಗಳೆನ್ನದೆ ಸಿಸೇರಿಯನ್ ಆಪರೇಷನ್‌ಗಳಂತೂ ಇದ್ದೇ ಇರುತ್ತಿದ್ದವು. ಎಷ್ಟೋ ದಿನ ಕೆಲಸ ಮುಗಿಸಿಕೊಂಡು ಮನೆಗೆ ಹಿಂತಿರುಗುತ್ತಿದ್ದಾಗಲೇ (ಹೊಸಮನೆ ಬಡಾವಣೆಯಲ್ಲಿ ಬಾಡಿಗೆ ಮನೆಯಲ್ಲಿ ಆಗ ವಾಸಿಸುತ್ತಿದ್ದೆ) ಹೆರಿಗೆ ಆಸ್ಪತ್ರೆಯ ತುರ್ತು ಕರೆಯನ್ನು ಹೊತ್ತು ಆಂಬುಲೆನ್ಸ್ ವಾಹನ ಮನೆ ಎದುರಿಗೆ ಬಂದು ನಿಂತು ಬಿಡುತ್ತಿತ್ತು. ಜೊತೆಗೆ ಇತರ ಅಸಿಸ್ಟೆಂಟ್ ಸರ್ಜನರಂತೆ ಆಸ್ಪತ್ರೆಯ ಸರದಿ ಪ್ರಕಾರ ದಿನದ ೨೪ ಗಂಟೆಗಳ ವಿಧಿಬದ್ಧ ಕರ್ತವ್ಯ (ಡ್ಯೂಟಿ) ನಿರ್ವಹಿಸುವ ಜವಾಬ್ದಾರಿಯೂ ಇರುತ್ತಿತ್ತು. ಹೀಗೆ ನಾನು ಅನುಭವಿಸುತ್ತಿದ್ದ ಬವಣೆಯನ್ನು ಗಮನಿಸಿದ ಕೆಲವು ಸಹೋದ್ಯೋಗಿಗಳು ಅಂತಹ ಡ್ಯೂಟಿಯಿಂದ ನನಗೆ ವಿನಾಯಿತಿ ಕೊಡಬಹುದೆಂದು ನಮ್ಮ ಮಾಸಿಕ ಸಮಾಲೋಚನಾ ಸಭೆಯಲ್ಲಿ ಸೂಚಿಸಿದ್ದೂ ಉಂಟು. ಆದರೆ ಮತ್ತೆ ಕೆಲವರು ನಾನೂ ಸಹ ಸರ್ಕಾರಿ ವಿಧಿಯಂತೆ ಕೆಲಸ ಕಾರ್ಯಗಳನ್ನು ಮಾಡಲಿ, ತಾವೇಕೆ ಹೆಚ್ಚುವರಿಯಾಗಿ ಕೆಲಸ

ಮಾಡಬೇಕೆಂದು ಪ್ರತಿವಾದವನ್ನು ಮುಂದೊಡ್ಡಲು ಹಿಂಜರಿಯಲಿಲ್ಲ. ನನ್ನ ಕಾರ್ಯ ನಿರ್ವಹಣೆಯ ಬಗೆಗೆ ಸಹಾನುಭೂತಿಯಾಗಲೀ ಅಥವಾ ವಿರೋಧವಾಗಲೀ ವ್ಯಕ್ತಪಡಿಸಬೇಕಾದ ಪರಿಸ್ಥಿತಿ ಏನಿಲ್ಲ; ಕೈತುಂಬಾ ಕೆಲಸವಿದ್ದರೆ ಅದೊಂದು ಪ್ರಯಾಸದ ಕೆಲಸವೆಂದು ಭಾವಿಸುವವ ನಾನಲ್ಲವೆಂದು ಚರ್ಚೆಗೆ ಪೂರ್ಣವಿರಾಮ ಹಾಕಿದೆ. ಬಹುಪಾಲು ವೃತ್ತಿಯಲ್ಲಿ ಅಂತಹ ಹೆಚ್ಚಿನ ಅವಕಾಶಗಳನ್ನರಿಸಿಯೇ ನಾನಲ್ಲಿಗೆ ಬಂದಿದ್ದು ತಾನೇ?

ಚಿಕ್ಕಮಗಳೂರು ಆಸ್ಪತ್ರೆಯಲ್ಲಿ ಆಪರೇಷನ್ ಥಿಯೇಟರ್ ಮುಂತಾದ ಕಡೆ ಮೊದಲಿಗೆ ಸರ್ಜಿಕಲ್ ಘಟಕವನ್ನು ನಾನೊಬ್ಬನೇ ನಿರ್ವಹಿಸುವ ಪರಿಸ್ಥಿತಿ ಇತ್ತು. ಮುಂದೆ ಡಾ|| ರಾಜಗೋಪಾಲ್ ಎಂಬ ಕಿರಿಯ ವೈದ್ಯರೊಬ್ಬರನ್ನು ಸಹಾಯಕರನ್ನಾಗಿ ನೇಮಿಸಲಾಯಿತು. ಅವರು ಓ.ಟಿ.ಯಲ್ಲಿ ಕೆಲವು ಬಗೆಯ ಅರಿವಳಿಕೆ ನೀಡುತ್ತಿದ್ದರು, ಆಪರೇಷನ್‌ಗಳಿಗೆ ಸಹಾಯಕ ರಾಗಿರುತ್ತಿದ್ದರು, ಹಾಗೂ ಹೊರ ರೋಗಿಗಳ ವಿಭಾಗದಲ್ಲೂ ನನ್ನೊಡನಿದ್ದು ಸಹಕರಿಸುತ್ತಿದ್ದರು. ಅವರ ನಂತರ ನೇಮಕವಾದ ಡಾ|| ಎಲ್. ವಿ. ಸಂಪತ್‌ಕುಮಾರ್ ಸಹ ಓ.ಟಿ.ಯ ಒಳಗಡೆಯ ಮಾತ್ರವಲ್ಲದೆ ನನ್ನ ಎಲ್ಲಾ ಕಾರ್ಯಕ್ರಮಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದರು. ಮುಂದೆ ಅಸ್ಥಿ ಚಿಕಿತ್ಸಾ ವಿಷಯದಲ್ಲಿ ಪರಿಣಿತಿ ಗಳಿಸಿದ ಅವರು ಅಕಾಲ ಮರಣ ಹೊಂದಿದಾಗ ಬಹಳಷ್ಟು ಪರಿತಪಿಸುವಂತಾಯಿತು. ಕೊಳ್ಳೇಗಾಲದಂತೆಯೇ ಇಲ್ಲಿಯೂ ಪರಸ್ಪರ ಸಹಕಾರ ತಂಡವೇರ್ಪಟ್ಟು ಪರಿಣಿತಿ ಪಡೆದುಕೊಂಡಿದ್ದ ಬಹಪಾಲು ಶಸ್ತ್ರಚಿಕಿತ್ಸಾ ವಿಧಾನಗಳನ್ನು ಕೈಗೊಳ್ಳಲು ಸಾಧ್ಯವಾಯಿತು. ಆದರಿಂದ ನಾನು ಬಯಸುತ್ತಿದ್ದ "ವೃತ್ತಿ-ಸಂತೃಪ್ತಿ" (Job satisfaction) ಗೆ ಇಲ್ಲಿ ಅವಕಾಶಗಳು ದೊರೆತವು.

## ರಕ್ತ ಭಂಡಾರದ ಪುನರ್ ಸಂಘಟನೆ

ಚಿಕ್ಕಮಗಳೂರು ಆಸ್ಪತ್ರೆಯಲ್ಲಿ ಸರ್ಕಾರದ ವತಿಯಿಂದಲೇ ರಕ್ತಭಂಡಾರ ಅಸ್ತಿತ್ವದಲ್ಲಿ ಇತ್ತಾದರೂ ಅಲ್ಲಿಯ ವ್ಯವಸ್ಥೆಗಳು ಸಮರ್ಪಕವಾಗಿರಲಿಲ್ಲ. ಪ್ರಯೋಗಾಲಯ ಸಹಾಯಕ ತಂತ್ರಜ್ಞರೇ ಅದರ ಆಗುಹೋಗುಗಳ ನಿರ್ವಹಣೆಯ ಸೂತ್ರಧಾರನಂತಿದ್ದರು. ಸ್ವಯಂ ಪ್ರೇರಿತವಾಗಿ ರಕ್ತದಾನ ಮಾಡುವವರು ಕಡಿಮೆ ಇದ್ದು ಬಹುಪಾಲು ವೃತ್ತಿದಾನಿಗಳಿಂದಲೋ (Professional donors) ಇಲ್ಲವೆ ಮಧ್ಯವರ್ತಿಗಳ ಮೂಲಕ ಹೆಚ್ಚು ಬೆಲೆಕೊಟ್ಟು ರಕ್ತ ಕೊಂಡುಕೊಳ್ಳುವ ಪರಿಸ್ಥಿತಿ ಇತ್ತು. ತುರ್ತು ಪರಿಸ್ಥಿತಿಗಳಲ್ಲಂತೂ ರಕ್ತ ದೊರೆಯುವುದು ದುಸ್ತರವೆಂಬಂತಾಗಿತ್ತು. ಕೊಳ್ಳೇಗಾಲದ ಅನುಭವದ ಆಧಾರದ ಮೇಲೆ ಅಂತಹ ಒಂದು ವಾತಾವರಣವನ್ನು ಇಲ್ಲಿಯೂ ಸೃಷ್ಟಿ ಮಾಡುವುದರಲ್ಲಿ ಉತ್ಸುಕನಾದೆ.

ಈ ದಿಸೆಯಲ್ಲಿ ನನಗೊಬ್ಬರು ಉಪಕಾರಿ ಮನೋಭಾವದ ದಂತ ವೈದ್ಯರು ಹೆಗಲೆಣೆ ಯಾಗಿ ಸಹಕರಿಸಲು ಮುಂದಾದರು. ಅಲ್ಲಿಯವರೇ ಆದ ಡಾ|| ಐ. ಕೆ. ನಾಣಯ್ಯ ನಮ್ಮ ಆಸ್ಪತ್ರೆಯ ದಂತ ವೈದ್ಯರಾಗಿದ್ದರು. ಇನ್ನೂ ತರುಣರಾಗಿದ್ದ ಅವರು ಭಾರತೀಯ ಸಂಸ್ಕೃತಿ, ದಾನ ಧರ್ಮ ಪರೋಪಕಾರಗಳಂಥ ಗುಣಗಳನ್ನು ಮೈಗೂಡಿಸಿಕೊಂಡವರು. ಕೊಳ್ಳೇಗಾಲದ ಅನುಭವ ವನ್ನು ಅವರಿಗೂ ಮನದಟ್ಟು ಮಾಡಿಕೊಟ್ಟು, ಇಲ್ಲೂ ಬಹುಪಾಲು ಸ್ವಯಂ ಪ್ರೇರಿತ ದಾನಿ ಗಳಿಂದಲೇ ರಕ್ತ ಪಡೆಯುವ ಸಿದ್ಧತೆಗಳತ್ತ ಗಮನ ಹರಿಸಿದೆವು. ಹೊಸದಾಗಿ ಅಲ್ಲಿಗೆ ಹೋಗಿದ್ದ ನನಗೆ ಸ್ವಯಂ ಸೇವಾ ಸಂಘ ಸಂಸ್ಥೆಗಳಾದ ರೋಟರಿ, ಲಯನ್ಸ್, ಜೆ.ಸಿ., ಮಹಿಳಾ ಸಮಾಜ ಮತ್ತು ಕೆಲವು ಶಾಲಾ ಕಾಲೇಜುಗಳ ಸಮಾರಂಭಗಳಲ್ಲಿ ಭಾಷಣ ಮಾಡುವ ಅವಕಾಶಗಳು ಒದಗಿ

ಬರುತ್ತಿದ್ದವು. ಅಂತಹ ಕಡೆಗಳಲ್ಲೆಲ್ಲಾ ರಕ್ತ ದಾನದ ಮೂಲಭೂತ ವಿಚಾರಗಳು, ಅದರ ಮಹತ್ವ ಹಾಗೂ ಸುರಕ್ಷತೆ, ಅದಕ್ಕಿಂತಲೂ ಮಿಗಿಲಾಗಿ ದಾನ ಮಾಡುವವರ ಆರೋಗ್ಯ ಸುಧಾರಣೆ ಮುಂತಾದ ಅಂಶಗಳಿಗೆ ಒತ್ತುಕೊಟ್ಟು ಮಾತಾಡುತ್ತಿದ್ದೆ. ನಿಗದಿತ ಅವಧಿಗಳಲ್ಲಿ ರಕ್ತ ದಾನ ಮಾಡುವುದರಿಂದ ಕಾರೋನರಿ ಹೃದ್ರೋಗವನ್ನು ಹೇಗೆ ತಡೆಗಟ್ಟಬಹುದೆಂಬ ವಿಷಯ ಹೇಳಿ ಅವರೆಲ್ಲರೂ ಯೋಚನೆ ಮಾಡುವಂತೆ ಪ್ರಚೋದಿಸುತ್ತಿದ್ದೆ. ಚಿಕ್ಕಮಗಳೂರು ವಲಯದಲ್ಲಿ ಸ್ಥಿತಿವಂತರಾದ ಕಾಫಿ ಪ್ಲಾಂಟರುಗಳು ಹಾಗೂ ಉದ್ಯಮ ಪತಿಗಳು ಹೆಚ್ಚಾಗಿರುತ್ತಿದ್ದು ಅವರೆಲ್ಲರ ಸಾಮಾನ್ಯ ಆರೋಗ್ಯದ ಸ್ಥಿತಿ ಬೇರೆ ಕಡೆಯವರಿಗಿಂತ ಒಳ್ಳೆಯ ಸ್ಥಿತಿಯಲ್ಲಿರುತ್ತಿದ್ದುದೊಂದು ಉತ್ತೇಜಕ ಅಂಶವೂ ಆಗಿತ್ತು.

ಮುಂದೆ ರಕ್ತ ಭಂಡಾರ ಕಾರ್ಯ ನಿರ್ವಹಿಸುವ ರೀತಿ ನೀತಿಗಳು, ಸ್ವಯಂ ಪ್ರೇರಿತ ದಾನಿಗಳು ಬಂದಾಗ ಅವರನ್ನು ಆದರದಿಂದ ನೋಡಿಕೊಳ್ಳುವಂಥ ಸಾರ್ವಜನಿಕ ಸಂಪರ್ಕದ ಬಗೆಗೆ ನಿಗಾವಹಿಸಿದೆವು. ದಾನಿಗಳಿಂದ ರಕ್ತವನ್ನು ಪಡೆಯುವಾಗ ನಾವು ಎಷ್ಟೇ ಬಿಝಿಯಾಗಿ ರುತ್ತಿದ್ದರೂ, ಡಾ॥ ನಾಣಯ್ಯನವರಾಗಲೀ, ನಾನಾಗಲೀ (ರಾತ್ರಿ ಸಮಯದಲ್ಲೂ) ಹಾಜರಿದ್ದು ದಾನಿಗಳಿಗೆ ಮಾನಸಿಕ ಕಿರುಕುಳವಾಗದಂತೆ ನೋಡಿಕೊಳ್ಳುತ್ತಿದ್ದೆವು. ಸ್ವಯಂ ಪ್ರೇರಿತ ದಾನಿಗಳನ್ನು ಕರೆತರುವಲ್ಲಿ ಡಾ॥ ನಾಣಯ್ಯನವರಿಗೆ ವಿಶೇಷ ಕೌಶಲ್ಯವಿದ್ದಂತಿತ್ತು. ಅಲ್ಲೇ ಹುಟ್ಟಿಬೆಳೆದ ಅವರ ಸಂಪರ್ಕವಿಲ್ಲದವರೇ ಇಲ್ಲವೆಂಬಂತಿತ್ತು. ಹೊತ್ತುಗೊತ್ತುಗಳ ಪರಿವೆ ಇಲ್ಲದೆ ಯಾರ ಮನೆಗಾದರೂ ಹೋಗಿ ದಾನಿಗಳನ್ನು ಅವರ ಕಾರಿನಲ್ಲೆ ಕರೆತರುತ್ತಿದ್ದರು. ಇಂತಹ ಹಲವು ಕಾರಣಗಳಿಂದಾಗಿ ನಾನು ಅಲ್ಲಿಗೆ ಹೋದ ಮೊದಲ ವರ್ಷದಲ್ಲಿ ರಕ್ತ ಭಂಡಾರದಲ್ಲಿ ಪಡೆದ ಒಟ್ಟು ೧೨೪ ಬಾಟಲುಗಳಲ್ಲಿ ೧೦೫ ಬಾಟಲುಗಳು ಹಣ ಸಂದಾಯ ಮಾಡದೆ ಸ್ವಯಂಪ್ರೇರಿತ ದಾನಿಗಳಿಂದ ಪಡೆದುಕೊಂಡವು! ಆ ಬೆಳವಣಿಗೆ ಮುಂದಿನ ವರ್ಷಗಳಲ್ಲೂ ಮುಂದು ವರಿಯುತ್ತಿತ್ತು.

## ಪೇಚಿನ ಪ್ರಸಂಗ

ಈ ಹಂತದಲ್ಲಿ ನಾಡಿನ ಬಹುಪಾಲು ಜಿಲ್ಲಾ ಆಸ್ಪತ್ರೆಗಳಲ್ಲಿ ಶಸ್ತ್ರಚಿಕಿತ್ಸೆಗಳು ಜರುಗು ತ್ತಿದ್ದುದರ ಬಗೆಗೆ ಒಂದೆರಡು ಮಾತುಗಳನ್ನು ದಾಖಲಿಸುವುದು ಅಪ್ರಸ್ತುತವಾಗಲಾರದು. ಈ ಆಸ್ಪತ್ರೆಗಳಿಗೆ ಸ್ನಾತಕೋತ್ತರ ಎಂ.ಎಸ್., ಎಂ.ಡಿ.ಗಳಂಥ ಪದವಿ ಗಳಿಸದ ಹಿರಿಯ ಎಂ.ಬಿ.ಬಿ.ಎಸ್. ವೈದ್ಯರೇ ಡಿ.ಎಂ.ಓ./ಆರ್.ಎಂ.ಓ.ಗಳಾಗಿರುತ್ತಿದ್ದರು. ಅವರೇ ಎಲ್ಲಾ ಸರ್ಜಿಕಲ್, ಮೆಡಿಕಲ್ ಮುಂತಾದ ಪ್ರಕರಣಗಳ ಚಿಕಿತ್ಸೆಗಳನ್ನು ಕೈಗೊಳ್ಳುತ್ತಿದ್ದರು. ಕೆಲವರು ಬೆಂಗಳೂರು, ಮೈಸೂರು ಆಸ್ಪತ್ರೆಗಳಲ್ಲಿ ನುರಿತ ಸರ್ಜನ್‌ರ ಜೊತೆ ಹಲವು ವರ್ಷ ಕಾರ್ಯ ನಿರ್ವಹಿಸಿ ಕೆಲವು ಬಗೆಯ ಆಪರೇಷನ್‌ಗಳನ್ನು ಜರುಗಿಸುತ್ತಿದ್ದುದೂ ಉಂಟು. ಆದರೆ ಅಂತಹ ಸ್ಥಾನಗಳಲ್ಲಿದ್ದವರೆಲ್ಲಾ ಸಾಕಷ್ಟು ಪರಿಣಿತಿ ಪಡೆದಿದ್ದರೆಂದು ಹೇಳುವಂತಿಲ್ಲ. ಅವರೆಲ್ಲಾ ದೊಡ್ಡ ದೊಡ್ಡ ಆಪರೇಷನ್ ಮಾಡುತ್ತೇವೆಂದು ಹೇಳಿಕೊಳ್ಳುವುದಕ್ಕೇನು ಹಿಂಜರಿಯುತ್ತಿರಲಿಲ್ಲ. ಸುಮಾರು ೧೯೬೦ರ ದಶಕದಲ್ಲಿ ಎಂ.ಎಸ್., ಎಂ.ಡಿ.ಯಂಥ ಪರಿಣಿತ ಪದವಿಗಳನ್ನು ಪಡೆದವರನ್ನು ಜಿಲ್ಲಾ ಆಸ್ಪತ್ರೆಗಳಲ್ಲಿ ನೇಮಕ ಮಾಡಲಾಯಿತಷ್ಟೆ. ಈ ಹೊಸ ಪೀಳಿಗೆಯವರು ಅಧಿಕಾರ ಶ್ರೇಣಿಯಲ್ಲಿ ಆಸ್ಪತ್ರೆಯ ಮುಖ್ಯ ಆಡಳಿತ ಜರುಗಿಸುವ ಡಿ.ಎಂ.ಓ.ಗಳಿಗಿಂತ ತುಂಬಾ ಕಿರಿಯ ಶ್ರೇಣಿಯವರಾಗಿದ್ದರೂ, ಉತ್ತಮ ರೀತಿಯ ಆಪರೇಷನ್ ಅಥವಾ ಇನ್ನಿತರ ಬಗೆಯ

ಚಿಕಿತ್ಸೆ ಮಾಡುವ ಸಾಮರ್ಥ್ಯ ಗಳಿಸಿಕೊಂಡಿರುತ್ತಿದ್ದರು. ಬಹುಪಾಲು ಹಿರಿಯ ವೈದ್ಯಾಧಿಕಾರಿಗಳಿಗೆ ಇದೊಂದು ರೀತಿಯ ಸಂದಿಗ್ಧತೆಯನ್ನುಂಟು ಮಾಡಿರಬೇಕು. ತಮ್ಮ ಕೆಳಗೆ ಇರುವ ಕಿರಿಯ ವೈದ್ಯನೇ ತಮಗಿಂತ ಉತ್ತಮ ಚಿಕಿತ್ಸೆಯನ್ನು ನೀಡಬಲ್ಲನೆಂಬುದನ್ನು ಒಪ್ಪಿಕೊಳ್ಳುವ ಮನೋಭಾವ ಅದೆಷ್ಟು ಜನರಲ್ಲಿರ ಬಹುದು? ಬಹುಶಃ ಇಂತಹ ಪರಿಸ್ಥಿತಿ ಸರ್ಕಾರದ ಇನ್ನಾವ ಇಲಾಖೆ ಗಳಲ್ಲುಂಟಾಗುವುದು ಅಸಂಭವ. ಹಾಗಾಗಿ ತಮ್ಮ ಆಸ್ಪತ್ರೆಯಲ್ಲೇ ಒಂದು ವಿಷಯದಲ್ಲಿ ವಿಶೇಷ ತಜ್ಞತೆ ಪಡೆದಿರುವವರ ನೆರವು ಪಡೆಯುವುದು ಅವರ ಹಿರಿತನಕ್ಕೆ ತಕ್ಕುದಲ್ಲವೆಂತಲೋ ಏನೋ, ಎಂದಿನಂತೆ ಅವರ ಕಾರ್ಯವನ್ನು ಮುಂದುವರಿಸುತ್ತಿದ್ದು ಸಾಮಾನ್ಯ ಸಂಗತಿಯಂತಾಗಿತ್ತು. ಈ ತರಹದ ಮನೋಭಾವದಿಂದ ಉದ್ಭವಿಸಿದ ಪೇಚಿನ ಸಂಗತಿಯೊಂದು ಉಲ್ಲೇಖಾರ್ಹ.

ಡಾ|| ರಹಿಮಾನ್ ಖಾನ್ ಎಂಬವರು ಅಲ್ಲಿ ಡಿ.ಎಂ.ಓ. ಆಗಿದ್ದರೆಂಬುದನ್ನು ಪ್ರಸ್ತಾಪಿಸಲಾಗಿದೆ. ಎಂ.ಬಿ.ಬಿ.ಎಸ್. ಪದವಿಗಳಿಸಿದ ನಂತರ ಅವರು ಬೆಂಗಳೂರು ಮೈಸೂರು ಆಸ್ಪತ್ರೆಗಳಲ್ಲಿ ಕೆಲವು ಹೆಸರಾಂತ ಸರ್ಜನರ ಜೊತೆ ಕಾರ್ಯ ನಿರ್ವಹಿಸಿದ ಅನುಭವವಿರುವುದಾಗಿ ಹೆಮ್ಮೆಯಿಂದ ಹೇಳಿಕೊಳ್ಳುತ್ತಲೂ ಇರುತ್ತಿದ್ದರು. ಸುಮಾರು ಹತ್ತು ವರ್ಷದ ಬಾಲಕಿಯೊಬ್ಬಳು ಎಡಗಾಲಿನಲ್ಲಿ ಬಹಳ ಸಮಯದಿಂದ ಕೀವು ಸುರಿಯುತ್ತಿದ್ದ ಸ್ಥಿತಿಯಲ್ಲಿ ಅವರ ಘಟಕದಲ್ಲಿ ದಾಖಲೆಯಾದಳು. ಎಕ್ಸ್‌ರೇ ಫೋಟೊದಲ್ಲಿ ಕಾಲಿನ ಹೊರಭಾಗದಲ್ಲಿ ಕಿರಿಯ ಗಾತ್ರದ ಮೂಳೆ 'ಫಿಬುಲಾ' (Fibula) ರೋಗಾಣು ಸೋಂಕಿಗೊಳಗಾಗಿ (Osteomylitis) ಕೊಳೆತ ಸ್ಥಿತಿಯಲ್ಲಿತ್ತು. ಹಿರಿಯ ಗಾತ್ರದ ಮೂಳೆಗಳಲ್ಲಿ ಅಂತಹ ಪರಿಸ್ಥಿತಿ ಉಂಟಾದರೆ, ಕೊಳೆತ ಭಾಗವನ್ನು ಮಾತ್ರ ಆಪರೇಷನ್ ಮಾಡಬಹುದು. ಫಿಬುಲಾ ತೀರಾ ಚಿಕ್ಕದಾಗಿದ್ದು ಪಕ್ಕದಲ್ಲೇ ಹಿರಿಯ ಗಾತ್ರದ ಮೂಳೆ (Tibia) ಇರುವುದರಿಂದ ಅದನ್ನು ರೋಗಿಗೆ ಯಾವುದೇ ಅಂಗವಿಕಲತೆ ಆಗದೆ ತೆಗೆದು ಹಾಕುತ್ತಾರೆ. ಡಾ|| ಖಾನ್ ತಮ್ಮ ಬೆಂಗಳೂರಿನ ಅನುಭವದ ಆಧಾರದ ಮೇಲೆ ಒಂದು ದಿನ ಆಪರೇಷನ್ ಮಾಡಿ ತೆಗೆದು ಹಾಕಿದರು. ಮರು ದಿನದಿಂದಲೇ ಬಾಲಕಿಯ ಎಡಗಾಲು ಕಪ್ಪು ಬಣ್ಣಕ್ಕೆ ತಿರುಗಲಾರಂಭಿಸಿತು. ಇನ್ನೆರಡು ದಿನಗಳಲ್ಲಿ ಕೊಳೆತು ದುರ್ವಾಸನೆ ಸೂಸಲಾರಂಭಿಸಿತು. ಆ ಹಂತದಲ್ಲಿ ಡಿ.ಎಂ.ಓ. ಸಾಹೇಬರು ನಾನು ಒಂದು ಸಾರಿ ಆಕೆಯನ್ನು ನೋಡಬೇಕೆಂದು ಹೇಳಿ ಕಳುಹಿಸಿದರು. ಆಕೆಯನ್ನು ಪರೀಕ್ಷಿಸಿದಾಗ ಮುಂಗಾಲಿನ ಮಟ್ಟದಿಂದ ಕೆಳಭಾಗಕ್ಕೆ ರಕ್ತ ಸರಬರಾಜು ಮಾಡುವ ಪ್ರಮುಖ ರಕ್ತನಾಳವನ್ನು ಆಪರೇಷನ್ ಸಮಯದಲ್ಲಿ ಅಜಾಗರೂಕತೆ ಯಿಂದ ಕಟ್ಟಿಹಾಕಿದ್ದರಿಂದ ಹಾಗಾಗಿರುವುದು ಸ್ವತಃಸಿದ್ಧವಾಗಿತ್ತು. ಕಾಲು ನಿರ್ಜೀವವಾಗಿದ್ದು ಅದನ್ನು ಉಳಿಸುವ ಪ್ರಶ್ನೆಯೇ ಇರಲಿಲ್ಲ. ಆದುದರಿಂದ ಆಕೆಯ ಕಾಲನ್ನು ಮುಂಗಾಲು ಕೆಳಗೆ ಕತ್ತರಿಸಿ ತೆಗೆಯಬೇಕೆಂದು ಸಲಹೆ ಮಾಡಿದೆ.

ವಿಷಯ ತಿಳಿದ ರೋಗಿಯ ಕಡೆಯವರು ಗುಂಪುಗೂಡಿಕೊಂಡು ಡಿ.ಎಂ.ಓ. ಅವರ ಕೊಠಡಿಗೆ ಹೋಗಿ ಆಗಾಗ್ಗೆ ಗಲಾಟೆ ಮಾಡಲು ಶುರುಮಾಡಿದರು; ಮತ್ತೆ ನನಗೆ ಹೇಳಿ ಕಳುಹಿಸಿದರು. ಈಗಾಗಲೇ ಆಗಿ ಹೋಗಿದ್ದ ಪರಿಸ್ಥಿತಿ ಬಗೆಗೆ ಗಲಾಟೆ ಮಾಡುವುದರಿಂದ ಯಾವ ಪ್ರಯೋಜನವೂ ಆಗಲಾರದು; ಪರಿಸ್ಥಿತಿ ಮುಂದುವರಿದರೆ ಅವಳ ಪ್ರಾಣಕ್ಕೆ ಹಾನಿಯಾಗಬಹು ದೆಂದು ಹೇಳಿ ರೋಗಿಯ ಕಡೆಯವರಿಗೆ ಅವರ ಕೋಪತಾಪಗಳನ್ನು ಸಾಂತ್ವನಗೊಳಿಸಿದೆ. ಅಲ್ಲದೆ ಡಿ.ಎಂ.ಓ. ಸಾಹೇಬರ ಸಲಹೆಯಂತೆ ಕಾಲನ್ನು ಕತ್ತರಿಸಿ ತೆಗೆಯುವುದೇ ಸರಿಯಾದ ಮಾರ್ಗವೆಂದು ಸಲಹೆ ಮಾಡಿದೆ. ಕಾಲು ಕತ್ತರಿಸದಿದ್ದರೆ ಮಗುವನ್ನೇ ಕಳೆದುಕೊಳ್ಳಬೇಕಾಗುತ್ತದೆ ಎಂಬ ಭಯದಿಂದ ಅವರು ಅದಕ್ಕೆ ಸಮ್ಮತಿಸಿದರೆನಿಸುತ್ತದೆ.

ಅನಂತರ ಡಿ.ಎಂ.ಓ. ಮತ್ತೆ ನನಗೆ ಹೇಳಿ ಕಳುಹಿಸಿದರು. ಕಾಲು ಕತ್ತರಿಸುವ ಆಪರೇಷನ್ ನಾನೇ ಮಾಡಬೇಕೆಂದು ಒತ್ತಾಯ ಮಾಡಿದರು. ರೋಗಿಯ ಸಾಮಾನ್ಯ ಸ್ಥಿತಿ ಅಷ್ಟೇನೂ ತೃಪ್ತಿಕರವಾಗಿಲ್ಲವಾದ್ದರಿಂದ, ಮತ್ತೇನಾದರೂ ಹೆಚ್ಚುಕಡಿಮೆಗಳಾದರೆ ಜವಾಬ್ದಾರಿ ವಹಿಸಲು ಅವರು ತಯಾರಿರಬೇಕು; ಹಾಗೂ ಆಪರೇಷನ್ ಸಮಯದಲ್ಲಿ ಅವರೂ ಓ.ಟಿ. ಒಳಗಡೆ ಹಾಜರಿರಬೇಕೆಂಬ ಷರತ್ತುಗಳನ್ನು ಮುಂದೊಡ್ಡಿದೆ. ಅದಕ್ಕೆಲ್ಲಾ ಅವರೊಪ್ಪಿದರು.

ಅಂದು ಮಧ್ಯಾಹ್ನವೇ ಆಪರೇಷನ್ ನಿಗದಿಯಾಯಿತು. ಓ.ಟಿ.ಗೆ ಹೋಗುವ ಮೊದಲು ಡಿ.ಎಂ.ಓ. ಅವರನ್ನು ಕಂಡು ಅವರೂ ಬರಬೇಕೆಂದು ಕೇಳಿಕೊಂಡೆ. ಅರಿವಳಿಕೆ ನೀಡಿ ಆಪರೇಷನ್ ಶುರು ಮಾಡುವುದರೊಳಗೇ ತಾವು ಬಂದು ಸೇರಿಕೊಳ್ಳುವುದಾಗಿ ಹೇಳಿದರು. ಮುಂದೆ ಆಪರೇಷನ್ ಶುರುಮಾಡಿದಾಗಲೂ ಅವರಿಗೆ ಬರುವಂತೆ ಹೇಳಿಕಳುಹಿಸಿದೆ. ಅಷ್ಟರಲ್ಲೇ ತಮಗೆ ಬೇರೆ ಯಾವುದೋ ಕೆಲಸವಿರುವುದಾಗಿ ಆಸ್ಪತ್ರೆಯಿಂದಲೇ ಹೊರಟು ಹೋಗಿ ಬಿಟ್ಟಿದ್ದರಂತೆ! ಮುಂದೆ ಬಾಲಕಿ ಚೇತರಿಸಿಕೊಂಡಳು; ಕೆಲವು ತಿಂಗಳ ನಂತರ ರೋಟರಿ ಕ್ಲಬ್‌ನವರ ನೆರವಿನಿಂದ ಕೃತಕ ಕಾಲನ್ನು ಕೂಡಿಸುವ ಏರ್ಪಾಡು ಮಾಡಿದೆವು.

ಕೆಲವೇ ತಿಂಗಳಲ್ಲಿ ಡಾ॥ ರಹಿಮಾನ್ ಖಾನ್ ಅವರು ನಿವೃತ್ತಿಯಾದರು. ಅವರ ಸ್ಥಾನಕ್ಕೆ ಡಾ॥ ಬಿ. ಎಸ್. ದೇಶಪಾಂಡೆಯೆಂಬವರು ಬಂದರು. ಹೈದರಾಬಾದ್ ಕರ್ನಾಟಕ ವಲಯದ ಶ್ರೀಮಂತ ಕುಟುಂಬದವರಾದ ಅವರು ನೇತ್ರ ಚಿಕಿತ್ಸಾ ವಿಷಯದಲ್ಲಿ ಡಿಪ್ಲೊಮಾ ಪಡೆದವರು ಆದರೂ ಆ ವಿಷಯದಲ್ಲಿ ಅಷ್ಟೇನೂ ಆಸಕ್ತಿ ಹೊಂದಿದವರಂತಿರಲಿಲ್ಲ; ಆಸ್ಪತ್ರೆಯ ಆಡಳಿತ ನಿರ್ವಹಣೆಯಲ್ಲಿ ಹೆಚ್ಚಿನ ಆಸಕ್ತಿ ತೋರಿಸುತ್ತಿದ್ದ ಅವರು ವೈದ್ಯರೂ ಸೇರಿದಂತೆ ಇತರ ಸಿಬ್ಬಂದಿ ವರ್ಗದವರೊಡನೆ ಸೌಹಾರ್ದ ಭಾವನೆಯಿಂದ ನಡೆದುಕೊಳ್ಳುತ್ತಿದ್ದರು.

ಅದೇ ತಾನೇ ಜಿಲ್ಲಾ ಸರ್ಜನ್ ಹುದ್ದೆಗೆ ಬಡ್ತಿ ಪಡೆದು ಬಂದಿದ್ದ ಅವರು ಮುಂದೆ ತುರ್ತು ಚಿಕಿತ್ಸಾ ವಿಧಾನಗಳನ್ನು ಎದುರಿಸಬೇಕಾಗುವ ಸಂದರ್ಭಗಳೂ ಒದಗಬಹುದೆಂಬ ದೂರಾಲೋಚನೆಯಲ್ಲಿದ್ದರೆನಿಸುತ್ತದೆ. ಅದರಿಂದ ಮೂಲಭೂತ ಶಸ್ತ್ರಚಿಕಿತ್ಸಾ ವಿಧಾನಗಳ ಪರಿಚಯ ಮಾಡಿಕೊಳ್ಳುವ ದೃಷ್ಟಿಯಿಂದ ನನ್ನ ಜೊತೆ ಆಪರೇಷನ್ ಥಿಯೇಟರಿನಲ್ಲಿ ಕಾರ್ಯ ನಿರತರಾಗುವ ತಮ್ಮ ಅಭಿಲಾಷೆಯನ್ನು ವ್ಯಕ್ತಪಡಿಸಿದರು. ನಾನೂ ಸಂತಸದಿಂದ ಅವರು ಓ.ಟಿ.ಯಲ್ಲಿ ಭಾಗವಹಿಸಲು ಅವಕಾಶ ಮಾಡಿಕೊಡುತ್ತಿದ್ದೆ. ಮೇಲಂತಸ್ತಿನ ಗತ್ತು ಗರ್ವಗಳ ಭಾವನೆಗಳಿಗೆಡೆ ಕೊಡದೆ ನಾನು ಜರುಗಿಸುತ್ತಿದ್ದ ಆಪರೇಷನ್‌ಗಳಲ್ಲಿ ಸಹಾಯಕರಾಗಿ ಕಾರ್ಯ ನಿರ್ವಹಿಸುತ್ತಿದ್ದರು. ಮುಂದಿನ ಕೆಲವೇ ತಿಂಗಳುಗಳಲ್ಲಿ ಉದರ ಕೋಶವನ್ನು ತೆರೆದು (Laparotomy), ಅಪೆಂಡಿಕ್ಸ್‌ನಂಥ ಕೆಲವು ಆಪರೇಷನ್ ಜರುಗಿಸುವಷ್ಟು ಅನುಭವ ಪಡೆದುಕೊಳ್ಳುವುದು ಅವರಿಗೆ ಸಾಧ್ಯವಾಯಿತು. ನನ್ನ ಮೇಲೆ ಅವರಿಗೆಷ್ಟು ನಂಬಿಕೆ ಹಾಗೂ ಭರವಸೆಗಳಿದ್ದುವೆಂದರೆ ಸಾಮಾನ್ಯವಾಗಿ ಊರಲ್ಲೇ ಇರುತ್ತಿದ್ದ ಅವರ ಪತ್ನಿಯನ್ನು ಕರೆಸಿ, ಆಗಾಗ್ಗೆ ಅನುಭವಿಸುತ್ತಿದ್ದ ಅಪೆಂಡಿಸೈಟಿಸ್‌ಗೆ ನನ್ನಿಂದಲೇ ಆಪರೇಷನ್ ಮಾಡಿಸಿದರು.

ವೈದ್ಯರೊಬ್ಬರ ಮನೆಯಲ್ಲಿ ಒಂದು ಭೋಜನಕೂಟದಲ್ಲಿ ಭಾಗವಹಿಸುತ್ತಿದ್ದಾಗ ಡಾ॥ ದೇಶಪಾಂಡೆಯವರು, "ಗೌಡರೇ, ಇಷ್ಟು ದಿನವೆಲ್ಲಾ ಒಬ್ಬರೇ ಸರ್ಜನ್ ಆಗಿದ್ದು ರಾಜನಂತೆ ಮೆರೆಯುತ್ತಿದ್ದಿರಲ್ಲ; ಸದ್ಯದಲ್ಲೇ ನಿಮಗೊಬ್ಬ ಪ್ರತಿಸ್ಪರ್ಧಿ ಆಗಮಿಸಲಿದ್ದಾರೆ" ಎಂಬ ತಮಾಷೆಯ ಮಾತುಗಳನ್ನಾಡಿದರು. "ಒಳ್ಳೆಯದೇ ಆಯ್ತಲ್ಲ ಸಾರ್, ಈಗ ಹಗಲು ರಾತ್ರಿಗಳ ಪರಿವೇ ಇಲ್ಲದೆ ಕಾರ್ಯ ನಿರ್ವಹಿಸುತ್ತಿರುವ ನನ್ನ ಪರಿಯನ್ನು ನೀವೇ ನೋಡುತ್ತಿರುವಿರಲ್ಲಾ; ಇನ್ನೊಬ್ಬರು

ಬಂದರೆ ನನ್ನ ಕೆಲಸಗಳು ಸ್ವಲ್ಪ ಹಗುರವಾಗಬಹುದಲ್ಲದೆ, ಅವರು ಪ್ರತಿಸ್ಪರ್ಧಿಯಾಗಲಾರರು" ಎಂದು ಉತ್ತರಿಸಿದೆ. "ಸರಿ, ಸರಿ, ನಿಮ್ಮಿಂದ ಇಂತಹ ಪ್ರತಿಕ್ರಿಯೆ ನಿರೀಕ್ಷಿಸಿಯೇ ಅದನ್ನು ಪ್ರಸ್ತಾಪಿಸಿದ್ದು; ನೀವು ಯಾರೊಂದಿಗಾದರೂ ಹೊಂದಿಕೊಳ್ಳುವವರೆಂದು ನನಗೆ ಗೊತ್ತಿಲ್ಲವೇ" ಎಂದರು; ಹಾಗೂ ಮುಂದುವರಿದು "ಇಲ್ಲಿಗೆ ಬರುವವರು ಡಾ॥ ಎಚ್. ಬಸವನ ಗೌಡರು, ನಿಮಗೂ ಗೊತ್ತಿರಬಹುದು; ಬಳ್ಳಾರಿ ಕಡೆಯವರು ನನ್ನ ಜಾಗಕ್ಕೇ ಬರುತ್ತಾರೆ" ಎಂದು ಸಂಭಾಷಣೆ ಮುಕ್ತಾಯ ಮಾಡಿದರು. ಡಾ॥ ಬಸವನ ಗೌಡರು ನನಗೂ ಪರಿಚಿತರೇ. ನಾವೆಲ್ಲಾ ಸ್ನಾತಕೋತ್ತರ ಪದವೀಧರರ ಸಂಘವನ್ನು ಸ್ಥಾಪಿಸಿದಾಗ ಸದಸ್ಯರಾಗಿ ಸಕ್ರಿಯ ಪಾತ್ರ ವಹಿಸುತ್ತಿದ್ದವರು. ನೇರ ನಡೆ, ನುಡಿ ಹಾಗೂ ಶಿಸ್ತಿನ ಆಡಳಿತಗಾರರೆಂದು ಕೇಳಿದ್ದೆ.

ಡಾ॥ ಬಸವನ ಗೌಡರು ಬಂದ ಮೇಲೆ ಆಸ್ಪತ್ರೆಯ ಆಡಳಿತ ವ್ಯವಸ್ಥೆ ಮತ್ತಷ್ಟು ಬಿಗಿಯಾಯಿತು. ತಪ್ಪು ಮಾಡಿದರೆ ವೈದ್ಯರೇ ಆಗಿದ್ದರೂ ತರಾಟೆಗೆ ತೆಗೆದುಕೊಳ್ಳಲು ಹಿಂಜರಿಯುತ್ತಿರಲಿಲ್ಲ. ಡಾ॥ ದೇಶಪಾಂಡೆಯವರು ತಮ್ಮ ಕಾಲದಲ್ಲಿ ಪ್ರತಿ ತಿಂಗಳ ಕೊನೆಯಲ್ಲಿ ವೈದ್ಯರೆಲ್ಲಾ ಒಂದೆಡೆ ಸೇರಿ ಭೋಜನ ಕೂಟದಲ್ಲಿ ಭಾಗವಹಿಸುವ ಸಂಪ್ರದಾಯ ಹುಟ್ಟು ಹಾಕಿದ್ದರು. ಡಾ॥ ಬಸವನ ಗೌಡರು ಬಂದ ಮೇಲೆ ಪ್ರತಿ ದಿನದ ಕೆಲಸ ಕಾರ್ಯಗಳು ಮುಗಿದ ನಂತರ ಎಲ್ಲರೂ ಒಟ್ಟಾಗಿ ಹತ್ತಿರದ ಹೋಟೆಲ್ ಒಂದರಲ್ಲಿ ಕಾಫೀ, ಟೀ ಸಮಾರಾಧನೆಯಾಗುವ ಸಂಪ್ರದಾಯ ಆರಂಭಿಸಿದರು. ಅದರಿಂದ ಅಂದು ನಮ್ಮೆಲ್ಲರ ನಡುವೆ ಅದೆಷ್ಟೇ ಕಹಿಸಿಹಿ ಪ್ರಸಂಗಗಳು ಜರುಗಿದ್ದರೂ ಮರೆತು ಸ್ನೇಹಭಾವದಿಂದ ಹಿಂದಿರುಗಲು ಸಾಧ್ಯವಾಗುತ್ತಿತ್ತು.

ಡಾ॥ ಬಸವನ ಗೌಡರು ಬಂದ ಮೇಲೆ ಎರಡು ಸರ್ಜಿಕಲ್ ಘಟಕಗಳಾದವು; ಆದರೂ ಎರಡೂ ಘಟಕಗಳು ಒಂದೇ ಎನ್ನುವ ರೀತಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದವು. ಡಾ॥ ಬಸವನ ಗೌಡರಿಗೆ ಆಡಳಿತದ ಕಾರ್ಯಭಾರದಿಂದ ಯಾವಾಗಲೂ ಹೊರರೋಗಿಗಳ ವಿಭಾಗದಲ್ಲಿದ್ದುಕೊಂಡು ಕಾರ್ಯ ನಿರ್ವಹಿಸಲು ಸಾಧ್ಯವಾಗುತ್ತಿರಲಿಲ್ಲ. ಅಂತಹ ಸಂದರ್ಭಗಳಲ್ಲಿ ಆ ವಿಭಾಗವನ್ನು ನಾನೇ ನಿರ್ವಹಿಸುತ್ತಿದ್ದೆ. ಆಪರೇಷನ್‌ಗಳ ಸರದಿ ನನ್ನದಾಗಿದ್ದಾಗ, ಅವರೂ ಓ.ಟಿ.ಗೆ ಬಂದು ಸಹಕರಿಸುತ್ತಿದ್ದು, ಅವರ ಸರದಿಯ ದಿನಗಳಲ್ಲಿ ನಾನು ಹೋಗುತ್ತಿದ್ದೆ. ಒಂದೇ ವಿಶೇಷತೆ ಗಳಿಸಿಕೊಂಡವರು ೨-೩ ಜನರಿದ್ದಾಗ ಪರಸ್ಪರ ಪೈಪೋಟಿ, ಅಸೂಯೆ ಹಾಗೂ ದೋಷಾರೋಪಣೆಗಳಿಗೆ ಅವಕಾಶಗಳಿರುವುದು ಸ್ವಾಭಾವಿಕ. ಆದರೆ ನಮ್ಮಿಬ್ಬರ ನಡುವೆ ಅಂತಹ ಸಂದರ್ಭಗಳೇ ಒದಗಿಬರಲಿಲ್ಲ. ಡಾ॥ ದೇಶಪಾಂಡೆಯವರ ಕಾಲದಿಂದಲೂ ಚಿಕ್ಕಮಗಳೂರಿನಲ್ಲಿದ್ದ ಸ್ನೇಹಮಯ ವಾತಾವರಣ ಒಂದು ರೀತಿಯಲ್ಲಿ ಅನನ್ಯವೆಂದೇ ಹೇಳಬೇಕು.

ಡಾ॥ ಬಸವನ ಗೌಡರೂ ಸಹ ಅಲ್ಲಿ ಕೇವಲ ಒಂದು ವರ್ಷಕ್ಕಿಂತ ಸ್ವಲ್ಪ ಹೆಚ್ಚು ಸಮಯವಿದ್ದರೆನಿಸುತ್ತದೆ. ಆ ಸಮಯದಲ್ಲಿ ಶಿವಮೊಗ್ಗಾ ಮೆಗ್ಗಾನ್ ಆಸ್ಪತ್ರೆಯಲ್ಲಿ ಆಡಳಿತ ನಿರ್ವಹಣೆಯಲ್ಲಿ ಸ್ವಲ್ಪ ವ್ಯತ್ಯಯದ ಸನ್ನಿವೇಶ ಉಂಟಾಗಿದ್ದರಿಂದ ಅವರನ್ನು ಅಲ್ಲಿಗೆ ವರ್ಗ ಮಾಡಿದರು. ಬೇರೆ ಬೇರೆ ಹಿನ್ನೆಲೆಯಿಂದ ಬಂದಿದ್ದ ನಮ್ಮಿಬ್ಬರ ನಡುವೆ ಅದೆಷ್ಟು ಸೌಹಾರ್ದಯುತ ಬಾಂಧವ್ಯವಿತ್ತೆಂದರೆ, ಅವರು ಶಿವಮೊಗ್ಗೆಗೆ ಹೋದ ನಂತರ ನಾನೂ ಸಹಾ ವರ್ಗ ಮಾಡಿಸಿಕೊಂಡು ಬರಬೇಕೆಂದು ಆಗ್ರಹ ಪಡಿಸಿ ಪತ್ರ ಬರೆದಿದ್ದರು.

## ಆಡಳಿತಾರೂಢರ ಅಸಹ್ಯ ವರ್ತನೆ

ಡಾ॥ ಜಾನ್ ಪೀಟರ್ ಎಂಬುವರು ಡಾ॥ ಬಸವನ ಗೌಡರ ನಂತರ ಡಿ.ಎಂ.ಓ. ಆಗಿ ಬಂದರು. ಸ್ವಲ್ಪ ತಡವಾಗಿ ಎಂ.ಎಸ್. ಪದವಿ ಗಳಿಸಿದ ಅವರು ಸದಾ ಅಂತರ್ಮುಖಿಗಳಾಗಿರುವಂತೆ ಕಂಡು ಬರುತ್ತಿದ್ದರು; ವೃತ್ತಿ, ಆಡಳಿತ ಹಾಗೂ ಸಾರ್ವಜನಿಕ ಕ್ಷೇತ್ರಗಳಲ್ಲಿ ಅಷ್ಟೇನೂ ಪ್ರಭಾವ ಬೀರುವ ವ್ಯಕ್ತಿತ್ವ ಅವರಿಗಿದ್ದಂತಿರಲಿಲ್ಲ. ಅದೇ ಸಮಯದಲ್ಲಿ ಆರ್.ಎಂ.ಓ. ಆಗಿದ್ದ ಡಾ॥ ನಾಗರಾಜ ಗೌಡರಿಗೂ ವರ್ಗವಾಯಿತು. ಮೆಡಿಕಲ್ ಕಾಲೇಜಿನಲ್ಲಿ ಸಹಪಾಠಿಗಳಾಗಿದ್ದು, ನಮ್ಮ ನಡುವೆ ಮೊದಲಿನಿಂದಲೂ ಒಳ್ಳೆಯ ಸ್ನೇಹ ಸಂಬಂಧವಿತ್ತು. ಪ್ರಾಂತ್ಯಗಳ ಪುನರ್ವಿಂಗಡನೆ ಸಮಯದಲ್ಲಿ ಕೊಡಗಿನಲ್ಲಿ ಸೇವೆಗೆ ಸೇರಿಕೊಂಡಿದ್ದರಿಂದ ನನಗಿಂತಲೂ ಹೆಚ್ಚಿನ ಸೇವಾ ಹಿರಿತನ ಅವರದ್ದಾಗಿತ್ತು. ಅವರ ಜಾಗಕ್ಕೆ ಬೇರೊಬ್ಬರು ವರ್ಗವಾಗಿ ಬಂದರು. ಕಾಲೇಜಿನಲ್ಲಿ ನನಗಿಂತ ಎರಡು ವರ್ಷಗಳ ಹಿಂದಿನ ತರಗತಿಯಲ್ಲಿದ್ದು ನಾನು ತೇರ್ಗಡೆಯಾದ ಮೂರು ವರ್ಷಗಳ ನಂತರ ಪದವಿಗಳಿಸಿದ್ದರೂ ಪ.ಸ.ಕ. ಪಟ್ಟಿಯಲ್ಲಿ ಹಿರಿತನದ ಸ್ಥಾನದಲ್ಲಿದ್ದರು. ಎಂ.ಎಸ್. ಪದವಿಧರರಾಗಿದ್ದ ಅವರು ಒಂದು ತರಹದ ಅತಿರೇಕದ ನಡವಳಿಕೆಯವರೆಂಬ ಭಾವನೆ ಹುಟ್ಟಿಸಿದ್ದರು. ಮೊದಲಿನಿಂದಲೂ ನಮ್ಮ ನಡುವೆ ಅಂತಹ ಅನ್ಯೋನ್ಯತೆ ಇರದಿದ್ದುದರಿಂದ ನಾನು ಅವರ ಗೊಡವೆಗೆ ಹೋಗುತ್ತಿರಲಿಲ್ಲ. ಆದರೂ ಕೆಲಸಾರಿ ನನ್ನನ್ನು ಕೆಣಕುವಂತೆ ಮಾಡುವುದಕ್ಕೆ ಅವರು ಹಿಂಜರಿಯುತ್ತಿರಲಿಲ್ಲ.

ಆಸ್ಪತ್ರೆಯ ಸರ್ಜಿಕಲ್ ವಿಭಾಗದಲ್ಲಿ ಈಗ ಮೂರು ಘಟಕಗಳಾದವು. ಆದುದರಿಂದ ಯಾರೊಬ್ಬರಿಗೂ ಕೆಲಸದ ಬಗೆಗೆ ಹೆಚ್ಚಿನ ಒತ್ತಡವಿರುತ್ತಿರಲಿಲ್ಲ. ಸರದಿ ಪ್ರಕಾರ ಹೊರ ರೋಗಿಗಳ ಪರೀಕ್ಷೆ, ಓ.ಟಿ.ಯ ಕೆಲಸ ಮುಂತಾದವು ಜರುಗುವುದು ಸಾಮಾನ್ಯ ರೀತಿ. ಆದರೆ ಈಗಿನ ಆರ್.ಎಂ.ಓ. ಅಂತಹ ಒಂದು ಶಿಸ್ತು ಬದ್ಧ ನಿಯಮಕ್ಕೆ ಅಂಟಿಕೊಳ್ಳುವ ಸ್ವಭಾವದವರಾಗಿರಲಿಲ್ಲ. ಎಲ್ಲಾ ದಿನಗಳಲ್ಲೂ ರೋಗಿಗಳನ್ನು ಆಸ್ಪತ್ರೆಗೆ ಸೇರಿಸಿಕೊಳ್ಳುತ್ತಿದ್ದರು. ಅದೆಲ್ಲಕ್ಕಿಂತಲೂ ಬೇರೆ ಘಟಕದವರು ಸೇರಿಸಿದವರನ್ನು ಚಿತಾವಣೆ ಮಾಡಿಸಿ ಅವರ ಘಟಕದಲ್ಲಿ ಮರು ದಾಖಲೆ ಮಾಡುತ್ತಿದ್ದುದು ಸಾಮಾನ್ಯ ಸಂಗತಿಯಂತಾಯಿತು. ಅವರು ಬಂದ ಮೊದಲ ವಾರದಲ್ಲೇ ಡಿ.ಎಂ.ಓ. ಅವರ ಘಟಕದಲ್ಲಿ ದಾಖಲಾದ ರೋಗಿಯೊಬ್ಬ ಎರಡೇ ದಿನಗಳಲ್ಲಿ ಆರ್.ಎಂ.ಓ. ಘಟಕದ ಹಾಸಿಗೆಯಲ್ಲಿ ಮರುದಾಖಲಾಗಿದ್ದ! ಸಾಮಾನ್ಯವಾಗಿ ಎಲ್ಲಾ ಆಸ್ಪತ್ರೆಗಳಲ್ಲಿ ಮುಂದುವರಿದುಕೊಂಡು ಬರುತ್ತಿದ್ದ ಸತ್ಸಂಪ್ರದಾಯಗಳನ್ನು ಮುರಿದು ಸ್ವೇಚ್ಛಾಚಾರದಿಂದ ವರ್ತಿಸುವುದು ಒಳ್ಳೆಯ ನಡತೆಯೆಂದು ಪರಿಗಣಿಸುವುದಿಲ್ಲ. ಆ ದೃಷ್ಟಿಯಿಂದಲಾದರೂ ಡಿ.ಎಂ.ಓ. ಅವರು ಆರ್.ಎಂ.ಓ.ರೊಡನೆ ಪ್ರಸ್ತಾಪಿಸಬಹುದಿತ್ತು. ಬದಲಿಗೆ ಅವರು ನನ್ನ ಹತ್ತಿರ ಅವರ ಅಳಲನ್ನು ಹೇಳಿಕೊಂಡರು. ಅಷ್ಟೇನೂ ಖಂಡಿತ ವಾದಿಗಳಾಗಿರದ ಅವರು ಆರ್.ಎಂ.ಓ. ಅವರನ್ನು ಆ ಬಗೆಗೆ ವಿಚಾರಿಸುವ ಧೈರ್ಯ ಮಾಡಲಿಲ್ಲವೆನಿಸುತ್ತದೆ. ಹಲವು ವರ್ಷಗಳಿಂದ ಅಲ್ಲೇ ಬೇರು ಬಿಟ್ಟಿದ್ದು, ನನ್ನದೇ ಪ್ರಭಾವವಿರುತ್ತಿದ್ದುದರಿಂದ ನಾನು ದಾಖಲು ಮಾಡುತ್ತಿದ್ದ ರೋಗಿಗಳ ವಿಷಯದಲ್ಲಿ ಹಾಗೆ ವರ್ತಿಸುತ್ತಿರಲಿಲ್ಲ. ಆದರೂ ಹಿಂದಿನ ಕೆಲವು ವರ್ಷಗಳಿಂದ ಆಸ್ಪತ್ರೆಯಲ್ಲಿ ಸೌಹಾರ್ದಮಯ ವಾತಾವರಣಕ್ಕೆ ಹುಳಿ ಹಿಂಡಿದಂತಾಯಿತು.

ಆಸ್ಪತ್ರೆಯ ಒಳಾಡಳಿತದಲ್ಲಿ ಈ ಬಗೆಯ ಅವಾಂತರಗಳು ಜರುಗುತ್ತಿದ್ದರೆ, ಸರಿಸುಮಾರು ಅದೇ ಸಮಯದಲ್ಲಿ ಜಿಲ್ಲಾ ಆರೋಗ್ಯಾಧಿಕಾರಿಗಳಾಗಿ (ಡಿ.ಎಚ್.ಓ.) ವರ್ಗವಾಗಿ ಬಂದ ಡಾ॥ ಶಿವರಾಮಯ್ಯ ಎಂಬವರು ತಮ್ಮ ಹಿತಾಸಕ್ತಿಗಳ ವೃದ್ಧಿಗಾಗಿ ಪರೋಕ್ಷವಾಗಿ ಆಸ್ಪತ್ರೆಯ

ಸಂಪ್ರದಾಯಗಳನ್ನು ಮುರಿಯುವುದರಲ್ಲಿ ತಮ್ಮ ಮೂಗು ತೂರಿಸಲಾರಂಭಿಸಿದರು. ಆ ತನಕ ಜಿಲ್ಲೆಯ ಇತರ ಆಸ್ಪತ್ರೆ/ಆರೋಗ್ಯ ಕೇಂದ್ರಗಳ ಕುಟುಂಬ ಕಲ್ಯಾಣ ಯೋಜನೆಯ ಶಸ್ತ್ರಚಿಕಿತ್ಸಾ ಶಿಬಿರಗಳಿಗೆ (ವ್ಯಾಸೆಕ್ಟಮಿ ಮತ್ತು ಟ್ಯೂಬೆಕ್ಟಮಿ) ಆಸ್ಪತ್ರೆ ಆಡಳಿತದ ಜವಾಬ್ದಾರಿಗಳಿರದ ನನ್ನನ್ನು ನಿಯೋಜಿಸುವುದು ವಾಡಿಕೆಯಾಗಿತ್ತು. ಹಿಂದಿನಿಂದಲೂ ಒಂದು ಬಗೆಯ ವಿಕೃತ ಸ್ನೇಹ ಸಂಬಂಧ ಹೊಂದಿದ್ದ ಡಾ|| ಶಿವರಾಮಯ್ಯ (ಡಿ.ಎಚ್.ಓ.) ಮತ್ತು ಈಗಿನ ಆರ್.ಎಂ.ಓ. ಅವರ ಸಹಯೋಗದಿಂದ ಕುಟುಂಬ ಕಲ್ಯಾಣ ಯೋಜನೆಯ ಹಿಂದಿನ ಸಂಪ್ರದಾಯಕ್ಕೆ ತಿಲಾರ್ಪಣೆ ನೀಡಿದರು. ಆಸ್ಪತ್ರೆಯ ಕಾರ್ಯ ನಿರ್ವಹಣೆಯಲ್ಲಿ ದಿನದ ೨೪ ಗಂಟೆಗಳು ನಿರತರಾಗಿರುವ ಆರ್.ಎಂ.ಓ. ಅವರನ್ನೇ ಶಸ್ತ್ರಚಿಕಿತ್ಸಾ ಶಿಬಿರಗಳಿಗೆ ನಿಯೋಜಿಸುವಂತೆ ಡಿ.ಎಂ.ಓ. ಅವರಿಗೆ ಕೋರಿಕೆ ಕಳುಹಿಸಲಾರಂಭಿಸಿದರು. ಆಸ್ಪತ್ರೆಯಲ್ಲಿನ ಜವಾಬ್ದಾರಿಯ ಅಧಿಕೃತ ರೂವಾರಿಯಾದ ಆರ್.ಎಂ.ಓ. ಅವರನ್ನು ಹಾಗೆ ದಿನವೆಲ್ಲಾ ಹೊರಗಡೆಯ ಕಾರ್ಯ ನಿರ್ವಹಣೆಗೆ ನಿಯೋಜಿಸು ವುದಕ್ಕಾಗದೆಂದು ಡಿ.ಎಂ.ಓ. ಅವರು, ಡಿ.ಎಚ್.ಓ. ಅವರಿಗೆ ಮನವರಿಕೆ ಮಾಡಿ, ಹಿಂದಿನ ರೂಢಿಯಂತೆ ಆಡಳಿತ ವಿಷಯಗಳ ಜವಾಬ್ದಾರಿ ಇಲ್ಲದ ನನ್ನನ್ನೇ ನಿಯೋಜಿಸುವ ನಿರ್ಧಾರವನ್ನು ಅವರು ತಿಳಿಸಬಹುದಾಗಿತ್ತು. ಇಂತಹ ವಿಚಾರಗಳಲ್ಲಿ ತಮ್ಮದೇ ಆದ ಸಮರ್ಥ ನೀತಿ ನಿಯಮಗಳನ್ನನುಸರಿಸುವುದಕ್ಕೆ ಹಿಂಜರಿಯುತ್ತಿದ್ದ ಡಿ.ಎಂ.ಓ. ಅವರು ವಿನೀತ ಭಾವದಿಂದ ಡಿ.ಎಚ್.ಓ. ಅವರ ಕೋರಿಕೆಯಂತೆಯೇ ಏರ್ಪಾಡು ಮಾಡಲಾರಂಭಿಸಿದರು. ಆದರೂ ಈ ವಿಷಯದ ಬಗೆಗೆ ನಾನೇನೂ ವಿರೋಧ ವ್ಯಕ್ತಪಡಿಸಲಿಲ್ಲ.

ಆದರೆ ಆರ್.ಎಂ.ಓ. ಅವರು ಇಂತಹ ಶಿಬಿರಗಳಿಗೆ ಹೋಗುವುದು ಆಸ್ಪತ್ರೆಯ ಕೆಲಸ ಕಾರ್ಯಗಳನ್ನು ಮುಗಿಸಿ ಸಾಯಂಕಾಲ ೫-೬ ಗಂಟೆಗಳ ನಂತರ, ಹಾಗೂ ಹಿಂತಿರುಗುವುದು ಮಧ್ಯರಾತ್ರಿಯ ನಂತರವೇ! ಸಾಮಾನ್ಯವಾಗಿ ಯಾವುದೇ ಶಸ್ತ್ರ ಚಿಕಿತ್ಸೆಗಳು ಬೆಳಗಿನ ಸಮಯದಲ್ಲೇ ಜರುಗುವುದು ಸರಿಯಾದ ಮಾರ್ಗ. ಆದರೆ ಡಿ.ಎಚ್.ಓ. - ಆರ್.ಎಂ.ಓ. ಅವರ ಹೊಸ ಜೋಡಿಯ ಅನುಕೂಲಗಳಿಗೆ ಹೊಂದಾಣಿಕೆ ಮಾಡಿಕೊಳ್ಳಲು ಟ್ಯೂಬೆಕ್ಟಮಿ ಶಿಬಿರಗಳಿಗೆ ಬರುವ ಮಹಿಳೆಯರು (ಅವರನ್ನು ರೋಗಿಗಳೆಂದು ಪರಿಗಣಿಸಬಾರದೆಂಬ ಅನಿಸಿಕೆ ಇದ್ದು, ಅತಿಥಿಗಳೆಂದೇ ಪರಿಗಣಿಸಬೇಕೆಂಬ ಗ್ರಹಿಕೆ ಇದೆ!) ಸಾಯಂಕಾಲದ ತನಕ ಖಾಲಿ ಹೊಟ್ಟೆಯಲ್ಲಿ ಹಸಿದುಕೊಂಡಿರಬೇಕಾದ ಪ್ರಮೇಯ ಸೃಷ್ಟಿಯಾಯಿತು. ಆರ್.ಎಂ.ಓ. ಆ ಸಮಯದಲ್ಲಿ ಆಸ್ಪತ್ರೆಯಲ್ಲಿ ಲಭ್ಯವಿರಲು ಸಾಧ್ಯವಾಗುತ್ತಿಲ್ಲವಾದುದರಿಂದ, ಆಗ ಒದಗಿಬರಬಹುದಾದ ತುರ್ತಿನ ಕಾರ್ಯ ನಿರ್ವಹಣೆಯನ್ನು ನಾನು ಮಾಡಬೇಕೆಂಬ ಡಿ.ಎಂ.ಓ. ಅವರ ಸುತ್ತೋಲೆಗಳು ಬರಲಾರಂಭಿಸಿದವು. ಒಂದೆರಡು ಸಾರಿ ಮೇಲಿನವರ ಆದೇಶವನ್ನು ಧಿಕ್ಕರಿಸಬಾರದೆಂಬ ವಿನಯದಿಂದ ಹಾಗೆ ಮಾಡಿದೆ. ಆದರೆ ಆಸ್ಪತ್ರೆಯಲ್ಲಿನ ಅವ್ಯವಸ್ಥೆಗಳಿಗೆಲ್ಲಾ ಅಂತಹ ಸಂದರ್ಭಗಳಿಗೆಲ್ಲಾ ನಾನು ಜವಾಬ್ದಾರನಾಗಲು ಸಾಧ್ಯವಿಲ್ಲವೆಂದು ನನ್ನ ಅಸಹಕಾರ ವ್ಯಕ್ತ ಪಡಿಸಲಾರಂಭಿಸಿದೆ.

ಈ ತರಹೆಯ ಅಸಮಾನ್ಯವೆನ್ನಬಹುದಾದ ರೀತಿಯಲ್ಲಿ ಕುಟುಂಬ ಕಲ್ಯಾಣ ಯೋಜನೆಗೆ ಸಂಬಂಧಿಸಿದ ಶಿಬಿರಗಳನ್ನು ಏರ್ಪಡಿಸುವ ಹಿನ್ನೆಲೆಯಲ್ಲಿ ಅವುಗಳನ್ನು ಜರುಗಿಸುವ ಪ್ರಮುಖ ವ್ಯಕ್ತಿಗಳ ನಡುವೆ ಅಪವಿತ್ರ ಒಡಬಡಿಕೆಯೊಂದಿದ್ದುದು ನಂತರ ತಿಳಿಯಿತು. ಕುಟುಂಬ ಕಲ್ಯಾಣ ಯೋಜನೆಯಡಿ ಆಪರೇಷನ್ ಮಾಡುವವರಿಗೆ ದೊರೆಯುವ ಸಂಭಾವನೆಯಲ್ಲಿ ಹಂಚಿಕೆಯಾಗುವುದಲ್ಲದೆ, ಪ್ರತಿ ಸಾರಿ ಶಿಬಿರದ ಕೆಲಸ ಕಾರ್ಯಗಳು ಮುಗಿದ ನಂತರ ಭೋಜನ

ಸಮಾರಂಭಗಳೂ ಜರುಗುವುದು ವಾಡಿಕೆಯಾಗಿ ಬಿಟ್ಟಿತ್ತಂತೆ. ಆದರೆ ಅಂತಹ ಅಪವಿತ್ರ ಮೈತ್ರಿ ಹೆಚ್ಚು ಕಾಲ ಮುಂದುವರಿಯದೆ ಅದು ಮುರಿದು ಬೀಳುವಂತಾಯಿತು. ಸ್ವಹಿತ ಸಾಧನೆಗಾಗಿ ಉನ್ನತ ಹುದ್ದೆಯಲ್ಲಿರುವವರೂ ಸಹ ಬಹಿರಂಗವಾಗಿ ಅಸಹ್ಯ ಹುಟ್ಟಿಸುವ ರೀತಿಯಲ್ಲಿ ವರ್ತಿಸಲು ಹೇಗೆ ತಯಾರಾಗುತ್ತಾರೆಂಬುದಕ್ಕೆ ಈ ಪ್ರಕರಣವನ್ನು ಉಲ್ಲೇಖಿಸಬೇಕಾಯಿತು.

## ಟ್ಯೂಬೆಕ್ಟಮಿಯಾದ ಮಹಿಳೆಯ ವಿಚಿತ್ರ ಸಾವು

ಚಿಕ್ಕಮಗಳೂರಿಗೆ ಹೋದ ಎರಡು ವರ್ಷಗಳಲ್ಲಿ ನಾನು ಹೆರಿಗೆ ಆಸ್ಪತ್ರೆ ಆವರಣ ದಲ್ಲಿದ್ದ ಮಹಿಳಾ ಸರ್ಜನ್‌ರಿಗೆ ಮೀಸಲಾದ ಸರ್ಕಾರೀ ಮನೆಯಲ್ಲೇ ವಾಸ ಮಾಡುವ ಅವಕಾಶ ದೊರೆಯಿತು. ಆ ಸಮಯದಲ್ಲಿದ್ದ ಮಹಿಳಾ ಸರ್ಜನ್ ಮತ್ತು ಅಲ್ಲಿಯ ಎಕ್ಸಿಕ್ಯೂಟಿವ್ ಇಂಜಿನಿಯರ್ ಸತಿಪತಿಗಳಾಗಿದ್ದರಿಂದ, ಅವರು ಇಂಜಿನಿಯರ್‌ರ ನಿವಾಸದಲ್ಲೇ ವಾಸ ಮಾಡುತ್ತಿದ್ದರು. ಹಾಗೆ ಖಾಲಿಯಾದ ನಿವಾಸದಲ್ಲಿ ಸರ್ಕಾರದ ಪರವಾನಿಗಿ ಪಡೆದುಕೊಂಡು ನಾವು ವಾಸಿಸುತ್ತಿದ್ದೆವು. ಅದರಿಂದ ಎರಡೂ ಆಸ್ಪತ್ರೆಗಳ ತುರ್ತು ಸಂದರ್ಭಗಳಿಗೆ ಹಾಜರಾಗಲು ನನಗೆ ಅನುಕೂಲವಾಯಿತು. ಜೊತೆಗೆ ಮಹಿಳಾ ಸರ್ಜನ್‌ರು ರಜೆಯಲ್ಲಿದ್ದ ಸಂದರ್ಭಗಳಲ್ಲಿ ಹೆರಿಗೆ ಆಸ್ಪತ್ರೆಯ ಕೆಲವು ಮಾಮೂಲಿ ಕೆಲಸ ಕಾರ್ಯಗಳಲ್ಲಿ ಭಾಗವಹಿಸುವಂತಾಯಿತು.

ಒಂದು ದಿನ ಬೆಳಿಗ್ಗೆ ಆಸ್ಪತ್ರೆಯಲ್ಲೇ ೬-೭ ದಿನಗಳ ಹಿಂದೆ ಹೆರಿಗೆಯಾದ ೪-೫ ಜನ ಮಹಿಳೆಯರಿಗೆ ಟ್ಯೂಬೆಕ್ಟಮಿ ಆಪರೇಷನ್‌ಗೆ ಸಜ್ಜು ಮಾಡಿದ್ದರು. ಮಹಿಳಾ ವೈದ್ಯೆಯೊಬ್ಬರಿಗೆ ಸಹಾಯಕನಾಗಿದ್ದು ಆಪರೇಷನ್‌ಗಳನ್ನು ಮಾಡಿಸಿದೆ. ಅವರ ಪೈಕಿ ಸುಮಾರು ೨೫ ವರ್ಷ ವಯಸ್ಸಿನ ಮಹಿಳೆಯು ಅಂದು ರಾತ್ರಿ ಆಶ್ಚರ್ಯಕರ ರೀತಿಯಲ್ಲಿ ಸಾವಿಗೀಡಾದಳು. ರಾತ್ರಿ ೯-೦೦ ಗಂಟೆಯೊಳಗೆ ಮಹಿಳಾ ವೈದ್ಯೆ ಹಾಗೂ ನಾನೂ ಸಹ ಅವರನ್ನೆಲ್ಲಾ ನೋಡಿ ಹೋಗಿದ್ದೆವು. ಸುಮಾರು ೧೦-೦೦ ಗಂಟೆ ಸಮಯಕ್ಕೆ ಅವಳಿಗೆ ಒಂದು ರೀತಿಯ 'ಫಿಟ್ಸ್'(Fits) ಬಂದು ಎದೆ ನೋವೆಂದು ಚೀರಾಡಿ ಅಸುನೀಗಿದಳು. ನಾವೆಲ್ಲಾ ಅಲ್ಲಿಗೆ ಧಾವಿಸಿ ನೋಡುವಷ್ಟರಲ್ಲೇ ಅವಳ ಪ್ರಾಣ ಪಕ್ಷಿ ಹಾರಿಹೋಗಿತ್ತು.

ನಡೆದ ಸಮಾಚಾರದ ಬಗೆಗೆ ಅವಳ ಜೊತೆಯಲ್ಲಿದ್ದ ತಾಯಿಯನ್ನು ವಿಚಾರಿಸಿದೆ. ಸುಮಾರು ಅರ್ಧ ಗಂಟೆಯ ಹಿಂದೆ ಆಕೆ ಬಲಗಾಲಿನ ಮೀನ ಖಂಡದಲ್ಲಿ ತುಂಬಾ ಸೆಳೆತವಾಗುತ್ತ ದೆಂದು ದೂರಿದಳಂತೆ. ಸ್ವಲ್ಪ ಊದಿಕೊಂಡಂತಿದ್ದ ಮೀನ ಖಂಡಕ್ಕೆ ಸ್ವಲ್ಪ ಎಣ್ಣೆ ತೀಡಿ ಬಟ್ಟೆಯ ಪಟ್ಟಿಯನ್ನು ಬಿಗಿದಳಂತೆ. ಬಲಗಾಲಿನ ಸೀರೆಯನ್ನು ಸ್ವಲ್ಪ ಮೇಲೆತ್ತಿ ನೋಡಿದಾಗ ನಿಜ ಸ್ಥಿತಿ ತೆರೆದಿಟ್ಟಂತಿತ್ತು. ಕೆಲವು ತೆರನ ಆಪರೇಷನ್ ಹಾಗೂ ಹೆರಿಗೆಯಾಗಿ ಸ್ವಲ್ಪ ಸಮಯ ಹಾಸಿಗೆ ಹಿಡಿದು ಮಲಗಿದವರ ಕಾಲುಗಳ ಸಿರೆಗಳಲ್ಲಿ (Veins) ರಕ್ತ ಹೆಪ್ಪುಗಟ್ಟಬಹುದು. ಅಂತಹ ಹೆಪ್ಪು ಅಲ್ಲಿಂದ ಸ್ಥಾನ ಪಲ್ಲಟವಾಗಿ ಹೃದಯದತ್ತ ಸಾಗಿ ಶ್ವಾಸಕೋಶದ ರಕ್ತನಾಳಗಳಲ್ಲಿ ತಡೆಯುಂಟು ಮಾಡಿದಾಗ ಈ ತರಹೆಯ ಹಠಾತ್ ಸಾವು ಸಂಭವಿಸುವುದುಂಟು. ಕೊಳ್ಳೇಗಾಲದ ಉದರ ಕೋಶದ ಆಪರೇಷನ್ ಆದವನೊಬ್ಬ ಈ ರೀತಿಯಲ್ಲೇ ಸಾಯುವಂತಾಗಿದ್ದು ಹಿಂದೆ ಉಲ್ಲೇಖ ವಾಗಿದೆ. ಹೆರಿಗೆಯ ನಂತರದ ಕೆಲವೇ ದಿನಗಳಲ್ಲಿ ಟ್ಯೂಬೆಕ್ಟಮಿ ಮಾಡುವ ಮಹಿಳೆಯರನ್ನು ಈ ಬಗೆಗೆ ವಿವರವಾದ ಪರೀಕ್ಷೆಗೊಳಪಡಿಸಬೇಕಾದ ಅವಶ್ಯಕತೆಯನ್ನು ಈ ಪ್ರಕರಣ ಎತ್ತಿ ತೋರಿಸುತ್ತದೆ. ತಮಗೆ ನಿಗದಿ ಪಡಿಸಿದ ಗುರಿ ತಲುಪುವ ಆವೇಶದಲ್ಲಿ ಅಂತಹ ವಿಚಾರಗಳಿಗೆ ಗಮನ ಹರಿಸುವುದು ಅಪರೂಪವಾಗುತ್ತಿದೆ!

ಈ ಪ್ರಕರಣದಲ್ಲಿ ನಾವು ಎದುರಿಸಿದ ಸಂದಿಗ್ಧತೆಯೂ ಉಲ್ಲೇಖನೀಯ. ರೋಗಿ ಅಸು ನೀಗಿದಾಕ್ಷಣ ಆಕೆಯ ಸಂಬಂಧಿಗಳೇ ಅಲ್ಲದೆ ಆ ಸಮಯದಲ್ಲಿ ಆಸ್ಪತ್ರೆಯಲ್ಲಿದ್ದ ಸಾರ್ವಜನಿಕರೂ ಸಹ ನಾವು ವೈದ್ಯರೇ ಅಲ್ಲದೆ ಆಸ್ಪತ್ರೆಯ ಇತರ ಸಿಬ್ಬಂದಿಗಳ ಮೇಲೂ ರೋಷದಿಂದ ಹರಿಹಾಯಲಾರಂಭಿಸಿದರು. ಅಲ್ಲಿದ್ದ ನಮಗೆ ಅವರನ್ನು ಸಾಂತ್ವನಗೊಳಿಸುವುದು ಕಷ್ಟವಾಗಿ ಪರಿಣಮಿಸಿತು. ಕೂಡಲೇ ಡಿ.ಎಂ.ಓ. ಜಾನ್ ಪೀಟರ್‌ರವರಿಗೆ ಫೋನ್ ಮಾಡಿ ಕೂಡಲೇ ಆಸ್ಪತ್ರೆಗೆ ಬರುವಂತೆ ಕೇಳಿಕೊಂಡೆವು. ಏನೇನೊ ಸಬೂಬು ಹೇಳಿ ಮೇಲಧಿಕಾರಿಯೆನಿಸಿಕೊಂಡ ಅವರು ಬರಲೇ ಇಲ್ಲ! ಅಲ್ಲಿದ್ದ ಸಾರ್ವಜನಿಕರಲ್ಲಿ ಪರಿಚಿತರಾದ ಕೆಲವರಿಗೆ ಆಕೆಯ ಸಾವು ಜರುಗಿದ ಬಗೆಗೆ ಸಮಂಜಸವಾದ ಕಾರಣಗಳನ್ನು ವಿವರಿಸಿ (ಕಾಲು ಊದಿಕೊಂಡಿರುವುದನ್ನೂ ಸಹ ಪ್ರದರ್ಶಿಸಿ) ರೋಗಿಯ ಕಡೆಯವರ ಕೋಪ ತಾಪಗಳನ್ನು ತಹ ಬಂದಿಗೆ ತರುವಲ್ಲಿ ಯಶಸ್ವಿಯಾದೆವು. ಅಲ್ಲದೆ ಅಂದು ಜರುಗಿದ ವಿಷಯಗಳ ಬಗೆಗೆ ಸಾರ್ವಜನಿಕರೊಬ್ಬರಿಂದ ಮಹಜರು ಬರೆಸಿ ಆಕೆಯ ತಾಯಿಯೂ ಸೇರಿದಂತೆ ಕೆಲವರ ರುಜು ಹಾಕಿಸಿಕೊಂಡೆವು. ಇನ್ನು ಬೆಳಕು ಹರಿಯುವವರೆಗೆ ಶವ ಆಸ್ಪತ್ರೆಯಲ್ಲೇ ಉಳಿದು ಕೊಂಡರೆ ಮತ್ತಷ್ಟು ಗಲಾಟೆಗಳಾಗಬಹುದೆಂದು ರಾತ್ರಿಯೇ ಶವವನ್ನು ಅವರ ಊರಿಗೆ ಕಳುಹಿಸುವುದು ಸೂಕ್ತವೆಂದು ನಿರ್ಧರಿಸಿದೆವು. ಕಾರಿನ ಬಾಡಿಗೆಯನ್ನಾದರೂ ಆಸ್ಪತ್ರೆಯ ವತಿಯಿಂದ ಕೊಡಿಸುವ ಬಗೆಗೆ ಡಿ.ಎಂ.ಓ. ಅವರನ್ನು ಮತ್ತೆ ಸಂಪರ್ಕಿಸಿದೆವು, ಅದನ್ನೂ ಅವರು ನಿರಾಕರಿಸಿದರು. ಅಂತಿಮವಾಗಿ ಮನೆಯಿಂದ ನಾನೇ ಒಂದು ನೂರು ರೂಪಾಯಿ ತರಿಸಿ ಅವರನ್ನೆಲ್ಲಾ ಸಾಗಹಾಕಿದೆ.

ಕುಟುಂಬ ಕಲ್ಯಾಣ ಯೋಜನೆ ಅನುಷ್ಠಾನದ ಸಮಯದಲ್ಲಿ ಆಕಸ್ಮಿಕವಾಗಿ ರೋಗಿ ಅಸುನೀಗಿದರೆ, ಆ ಸಲುವಾಗಿ ಪರಿಹಾರ ನೀಡುವ ಸೌಲಭ್ಯವಿದೆ. ಅದರ ಬಗೆಗೆ ಕಡತಗಳು ತಯಾರಾಗಿ ಇಲಾಖೆಗೆ ವರದಿ ಮಾಡಿದೆವಾದರೂ ಕಚೇರಿ ಅಧಿಕಾರ ಶಾಹಿಯ ಕೆಂಪು ಪಟ್ಟಿಯ ಹಿಡಿತದಲ್ಲಿ ಬಹಳ ಸಮಯ ಭದ್ರವಾಗಿ ಕುಳಿತು ಬಿಟ್ಟಿತು. ಆಕೆಯ ಗಂಡ ಅಂದು ಟ್ಯೂಬೆಕ್ಟಮಿ ಜರುಗಿಸಿದ ಮಹಿಳಾ ವೈದ್ಯೆಯ ಮನೆಗೆ ಆಗಾಗ್ಗೆ ಹೋಗಿ ಕಿರುಕುಳ ಕೊಡಲಾರಂಭಿಸಿದ್ದನಂತೆ. ಅಷ್ಟರೊಳಗೆ ನಾನು ಅಲ್ಲಿಂದ ಮುಂದಿನ ಊರಿಗೆ ವರ್ಗವಾಗಿದ್ದನ್ನು ತಿಳಿದು ಅಲ್ಲಿಗೂ ಬಂದು ನನ್ನನ್ನು ಪೀಡಿಸಲಾರಂಭಿಸಿದ. ಅದರಿಂದಾಗಿ ಚಿಕ್ಕಮಗಳೂರು ಡಿ.ಎಚ್.ಓ. ಅವರಿಗೆ ಸ್ವಲ್ಪ ಕಟುವಾಗಿಯೇ ಪತ್ರ ಬರೆಯ ಬೇಕಾಯಿತು. ಸರ್ಕಾರದ ಪರ ಕಾರ್ಯ ಜರುಗಿಸುವ ವೈದ್ಯ ಸಮೂಹ ಇಂತಹ ಪೇಚಿನ ಸಂಗತಿಗಳಿಗೆ ಸಿಲುಕಿದಾಗ ತಕ್ಷಣದ ಮೇಲಧಿಕಾರಿಗಳಾಗಲೀ, ಇಲಾಖೆಯವರಾಗಲೀ ಅದೆಷ್ಟು ಬೇಜವಾಬ್ದಾರಿಯಿಂದ ವರ್ತಿಸುತ್ತಾರೆಂಬುದಕ್ಕೆ ಇದೊಂದು ಮಾದರಿಯ ನಿದರ್ಶನ.

## ವ್ಯಾಸ್‌ನಾಳದ ಮರುಜೋಡಣೆ

ವ್ಯಾಸೆಕ್ಟಮಿಯಂಥ ಸರಳ ವಿಧಾನವನ್ನು ಜನಪ್ರಿಯ ಗೊಳಿಸುವಲ್ಲಿ ಸರ್ಕಾರ ಒಂದು ಸೌಲಭ್ಯವನ್ನು ಘೋಷಿಸಿತ್ತು. ಅಂತಹವರು ಮಕ್ಕಳೇನಾದರೂ ತೀರಿ ಹೋಗಿ, ಮತ್ತೆ ಮಕ್ಕಳನ್ನು ಪಡೆಯುವ ಅಭಿಲಾಷೆ ವ್ಯಕ್ತಪಡಿಸಿದರೆ ವ್ಯಾಸ್‌ನಾಳಗಳ ಮರುಜೋಡಣೆಯನ್ನು ಮುಫತ್ತಾಗಿ ಮಾಡಿಸುವ ಯೋಜನೆ ಅದು. ಮೆಡಿಕಲ್ ಕಾಲೇಜು ಆಸ್ಪತ್ರೆಗಳಲ್ಲಿ ಮಾತ್ರ ಅಂತಹ ಸೌಲಭ್ಯ ವಿದ್ದು ಅಲ್ಲಿಯ ಖರ್ಚನ್ನೆಲ್ಲಾ ಸರ್ಕಾರ ಭರಿಸುತ್ತದೆಂದು ಹೇಳಲಾಗುತ್ತಿತ್ತು. ಚಿಕ್ಕಮಗಳೂರಿನಲ್ಲಿ ಅಂತಹ ತೀರಾ ಬಡ ವ್ಯಕ್ತಿಯೊಬ್ಬ ಮರು ಜೋಡಣೆ ಮಾಡಿಸುವ ಸಲುವಾಗಿ ನನ್ನನ್ನು

ಸಂಪರ್ಕಿಸಿದ್ದ. ಅವನನ್ನು ಡಿ.ಎಚ್.ಓ. ಅವರ ಕಚೇರಿಗೆ ಕಳುಹಿಸಿದೆ. ಆ ಬಗೆಗೆ ತಮಗೇನೂ ಗೊತ್ತಿಲ್ಲದವರಂತೆ ನಡೆದುಕೊಂಡರು. ಕೆಲವು ಔಷಧ ಸಾಮಗ್ರಿಗಳನ್ನು ಒದಗಿಸಿದರೆ ನಾನೇ ಮಾಡುವುದಾಗಿಯೂ ಕೇಳಿಕೊಂಡೆ; ಅದಕ್ಕೂ ನಕಾರ ಮಾಡಿದರು. ಅದು ಸಾಧ್ಯವಾಗದೆಂದು ವಾಪಸು ಕಳಿಸಿದರೂ ಆತ ಮತ್ತೆ ಕೆಲವು ತಿಂಗಳ ನಂತರ ಬಂದು ಮರುಜೋಡಣೆ ಮಾಡ ಬೇಕೆಂದು ದುಂಬಾಲು ಬಿದ್ದ. ಕೆಲವು ಔಷಧ ಮುಂತಾದವನ್ನು ನಾನೇ ಏರ್ಪಡಿಸಿಕೊಂಡು ಮರು ಜೋಡಣೆಯನ್ನು ಜರುಗಿಸಿದೆ. ಒಂದೆರಡು ವರ್ಷಗಳಿಂದ ದೇಶದ ಕೆಲವು ಕಡೆ ಅಂತಹ ಮರು ಜೋಡಣೆ ಜರುಗಿಸಿದ್ದ ವಿವರಗಳನ್ನೂ ಸಂಗ್ರಹಿಸಿಕೊಂಡಿದ್ದೆ. ಸ್ಪೈನಲ್ ಅರಿವಳಿಕೆ ನೀಡಿ ತುಂಬಾ ಜಾಗರೂಕತೆಯಿಂದ ಎರಡೂ ಕಡೆ ಮರು ಜೋಡಣೆ ಮಾಡಿದೆ. ಒಂದು ವಾರ ಆಸ್ಪತ್ರೆಯಲ್ಲಿರಿಸಿಕೊಂಡು ಕಳುಹಿಸಿಕೊಟ್ಟೆ. ಅಲ್ಲದೆ ಮೂರು ತಿಂಗಳಲ್ಲಿ ಅದರ ಪರಿಣಾಮವನ್ನು ತಾಳೆ ನೋಡಲು ಬರಹೇಳಿದ್ದೆ. ಆದರೆ ನಾನಲ್ಲಿದ್ದ ಮುಂದಿನ ಒಂದೆರಡು ವರ್ಷಗಳಲ್ಲಿ ಅವನು ಅತ್ತ ಸುಳಿಯಲೇ ಇಲ್ಲ.

## ಒಂದು ವಿಶಿಷ್ಟ ಪ್ರಯೋಗ

ಜಿಲ್ಲಾ ಹಾಗೂ ಕೆಲವು ತಾಲ್ಲೂಕು ಆಸ್ಪತ್ರೆಗಳಲ್ಲಿ ಎಂ.ಎಸ್.ನಂಥ ಶಸ್ತ್ರಚಿಕಿತ್ಸಾ ಪರಿಣಿತಿಯ ತಜ್ಞರ ನೇಮಕವಾದಾಗಿನಿಂದ ಆಪರೇಷನ್‌ಗಳು ವೈವಿಧ್ಯತೆಯಲ್ಲೇ ಅಲ್ಲದೆ ಸಂಖ್ಯೆಯಲ್ಲೂ ಹೆಚ್ಚಾಗ ತೊಡಗಿದವು. ಅದಕ್ಕೆ ಪೂರಕವಾಗಿ ತರಬೇತಿ ಪಡೆದ ಅರಿವಳಿಕಾ ತಜ್ಞರನ್ನು ಒದಗಿಸುವತ್ತ, ಇಲ್ಲವೆ ಹೆಚ್ಚಾಗಿ ಬೇಕಾಗುವ ಗ್ಲೂಕೋಸ್, ಜೀವಿರೋಧಕ ಮದ್ದು ಮತ್ತಿತರ ಸಾಧನ ಸಲಕರಣೆಗಳ ಸರಬರಾಜನ್ನು ಉತ್ತಮ ಪಡಿಸುವತ್ತ ಯಾರೂ ಗಮನ ಹರಿಸುತ್ತಿರಲಿಲ್ಲ. ಆ ದಿಸೆಯಲ್ಲಿ ಉದರಕೋಶದ ಕೆಲವು ಆಪರೇಷನ್‌ಗೊಳಗಾದವರಿಗೆ ಬೇಕಾಗುವ ಗ್ಲೂಕೋಸ್ ಬಾಟಲುಗಳ ಪ್ರಮಾಣವನ್ನು ಕಡಿಮೆ ಮಾಡುವಲ್ಲಿ ಜರುಗಿಸಿದ ಪ್ರಯೋಗವೊಂದು ಉಲ್ಲೇಖನೀಯ.

ಜಠರದ ವಲಯದಲ್ಲಿ ಉದ್ಭವಿಸುವ "ಪೆಪ್ಟಿಕ್ ಅಲ್ಸರ್" (ಜೀರ್ಣಕ ಹುಣ್ಣು) ಆಪರೇಷನ್‌ಗಳು ಆ ಕಾಲದಲ್ಲಿ ಪ್ರತಿದಿನ ಒಂದೆರಡಾದರೂ ಜರುಗುತ್ತಿದ್ದವು. ಅಂತಹ ಆಪರೇಷನ್‌ಗೆ ಒಳಗಾದವರಿಗೆ ಆಪರೇಷನ್ ಜರುಗುವ ಸಮಯದಲ್ಲಿ ಲವಣಾಂಶ ಭರಿತ ೩-೪ ಗ್ಲೂಕೋಸ್ ಬಾಟಲುಗಳನ್ನು (Glucose-saline) ರಕ್ತನಾಳದ ಮೂಲಕ ನೀಡುತ್ತಲೇ ಇರಬೇಕಾದ ಅನಿವಾರ್ಯತೆ ಇರುತ್ತದೆ; ನಂತರದ ೩-೪ ದಿನಗಳಲ್ಲೂ ರೋಗಿಯ ಪರಿಸ್ಥಿತಿಗೆ ಅನುಗುಣವಾಗಿ ಅವುಗಳನ್ನು ಮತ್ತೂ ನೀಡುತ್ತಿರಬೇಕಾಗುತ್ತದೆ. ಅಂದರೆ ಅಂತಹ ಆಪರೇಷನ್ ಆದವರಿಗೆ ಒಂದೊಂದು ಸಾರಿ ೧೫-೨೦ ಬಾಟಲುಗಳ ಅವಶ್ಯಕತೆ ಉಂಟಾಗಬಹುದು. ಬಹುಪಾಲು ಸರ್ಕಾರೀ ಆಸ್ಪತ್ರೆಗಳಲ್ಲಿ ಅವುಗಳ ಯಶಸ್ವೀ ನಿರ್ವಹಣೆಗೆ ಬೇಕಾಗುವ ಗ್ಲೂಕೋಸ್, ಜೀವಿರೋಧಕ ಮದ್ದುಗಳು ಕೊನೆಗೆ ಹೊಲಿಗೆ ಹಾಕುವ 'ಕ್ಯಾಟ್‌ಗಟ್' (Catgut)ಗಳ ಅಭಾವ ಸದಾ ಇರುತ್ತದೆ. ಆಪರೇಷನ್‌ಗಳನ್ನು ಕೈಗೊಳ್ಳುವ ತಜ್ಞ ವೈದ್ಯರು ಮತ್ತಿತರ ಸಾಧನ ಸಲಕರಣೆಗಳಿರುವುದಾದರೂ ಸಾಮಾನ್ಯ ಜನರಿಗೆ ಅವು ನಿಲುಕಲಾರದ ಪರಿಸ್ಥಿತಿ ಇರುತ್ತದೆ. ಕೆಲ ಸಾರಿ ರೋಗಿಗಳಿಂದಲೇ ಅವುಗಳನ್ನು ಹೇಗೊ ತರಿಸಿಕೊಂಡು ಆಪರೇಷನ್‌ಗಳನ್ನು ಮಾಡುತ್ತೇವೆ. ಆದರೆ ಸರ್ಕಾರೀ ಆಸ್ಪತ್ರೆಯೆಂಬುದು ಹೆಸರಿಗೆ ಮಾತ್ರ, ಎಲ್ಲಾ ಸಾಮಗ್ರಿಗಳನ್ನು ಹೊರಗಡೆಯಿಂದ ಕೊಂಡು ತರಬೇಕಾಗುತ್ತದೆಂಬ ದೂರು ಉಳಿದು ಕೊಂಡು ಬಿಡುತ್ತದೆ.

ಈ ರೀತಿಯ ಆಪರೇಷನ್‌ಗಳಲ್ಲಿ ಗ್ಲೂಕೋಸ್ ಬಾಟಲುಗಳ ಬಳಕೆಯನ್ನು ಬಹಳಷ್ಟು ಮಿತಿಗೊಳಿಸಬಹುದಾದ ವಿಧಾನದ ಬಗೆಗೆ - ಇಂಡಿಯನ್ ಜರ್ನಲ್ ಆಫ್ ಸರ್ಜರಿಯ - ೧೯೬೯ರ ಸಂಚಿಕೆಯೊಂದರಲ್ಲಿ ಪ್ರಕಟವಾದ ಲೇಖನವೊಂದು ನನ್ನ ಗಮನ ಸೆಳೆಯಿತು*. ಬರೋಡಾ ಮೆಡಿಕಲ್ ಕಾಲೇಜಿನ ಡಾ|| ಭಾಸ್ಕರ್ ವ್ಯಾಸ್ ಮತ್ತವರ ಸಂಗಡಿಗರು ಒಂದು ಯೋಜನೆಯನ್ನು ರೂಪಿಸಿದ್ದರು. ಜಠರದ ಹುಣ್ಣುಗಳಿಗೆ ಸಾಮಾನ್ಯವಾಗಿ ಶಸ್ತ್ರಕ್ರಿಯೆ ಜರುಗಿಸುವಾಗ ಹುಣ್ಣನ್ನೇನು ಕತ್ತರಿಸಿ ಹೊರ ತೆಗೆಯುವುದಿಲ್ಲ. ಹುಣ್ಣು ನೆಲೆಯಾಗಿರುವ ತಾಣದ ಮೂಲಕ ಆಹಾರ ಚಲಿಸುವ ಸಹಜ ಮಾರ್ಗವನ್ನು ಬದಲಾಯಿಸುವ ಕ್ರಮವನ್ನು ಜಾರಿಗೊಳಿಸ ಲಾಗುತ್ತದೆ. ಅಂದರೆ ಜಠರದ ತಳ ಭಾಗದಲ್ಲಿ ಸಣ್ಣ ತೂತು ಮಾಡಿ ಅದನ್ನು ಸಣ್ಣ ಕರುಳಿನ ಮೊದಲ ಭಾಗದಲ್ಲಿ ಮಾಡುವ ತೂತಿನ ಜೊತೆ ಸೇರಿಸಿ ಹೊಲಿದು ಅವೆರಡರ ಜೊತೆ ಸಂಪರ್ಕವೇರ್ಪಡಿಸಲಾಗುತ್ತದೆ (Gastrojejunostomy). ಮುಂದೆ ಆಹಾರವು ಈ ಸಂಪರ್ಕದ ಮೂಲಕ ಕರುಳಿನತ್ತ ಸಾಗುತ್ತದೆ. ಡಾ|| ಭಾಸ್ಕರ್ ವ್ಯಾಸ್ ಆಪರೇಷನ್ ಜರುಗಿಸುವ ಸಮಯದಲ್ಲೇ ಮೊದಲೇ ಬಾಯಿ/ಮೂಗಿನ ಮೂಲಕ ಜಠರದೊಳಗೆ ತೂರಿಸಿದ್ದ ರಬ್ಬರ್ ನಳಿಕೆ(Ryle's tube) ಯನ್ನು ಜಠರ-ಕರುಳಿನ ನಡುವೆ ಉಂಟು ಮಾಡಿದ ರಂಧ್ರದ ಮೂಲಕ ಕರುಳಿನೊಳಗಡೆ ಏಳೆಂಟು ಅಂಗುಲಗಳಷ್ಟು ಕೆಳಗೆ ತೂರುವಂತೆ ಮಾಡುತ್ತಾರೆ. (ಯಥಾರ್ಥವಾಗಿ ಹೇಳಬೇಕೆಂದರೆ ಸಾಮಾನ್ಯವಾಗಿ ಬಳಕೆಯಾಗುತ್ತಿರುವ ರಬ್ಬರ್ ನಳಿಕೆಗಿಂತ ಬಹಳಷ್ಟು ಉದ್ದನೆಯ ನಳಿಕೆಯನ್ನು ತಯಾರು ಮಾಡಿಕೊಂಡಿರಬೇಕಾಗುತ್ತದೆ).

ಆಪರೇಷನ್ ದಿನ ಮಾತ್ರ ಹಿಂದಿನ ರೀತಿಯಲ್ಲಿ ಗ್ಲೂಕೋಸ್ ಬಾಟಲುಗಳನ್ನು ನೀಡುತ್ತಾರೆ. ಮರು ದಿನದಿಂದ ಕರುಳಿನೊಳಗಡೆ ತೂರಿಸಿದ ನಾಳದ ಮೂಲಕ ಪರಿಶುದ್ಧವಾದ ಗ್ಲೂಕೋಸ್, ಸೂಕ್ತ ಲವಣಾಂಶಗಳು ಮತ್ತಿತರ ಪೋಷಕಾಂಶಗಳಿಂದ ತಯಾರಿಸಿದ ದ್ರಾವಣವನ್ನು ನೀಡುವ ಕಾರ್ಯ ಪ್ರಾರಂಭವಾಗುತ್ತದೆ. ಜಠರ ದೊಳಗಡೆ ತೂರಿಸಲ್ಪಡುವ ಇನ್ನೊಂದು ರಬ್ಬರ್ ನಳಿಕೆಯ ಮೂಲಕ ಜಠರದಲ್ಲಿ ಶೇಖರವಾಗುವ ದ್ರವಗಳನ್ನು ಹೊರಗೆಳೆದು ತೆಗೆಯಬಹುದು. ದಿನದ ೨೪ ಗಂಟೆಗಳಲ್ಲಿ ರೋಗಿಗೆ ಅವಶ್ಯಕವೆಂದು ಲೆಕ್ಕಾಚಾರ ಹಾಕಿ ಅಂದಾಜು ಮಾಡಿದಷ್ಟು ದ್ರವ ಪದಾರ್ಥಗಳ ಮೊತ್ತವನ್ನು ತಯಾರಿಸಿಟ್ಟುಕೊಂಡು ಕರುಳಿನಲ್ಲಿ ನೆಲೆಯಾಗಿರುವ ನಳಿಕೆಯ ಮೂಲಕ ನಿಧಾನಗತಿಯಲ್ಲಿ (ಸಾಮಾನ್ಯವಾಗಿ ನಿಮಿಷಕ್ಕೆ ೪೦ ತೊಟ್ಟುಗಳಂತೆ) ತೊಟ್ಟಿಕ್ಕಿಸುವ ಏರ್ಪಾಡು ಮಾಡಲಾಗುತ್ತದೆ. ಬರೇ ಲವಣಾಂಶಭರಿತ ಗ್ಲೂಕೋಸ್ ದ್ರಾವಣಗಳ ನೀಡಿಕೆಯಿಂದ ಲಭ್ಯವಾಗಬಹುದಾದ ಪೋಷಕಾಂಶ ಗಳಿಗಿಂತ ಉತ್ತಮವಾದ ಹಾಲು, ಪ್ರೋಟೀನ್‌ಯುಕ್ತ



ಹೊಟ್ಟೆ ಆಪರೇಷನ್
ನಳಿಕೆ ಮೂಲಕ ದ್ರವಾಹಾರ ನೀಡಿಕೆ

*VYAS B, et al : INDIAN JOURNAL OF SURGERY(1969) 31:151-152
A scheme for Intrajejunal fluid replacement after Gastric Operations.

ಪುಡಿಗಳು, ಜೀವಸತ್ವ ಮತ್ತಿತರ ಆಹಾರಾಂಶಗಳನ್ನು ಈ ವಿಧಾನದಿಂದ ನೀಡಲು ಸಾಧ್ಯ. ಈ ವಿಧಾನದ ಅನುಸರಣೆಯಿಂದ ರೋಗಿಗೆ ೧೨ ರಿಂದ ೧೫ ಬಾಟಲುಗಳ ಉಳಿತಾಯ (ಸುಮಾರು ೧೦೦ ರೂಪಾಯಿಗಳು) ಉಳಿತಾಯವಾಗುತ್ತಿತ್ತು. ಮೂಗಿನ ಸೊಳ್ಳೆಗಳಲ್ಲಿ ಎರಡು ನಳಿಕೆಗಳನ್ನು ಇರಿಸಿಕೊಳ್ಳುವ ಅನಾನುಕೂಲ ಕೆಲವರಿಗೆ ಆಗಬಹುದು. ದ್ರಾವಣ ತಯಾರಿಕೆ ಮತ್ತು ಅದನ್ನು ವಿಧಿಬದ್ಧವಾಗಿ ನೀಡುವುದನ್ನು ವೈದ್ಯರು ಮತ್ತು ಶುಶ್ರೂಷಕ ವರ್ಗದವರೂ ಸಹ ಬಹು ಜಾಗರೂಕತೆಯಿಂದ ನಿರ್ವಹಿಸಬೇಕಾಗುತ್ತದೆ. ಚಿಕ್ಕಮಗಳೂರಿನಲ್ಲಿ ೧೯೭೩ರ ಸಮಯದಲ್ಲಿ ಕೆಲವು ಆಯ್ದ ರೋಗಿಗಳಲ್ಲಿ ಈ ವಿಧಾನವನ್ನು ಜಾರಿಗೆ ತಂದಿದ್ದೆ. ಮುಂದೆ ಶಿವಮೊಗ್ಗಾದಲ್ಲಿ ೧೯೭೮ರವರೆಗೂ ಮುಂದುವರಿಸಲು ಸಾಧ್ಯವಾಗಿತ್ತು. ಅನಂತರ ಕೆಲವು ಅನಿವಾರ್ಯ ಕಾರಣಗಳಿಂದ ನಿಲ್ಲಿಸಬೇಕಾಯಿತು. ಈ ಅವಧಿಯಲ್ಲಿ ಸುಮಾರು ೨೫ ಪ್ರಕರಣ ಗಳಲ್ಲಿ ಅದನ್ನು ಜಾರಿಗೆ ತಂದಿದ್ದು ಸುಮಾರು ೨೧೫ ಗ್ಲೂಕೋಸ್ ಬಾಟಲುಗಳ ಬಳಕೆಯನ್ನು ಕಡಿಮೆ ಮಾಡಲು ಸಾಧ್ಯವಾಗಿತ್ತು.

ಇತ್ತೀಚೆಗೆ ವಾಂತಿ-ಭೇದಿ, ಕಾಲರಾಗಳಂಥ ವ್ಯಾಧಿಗಳ ರೋಗ ಪೀಡಿತರ ದೇಹದಿಂದ ಹೊರ ಹೋಗುವ ಅಧಿಕ ಪ್ರಮಾಣದ ನೀರು ಮತ್ತು ಲವಣಾಂಶಗಳನ್ನು ಭರ್ತಿ ಮಾಡಲು ಬಾಯಿ ಮೂಲಕ ನೀಡುವ -"ಮರುನೀರ್ಗೂಡಿಕಾ ದ್ರಾವಣ" - (O.R.T.)ದ ವ್ಯಾಪಕ ಬಳಕೆಯಲ್ಲಿರುವುದನ್ನು ನೋಡಬಹುದು. ಅದಕ್ಕೂ ಮೊದಲು ರಕ್ತನಾಳಗಳ ಮೂಲಕ ಲವಣಾಂಶಭರಿತ ಗ್ಲೂಕೋಸ್ ಬಾಟಲುಗಳನ್ನೇ ನೀಡುವ ಪರಿಸ್ಥಿತಿ ಇದ್ದು ಅವುಗಳು ದುಬಾರಿ ಯಾಗಿರುತ್ತಿದ್ದವಲ್ಲದೆ, ಸಾಕಷ್ಟು ಪೂರೈಕೆಯಾಗುವ ಸ್ಥಿತಿಯೂ ಇರಲಿಲ್ಲ. ಅದರಿಂದ ಕಾಲರಾದಂಥ ಪಿಡುಗು ತಲೆ ದೋರಿದಾಗ ಜನ ಸಮೂಹ ನೊಣಗಳಂತೆ ಸಾಯುತ್ತಿದ್ದರು. ಪ್ರಸ್ತುತ ಅನುಸರಿಸಿದ ವಿಧಾನವೂ ಬಹು ಪಾಲು ಅದನ್ನೇ ಹೋಲುತ್ತದೆ. ಎರಡೂ ಸಂದರ್ಭಗಳಲ್ಲಿ ಗ್ಲೂಕೋಸ್ ಬಾಟಲುಗಳನ್ನು ನೀಡುವುದು ಆದರ್ಶನೀಯ ಚಿಕಿತ್ಸೆ ಎನ್ನುವುದನ್ನು ತಳ್ಳಿಹಾಕುವಂತಿಲ್ಲ. ಆದರೆ ನಮ್ಮ ದೇಶವೂ ಸೇರಿದಂತೆ ತೃತೀಯ ಜಗತ್ತಿನ ಬಹುಪಾಲು ಬಡಬಗ್ಗರು ಅಂತಹ ಆದರ್ಶ ಚಿಕಿತ್ಸೆಗಳಿಂದ ವಂಚಿತರಾಗಿರುವುದು ಗುಟ್ಟಾಗೇನಿಲ್ಲ. ಅಂತಹ ಸಂದರ್ಭಗಳಲ್ಲಿ ಸ್ಥಳೀಯವಾಗಿ ಲಭ್ಯವಿರುವ ಪರಿಕರ - ಸಾಧನ ಸಾಮಗ್ರಿಗಳಿಂದಲೇ ಅಂತಹವರಿಗೆ ಸಹಾಯ ಮಾಡಲು ಸಾಧ್ಯವೇ ಎಂಬುದನ್ನು ಪರಿಗಣನೆಗೆ ತೆಗೆದುಕೊಳ್ಳ ಬೇಕಾಗುತ್ತದೆ. ಇದನ್ನೇ ಅಲ್ಲವೇ ವಿಶ್ವ ಆರೋಗ್ಯ ಸಂಸ್ಥೆಯವರು (W.H.O.) "ಮಧ್ಯಮ ತಂತ್ರಜ್ಞಾನ" Intermediate Technology ಎನ್ನುವುದು? ದುರದೃಷ್ಟಕರ ಸಂಗತಿಯೆಂದರೆ ಬರೋಡಾದ ವೈದ್ಯರು ಮಾಡಿ ತೋರಿಸಿದ ವಿಧಾನದ ಬಗೆಗೆ ಗಮನ ಹರಿಸಿದವರು ಬಹಳಷ್ಟಿರಲಿಲ್ಲದಿರುವುದು. ಈ ಪ್ರಯೋಗದ ಸಮಯದಲ್ಲಿ ಉದ್ದನೆಯ ರಬ್ಬರ್ ನಳಿಕೆ ಸುಲಭ ವಾಗಿ ದೊರೆಯುವ ಸ್ಥಿತಿ ಇರಲಿಲ್ಲ; ಆಗತಾನೇ ರಕ್ತನಾಳದ ಮೂಲಕ ನೀಡುವ ಗ್ಲೂಕೋಸ್ ಮುಂತಾದ ದ್ರಾವಣಗಳನ್ನು ನೀಡಲು ಪಾಲಿತೀನ್ ಡ್ರಿಪ್ ಸೆಟ್ಟುಗಳು ಬಳಕೆಗೆ ಬಂದಿದ್ದವು. ಅವು ಒಂದು ಸಾರಿ ಬಳಕೆಯಾದಾಗ ಎಸೆಯದೆ ಮತ್ತೊಮ್ಮೆ ಜೀವಿ 'ಶುದ್ಧೀಕರಿಸಿ' ಕರುಳಿನೊಳಗೆ ತೂರಿಸುವ ಸಲುವಾಗಿ ಬಳಸುತ್ತಿದ್ದೆ. ಕೊಳ್ಳೇಗಾಲದಲ್ಲಿದ್ದಾಗ ಎದೆಗೂಡಿನೊಳಗಡೆ ಸೇರಿದ್ದ ದ್ರವಗಳನ್ನು ಹೊರ ತರಲು, ಜಠರ ರಸವನ್ನು, ಕೆಲಸಾರಿ ಮೂತ್ರವನ್ನು ಹೊರತರಲೂ ಸಹಾ ಬಳಕೆ ಮಾಡುತ್ತಿದ್ದೆ. ಇತರ ಕೆಲವರೂ ಅಂತಹ ಕ್ರಮ ಜರುಗಿಸುತ್ತಿದ್ದಾರೆಂದೂ ಕೇಳಿದ್ದೆ!

## ತಲೆಯೊಳಗೆ ಇಪ್ಪತ್ತೇಳು ಗುಂಡುಗಳು!

ಮೂಡಿಗೆರೆ ತಾಲ್ಲೂಕಿನ ಕುಡಿತದ ಚಟ ಹಿಡಿಸಿ ಕೊಂಡವನೊಬ್ಬ ಮತ್ತೇರಿದಾಗ ಕುತ್ತಿಗೆಗೆ ಬಂದೂಕನ್ನು ಆನಿಸಿಕೊಂಡು ಗುಂಡು ಹಾರಿಸಿದ. ಬಹುಶಃ ನಡುರಾತ್ರಿ ಸಮಯದಲ್ಲಿ ಹೊಲದಲ್ಲೇ ಜರುಗಿದ ಈ ಘಟನೆ ಬೆಳಗಾಗುವವರೆಗೂ ಯಾರ ಗಮನಕ್ಕೂ ಬಂದಿರಲಿಲ್ಲ. ಆದರೂ ಸಾಯದೇ ಬದುಕಿದ್ದ. ಗುಂಡುಗಳು - ಚರೆಗಳು (Pellets) ಗಲ್ಲವನ್ನು ಭೇದಿಸಿ, ಬಾಯಿ ಗಂಟಲು ಮೂಲಕ ತಲೆಬುರುಡೆಯನ್ನು ದಾಟ, ಮಿದುಳಿನಲ್ಲಿ ನೆಲೆಯಾಗಿದ್ದವು. ಉಸಿರುನಾಳವೂ ಗಾಯದಲ್ಲಿ ಸೇರಿದ್ದರಿಂದ ಉಸಿರಾಡುವುದಕ್ಕೆ ಬಹಳ ಕಷ್ಟಪಡುತ್ತಿದ್ದ. ಆ ಊರಿನ ಸಮಾಜಘಾತುಕನಾಗಿದ್ದ ಅವನನ್ನು ಸಾಯುವ ಸಮಯದಲ್ಲಿ ಕನಿಕರದಿಂದ ಕೆಲವರು ಆಸ್ಪತ್ರೆಗೆ ಸಾಗಿಸುವ ಪ್ರಯತ್ನ ಮಾಡಿದರು. ರಾತ್ರಿಯೆಲ್ಲಾ ರಕ್ತಸ್ರಾವವಾಗಿ ಹೆಚ್ಚುಕಡಿಮೆ ಸಾಯುವ ಸ್ಥಿತಿಯಲ್ಲೇ ಇದ್ದ. ಊರವರು ಉದಾರ ಮನಸ್ಸು ಮಾಡಿ ರಕ್ತದ ಬಾಟಲುಗಳೂ ಸೇರಿದಂತೆ ಇತರ ವ್ಯವಸ್ಥೆಗಳನ್ನು ಮಾಡಲು ಮುಂದಾದರು. ತಲೆಬುರುಡೆ ಎಕ್ಸ್‌ರೇ ಫೋಟೋ ತೆಗಿಸಿದಾಗ ೨೭ ಚರೆಗಳು ಮುಮ್ಮಿದುಳಿನ (Forebrain) ಭಾಗದಲ್ಲಿ ಚದುರಿ ನೆಲೆಯಾಗಿದ್ದವು. ಅಂತಹ ಪರಿಸ್ಥಿತಿಯಲ್ಲಿ ಅವನು ಬದುಕುವುದು ಅಸಾಧ್ಯವೆನಿಸಿದರೂ ಉಸಿರಾಟವನ್ನಾದರೂ ಸರಾಗಗೊಳಿಸುವ ಸಲುವಾಗಿ ಪುಟ್ಟದೊಂದು ಆಪರೇಷನ್ ಜರುಗಿಸಲಾಯಿತು. ಕುತ್ತಿಗೆಯ ಮುಂಭಾಗದಲ್ಲಿ ಪ್ರಮುಖ ಉಸಿರುನಾಳ ಸುಲಭವಾಗಿ ನಿಲುಕುತ್ತದೆ. ಅದರೊಳಗೆ ಒಂದು ತೂತುಮಾಡಿ ಲೋಹದ ನಳಿಕೆಯನ್ನು ಅಳವಡಿಸಿದೆ (Tracheostomy). ಅದರಿಂದಾಗಿ ಅವನು ಸರಾಗವಾಗಿ ಉಸಿರಾಡಲು ಸಾಧ್ಯವಾಯಿತು. ಮುಂದಿನ ೨-೩ ದಿನಗಳಲ್ಲಿ ಪರಿಸ್ಥಿತಿ ಸುಧಾರಿಸಿತು. ಮುಮ್ಮಿದುಳಿನಲ್ಲಿ ನೆಲೆಯಾಗಿದ್ದ ಚರೆಗಳಿಂದ ಅವನ ಜೀವಕ್ಕೆ ಸದ್ಯಕ್ಕಂತೂ ಅಪಾಯ ಉಂಟಾಗುವಂತಿರಲಿಲ್ಲ; ಅಲ್ಲದೆ ನೆಲೆಯಾಗಿದ್ದ ಚರೆಗಳನ್ನು ಹೊರತೆಗೆಯುವ ತಜ್ಞತೆಯೂ ನನಗಿರಲಿಲ್ಲ. ಮುಂದಿನ ಕೆಲವು ದಿನಗಳಲ್ಲಿ ಬೆಂಗಳೂರಿನ ನಿಮ್ಹಾನ್ಸ್ (NIMHANS) ಆಸ್ಪತ್ರೆಗೆ ಹೋಗಲು ಸೂಚಿಸಿ, ಬಿಡುಗಡೆ ಮಾಡಿದೆವು. ಅಲ್ಲಿಗೆ ಹೋಗಲು ಸಾಧ್ಯವಾಗದ ಅವನು ಮುಂದಿನ ಒಂದೂವರೆ ವರ್ಷದಲ್ಲಿ ತೀರಿಕೊಂಡನೆಂಬ ಸುದ್ದಿ ಅನಂತರ ತಿಳಿಯಿತು.



ತಲೆಬುರುಡೆಯೊಳಗೆ
ಬಂದೂಕಿನ ಗುಂಡುಗಳು

## ಅಪರೂಪದ ಗಳಗಂಡ

ಸೆಪ್ಟಂಬರ್ ತಿಂಗಳಲ್ಲಿ (೧೯೭೧) ಕುತ್ತಿಗೆಯ ಮುಂಭಾಗದಲ್ಲಿ ಅಡ್ಡಾದಿಡ್ಡಿಯಾಗಿ ಬೆಳೆದಿರುವ ಗೆಡ್ಡೆಯ ಚಿಕಿತ್ಸೆಗಾಗಿ ಯುವಕನೊಬ್ಬ ನನ್ನ ಬಳಿಗೆ ಬಂದ. ಮೇಲ್ನೋಟಕ್ಕೆ ಥೈರಾಯಿಡ್ ಗ್ರಂಥಿಯಲ್ಲಿ ಸಾಮಾನ್ಯವಾಗಿ ಬೆಳೆಯುವ "ಗಳಗಂಡ" (Goitre ಗಾಯ್ಟರ್) ದಂತೆ ಕಂಡು ಬಂದಿತು. ಆದರೆ ಪರೀಕ್ಷೆಯ ನಂತರ ಅದೊಂದು ತೀರಾ ವಿಭಿನ್ನ, ಬಹುಶಃ ಆ ತನಕ ಯಾರೂ ನೋಡಿರದ ಬೆಳವಣಿಗೆ ಎಂಬ ಅನುಮಾನ ಉಂಟಾಯಿತು. ಬಹುಪಾಲು ಅಂತಹ ಗಾಯ್ಟರ್ ಗೆಡ್ಡೆಗಳು ಸ್ವಲ್ಪ ಮೃದುವಾಗಿಯೋ, ಗಂಟು ಗಂಟಾಗಿಯೋ ಅಥವಾ ಒಳಗೆ ದ್ರವ

ತುಂಬಿರುವ ಸಂವೇದನಾನುಭವ ಉಂಟು ಮಾಡುತ್ತವೆ. ಅವನ ಕುತ್ತಿಗೆಯಲ್ಲಿ ಅಡ್ಡಾದಿಡ್ಡಿಯಾಗಿ ಬೆಳೆದಿದ್ದ ಆ ಗೆಡ್ಡೆಯನ್ನು ಸ್ಪರ್ಷಿಸಿದಾಗ ಗಡಸಾದ ಮರದ ಹಲಗೆಯನ್ನು ಮುಟ್ಟಿದಂತಾಗುತ್ತಿತ್ತು. ಹಾಗೆ ನೋಡಿದರೆ ಇತ್ತೀಚಿನ ದಿನಗಳಲ್ಲಿ ನುಂಗುವಾಗ ಸ್ವಲ್ಪ ಹಿಡಿದಂತಾಗುವುದು ಮತ್ತು ಅದರಿಂದಾದ ವಿಕೃತ ರೂಪವನ್ನು ಹೊರತುಪಡಿಸಿದರೆ ಮತ್ತಾವ ದೈಹಿಕ ತೊಂದರೆಗಳು ಅವನಿಗಾಗುತ್ತಿರಲಿಲ್ಲ. ಮೆಡಿಕಲ್ ವಿದ್ಯಾಭ್ಯಾಸದ ಸಮಯದಲ್ಲಿ "ರಿಡೆಲ್ಸ್ ಥೈರಾಯಿಡೈಟಿಸ್" (Riedel's Thyroidities) ಎಂಬ ತೀರಾ ಅಪರೂಪದ ಥೈರಾಯಿಡ್ ವ್ಯಾಧಿಯ ಬಗೆಗೆ ಪುಸ್ತಕಗಳಲ್ಲಿ ಓದಿದ್ದನ್ನು ಹೊರತುಪಡಿಸಿದರೆ ಅಂತಹ ರೋಗಿಯೊಬ್ಬನನ್ನು ನೋಡುವ ಅವಕಾಶ ದೊರೆತಿರಲಿಲ್ಲ. ಆ ಬಗೆಗೆ ಲಭ್ಯವಿದ್ದ ವೈದ್ಯಕೀಯ ಸಾಹಿತ್ಯವನ್ನು ತಡಕಾಡಿದಾಗ ಭಾರತದಲ್ಲಿ ಕೇವಲ ಎರಡು ಅಂತಹ ವ್ಯಾಧಿಯವರನ್ನು ನೋಡಿದ ವರದಿ ಮಾಡಿದ್ದರು. ನಮ್ಮದು ಮೂರನೇ ಪ್ರಕರಣ. ಪ್ರಪಂಚದೆಲ್ಲೆಡೆ ಅಂತಹ ಪ್ರಕರಣಗಳ ವರದಿಗಳಿರದೆ ಹೆಸರಾಂತ ಅಮೆರಿಕಾದ ಮೇಯೋಕ್ಲಿನಿಕ್(Mayo Clinic)ನ ೩೬ ವರ್ಷಗಳ ಅವಧಿಯಲ್ಲಿ ೨೦,೦೦೦ ಥೈರಾಯಿಡ್ ಗಡ್ಡೆಗಳಿಗೆ ಆಪರೇಷನ್ ಜರುಗಿಸಿದ ಸಂದರ್ಭದಲ್ಲಿ ಕೇವಲ ೧೦ ರಿಡೆಲ್ಸ್ ಥೈರಾಯಿಡೈಟಿಸ್ ಪ್ರಕರಣಗಳು ಕಂಡು ಬಂದ ವರದಿಗಳಿದ್ದವು!

ರೋಗಿ ಇನ್ನೂ ಎಳೆಯ ವಯಸ್ಸಿನವನಾಗಿದ್ದು, ಅದರಿಂದ ಹೆಚ್ಚಿನ ತೊಂದರೆಗಳಿನ್ನೂ ಉಂಟಾಗಿರಲಿಲ್ಲ. ಅಂತಹ ವ್ಯಾಪಕವಾಗಿ ಹರಡಿಕೊಂಡಿರುವ ಗೆಡ್ಡೆಯನ್ನು ತೆಗೆಯುವ ಸಂದರ್ಭಗಳಲ್ಲಿ ಕೆಲವು ಗುರುತರ ಅಡ್ಡ ಪರಿಣಾಮಗಳಾಗುವ ಸಾಧ್ಯತೆಗಳನ್ನು ತಳ್ಳಿ ಹಾಕುವಂತೆಯೂ ಇರಲಿಲ್ಲ. ರೋಗ ನಿದಾನವನ್ನು(Diagnosis) ಖಚಿತ ಪಡಿಸುವ ಸಲುವಾಗಿ ಅದರ ಒಂದು ತುಣುಕನ್ನು ಹೊರತೆಗೆದು ಜೀವುಂಡಿಗೆ (Biopsy)ಗಾಗಿ ಮೈಸೂರು ಮೆಡಿಕಲ್ ಕಾಲೇಜಿನ ರೋಗಶಾಸ್ತ್ರ ಪರಿಣಿತರಿಗೆ (Pathologist) ಕಳುಹಿಸಿ ಕೊಡಲಾಯಿತು. ನಾವು ಮೊದಲಿಗೆ ಸಂಶಯಪಟ್ಟಿದ್ದ ರಿಡೆಲ್ಸ್ ಥೈರಾಯಿಡೈಟಿಸ್ ವ್ಯಾಧಿಯ ಲಕ್ಷಣಗಳೇ ಸೂಕ್ಷ್ಮದರ್ಶಕದಲ್ಲೂ ಕಂಡು ಬಂದಿರುವುದನ್ನು ಅವರೂ ಖಚಿತ ಪಡಿಸಿದರು. ಅದರ ವಿಶಿಷ್ಟ ನೋಟದ ಬಗೆಗೆ ಸೂಕ್ಷ್ಮದರ್ಶಕದ ಫೋಟೋವನ್ನೂ (Micro photograph) ಸಹ ಕೋರಿ ತರಿಸಿಕೊಂಡೆವು. ಗೆಡ್ಡೆ ಬೆಳೆದುಕೊಂಡಿದ್ದರ ಬಗೆಗೆ ಅವನ ಕುತ್ತಿಗೆ ಮತ್ತು ಮುಖದ ಫೋಟೋವನ್ನು ಮೊದಲೇ ತೆಗೆಸಿದ್ದೆವು. ಮುಂದೆ ಆ ಬಗೆಗೆ ವೈಜ್ಞಾನಿಕ ಲೇಖನವನ್ನು ಮಂಗಳೂರಿನಲ್ಲಿ ನನ್ನ ವಿದ್ಯಾಗುರುಗಳಾಗಿದ್ದ ಪ್ರೊ. ಎಂ. ಶ್ರೀನಿವಾಸನ್‌ರ ಮಾರ್ಗದರ್ಶನದಲ್ಲಿ ತಯಾರು ಮಾಡಿದೆ. ಅಂತಹ ಅಪರೂಪದ ಪ್ರಕರಣದ ವರದಿ ಅಸೋಸಿಯೇಷನ್ ಆಫ್ ಸರ್ಜನ್ಸ್ ಆಫ್ ಇಂಡಿಯಾದ (A.S.I.) ಮುಖವಾಣಿ "ಇಂಡಿಯನ್ ಜರ್ನಲ್ ಆಫ್ ಸರ್ಜರಿ"ಯ



ಅಪರೂಪದ ಗಳಗಂಡ (ಗಾಯ್ಟರ್)

(I.J.S.)೧೯೭೫ರ ಜೂನ್-ಜುಲೈ ಸಂಚಿಕೆಯಲ್ಲಿ ಪ್ರಕಟವಾಯಿತು. ಯಾವುದೇ ರೀತಿಯ ಅಕಾಡೆಮಿಕ್ ವಾತಾವರಣವಿರದ ಜಿಲ್ಲಾ ಆಸ್ಪತ್ರೆಯಿಂದ ಅತಿ ವಿರಳವೆನ್ನಬಹುದಾದ ವ್ಯಾಧಿಯ ಬಗೆಗೆ ಲೇಖನವನ್ನು ಪ್ರಕಟಿಸಲು ಸಾಧ್ಯವಾದುದು ಸಂತೃಪ್ತಿಯ ಭಾವನೆಯುಂಟು ಮಾಡಿತು. ಹಾಗೆಯೇ ಚಿಕ್ಕಮಗಳೂರಿನಲ್ಲಿರುವಾಗಲೇ ಬೇರೆ ಬೇರೆ ವಿಷಯಗಳಿಗೆ ಸಂಬಂಧಿಸಿದ ೩-೪ ವಿಶಿಷ್ಟ ವ್ಯಾಧಿಗಳ ಬಗೆಗೆ ಕೆಲವು ಲೇಖನಗಳನ್ನು ವೈದ್ಯಕೀಯ ಪತ್ರಿಕೆಗಳಲ್ಲಿ ಪ್ರಕಟಿಸಿದೆ. ಕನ್ನಡದಲ್ಲಿ ಜನಪ್ರಿಯ ವೈದ್ಯಕೀಯ ಲೇಖನ/ಗ್ರಂಥಗಳ ರಚನೆಗೆ ನಾಂದಿಯೂ ಸಹ ಚಿಕ್ಕಮಗಳೂರ ವಾಸ್ತವ್ಯದ ಸಮಯದಲ್ಲೇ ಆಗಿದ್ದು.

## ವರ್ಗಾವಣೆ

ಚಿಕ್ಕಮಗಳೂರಿಗೆ ಬಂದು ೧೯೭೬ರ ಸಮಯಕ್ಕೆ ಐದು ವರ್ಷಗಳಾಗುವ ಹಂತ ತಲುಪಿತ್ತು. ನನ್ನ ಸರ್ಕಾರೀ ಸೇವಾ ಅವಧಿಯ ಅರ್ಧಕ್ಕಿಂತಲೂ ಹೆಚ್ಚು ವರುಷಗಳೂ ಕಳೆದಿದ್ದವು; ವಯೋಮಾನದ ಅರ್ಧ ಸಮಯವೂ ಮೀರಿದಂತಿತ್ತು. ಜನ್ಮ ತಾಳಿದ ಊರಲ್ಲಿ ಸ್ವಲ್ಪ ಪಿತ್ರಾರ್ಜಿತ ಆಸ್ತಿ ಮನೆ ಇತ್ತಾದರೂ ವರಾಹಿ ಜಲವಿದ್ಯುತ್ ಯೋಜನೆಯಡಿಯಲ್ಲಿ ಮುಳುಗಡೆಯಾಗುವ ಹಾದಿಯಲ್ಲಿತ್ತು. ಸೇವೆಯ ಸಮಯದಲ್ಲಿ ಖಾಸಗಿ ಪ್ರಾಕ್ಟೀಸ್‌ಗಳಲ್ಲಿ ತೊಡಗಿಸಿಕೊಳ್ಳುವ, ಲಂಚ ರುಷುವತ್ತುಗಳಿಗೆ ಕೈಯೊಡ್ಡದೆ ಒಂದು ರೀತಿಯ ಮಧ್ಯಮ ವರ್ಗದ ಜೀವನ ನಮ್ಮದಾಗಿತ್ತು. ಸಂಸಾರವೂ ದೊಡ್ಡದಾಗುತ್ತಿದ್ದು ನಿವೃತ್ತಿಯ ನಂತರ ಎಲ್ಲಾದರೂ ನೆಲೆ ನಿಲ್ಲುವ ನಿರ್ಧಾರ ಮಾಡುವುದಕ್ಕೆ ಸರಿಯಾದ ಕಾಲ ಅದೆನಿಸಿತು. ಊರುಮನೆಯಂತಾದ ಶಿವಮೊಗ್ಗಾದಲ್ಲೇ ಮನೆ ಕಟ್ಟಿಕೊಂಡು ನೆಲಸುವತ್ತ ಕುಟುಂಬದವರ ಒಲವು ಉಂಟಾಗಿತ್ತು. ಆದರಿಂದ ಶಿವಮೊಗ್ಗಾ ಮೆಗ್ಗಾನ್ ಆಸ್ಪತ್ರೆಗೆ ವರ್ಗ ಮಾಡಿಸಿಕೊಳ್ಳುವುದೇ ಸರಿಯೆನಿಸಿತು.

ಆ ತನಕ ಯಾವುದೇ ಊರಿಗೆ ಅಪೇಕ್ಷೆ ಪಟ್ಟು ವರ್ಗಾವಣೆ ಮಾಡಿಸಿಕೊಳ್ಳಲು ಆಸೆ ಪಟ್ಟವ ನಾನಲ್ಲ; ವರ್ಗವಾದ ಕಡೆಗಳಿಗೆಲ್ಲಾ ಹೆಚ್ಚಿನ ತಕರಾರು ಮಾಡದೆ ಹೋಗಿ ಕಾರ್ಯನಿರತ ನಾಗುತ್ತಿದ್ದೆ. ಆದರೆ ಈ ಸಾರಿ ಪ್ರಯತ್ನ ಮಾಡದಿದ್ದರೆ ನಾನು ಬಯಸಿದಂತೆ ಶಿವಮೊಗ್ಗಾಕ್ಕೆ ವರ್ಗಮಾಡಿಸಿ ಕೊಳ್ಳಲು ಸಾಧ್ಯವಾಗಲಾರದೆನಿಸಿತು. ನನ್ನ ಪತ್ನಿಯ ಸೋದರ ಮಾವ ಕೆ.ಟಿ. ಕೃಷ್ಣಪ್ಪನವರು ಆ ಸಮಯದಲ್ಲಿ ತೋಟಗಾರಿಕಾ ಇಲಾಖೆಯ ನಿರ್ದೇಶಕರಾಗಿದ್ದರು. ಆಗಿನ ಆರೋಗ್ಯ ಸಚಿವ ಸಿದ್ಧವೀರಪ್ಪನವರಲ್ಲಿ ಅವರಿಗೆ ಒಳ್ಳೆಯ ಸಂಪರ್ಕವಿತ್ತೆಂಬುದನ್ನು ಕೇಳಿದ್ದೆ. ವಾರ್ಷಿಕ ವರ್ಗಾವಣೆಗಳ ತಯಾರಿ ನಡೆಯುವ ಕೆಲವು ತಿಂಗಳುಗಳ ಹಿಂದೆಯೇ ಕೃಷ್ಣಪ್ಪನವರು ಒಂದು ದಿನ ನನ್ನನ್ನು ಸಚಿವ ಸಿದ್ಧವೀರಪ್ಪನವರ ಮನೆಗೆ ಕರೆದುಕೊಂಡು ಹೋದರು. ನನ್ನ ಬಗೆಗಿನ ಪ್ರವರಗಳನ್ನೆಲ್ಲಾ ಹೇಳಿದರು. ಶಿವಮೊಗ್ಗಾ ಕಡೆಯವನಾದರೂ ಆ ತನಕ ಅಲ್ಲಿಗೆ ವರ್ಗ ಮಾಡಿಸಿಕೊಳ್ಳಲು ಪ್ರಯತ್ನ ಪಟ್ಟವನಲ್ಲವೆಂತಲೂ, ಆ ಸಾರಿ ನನಗೊಂದು ಅವಕಾಶ ಮಾಡಿಕೊಟ್ಟರೆ ನಿವೃತ್ತಿಯ ನಂತರ ನೆಲಸಲು ಮನೆಕಟ್ಟಿಸಿಕೊಳ್ಳಲು ಸಹಾಯವಾಗುತ್ತದೆಂದೂ ನಿವೇದಿಸಿಕೊಂಡೆ. ನನ್ನ ಕೋರಿಕೆ ನಿಷ್ಕಪಟವೆನಿಸಿತೋ ಏನೋ, ಅವರ ಆಪ್ತ ಕಾರ್ಯದರ್ಶಿಗೆ ಹೇಳಿ, ಆರೋಗ್ಯ ಇಲಾಖೆಯ ನಿರ್ದೇಶಕರಿಗೆ ವಾರ್ಷಿಕ ವರ್ಗಾವಣೆಯಲ್ಲಿ



ಕೆ. ಟಿ. ಕೃಷ್ಣಪ್ಪನವರು

ನನ್ನನ್ನು ಮೆಗ್ಗಾನ್ ಆಸ್ಪತ್ರೆಗೆ ವರ್ಗ ಮಾಡುವಂತೆ ಸೂಚಿಸಬೇಕೆಂದರು. ಅವರು ಹೇಳಿದಂತೆ ಇಲಾಖಾ ನಿರ್ದೇಶಕರಾದ ಡಾ|| ಪುಟ್ಟರಾಜ ಅರಸರನ್ನೂ ಭೇಟಿಯಾದೆ. ಅದು ಕಷ್ಟವಾಗ ಬಹುದೆಂದು ಅಭಿಪ್ರಾಯಪಟ್ಟರೂ, ಮೆಡಿಕಲ್ ಕಾಲೇಜಿನಲ್ಲಿದ್ದಾಗ ಅವರ ವಿದ್ಯಾರ್ಥಿಯಾಗಿದ್ದ ಸಮಯದಲ್ಲಿ ನನ್ನ ಬಗೆಗೆ ಒಳ್ಳೆಯ ಅಭಿಪ್ರಾಯವಿತ್ತೆನಿಸಿತು. ಆಪ್ತ ಗುಮಾಸ್ತರನ್ನು ಕರೆಸಿ ವಾರ್ಷಿಕ ವರ್ಗಾವಣೆಯ ಪಟ್ಟಿಯಲ್ಲಿ ನನ್ನ ಹೆಸರನ್ನು ಶಿವಮೊಗ್ಗಾ ಮೆಗ್ಗಾನ್ ಆಸ್ಪತ್ರೆಗೆ ವರ್ಗಮಾಡುವ ಬಗೆಗೆ ಟಿಪ್ಪಣಿ ಮಾಡುವಂತೆ ಹೇಳಿದರು. ಮುಂದಿನ ಒಂದೆರಡು ತಿಂಗಳುಗಳಲ್ಲಿ ಹಾಗೇ ವರ್ಗವಾಯಿತು.



ಚಿಕ್ಕಮಗಳೂರು ವೈದ್ಯ ಸಮೂಹ

## ೧೪. ಶಿವಮೊಗ್ಗಾ - ಮತ್ತೊಮ್ಮೆ ರೆಸಿಡೆಂಟ್ ಮೆಡಿಕಲ್ ಆಫೀಸರ್

ಚಿಕ್ಕಮಗಳೂರು ಆಸ್ಪತ್ರೆಯ ಕೆಲಸದಿಂದ ಬಿಡುಗಡೆಹೊಂದಿ, ಬೀಳ್ಕೊಡಿಗೆ ಸಮಾರಂಭಗಳಾದ ನಂತರ ೧೯೬೬ರ ಮೇ ತಿಂಗಳ ಮೊದಲ ವಾರದಲ್ಲಿ ಶಿವಮೊಗ್ಗೆಯ ಮೆಗ್ಗಾನ್ ಆಸ್ಪತ್ರೆಯಲ್ಲಿ ವರದಿ ಮಾಡಿಕೊಂಡೆ.

ಹಿಂದಿನ ಮೈಸೂರು ಸಂಸ್ಥಾನದಲ್ಲಿ ಬೆಂಗಳೂರು, ಮೈಸೂರುಗಳನ್ನು ಹೊರತು ಪಡಿಸಿದರೆ ಇಲ್ಲಿಯದು ಮೂರನೇ ಅತಿ ದೊಡ್ಡ ಆಸ್ಪತ್ರೆಯೆಂಬ ಪ್ರಖ್ಯಾತಿ ಪಡೆದಿತ್ತು. ಸುಮಾರು ೧೮೮೫-೧೯೦೬ರ ಅವಧಿಯಲ್ಲಿ ಅತ್ಯುನ್ನತ ಹುದ್ದೆಗಳೆನಿಸಿದ ಸೀನಿಯರ್ ಸರ್ಜನ್/ದರ್ಬಾರ್ ಸರ್ಜನ್‌ಗಳಂಥ ಅತ್ಯಂತ ಜವಾಬ್ದಾರಿಯುತ ಸ್ಥಾನಗಳಿದ್ದುಕೊಂಡು ವೈದ್ಯ ಇಲಾಖೆಯನ್ನು ಉನ್ನತ ಮಟ್ಟಕ್ಕೇರಿಸಿದ ಕೀರ್ತಿ ಕರ್ನಲ್ ಟಿ. ಜೆ. ಮೆಗ್ಗಾನ್‌ರದು (Col. T. J. McGann). ಅವರ ಸ್ಮಾರಕಾರ್ಥವಾಗಿ ೧೯೩೨ರಲ್ಲಿ ಈ ಆಸ್ಪತ್ರೆ ನಿರ್ಮಾಣವಾದುದು. ಪ್ರಸ್ತುತ ಸುಮಾರು ೬೦೦ ಹಾಸಿಗೆಗಳ ಸೌಲಭ್ಯವಿರುವ ಮೆಗ್ಗಾನ್ ಆಸ್ಪತ್ರೆ ೭೫ ಎಕರೆಗಳಷ್ಟು ವಿಸ್ತಾರ ಪ್ರದೇಶದಲ್ಲಿ ಸ್ಥಾಪನೆಯಾಯಿತು. ವೈದ್ಯಕೀಯದ ಎಲ್ಲಾ ವಿಷಯಗಳಲ್ಲಿ ಪರಿಣತಿಗಳಿಸಿದ ವೈದ್ಯರ ತಂಡಗಳು ಹಾಗೂ ಅವುಗಳಿಗೆ ತಕ್ಕ ಸಾಧನ ಸಲಕರಣೆಗಳಿಂದ ಸಜ್ಜಾಗಿದ್ದಿತು. ಶಸ್ತ್ರಚಿಕಿತ್ಸಾ ವಿಭಾಗದಲ್ಲಿ ಮೂರು ಘಟಕಗಳಿದ್ದವು. ಭಾರತದಲ್ಲೇ ಎರಡನೆಯದಾದ ಕ್ಯಾಸನೂರು ಕಾಡಿನ ಕಾಯಿಲೆಯ (ಕೆ.ಎಪ್.ಡಿ.)ಯ ಸಂಶೋಧನಾಲಯವೂ (Virus Research Laboratory) ಇಲ್ಲಿಯ ಆವರಣದಲ್ಲಿದ್ದುದೊಂದು ವೈಶಿಷ್ಟ್ಯ.

ನಾನಲ್ಲಿಗೆ ಬಂದಾಗ ಅಲ್ಲಿದ್ದ ಸುಮಾರು ೩೦ ಅಸಿಸ್ಟೆಂಟ್ ಸರ್ಜನ್‌ರಂತೆ ನಾನೂ ಒಬ್ಬನಾಗಿ ಕಾರ್ಯನಿರ್ವಹಿಸುವ ಪರಿಸ್ಥಿತಿ ಇತ್ತು. ಅಲ್ಲಿದ್ದ ವೈದ್ಯರ ಪೈಕಿ ಡಾ॥ ಶಿವಾನಂದಪ್ಪ ಎಂಬವರು ನನಗಿಂತ ಎರಡು ವರ್ಷಗಳ ನಂತರ ಕಾಲೇಜಿನಿಂದ ಹೊರ ಬಂದಿದ್ದರೂ ಪ.ಸ.ಕ.ದ ಹಿರಿತನದ ಪಟ್ಟಿಯಲ್ಲಿ ನನಗಿಂತ ಮೇಲಿನ ಸ್ಥಾನದಲ್ಲಿದ್ದವರು. ಆದರಿಂದ ಅವರೇ ಆರ್.ಎಂ.ಓ. ಆಗಬೇಕಿತ್ತು. ಡಾ॥ ಶಿವಾನಂದಪ್ಪನವರು ಎಂ.ಡಿ. ಪದವಿ ಗಳಿಸಿದ ನಂತರ ಶಿವಮೊಗ್ಗಾದಲ್ಲೇ ೧೦-೧೧ ವರ್ಷ ಜನಾನುರಾಗಿಯಾಗಿ ಕಾರ್ಯ ನಿರ್ವಹಿಸಿ ತಳಊರಿದವರು. ಅವರು ಅನೂಚಾನವಾಗಿ ಮುಂದವರಿಸಿಕೊಂಡು ಬರುತ್ತಿದ್ದ ಚಿಕಿತ್ಸಾ ಕೆಲಸಕ್ಕೆ ಆರ್.ಎಂ.ಓ. ಹುದ್ದೆಯ ಆಡಳಿತಾತ್ಮಕ ಸಮಸ್ಯೆಗಳು ಅಡ್ಡಬರಬಹುದೆಂದು, ಆ ಕೆಲಸ ತಮಗೆ ಇಷ್ಟವಿಲ್ಲವೆಂದು ಇಲಾಖೆಗೆ ಬರೆದುಕೊಂಡರು. ಮುಂದಿನ ಹಿರಿತನ ನನ್ನದೇ ಆಗಿದ್ದರಿಂದ ಆರ್.ಎಂ.ಓ. ಕೆಲಸದ ಜವಾಬ್ದಾರಿಯನ್ನು ನನಗೆ ವಹಿಸಲಾಯಿತು. ಡಾ॥ ಬಸವನ ಗೌಡರೇ ಡಿ.ಎಂ.ಓ. ಆಗಿ ಮುಂದುವರಿಯುತ್ತಿದ್ದು ನಮ್ಮಿಬ್ಬರ ನಡುವಿನ ಸಹಕಾರ ಮುಂದುವರಿಯಿತು.

ಮೆಗ್ಗಾನ್ ಆಸ್ಪತ್ರೆಯ ಒಳಾಡಳಿತ, ನಾನು ಆ ತನಕ ನಿರ್ವಹಿಸಿದ ಇತರ ಆಸ್ಪತ್ರೆಗಳ ಸಮಸ್ಯೆಗಳಿಗಿಂತಲೂ ಜಟಿಲವಾಗಿತ್ತು. ಮೊದಲಿಗೆ ಅಲ್ಲಿನ ಸಮಸ್ಯೆಗಳನ್ನು ಅರಿತುಕೊಂಡು

ಅವನ್ನೆಲ್ಲಾ ಒಂದು ಸವಾಲೆಂದೇ ಸ್ವೀಕರಿಸಿದೆ. ಡಾ|| ಬಸವನ ಗೌಡರಂಥ ಶಿಸ್ತಿಗೆ ಹೆಸರಾದವರೇ ಮುಖ್ಯಸ್ಥರಾಗಿದ್ದರೂ ಸಾರ್ವಜನಿಕರೇ ಅಲ್ಲದೆ ಸುದ್ದಿ ಮಾಧ್ಯಮಗಳಲ್ಲೂ ಆಸ್ಪತ್ರೆಯ ಕಾರ್ಯ ನಿರ್ವಹಣೆಯ ಬಗೆಗೆ ಆರೋಪಗಳು ಪ್ರಕಟವಾಗುತ್ತಲೇ ಇದ್ದವು.

ಆಸ್ಪತ್ರೆಯ ಆವರಣದಲ್ಲಿಯೇ ನನ್ನ ವಸತಿ ಗೃಹವೂ ಇದ್ದುದರಿಂದ ಅಲ್ಲಿಯ ಆಗು ಹೋಗುಗಳ ಬಗೆಗೆ ಸದಾ ಗಮನಹರಿಸಲು ಅನುಕೂಲವಾಯಿತು. ಬೆಳಗಿನ ಪಾಳಿಯ ದಾದಿಯರು, ಮತ್ತಿತರ ನೌಕರ ವರ್ಗದವರು ಕಾಲಕ್ಕೆ ಸರಿಯಾಗಿ ಬಾರದಿರುವುದು ನನ್ನ ಗಮನ ಸೆಳೆಯಿತು. ಬೆಳಿಗ್ಗೆ ಹಾಜರಿ ಸಮಯದಲ್ಲಿ ನಾನೇ ಹಾಜರಿದ್ದು ತಡವಾಗಿ ಬರುವವರನ್ನು ಸರಿಪಡಿಸುವುದು ಸಾಧ್ಯವಾಯಿತು. ಅದೇ ರೀತಿ ಆಸ್ಪತ್ರೆಗೆ ಸರಬರಾಜಾಗುತ್ತಿದ್ದ ಹಾಲು, ಮತ್ತಿತರ ಆಹಾರ ವಸ್ತುಗಳ ಗುಣಮಟ್ಟ ಮತ್ತು ಪ್ರಮಾಣಗಳನ್ನೂ ತಾಳೆ ನೋಡುವುದಕ್ಕೆ ಸಾಧ್ಯವಾಯಿತು. ಹೊರ ರೋಗಿಗಳ ವಿಭಾಗದಲ್ಲಿ ಮುಫತ್ತಾಗಿ ನೀಡುತ್ತಿದ್ದ ಇಂಜಕ್ಷನ್‌ಗಳನ್ನು ಪಡೆದುಕೊಳ್ಳಲು ಬೆಳಗಿನ ಏಳು ಗಂಟೆಗಾಗಲೇ ಹೆಂಗಸರು ಮಕ್ಕಳು ಜಮಾಯಿಸಿ ಕುಳಿತುಕೊಳ್ಳುತ್ತಿದ್ದರು. ಆದರೆ ಅವರಿಗೆ ಇಂಜಕ್ಷನ್ ದೊರೆಯುವುದು ಹತ್ತು ಗಂಟೆಯ ನಂತರವೆ! ವಾರ್ಡುಗಳಲ್ಲಿ ಕಾರ್ಯ ನಿರ್ವಹಿಸಿ ವೈದ್ಯರು ಹೊರ ರೋಗಿಗಳ ವಿಭಾಗಕ್ಕೆ ಬರಬೇಕು; ರೋಗಿಗಳ ಚೀಟಿಗಳ ಮೇಲೆ 'ಮುಂದುವರಿಸಿ' (Repeat) ಎಂದು ಬರೆದ ನಂತರವೇ ಇಂಜಕ್ಷನ್ ನೀಡುವ ಪರಿಸ್ಥಿತಿ ಇತ್ತು. ಅಷ್ಟರೊಳಗೆ ಪ್ರತಿದಿನ ಬರುವ ಹೊರ ರೋಗಿಗಳ ದಂಡೂ ಆಗಮಿಸಿ ನೂಕು, ನುಗ್ಗಲು, ಗಲಾಟೆಗಳೂ ಶುರುವಾಗಿ ಬಿಡುತ್ತಿದ್ದವು. ಪರಿಸ್ಥಿತಿಯನ್ನು ಸುಧಾರಿಸಲು ಬೆಳಿಗ್ಗೆ ಆಸ್ಪತ್ರೆಗೆ ಹೋದ ಕೂಡಲೇ ನಾನೇ ಹೊರ ರೋಗಿಗಳ ವಿಭಾಗದಲ್ಲಿ ಕುಳಿತು "ಮುಂದುವರಿಸಿ" ಎಂದು ಚೀಟಿಗಳ ಮೇಲೆ ಬರೆದುಕೊಡಲಾರಂಭಿಸಿದೆ. ಅದರಿಂದ ೯ ಅಥವಾ ೯-೩೦ ಗಂಟೆಗಳೊಳಗೇ ಅವರ ಸಮಸ್ಯೆ ಪರಿಹಾರವಾಗಿ ಬಿಡುತ್ತಿತ್ತು. ಮುಂದಿನ ದಿನಗಳಲ್ಲಿ ಕೆಲವು ಕಿರಿಯ ವೈದ್ಯರನ್ನು ಈ ಕಾರ್ಯಕ್ಕಾಗಿ ಸರದಿಯ ಮೇಲೆ ನೇಮಿಸತೊಡಗಿದೆ.

ಹೊರ ರೋಗಿಗಳ ವಿಭಾಗದ ಕೊಠಡಿಗಳು ಒಂದೇ ರೀತಿಯ ಆಯಾಮಗಳಲ್ಲಿ ಇರಲಿಲ್ಲ; ಕೆಲವು ವಿಶಾಲವಾಗಿದ್ದರೆ ಮತ್ತೆ ಕೆಲವು ಕಿಷ್ಕಿಂದೆಯಂತಾಗಿದ್ದವು. ವಿಶಾಲವಾದವಕ್ಕೆ ನಡುವೆ ಅಡ್ಡ ಗೋಡೆಗಳನ್ನು ಹಾಕಿಸಿ, ಚಿಕ್ಕವನ್ನು ವಿಸ್ತಾರಗೊಳಿಸುವಂತೆ ಮಾಡಿಸಿದೆ.

ಪ್ರತಿನಿತ್ಯ ಹಗಲು ಕೆಲವು ವಾರ್ಡು ಮತ್ತು ವಿಭಾಗಗಳಿಗೆ ಮಾತ್ರ ಭೇಟಿ ನೀಡಲು ಸಾಧ್ಯವಾಗುತ್ತಿತ್ತು. ರಾತ್ರಿ ೮-೯ ಗಂಟೆ ಸಮಯದಲ್ಲಿ ಎಲ್ಲಾ ವಾರ್ಡುಗಳಲ್ಲೂ ಸುತ್ತಾಡಿ ರಾತ್ರಿಯ ವ್ಯವಸ್ಥೆಗಳ ಬಗೆಗೆ ನಿಗಾವಹಿಸುತ್ತಿದ್ದೆ. ಅಲ್ಲದೆ ಹಗಲು-ರಾತ್ರಿ ಆಸ್ಪತ್ರೆಯ ಆಡಳಿತ ನಿರ್ವಹಣೆ ಮತ್ತು ಲೋಪದೋಷಗಳ ಬಗೆಗೆ ಲಿಖಿತ ವರದಿಯನ್ನು ಪುಸ್ತಕವೊಂದರಲ್ಲಿ ದಾಖಲಿಸಿ ಡಿ.ಎಂ.ಓ. ಅವರಿಗೆ ಕಳುಹಿಸುತ್ತಿದ್ದೆ.

ಆಸ್ಪತ್ರೆಯೊಳಗಡೆ ನಾಯಿ, ಕೋತಿಗಳ ಹಾವಳಿ ಸಾಕಷ್ಟು ಇರುತ್ತಿತ್ತು. ಮುನಿಸಿಪಾಲಿಟಿಯವರಿಂದ ವಿಷ ಹಾಕಿಸಿ ನಾಯಿಗಳ ಕಾಟವನ್ನು ಮಿತಿಗೊಳಿಸಲು ಕಾರ್ಯಾಚರಣೆ ಮಾಡಿಸುತ್ತಿದ್ದೆ. ಹಾಗೆಯೆ ಕೋತಿಗಳನ್ನು ಹಿಡಿಸಲು ಹತ್ತಿರದ ಜಮೀನ್ದಾರರೊಬ್ಬರಲ್ಲಿದ್ದ ಬೋನನ್ನು ತರಿಸಿ, ಅವುಗಳನ್ನು ದೂರದ ಕಾಡುಗಳಿಗೆ ರವಾನಿಸುವ ಏರ್ಪಾಡುಗಳೂ ಜರುಗುತ್ತಿದ್ದವು.

## ನನ್ನ ವಿರುದ್ಧವೇ ಆರೋಪ

ಒಂದು ದಿನ ಮಧ್ಯಾಹ್ನ ಬೆಳಗಿನ ಕೆಲಸ ಮುಗಿದ ನಂತರ ಮನೆಯಲ್ಲಿ ವಿಶ್ರಮಿಸಿ ಕೊಳ್ಳುತ್ತಿದ್ದೆ. ಗೋಪಾಲಯ್ಯ ಎಂಬವರೊಬ್ಬರು ಮನೆಗೆ ಬಂದು ತಮ್ಮ ಮಗುವಿಗೆ ಹಾವು ಕಚ್ಚಿ ಸ್ವಲ್ಪ ಹೊತ್ತಿನ ಹಿಂದೆ ಆಸ್ಪತ್ರೆಗೆ ದಾಖಲಾಗಿದೆಯೆಂದೂ, ಆದರೆ ಆಸ್ಪತ್ರೆಯವರು ಸರಿಯಾದ ಚಿಕಿತ್ಸೆ ನೀಡುತ್ತಿಲ್ಲವೆಂದೂ ದೂರಿದರು. ಅವರನ್ನು ಕಳುಹಿಸಿ ನಾನು ಹಿಂಬಾಲಿಸಿದೆ. ಸುಮಾರು ಒಂದೂವರೆ ಎರಡು ವರ್ಷದ ಮಗುವಿನ ಬಲಗೈ ಕಿರುಬೆರಳು ಊದಿಕೊಂಡಿದ್ದು, ಕೀರಿದ ಸಣ್ಣ ಗಾಯವಿತ್ತು. ಮಗು ಒಂದೇ ಸಮನೆ ಕಿರುಚುತ್ತಿತ್ತು. ಅದಾಗಲೇ ಆಸ್ಪತ್ರೆಯಲ್ಲಿ ನೀಡಿದ ಚಿಕಿತ್ಸೆಯ ಬಗೆಗೆ ದಾದಿಯನ್ನು ವಿಚಾರಿಸಿದೆ; ಕೇಸ್ ಷೀಟನ್ನು ಪರಿಶೀಲಿಸಿದೆ. ಹಾವು ಕಚ್ಚಿದವರಿಗೆ ನೀಡುವ ಇಂಜಕ್ಷನ್ (Anti Snake Venom) ಜೀವಿರೋಧಕ ಇಂಜಕ್ಷನ್ ಮುಂತಾದವನ್ನು ನೀಡಿದ್ದರು; ಹಾಗೂ ಆ ಬಗೆಗೆ ದಾಖಲಾತಿಯನ್ನೂ ಮಾಡಿದ್ದರು. ಮಗುವಿಗೆ ಆ ಬಗೆಗೆ ಬೇರಿನ್ನೇನೂ ಕೊಡುವ ಅವಶ್ಯಕತೆ ಇಲ್ಲವೆಂತಲೂ, ಮಗುವಿನ ಚೇತರಿಕೆಯ ಬಗೆಗೆ ಆತಂಕ ಪಡಬೇಕಾದುದೇ ನಿಲ್ಲವೆಂದು ಸಮಾಧಾನಪಡಿಸಲು ಪ್ರಯತ್ನಿಸಿದೆ. ಅಲ್ಲದೆ ಹಾವು ಕಚ್ಚಿದವರು ನಿಧಾನಗತಿಯಲ್ಲಿ ಪ್ರಜ್ಞಾಹೀನರಾಗುವ ಸಾಧ್ಯತೆ ಇರುವುದರಿಂದ 'ಮತ್ತು ಭರಿಸುವ' ಇಂಜಕ್ಷನ್ ನೀಡುವುದಿಲ್ಲ; ಅದರಿಂದ ಸ್ವಲ್ಪ ಸಮಯ ಅದು ಕಿರುಚುವುದು ಸ್ವಾಭಾವಿಕವೆಂದು ಸಾಂತ್ವನ ಹೇಳಿ, ಹೊರ ರೋಗಿಗಳ ವಿಭಾಗಕ್ಕೆ ಹೋಗಿ ಕರ್ತವ್ಯ ನಿರತನಾದೆ. ಇನ್ನರ್ಧ ಗಂಟೆಯಲ್ಲಿ ಗೋಪಾಲಯ್ಯ ಅಲ್ಲಿಗೆ ಬಂದು ಮಗುವನ್ನು ಆಸ್ಪತ್ರೆಯಿಂದ ಬಿಡುಗಡೆ ಮಾಡಬೇಕೆಂದು ಕೇಳತೊಡಗಿದರು. ಹಾವು ಕಚ್ಚಿದವರಿಗೆ 'ಇಂಗ್ಲಿಷ್ ಔಷಧಿಗಳು' ಪ್ರಯೋಜನವಾಗುವುದಿಲ್ಲ, ಅದಕ್ಕೆ ನಾಟಿ ಮದ್ದುಗಳೇ ಸೂಕ್ತವೆಂದು ಅವರ ಅಜ್ಜಿ ಹಟ ಮಾಡುತ್ತಿದ್ದಾರೆಂದು ವಾದ ಮಾಡತೊಡಗಿದರು. ಆ ಬಗೆಗೆ ನಾನು ಹೇಳುವ ಬುದ್ಧಿವಾದದ ಮಾತುಗಳನ್ನು ಕೇಳುವ ಸ್ಥಿತಿಯಲ್ಲಿ ಅವರಿರಲಿಲ್ಲ. ವಾರ್ಡಿನಿಂದ ದಾದಿಯನ್ನು ಕರೆಸಿ ಕೇಸ್ ಷೀಟಿನ ಮೇಲೆ "ವೈದ್ಯರ ಸಲಹೆಗೆ ವಿರುದ್ಧವಾಗಿ" (Against medical advice) ಬಿಡುಗಡೆ ಮಾಡಿಸಿಕೊಂಡು ಹೋಗುತ್ತಿರುವುದಾಗಿ ಬರೆಸಿ, ರುಜು ಹಾಕಿಸಿ ಕಳುಹಿಸಬಹುದೆಂದು ಆದೇಶ ಮಾಡಿದೆ.

ಮರುದಿನ ಸಹಾಯಕ ವೈದ್ಯರೊಂದಿಗೆ ವಾರ್ಡಿನಲ್ಲಿ ರೋಗಿಗಳ ಪರೀಕ್ಷೆಯಲ್ಲಿ ತೊಡಗಿದ್ದೆ. ಕೋಟು, ಪ್ಯಾಂಟು ಧರಿಸಿದ ವ್ಯಕ್ತಿಯೊಬ್ಬರು ಒಳಗೆ ಬಂದು, ತಾವು ಸಿದ್ದಪ್ಪ ಎಂತಲೂ, ಆಸ್ಪತ್ರೆಯ ಸಂದರ್ಶಕ ಸಮಿತಿಯ ಸದಸ್ಯ ಹಾಗೂ ಸ್ಥಳೀಯ ಪತ್ರಿಕೆಯೊಂದರ ಸಂಪಾದಕರೆಂತಲೂ ಪರಿಚಯಿಸಿಕೊಂಡರು. ಹಿಂದಿನ ದಿನ ದಾಖಲಾದ ಹಾವು ಕಚ್ಚಿದ ಮಗುವಿಗೆ ಸರಿಯಾದ ಚಿಕಿತ್ಸೆ ನೀಡಿಲ್ಲವೆಂಬ ದೂರು ಅವರಿಗೆ ಬಂದಿದೆಯಂತಲೂ ಆ ಬಗೆಗೆ ಮಾಹಿತಿ ಬೇಕೆಂದು ಕೇಳಿದರು. ಆ ಬಗೆಗೆ ನಡೆದ ಸಂಗತಿಗಳನ್ನೆಲ್ಲಾ ಸ್ಥೂಲವಾಗಿ ವಿವರಿಸಿದೆ. ಆ ಬಗೆಗಿನ ದಾಖಲಾತಿಗಳನ್ನು ತಾವು ಪರಿಶೀಲಿಸಬೇಕೆಂತಲೂ ಅವುಗಳನ್ನು ಆಗಲೇ ತೋರಿಸಬೇಕೆಂದೂ ಆಗ್ರಹಪಡಿಸತೊಡಗಿದರು. ಕೇಸ್ ಷೀಟ್ ಆಗಲೇ ಕಚೇರಿಯ ಕಡತದಲ್ಲಿ ಸೇರಿ ಹೋಗಿರುವುದೇ ಅಲ್ಲದೆ ನಾನು ಕರ್ತವ್ಯದ ನಡುವೆ ಇರುವುದರಿಂದ ಮಧ್ಯಾಹ್ನ ಬಂದರೆ ಅದನ್ನು ತರಿಸಿ ಇಡುವುದಾಗಿ ಹೇಳಿದೆ. ಆದರೆ ಸಿದ್ದಪ್ಪನವರಿಗೆ ಸಮಾಧಾನವಾದಂತೆ ಕಾಣಲಿಲ್ಲ. ಸಿಟ್ಟಿನಿಂದ ಗುಡುಗುತ್ತಲೇ ಹೊರಹೋದರು.

ಸಿದ್ದಪ್ಪನವರು ಮಾತಾಡಲು ಮತ್ತೆ ಬರಲಿಲ್ಲ. ಅದರ ಬದಲು ಅವರ ಪತ್ರಿಕೆ ಮರುದಿನ 'ಮಾತನಾಡಿತು'. ಹಾವು ಕಚ್ಚಿದ ಮಗುವಿಗೆ ಆಸ್ಪತ್ರೆಯಲ್ಲಿ 'ಅಮಾನುಷ' ರೀತಿಯಲ್ಲಿ ಚಿಕಿತ್ಸೆ

ನೀಡಲಾಗಿದೆ ಎಂದು ದಪ್ಪ ಅಕ್ಷರಗಳಲ್ಲಿ ರಂಗು ರಂಗಿನ ವರದಿ ಪ್ರಕಟವಾಯಿತು. ಅದಲ್ಲದೆ ಗೋಪಾಲಯ್ಯ ಮಧ್ಯಾಹ್ನದ ಸಮಯದಲ್ಲಿ ಆಸ್ಪತ್ರೆಗೆ ಬಂದು ಎಲ್ಲರನ್ನೂ ಬಯ್ಯುತ್ತಾ ಗಲಾಟೆ ಮಾಡಲಾರಂಭಿಸಿದ. ಸಿದ್ದಪ್ಪನವರ ಪತ್ರಿಕೆಗೆ ಅದೊಂದು ಹೊಸ ಹೊಸ ವಿಚಾರಗಳಿಗೆ ಗ್ರಾಸವಾಯಿತು. “ಹಾವು ಕಚ್ಚಿದ ಗಾಯಕ್ಕೆ ಮದ್ದು ಹಾಕುವ ಬದಲು ‘ಆಸಿಡ್’ ಸುರಿದಿದ್ದಾರೆ” ಎಂದು ಮಗುವನ್ನು ಸೇರಿಸಿದ ಖಾಸಗಿ ನರ್ಸಿಂಗ್ ಹೋಮ್‌ನ ತಜ್ಞರ ಅಭಿಪ್ರಾಯದ ವರದಿ ಇನ್ನೊಂದು ದಿನದ ಸುದ್ದಿ!

ಈ ಘಟನೆ ಜರುಗಿದ ಸಮಯದಲ್ಲಿ ಡಿ.ಎಂ.ಓ. ದೀರ್ಘಕಾಲ ರಜೆಯಲ್ಲಿದ್ದರು; ಅವರ ಕರ್ತವ್ಯಗಳನ್ನು ನಾನೇ ಜರುಗಿಸುತ್ತಿದ್ದೆ. ಸಿದ್ದಪ್ಪನವರ ಪತ್ರಿಕೆಯಲ್ಲಿ ಬರುತ್ತಿದ್ದ ವರದಿಗಳನ್ನು ನಿರಾಕರಿಸಿ ಮಗುವಿಗೆ ಆಸ್ಪತ್ರೆಯಲ್ಲಿ ನೀಡಿದ ವಿವರಗಳನ್ನು ಬರೆದು ಎಲ್ಲಾ ಪತ್ರಿಕೆಗಳಿಗೂ ಕಳುಹಿಸಿದೆ. ಅವುಗಳಲ್ಲಿ ವೈದ್ಯರ ಸಲಹೆಗೆ ವಿರುದ್ಧವಾಗಿ ನಾಟಿ ಮದ್ದು ಕೊಡಿಸುವ ಸಲುವಾಗಿ ಬಿಡುಗಡೆ ಮಾಡಿಕೊಂಡು ಹೋಗಿದ್ದು ಮಗುವಿನ ಬೆರಳಿಗೆ ಆಸಿಡ್ ಹಾಕಿದ್ದರಿಂದ ಕೊಳೆಯುವುದಕ್ಕಾರಂಭಿಸಿದ್ದಲ್ಲ, ಕೊಳಕು ಮಂಡಲ ಹಾವು ಕಚ್ಚಿದ್ದರಿಂದ ಹಾಗಾಗಿರಬೇಕೆಂದು ವಿವರಿಸಿದ್ದೆ.

ಇಷ್ಟಾದರೂ, ಪ್ರಕರಣ ಅಂತ್ಯವಾಗುವ ಸೂಚನೆಗಳು ಕಂಡುಬರಲಿಲ್ಲ. ಮಗುವಿನ ತಂದೆ ಪ್ರಕರಣದ ಬಗೆಗೆ ವರ್ಣರಂಜಿತ ಕರಪತ್ರಗಳನ್ನು ತಯಾರಿಸಿ ಊರಿನೆಲ್ಲೆಡೆ ಹಂಚುತ್ತಿದ್ದನಂತೆ. ಅಂತಹ ಬರಹಗಳ ಪ್ರತಿಗಳನ್ನು ಪ್ರಧಾನಮಂತ್ರಿ ಇಂದಿರಾ ಗಾಂಧಿಯವರಿಗೂ ಕಳುಹಿಸಲಾಗಿತ್ತಂತೆ! ಈ ಹಿನ್ನೆಲೆಯಿಂದ ಅವನಿಂದ ಇನ್ನೂ ಹೆಚ್ಚಿನ ಅಪಪ್ರಚಾರಗಳಾಗಬಹುದೆಂದು ಪೋಲೀಸರಿಗೆ ದೂರಿತ್ತೆ. ಜಿಲ್ಲಾಧಿಕಾರಿಗಳನ್ನು ಭೇಟಿ ಮಾಡಿ ಆಸ್ಪತ್ರೆಯ ಬಗೆಗೆ ಬರುತ್ತಿದ್ದ ಸುಳ್ಳು ಆಪಾದನೆಗಳ ಬಗೆಗೆ ವಿಚಾರಣೆ ನಡೆಸಬೇಕೆಂದೂ ಕೇಳಿಕೊಂಡೆ. ಪೋಲಿಸರ ಮೂಲಕ ವಿಚಾರಣೆಗೆ ಏರ್ಪಡಿಸುವ ಆಶ್ವಾಸನೆ ನೀಡಿದರು.

ಪೋಲೀಸರು ಗೋಪಾಲಯ್ಯನನ್ನು ಒಂದು ದಿನ ನನ್ನ ಕಚೇರಿಗೆ ಕರೆತಂದರು. ನಾನೂ ಸೇರಿದಂತೆ ಆ ಪ್ರಕರಣಕ್ಕೆ ಸಂಬಂಧಿಸಿದವರ ಹೇಳಿಕೆಗಳನ್ನೆಲ್ಲಾ ದಾಖಲು ಮಾಡಿಕೊಂಡರು. ಗೋಪಾಲಯ್ಯ ಹೇಳಿಕೆಯಲ್ಲಿ ತನ್ನ ಅಭಿಲಾಷೆಯಂತೆ ಮಗುವಿಗೆ ‘ನಾಟಿ’ ಮದ್ದು ಕೊಡಿಸುವ ಸಲುವಾಗಿ, ‘ವೈದ್ಯರ ಸಲಹೆಗೆ ವಿರುದ್ಧವಾಗಿ’ ರುಜು ಹಾಕಿ ಮಗುವನ್ನು ಕರೆದುಕೊಂಡು ಹೋದುದನ್ನು ಒಪ್ಪಿಕೊಂಡು ಹೇಳಿಕೆ ನೀಡಿದ.

ಈ ನಡುವೆ ಕೆಲವು ಆಸ್ಪತ್ರೆ ಸಂದರ್ಶಕ ಸಮಿತಿಯ ಸದಸ್ಯರ ಕೋರಿಕೆಯ ಮೇರೆಗೆ ತುರ್ತು ಸಭೆಯನ್ನು ಕರೆಯಲಾಯಿತು. ಪ್ರಕರಣದ ಬಗೆಗೆ ವಿವರಣೆ ನೀಡಿ, ಮಗುವಿನ ಕೇಸ್ ಷೀಟನ್ನು ಅವರೆದುರಿಗೆ ಹಾಜರು ಪಡಿಸಲಾಯಿತು. ಮಗುವಿನ ತಂದೆಯೇ ಅಲ್ಲದೆ ಸಮಿತಿಯ ಸದಸ್ಯರೂ ಹಾಗೂ ಪತ್ರಿಕಾ ಸಂಪಾದಕ ಸಿದ್ದಪ್ಪನವರೂ ನನ್ನ ವಿರುದ್ಧ ವ್ಯಾಪಕವಾಗಿ ವೈಯಕ್ತಿಕ ಅಪಪ್ರಚಾರ ಮಾಡುತ್ತಿರುವುದನ್ನು ನೇರವಾಗಿ ಪ್ರಸ್ತಾಪಿಸಿದೆ. ಮಗುವಿನ ಗಾಯಕ್ಕೆ ಆಸಿಡ್ ಹಾಕಿದ್ದಾರೆಂಬ ಆರೋಪದ ಬಗೆಗೆ ಹೇಳುತ್ತಾ, ಕೊಳಕು ಮಂಡಲ ಹಾವು ಕಚ್ಚಿದರೆ ಸಂಬಂಧಿಸಿದ ಭಾಗ ಹೇಗೆ ಕೊಳೆಯಲಾರಂಭಿಸುತ್ತದೆ ಎಂಬುದನ್ನು ವಿವರಿಸಿದ ಕಂಡಿಕೆ ಹಾಗೂ ಚಿತ್ರದ ಸಹಿತ ವಿವರವನ್ನು ಸರ್ಜರಿಯ ಗ್ರಂಥದಲ್ಲಿರುವುದನ್ನು ಓದಿ ತೋರಿಸಿದೆ. ಬಹುಪಾಲು ಸದಸ್ಯರು ಪ್ರಕರಣದಲ್ಲಿ ಆಸ್ಪತ್ರೆಯ ಸಿಬ್ಬಂದಿಯರಿಂದಲಾಗಲೀ ಅಥವಾ ವೈಯಕ್ತಿಕವಾಗಿ ಆರ್.ಎಂ.ಓ. ಅವರಿಂದಾಗಲೀ ಕರ್ತವ್ಯಲೋಪವಾದ ಅಂಶಗಳೇನೂ ಕಂಡು ಬಂದಿಲ್ಲವೆಂತಲೂ ಮೇಲಾಗಿ

ನಾಟಿ ಮದ್ದು ನೀಡಬೇಕೆಂಬ ಅಭಿಲಾಷೆಯಿಂದ 'ವೈದ್ಯರ ಸಲಹೆಗೆ ವಿರುದ್ಧ' ಮಗುವನ್ನು ಬಿಡುಗಡೆ ಮಾಡಿಸಿಕೊಂಡು ಹೋಗುತ್ತಿರುವುದಾಗಿ ರುಜು ಮಾಡಿರುವ ದಾಖಲೆ ಇರುವಾಗ ಇಷ್ಟೆಲ್ಲಾ ಪುಕಾರು ಮಾಡುವುದರ ಅವಶ್ಯಕತೆ ಇರಲಿಲ್ಲವೆಂದು ಅಭಿಪ್ರಾಯಪಟ್ಟರು. ಸದಸ್ಯರಲ್ಲೊಬ್ಬರಾದ ಶಿವಮೊಗ್ಗೆಯ ಪ್ರಖ್ಯಾತ ಖಾಸಗಿ ವೈದ್ಯ ಡಾ|| ಬಿ. ಆರ್. ಶಾಮರಾವ್ ವೈದ್ಯರಾಗಲೀ, ಅಥವಾ ಆಸ್ಪತ್ರೆಯಲ್ಲಾಗಲೀ, ಹಾವು ಕಚ್ಚಿದ ಗಾಯಕ್ಕೆ ಆಸಿಡ್ ಹಾಕುವುದಿಲ್ಲ; ಕೂಡಲೇ ನಿದ್ರೆ ಬರಿಸಲು ಇಂಜಕ್ಷನ್ ಸಹಾ ನೀಡುವುದಿಲ್ಲವೆಂದು ಅಭಿಪ್ರಾಯಪಟ್ಟರು. ಅಲ್ಲದೆ ಸಮಿತಿಯ ಸದಸ್ಯರೊಬ್ಬರು ವಿಷಯದ ಬಗೆಗೆ ಸರಿಯಾದ ಮಾಹಿತಿ ದೊರಕಿಸಿಕೊಳ್ಳದೆ ತಮ್ಮದೇ ಪತ್ರಿಕೆಯಲ್ಲಿ ಆಸ್ಪತ್ರೆಯ ಬಗೆಗೆ ಅಪಪ್ರಚಾರಕ್ಕಿಳಿಯುವುದು ಸಮಿತಿಗೆ ಎಸಗಿದ ಅವಮಾನವೆಂದು ಸ್ಪಷ್ಟವಾಗಿ ಹೇಳಿದರು. ಸಿದ್ದಪ್ಪನವರು ನಡು ನಡುವೆ ಬಾಯಿ ಹಾಕಿ ತಮ್ಮ ಉದ್ದೇಶದ ಬಗೆಗೆ ವಿವರಣೆ ನೀಡಲು ಪ್ರಯತ್ನಿಸಿದರಾದರೂ, ಇತರ ಸದಸ್ಯರು, ಅವರು ಎಸಗಿದ ತಪ್ಪುಗಳನ್ನು ಎತ್ತಿತೋರಿಸಿ, ಅವರ ವರ್ತನೆ ಸರಿಯಾದುದಲ್ಲವೆಂದು ಸುಮ್ಮನಾಗಿಸುತ್ತಿದ್ದರು. ಅಂತಿಮವಾಗಿ ಮಗುವಿನ ತಂದೆ ಹಾಗೂ ಪತ್ರಿಕೆಯಲ್ಲಿ ದೂರಿದಂತೆ ಆಸ್ಪತ್ರೆಯಲ್ಲಿ ಅಮಾನುಷವಾಗಿ ವರ್ತಿಸಿಲ್ಲ; ಅಂತಹ ವಿಷಯಗಳಲ್ಲಿ ಸಾರ್ವಜನಿಕರೇ ಆಗಲೀ, ಸಮಿತಿಯ ಸದಸ್ಯರೇ ಆಗಲೀ ಆಸ್ಪತ್ರೆಗಳಂಥ ಸಂಸ್ಥೆಗಳ ವಿರುದ್ಧ ಅಪಪ್ರಚಾರ ಮಾಡುವುದು ಸರಿಯಲ್ಲವೆಂಬ ನಿರ್ಣಯವನ್ನು ದಾಖಲು ಮಾಡಿಸಿದರು. ಅಂದಿನಿಂದ ಪ್ರಕರಣ ತಣ್ಣಗಾಯಿತು.

## ಸಬ್‌ಇನ್‌ಸ್ಪೆಕ್ಟರ್ ಪ್ರಕರಣ

ಈ ಪ್ರಕರಣ ಮುಗಿಯುತ್ತಿದ್ದಂತೆಯೆ ಶಿವಮೊಗ್ಗಾದ ಸಬ್‌ಇನ್‌ಸ್ಪೆಕ್ಟರ್ ಬಸವಯ್ಯ ಎಂಬವರು ತೀವ್ರ ಎದೆ ನೋವಿನಿಂದ ತುರ್ತು ಚಿಕಿತ್ಸಾ ವಾರ್ಡಿಗೆ ದಾಖಲಾದರು. ಅವರನ್ನು ಕೂಡಲೇ ಸ್ಪೆಷಲ್ ವಾರ್ಡಿಗೆ ಬದಲಾಯಿಸಬೇಕೆಂದು ಪೋಲೀಸ್ ಇಲಾಖೆಯ ಕೆಲವು ವರಿಷ್ಠರು ಒತ್ತಡ ಹೇರಲಾರಂಭಿಸಿದರು. ಸ್ಪೆಷಲ್ ವಾರ್ಡುಗಳಿಗಾಗಿ ಕಾಯುತ್ತಿರುವವರ ಪಟ್ಟಿಯೊಂದಿದ್ದು ಅದರಲ್ಲಿ ಪ್ರತಿಯೊಬ್ಬರ ಸರದಿ ಬಂದಾಗ ಮಾತ್ರ ಬದಲಾಯಿಸಬಹುದೇ ಹೊರತು ನಡುವೆ ಹಾಗೆ ಮಾಡಲಾಗದೆಂದು ಪರಿಸ್ಥಿತಿಯನ್ನು ವಿವರಿಸಿದೆ. ಅವರೇನಾದರೂ ಡಿ.ಎಂ.ಓ. ಅವರಿಂದ ವಿಶೇಷ ರೀತಿ ಆದೇಶ ಪಡೆದರೆ ಬಸವಯ್ಯನವರನ್ನು ಬದಲಾಯಿಸುವುದರಲ್ಲಿ ನನ್ನ ಅಭ್ಯಂತರ ವಿರುವುದಿಲ್ಲವೆಂದು ಸ್ಪಷ್ಟವಾಗಿ ತಿಳಿಸಿದೆ. ಡಿ.ಎಂ.ಓ. ಅವರು ಹಾಗೇ ಮಾಡಿದರು; ನಾನೇನೂ ಆಕ್ಷೇಪಣೆ ಎತ್ತಲಿಲ್ಲ. ಡಾ|| ಮಹದೇವ ಎಂಬ ಫಿಜಿಷಿಯನ್ ಅವರ ಚಿಕಿತ್ಸೆ ನಡೆಸುವವರಾಗಿದ್ದು, ಅವರಿಗೆ ತೀವ್ರ ಹೃದಯಾಘಾತವಾಗಿರುವುದಾಗಿ ಅಭಿಪ್ರಾಯಪಟ್ಟಿದ್ದರು. ನನ್ನ ನಿತ್ಯದ ಆಸ್ಪತ್ರೆ ವಿವಿಧ ಭಾಗಗಳಿಗೆ ಭೇಟಿ ನೀಡುವಾಗ ಬಸವಯ್ಯನವರಿರುವ ವಾರ್ಡಿಗೂ ಹೋಗಿ ಅವರ ಚಿಕಿತ್ಸೆಯ ಬಗೆಗೂ ವಿಚಾರಿಸುತ್ತಿದ್ದೆ. ಅವರಲ್ಲಿಗೆ ಹೋದಾಗಲೆಲ್ಲಾ ಗೋಪಾಲಯ್ಯನ ಪ್ರಕರಣವನ್ನು ಪ್ರಸ್ತಾಪಿಸಿ, ಅವನ ಮೇಲೆ ಸದ್ಯದಲ್ಲೇ ಸೂಕ್ತ ಕ್ರಮ ತೆಗೆದುಕೊಳ್ಳಬೇಕೆಂಬುದರಲ್ಲೇ ಎದೆ ನೋವಿನಿಂದ ಆಸ್ಪತ್ರೆಗೆ ದಾಖಲಾಗಬೇಕಾಯಿತೆಂದು ವಿಷಾದ ವ್ಯಕ್ತಪಡಿಸುತ್ತಿದ್ದರು. ಅವರಲ್ಲಿಗೆ ನಾನು ಹೋದಾಗಲೆಲ್ಲಾ ಅದನ್ನೇ ಪದೇ ಪದೇ ಹೇಳುತ್ತಿರುವುದು ನನಗೇಕೋ ಅ[illegible]ಯುಟ್ಟಿಸಿತು. ಪೋಲೀಸ್ ಇಲಾಖೆಯಲ್ಲಿ ಪರಿಚಯವಿದ್ದವರೊಬ್ಬರ ಮೂಲಕ ಆ ಪ್ರಕರಣದಲ್ಲಿ ಅವರೇನು ನಿರ್ಧಾರ ಮಾಡಿರುವರೆಂಬುದರ ಬಗೆಗೆ ಮಾಹಿತಿ ಪಡೆಯಲು ಸಾಧ್ಯವಾಯಿತು. ಅದರಲ್ಲಿ ಸಬ್‌ಇನ್‌ಸ್ಪೆಕ್ಟರ್ ಬಸವಯ್ಯ ಆಸ್ಪತ್ರೆಯವರ ನಡೆವಳಿಕೆಯಲ್ಲೇನೋ

ಕುಂದು ಇರುವಂತಿದೆ ಎಂಬ ಅಭಿಪ್ರಾಯಪಟ್ಟಿದ್ದರೆಂಬುದು ತಿಳಿದು ಬಂದಿತು! ಇದರ ಹಿಂದೆ ಪತ್ರಿಕಾ ಸಂಪಾದಕರ ಕೈವಾಡವಿತ್ತೆಂಬುದರ ಬಗೆಗೆ ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

ಸಬ್‌ಇನ್ಸ್‌ಪೆಕ್ಟರ್‌ರಿಗೆ ತೀವ್ರ ಹೃದಯಾಘಾತವಾಗಿ ಬಹಳ ದಿನ ಆಸ್ಪತ್ರೆಯಲ್ಲಿರ ಬೇಕಾಯಿತು. ಜಿಲ್ಲಾ ಪೋಲೀಸ್ ಅಧಿಕಾರಿಗಳು ಅವರ ಪರಿಸ್ಥಿತಿಯ ಬಗೆಗೆ ಡಿ.ಎಂ.ಓ. ಅವರಿಗೆ ಪತ್ರ ಬರೆದು ಬಸವಯ್ಯನವರು ಮುಂದೆ ಸಬ್‌ಇನ್ಸ್‌ಪೆಕ್ಟರಾಗಿ ಕಾರ್ಯ ನಿರ್ವಹಿಸಲು ಅರ್ಹರಾಗಬಹುದೇ ಎಂದು ವಿಚಾರಿಸಿದರು. ಡಿ.ಎಂ.ಓ. ಅವರು ಡಾ॥ ಮಹದೇವ್ ಅವರಿಂದ ಆ ಬಗೆಗೆ ಲಿಖಿತ ಅಭಿಪ್ರಾಯ ತರಿಸಿಕೊಂಡು, ಬಸವಯ್ಯನವರು ಕಾಯಿಲೆಯಿಂದ ಗುಣಮುಖ ರಾಗಬಹುದಾದರೂ ಸಬ್‌ಇನ್ಸ್‌ಪೆಕ್ಟರ್‌ರಂಥ ಬಿರುಸಿನ ದೈಹಿಕ ಚಟುವಟಿಕೆಯ ಕೆಲಸ ಕಾರ್ಯಗಳನ್ನು ನಿಭಾಯಿಸಲು ಶಕ್ತರಾಗಲಾರರೆಂಬ ಅಭಿಪ್ರಾಯದ ಉತ್ತರ ನೀಡಿದರು.

ನಂತರದ ಕೆಲವು ದಿನಗಳಲ್ಲಿ ಬಸವಯ್ಯನವರು ಸಬ್‌ಇನ್ಸ್‌ಪೆಕ್ಟರಾಗಿ ನಗರದಲ್ಲಿ ಕಾರ್ಯ ನಿರ್ವಹಿಸುತ್ತಿದ್ದುದು ಡಿ.ಎಂ.ಓ. ಅವರು ಗಮನಿಸಿದರಂತೆ. ಕುತೂಹಲಭರಿತರಾದ ಅವರು ಬಸವಯ್ಯನವರಿಗೆ ತಮ್ಮಿಂದ 'ಅರ್ಹತಾ ದೃಢೀಕರಣ' (Fitness Certificate) ಪಡೆಯದೇ ಹೇಗೆ ಹಿಂದಿನ ಕೆಲಸಕ್ಕೆ ನೇಮಿಸಲಾಯಿತೆಂದು ವಿಚಾರಿಸಿ ಪತ್ರ ಬರೆದರು. ಡಿ.ಎಂ.ಓ. ಅವರಿಗೆ ಉತ್ತರಿಸಿದ ಪೋಲೀಸ್ ಅಧಿಕಾರಿಗಳು ಅವರ ಆಸ್ಪತ್ರೆಯ ಆರ್.ಎಂ.ಓ. ನೀಡಿದ ದೃಢೀಕರಣ ಪ್ರಕಾರದ ಮೇಲೆಯೆ ಹಾಗೆ ಮಾಡಲಾಯಿತೆಂದು ಉತ್ತರಿಸಿದರಂತೆ. ಡಿ.ಎಂ.ಓ. ಬಸವನ ಗೌಡರು ನನ್ನನ್ನು ಕರೆಸಿ ಅದ್ಹೇಗೆ ಅಂತಹ ದೃಢೀಕರಣ ಪತ್ರವನ್ನು ನಾನು ಕೊಟ್ಟಿದ್ದೆಂದು ವಿಚಾರಿಸಿದರು. ಅಂತಹ ದೃಢೀಕರಣ ಪತ್ರ ನೀಡಿದ ನೆನಪು ನನಗಿರಲಿಲ್ಲ. ಕೂಡಲೇ ದೃಢೀಕರಣ ಪತ್ರಗಳ ದ್ವಿಪ್ರತಿಗಳ ಕಡತವನ್ನು ಹುಡುಕಿದೆ. ಆ ದೃಢೀಕರಣ ಪತ್ರ ನೀಡಿದಾಗ ನಾನು ರಜೆಯಲ್ಲಿದ್ದೆ. ಡಾ॥ ಮಹದೇವ್ ಅವರು ಬಸವಯ್ಯನವರು ದೈಹಿಕ ಶ್ರಮದ ಕೆಲಸಕಾರ್ಯಗಳಲ್ಲಿ ತೊಡಗಲು ಅರ್ಹರಾಗಿರುವರೆಂದು ನೀಡಿದ ಲಿಖಿತ ಅರ್ಹತಾ ಪತ್ರದ ಪ್ರಕಾರ, ನನ್ನ ಬದಲಿಗೆ ಕಾರ್ಯ ನಿರ್ವಹಿಸುತ್ತಿದ್ದವರು ನೀಡಿದ್ದ ಪತ್ರ ಅದಾಗಿತ್ತು. ಡಾ॥ ಮಹದೇವ್ ಹಿಂದೆ ತಾವೇ ನೀಡಿದ್ದ ಅಭಿಪ್ರಾಯವನ್ನು ಅದ್ಹೇಗೋ ಬದಲಾಯಿಸಿ ಬಿಟ್ಟಿದ್ದರು. ಅದನ್ನೆಲ್ಲಾ ಪರಿಶೀಲಿಸಿದ ಡಿ.ಎಂ.ಓ. ಅವರು ಅಂತಹ ವಿಷಯಗಳಿಗೆ ಏಕೆ ತಲೆಕೆಡಿಸಿಕೊಳ್ಳಬೇಕೆಂದು ಸುಮ್ಮನಾದರು. ಸಬ್‌ಇನ್ಸ್‌ಪೆಕ್ಟರ್ ಬಸವಯ್ಯನವರು ಇನ್ನು ಆರು ತಿಂಗಳಲ್ಲಿ ಮತ್ತೊಂದು ಸಾರಿ ತೀವ್ರ ಹೃದಯಾ ಘಾತಕ್ಕೊಳಗಾಗಿ ಅಸು ನೀಗಿದರು. ಮೇಲಿನ ಎಲ್ಲಾ ಬೆಳವಣಿಗೆ ಹಿಂದೆ ಏನೆಲ್ಲಾ ನಡೆಯುತ್ತಿದ್ದು ವೆನ್ನುವುದರ ಕನ್ನಡಿಯಂತಿತ್ತು ಸಬ್‌ಇನ್ಸ್‌ಪೆಕ್ಟ್‌ರ್‌ರ ಸಾವು!

## ಅರಿವಳಿಕೆ ವೈದ್ಯರ ಅವಾಂತರ

ಮೆಗ್ಗಾನ್ ಆಸ್ಪತ್ರೆಯಲ್ಲಿ ಕೆಲವು ವರ್ಷಗಳಿಂದ ಅರಿವಳಿಕೆ ವಿಷಯದಲ್ಲಿ ಬೆಂಗಳೂರಲ್ಲಿ ಕೆಲವು ಕಾಲ ತರಬೇತಿ ಪಡೆದ ವೈದ್ಯರೊಬ್ಬರಿದ್ದರು. ಆ ತನಕ ಬೇರಾವ ಜಿಲ್ಲಾ ಆಸ್ಪತ್ರೆಗಳಲ್ಲೂ ಅಂತಹ ತರಬೇತಿ ಪಡೆದವರಿಲ್ಲದೆ ಕೇವಲ ಆಪರೇಷನ್ ಜರುಗಿಸುವ ಶಸ್ತ್ರ ವೈದ್ಯರ ಸ್ವಂತ ಜವಾಬ್ದಾರಿಯಿಂದಲೇ ಬೇರೆಯವರಿಂದ ಅರಿವಳಿಕೆಯುಂಟು ಮಾಡುವಂತ ಪ್ರೇರಣೆ ಮಾಡ ಬೇಕಾದ ಪರಿಸ್ಥಿತಿ ಇತ್ತು; ಯಾವುದೇ ರೀತಿಯಲ್ಲಿ ಹೆಚ್ಚು ಕಡಿಮೆಯಾದರೂ ಆಪರೇಷನ್ ಜರುಗಿಸಿದವರೇ ಜವಾಬ್ದಾರರಾಗ ಬೇಕಿತ್ತು. ಡಾ॥ ಶಿವಮೂರ್ತಿ ಅಂತಹ ತರಬೇತಿ ಪಡೆದವರಲ್ಲಿ (ಡಿಗ್ರಿ, ಡಿಪ್ಲೋಮಾವಲ್ಲ) ಮೊದಲಿಗರು. ಶಿವಮೊಗ್ಗಕ್ಕೆ ಬಂದ ಮೊದಲ ಕೆಲವು ವರ್ಷಗಳಲ್ಲಿ

ದಕ್ಷರು ಹಾಗೂ ಅರಿವಳಿಕೆ ಅನುಭವವಿದ್ದವರೆಂದು ಕೇಳಿದ್ದೆ. ಅದಾಗಲೇ ಅಲ್ಲಿ ೨-೩ ಸರ್ಜಿಕಲ್ ಘಟಕಗಳಿದ್ದು ಅಲ್ಲಿಯ ಶಸ್ತ್ರ ವೈದ್ಯರಿಗೆ ಅವರಿಂದ ಒಳ್ಳೆಯ ನೆರವು ಸಿಗುತ್ತಿದೆಯೆಂದು ಪ್ರತೀತಿ ಇತ್ತು. ನಾನೂ ಶಿವಮೊಗ್ಗಕ್ಕೆ ಬರುವಷ್ಟರಲ್ಲಿ ಬಹಳಷ್ಟು ಬದಲಾವಣೆಗಳಾಗಿ ಅವರಿಂದ ಅರಿವಳಿಕೆ ಕೊಡಿಸುವುದೇ ಅಪಾಯಕರವೆಂಬ ಹಂತ ತಲುಪಿದ್ದರು. ಆಗ ಅಲ್ಲಿದ್ದ ಕೆಲವರು ಅವರ ಸಹಕಾರ ಮನೋಭಾವವನ್ನು ದುರುಪಯೋಗ ಪಡಿಸಿಕೊಂಡು ಮಧ್ಯಾಹ್ನದ ನಂತರವೂ ರೋಗಿಗಳಿಗೆ ಅರಿವಳಿಕೆ ನೀಡುವಂತೆ ಮಾಡುತ್ತಿದ್ದರಂತೆ. ಅಲ್ಲದೆ ಅಂತಹ ಸಹಕಾರದ ಕೃತಜ್ಞತೆಗೆ ಸಾಯಂಕಾಲ 'ಪಾರ್ಟಿ'ಗಳನ್ನೇರ್ಪಡಿಸಿ ಅವರಲ್ಲಿ ಮದ್ಯಪಾನಾಭ್ಯಾಸ ನೆಲೆಯೂರಿದಂತಾಗಿತ್ತು. ಬೆಳಿಗ್ಗೆ ಆಪರೇಷನ್ ಥಿಯೇಟರಿಗೆ ಬರುವಾಗಲೇ ಅಮಲೇರಿಸಿಕೊಂಡೇ ಬರುತ್ತಿದ್ದರು! ಆ ತರದ ನಡವಳಿಕೆಯಿಂದ ನನ್ನ ರೋಗಿಯೊಬ್ಬ ಆಪರೇಷನ್ ಟೇಬಲ್ ಮೇಲೆ ಅಸುನೀಗುವಂತಾಯಿತು.

ನಮ್ಮ ತಾಲ್ಲೂಕಿನ ರಾಜಕೀಯ ಪಕ್ಷವೊಂದರ ಧುರೀಣರು ತಮ್ಮ ಆಳೊಬ್ಬನನ್ನು ಚಿಕಿತ್ಸೆಗಾಗಿ ನನ್ನ ಬಳಿ ಕರೆತಂದಿದ್ದರು. ಅವರು ಹಿಂದೆ ನನ್ನ ಬಗೆಗೆ ಕೇಳಿದ್ದು ಒಳ್ಳೆಯ ಅಭಿಮಾನ ಇಟ್ಟುಕೊಂಡವರಾದರೂ ಆ ತನಕ ಭೇಟಿಯಾಗಿರಲಿಲ್ಲ. ಸುಮಾರು ೨೫ ವರ್ಷದ ಯುವಕನಿಗೆ ಜಠರದ ಹುಣ್ಣು ಇರುವುದು ಖಾತರಿಯಾಯಿತು. ಅದಾಗಲೆ ೩-೪ ವರ್ಷ ಮೆಡಿಕಲ್ ಚಿಕಿತ್ಸೆ ಮಾಡಿಸಿದ್ದರು. ಉತ್ತಮವಾಗಿರಲಿಲ್ಲವಾದುದರಿಂದ ಆಪರೇಷನ್ ಮಾಡಿಸುವ ಸಲಹೆ ಮಾಡಿದೆ. ರೋಗಿಯ ಕಡೆಯವರು ಅಂತಹ ಉಗ್ರ ರೀತಿಯ ಚಿಕಿತ್ಸೆಗೆ ತಯಾರಿದ್ದಂತಿರಲಿಲ್ಲ. ಆದರೆ ತಮ್ಮ ದಣಿಯವರ ಭರವಸೆಯಂತೆ ಅದಕ್ಕೊಪ್ಪಿದರು. ಒಂದು ದಿನ ಆಪರೇಷನ್ ಜರುಗಿಸಿದೆ. ಡಾ|| ಶಿವಮೂರ್ತಿಯವರೇ ಪ್ರಜ್ಞೆ ತಪ್ಪಿಸುವ ಅರಿವಳಿಕೆ ನೀಡಿದರು. ಹುಣ್ಣಿರುವುದು ಖಚಿತ ಪಟ್ಟಿತು. ಅದಕ್ಕೆ ಸೂಕ್ತವೆನಿಸಿದ ಆಪರೇಷನ್ ಸಹ ಯಾವುದೇ ಅಡೆತಡೆಗಳಾಗದೆ ಜರುಗಿತು. ಇನ್ನೇನು ಉದರಕೋಶದ ಭಿತ್ತಿಗಳನ್ನು ಸೇರಿಸಿ ಹೊಲಿಗೆ ಹಾಕಲು ಪ್ರಾರಂಭಿಸಿದ್ದೆ, ಅಷ್ಟರಲ್ಲಿ ಅವನ ರಕ್ತ ನೀಲಿ ಬಣ್ಣಕ್ಕೆ ತಿರುಗುತ್ತಿದೆಯೆನಿಸಿತು. ತಲೆಕಡೆ ತಿರುಗಿ ಅರಿವಳಿಕೆ ನೀಡುತ್ತಿದ್ದ ವೈದ್ಯರ ಗಮನ ಸೆಳೆಯಲು ನೋಡಿದೆ. ಆದರೆ ಡಾ|| ಶಿವಮೂರ್ತಿಯವರು ಅಲ್ಲಿ ನಾಪತ್ತೆಯಾಗಿದ್ದರು! ರೋಗಿಯನ್ನು ನೋಡಿಕೊಳ್ಳುತ್ತಿರುವಂತೆ ದಾದಿಯೊಬ್ಬರಿಗೆ ಹೇಳಿ ಅವರು ಹೊರಗೆ ಹೋಗಿದ್ದ ರಂತೆ. ಕೂಡಲೇ ಗಲಾಟೆಯೆಬ್ಬಿಸಿ ಅವರನ್ನು ಕರೆತರುವಂತೆ ಕೂಗಾಡಿದೆ. ಕುಡಿಯುವುದಕ್ಕಾಗಿ ಬಸ್‌ಸ್ಟ್ಯಾಂಡಿಗೆ ಹೋದವರು ಆಗ ತಾನೇ ಮೆಟ್ಟಿಲು ಹತ್ತಿ ಆಸ್ಪತ್ರೆಗೆ ಬರುತ್ತಿದ್ದರಂತೆ. ಅವರು ಬಂದು ನೋಡುವಷ್ಟರಲ್ಲಿ ರೋಗಿ ಹಿಂದಿರುಗಿ ಬರಲಾರದ ಸ್ಥಿತಿಯನ್ನು ತಲುಪಿಯಾಗಿತ್ತು. ಹೃದಯ ಶ್ವಾಸಕೋಶಗಳ ಕಾರ್ಯವನ್ನು ಪುನಶ್ಚೇತನಗೊಳಿಸಲು ಸಾಧ್ಯವಾದ ಪ್ರಯತ್ನಗಳನ್ನೆಲ್ಲಾ ಮಾಡಿದೆವು. ಆದರೆ ಅವನನ್ನು ಬದುಕಿಸಲು ಸಾಧ್ಯವಾಗಲಿಲ್ಲ.

ಡಾ|| ಶಿವಮೂರ್ತಿಯವರ ಮೇಲೆ ಹರಿಹಾಯ್ದು ತರಾಟೆಗೆ ತೆಗೆದುಕೊಂಡೆ. ಆದರೆ ಅದನ್ನೆಲ್ಲಾ ಗಮನಕ್ಕೆ ತೆಗೆದುಕೊಳ್ಳುವ ಸ್ಥಿತಿಯಲ್ಲಿರಲಿಲ್ಲ. ತಲೆ ಕೆಳಗೆ ಮಾಡಿ ನಿಂತು ಬಿಟ್ಟರು. ಹೊರಗಡೆ ಬಂದಾಗ ರೋಗಿಯ ಕಡೆಯವರಿಗೆ ವಿಷಯ ತಿಳಿಸಿದಾಗ ನನ್ನ ಪರಿಸ್ಥಿತಿ ಏನಾಗಿರ ಬೇಡ? ನನ್ನ ಭರವಸೆಯಿಂದ ಆಪರೇಷನ್ ಮಾಡಿಸಿದ ಧುರೀಣರು ತಮ್ಮ ನಿರಾಶೆಯನ್ನು ವ್ಯಕ್ತ ಪಡಿಸಿದರು. ಏನೇನೋ ಸಬೂಬು ಹೇಳಿ ಮೃತ ದೇಹವನ್ನು ಕಳುಹಿಸಿಕೊಡುವಲ್ಲಿ ಸಾಕು ಸಾಕಾಗಿ ಹೋಯಿತು.

ಆ ದಿನ ಆಪರೇಷನ್ ಥಿಯೇಟರಿನಲ್ಲಿ ಜರುಗಿದ ದುರಂತದ ಬಗೆಗೆ ಡಿ.ಎಂ.ಓ. ಬಸವನ ಗೌಡರಿಗೆ ವರದಿ ಮಾಡಿದೆ. ಅವರು ಆಪರೇಷನ್ ಮಾಡುವಾಗಲೂ ಡಾ|| ಶಿವಮೂರ್ತಿ

ಅಂತಹ ಪರಿಸ್ಥಿತಿಯಲ್ಲಿದ್ದುದನ್ನು ಗಮನಿಸಿದ್ದರಂತೆ. ಅವರನ್ನು ಕಚೇರಿಗೆ ಕರೆಸಿ ಎಚ್ಚರಿಕೆ ನೀಡಿದ್ದಲ್ಲದೆ, ಇಲಾಖಾ ವರಿಷ್ಠರಿಗೂ ಅವರ ಬಗೆಗೆ ದೂರು ನೀಡಿದ್ದರಂತೆ. ನನ್ನ ಪ್ರಕರಣದ ನಂತರ ಸ್ವಲ್ಪ ಕಟುವಾದ ವರದಿ ಹೋಯಿತು. ಒಂದೆರಡು ತಿಂಗಳಲ್ಲಿ ಅವರಿಗೆ ಬೆಂಗಳೂರಿನ ದೊಡ್ಡಾಸ್ಪತ್ರೆಗೆ ವರ್ಗವಾಯಿತು. ಅಲ್ಲಿ ತುರ್ತು ಪರಿಸ್ಥಿತಿಗಳ ಸಂದರ್ಭದಲ್ಲಿ ಅರಿವಳಿಕೆ ನೀಡುವ ಸರದಿಯ ಕೆಲಸಕ್ಕೆ ನೇಮಕ ಮಾಡಿದ್ದರಂತೆ! ಮತ್ತೂ ಕೆಲವು ಸಂದರ್ಭಗಳಲ್ಲಿ ಅವರ ಅಂತಹ ನಡೆವಳಿಕೆಯಿಂದ ತೊಂದರೆಗಳಾಗುತ್ತಿದ್ದವಂತೆ. ಅದರಿಂದಾಗಿ ಕೆಲ ಸಮಯ ಅಮಾನತ್ತಿನಲ್ಲಿ ಇಟ್ಟಿದ್ದರಂತೆ. ಮುಂದೆ ಕೆಲವೇ ತಿಂಗಳುಗಳಲ್ಲಿ ಅವರ ಇಹಯಾತ್ರೆ ಮುಗಿಯಿತೆಂದು ತಿಳಿದು ಬಂದಿತು. ಒಳ್ಳೆಯ ನಡವಳಿಕೆಯವರೊಬ್ಬರು ಮದ್ಯಪಾನದಂಥ ಚಟ ಬೆಳಸಿಕೊಂಡರೆ ಪರಿಣಾಮ ಗಳೇನಾಗಬಹುದೆಂಬುದಕ್ಕೆ ಇದಕ್ಕಿಂತ ಬೇರೆ ನಿದರ್ಶನ ಬೇಕಿಲ್ಲ.

## ರಣರಂಗದಂತಾದ ಆಸ್ಪತ್ರೆ

'ಎಂಟರ್ ದ ಡ್ರೇಗನ್' (Enter the Dragon) ಎಂಬ ಇಂಗ್ಲಿಷ್ ಚಲನಚಿತ್ರವೊಂದು ೧೯೭೦ರ ದಶಕದ ಕಡೆಯ ವರ್ಷಗಳಲ್ಲಿ ಬಹು ಜನಾಕರ್ಷಕ ಮನರಂಜನೆಯ ಕೇಂದ್ರವಾಗಿದ್ದು ನೆನಪಿರಬಹುದು. ಯುವಜನರಂತೂ ಪತಂಗದ ಹುಳುಗಳಂತೆ ಅದನ್ನು ನೂರಾರು ಸಾರಿ ವೀಕ್ಷಿಸಿ ಉನ್ಮತ್ತರಾಗುತ್ತಿದ್ದರು. ಭದ್ರಾವತಿಯ ಕುಟುಂಬವೊಂದರ ೧೦-೧೨ ವರ್ಷದ ಬಾಲಕ ಸದಾ ಅದರ ಭ್ರಾಂತಿಯಲ್ಲೇ ತೇಲಾಡುತ್ತಿದ್ದವನಂತೆ ವರ್ತಿಸುತ್ತಿದ್ದನಂತೆ. ಒಂದು ಸಾಯಂಕಾಲ ಅವರ ಕುಟುಂಬದ ತಂದೆ, ತಾಯಿ, ಅಜ್ಜಿಯೂ ಸೇರಿದಂತೆ ೬-೮ ಜನ ಸಿನೆಮಾವೊಂದಕ್ಕೆ ಹೋಗುವ ಸಲುವಾಗಿ ಕಾರು ಹತ್ತುವುದರಲ್ಲಿದ್ದರಂತೆ. ಈ ಬಾಲಕ ಯಾವುದೋ ವಿಚಾರದಲ್ಲಿ ತರಲೆ ಮಾಡಿ ಪೀಡಿಸಲಾರಂಭಿಸಿದ್ದ. ತನ್ನ ಬೇಡಿಕೆ ಈಡೇರಲಾಗದೆನಿಸಿದಾಗ, ಮೊದಲೇ ಬಚ್ಚಿಟ್ಟುಕೊಂಡಿದ್ದ ಡ್ರೇಗನ್ ಸಿನೆಮಾದ ನಾಯಕ ಬಳಸುತ್ತಿದ್ದ ವಿಶಿಷ್ಟ ರೀತಿಯ ಚಾಕುವನ್ನು ಹೊರತೆಗೆದು ಮುಖ ಮೋರೆ ನೋಡದೆ ಅಲ್ಲಿದ್ದವರನ್ನೆಲ್ಲಾ ತಿವಿದು ಗಾಯಗೊಳಿಸಿದನಂತೆ.

ರಾತ್ರಿ ಸುಮಾರು ಎಂಟೂವರೆ ಗಂಟೆಗೆ ಒಂದೇ ಸಾರಿಗೆ ಹಲವು ಗಾಯಾಳುಗಳನ್ನು ಮೆಗ್ಗಾನ್ ಆಸ್ಪತ್ರೆಗೆ ತಂದು ಇಳಿಸಿದರು. ವಿಷಯ ತಿಳಿದಾಕ್ಷಣ ನಾನೂ ಧಾವಿಸಿದೆ; ಅದೊಂದು ರಣರಂಗದ ಆಸ್ಪತ್ರೆಯೋ ಎನ್ನಿಸುವ ದೃಶ್ಯವೇರ್ಪಟ್ಟಿತ್ತು. ಕೆಲವರಂತೂ ಕೊನೆಯುಸಿರೆಳೆಯುವ ಹಂತದಲ್ಲಿದ್ದರು. ರಾತ್ರಿ ಸಮಯವಾದ್ದರಿಂದ ಸಿಬ್ಬಂದಿಗಳ ಕೊರತೆ ಬೇರೆ. ಕೆಲವು ವರ್ಷಗಳ ಹಿಂದೆ ಆಸ್ಪತ್ರೆಯ ಆವರಣದಲ್ಲೇ ಎಲ್ಲಾ ವೈದ್ಯರು ಮತ್ತು ಇತರ ವರ್ಗದವರಿಗೆ ವಸತಿಗಳು ನಿರ್ಮಾಣವಾಗಿದ್ದವು. ಅದರಿಂದಾಗಿ ಬಹುಪಾಲು ವೈದ್ಯರು ಮತ್ತಿತರ ಸಿಬ್ಬಂದಿಗಳನ್ನು ಕೂಡಲೇ ಆಸ್ಪತ್ರೆಗೆ ಕರೆಸಲು ಸಾಧ್ಯವಾಯಿತು. ರೋಗಿಗಳ ಸಂಬಂಧಿಕರೂ ಸಮಾಜದಲ್ಲಿ ವರ್ಚಸ್ಸಿನವರಾಗಿದ್ದು ರಾತ್ರಿಯೆಲ್ಲಾ ಸಾಕಷ್ಟು ರಕ್ತ ಮತ್ತಿತರ ಅವಶ್ಯಕತೆಗಳನ್ನು ಒದಗಿಸಿದರು. ಪ್ರತಿಯೊಂದು ಗಾಯಾಳುವಿನ ಪರಿಸ್ಥಿತಿಯನ್ನು ನಿರ್ಧರಿಸಿ, ಅವರ ಸ್ಥಿತಿಯನ್ನು ಸುಧಾರಿಸಲು ಸೂಕ್ತ ಬೆಂಬಲೋಪಚಾರ ವಿಧಾನಗಳನ್ನು ಅಳವಡಿಸಿದೆವು.

ಸುಮಾರು ಹತ್ತೂವರೆ ಗಂಟೆ ಸಮಯಕ್ಕೆ ಮೊದಲ ಗಾಯಾಳುಗಳನ್ನು ಓ.ಟಿ. ಒಳಗಡೆ ಕೊಂಡೊಯ್ಯಲು ಸಾಧ್ಯವಾಯಿತು. ಆಸ್ಪತ್ರೆಯಲ್ಲಿದ್ದ ಇನ್ನೊಬ್ಬ ಸರ್ಜನ್ ಡಾ|| ವೆಂಕಟಗಿರಿಯಪ್ಪ ಮತ್ತು ನಾನು ಒಂದೊಂದು ಟೇಬಲ್‌ಗಳ ಮೇಲೆ ಗಾಯಾಳುಗಳ ಆಪರೇಷನ್ ಕಾರ್ಯದಲ್ಲಿ ನಿರತರಾದೆವು. ಪ್ರತಿಯೊಬ್ಬರಿಗೂ ಹೊಟ್ಟೆಯ ಭಾಗದಲ್ಲೇ ಹೆಚ್ಚಿನ ತಿವಿತಗಳಾಗಿದ್ದು ಜಠರ,

ಕರುಳು, ಲಿವರ್, ಪಾನ್‌ಕ್ರಿಯಾಸ್ ಗ್ರಂಥಿ ಮುಂತಾದವುಗಳಲ್ಲಿ ಇರಿತದಿಂದ ತೂತುಗಳಾಗಿದ್ದವು. ಅವುಗಳನ್ನೆಲ್ಲಾ ವ್ಯವಸ್ಥಿತ ರೀತಿಯಲ್ಲಿ ಮುಚ್ಚಿದೆವು. ಮುಂದಿನ ಗಾಯಾಳುವನ್ನು ಟೇಬಲ್ಲಿಗೆ ತರುವಷ್ಟರಲ್ಲೇ ನಾನು ಹೊರಗಡೆ ಬಂದು ಆಸ್ಪತ್ರೆಯಲ್ಲಾಗ ಬೇಕಾದ ವ್ಯವಸ್ಥೆಗಳ ಬಗೆಗೆ ನಿಗಾವಹಿಸ ಬೇಕಾಗುತ್ತಿತ್ತು. ಪೋಲೀಸರ ದಂಡೇ ಆಸ್ಪತ್ರೆಗೆ ಬಂದಿದ್ದು ವಾರ್ಡುಗಳಲ್ಲಿ ಗಾಯಾಳುಗಳ ಹೇಳಿಕೆಗಳನ್ನು ದಾಖಲು ಮಾಡಿಕೊಳ್ಳುತ್ತಿದ್ದರು. ಅಂತಹ ಹೇಳಿಕೆಗಳಿಗೆ ಸಾಕ್ಷಿಯಾಗಿ ರುಜು ಹಾಕುತ್ತಲೂ ಇದ್ದೆ. ಬೆಳಗಿನ ಜಾವದ ಹೊತ್ತಿಗೆ ನಾವು ಒಬ್ಬೊಬ್ಬರು ೨-೩ ಜನ ಗಾಯಾಳುಗಳಿಗೆ ಆಪರೇಷನ್ ಮಾಡಿದ್ದೆವು. ಹಿಂದಿನ ದಿನ ರಜೆಯಲ್ಲಿದ್ದ ಆಸ್ಪತ್ರೆಯ ಇನ್ನೊಬ್ಬ ಸರ್ಜನ್ ಡಾ|| ಎಚ್. ಶ್ರೀನಿವಾಸ್ ರಾತ್ರಿ ಹಿಂತಿರುಗಿದಾಗ ಸುದ್ದಿ ತಿಳಿದು ಅವರೂ ಬಂದು ನಮ್ಮನ್ನು ಸೇರಿಕೊಂಡು ಕೆಲವರಿಗೆ ಆಪರೇಷನ್ ಮಾಡಿದರು.

ಮರುದಿನ ಕೆಲವರ ಪರಿಸ್ಥಿತಿ ವಿಕೋಪಕ್ಕೆ ತಿರುಗಲಾರಂಭಿಸಿತು; ಅವರಲ್ಲಿ ೨-೩ ಜನ ಅಸುನೀಗಿದರು. ಸಾವಿನ ಅಂಚಿನಲ್ಲಿರುವವರ 'ಅಂತಿಮ ಹೇಳಿಕೆ' (Dying Declaration) ತಾಲ್ಲೂಕು ಮ್ಯಾಜಿಸ್ಟ್ರೇಟರ ಸಮ್ಮುಖದಲ್ಲಿ ದಾಖಲಾಗುತ್ತಿದ್ದು ಅಂತಹ ಸಂದರ್ಭಗಳಲ್ಲಿ ನಾನೂ ಹಾಜರಿದ್ದು ಪ್ರಮಾಣೀಕರಿಸಿ ರುಜು ಹಾಕುತ್ತಿದ್ದೆ. ಹಾಗಾಗಿ ಇತರ ಎಲ್ಲಾ ವೈದ್ಯರು ಸಾಯಂಕಾಲದ ಹೊತ್ತಿಗೆ ಆಸ್ಪತ್ರೆಯಿಂದ ಹೊರಟು ಹೋದರೂ ಆರ್.ಎಂ.ಓ. ಕರ್ತವ್ಯ ನಿರತನಾದ ನಾನು ಮನೆಗೆ ಹಿಂದಿರುಗಿದ್ದು ರಾತ್ರಿ ಎಂಟು ಗಂಟೆಯ ಹೊತ್ತಿಗೆ.

ಸೆಷೆನ್ಸ್ ನ್ಯಾಯಾಲಯದಲ್ಲಿ ಈ ಪ್ರಕರಣ ಸುಮಾರು ಒಂದು ವರ್ಷದ ನಂತರ ವಿಚಾರಣೆಗೆ ಬಂದಿತು. ಎರಡು ದಿನಗಳು ಕೋರ್ಟಿನಲ್ಲಿ ಹಾಜರಿದ್ದು ಸಾಕ್ಷ್ಯ ನೀಡಿದೆ. ವಕೀಲರು ತಮ್ಮ ಕಲ್ಪನಾ ಶಕ್ತಿಗಳನ್ನೆಲ್ಲಾ ಪ್ರಯೋಗಿಸಿ ಪ್ರಶ್ನೆಗಳನ್ನು ಕೇಳುತ್ತಿದ್ದರು. ಅವುಗಳಲ್ಲಿ ಆ ರಾತ್ರಿ ಓ.ಟಿ.ಯಲ್ಲಿ ಕಾರ್ಯನಿರತನಾಗಿದ್ದವನು ನಡುವೆ ಕೆಲವು ಗಾಯಾಳುಗಳ ಹೇಳಿಕೆಗಳಿಗೆ ಸಾಕ್ಷಿಯಾಗಿ ರುಜು ಹಾಕಿದ್ದು ಅಸಂಭವವೆಂದೂ, ಮತ್ತೆ ಕೆಲವು ರೋಗಿಗಳು ಸಾಯುವ ಹಂತದಲ್ಲಿದ್ದಾಗ ಅವೇಳೆಯಲ್ಲಿ ನಾನು ಹಾಜರಿದ್ದು ಪ್ರಮಾಣೀಕರಿಸಿದ್ದೂ ಸುಳ್ಳೆಂದು ವಾದಿಸ ತೊಡಗಿದರು. ಆಸ್ಪತ್ರೆಯಲ್ಲಿ ಇತರರಂತೆ ಕರ್ತವ್ಯ ನಡೆಸುವುದು ಮೇಲ್ನೋಟಕ್ಕೆ ಸರಿಯೆನಿಸಿದರೂ ರೆಸಿಡೆಂಟ್ ಮೆಡಿಕಲ್ ಆಫೀಸರ್ ಹುದ್ದೆಯಿಂದಾಗಿ ದಿನದ ಇಪ್ಪತ್ತನಾಲ್ಕು ಗಂಟೆಗಳೂ (ವಿಶೇಷವಾಗಿ ರಜೆ ಪಡೆದುಕೊಂಡು ಹೋದ ಸಂದರ್ಭಗಳನ್ನು ಹೊರತುಪಡಿಸಿ) ನಾನೂ ಕಾರ್ಯನಿರತನಾಗಿರಬೇಕಾಗುತ್ತದೆ. ಅಂತಹ ಜವಾಬ್ದಾರಿಯಿದ್ದಾಗ ನಾನು ಇತರರಂತೆ ನಿಯಮಕ್ಕನುಸಾರ ಮಾತ್ರ ಕೆಲಸ ನಿರ್ವಹಿಸುವುದಕ್ಕಾಗದು ಎಂದೆಲ್ಲಾ ವಿವರಣೆಗಳನ್ನು ನೀಡಬೇಕಾಯಿತು. ಸೆಷೆನ್ಸ್ ನ್ಯಾಯಾಧೀಶರಿಗೆ ನಾನು ಹೇಳುತ್ತಿರುವುದರ ಬಗೆಗೆ ಮನವರಿಕೆಯಾಗಿರಬೇಕು. ಅಪಾದಿತರ ವಕೀಲರನ್ನುದ್ದೇಶಿಸಿ, ಆಸ್ಪತ್ರೆಯಂಥ ಸಂಸ್ಥೆಗಳ ಆರ್.ಎಂ.ಓ. ಅಂತಹವರ ಗುರುತರ ಜವಾಬ್ದಾರಿಗಳ ಬಗೆಗೆ ಸರಿಯಾಗಿ ತಿಳಿದುಕೊಳ್ಳದೆ ಕಾಲ್ಪನಿಕ ಊಹಾಪೋಹಗಳಿಂದ ಮನಬಂದಂತೆ ಪ್ರಶ್ನೆಗಳನ್ನು ಮುಂದುವರಿಸುವುದು ಸರಿಯಲ್ಲವೆಂದು ಛೇಡಿಸಿದರು.

## ವಿಶಿಷ್ಟ ಸನ್ನಿವೇಶದ ಮರು-ಶವಪರೀಕ್ಷೆ

ಶಿವಮೊಗ್ಗಾದ ಹತ್ತಿರದ ಹಳ್ಳಿಯೊಂದರಲ್ಲಿ ಅನುಮಾನಾಸ್ಪದ ರೀತಿಯಲ್ಲಿ ವ್ಯಕ್ತಿಯೊಬ್ಬ ಸಾವನಪ್ಪಿದ್ದ. ಪೋಲೀಸ್ ತನಿಖೆಗೊಳಪಟ್ಟಿದ್ದ ಆ ಪ್ರಕರಣದಲ್ಲಿ ಸ್ಥಳೀಯ ಆಸ್ಪತ್ರೆಯ ವೈದ್ಯರು ಅಂದು ಬೆಳಿಗ್ಗೆ ಶವ ಪರೀಕ್ಷೆ ಜರುಗಿಸಿದ್ದರು. ಆ ವೈದ್ಯರು ಸರಿಯಾದ

ರೀತಿಯಲ್ಲಿ ಶವ ಪರೀಕ್ಷೆ ಮಾಡಿಲ್ಲವೆಂದು ಜನರು ತಕರಾರು ಮಾಡಿದರು. ಶಿವಮೊಗ್ಗಾದಿಂದ ಡಿ.ಎಂ.ಓ. ಅವರನ್ನು ಕರೆಸಿ ಮತ್ತೊಮ್ಮೆ ಶವ ಪರೀಕ್ಷೆ ಜರುಗಿಸಬೇಕೆಂದು ಗಲಾಟೆ ಮಾಡಲಾರಂಭಿಸಿದರು. ಸ್ಥಳಕ್ಕೆ ಭೇಟಿ ಕೊಟ್ಟ ಜಿಲ್ಲಾ ವರಿಷ್ಠ ಪೋಲೀಸ್ ಅಧಿಕಾರಿ (ಎಸ್.ಪಿ.) ಅದಕ್ಕೊಪ್ಪದಿದ್ದರೆ ಪರಿಸ್ಥಿತಿ ವಿಕೋಪಕ್ಕೆ ತಿರುಗಬಹುದೆಂದು ನಿರ್ಧರಿಸಿದರು; ಡಿ.ಎಂ.ಓ. ಅವರನ್ನೇ ಕರೆದುಕೊಂಡು ಹೋಗುವ ಸಲುವಾಗಿ ಆಸ್ಪತ್ರೆಗೆ ಬಂದರು. ಆಗಿನ ಡಿ.ಎಂ.ಓ. ಡಾ. ಕರುಣಾ ಪ್ರಸಾದ್ ಕೆಲ ಸಮಯ ರಜೆಯಲ್ಲಿದ್ದು ನಾನೇ ಬದಲಿ ಕಾರ್ಯ ನಿರ್ವಹಿಸುತ್ತಿದ್ದೆ. ನಾನು ಬದಲಿ ಡಿ.ಎಂ.ಓ. ಆಗಿರುವುದನ್ನರಿತು, ನಾನೇ ಬಂದು ಮರು-ಶವಪರೀಕ್ಷೆ (Re-postmortem) ಮಾಡಬೇಕೆಂದು ಒತ್ತಾಯ ಮಾಡಿದರು. ನಮ್ಮಿಬ್ಬರ ನಡುವೆ ಒಳ್ಳೆಯ ಸ್ನೇಹ ಸಂಬಂಧವಿದ್ದು ನಾನೂ ಸಹ ಆ ರೀತಿ ಮಾಡುವುದು ಕಾನೂನಿಗೆ ವಿರುದ್ಧವಾಗುತ್ತದೆಂದು ವಾದಿಸಿದೆ. ಒಂದು ಸಾರಿ ಶವಪರೀಕ್ಷೆ ಮಾಡಿದ್ದ ಹೆಣವನ್ನು ಮರುಪರೀಕ್ಷೆಗೊಳಪಡಿಸಬೇಕಾದರೆ ಮ್ಯಾಜಿಸ್ಟ್ರೇಟರಿಂದ ತನಿಖೆ ನಡದೇ ಅವರ ಆದೇಶದನ್ವಯ ಶವವನ್ನು ಹೊರತೆಗೆದು - ಎಕ್ಸ್‌ಹ್ಯುಮೇಶನ್ (Exhumation)- ಮತ್ತೆ ಪರೀಕ್ಷೆ ಮಾಡುವುದಕ್ಕೆ ಕಾನೂನಿನಲ್ಲಿ ಅವಕಾಶ ಇದೆಯೇ ಹೊರತು, ಅದೇ ದಿನ ಪರೀಕ್ಷೆಗೊಳಗಾದ ಹೆಣವನ್ನು ಮತ್ತೊಂದು ಸಾರಿ ಪರೀಕ್ಷೆ ಮಾಡಲಾಗುವುದಿಲ್ಲವೆಂದು ಪಟ್ಟು ಹಿಡಿದೆ. ಎಸ್.ಪಿ. ಯವರು ಅದನ್ನೆಲ್ಲಾ ಒಪ್ಪದೆ, ಆ ಊರಲ್ಲಿ ಪ್ರಸ್ತುತ ಸತ್ತ ಒಬ್ಬನ ಬದಲು ಇನ್ನೂ ಕೆಲವು ಹೆಣಗಳುರುಳುವ ಪರಿಸ್ಥಿತಿ ನಿರ್ಮಾಣವಾಗಿದೆ ಎಂತಲೂ ಅದನ್ನು ತಪ್ಪಿಸಲು ನಾನೀಗ ಅವರ ಜೊತೆ ಅಲ್ಲಿಗೆ ಹೋಗಿ ಮತ್ತೊಮ್ಮೆ ಪರೀಕ್ಷೆ ಮಾಡಲೇ ಬೇಕೆಂದು ವಾದಿಸಿದರು; ಅಲ್ಲದೆ ಕಾನೂನಿನ ತೊಡಕುಗಳನ್ನು ನಂತರ ಪರಿಹರಿಸಿಕೊಳ್ಳ ಬಹುದು ಎಂದು ಹೇಳಿ ಆ ಬಗೆಗೆ ಅಧಿಕೃತ ಕೋರಿಕೆ ಪತ್ರವನ್ನು ಕೊಟ್ಟರು. ಬೇರಾವ ವಾದ-ವಿವಾದಗಳಿಗೆ ಎಡೆಯಿಲ್ಲದ್ದರಿಂದ ನಾನು ಅವರನ್ನು ಹಿಂಬಾಲಿಸಲೇ ಬೇಕಾಯಿತು.

ಸ್ಥಳೀಯ ವೈದ್ಯರು ಬಹುಶಃ ವ್ಯಕ್ತಿಯ ಶವ ಬಿದ್ದಿದ್ದ ಜಾಗದಲ್ಲೇ ಪರೀಕ್ಷೆ ಜರುಗಿಸಿದ್ದಿರ ಬೇಕು. ಪೊದೆಗಳಿಂದ ಸುತ್ತುವರಿದ ಸ್ವಲ್ಪ ತೆರಪಾದ ಜಾಗದಲ್ಲಿ ಹೆಣವಿತ್ತು; ಹುಲ್ಲು ಮುಚ್ಚಿ ಹೊರಗೆ ಕಾಣದಂತೆ ಮಾಡಿದ್ದರು. ಅಪಾರ ಜನಸ್ತೋಮ ಅದನ್ನು ಸುತ್ತುವರಿದಿತ್ತು. ಶವ ಪರೀಕ್ಷೆ ಜರುಗುವಾಗ ಹತ್ತಿರದಲ್ಲಿ ಜನರಿರ ಬಾರದೆಂದು ಎಸ್.ಪಿ. ಯವರನ್ನು ಕೇಳಿಕೊಂಡೆ. ಪೋಲೀಸ್ ಪೇದೆಗಳು ಅವರೆಲ್ಲಾ ದೂರ ಸರಿಯುವಂತೆ ಮಾಡಿದರು. ನನ್ನ ಸಹಾಯಕ ಹುಲ್ಲನ್ನೆಲ್ಲಾ ತೆಗೆದು ಹಾಕಿ ಸ್ವಚ್ಛಗೊಳಿಸಿದ. ಎಸ್.ಪಿ. ಯವರು ತುಸು ದೂರದಲ್ಲಿ ನಿಂತುಕೊಂಡು ನಮ್ಮ ಕಾರ್ಯಗಳನ್ನು ವೀಕ್ಷಿಸುತ್ತಿದ್ದರು. ಅವರೂ ಸಹ ಇತರರ ಹಾಗೆ ದೂರದಲ್ಲಿ ನಿಂತುಕೊಳ್ಳಬೇಕೆಂದು ಕೇಳಿಕೊಂಡೆ. ಅಚ್ಚರಿಯಿಂದ ಅದೇಕೆಂದು ವಿಚಾರಿಸಿದರು. ಬೆಳಿಗ್ಗೆ ಒಬ್ಬರು ಮಾಡಿದ ಶವ ಪರೀಕ್ಷೆ ಸರಿಯಾಗಿಲ್ಲವೆಂದು ಈಗ ಮರು-ಪರೀಕ್ಷೆ ಮಾಡುವಂತಾಗಿದೆ. ಈ ಪರೀಕ್ಷೆ ಸಮಯದಲ್ಲಿ ಎಸ್.ಪಿ. ಸಾಹೇಬರೇ ಹತ್ತಿರ ನಿಂತುಕೊಂಡು ಅವರಿಗಿಷ್ಟ ಬಂದಂತೆ ಹೇಳಿ ಪರೀಕ್ಷೆ ಮಾಡಿಸಿ, ವರದಿ ತಯಾರಾಯಿತೆಂದು ಮತ್ತೊಂದು ಹುಯಿಲೆಬ್ಬಿಸುತ್ತಾರೆ; ಆಗೇನು ಮಾಡುತ್ತೀರೆಂದು ಹೇಳಿ ಅವರನ್ನೇ ಪೇಚಿಗೆ ಸಿಕ್ಕಿಸಿದೆ. ನಾನು ಹೇಳುವುದೂ ಒಂದು ರೀತಿಯಲ್ಲಿ ಸರಿಯೆನಿಸಿರಬೇಕು. ಮುಗುಳ್ನಕ್ಕ ಅವರೂ ಜನ ಸಮೂಹ ನಿಂತಿರುವಲ್ಲಿಗೇ ಹೋದರು. ಅಲ್ಲಿ ಕೆಲವರು ಅವರ ಹತ್ತಿರ ಬಂದು ಅವರಲ್ಲಿ ಕೆಲವರಾದರೂ ಈ ಡಾಕ್ಟರು ಶವ ಪರೀಕ್ಷೆ ಮಾಡುವ ರೀತಿಯನ್ನು ನೋಡುವ ಅವಕಾಶ ಮಾಡಿಕೊಡಬೇಕೆಂದು ವಿನಂತಿಸಿಕೊಂಡರು. ಅವರು ಮತ್ತೂ ಒಂದು ಸಾರಿ ಮುಗುಳ್ನಕ್ಕು "ನೋಡಿದಿರಲ್ಲಾ, ಈ ಡಾಕ್ಟರು ನಾನೇ ಹತ್ತಿರ ನಿಲ್ಲಬಾರದೆಂದು ಇಲ್ಲಿಗೆ

ಕಳುಹಿಸಿದ್ದಾರೆ; ನಿಮ್ಮನ್ನು ಹತ್ತಿರ ಬಿಟ್ಟಾರಾ?" ಎಂದು ಅವರದೇ ವಿಶಿಷ್ಟ ರೀತಿಯಲ್ಲಿ ಹೇಳಿದರಂತೆ.

ಪರೀಕ್ಷೆಯನ್ನು ಶುರುಮಾಡಿ ಶವದ ಹೊರಮೈಯಲ್ಲಿ ಮೊದಲು ಪರೀಕ್ಷೆ ಜರುಗಿಸಿದವರು ಮಾಡಿದ ಗಾಯಗಳಲ್ಲದೆ, ಬೇರೆ ಯಾವುದಾದರೂ ಇವೆಯೇ ಎಂದು ಕೂಲಂಕಷವಾಗಿ ವೀಕ್ಷಿಸಿದೆ. ಕೆಲವು ಕಡೆ ಊದಿಕೊಂಡು ನೀಲಿಗಟ್ಟಿದ ಲಕ್ಷಣಗಳನ್ನು ಬಿಟ್ಟರೆ ಚರ್ಮ ಹರಿದ ಗಾಯಗಳಿರಲಿಲ್ಲ. ಹಿಂದೆ ಹಾಕಿದ ಹೊಲಿಗೆಗಳನ್ನು ಬಿಚ್ಚಿಸಿ ದೇಹದ ಒಳಭಾಗಗಳನ್ನು ವೀಕ್ಷಿಸಿದೆ. ಹಿಂದಿನವರು ಶಾಸ್ತ್ರೋಕ್ತ ರೀತಿಯಲ್ಲಿ ಶವಪರೀಕ್ಷೆ ಜರುಗಿಸಿದ್ದರು. ಕೆಲವು ಅವಯವಗಳ ತುಣುಕುಗಳನ್ನು ಕತ್ತರಿಸಿ ತೆಗೆದಿದ್ದರು. ನಾನೂ ಸಹ ಜಠರ, ಕರುಳು ಮತ್ತಿತರ ಅವಯವಗಳನ್ನು ಕತ್ತರಿಸಿ ಬಾಟಲುಗಳಲ್ಲಿ ಹಾಕಿ ಸಂಗ್ರಹಿಸಿದೆ. ಅಲ್ಲದೆ ಕೆಲವು ಹಿರಿಯ ರಕ್ತನಾಳಗಳಿಂದ ಸ್ವಲ್ಪ ರಕ್ತವನ್ನೂ ಪರೀಕ್ಷೆಗಾಗಿ ಬಾಟಲಿಯಲ್ಲಿ ಸಂಗ್ರಹಿಸಿದೆ. ಅಲ್ಲಿ ಕಂಡು ಬಂದ ಎಲ್ಲಾ ನೋಟ, ಸಂವೇದನೆಗಳ ಬಗೆಗೆ ಟಿಪ್ಪಣಿ ಮಾಡಿಕೊಂಡೆ. ಶಿವಮೊಗ್ಗಾಕ್ಕೆ ಹಿಂದಿರುಗಿದೊಡನೆ ಶವಪರೀಕ್ಷಾ ವರದಿಯನ್ನು ತಯಾರು ಮಾಡಿದೆ. ಸಂಗ್ರಹಿಸಿ ತಂದಿದ್ದ ಅವಯವಗಳ ಮಾದರಿಗಳಿದ್ದ ಬಾಟಲುಗಳನ್ನು ವಿಧಿಬದ್ಧವಾಗಿ ಬೆಂಗಳೂರಿನ ವೈದ್ಯಕೀಯ-ನ್ಯಾಯ ಸಂಶೋಧನಾಲಯಕ್ಕೆ ರವಾನಿಸಿದೆ.

ಹಲವು ವಾರಗಳ ನಂತರ ಅವುಗಳ ಪರೀಕ್ಷಾ ಫಲಿತಾಂಶಗಳ ವರದಿ ಬಂದಿತು. ರಕ್ತದಲ್ಲಿನ ಮದ್ಯಸಾರದ ಮಟ್ಟ ವ್ಯಕ್ತಿ ಪ್ರಜ್ಞೆಯನ್ನು ಕಳೆದುಕೊಂಡು ಅಂತಿಮವಾಗಿ ಸಾವನ್ನಪ್ಪುವ ಮಟ್ಟದಲ್ಲಿರುವ ಹಾಗೆ ವರದಿಯಾಗಿತ್ತು. ಅದರಿಂದಾಗಿ ಮದ್ಯಸಾರ ಸೇವನೆಯಿಂದ ಅಮಲೇರಿ 'ಮಯಕ' (Coma)ದ ಸ್ಥಿತಿಗೆ ತಲುಪಿ ಆ ಬಗೆಗೆ ಚಿಕಿತ್ಸೆ ಜರುಗದೆ ಸಾವುಂಟಾಗಿರಬಹುದೆಂದು ನನ್ನ ಅಭಿಪ್ರಾಯ ನೀಡಿದೆ. ಬಹುಶಃ ವ್ಯಕ್ತಿ ಆ ಹಂತವನ್ನು ತಲುಪುವ ಮೊದಲೇ ಕೆಲವರೊಡನೆ ಘರ್ಷಣೆಯಲ್ಲಿ ತೊಡಗಿದ್ದಿರಬಹುದು. ಅದರಿಂದ ನಾನು ನೀಡಿದ ಅಭಿಪ್ರಾಯದ ಬಗೆಗೆ ಹಲವಾರು ತಕರಾರು ಎತ್ತಿದರಂತೆ. ಬೆಂಗಳೂರಲ್ಲಿ ವೈದ್ಯಕೀಯನ್ಯಾಯ ಶಾಸ್ತ್ರ ಪರಿಣಿತರ ಅಭಿಪ್ರಾಯವನ್ನೂ ಪಡೆಯಲಾಯಿತಂತೆ. ಮುಂದೆ ಅದು ಸಿ.ಓ.ಡಿ. (C.O.D.) ತನಿಖೆಗೂ ಒಳ ಪಟ್ಟಿತು; ಆ ಇಲಾಖೆಯವರು ಒಂದೆರಡು ಸಾರಿ ನನ್ನ ವಿವರಣೆಗಳನ್ನೂ ದಾಖಲು ಮಾಡಿಕೊಂಡು ಹೋಗಿದ್ದರು. ಕೆಲವು ತಿಂಗಳುಗಳಲ್ಲಿ ವರ್ಗವಾಗಿ ಬೇರೆ ಊರಿಗೆ ಹೋಗಿದ್ದರಿಂದ ಮುಂದಿನ ಬೆಳವಣಿಗೆಗಳೇನಾದುವೆಂಬುದರ ಜಾಡು ತಪ್ಪಿ ಹೋಯಿತು.

ಸಾಮಾನ್ಯವಾಗಿ ಅಸುನೀಗಿದ ನಂತರ ಹೂಳಲಾಗಿದ್ದ ವ್ಯಕ್ತಿಯ ಸಾವಿನ ಕಾರಣ ನಿಗೂಢವಾಗಿದ್ದರಿಂದಲೋ, ಅಥವಾ ಶವಪರೀಕ್ಷೆಯಾದ ನಂತರ ಹೂಳಲಾಗಿದ್ದ ಸಂದರ್ಭಗಳಲ್ಲಿ ಸಾವಿನ ಕಾರಣದ ಬಗೆಗೆ ತಕರಾರುಗಳೆದ್ದರೆ ಕೆಲವು ಸಮಯ ಕಳೆದಿದ್ದರೂ, ಆ ಶವವನ್ನು ಹೊರತೆಗೆದು ಮತ್ತೊಮ್ಮೆ ಪರೀಕ್ಷೆ ನಡೆಸುವ ವಿಧಾನ ಪ್ರಚಲಿತವಿದೆ. 'ಎಕ್ಸ್‌ಹ್ಯುಮೇಷನ್' ಎಂದು ಹೇಳಲಾಗುವ ಈ ಕ್ರಮವನ್ನು ಜರುಗಿಸುವ ಮೊದಲು ಮ್ಯಾಜಿಸ್ಟ್ರೇಟ್‌ರಿಂದ ತನಿಖೆ ನಡೆಯಬೇಕಾಗುತ್ತದೆ; ಅವರ ಆದೇಶದ ಮೇರೆಗೆ ಮೊದಲು ಶವಪರೀಕ್ಷೆ ಜರುಗಿಸಿದ ವೈದ್ಯರ ಅಂತಸ್ತಿಗೂ ಮೇಲ್ದರ್ಜೆಯವರಿಂದ (ಸಾಮಾನ್ಯವಾಗಿ ಜಿಲ್ಲಾ ವೈದ್ಯಾಧಿಕಾರಿ, ಡಿ.ಎಂ.ಓ.) ಮರು-ಶವ ಪರೀಕ್ಷೆ ನಡೆಸುತ್ತಾರೆ. ಪ್ರಸ್ತುತ ಪ್ರಕರಣ ಅವೆರಡೂ ನಿಬಂಧನೆಗಳಿಗೆ ಹೊರತಾಗಿ ಜರುಗಿದ್ದು ಒಂದು ವಿಶಿಷ್ಟ ಸನ್ನಿವೇಶದಲ್ಲಿ. ಆ ತನಕ ಆ ರೀತಿಯಲ್ಲಿ ಮರು-ಪರೀಕ್ಷೆಗಳು ಜರುಗಿದ ಬಗೆಗೆ ಅರಿವಿರಲಿಲ್ಲ. ಆದರೆ ಶಿವಮೊಗ್ಗಾ ಜಿಲ್ಲೆಯ ಇನ್ನೊಂದು ತಾಲ್ಲೂಕಿನಲ್ಲೂ ಅಂತಹುದೇ ಕ್ರಮ

ಜರುಗಿಸಬೇಕಾಯಿತಂತೆ. ಆದುದರಿಂದ ಈ ರೀತಿಯ ಪ್ರಕರಣದಲ್ಲಿ ಸರ್ಕಾರೀ ವೈದ್ಯರು ಹೀಗೆ ವರ್ತಿಸಬೇಕೆಂಬುದರ ಬಗೆಗೆ ಮೆಡಿಕಲ್ ಇಲಾಖೆಗೆ ಬರೆದು ಕೊಂಡಿದ್ದೆವು. ಇಲಾಖೆಯವರು ವೈದ್ಯಕೀಯ ನ್ಯಾಯ ಶಾಸ್ತ್ರದ ವರಿಷ್ಠರ ಅಭಿಪ್ರಾಯವನ್ನು ಪಡೆದುಕೊಂಡರಂತೆ. ಅವರೂ ಸಹಾ ನಾನು ಮೊದಲು ಅಭಿಪ್ರಾಯಪಟ್ಟಂತೆ ಯಾವುದೇ ಸಂದರ್ಭದಲ್ಲಿ ಮರು-ಶವಪರೀಕ್ಷೆಯಾಗ ಬೇಕಾದರೆ ಮ್ಯಾಜಿಸ್ಟ್ರೇಟರ ಆದೇಶ ಪಡೆದ ನಂತರವೇ ಜರುಗಿಸಬೇಕೆಂದು ಅಭಿಪ್ರಾಯಪಟ್ಟರು.

## ಆಡಳಿತ ನಿರ್ವಹಣೆಯ ಸವಾಲುಗಳು

ಮೆಗ್ಗಾನ್‌ನಂತಹ ದೊಡ್ಡ ಆಸ್ಪತ್ರೆಯ ಒಳಾಡಳಿತ ನಿರ್ವಹಣೆ ಅಷ್ಟೇನು ಸುಲಭ ಸಾಧ್ಯವೆಂದು ಹೇಳಲಾಗದು. ವಿಶಾಲವಾದ ಆವರಣದಲ್ಲಿ ಯಾವುದೇ ಪೂರ್ವನಿಯೋಜಿತ ಯೋಜನೆಗೊಳಪಡದ ರೀತಿಯಲ್ಲಿ ಹರಡಿ ನಿರ್ಮಾಣವಾಗಿರುವ ವಾರ್ಡುಗಳು, ವಿಭಾಗಗಳು, ನಾನಾ ಬಗೆಯ ಸಿಬ್ಬಂದಿ ವರ್ಗ, ಆಹಾರ, ಔಷಧ ಸಾಮಗ್ರಿಗಳ ವ್ಯವಸ್ಥಿತ ವಿತರಣೆ, ದಿನವೆಲ್ಲಾ ಸಹಜ, ಅಸಹಜ ಹಾಗೂ ತುರ್ತು ಸಂದರ್ಭಗಳಿಗೆ ನೆರವು ಕೋರಿ ಆಸ್ಪತ್ರೆಗೆ ಧಾವಿಸುವ ವಿವಿಧ ತೆರನ ಜನ ಸಮುದಾಯ ಮುಂತಾದವುಗಳಿಂದ ಉದ್ಭವಿಸುವ ಸನ್ನಿವೇಶಗಳನ್ನು ಸುಸೂತ್ರವಾಗಿ ನಿಭಾಯಿಸುವುದು ತುಂಬಾ ಜಟಿಲ ಸಮಸ್ಯೆಯೆಂದರೆ ಅತಿಶಯೋಕ್ತಿಯಲ್ಲ. ಸರ್ಕಾರದ ಹತೋಟಿಯಲ್ಲಿರುವ ಇತರ ಇಲಾಖೆಗಳ ನಿರ್ವಹಣೆಯ ಬಗೆಗೆ ಹೋಲಿಸಿದರೆ ಆಸ್ಪತ್ರೆಗಳು ದಿನದ ೨೪ ಗಂಟೆಗಳೂ ಜ್ವಲಂತ ಹಾಗೂ ಜೀವಂತ ಸಮಸ್ಯೆಗಳಿಗೆ ಪರಿಹಾರ ಒದಗಿಸಲು ಸದಾ ಎಚ್ಚರದಿಂದಿರಬೇಕಾದ 'ಜೀವಂತ' ವ್ಯವಸ್ಥೆಗಳೆಂಬುದರ ಅರಿವಾಗಬಹುದು. ಅಲ್ಲಿ ಪ್ರತಿದಿನ ಸರಿಸುಮಾರು ಎರಡು ಮದುವೆ ಊಟಗಳ ಸಮಾರಂಭ ನಡೆಯುತ್ತಿರುತ್ತದೆಂದರೆ ಉದ್ಭವಿಸುವ ಸಮಸ್ಯೆಗಳತ್ತ ಸ್ವಲ್ಪವಾದರೂ ಬೆಳಕು ಚೆಲ್ಲಿದಂತಾಗಬಹುದು.

ಇಂತಹದೊಂದು ವ್ಯವಸ್ಥೆಯ ಮೇಲ್ವಿಚಾರಕರಾಗಿ ಡಿ.ಎಂ.ಓ./ಜಿಲ್ಲಾ ಸರ್ಜನ್ ಇರುತ್ತಾರಾದರೂ ಈ ಮೊದಲು ಪ್ರಸ್ತಾಪಿಸಿದ ಬಹುಪಾಲು ವಿಚಾರಗಳನ್ನು ಕಾರ್ಯಗತಗೊಳಿಸುವುದು ಆರ್.ಎಂ.ಓ. ಆದವರ ಪಾಲಿಗೆ ಸೇರಿ ಬಿಡುತ್ತದೆ. ಆಸ್ಪತ್ರೆಗೆ ಬೇಕಾಗುವ ಆಹಾರ ಸಾಮಗ್ರಿಗಳನ್ನು ಸ್ವೀಕರಿಸಿ ವಿತರಿಸುವ, ಔಷಧ ಸಾಮಗ್ರಿಗಳನ್ನು ಅಂದಾಜು ಮಾಡಿ ಅವು ಸದಾ ಲಭ್ಯವಿರುವಂತೆ ಏರ್ಪಡಿಸುವುದು ಅವರ ಕರ್ತವ್ಯಗಳೇ. ಅದಕ್ಕಿಂತ ಔಷಧ ಸಾಮಗ್ರಿಗಳನ್ನು ಉಗ್ರಾಣದಲ್ಲಿ ದಾಸ್ತಾನು ಮಾಡಿಸಿ, ಅವುಗಳ ಸ್ವೀಕಾರ, ವಿತರಣೆ ಮುಂತಾದವು ಆರ್.ಎಂ.ಓ. ಅವರ ವೈಯಕ್ತಿಕ ಜವಾಬ್ದಾರಿ! ಅವರಿಗೆ ಸಹಾಯಕರಾಗಿ ಅನುಭವಿಯೆನ್ನ ಬಹುದಾದ ಗುಮಾಸ್ತರನ್ನೋ, ಕಾಂಪೌಂಡರನ್ನೋ, ಅಥವಾ ನರ್ಸ್ ಒಬ್ಬರನ್ನೋ ನೇಮಿಸಿರು ತ್ತಿದ್ದರು. ಅವರ ಕಾರ್ಯದಕ್ಷತೆ, ಪ್ರಾಮಾಣಿಕತೆಗಳನ್ನು ಅವಲಂಬಿಸಿ ಆರ್.ಎಂ.ಓ. ಕಾರ್ಯ ನಿರ್ವಹಿಸ ಬೇಕಾಗುತ್ತದೆ. ಮೊದಲ ಕೆಲವು ವರ್ಷಗಳಲ್ಲಿ ಹಾಗೇ ಕಾರ್ಯ ನಿರ್ವಹಿಸಿದ ಕಾಂಪೌಂಡರ್ ಚಿತ್ರಶೇಖರಪ್ಪ, ಸ್ಟಾಫ್ ನರ್ಸ್ ಗೋಪಾಲ್‌ರಂಥವರು ಲಭ್ಯವಾಗುವುದು ತುಂಬಾ ವಿರಳ. ಪ್ರಸ್ತುತ ಸಮಯದಲ್ಲಿ ಔಷಧ ವಿಜ್ಞಾನದಲ್ಲಿ ಪದವೀಧರರಾದ ಫಾರ್ಮಸಿಸ್ಟ್‌ರನ್ನು ಔಷಧ ಉಗ್ರಾಣಗಳ ನಿರ್ವಹಣೆಗೆ ನೇಮಕ ಮಾಡುತ್ತಿರುವುದರಿಂದ ಪರಿಸ್ಥಿತಿ ಸುಧಾರಣೆಯಾಗಿರ ಬಹುದೆಂದು ಭಾವಿಸುತ್ತೇನೆ.

ಇದಲ್ಲದೆ ಆಸ್ಪತ್ರೆಯ ಕಾರ್ಯ ನಿರ್ವಹಣೆಯಲ್ಲಿ ಯಾವುದೇ ಸಂದರ್ಭದಲ್ಲಿ, ಎಲ್ಲಿಯಾದರೂ ಅವ್ಯವಸ್ಥೆ, ದೂರುಗಳು ಬಂದರೆ ಆರ್.ಎಂ.ಓ.ನೇ ಮೊದಲ ಜವಾಬ್ದಾರಿ

ಹೊರಬೇಕೆಂಬ ಭಾವನೆ ಹುಟ್ಟಿಕೊಂಡಿರುತ್ತದೆ. ನನ್ನ ಸೇವಾ ಅವಧಿಯಲ್ಲಿ ಹಲವು ಆಸ್ಪತ್ರೆಗಳಲ್ಲಿ ಆ ಹುದ್ದೆಯಲ್ಲಿರುತ್ತಿದ್ದು ಅದೊಂದು ಸವಾಲಾಗಿ ಪರಿಣಮಿಸುತ್ತಿತ್ತು.

### ಆಸ್ಪತ್ರೆಗೆ ಸರಬರಾಜಾದ ಔಷಧಗಳು ಹೊರಗೆ ಮಾರಾಟ!

ಒಂದು ದಿನ ಹೊರ ರೋಗಿಗಳ ವಿಭಾಗದಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ರೋಗಿಯೊಬ್ಬ ನಮ್ಮ ಔಷಧ ಉಗ್ರಾಣದ ಮುದ್ರೆ ಇರುವ ಇಂಜಕ್ಷನ್ ಟ್ಯೂಬ್ ಒಂದನ್ನು ತೋರಿಸಿ ಅವನಿಗೆ ಇಂಜಕ್ಷನ್ ಮಾಡಿಸಬೇಕೆಂದು ವಿನಂತಿಸಿದ. ಮೈಮೇಲೆ ತಣ್ಣೀರೆರಚಿದಂತಾಯಿತು ನನಗೆ. ಅಂತಹ ಇಂಜಕ್ಷನ್‌ಗಳನ್ನು ಸಾಮಾನ್ಯವಾಗಿ ವಾರ್ಡುಗಳಲ್ಲಿ ಅಥವಾ ಇಂಜಕ್ಷನ್ ವಿಭಾಗದಲ್ಲಿ ವೈದ್ಯರ ಆದೇಶದ ಮೇರೆಗೇ ನೀಡುವುದು. ಅಂತಹವು ಆಸ್ಪತ್ರೆಗಳ ಉಗ್ರಾಣದಿಂದ ಹೇಗೋ ಹೊರಗೆ ಹೋಗಿ ಬಿಡುತ್ತವೆಂಬ ಕಾರಣದಿಂದಲೇ, ಸರಬರಾಜಾದಾಕ್ಷಣ ಸರ್ಕಾರದ ಮುದ್ರೆ ಒತ್ತಿಸಿ ಬಿಡುತ್ತೇವೆ. ಅದು ಅವನಿಗೆ ಹೇಗೆ ದೊರೆಯಿತೆಂದು ಪ್ರಶ್ನಿಸಿದಾಗ ತಬ್ಬಿಬ್ಬಾದ. ಕೂಡಲೇ ಉಗ್ರಾಣಕ್ಕೆ ಧಾವಿಸಿ ಆ ತಂಡದ ಇಂಜಕ್ಷನ್‌ಗಳು ಯಾವ ಯಾವ ವಿಭಾಗಗಳಿಗೆ ವಿತರಿಸಿದ್ದರೆಂಬುದರ ಬಗೆಗೆ ತನಿಖೆ ನಡೆಸಿದೆ; ಅವು ಕುಟುಂಬ ಕಲ್ಯಾಣ ವಿಭಾಗಕ್ಕೆ ವಿತರಣೆಯಾಗಿದ್ದವೆಂಬುದು ತಿಳಿದು ಬಂದಿತು. ಆ ವಿಭಾಗದ ವೈದ್ಯರನ್ನು ವಿಚಾರಿಸಿದಾಗ ಕೆಲಸಾರಿ ರೋಗಿಗಳ ಕೈಯಲ್ಲೇ ಕೆಲವನ್ನು ಕೊಟ್ಟು ಹತ್ತಿರದ ವೈದ್ಯರಿಂದ ಇಂಜಕ್ಷನ್ ಮಾಡಿಸುವ ಸಲಹೆ ನೀಡುತ್ತಿದ್ದರೆಂಬುದು ಬಯಲಾಯಿತು. ಮುಂದೆ ಆ ಪದ್ಧತಿಯನ್ನು ಮುಂದು ವರಿಸದಂತೆ ಆದೇಶಿಸಿದೆ.

ವೃತ್ತಿಯಿಂದ ನಿವೃತ್ತಿಯಾದ ಬಳಿಕ (೧೯೮೪) ಶಿವಮೊಗ್ಗೆಯಲ್ಲಿ ಖಾಸಗಿ ಕ್ಲಿನಿಕ್ ತೆರೆದು ಕೆಲವು ನರ್ಸಿಂಗ್ ಹೋಮ್‌ಗಳಲ್ಲಿ ಕಾರ್ಯ ನಿರ್ವಹಿಸಲಾರಂಭಿಸಿದ್ದೆ. ಶುರು ಮಾಡಿದ ಮೊದಲನೇ ವಾರದಲ್ಲೇ ಈ ರೀತಿ ಅತ್ಯಂತ ಅಗಾಧ ಪ್ರಮಾಣದ ನಡವಳಿಕೆ ನನ್ನ ಗಮನಕ್ಕೆ ಬಂದದ್ದನ್ನು ದಾಖಲಿಸುವ ತುಡಿತ ನುಗ್ಗಿ ಬರುತ್ತಿದೆ. ಅದರ ಮುಂದೆ ಆಸ್ಪತ್ರೆಯಲ್ಲಿ ಜರುಗಿದ್ದು ಸಮುದ್ರ ಆಳದ ಬೃಹತ್ ನೀರ್ಗಲ್ಲು ಗುಡ್ಡದ ತುದಿ ಮಾತ್ರ (Tip of the Iceberg) ಗೋಚರಿಸಿದ್ದು. ಆದರಿಂದಾಗಿ ಆ ಪ್ರಕರಣವನ್ನು ಸಂಕ್ಷಿಪ್ತವಾಗಿ ವಿವರಿಸುವ ಪ್ರಲೋಭನೆಯುಂಟಾಗುತ್ತಿದೆ.

ಅಂದು ಬೆಳಿಗ್ಗೆ ಒಂದೆರಡು ಕೈ ಚೀಲಗಳನ್ನು ಬಗಲಿಗೆ ನೇತು ಹಾಕಿಕೊಂಡ ಮಸುಕಾದ ಬಿಳಿ ಸೀರೆ ಕುಪ್ಪಸ ತೊಟ್ಟ ಮಹಿಳೆಯೊಬ್ಬಳು ಬಂದಳು. ತನ್ನ ಹತ್ತಿರ ಕೆಲವು ಇಂಜಕ್ಷನ್ ಬಾಟಲಿಗಳು, ಹಾಗೂ ಮಾತ್ರೆಗಳಿರುವುದಾಗಿಯೂ, ಅರ್ಧಕ್ಕಿಂತಲೂ ಕಡಿಮೆ ಬೆಲೆಗೆ ಕೊಡುವುದಾಗಿಯೂ ಹೇಳಿದಳು, ಹಾಗೂ ಕೆಲವನ್ನು ನನ್ನ ಮೇಜಿನ ಮೇಲೆ ಹರಡಿ ಇಡಲಾರಂಭಿಸಿದಳು. ಈ ಸಾರಿ ಮೈ ನಡುಗಲಿಲ್ಲ; ಬೆವರಲಾರಂಭಿಸಿತು. ಸುಮಾರು ನೂರಕ್ಕೂ ಹೆಚ್ಚು ಧೀರ್ಘ ಕಾಲ ಕಾರ್ಯ ನಿರ್ವಹಿಸುವ ಸಾಮರ್ಥ್ಯ ಹಾಗೂ ಅಧಿಕ ಪ್ರಭಾವ ಬೀರುವ ಪೆನಿಸಿಲಿನ್ ಇಂಜಕ್ಷನ್ (Long acting PENICILLIN LA12, LA24) ಸೀಸೆಗಳು, ಫ್ರೋಲಿಕ್ ಆಸಿಡ್, ಕಬ್ಬಿಣಾಂಶ ಹಾಗೂ ಬಹುವಿಧಗಳ ವಿಟಮಿನ್‌ಗಳ ನೂರುಗಟ್ಟಲೆ ಇರುವ ಡಬ್ಬಿಗಳ ವಿರಾಟ ದೃಶ್ಯವನ್ನೇ ಅನಾವರಣಗೊಳಿಸಿದಳು. ಅವುಗಳ ಮೇಲೆಲ್ಲಾ "ಕರ್ನಾಟಕ ಆರೋಗ್ಯ ಇಲಾಖೆಗೆ ಸರಬರಾಜು ಮಾಡಿದವು" ಎಂಬ ಮುದ್ರೆ ಅಚ್ಚೊತ್ತಿತ್ತು. ಅವೆಲ್ಲಾ ಹೇಗೆ ದೊರೆತವು ಹಾಗೂ ಆಕೆ ಯಾರೆಂಬುದನ್ನು ವಿಚಾರಿಸಿದೆ. ಪಕ್ಕದ ತಾಲ್ಲೂಕೊಂದರ ಕುಟುಂಬ ಕಲ್ಯಾಣ ಇಲಾಖೆಯಲ್ಲಿ

'ನರ್ಸ್-ಮಿಡ್‌ವೈಫ್'(ANM) ಆಗಿ ಕಾರ್ಯ ನಿರ್ವಹಿಸುತ್ತಿರುವುದಾಗಿ ತಿಳಿಸಿದಳು. ಆ ಮದ್ದುಗಳೆಲ್ಲಾ ಅಷ್ಟಾಗಿ ಖರ್ಚಾಗುತ್ತಿರ ಲಿಲ್ಲವಾದುದರಿಂದ ಸಿಕ್ಕಿದಷ್ಟು ಹಣಕ್ಕೆ ಮಾರುವುದಕ್ಕೆ ತಂದಿರುವುದಾಗಿ ಯಾವುದೇ ಮುಚ್ಚುಮರೆ ಇಲ್ಲದೇ ಒದರಿಬಿಟ್ಟಳು!

ಮುಂದೇನು ಹೇಳಬೇಕು, ಇಲ್ಲವೇ ಏನು ಮಾಡಬೇಕೆಂಬುದು ಒಂದೆರಡು ನಿಮಿಷ ಹೊಳೆಯಲೇ ಇಲ್ಲ. ನಾನಂತೂ ಅಂತಹ ಇಂಜಕ್ಷನ್ ಮಾತ್ರೆಗಳನ್ನು ಬಳಸಿ ಪ್ರ್ಯಾಕ್ಟೀಸ್ ಮಾಡುವ ವೃತ್ತಿನಿರತನಲ್ಲ. ಅದಕ್ಕಿಂತ ಮಿಗಿಲಾಗಿ ಅಂತಹ ಅವ್ಯವಹಾರಗಳಲ್ಲಿ ತೊಡಗಿಸಿಕೊಳ್ಳುವವನೂ ಅಲ್ಲವಷ್ಟೆ. ಅದೇ ತಾನೇ ಸರ್ಕಾರಿ ವೈದ್ಯವೃತ್ತಿಯಿಂದ ನಿವೃತ್ತನಾಗಿದ್ದು ಆ ಸಮಯದ ಕರ್ತವ್ಯ ಪ್ರಜ್ಞೆ ಎಚ್ಚರಿಸಿತು. ಅವುಗಳನ್ನೆಲ್ಲಾ ಎಣಿಸುವಂತೆ ನಟಿಸಿ, ಆಕೆಯನ್ನು ಹೊರಗಡೆ ಕುರ್ಚಿಯಲ್ಲಿ ಕುಳ್ಳಿರುವಂತೆ ಹೇಳಿದೆ. ಸಂಬಂಧಿಸಿದ ಪೋಲೀಸ್ ಸ್ಟೇಷನ್‌ಗೆ ಫೋನ್ ಮಾಡಿದೆ. ಮಾತಾಡಿದ ಸಬ್‌ಇನ್ಸ್‌ಪೆಕ್ಟರ್ ಒಬ್ಬ ಮುಖ್ಯ ಪೇದೆಯನ್ನು ಕಳುಹಿಸಿ, ವಿಚಾರಿಸುವುದಾಗಿ ಉತ್ತರಿಸಿದ್ದರು. ಸ್ವಲ್ಪ ಸಮಯದಲ್ಲಿ ವಯಸ್ಸಾದ ಮುಖ್ಯ ಪೇದೆಯೊಬ್ಬರು ಬಂದರು. ಅವನನ್ನು ನೋಡುತ್ತಲೇ ಆಕೆಯ ಜಂಘಾಬಲವೇ ಕುಸಿದು ಹೋಗಿರಬೇಕು. ಥರಥರ ನಡುಗುತ್ತಾ ಕೈಕಾಲು ಹಿಡಿದು ಅದೊಂದು ಸಾರಿ ಆಕೆಯನ್ನು ಬಚಾವು ಮಾಡಬೇಕೆಂದು ಪರಿಪರಿಯಾಗಿ ಅತ್ತೂ ಕರೆದು ಬೇಡಿಕೊಳ್ಳಲಾರಂಭಿಸಿದಳು. ಆದರೂ ನನ್ನ ಮನಸ್ಸು ಕರಗಲಿಲ್ಲ. ಪೋಲೀಸ್ ಪೇದೆಯೂ ಬೆರಗಾದವನಂತೆ ನಿಂತುಬಿಟ್ಟ. ಮೊದಲು ಅವುಗಳನ್ನೆಲ್ಲಾ ಪಟ್ಟಿ ಮಾಡಿ ಆಕೆಯ ಹಾಗೂ ನನ್ನ ರುಜು ಹಾಕಿಸಿಕೊಳ್ಳುವಂತೆ ಹೇಳಿದೆ. ಅದು ಮುಗಿದನಂತರ ಪಕ್ಕದ ನರ್ಸಿಂಗ್ ಹೋಮ್ ಒಂದರಲ್ಲಿ ತನ್ನ ಮಗುವನ್ನು ಬಿಟ್ಟು ಬಂದಿರುವುದಾಗಿಯೂ ಸ್ವಲ್ಪ ನೋಡಿಕೊಂಡು ಬರುವುದಾಗಿ ಹೋದಳು; ಪೇದೆಯೂ ಸ್ಟೇಷನ್‌ಗೆ ಹೋಗಿ ಮುಂದಿನ ಕಾರ್ಯದ ಬಗೆಗೆ ಸಬ್‌ಇನ್ಸ್‌ಪೆಕ್ಟರ್ ರೊಡನೆ ಮಾತಾಡಿ ಬರುವುದಾಗಿ ಹೇಳಿದ. ಅಷ್ಟರಲ್ಲೇ ವಿಷಯ ಸರ್ಕಾರಿ ನೌಕರರ ಸಂಘ ದವರಿಗೂ ತಿಳಿಯಿತೆನ್ನಿಸುತ್ತದೆ. ಅದರ ಕಾರ್ಯದರ್ಶಿಗಳು ನನ್ನ ಕ್ಲಿನಿಕ್‌ಗೆ ಓಡೋಡಿ ಬಂದರು. ಮೊದಲು ಪರಿಚಯವಿದ್ದ ಅವರು ಬಡ ನೌಕರಳು ಕೆಲಸವನ್ನೇ ಕಳೆದುಕೊಂಡು ಬಿಡಬಹುದು; ಅದರಿಂದ ನಾನು ಅದೊಂದು ಸಾರಿ ಬಚಾವು ಮಾಡಬೇಕೆಂದು ವಿನಂತಿಸ ತೊಡಗಿದರು. ಅವರಂತಹವರೇ ಅಲ್ಲವೇ ಸರ್ಕಾರಿ ಆಸ್ಪತ್ರೆಗಳಲ್ಲಿ ಔಷಧಗಳು ದೊರೆಯುವುದಿಲ್ಲವೆಂದು ದೂರುವುದು, ಪತ್ರಿಕೆಗಳಲ್ಲಿ ಬರೆಯುವುದು? ನಾನೀಗಾಗಲೇ ಪೋಲೀಸರಿಗೆ ರಿಪೋರ್ಟು ಮಾಡಿಯಾಗಿದೆ, ಇನ್ನೇನು ಮಾಡಲಾಗದು ಎಂದು ನೇರವಾಗಿ ಹೇಳಿದೆ. ಸಿಟ್ಟಗೊಂಡವರಂತೆ ಅಲ್ಲಿಂದ ಅವಸರದಿಂದ ಹೊರಟು ಹೋದರು!

ಅಂದು ಮಧ್ಯಾಹ್ನ ಕ್ಲಿನಿಕ್ ಮುಚ್ಚುವವರೆಗೂ ಪೇದೆ ಹಿಂದಿರುಗಲಿಲ್ಲ. ಮುಂದಿನ ಕ್ರಮದ ಬಗೆಗೆ ಎಸ್.ಪಿ. ಸಾಹೇಬರನ್ನು ಸಂಪರ್ಕ ಮಾಡುತ್ತಿರುವುದಾಗಿಯೂ, ಅವರು ಯಾವುದೋ ಸಭೆಯಲ್ಲಿ ಭಾಗವಹಿಸುತ್ತಿದ್ದಾರೆಂದರು; ಮತ್ತೆ ಸಾಯಂಕಾಲವೂ ಫೋನ್ ಮಾಡಿದೆ; ಮತ್ತೆ ಅದೇ, ಎಸ್.ಪಿ.ಯವರು ಬಿಝಿಯಾಗಿದ್ದಾರೆಂಬುದೇ ಉತ್ತರ. ಮರುದಿನವೂ ಒಂದೆರಡು ಸಾರಿ ವಿಚಾರಿಸಿದೆ. ಅದೇ ಗಿಣಿ ಪಾಠದ ಪುನರುಚ್ಚಾರ! ನಾಲ್ಕು ದಿನಗಳ ನಂತರ ಆರೋಗ್ಯ ಇಲಾಖೆಯ ನಿರ್ದೇಶಕರು (ನನ್ನನ್ನು ಚೆನ್ನಾಗಿ ಬಲ್ಲವರು) ಹಾಗೂ ಆರೋಗ್ಯ ಸಚಿವರಿಗೂ (ಕಾಲೇಜಿನಲ್ಲಿದ್ದಾಗ ಹಿರಿಯ ವಿದ್ಯಾರ್ಥಿ, ಗಾಂಧಿವಾದಿಗಳೆಂಬ ಪ್ರತೀತಿ) ಪ್ರಕರಣ ವಿವರಗಳ ಸಹಿತ ರಿಜಿಸ್ಟರ್ಡ ಪತ್ರ, ಬರೆದೆ. ಇಬ್ಬರಿಂದಲೂ ಉತ್ತರಗಳು ಬರಲೇ ಇಲ್ಲ. ಶಿವಮೊಗ್ಗಾ ಮಟ್ಟದಲ್ಲಿ ಪಟ್ಟಭದ್ರ ಹಿತಾಸಕ್ತಿಗಳು ಪ್ರಕರಣ ನೋಂದಣಿ ಆಗದಂತೆ ನೋಡಿ

ಕೊಂಡಿರಬೇಕು; ಬೆಂಗಳೂರು ಹಂತದಲ್ಲೂ ನನ್ನ ಪತ್ರಗಳು ಸಂಬಂಧಿಸಿದವರ ಗಮನಕ್ಕೆ ಬರದಂತೆಯೂ ನೋಡಿ ಕೊಂಡಿರಬೇಕು. ಕೆಲ ಕಾಲದ ನಂತರ ಯಾವುದೇ ಆಡಳಿತ ಜವಾಬ್ದಾರಿ ಇರದ ನಾನೇಕೆ ಅಂತಹ ಕಾರ್ಯಕ್ಕೆ ಕೈ ಹಾಕಿದೆ ಎಂದೆನಿಸಿತು.

ಆಹಾರ ಸಾಮಗ್ರಿಗಳನ್ನು ಸ್ವೀಕರಿಸಿ, ತಯಾರು ಮಾಡಿ, ರೋಗಿಗಳಿಗೆ ತಲುಪಿಸುವ ವರೆಗೆ ಅದೆಷ್ಟು ಕಟ್ಟೆಚ್ಚರ ವಹಿಸಿದರೂ ಆಗಾಗ್ಗೆ ಜರುಗುವ ಅವ್ಯವಹಾರಗಳನ್ನು ತಪ್ಪಿಸುವುದು ಅಸಾಧ್ಯವೆಂಬಂತಾಗಿ ಬಿಟ್ಟಿದೆ. ಸಮಸ್ಯೆಯ ಕೆಲವು ಆಯಾಮಗಳನ್ನು ಕೆ.ಜಿ.ಎಫ್. ಹಾಗೂ ಕೊಳ್ಳೇಗಾಲದ ಅನುಭವದೊಂದಿಗೆ ಈಗಾಗಲೇ ವಿವರಿಸಲಾಗಿದೆ. ಮೆಗ್ಗಾನ್ ಆಸ್ಪತ್ರೆ ಯಂತಹ ಬೃಹತ್ ಸಂಸ್ಥೆಗಳಲ್ಲಿ ಅವಿನ್ನೂ ಬಹು ಪ್ರಕಾರದ್ದಾಗಿರುತ್ತವೆ.

ಒಂದು ದಿನ ಬೆಳಿಗ್ಗೆ ನನ್ನ ಕಚೇರಿಯ ಜವಾನನನ್ನು ಮೆಡಿಕಲ್ ಉಗ್ರಾಣದವರ ಬಳಿಗೆ ಯಾವುದನ್ನೋ ವಿಚಾರಿಸಿಕೊಂಡು ಬರಲು ಕಳುಹಿಸಿದ್ದೆ. ಅಡಿಗೆ ಮನೆ ಅದರ ಪಕ್ಕದಲ್ಲೇ ಉಗ್ರಾಣವೂ ಇದ್ದು, ಆಗ ತಾನೇ ಸರಬರಾಜಾಗಿದ್ದ ಅಕ್ಕಿಯ ಸ್ವಲ್ಪ ಭಾಗವನ್ನು ಅಡಿಗೆಯವನೊಬ್ಬ ಹೊರಗಡೆ ಸಾಗಿಸುವ ಹುನ್ನಾರ ಮಾಡುತ್ತಿದ್ದುದು ಅವನ ಗಮನ ಸೆಳೆಯಿತು. ತತ್‌ಕ್ಷಣ ಆ ಬಗೆಗೆ ನನಗೆ ತಿಳಿಸಿದ. ಮಿಂಚಿನ ವೇಗದಲ್ಲಿ ಅಲ್ಲಿಗೆ ಧಾವಿಸಿ ಅಡಿಗೆಯವನು ಹೊರಗೆ ಕಳುಹಿಸುತ್ತಿದ್ದ ಅಕ್ಕಿಯ ಚೀಲದ ಸಮೇತ ಸ್ವಾಧೀನ ಪಡಿಸಿಕೊಂಡು, ಮಹಜರು ಮಾಡಿಸಿದೆ; ಹಾಗೂ ಮುಂದಿನ ಕ್ರಮ ತೆಗೆದುಕೊಳ್ಳಲು ಡಿ.ಎಂ.ಓ. ಅವರಿಗೆ ವರದಿ ಮಾಡಿದೆ. ಅವರಿನ್ನೂ ವಿಚಾರಣೆ ಆರಂಭಿಸುವಷ್ಟರಲ್ಲೇ ಒಂದು ರಾತ್ರಿ ಅಡಿಗೆಯವನ ಕಡೆಯವರು ನನ್ನ ಕಚೇರಿಯ ವಯಸ್ಸಾದ ಜವಾನನ ಮನೆಗೆ ನುಗ್ಗಿ ಮನೆಯವರನ್ನೆಲ್ಲಾ ಥಳಿಸಿ ಬಿಟ್ಟರು. ಆ ಬಗೆಗೆ ಮರುದಿನ ಪೋಲೀಸರಿಗೂ ದೂರು ಸಲ್ಲಿಸಿದೆ. ಕೆಲವೇ ತಿಂಗಳಲ್ಲಿ ನನ್ನ ವರ್ಗಾವಣೆಯಾಯಿತು; ಆದರೆ ಪ್ರತಿಫಲವೇನಾಗಿರಬಹುದೆಂಬುದನ್ನು ಊಹಿಸಿಕೊಳ್ಳಬಹುದು.

ಆಸ್ಪತ್ರೆಯಲ್ಲಿ ಆಗಾಗ್ಗೆ ಗಲಾಟೆಗಳಾಗುತ್ತಲೇ ಇರುತ್ತವೆ. ಪೋಲೀಸ್ ಇಲಾಖೆಯ ವಾರ್ಷಿಕ ದಿನಾಚರಣೆಯಲ್ಲಿ ಭಾಗವಹಿಸಲು ಗ್ರಾಮಾಂತರ ಠಾಣೆಯಿಂದ ಬಂದಿದ್ದ ಪೇದೆಯೊಬ್ಬ ರಾತ್ರಿ ಬಡಾವಣೆಯೊಂದರಲ್ಲಿನ ತನ್ನ ಸಂಬಂಧಿಕರ ಮನೆಗೆ ತಂಗಲು ಹೋದ. ಕಾರ್ಯಕ್ರಮ ಗಳಲ್ಲಿ ಭಾಗವಹಿಸಿ ಬಡಾವಣೆಗೆ ಹಿಂತಿರುಗುವ ಮುನ್ನ ಕಂಠ ಪೂರ್ತಿ ಕುಡಿದು ಗಲಾಟೆ ಮಾಡುತ್ತಲೇ ಮನೆಗೆ ಬಂದ. ಮನೆಯ ಸಂಬಂಧಿಕರನ್ನೇ ಅಲ್ಲದೆ, ಅಕ್ಕಪಕ್ಕದ ಮನೆಯ ವರನ್ನೆಲ್ಲಾ ವಾಚಾಮಗೋಚರ ಬಯ್ಯುತ್ತಾ ಹೊಡೆದಾಟಗಳಿಗೂ ತಯಾರಾದ. ಬಡಾವಣೆ ಜನರೆಲ್ಲಾ ಸೇರಿ ಅವನ ಹೆಡೆ-ಮುರಿ ಕಟ್ಟಿ ಪೋಲೀಸ್ ಠಾಣೆಗೆ ತಂದರು. ತಮ್ಮವನೊಬ್ಬನಿಗೆ ಹಾಗಾದ ಬಗೆಗೆ ಅನುಕಂಪವಿದ್ದರೂ ನಿರ್ವಾಹವಿಲ್ಲದೆ ಆಸ್ಪತ್ರೆಗೆ ಕಳುಹಿಸಬೇಕಾಯಿತು. ಕಟ್ಟು ಗಳನ್ನೆಲ್ಲಾ ಬಿಡಿಸಿ ಅಂದಿನ ಕರ್ತವ್ಯ ನಿರತ ಡಾ॥ ಅಶೋಕ್ ಪೈಯವರು ಪರೀಕ್ಷೆ ಮಾಡಲನುವಾದರು. ಅವರ ಮೇಲೂ ಹೌಹಾರಿ ಬೈಯತೊಡಗಿದ. ಅಲ್ಲಿಂದ ಎದುರುಗಡೆಯ ವಿಶಾಲವಾದ ಹಾಲ್ (Hall)ನ ನಡುವೆ ನಿಂತುಕೊಂಡ. ಕೈಕಾಲುಗಳನ್ನತ್ತಿತ್ತ ಬೀಸುತ್ತಾ ಹತ್ತಿರ ಬಂದವರನ್ನು ಮುಗಿಸಿ ಬಿಡುತ್ತೇನೆಂದು ಆರ್ಭಟಿಸುತ್ತಿದ್ದ. ಜೊತೆಗೆ ಬಂದಿದ್ದ ಪೋಲೀಸಿನವರೂ ಸೇರಿದಂತೆ, ಇತರ ಸಿಬ್ಬಂದಿಗಳೆಲ್ಲಾ ಬಾಗಿಲುಗಳನ್ನು ಮುಚ್ಚಿ, ಗೋಡೆಗಳ ಪಕ್ಕದಲ್ಲಿ ನಿಂತುಬಿಟ್ಟರು. ಆ ಹಂತದಲ್ಲಿ ನಾನು ಆಸ್ಪತ್ರೆಗೆ ಬರಬೇಕೆಂದು ಕರೆ ಕಳುಹಿಸಿದರು. ಆಸ್ಪತ್ರೆಯ ಹಾಲ್ ಪ್ರವೇಶಿಸುತ್ತಲೇ ನನ್ನ ಮೈ ನವಿರೇಳುವಂತಾಯಿತು. ಅದೆಲ್ಲಿಂದಲೋ ಧೈರ್ಯ ಉಕ್ಕೇರಿ ಬಂದಂತಾಯಿತು. ಅವನನ್ನೇ ದುರುಗುಟ್ಟಿ ನೋಡುತ್ತಾ ಹಠಾತ್ತನೆ ಅವನತ್ತ ಧಾವಿಸಿದೆ. ಒಡನೆಯೇ ಅವನ ಎರಡು ಕೈಗಳನ್ನು

ಬೆನ್ನಿನ ಕಡೆ ತಿರುಗಿಸಿದೆ. ಆಸ್ಪತ್ರೆಯ ಸಿಬ್ಬಂದಿಗಳಲ್ಲಿ ಕೆಲವರು ನನಗೆ ನೆರವಾಗಿ ಬಂದರು. ಅವನ ಕೈಗಳನ್ನು ಹಿಂದುಗಡೆ ಬಿಗಿದು ಕಟ್ಟಿದರು. ಆ ತನಕ ಸ್ತಬ್ಧನಾಗಿದ್ದ ಪೇದೆ, "ಓಹೋ ಸಾಹೇಬ್ರು ಬಂದೆ ಬಿಟ್ರಪ್ಪಾ, ಇನ್ನು ನಾನೇನು ಮಾಡ್ಹೋಲ್ಲಪ್ಪ" ಎಂದು ಶರಣಾದ. ಕರ್ತವ್ಯ ನಿರತ ವೈದ್ಯರು ಪರೀಕ್ಷೆ ಮಾಡಿ ಕುಡಿದು ಅಮಲೇರಿದ ಬಗೆಗೆ ದೃಢೀಕರಣ ಪತ್ರ ಕೊಟ್ಟರು. ಅಂದು ರಾತ್ರಿ ಪೋಲೀಸ್ ಪಹರೆಯೊಂದಿಗೆ ಆಸ್ಪತ್ರೆಯ ಕೈದಿಗಳ ವಾರ್ಡಿನ ಅತಿಥಿಯಾಗಿದ್ದ.

ಕೆಲವು ತಿಂಗಳ ನಂತರ ಆ ಪ್ರಕರಣದ ಬಗೆಗೆ ಅವನ ಇಲಾಖೆಯವರು 'ಇಲಾಖಾ ತನಿಖೆ' ನಡೆಸಿದರು. ಡಾ॥ ಅಶೋಕ ಪೈ ಮತ್ತು ನನ್ನನ್ನು ಸಾಕ್ಷೀದಾರರನ್ನಾಗಿ ಕರೆಸಿದ್ದರು. ಬಹುಶಃ ಪೋಲೀಸ್ ಇನ್ಸ್‌ಪೆಕ್ಟರ್ ದರ್ಜೆಯ ಅಧಿಕಾರಿಯೊಬ್ಬರು ಪ್ರಕರಣದ ಬಗೆಗೆ ಒಂದು ಕೊಠಡಿಯಲ್ಲಿ ಹೇಳಿಕೆಗಳನ್ನು ದಾಖಲು ಮಾಡಿಕೊಂಡರು. ಅವನು ನಮ್ಮನ್ನೇನಾದರೂ ಕೇಳುವುದಿದ್ದರೆ ಕೇಳಲು ಅವಕಾಶ ಮಾಡಿಕೊಟ್ಟರು. ಅವನು ತಾನೇನು ಕೇಳುವುದಿಲ್ಲವೆಂದನು. ನಂತರ ನಾವು ಹೋಗಬಹುದೆಂದರು. ಅವನ ಪರ ವಾದಿಸಿದ ಅಧಿಕಾರಿಯೊಬ್ಬರು ಸಂಬಂಧಿಸಿದ ಪ್ರಕರಣ ಇಬ್ಬರು ಸಾಕ್ಷಿಗಳನ್ನೂ ಒಟ್ಟಿಗೇ ಕೂರಿಸಿಕೊಂಡು ಹೇಳಿಕೆಗಳನ್ನು ದಾಖಲು ಮಾಡಿದ್ದು ನ್ಯಾಯಸಮ್ಮತವಲ್ಲ ಎಂದು ವಾದಿಸಿದರಂತೆ. ಆ ವಾದಕ್ಕೇ ಮನ್ನಣೆ ದೊರೆತು ಅವನನ್ನು ಅಪರಾಧದಿಂದ ಮುಕ್ತಗೊಳಿಸಿದರಂತೆ! ನಮ್ಮನ್ನು ಒಟ್ಟಿಗೆ ಕೂರಿಸಿಕೊಂಡು ಹೇಳಿಕೆ ದಾಖಲು ಮಾಡುವಂತೆ ಕೋರಿಕೆ ಸಲ್ಲಿಸಿರಲಿಲ್ಲ. ಒಬ್ಬರ ಹೇಳಿಕೆ ದಾಖಲಾಗುವಾಗ ಇನ್ನೊಬ್ಬರು ಹೊರಗಿರಬೇಕೆಂದು ವಿಚಾರಣಾಧಿಕಾರಿ ಹೇಳಲೂ ಇಲ್ಲ. ತಮ್ಮ ಇಲಾಖೆಯವನೊಬ್ಬನನ್ನು ಪಾರು ಮಾಡಲು ಏನೆಲ್ಲಾ ಕಣ್ಣು ಮುಚ್ಚಾಲೆಯಾಡುತ್ತಾರೆಂಬುದಕ್ಕೆ ಇದೊಂದು ಸಹಜ ನಿದರ್ಶನವಾಗಬಹುದು. ಮುಂದಿನ ಊರಿನಲ್ಲಿ ನಾನು ಕರ್ತವ್ಯನಿರತನಾಗಿದ್ದಾಗ ವಿಚಾರಣೆ ನಡೆಸಿದ ಅಧಿಕಾರಿ ನಮ್ಮ ಪ್ರಾಂತ್ಯದ ವರಿಷ್ಠ ಹುದ್ದೆಯ ವ್ಯಕ್ತಿಯೊಬ್ಬರ ಅಂಗರಕ್ಷಕದಳದಲ್ಲಿದ್ದುದನ್ನು ನೋಡಿ ಬೆರಗಾದೆ. ಅವರೂ ನನ್ನ ಕಡೆ ನೋಡಿ ಮುಗುಳ್ನಗೆ ಬೀರಿದರು!

## ಬೌಲ್ ಸ್ಟೆರಿಲೈಸರ್ ಪ್ರಕರಣ

ಮಾರ್ಚ್ ತಿಂಗಳ (೧೯೭೯) ಕೊನೆಯ ವಾರವಿರಬೇಕು. ಆ ವರ್ಷ ಶಿವಮೊಗ್ಗ ಇಂಡಿಯನ್ ಮೆಡಿಕಲ್ ಅಸೋಸಿಯೇಷನ್ ಶಾಖಾ ಅಧ್ಯಕ್ಷನಾಗಿದ್ದೆ. ಒಂದು ಭಾನುವಾರ ರಾಜ್ಯ ಮಟ್ಟದ ಸಮ್ಮೇಳನವೊಂದು ಜರುಗುತ್ತಿದ್ದು, ಅದರಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಂಡಿದ್ದೆ. ಆಸ್ಪತ್ರೆ ಕಡೆಯಿಂದ ಯಾವುದೇ ತುರ್ತು ಪರಿಸ್ಥಿತಿಯಲ್ಲಿ ಭಾಗವಹಿಸಲು ಸಾಧ್ಯವಾಗುತ್ತಿರಲಿಲ್ಲವಾದ್ದರಿಂದ ಅಧಿಕೃತವಾಗಿ ರಜೆ ಪಡೆದುಕೊಂಡು, ಬೇರೊಬ್ಬರನ್ನು ಬದಲಿಯಾಗಿ ನೇಮಕ ಮಾಡಲಾಗಿತ್ತು. ಆಸ್ಪತ್ರೆಗಳ ಓ.ಟಿ. ಯಂಥ ವಿಭಾಗಗಳಲ್ಲಿ ಹಿರಿಯ ಗಾತ್ರದ ಸಲಕರಣೆಗಳನ್ನು ಬಿಸಿ ನೀರಿನಲ್ಲಿಟ್ಟು ಕುದಿಸಿ ಶುದ್ಧೀಕರಿಸಲು ವಿದ್ಯುತ್ ಆಧಾರಿತ ಸಲಕರಣೆ - ಬೌಲ್ ಸ್ಟೆರಿಲೈಸರ್ (Bowl sterilizer)ಗಳನ್ನು ಬಳಸಲಾಗುತ್ತದೆ. ನಮ್ಮ ಆಸ್ಪತ್ರೆಗೆ ಅಂತಹವನ್ನು ಸರಬರಾಜು ಮಾಡಲು ವಾಹನವೊಂದರಲ್ಲಿ ಒಂದು ಕಂಪನಿಯ ಪ್ರತಿನಿಧಿಗಳು ಬಂದರು; ಅಂದು ಕಾರ್ಯ ನಿರ್ವಹಿಸುತ್ತಿದ್ದ ಆರ್.ಎಂ.ಓ. ಅವರನ್ನು ನೋಡಿದರು. ನಮ್ಮ ಆಸ್ಪತ್ರೆಗೆ ಅಂತಹ ಎರಡನ್ನು ನೀಡುವುದಕ್ಕೆ ಇಲಾಖೆಯಿಂದ ಆದೇಶವಾಗಿದೆಯೆಂತಲೂ ಹಾಗೂ ಪಕ್ಕದ ಜಿಲ್ಲೆಯ ಕೆಲವು ಆಸ್ಪತ್ರೆಗಳಿಗೂ ಸರಬರಾಜು ಮಾಡಲು ಇನ್ನೂ ಕೆಲವನ್ನು ವಾಹನದಲ್ಲಿ ತಂದಿರುವುದರಿಂದ ನಮ್ಮ ಸಲಕರಣೆಗಳನ್ನು ಕೂಡಲೇ ಸ್ವೀಕರಿಸಿ ಆ ಬಗೆಗೆ ರಶೀದಿ ಕೊಡಬೇಕೆಂದೂ ಕೇಳಲಾರಂಭಿಸಿ

ದರು. ಅಂತಹ ವಿಷಯಗಳಲ್ಲಿ ಹೇಗೆ ನಡೆದುಕೊಳ್ಳಬೇಕೆಂಬುದರ ಬಗೆಗೆ ತಿಳಿದಿರದ ಅವರು ಸಭೆಯ ನಡುವೆ ನನ್ನನ್ನು ಭೇಟಿಮಾಡಿ ವಿಷಯ ತಿಳಿಸಿದರು. ಜೊತೆಗೆ ಕಂಪನಿಯ ಪ್ರತಿನಿಧಿಗಳೂ ಬಂದಿದ್ದರು. ಆ ದಿನ ಅವುಗಳನ್ನು ಸ್ವೀಕರಿಸಲಾಗದೆಂದು ಖಡಾ ಖಂಡಿತವಾಗಿ ನಿರಾಕರಿಸಿದೆ. ಅಂದು ಭಾನುವಾರ ರಜೆಯ ದಿನ; ಅಲ್ಲದೆ ಅವುಗಳನ್ನು ಸರಬರಾಜು ಮಾಡುವ ಬಗೆಗೆ ಮುನ್ಸೂಚನೆ ನೀಡಿಲ್ಲ. ಅವೆಲ್ಲಕ್ಕಿಂತ ಪ್ರಮುಖವಾಗಿ ಅವು ವಿದ್ಯುತ್‌ಚಾಲಿತ ಉಪಕರಣಗಳು, ಅವುಗಳೊಳಗೆ ವಿದ್ಯುತ್ ಹರಿಸಿ, ಸರಿಯಾದ ರೀತಿಯಲ್ಲಿ, ಕಾರ್ಯನಿರ್ವಹಿಸುತ್ತವೆಯೊ, ಇಲ್ಲವೋ ಎಂದು ಪರೀಕ್ಷೆ ಜರುಗಿಸದೆ ಸ್ವೀಕರಿಸುವಂತಿಲ್ಲ, ಸ್ವೀಕರಿಸಿದರೂ ಅವುಗಳ ಬಿಲ್ಲನ್ನು ಪಾವತಿಸಲಾಗದೆಂದು ಕಟುವಾಗಿಯೇ ಹೇಳಿದೆ. ಪ್ರತಿನಿಧಿಗಳು ಹಲವು ಸಬೂಬುಗಳನ್ನು ಮುಂದೊಡ್ಡಿ ಒತ್ತಾಯ ಮಾಡಿದರು. ಅವ್ಯಾವಕ್ಕೂ ನಾನು ಸಮ್ಮತಿಸಲಿಲ್ಲ. ಮರುದಿನ ಬೆಳಿಗ್ಗೆ ಆಸ್ಪತ್ರೆಗೆ ತಂದರೆ ಪರಿಶೀಲನೆ ನಡೆಸಿ ಮುಂದಿನ ಕಾರ್ಯಕ್ರಮ ಜರುಗಿಸುವ ಭರವಸೆ ಇತ್ತೆ.

ಮರುದಿನ ಅವುಗಳನ್ನು ಪರಿಶೀಲಿಸಲಾಯಿತು. ಅಗಲವಾದ ಐದು ಸ್ಟೆಯಿನ್‌ಲೆಸ್ ಸ್ಟೀಲ್ ಷೀಟ್‌ಗಳನ್ನು ಚೌಕಾಕಾರದಲ್ಲಿ ಸೇರಿಸಿ ತುಂಬಾ ಒರಟೊರಟಾಗಿ ಬೆಸುಗೆ ಮಾಡಿ, ಒಂದು ಚಚ್ಚೌಕ ಬೋಗುಣಿಯನ್ನು ನಿರ್ಮಾಣ ಮಾಡಿದಂತಿತ್ತು. ಒಂದು ಕಡೆಯಿಂದ ವಿದ್ಯುತ್ ಸಂಪರ್ಕ ಉಂಟುಮಾಡಿ ಒಳಗಡೆ ಇಲೆಕ್ಟ್ರಿಕ್ ಕಾಯಿಲ್ ಅಳವಡಿಸಿದ್ದರು. ಇನ್ನೊಂದು ಷೀಟನ್ನು ಮುಚ್ಚಳ ವಾಗಿ ಅಳವಡಿಸಿ ಕಾಲು ತುಳಿತದಿಂದ ಯಾಂತ್ರಿಕವಾಗಿ ಮುಚ್ಚಿ ತೆಗೆಯುವ ಏರ್ಪಾಡಾಗಿತ್ತು. ಅದರ ಕಾರ್ಯ ನಿರ್ವಹಣೆಯನ್ನು ಖಚಿತಪಡಿಸಲು ನೀರು ತುಂಬಿ ಇಲೆಕ್ಟ್ರಿಕ್ ಸಂಪರ್ಕ ಗೊಳಿಸಿದೆವು. ಮೊದಲಿಗೆ ಬೆಸುಗೆ ಮಾಡಿದ ಕೆಲವು ಕಡೆ ನೀರು ಸೋರುತ್ತಿತ್ತು; ಎಷ್ಟೇ ಹೊತ್ತಾದರೂ ನೀರು ಬಿಸಿಯೇರಲೇ ಇಲ್ಲ! ಬಹುಶಃ ವಿದ್ಯುತ್ ಸಂಪರ್ಕದ ಏರ್ಪಾಡು ಸಹಾ ಸರಿಯಾಗಿರಲಿಲ್ಲವೆನಿಸಿತು. ಒಳ್ಳೆಯ ಗುಣಮಟ್ಟದ ಸ್ಟೆಯಿನ್‌ಲೆಸ್ ಸ್ಟೀಲ್‌ನಿಂದ ಅವು ತಯಾರಾಗಿವೆಯೆಂದು ಸಂಬಂಧಿಸಿದ ಸರ್ಕಾರಿ ಇಲಾಖೆಯವರಿಂದ ಪಡೆದುಕೊಂಡಿದ್ದ ದೃಢೀಕರಣ ಪತ್ರ ಬೇರೆ! ಆ ಸಮಯದಲ್ಲಿ ಹೆಚ್ಚೆಂದರೆ ಎರಡು ಸಾವಿರ ರೂಪಾಯಿಗಳು ತಗುಲಬಹುದಾದ ಆ ಸಲಕರಣೆಗೆ ಅವರ ಬೆಲೆ ನಾಲ್ಕೋ ಐದೋ ಸಾವಿರ ರೂಪಾಯಿಗಳ ಬಿಲ್ಲು ಹಾಜರು ಪಡಿಸಿದರು.

ಆ ಪರಿಸ್ಥಿತಿಯ ಸಲಕರಣೆಗಳನ್ನು ಸ್ವೀಕರಿಸಲು ನಿರಾಕರಿಸಿದೆ. ಡಿ.ಎಂ.ಓ. ಅವರನ್ನೂ ಸ್ಥಳಕ್ಕೆ ಕರೆಸಿ ಪರಿಶೀಲಿಸುವಂತೆ ಮಾಡಿದೆ; ಅವರೂ ಸಹ ನನ್ನ ನಿಲುವನ್ನು ಸಮರ್ಥಿಸಿದರು. ಆರ್ಥಿಕ ವರ್ಷಾವಧಿ ಮುಗಿಯುವುದಕ್ಕೆ ಕೇವಲ ಐದಾರು ದಿನಗಳಿರುವುದರಿಂದ ಅವುಗಳನ್ನು ಸ್ವೀಕರಿಸಿ ಬಿಲ್ಲುಗಳನ್ನು ದೃಢೀಕರಿಸದಿದ್ದರೆ ಆ ಬಗೆಗೆ ಕಾಯ್ದಿರಿಸಿದ ಹಣವೆಲ್ಲಾ ರದ್ದಾಗಿ ಇಲಾಖೆ ತುಂಬಾ ನಷ್ಟ ಅನುಭವಿಸಬೇಕಾಗುತ್ತದೆಂದು ಕಂಪನಿಯ ಪ್ರತಿನಿಧಿ ಉತ್ತರ ನೀಡಿ, ಅಂತಹ ಪರಿಸ್ಥಿತಿಗೆ ನಾವು ಕಾರಣರಾದಂತಾಗುತ್ತದೆಂದು ವಾದಿಸ ತೊಡಗಿದರು. ಆ ದಿಸೆಯಲ್ಲಿ ನಾವು ಯಾವುದಾದರೊಂದು ನಿರ್ಣಯ ತೆಗೆದುಕೊಳ್ಳಬೇಕಾದ ಸಂದಿಗ್ಧ ಪರಿಸ್ಥಿತಿಯನ್ನು ಎದುರಿಸು ವಂತಾಯಿತು. ಅದರಿಂದ ಅವರು ತಂದ ಸಲಕರಣೆಗಳನ್ನು ಸ್ವೀಕರಿಸಲಾಗುವುದೆಂದೂ ಅವುಗಳ ಪರಿಸ್ಥಿತಿ ಬಗೆಗೆ ಆ ದಿನವೇ ಇಲಾಖೆಗೆ ಪತ್ರ ಬರೆದು ಅವರಿಂದ ಒಪ್ಪಿಗೆ ಬಂದರೆ ಬಿಲ್ಲುಗಳನ್ನು ದೃಢೀಕರಿಸುವ ಭರವಸೆ ಇತ್ತು ಅವರನ್ನು ಸಾಗಹಾಕಿದೆವು.

ಮರುದಿನದ ವರ್ತಮಾನ ಪತ್ರಿಕೆಗಳಲ್ಲಿ ಆರೋಗ್ಯ ಇಲಾಖೆಯವರು ರಾಜ್ಯಾದ್ಯಂತದ ಆಸ್ಪತ್ರೆಗಳಿಗೆ 'ಬೊವೆಲ್ ಸ್ಟೆರಿಲೈಸರ್'ಗಳನ್ನು ಖರೀದಿಸುವಲ್ಲಿ ಮಂತ್ರಿ ಮಹೋದಯದವರಿಂದ

ಹಿಡಿದು ಸರ್ಕಾರದ ವಿವಿಧ ಮಟ್ಟಗಳಲ್ಲಿ ನಡೆದ ಅವ್ಯವಹಾರಗಳ ರೋಚಕ ವರದಿಗಳು ಮುಖ ಪುಟಗಳಲ್ಲೇ ರಾರಾಜಿಸಿದವು. ದೆಹಲಿಯಿಂದ ಬೆಂಗಳೂರಿನವರೆಗೂ ಜರುಗಿದ ಭ್ರಷ್ಟಾಚಾರದ ವಿವರಗಳು ಬಯಲಾಗಿದ್ದವು. ನಂತರದ ಕೆಲವು ದಿನಗಳಲ್ಲೇ ಐದಾರು ಜನ ಡಿ.ಎಂ.ಓ./ ಡಿ.ಎಚ್.ಓ.ಗಳನ್ನು ಸರ್ಕಾರಿ ಸೇವೆಯಿಂದ ಅಮಾನತ್ತುಗೊಳಿಸಿದ್ದ ಸುದ್ದಿಯೂ ಪ್ರಕಟವಾಯಿತು. ಸಂಬಂಧಿಸಿದ ಬಿಲ್ಲುಗಳನ್ನು ನಾವು ದೃಢೀಕರಿಸದಿದ್ದುದರಿಂದ ಬಚಾವಾಗಿದ್ದೆವು!

## ಗೃಹನಿರ್ಮಾಣ

ಸುಮಾರು ೧೯೭೩ರ ಸಮಯದಲ್ಲಿ ಮೆಗ್ಗಾನ್ ಆಸ್ಪತ್ರೆಯ ಹಿಂಭಾಗದಲ್ಲಿನ ಮಿಷನ್ ಕಾಂಪೌಂಡು ಎಂಬ ಕಿರು ಬಡಾವಣೆಯಲ್ಲಿ ಒಂದು ನಿವೇಶನವನ್ನು ಖರೀದಿ ಮಾಡಿದ್ದೆವು. ಸರ್ಕಾರದ ಸೇವಾ ನಿಮಿತ್ತ ದೂರ ದೂರದ ಊರುಗಳಲ್ಲಿ ಸುತ್ತಾಡಿಕೊಂಡಿರುತ್ತಿದ್ದುದರಿಂದ ಆ ತನಕ ಮನೆ ನಿರ್ಮಿಸುವ ಯೋಚನೆ ಮಾಡಲಾಗಿರಲಿಲ್ಲ. ಈಗ ಅದರ ಯೋಜನೆ ಹಾಗೂ ತಗಲುವ ಅಂದಾಜು ಖರ್ಚುವೆಚ್ಚಗಳ ಬಗೆಗೆ ನೀಲಿ ನಕಾಶೆಯನ್ನು ತಯಾರು ಮಾಡಿಸಿದೆ. ಸರ್ಕಾರಿ ನೌಕರರಿಗೆ ಮುಂದೆ ಉಳಿದಿರುವ ಸೇವಾ ಅವಧಿಯಲ್ಲಿ ದೊರೆಯಬಹುದಾದ ವೇತನದ ಮೊತ್ತವನ್ನು ಲೆಕ್ಕ ಹಾಕಿ ಅದರಲ್ಲಿ ಅರ್ಧ ಭಾಗವನ್ನು ಸಾಲವಾಗಿ ನೀಡುವ ಪರಿಪಾಟವಿದೆ. ಮುಂದೆ ಉಳಿದ ವರ್ಷಗಳಲ್ಲಿ ಪ್ರತಿ ತಿಂಗಳೂ ನೌರಕನ ವೇತನದಲ್ಲಿ ಅರ್ಧ ಭಾಗವನ್ನು ಸರ್ಕಾರ ಹಿಡಿದುಕೊಳ್ಳುತ್ತದೆ. ಹಾಗೆ ನನಗೆ ದೊರೆಯಬೇಕಾದ ಹಣವನ್ನು ಪಡೆದುಕೊಳ್ಳಲು ಭಗೀರಥ ಪ್ರಯತ್ನ ಮಾಡಬೇಕಾಯಿತು. ಆ ಸಮಯದಲ್ಲಿ ವಾರದಲ್ಲೊಂದು ಸಾರಿಯಾದರೂ ಬೆಂಗಳೂರಿಗೆ ಹೋಗಬೇಕಾಗುತ್ತಿತ್ತು. ಮರಮುಟ್ಟುಗಳನ್ನು ಒದಗಿಸಿಕೊಳ್ಳುವಲ್ಲಿ ಮಾವನವರ ಮನೆಯವರಿಂದಲೂ ನೆರವು ದೊರೆಯಿತು. ಕಬ್ಬಿಣ ಸಿಮೆಂಟ್‌ನಂಥವುಗಳಿಗೆ ಆ ಕಾಲದಲ್ಲಿ ನಿರ್ಬಂಧ(Control) ಜಾರಿಯಲ್ಲಿದ್ದುದರಿಂದ ಮೊದಲ ದಿನಗಳಲ್ಲಿ ಸ್ವಲ್ಪ ಪ್ರಯಾಸವಾಗುತ್ತಿತ್ತು. ಈ ವಿಷಯ ಆಗಿನ ಜಿಲ್ಲಾಧಿಕಾರಿಗಳಾಗಿದ್ದ ವಿಠಲ ರೈಯವರ ಗಮನಕ್ಕೂ ಬಂದಿತಂತೆ. ನನ್ನ ಕಾರ್ಯ ವೈಖರಿಯ ಪರಿಚಯವಿದ್ದ ಅವರು ಸಂಬಂಧಿಸಿದ ವ್ಯಾಪಾರಿಗಳಿಗೆ ಎಚ್ಚರಿಕೆ ನೀಡಿ ನನ್ನ ಪರವಾನಿಗೆಯ ಮೊತ್ತದ ಸಿಮೆಂಟನ್ನು ಸರಿಯಾಗಿ ಕಾಲ ಕಾಲಕ್ಕೆ ಒದಗಿಸುತ್ತಿರಬೇಕೆಂದು ತಾಕೀತು ಮಾಡಿದರಂತೆ. ಅಂತೂ ಕೆಲಸ ಆರಂಭವಾದ ಒಂದೂವರೆ ವರ್ಷದಲ್ಲಿ ನಿರ್ಮಾಣ ಕಾರ್ಯ ಮುಗಿದು ೧೯೭೮ರ ಅಕ್ಟೋಬರ್‌ನಲ್ಲಿ ಗೃಹಪ್ರವೇಶ ನೆರವೇರಿತು.

## ಇಲಾಖೆಯಲ್ಲಿ ಬಡ್ತಿಯ ಅವಾಂತರಗಳು

ಮೊತ್ತಮೊದಲು ಶಿಕಾರಿಪುರದಲ್ಲಿ ಸರ್ಕಾರಿ ಸೇವೆಗೆ ಸೇರಿದ ಹುದ್ದೆಗೆ 'ಸ್ಥಳೀಯ ಅಭ್ಯರ್ಥಿ' ಎಂಬ ನಾಮಧೇಯವಿತ್ತು. ಹಾಗೆಂದರೆ ಕೇವಲ ಆರು ತಿಂಗಳಿಗಾಗಿ ನೇಮಕ ಮಾಡುವ ಹಂಗಾಮಿ ಕೆಲಸ. ತಿಂಗಳ ವೇತನ ಕೇವಲ ೧೦೦ ರೂಪಾಯಿಗಳು; ಆದರೂ ಗೆಝೆಟೆಡ್ ಆಫೀಸರ್ (ಪತ್ರಾಂಕಿತ ಹುದ್ದೆ)! ಅದೇ ಹುದ್ದೆ ಹಲವು ವರ್ಷಗಳು ಎಡೆಬಿಡದೇ ಮುಂದುವರಿದರೂ ಇತರ ಇಲಾಖೆಯ ಅಂತಹುದೇ ರೀತಿಯ ಹುದ್ದೆಗಳಲ್ಲಿರುತ್ತಿದ್ದವರಿಗೆ ದೊರೆಯುತ್ತಿದ್ದ ವಾರ್ಷಿಕ ವೇತನದಲ್ಲಿ ಏರಿಕೆಗೆ (Increment) ನಮಗೆ ಅವಕಾಶವಿರುತ್ತಿರಲಿಲ್ಲ. ಶಿಕಾರಿಪುರದಲ್ಲೇ ಇದ್ದಾಗ ಆ ಬಗೆಗೆ ಅಕೌಂಟೆಂಟ್ ಜನರಲ್‌ಗೆ ಬರೆದುಕೊಂಡಿದ್ದೆ. ನಮ್ಮ ಇಲಾಖೆಯ ಈ ಹುದ್ದೆ, ಇತರ ಇಲಾಖೆಯವರಂತೆ Running scale ಶ್ರೇಣಿಯದಲ್ಲ; ಅದು ಒಂದೇ ಮಟ್ಟದಲ್ಲಿ ಸ್ಥಿರ

ಪಡಿಸಿದ್ದಾದ್ದರಿಂದ ಪ್ರತಿ ವರ್ಷ ಕಳೆದ ನಂತರ ವೇತನ ಏರಿಕೆ ಮಾಡಲು ಆಗುವುದಿಲ್ಲವೆಂದು ವಿಶದೀಕರಿಸಿದ್ದರು. ಇದು ಆ ಕಾಲದ ಮೆಡಿಕಲ್ ಇಲಾಖೆಯ ವರಿಷ್ಠರು ತಮ್ಮ ಕೆಳ ಶ್ರೇಣಿಯಲ್ಲಿರುವ ವೈದ್ಯರ ಸೇವಾ ನಿಯಮಗಳ ಬಗೆಗೆ ವಹಿಸುತ್ತಿದ್ದ ಕಾಳಜಿಯ ಪ್ರತೀಕವೇ ಸರಿ.

ಇಲಾಖೆಯ ವಿವಿಧ ಶ್ರೇಣಿಗಳಿಂದ ಬಡ್ತಿ ದೊರೆಯುವುದೊಂದು ಬಹುಜನರ ಪಾಲಿಗೆ ನನಸಾಗದ ಕನಸೇ ಆಗಿ ಬಿಡುತ್ತಿತ್ತು. ಸಂಸ್ಥಾನದಲ್ಲಿ ಎಷ್ಟು ಅಸಿಸ್ಟೆಂಟ್ ಸರ್ಜನ್‌ಗಳಿರಬೇಕು, ಎಷ್ಟು ಜನ ಸರ್ಜನರಿರಬೇಕು (ಡಿ.ಎಂ.ಓ. ಶ್ರೇಣಿ) ಎಂಬುದು ಹಿಂದೆಂದೋ ನಿರ್ಧಾರವಾಗಿತ್ತಂತೆ. ಅಂತಹ ಡಿ.ಎಂ.ಓ/ಸರ್ಜನ್ ಶ್ರೇಣಿಯ ತುತ್ತ ತುದಿಯಲ್ಲಿರುತ್ತಿದ್ದವರೊಬ್ಬರು ಇಲಾಖಾ ಮುಖ್ಯಸ್ಥ, ಅಂದರೆ ಸೀನಿಯರ್ ಸರ್ಜನ್‌ರಾಗುವುದು ವಾಡಿಕೆಯಂತಾಗಿತ್ತು. ಇತರ ಇಲಾಖೆಗಳಲ್ಲಿ ಇಲಾಖಾ ಮುಖ್ಯಸ್ಥರ ಕೆಳಗೆ ಸಹಾಯಕ/ಜಂಟೀ ನಿರ್ದೇಶಕರುಗಳ ದಂಡೇ ಇರುತ್ತಿದ್ದರೂ ನಮ್ಮ ಇಲಾಖೆಯಲ್ಲಿ ಬಹಳ ಕಾಲದವರೆಗೂ ಅಂತಹ ಶ್ರೇಣಿಗಳು ಸೃಷ್ಟಿಯಾಗಲೇ ಇಲ್ಲ. ತುಂಬಾ ಸೀಮಿತವಾಗಿದ್ದ ಈ ಪರಿಸ್ಥಿತಿಯಲ್ಲಿ ಸರ್ಜನರು ಅಕಾಲ ಮರಣವನ್ನಪ್ಪಿಯೋ, ಮುಂದಿನ ಹುದ್ದೆಗೆ ಬಡ್ತಿ ಹೊಂದಿದರೋ ಅಥವಾ ವಯಸ್ಸಿನ ಮಿತಿಯಿಂದ (Superannuation) ಸಹಜ ನಿವೃತ್ತಿಯಾದಾಗಲೋ ಕೆಳಗಿನ ಶ್ರೇಣಿಯ ಅಸಿಸ್ಟೆಂಟ್ ಸರ್ಜನರಿಗೆ ಬಡ್ತಿಯ ಅವಕಾಶ ಉಂಟಾಗುತ್ತಿದ್ದುದು. ಹಾಗೆ ಖಾಲಿಯಾದಂತೆಲ್ಲಾ ಮುಂದಿನ ಸರದಿಯವರಿಗೆ ಕೂಡಲೇ ಬಡ್ತಿ ನೀಡುವುದಂತೂ ಅಪರೂಪವೆ. ಅಂತಹ ನಾಲ್ಕಾರು ಹುದ್ದೆಗಳು ಖಾಲಿಯಾಗುವವರೆಗೂ ಮೇಲಿನ ಸ್ಥಾನದಲ್ಲಿರುವವರು ಕಾಯಬೇಕಾಗುತ್ತಿತ್ತು. ಎಷ್ಟೋ ಜನ ಅಸಿಸ್ಟೆಂಟ್ ಸರ್ಜನರು ಇಡೀ ಜೀವಮಾನವೆಲ್ಲಾ ಸೇವೆಯಲ್ಲಿದ್ದರೂ ಬಡ್ತಿಯ ಅವಕಾಶ ದೊರೆಯದೇ ನಿವೃತ್ತರಾಗುತ್ತಿದ್ದುದು ಅಪರೂಪವಾಗಿರುತ್ತಿರಲಿಲ್ಲ. ನನ್ನ ನಿದರ್ಶನವನ್ನೇ ತೆಗೆದುಕೊಂಡರೆ ಇಪ್ಪತ್ತೇಳು ವರ್ಷಗಳಿಗೂಹೆಚ್ಚಿನ ಸೇವಾ ಅವಧಿಯಲ್ಲಿ ಒಂದೇ ಒಂದು ಬಡ್ತಿ ಪಡೆಯಲು ಸುಮಾರು ೨೩ ವರ್ಷಗಳು ಕಾಯಬೇಕಾಯಿತು. ಬಡ್ತಿಯ ನಂತರ ಕೇವಲ ಐದೇ ವರ್ಷಗಳಲ್ಲಿ ನಿವೃತ್ತಿ ಹೊಂದಿದೆ.

ವೈದ್ಯಕೀಯ/ಆರೋಗ್ಯ ಇಲಾಖೆಯಲ್ಲಿ ಸೇವಾ ನಿರತರಾಗಿದ್ದ ವೈದ್ಯರ ಇಂತಹ ದಯನೀಯ ಪರಿಸ್ಥಿತಿಗೆ ಇಲಾಖೆ ಅಥವಾ ಸರ್ಕಾರಗಳು ಮಾತ್ರ ಕಾರಣವೆಂದು ಹೇಳಲಾಗದು. ಸೇವಾನಿರತ ವೈದ್ಯರೇ ಬಹುಪಾಲು ಕಾರಣರಾಗಿರುತ್ತಿದ್ದರೆಂದರೆ ಅತಿಶಯೋಕ್ತಿಯಾಗಲಾರದು. ಒಂದು ಸಾರಿ ಹೇಗೋ ಅಸಿಸ್ಟೆಂಟ್ ಸರ್ಜನ್ ಹುದ್ದೆಯನ್ನು ಗಿಟ್ಟಿಸಿಕೊಂಡರೆಂದರೆ ಮುಗಿಯಿತು; ಮುಂದೆ ಸಂಬಳ ಸಾರಿಗೆ, ಸವಲತ್ತು ಬಡ್ತಿ ಮುಂತಾದ ಸೌಲಭ್ಯಗಳನ್ನು ದೊರಕಿಸಿಕೊಳ್ಳುವಲ್ಲಿ ದಿವ್ಯ ನಿರಾಸಕ್ತಿ ಅವರನ್ನೆಲ್ಲಾ ಆವರಿಸಿಕೊಂಡು ಬಿಡುತ್ತದೆ. ಬಹಳಷ್ಟು ಜನ ತಾವು ಕೆಲಸ ಮಾಡುವುದಕ್ಕೆ ಆರಿಸಿಕೊಂಡ ಆಸ್ಪತ್ರೆ ಮತ್ತು ಊರುಗಳಲ್ಲಿ ಸಾಕಷ್ಟು ವರ್ಷಗಳು ತಳವೂರಿ ನೆಲಸುವ ಯೋಜನೆ ರೂಪಿಸಿಕೊಳ್ಳುತ್ತಾರೆ. ಸರ್ಕಾರಿ ವೇತನವಲ್ಲದೆ ಖಾಸಗಿ ಪ್ರ್ಯಾಕ್ಟೀಸನ್ನು ವೃದ್ಧಿಗೊಳಿಸುವತ್ತ ತಮ್ಮ ಗಮನ ಹರಿಸಲಾರಂಭಿಸುತ್ತಾರೆ. ಒಂದು ಕಡೆ ಹತ್ತಾರು ವರ್ಷಗಳ ನಂತರ ವರ್ಗಾವಣೆಯೇನಾದರೂ ಸಂಭವಿಸಿದರೆ ತಮ್ಮೆಲ್ಲಾ ಪ್ರಭಾವ ಬೀರಿಯೋ ಲಂಚ ರುಷುವತ್ತು ನೀಡಿಯೋ ಅದೇ ಜಾಗದಲ್ಲಿ ಉಳಿದುಕೊಳ್ಳುವ ಪ್ರಯತ್ನ ಮಾಡುತ್ತಾರೆ. ಅದೂ ಸಾಧ್ಯವಾಗದಿದ್ದಾಗ ಸ್ವಯಂ-ನಿವೃತ್ತಿ ಪಡೆದೋ, ಇಲ್ಲವೆ ಕೆಲಸಕ್ಕೇ ರಾಜೀನಾಮೆ ಇತ್ತು ಅಲ್ಲೇ ಉಳಿಯುತ್ತಿದ್ದುದೂ ಅಪರೂಪವೇನಲ್ಲ. ಕೆಲಸಾರಿ ಮೇಲಿನ ಹುದ್ದೆಗೆ ಬಡ್ತಿ ದೊರೆತು ಅದು ಕೇವಲ ಆಡಳಿತಾತ್ಮಕ ಹುದ್ದೆಯಾಗಿ ಖಾಸಗಿ ಪ್ರ್ಯಾಕ್ಟೀಸ್‌ಗೆ ಅವಕಾಶವಿಲ್ಲದಿದ್ದರೆ ಬಡ್ತಿಯನ್ನೇ

ನಿರಾಕರಿಸಿ ಕೆಳಗಿನ ಹುದ್ದೆಯಲ್ಲೇ ಮುಂದುವರಿಯುತ್ತಿದ್ದವರ ನಿದರ್ಶನಗಳೂ ಇರುತ್ತಿದ್ದವು. ಇಲಾಖೆಯ ಮೇಲಿನ ಸ್ತರಗಳಲ್ಲಿರುತ್ತಿದ್ದ ವೈದ್ಯರೇ ಆದ ಅಧಿಕಾರಿಗಳು ತಮ್ಮ ತಮ್ಮ ಹಿತಾಸಕ್ತಿಗಳಿಗೆ ಗಮನವೀಯುವುದನ್ನು ಬಿಟ್ಟು ಕೆಳಸ್ತರದ ವೃತ್ತಿಬಾಂಧವ ಸಹೋದ್ಯೋಗಿಗಳ ಸ್ಥಿತಿಗತಿಗಳ ಬಗೆಗೆ ಅವರೇಕೆ ಆಸಕ್ತಿ ವಹಿಸಿಯಾರು? ಮಗು ಚಂಡಿ ಹಿಡಿದು ಅಳದಿದ್ದರೆ ಯಾವ ತಾಯಿ ಹಾಲೂಡಿಸಿಯಾಳು? ಸ್ನಾತಕೋತ್ತರ ಪದವಿಧರ ವೈದ್ಯರ ನಿಯೋಗವೊಂದು ತುಂಬಾ ದಕ್ಷರೆಂದು ಖ್ಯಾತಿಯಾಗಿದ್ದ ಇಲಾಖಾ ನಿರ್ದೇಶಕರನ್ನು ಭೇಟಿ ಮಾಡಿ ಅವರ ವಿದ್ಯಾರ್ಹತೆ ಹಾಗೂ ಯೋಗ್ಯತೆಗಳಿಗನುಸಾರ ಹೆಚ್ಚಿನ ವೇತನ, ಬಡ್ತಿ (ಇತರ ಇಲಾಖೆಗಳಲ್ಲಿರುವಂತೆ) ಮತ್ತಿತರ ಸವಲತ್ತುಗಳನ್ನು ಕೊಡಿಸಬೇಕೆಂದು ಒತ್ತಾಯ ಹೇರಿದಾಗ, ಅವರಿಗ್ಯಾರು ಸ್ನಾತಕೋತ್ತರ ಪದವಿ/ ವಿಶೇಷತೆಗಳನ್ನು ಪಡೆದುಕೊಳ್ಳಲು ಒತ್ತಾಯಪಡಿಸಿದ್ದರೆಂಬುದಾಗಿ ಮರು ಸವಾಲು ಎಸೆದಿದ್ದರಂತೆ! ವೈದ್ಯರೆಲ್ಲರ ಸಂಘಟನೆಯೆನಿಸಿದ ಇಂಡಿಯನ್ ಮೆಡಿಕಲ್ ಅಸೋಸಿಯೇಷನ್ನಲ್ಲಿ ಬಹುಪಾಲು ಖಾಸಗಿ ವೈದ್ಯರೇ ತುಂಬಿರುತ್ತಿದ್ದು ಸರ್ಕಾರಿ ವೈದ್ಯರ ಸಮಸ್ಯೆಗಳಿಗೆ ಹೆಚ್ಚಿನ ಅವಕಾಶಗಳಿರುತ್ತಿರಲಿಲ್ಲ (ನೋಡಿ ಅಧ್ಯಾಯ ೧೪ ಮತ್ತು ೧೭)

ಮೆಗ್ಗಾನ್ ಆಸ್ಪತ್ರೆಗೆ ಬಂದ ಮೂರು ವರ್ಷಗಳ ಅಂತ್ಯದಲ್ಲಿ ಸರ್ಜನ್ ಶ್ರೇಣಿಗೆ ಬಡ್ತಿ ಪಡೆಯಬಹುದಾದವರ ಸರದಿಯಲ್ಲಿ ನನ್ನ ಹೆಸರಿಗೆ ಆದ್ಯತೆ ಇರುವ ವಿಷಯ ಯಾರಿಂದಲೋ ತಿಳಿದು ಬಂದಿತು. ಬಡ್ತಿಗೆ ಶಿಫಾರಸು ಮಾಡುವ ಪ್ರಕ್ರಿಯೆಯ ಜಟಿಲತೆಯ ಅರಿವಿದ್ದು ನನ್ನೊಬ್ಬನ ಹೆಸರು ಮಾತ್ರ ಶಿಫಾರಸ್ಸಾಗುವುದು ದುಸ್ತರವೆಂದೆನಿಸಿತು. ಆ ಸಮಯದಲ್ಲಿ ಡಾ|| ಹಾಮ್ಯಾನಾಯಕ್ ಎಂಬವರು ನನ್ನ ಜೊತೆ ಕಾರ್ಯ ನಿರ್ವಹಿಸುತ್ತಿದ್ದರು. ಕೆಲವು ವರ್ಷಗಳ ಹಿಂದೆ ಎಂ.ಎಸ್. ಪದವಿ ಗಳಿಸಿಕೊಂಡಿದ್ದರೂ, ಚಾಕು, ಕತ್ತರಿಗಳನ್ನು ಹಿಡಿದು ಕಾರ್ಯ ನಿರ್ವಹಿಸುವ ಅವಕಾಶದಿಂದ ಅವರು ವಂಚಿತರಾಗಿದ್ದರು. ವಿಧಾನಸೌಧ, ವಿಧಾನ ಸಭೆ, ಶಾಸಕರ ಭವನ ಮುಂತಾದ ಕಡೆಗಳಲ್ಲೇ ಕಾರ್ಯನಿರ್ವಹಿಸಿದ ಅವರಿಗೆ ಸರ್ಜನ್ ಆಗಿ ಕೆಲಸ ಮಾಡಲಾಗಿರಲಿಲ್ಲ. ಎರಡು ವರ್ಷಗಳ ಹಿಂದೆ ಅವರು ಮೆಗ್ಗಾನ್ ಆಸ್ಪತ್ರೆಗೆ ಬಂದಾಗ ಪರಿಸ್ಥಿತಿ ಮನವರಿಕೆಯಾಗಿ ಅವರನ್ನು ನನ್ನ ಘಟಕದಲ್ಲೇ ಕಾರ್ಯ ನಿರ್ವಹಿಸಲು ಅವಕಾಶ ಮಾಡಿಕೊಟ್ಟಿದ್ದೆ. ಸಾಕಷ್ಟು ಆಪರೇಷನ್‌ಗಳಲ್ಲಿ ಅವರು ಸಹಾಯಕರಾಗಿರುವ ಹಾಗೋ, ಇಲ್ಲವೇ ಕೆಲವನ್ನು ಅವರೇ ಜರುಗಿಸಲು ಸಹಾಯ ಮಾಡುತ್ತಿದ್ದೆ. ಕ್ರಮೇಣ ಉದರಕೋಶವನ್ನು ತೆರೆದು ಅವರೇ ಆಪರೇಷನ್ ಕೈಗೊಳ್ಳುವಷ್ಟು ಅನುಭವ ಪಡೆದುಕೊಂಡರು. ಮುಂದೆ ಅವರಿಗೇ ಒಂದು ಸರ್ಜಿಕಲ್ ಘಟಕವನ್ನು ನೀಡಿ ಸ್ವತಂತ್ರವಾಗಿ ಕಾರ್ಯ ನಿರ್ವಹಿಸುವಂತೆ ಮಾಡಿದ್ದೆ.

ನನ್ನ ಬಡ್ತಿಯ ವಿಚಾರ ತಿಳಿದಾಗ ಆ ದಿಸೆಯಲ್ಲಿ ಸಹಾಯ ಮಾಡಲು ಅವರೇ ಮುಂದಾದರು. ಬಹಳ ಸಮಯ ಬೆಂಗಳೂರಿನಲ್ಲಿ ಆಡಳಿತಾರೂಢರ ವಲಯದಲ್ಲಿ ಕಾರ್ಯ ನಿರತರಾಗಿ ಅವರಿಗೆ ಉನ್ನತ ಅಧಿಕಾರಿ ವರ್ಗದವರೇ ಅಲ್ಲದೆ ರಾಜಕೀಯ ಮುಖಂಡರಲ್ಲನೇಕರ ಪರಿಚಯವಿತ್ತು. ಈ ಕಾರಣಗಳಿಂದಾಗಿ ಬಡ್ತಿಯ ಪ್ರಕ್ರಿಯೆಯಲ್ಲಿ ಅವರು ತೊಡಗಿಸಿಕೊಳ್ಳುವ ಭರವಸೆ ಇತ್ತರು. ಹಾಗೂ ಬೆಂಗಳೂರಿಗೆ ಹೋಗಿ ಖಾಲಿ ಇರುವ ಸ್ಥಾನಗಳ ಬಗೆಗೆ ವಿಷಯ ಸಂಗ್ರಹ ಮಾಡಿ ಬಂದರು. ಮಂಗಳೂರಿನ ಲೇಡಿ ಗೋಷನ್ ಆಸ್ಪತ್ರೆಯ ಆರ್.ಎಂ.ಓ. ಹುದ್ದೆ ಸರ್ಜನ್ ಶ್ರೇಣಿಗೆ ಏರಿಕೆಯಾಗಿ ಏಳು ವರ್ಷಗಳಾಗಿದ್ದರೂ ಖಾಲಿಯಾಗಿಯೇ ಇರುವುದು ತಿಳಿದು ಬಂದಿತಂತೆ. ಹೆಂಗಸರು ಮತ್ತು ಮಕ್ಕಳ ವಿಭಾಗಗಳನ್ನು ಮಾತ್ರ ಹೊಂದಿದ್ದ ಆಸ್ಪತ್ರೆಗೆ ಆ ಶ್ರೇಣಿಯ ಮಹಿಳಾ ವೈದ್ಯರು ಲಭ್ಯವಿರಲಿಲ್ಲ. ಪುರುಷ ಸರ್ಜನರು ತಮಗೆ ಅಲ್ಲಾವ ವೈದ್ಯವೃತ್ತಿ ನಿರ್ವಹಣೆ

ಸಾಧ್ಯವಿರಲಿಲ್ಲವಾದುದರಿಂದ ವರ್ಗಾವಣೆ ಮಾಡಿದರೂ ಅಲ್ಲಿಗೆ ಹೋಗಲು ನಿರಾಕರಿಸುತ್ತಿದ್ದ ರಂತೆ. ಡಾ॥ ನಾಯಕರು ಅದರ ವಿವರಗಳನ್ನು ನೀಡಿದಾಗ ಅಲ್ಲಿಗೆ ಹೋಗುವುದಕ್ಕೆ ಒಡನೆಯೇ ಸಮ್ಮತಿಸಿದೆ. ಅಲ್ಲಿಯೂ ನನಗೆ ಕೆಲವು ಉಪಯುಕ್ತ ಅಂಶಗಳು ಕಂಡು ಬಂದವು. ಹಿಂದೊಂದು ಸಾರಿ ಮಂಗಳೂರಿನಲ್ಲೇ ಇದ್ದು ಅಲ್ಲಿಯ ಜೀವನದ ರೀತಿನೀತಿಗಳ ನಿಕಟ ಪರಿಚಯವಿತ್ತು. ವೆನ್‌ಲಾಕ್ ಆಸ್ಪತ್ರೆಯ ಸನಿಹದಲ್ಲೇ ಟೌನ್‌ಹಾಲ್‌ನ ಒಂದು ಪಕ್ಕದಲ್ಲಿದ್ದ ಲೇಡಿ ಗೋಷನ್ ಆಸ್ಪತ್ರೆ ಹಾಗೂ ಅದಕ್ಕೆ ಸೇರಿಕೊಂಡು ಆರ್.ಎಂ.ಓ. ನಿವಾಸವೂ ಇತ್ತು. ಮುಂದಿನ ಬೀದಿಯ ಆಚೆ ಕಡೆ ಸರ್ಕಾರಿ ಕಾಲೇಜು ಮತ್ತಿತರ ವಿದ್ಯಾ ಸಂಸ್ಥೆಗಳಿದ್ದವು. ಅದರಿಂದ ಮಕ್ಕಳ ವಿದ್ಯಾಭ್ಯಾಸಕ್ಕೆ ಸಹಕಾರಿಯಾಗಬಹುದಿತ್ತು.

ಈ ನಿರ್ಧಾರವಾದ ಮೇಲೆ ನನಗೆ ಬಡ್ತಿ ನೀಡುವ ಪ್ರಸ್ತಾವ ಬೆಂಗಳೂರಿನ ಆನಂದರಾವ್ ಸರ್ಕಲ್ ಬಳಿ ಇರುವ ಆರೋಗ್ಯ ಇಲಾಖಾ ನಿರ್ದೇಶಕರ ಕಚೇರಿಯಲ್ಲಿ ತಯಾರಾಗಿ ಅಂತಿಮ ಅಂಗೀಕಾರ ಮತ್ತು ಆದೇಶದ ಸಲುವಾಗಿ ವಿಧಾನ ಸೌಧದ ಆರೋಗ್ಯ ಇಲಾಖಾ ಸಚಿವಾಲಯಕ್ಕೆ ಕಳುಹಿಸಲ್ಪಟ್ಟಿತು. ಮುಂದೆ ಅದು ಎರಡೂ ಕಚೇರಿಗಳಿಗೆ ಹಿಂದೆ ಮುಂದೆ ತಿರುಗಾಡುವುದು ಶುರುವಾಯಿತು. ಡಾ॥ ಹಾಮ್ಯಾನಾಯ್ಕರು ಪ್ರತಿವಾರ ಬೆಂಗಳೂರಿಗೆ ಹೋಗಿ ಕಡತವನ್ನು ಸ್ವತಃ ಅವರೇ ಹಿಡಿದುಕೊಂಡು ಅವಶ್ಯಕವೆನಿಸಿದ ಟಿಪ್ಪಣಿಗಳನ್ನು ಬರೆಸಿಕೊಂಡು ಅದರ ಚುರುಕಿನ ಚಾಲನೆಗೆ ಪ್ರಯತ್ನ ನಡೆಸಿದರು. ಒಂದು ಸಾರಿ ನನ್ನನ್ನು ಬೆಂಗಳೂರಿಗೆ ಕರೆದುಕೊಂಡು ಹೋಗಿ ಉನ್ನತ ಮಟ್ಟದ ಅಧಿಕಾರಿಯೊಬ್ಬರೊಡನೆ ಭೇಟಿ ಮಾಡಿಸಿದರು; ನನ್ನ ಪ್ರವರಗಳನ್ನು ವಿವರಿಸಿದರು. ಮುಂದಿನ ಒಂದೂವರೆ ತಿಂಗಳಲ್ಲಿ ನನಗೆ ಬಡ್ತಿ ನೀಡಿ ಲೇಡಿ ಗೋಷನ್ ಆಸ್ಪತ್ರೆಯಲ್ಲಿ ಏಳು ವರ್ಷಗಳಿಂದ ಖಾಲಿ ಇದ್ದ ಸರ್ಜನ್ ಶ್ರೇಣಿಯ ಆರ್.ಎಂ.ಓ. ಹುದ್ದೆಗೆ ವರ್ಗಾವಣೆ ಮಾಡಿದ ಆದೇಶ ಹೊರಬಂದಿತು. ಡಾ॥ ನಾಯ್ಕರು ನನಗೋಸ್ಕರ ಬೆಂಗಳೂರಿಗೆ ಹೋಗುವ ಸಂದರ್ಭಗಳಲ್ಲಿ ಅವರ ಖರ್ಚು ವೆಚ್ಚಗಳಿಗಾಗಿ ಸ್ವಲ್ಪ ಹಣ ನೀಡುತ್ತಿದ್ದುದನ್ನು ಬಿಟ್ಟರೆ ಬೇರಾವ ರೀತಿಯಲ್ಲಿ ಈ ದಿಸೆಯಲ್ಲಿ ಹಣ ವ್ಯಯ ಮಾಡುವ ಸಂದರ್ಭ ಒದಗಿ ಬಂದಿರಲಿಲ್ಲ.

ಲಂಬಾಣಿ ಜನಾಂಗದ ಡಾ॥ ಹಾಮ್ಯಾನಾಯಕರು, ಧೂಮಪಾನ, ಮದ್ಯಪಾನ ಕಾಫಿ ಸೇವನೆಯಂಥ ಅಭ್ಯಾಸವನ್ನೂ ರೂಢಿಸಿಕೊಂಡವರಲ್ಲ. ಸ್ವಲ್ಪ ಸ್ಥೂಲಕಾಯದ ಅಂಚಿನಲ್ಲಿದ್ದರಷ್ಟೆ. ನಿವೃತ್ತಿ ಹೊಂದಿ ನಾನು ಶಿವಮೊಗ್ಗೆಗೆ ವಾಪಸಾಗುವವರೆಗೂ ಮೆಗ್ಗಾನ್ ಆಸ್ಪತ್ರೆಯಲ್ಲೇ ಮುಂದುವರಿದಿದ್ದರು. ಸ್ಪಷ್ಟವಾಗಿ ನಿರ್ಧರಿಸಲಾಗದ ಲಿವರ್‌ಗೆ ಸಂಬಂಧಪಟ್ಟ ವ್ಯಾಧಿಯಿಂದ ನರಳಿ, ಇನ್ನೂ ೮-೧೦ ವರ್ಷಗಳ ಸೇವಾ ಅವಧಿಯನ್ನು ಪೂರೈಸುವುದರಲ್ಲೇ ತಮ್ಮ ಇಹಲೋಕ ಯಾತ್ರೆಯನ್ನು ಮುಗಿಸುವಂತಾದುದೊಂದು ವಿಪರ್ಯಾಸವೇ ಸರಿ. ನನ್ನ ಸಲುವಾಗಿ ಅವರು ಮಾಡುತ್ತಿದ್ದ ನಿಸ್ವಾರ್ಥ ಸಹಾಯ ನೆನಪುಗಳು ನನ್ನಲ್ಲಿ ಶಾಶ್ವತವಾಗಿ ಉಳಿದುಕೊಂಡಿವೆ.

ಊರು ಮನೆಯ ಸಂಸ್ಥೆ - ಮೆಗ್ಗಾನ್ ಆಸ್ಪತ್ರೆಯಲ್ಲಿನ ಸೇವೆ ಮತ್ತು ಗಳಿಸಿದ ಕೆಲವು ಸಾಧನೆಗಳು ತೃಪ್ತಿ ತಂದುಕೊಟ್ಟಿವೆ. ಆಸ್ಪತ್ರೆಯ ಸಿಬ್ಬಂದಿ ವರ್ಗದವರೇ ಅಲ್ಲದೆ ವೈದ್ಯವೃಂದದವರು ಒಂದು ಸಂಜೆ ಐ.ಎಂ.ಎ. ಆವರಣದ ಹುಲ್ಲು ಹಾಸಿನ ಮೇಲೆ ಏರ್ಪಡಿಸಿದ ಆತ್ಮೀಯ ಬೀಳ್ಕೊಡುಗೆ ಸಮಾರಂಭ ಸ್ಮೃತಿ ಪಟಲದಲ್ಲಿ ಇನ್ನೂ ಹಸುರಾಗಿ ಉಳಿದುಕೊಂಡು ಬಿಟ್ಟಿದೆ.

# ೧೫. ಮತ್ತೆ ಮಂಗಳೂರು -
## - ಇನ್ನೊಮ್ಮೆ ರೆಸಿಡೆಂಟ್ ಮೆಡಿಕಲ್ ಆಫೀಸರ್

ಮಂಗಳೂರಿನ ಟೌನ್‌ಹಾಲ್‌ನ ಎಡಭಾಗದ ರಸ್ತೆಯಾಚೆ ಮಹಿಳೆಯರು ಹಾಗೂ ಮಕ್ಕಳ ನಿರ್ವಹಣೆಗಾಗಿ ಲೇಡಿ ಗೋಷನ್ ಆಸ್ಪತ್ರೆ, ಬ್ರಿಟಿಷರ ಕಾಲದಲ್ಲೆ ನಿರ್ಮಾಣವಾಗಿತ್ತು. ಸುಮಾರು ೧೨೫-೧೫೦ ಹಾಸಿಗೆಗಳ ಸೌಲಭ್ಯವಿದ್ದ ಈ ಆಸ್ಪತ್ರೆ ಕೂಡ ಕಸ್ತೂರ್ಬಾ ಮೆಡಿಕಲ್ ಕಾಲೇಜಿನ ಬೋಧನೆಯ ಅಂಗವಾಗಿದ್ದು, ಅದರಲ್ಲೂ ಕೆಲವು ಸರ್ಕಾರದ ವೈದ್ಯರಿದ್ದರೆ, ಇನ್ನುಳಿದವರೆಲ್ಲಾ ಕೆ.ಎಂ.ಸಿ.ಯ ಗೌರವ ವೈದ್ಯಾಧಿಕಾರಿ ಶ್ರೇಣಿಯವರು. ವೆನ್‌ಲಾಕ್ ಆಸ್ಪತ್ರೆಯ ಸೂಪರಿಂಟೆಂಡೆಂಟ್ (ಡಿ.ಎಂ.ಓ.) ಅವರೇ ಇದಕ್ಕೂ ಮುಖ್ಯ ಆಡಳಿತಾಧಿಕಾರ ಉಳ್ಳವರು. ಅವರಲ್ಲದೆ ಒಬ್ಬ ಡೆಪ್ಯೂಟಿ ಸೂಪರಿಂಟೆಂಡೆಂಟ್ ಹಾಗೂ ಒಬ್ಬ ರೆಸಿಡೆಂಟ್ ಮೆಡಿಕಲ್ ಆಫೀಸರ್, ನಾಲ್ಕಾರು ಮಹಿಳಾ ಅಸಿಸ್ಟೆಂಟ್ ಸರ್ಜನರು ಇರುತ್ತಿದ್ದರು. ಆರ್.ಎಂ.ಓ. ಹುದ್ದೆಯನ್ನು ಸರ್ಜನ್ ದರ್ಜೆಗೆ ಏರಿಸಲಾಗಿತ್ತು; ನಾನಲ್ಲಿಗೆ ಹೋಗುವವರೆಗೂ ಸರ್ಜನ್ ದರ್ಜೆಯವರಾರೂ ಅಲ್ಲಿ ಕಾರ್ಯನಿರ್ವಹಿಸದಿರುವ ಬಗೆಗೆ ಈಗಾಗಲೇ ಪ್ರಸ್ತಾಪವಾಗಿದೆ.

ಏಪ್ರಿಲ್ ತಿಂಗಳ (೧೯೭೬) ಮೊದಲ ವಾರದಲ್ಲಿ ಲೇಡಿ ಗೋಷನ್ ಆಸ್ಪತ್ರೆಯಲ್ಲಿ ವರದಿ ಮಾಡಿಕೊಂಡೆ. ಆರ್.ಎಂ.ಓ. ನಿವಾಸ ಆಸ್ಪತ್ರೆಯ ಆವರಣದಲ್ಲಿದ್ದು, ಹಿಂದೆ ಮಂಗಳೂರಿನಲ್ಲೇ ಇದ್ದವನಾದುದರಿಂದ ಹೆಚ್ಚಿನ ಅನಾನುಕೂಲಗಳೇನೂ ಉದ್ಭವಿಸಲಿಲ್ಲ. ಆದರೆ ಹಿಂದಿನ ಆಸ್ಪತ್ರೆಗಳಲ್ಲಿರುತ್ತಿದ್ದ ರೋಗಿಗಳ ಚಿಕಿತ್ಸಾ ಜವಾಬ್ದಾರಿ ನನಗಿರಲಿಲ್ಲ. ಆಸ್ಪತ್ರೆಯ ಒಳಾಡಳಿತ ಮತ್ತು ಔಷಧ ಉಗ್ರಾಣದ ನಿರ್ವಹಣೆಗಳು ನನ್ನ ಜವಾಬ್ದಾರಿಗಳಾಗಿದ್ದವು. ಪ್ರತಿ ದಿನ ವಾರ್ಡುಗಳಲ್ಲಿ ಪರಿವೀಕ್ಷಣೆ ಮಾಡಿ, ನ್ಯೂನತೆಗಳನ್ನು ಸರಿಪಡಿಸಲು ಕ್ರಮ ಜರುಗಿಸುತ್ತಿದ್ದೆ. ಬರೇ ಹೆಂಗಸರು, ಮಕ್ಕಳ ವ್ಯಾಧಿಗೆ ಸೀಮಿತವಾಗಿದ್ದ ಆಸ್ಪತ್ರೆಯ ಬಹುಪಾಲು ಸಿಬ್ಬಂದಿ ವರ್ಗದವರೂ ಮಹಿಳೆಯರೇ ಆಗಿರುತ್ತಿದ್ದರು. ಕೆಲ ಸಾರಿ ರಾತ್ರಿ ಸಮಯದಲ್ಲಿ ಸಂಬಂಧಿಕರನ್ನು ನೋಡಲು ಬರುತ್ತಿದ್ದ ಕೆಲವು ಗಂಡಸರು ಕುಡಿದು ಬಂದು ಗಲಾಟೆ ಮಾಡುತ್ತಿದ್ದರು. ಒಂದು ನಡು ರಾತ್ರಿ ರೌಡಿಯೊಬ್ಬ ಹಠಾತ್ತಾಗಿ ಶೌಚಾಲಯವೊಂದರಲ್ಲಿ ಕಾಣಿಸಿಕೊಂಡು ರೋಗಿಗಳೂ ಮತ್ತು ಸಿಬ್ಬಂದಿ ವರ್ಗದವರೂ ಭಯಭೀತರಾಗುವಂತಾಯಿತು. ಸ್ಥಳಕ್ಕೆ ಧಾವಿಸಿ ಪೋಲೀಸರನ್ನು ಕರೆಸಿ, ಆಸ್ಪತ್ರೆಯ ಎಲ್ಲಾ ಕಡೆ ಹುಡುಕಿಸುವ ಏರ್ಪಾಟು ಮಾಡಿದೆ. ಅಷ್ಟರಲ್ಲೇ ಅವನು ಪರಾರಿಯಾಗಿದ್ದ!

ಅಲ್ಲಿಗೆ ನಾನು ಹೋದಾಗ ರಕ್ತ ಭಂಡಾರದಲ್ಲಿ ಅವ್ಯವಸ್ಥೆಗಳಿರುವುದು ಗಮನಕ್ಕೆ ಬಂದಿತು. ಬಹುಪಾಲು ವೃತ್ತಿ-ದಾನಿಗಳೇ ರಕ್ತ ನೀಡುತ್ತಿದ್ದ ಸನ್ನಿವೇಶ ಅಲ್ಲಿತ್ತು. ಅದರಲ್ಲೂ ಮಧ್ಯವರ್ತಿಗಳ ಕೈವಾಡವಿರುತ್ತಿದ್ದು ಅದರಿಂದ ರೋಗಿಗಳೇ ಅಲ್ಲದೆ ದಾನಿಗಳೂ ಸಹ ಶೋಷಣೆಗೊಳಗಾಗುತ್ತಿದ್ದರು. ಹಿನ್ನೆಲೆಯಲ್ಲೇ ಇದ್ದುಕೊಂಡು ಕಾರ್ಯ ಸಾಧಿಸುತ್ತಿದ್ದ ಅವರನ್ನು ಪತ್ತೆ ಹಚ್ಚುವುದು ಕಷ್ಟಸಾಧ್ಯವಿತ್ತು. ರಾತ್ರಿ ಹತ್ತುವರೆ ಗಂಟೆಯಲ್ಲಿ ಒಂದು ಸಾರಿ ಆಸ್ಪತ್ರೆಯನ್ನು

ಹಠಾತ್ತಾಗಿ ವೀಕ್ಷಿಸಲು ಹೋಗಿದ್ದೆ. ಅಪರಿಚಿತ ವ್ಯಕ್ತಿಯೊಬ್ಬ ಒಂದು ಕೈಯಲ್ಲಿ ಚೂರಿಯನ್ನು ಹಿಡಿದುಕೊಂಡು ಮತ್ತೊಂದರಲ್ಲಿ ಕೆಲವು ರೂಪಾಯಿ ನೋಟುಗಳನ್ನಿಟ್ಟುಕೊಂಡು ಆಸ್ಪತ್ರೆಯ ಮುಂಬಾಗಿಲಿನಲ್ಲಿ ನಿಂತಿದ್ದ. ಹಾಗೂ ಅಲ್ಲಿದ್ದ ಕೆಲವರ ಜೊತೆ ಜಗಳವಾಡುವ ರೀತಿಯಲ್ಲಿ ಜೋರಾಗಿ ಮಾತಾಡುತ್ತಿದ್ದ. ಅವನಾರು, ಅಷ್ಟು ಹೊತ್ತಿನಲ್ಲಿ ಆಸ್ಪತ್ರೆಗೆ ಏಕೆ ಬಂದಿರುವನೆಂದು ಪ್ರಶ್ನಿಸಿದೆ; ನನ್ನ ಕಡೆ ದುರುಗುಟ್ಟಿ ನೋಡುತ್ತಾ ಅದನ್ನೆಲ್ಲಾ ವಿಚಾರಿಸಲು ನಾನ್ಯಾರೆಂದು ಪ್ರಶ್ನಿಸತೊಡಗಿದ. ಅವನ ಹಿನ್ನೆಲೆ ತಿಳಿದ ಕೆಲವು ಆಸ್ಪತ್ರೆ ಸಿಬ್ಬಂದಿಗಳು ನನ್ನನ್ನು ಪಕ್ಕಕ್ಕೆ ಕರೆದು ಅವನೊಬ್ಬ 'ಡಿಸ್ಟ್ರಿಕ್ ಕೇಡಿ' (ಡಿ.ಸಿ.)ಎಂತಲೂ, ಅವನ ಜೊತೆ ವಾದಕ್ಕಿಳಿಯುವುದು ಅಪಾಯಕಾರಿಯೆಂದೂ ಸೂಚಿಸಿದರು. ಆದರೂ ಗಂಡಸೊಬ್ಬ ಮಹಿಳೆಯರ ಆಸ್ಪತ್ರೆಗೆ ಬಂದು ಜಗಳವಾಡುತ್ತಿರುವುದು ಸರಿಯಲ್ಲ; ಅವನು ಕೂಡಲೇ ಅಲ್ಲಿಂದ ಹೊರಡದಿದ್ದರೆ ಪೋಲೀಸರನ್ನು ಕರೆಸುವುದಾಗಿ ಬೆದರಿಕೆ ಹಾಕಿದೆ; ಮರು ಮಾತಾಡದೆ ಗೊಣಗಿಕೊಳ್ಳುತ್ತಾ ಅವನಲ್ಲಿಂದ ಕಾಲ್ಕಿತ್ತ. ಪ್ರತಿ ದಿನ ರಕ್ತ ದಾನ ಮಾಡಿದವರೆಲ್ಲಾ ಅಷ್ಟು ಹೊತ್ತಿಗೆ ಆಸ್ಪತ್ರೆಗೆ ಬಂದು ಆ ದಿನ ಅವರು ನೀಡಿದ ರಕ್ತದ ಬಗೆಗೆ ಅವರಿಗೆ ದೊರೆಯಬೇಕಾದ ಹಣದ ಇತ್ಯರ್ಥ ಮಾಡುವ ಪರಿ ಅದೆಂದು ಸಿಬ್ಬಂದಿಯವರು ಅನಂತರ ಹೇಳಿದರು. ಮರು ದಿನ ಪೋಲೀಸರಿಗೆ ಈ ಬಗೆಗೆ ದೂರು ನೀಡಿದೆ. ಅಲ್ಲದೆ ಪೋಲೀಸರು ರಾತ್ರಿ ಗಸ್ತು ತಿರುಗುವ ಸಮಯದಲ್ಲಿ ಆಗಾಗ್ಗೆ ಈ ಆಸ್ಪತ್ರೆಗೂ ಭೇಟಿ ನೀಡಿ ಅಲ್ಲಿನ ವಿದ್ಯಮಾನಗಳ ಬಗೆಗೆ ನಿಗಾವಹಿಸುವಂತೆ ಕೇಳಿಕೊಂಡೆ. ಮುಂದಿನ ದಿನಗಳಲ್ಲಿ ರಾತ್ರಿ ಅವನು ಆಸ್ಪತ್ರೆಯತ್ತ ಸುಳಿಯುವುದು ಕಡಿಮೆಯಾಯಿತು.

ಆಸ್ಪತ್ರೆಗಳಲ್ಲಿ ನಾಯಿಗಳ ಕಾಟದ ಬಗೆಗೆ ಈ ಹಿಂದೆ ಪ್ರಸ್ತಾಪವಾಗಿದೆಯಷ್ಟೆ. ಬಹುಪಾಲು ಹೆರಿಗೆಯಾದವರೇ ಹೆಚ್ಚಾಗಿರುವ ಈ ಆಸ್ಪತ್ರೆಗೆ ಅವುಗಳಿಂದಾಗುವ ಅಪಾಯ ಸದಾ ಬಾಧಿಸುತ್ತಿತ್ತು. ಕಿಟಕಿ, ಬಾಗಿಲುಗಳನ್ನೆಲ್ಲಾ ಮುಚ್ಚಿದ್ದರೂ ಆಸ್ಪತ್ರೆ ಕಟ್ಟಡದಿಂದ ಹೊರ ಹೋಗುತ್ತಿದ್ದ ಅಗಲವಾದ ಚರಂಡಿಗಳಿಂದ ಅವು ನುಸುಳಿ ಬರುವುದನ್ನು ತಪ್ಪಿಸುವುದಕ್ಕಾಗುತ್ತಿರಲಿಲ್ಲ. ಲೋಕೋಪಯೋಗಿ ಇಲಾಖೆಯವರ ಸಹಾಯದಿಂದ ಅಂತಹ ಚರಂಡಿಯ 'ಬಾಯಿ'ಗಳಿಗೆ ಕಬ್ಬಿಣದ ಕಂಬಿಗಳ ತಡೆಗಳನ್ನು ನಿರ್ಮಿಸಿ, ನಾಯಿಗಳು ಒಳಗೆ ಬಾರದಂತೆ ಮಾಡುವುದು ಸಾಧ್ಯವಾಯಿತು.

## ಉಪಕರಣ ಕಂಪನಿ ಪ್ರತಿನಿಧಿಯ ಪ್ರಕರಣ

ಒಂದು ದಿನ ಬೆಳಿಗ್ಗೆ ಆಸ್ಪತ್ರೆಗಳಿಗೆ ಬೇಕಾಗುವ ಉಪಕರಣ ತಯಾರಿಕಾ ಕಂಪನಿಯೊಂದರ ಪ್ರತಿನಿಧಿಯೊಬ್ಬರು ನಾನು ಔಷಧ ಉಗ್ರಾಣದಲ್ಲಿದ್ದಾಗ ಭೇಟಿ ಮಾಡಿದರು. ಅವರ ಕಂಪನಿಯವರು ತಯಾರಿಸುತ್ತಿರುವ ಸರ್ಜಿಕಲ್ ಉಪಕರಣಗಳ ಸಚಿತ್ರ ಪಟ್ಟಿಯನ್ನು ನನ್ನೆದುರಿಗೆ ತೆರೆದಿಟ್ಟು ನಮ್ಮ ಆಸ್ಪತ್ರೆಗೆ ಅವಶ್ಯವಿರುವವುಗಳಿಗೆ ಆದೇಶ ನೀಡಬೇಕೆಂದು ಕೇಳಿಕೊಂಡರು. ಅದಾಗಲೇ ವೆನ್‌ಲಾಕ್ ಆಸ್ಪತ್ರೆಯ ಆರ್.ಎಂ.ಓ. ಅವರನ್ನು ಭೇಟಿ ಮಾಡಿ ಅವರಿಂದ ಪಡೆದುಕೊಂಡಿದ್ದ ಆದೇಶವನ್ನೂ ತೋರಿಸಿದರು. ನಮ್ಮ ಆಸ್ಪತ್ರೆಯಲ್ಲಿ ಸದ್ಯಕ್ಕೆ ಎಲ್ಲಾ ಸಲಕರಣೆಗಳು ಲಭ್ಯವಿದ್ದು, ತತ್‌ಕ್ಷಣ ಯಾವುದನ್ನೂ ಖರೀದಿಸುವ ಅವಶ್ಯಕತೆ ಇಲ್ಲವೆಂದು ಉತ್ತರಿಸಿದೆ. ಅವರ ಪಟ್ಟಿಯ ಒಂದು ಪ್ರತಿಯನ್ನು ಕೊಟ್ಟರೆ ಮುಂದೆ ಅವಶ್ಯಕತೆ ಉಂಟಾದಾಗ ಇತರ ಕಂಪನಿಗಳಂತೆಯೇ ಅವರ ಕಂಪನಿಗೂ ಕೊಟೇಷನ್ ಕಳುಹಿಸುವುದಾಗಿ ತಿಳಿಸಿದೆ. ಆದರೆ, ಅಷ್ಟನ್ನು ಮಾತ್ರ ಕೇಳಿಕೊಂಡು ಹೋಗಲು ಬಂದ ಅಸಾಮಿ ಅವರಾಗಿರಲಿಲ್ಲ. ಏನೇನೋ

ಆಮಿಷಗಳನ್ನೊಡ್ಡಿ ಕೆಲವು ಉಪಕರಣಗಳನ್ನು ಕೊಳ್ಳಲು ಸಮ್ಮತಿಸಿದರೆ ನನಗೆ ಲಾಭದಾಯಕವಾಗುವಂತೆ ಮಾಡುವ ರೀತಿಯಲ್ಲಿ ಮಾತಾಡತೊಡಗಿದರು. ಅವರ ಕಂಪನಿಯವರು ಇಲಾಖಾ ನಿರ್ದೇಶಕರ ಮೇಲೆ ಪ್ರಭಾವ ಬೀರಿದ್ದು, ಅವರಿಗೂ ಇದರಿಂದ ಉಪಕಾರವಾಗಲಿದೆಯೆಂದು ಹೇಳಿ, ಮಧ್ಯಾಹ್ನ ನನ್ನ ನಿವಾಸಕ್ಕೂ ಬಂದು ಕಾಣುವುದಾಗಿ ಪೀಡಿಸಲಾರಂಭಿಸಿದರು. ಅಷ್ಟರಲ್ಲೇ ನನ್ನ ಸಹನೆಯ ಹದ್ದು ಮೀರಿತ್ತು. ಇನ್ನು ತಡೆಯಲಾರದೆ, "ನೀವು ಯಾರ ಹತ್ತಿರ ಮಾತಾಡುತ್ತಿರುವಿರೆಂಬುದರ ಪರಿವೆ ಏನಾದರೂ ತಿಳಿದಿದೆಯಾ? ಅಂತಹ ಆಮಿಷಗಳಿಗೆಲ್ಲಾ ಒಳಗಾಗುವವ ನಾನಲ್ಲ" ಎಂದು ಗಡುಸಾಗಿಯೇ ಉತ್ತರಿಸಿದೆ. ಆ ಗಡುಸಿನ ಧ್ವನಿ ಅವರಿಗೆ ಹಿಂದೊಂದು ಸಾರಿ ಆಗಿದ್ದ ಅನುಭವವನ್ನು ನೆನಪಿಗೆ ತಂದುಕೊಟ್ಟಿರ ಬೇಕು. ಕೂಡಲೇ ತಣ್ಣಗಾಗಿ, ಅವರ ಮಾತಿನ ಧಾಟಿಯನ್ನು ಬದಲಾಯಿಸಿ "ಹಿಂದೊಂದು ಸಾರಿ ನಿಮ್ಮನ್ನು ಎಲ್ಲಿಯೋ ಭೇಟಿಯಾದ ನೆನಪಾಗುತ್ತಿದೆಯಲ್ಲಾ ಡಾಕ್ಟರೇ" ಎನ್ನುವಷ್ಟರಲ್ಲಿ ನನ್ನ ಸ್ಮೃತಿಪಟಲದಲ್ಲೂ ಹಿಂದಿನ ಘಟನೆಯೊಂದು ಮಿಂಚಿದಂತಾಯಿತು!

ಅದು ಶಿವಮೊಗ್ಗಾದಲ್ಲಿ ಒಂದೆರಡು ವರ್ಷಗಳ ಹಿಂದೆ ಆರ್.ಎಂ.ಓ. ಆಗಿದ್ದ ಸಮಯ. ಡಿ.ಎಂ.ಓ. ಅವರು ರಜೆಯಲ್ಲಿದ್ದ ಒಂದು ಸಂದರ್ಭದಲ್ಲಿ ಅವರ ಅಧಿಕಾರದ ಕರ್ತವ್ಯವನ್ನೂ ನಿರ್ವಹಿಸುತ್ತಿದ್ದೆ. ಈ ಪ್ರತಿನಿಧಿಯೇ, ನನ್ನನ್ನು ಭೇಟಿಯಾಗಿ, ನಮ್ಮ ಆಸ್ಪತ್ರೆಯವರು ಹಿಂದೆ ಕೆಲವು ಬಗೆಯ ಪಾಲಿಥೀನ್ ನಳಿಕೆಗಳ ಸರಬರಾಜಿಗೆ ಕೋರಿಕೆ ನೀಡಿದ್ದು ಅವುಗಳನ್ನು ಅಂದು ಒದಗಿಸುವುದಾಗಿ ಹೇಳಿದರು. ಔಷಧ - ಉಗ್ರಾಣಾಧಿಕಾರಿಯನ್ನು ಕರೆಸಿ, ಹಿಂದೆ ನಾವು ಕಳುಹಿಸಿದ ಆದೇಶವನ್ನು ಪರಿಶೀಲಿಸಿ, ಅದರಂತೆ ಉದ್ದಳತೆ ಮುಂತಾದವನ್ನು ತಾಳೆ ನೋಡಿ ಸ್ವೀಕರಿಸಬಹುದೆಂದು ಹೇಳಿದೆ. ನಾನು ಉದ್ದಳತೆಗಳನ್ನು ತಾಳೆ ನೋಡಲು ಹೇಳಿದ್ದು ಅವರಿಗೂ ಅವರ ಕಂಪನಿಗೂ ಅವಮಾನಪಡಿಸಿದ್ದಂತಾಯಿತೆಂದು ಪ್ರತಿನಿಧಿ ಸಿಡಿಮಿಡಿಗೊಳ್ಳಲಾರಂಭಿಸಿದರು. ನಾನು ಮತ್ತೊಮ್ಮೆ ಅವರಿಗೆ ಸ್ಪಷ್ಟಪಡಿಸಿದೆ. "ನಾವು ನೀಡಿದ ಆದೇಶದಲ್ಲಿ ನಿಗದಿ ಪಡಿಸಿದ ವಿವರಗಳಿಗನುಸಾರ ಸಾಮಾನುಗಳನ್ನು ಸರಬರಾಜು ಮಾಡುವುದು ನಿಮ್ಮ ಕರ್ತವ್ಯ; ನೀವು ಕೊಡುವುದನ್ನೆಲ್ಲಾ ಕಣ್ಣು ಮುಚ್ಚಿಕೊಂಡು ಕೊಳ್ಳಲಾರೆವು; ಅದು ನಿಮಗೆ ಸರಿಯೆನಿಸಿದರೆ ಕೊಡಬಹುದು; ಇಲ್ಲದಿದ್ದರೆ ಬೇರೊಂದು ಕಂಪನಿಯಿಂದ ತರಿಸುವ ಏರ್ಪಾಡು ಮಾಡುತ್ತೇವೆ" ಎಂದು ಹೇಳಿದೆ. ಅಷ್ಟಕ್ಕೆ ಮುನಿಸಿಕೊಂಡ ಪ್ರತಿನಿಧಿ ಈ ಬಗೆಗೆ ತನ್ನ ಕಂಪನಿಗೆ ವರದಿ ಮಾಡುವುದಾಗಿ ಹೇಳಿ ಹೊರ ನಡೆದರು.

ಯಾವುದೋ ಕಾರ್ಯಾರ್ಥ ಮರುದಿನವೇ ಬೆಂಗಳೂರಲ್ಲಿ ಇಲಾಖಾ ನಿರ್ದೇಶಕರ ಕಚೇರಿಗೆ ಹೋಗಿದ್ದೆ. ಹೊರಗಡೆ ಕಾಯ್ದು ನಿಂತಿದ್ದೆ. ಹಿಂದಿನ ದಿನ ನನ್ನೊಡನೆ ವಾದಕ್ಕಿಳಿದ ಪ್ರತಿನಿಧಿ ಅತ್ತಕಡೆ ಬಂದು ನಮಸ್ಕರಿಸಿದರು. ಒಡನೆಯೇ ಹಿಂದಿನ ದಿನ ಶಿವಮೊಗ್ಗಾದಲ್ಲಿ ಜರುಗಿದ ಪ್ರಕರಣದ ಬಗೆಗೆ ಕ್ಷಮೆ ಯಾಚಿಸುವ ಧಾಟಿಯಲ್ಲಿ ಮಾತಿಗಾರಂಭಿಸಿದರು. ಅದಕ್ಕಾಗಿ ಅವರು ಪರಿತಪಿಸಬೇಕಾಗಿಲ್ಲವೆಂತಲೂ, ಸರ್ಕಾರವನ್ನು ಪ್ರತಿನಿಧಿಸುತ್ತಿದ್ದ ನಾನು ಆ ಜವಾಬ್ದಾರಿಯನ್ನು ನಿರ್ವಹಿಸಿದೆ; ಕಂಪನಿಯ ಪ್ರತಿನಿಧಿಯಾಗಿ ಅವರು ವಾದಿಸಿದ್ದೂ ಬಹುಶಃ ಸರಿ ಇರಬಹುದು. ಅದರಿಂದ ನನಗೇನೂ ಬೇಸರವಾಗಿಲ್ಲವೆಂದು ಮಾತು ಮೊಟಕುಗೊಳಿಸುವುದರಲ್ಲಿದ್ದೆ. ಆದರೆ ಅವರು ಮಾತು ಮುಂದುವರಿಸಿ ಅಂದಿನ ಸಾಯಂಕಾಲದ ಸಮಯವನ್ನು ನಾನು ಹೇಗೆ ಕಳೆಯುತ್ತೇನೆಂದು ವಿಚಾರಿಸತೊಡಗಿದರು. ಉಕ್ಕಿ ಬರುತ್ತಿದ್ದ ನಗುವನ್ನು

ತಡೆಹಿಡಿದು, ಅವರು ಭಾವಿಸುತ್ತಿರುವ ರೀತಿಗಳಲ್ಲಿ ಸಾಯಂಕಾಲಗಳನ್ನು ಕಳೆಯುವ ಹವ್ಯಾಸ ನನಗಿಲ್ಲ ವೆಂತಲೂ, ಅವರು ತಮ್ಮ ಕೆಲಸದಲ್ಲಿ ಮುಂದುವರಿಯಬಹುದೆಂದು ಹೇಳಿ ಬೀಳ್ಕೊಟ್ಟೆ.

ಅವರ ಮನಸ್ಸಿನಲ್ಲೂ ಈ ಘಟನೆಗಳು ಮರುಕಳಿಸಿರಬೇಕು. ನಾನೆಂಥವನೆನ್ನುವುದರ ಬಗೆಗೆ ಮತ್ತೊಮ್ಮೆ ಜ್ಞಾನೋದಯವಾಗಿರಬೇಕು. ಕೂಡಲೇ ಹಿಂದೆ ಜರುಗಿದ ಘಟನೆಯ ಬಗೆಗೂ ವಿಷಾದ ವ್ಯಕ್ತಪಡಿಸಿದರು. ಹಾಗೂ ಅವರ ಹದಿನೈದು ವರ್ಷಗಳ ಅನುಭವದಲ್ಲಿ ನನ್ನಂಥವರ ಭೇಟಿಯಾಗಿರಲಿಲ್ಲವೆಂತಲೂ, ಅಪರೂಪದ ವ್ಯಕ್ತಿತ್ವವನ್ನು ಕಾಪಾಡಿಕೊಳ್ಳಿ, ಶುಭವಾಗಲಿ, ಎಂದು ಕೈಕುಲುಕಿ ಎದ್ದು ಹೋದರು!

## ಸೇವಾಹಿರಿತನ - ಸದ್ದಿಲ್ಲದ ಅಂತಃಪ್ರವಾಹ!

ಲೇಡಿ ಗೋಷನ್ ಆಸ್ಪತ್ರೆಗೆ ನಾನು ಹೋದ ಆರು ತಿಂಗಳಲ್ಲಿ ಡಾ|| ಜೈಬುನ್ನಿಸಾ ಬೇಗಂ ಅವರು ಖಾಲಿ ಇದ್ದ ಡೆಪ್ಯೂಟಿ ಸೂಪರಿಂಟೆಂಡೆಂಟ್ ಸ್ಥಾನಕ್ಕೆ ವರ್ಗವಾಗಿ ಬಂದರು. ಕೊಳ್ಳೇಗಾಲದಲ್ಲಿದ್ದಾಗ ನಾನು ಆಗಿದ್ದ ಅಧಿಕಾರ ಸ್ಥಾನವನ್ನು ಅವರಿಗೆ ವಹಿಸಿಕೊಡಬೇಕೆಂದು ವರಾತ ಹೂಡಿದಾಗಿನ ಪ್ರಕರಣದ ನಿರೂಪಣೆ ನೆನಪಿಸಿಕೊಳ್ಳಿ. ಸೇವಾ ಹಿರಿತನದಲ್ಲಿ ಅವರು ನನಗಿಂತಲೂ ಮೇಲಿನ ಸ್ಥಾನದಲ್ಲಿದ್ದರೂ, ಆ ಊರಲ್ಲಿ ಬಹಳ ಸಮಯದಿಂದ ಆಸ್ಪತ್ರೆಯ ಆಡಳಿತಾಧಿಕಾರಿಯಾಗಿದ್ದರಿಂದ, ಅದೇ ಆಸ್ಪತ್ರೆಯಲ್ಲಿ ಅಧೀನ ಸ್ಥಾನದಲ್ಲಿ ಕಾರ್ಯನಿರ್ವಹಿಸಲು ನನ್ನ ಮನವೊಲಿದಿರಲಿಲ್ಲ. ಮುಂದೇನಾಯಿತೆಂಬುದನ್ನು ಮತ್ತೆ ವಿವರಿಸಬೇಕಿಲ್ಲ. ಮಂಗಳೂರಿನಲ್ಲಿ ನಾನಿರುವುದಕ್ಕಿಂತಲೂ ಮೇಲಿನ ಸ್ಥಾನಕ್ಕೆ ಅವರು ಬಂದಿದ್ದರಿಂದ ನಾನೀಗ ಚಕಾರವೆತ್ತಲಿಲ್ಲ. ವೈಯಕ್ತಿಕವಾಗಿ ನನಗೆ ಅವರ ಮೇಲೆ ಯಾವುದೇ ವೈಷಮ್ಯವಿರಲಿಲ್ಲ; ಅವರೂ ಸಹ ಹಿಂದೊಂದು ಸಾರಿ ನನ್ನಿಂದಾಗಿ ಉಂಟಾದ ಪೇಚಾಟ ಪರಿಸ್ಥಿತಿಯನ್ನು ಅಷ್ಟಾಗಿ ಪರಿಗಣನೆಗೆ ತೆಗೆದುಕೊಂಡಂತಿರಲಿಲ್ಲ. ಅವರು ವರದಿ ಮಾಡಿಕೊಂಡ ದಿನದಿಂದಲೂ ನಮ್ಮಲ್ಲಿ ಯಾವುದೇ ರೀತಿಯ ವೈಷಮ್ಯದ ಸುಳಿವು ಪ್ರಕಟವಾಗಲಿಲ್ಲ. ಹಿಂದಿನ ಮುಜುಗರ ಪ್ರಕರಣದ ಪ್ರಸ್ತಾವವನ್ನು ಯಾರೂ ಮಾಡಲಿಲ್ಲ. ಅಷ್ಟೇಕೆ ನಮ್ಮಿಬ್ಬರ ನಡುವೆ ಅಂತಹ ಘಟನೆಯೊಂದು ಹಿಂದೆ ಜರುಗಿದ್ದರ ವಿಷಯ ಅಲ್ಲಿ ಯಾರಿಗೂ ಬಹಿರಂಗವಾಗಲೇ ಇಲ್ಲ!

ಲೇಡಿ ಗೋಷನ್ ಆಸ್ಪತ್ರೆಯಲ್ಲಿ ಆರ್.ಎಂ.ಓ. (ಸರ್ಜನ್) ಆಗಿ ಸುಮಾರು ಒಂದೂವರೆ ವರ್ಷಗಳಾಗಿರಬಹುದು. ಅಷ್ಟರಲ್ಲೇ ಚಿಕ್ಕಮಗಳೂರಿನ ಮಲ್ಲೆಗೌಡ ಜನರಲ್ ಆಸ್ಪತ್ರೆಯ ಡಿಸ್ಟ್ರಿಕ್ಟ್ ಸರ್ಜನ್ ಹುದ್ದೆಯಲ್ಲಿದ್ದವರು ನಿವೃತ್ತರಾದ್ದರಿಂದ ಆ ಸ್ಥಾನ ಖಾಲಿಯಾಯಿತು. ಕೆಲವು ವರ್ಷಗಳ ಹಿಂದೆ ಅಲ್ಲಿ ಕಾರ್ಯ ನಿರ್ವಹಿಸಿದ್ದ ನಾನು ಪ್ರಸ್ತುತ ಮಂಗಳೂರಿನಲ್ಲಿ ಹೆಚ್ಚಿನ ಜವಾಬ್ದಾರಿ ಇಲ್ಲದ ಸ್ಥಾನವೊಂದರಲ್ಲಿರುವುದು ನನ್ನ ಪರಿಚಿತ ಕೆಲವರ ಗಮನಕ್ಕೆ ಬಂದಿತಂತೆ. ಚಿಕ್ಕಮಗಳೂರಿಗೆ ಮತ್ತೊಮ್ಮೆ ಬಂದು ಡಿಸ್ಟ್ರಿಕ್ಟ್ ಸರ್ಜನ್ ಹುದ್ದೆ ವಹಿಸಿಕೊಳ್ಳಲು ನಾನು ಇಷ್ಟ ಪಡುವೆನೇ ಎಂಬ ಬಗೆಗೆ ಪ್ರಸ್ತಾವಗಳಾದವು. ಅಲ್ಲಿಯ ಆಸ್ಪತ್ರೆಯಲ್ಲಿ ಹಿಂದೆ ನಿಕಟವಾಗಿದ್ದ ವೈದ್ಯರೊಬ್ಬರು ನನ್ನನ್ನು ಸಂಪರ್ಕಿಸಿ ಅಲ್ಲಿನ ವಿದ್ಯಮಾನಗಳ ಬಗೆಗೆ ವಿವರಿಸಿದರು. ಮೊದಲಿಗೆ, ಹಿಂದೊಂದು ಸಾರಿ ಕಾರ್ಯನಿರ್ವಹಿಸಿದ ಆಸ್ಪತ್ರೆಗೆ ಮರಳಿ ಹೋಗುವ ವಿಷಯ ಇಷ್ಟವಾದುದೆನಿಸಲಿಲ್ಲ. ಆದರೆ ಪ್ರಸ್ತುತ ಹೋಗುವುದು ಹಿಂದಿನದಕ್ಕಿಂತ ಮೇಲಿನ ಸ್ಥಾನ; ಅದರಲ್ಲೂ ಅಲ್ಲಿ ಜನರೂ ಇಷ್ಟಪಡುತ್ತಿದ್ದಾರೆಂದಾಗ ಅವರ ಕರೆಯನ್ನು ನಿರಾಕರಿಸುವುದು ಸರಿಯಲ್ಲವೆನಿಸಿತು. ಮೇಲಾಗಿ ನಾನಿದ್ದ ಪ್ರಸ್ತುತ ಹುದ್ದೆಯಲ್ಲಿ ಅಷ್ಟೇನು ಜವಾಬ್ದಾರಿಯುತ ಕೆಲಸ ಕಾರ್ಯಗಳೂ

ಇರಲಿಲ್ಲ. ಆದರೆ ಚಿಕ್ಕಮಗಳೂರಿಗೆ ಹೋಗುವುದು ಸಾಧ್ಯವಾದರೆ ಅಲ್ಲಿಯೂ ಸೇವಾಹಿರಿತನದ ಸಮಸ್ಯೆ ಮತ್ತೆ ಎದುರಾಗಬಹುದೆಂಬ ಸೂಚನೆಯೊಂದಿತ್ತು. ಚಿಕ್ಕಮಗಳೂರು ಆಸ್ಪತ್ರೆಯಲ್ಲಿ ರಾಜ್ಯದ ಬೇರಾವ ಜಿಲ್ಲಾ ಆಸ್ಪತ್ರೆಗಳಲ್ಲಿರದ ಮಹಿಳಾ ಸರ್ಜನ್ ದರ್ಜೆಯ ಹುದ್ದೆ ಇದ್ದುದರ ಪ್ರಸ್ತಾಪ ಈ ಮೊದಲೇ ಮಾಡಲಾಗಿದೆ. ಪ್ರಸ್ತುತ ಆ ಹುದ್ದೆಯಲ್ಲಿದ್ದ ಮಹಿಳಾ ಸರ್ಜನ್ ಕಾಲೇಜಿನಲ್ಲಿ ನನ್ನ ಸಹಪಾಠಿಯಾಗಿದ್ದವರು. ಅವರೇ ಖಾಲಿ ಇದ್ದ ಡಿಸ್ಟ್ರಿಕ್ಟ್ ಸರ್ಜನ್ ಹುದ್ದೆಯ ಕಾರ್ಯಭಾರಗಳನ್ನು ಹೆಚ್ಚುವರಿಯಾಗಿ ನಿರ್ವಹಿಸುತ್ತಿದ್ದರು. ಅವರು ನನಗಿಂತ ಒಂದು ವರ್ಷ ತಡವಾಗಿ ಮೆಡಿಕಲ್ ಕಾಲೇಜಿನಿಂದ ಪಾಸಾಗಿ ಬಂದಿದ್ದರೂ, ಪಬ್ಲಿಕ್ ಸರ್ವಿಸ್ ಕಮೀಷನ್ ಆಯ್ಕೆಯಲ್ಲಿ ನನಗಿಂತ ಮೇಲು ಹಂತದಲ್ಲಿ ನಿಯೋಜಿಸಲ್ಪಟ್ಟಿದ್ದರು! ಅವರನ್ನು ಆ ತನಕ ಡಿಸ್ಟ್ರಿಕ್ಟ್ ಸರ್ಜನ್ ಹುದ್ದೆಗೆ ಇಲಾಖೆ ಕಾಯಂ ಆಗಿ ನೇಮಿಸಿರಲಿಲ್ಲ. ಅವರೂ ಸಹ ಆ ಬಗೆಗೆ ಇಲಾಖೆಗೆ ತಮ್ಮ ಹಕ್ಕೊತ್ತಾಯ ಮಾಡಿರಲಿಲ್ಲವೇನೋ. ಆದರೆ ಅವರಿಗಿಂತಲೂ ಸೇವಾಹಿರಿತನದಲ್ಲಿ ಕೆಳಗಿನ ಸ್ಥಾನದಲ್ಲಿರುವವರೊಬ್ಬರು ಆ ಸ್ಥಾನಕ್ಕೆ ಬರುವ ಸಾಧ್ಯತೆ ಇದ್ದರೆ ಆ ಸಂದರ್ಭದಲ್ಲಿ ತಮ್ಮ ವಿರೋಧ ವ್ಯಕ್ತಪಡಿಸುವ ಸಾಧ್ಯತೆ ಇತ್ತು. ಈ ವಿಷಯವನ್ನು ನನ್ನನ್ನು ಸಂಪರ್ಕಿಸಿದ ವೈದ್ಯರಿಗೆ ತಿಳಿಸಿ ಮಹಿಳಾ ಸರ್ಜನರ ಅಭಿಪ್ರಾಯ ಪಡೆದುಕೊಳ್ಳುವಂತೆ ಕೇಳಿಕೊಂಡೆ. ಈ ವಿಚಾರವನ್ನು ಪ್ರಸ್ತಾಪಿಸಿದಾಗ ಅವರ ಸಹಪಾಠಿಯೊಬ್ಬರು ಆ ಸ್ಥಾನಕ್ಕೆ ಬಂದರೆ ತಮ್ಮ ಅಭ್ಯಂತರವೇನೂ ಇಲ್ಲವೆಂದು ತಿಳಿಸಿದರಂತೆ.

ಮುಂದಿನ ಒಂದೂವರೆ ತಿಂಗಳಲ್ಲಿ ಈ ಬಗೆಗೆ ಇಲಾಖಾ ಹಂತದಲ್ಲಿ ಕಾರ್ಯಕ್ರಮಗಳು ಜರುಗಿ ನನಗೆ ಚಿಕ್ಕಮಗಳೂರಿಗೆ ವರ್ಗವಾಯಿತು.

---



# ೧೬. ಮರಳಿ ಚಿಕ್ಕಮಗಳೂರು - ಅಂತಿಮ ನಮನ

ಅಕ್ಟೋಬರ್ ಹದಿನೈದರ ದಿನ (೧೯೮೦) ಚಿಕ್ಕಮಗಳೂರು ಜಿಲ್ಲಾ ಆಸ್ಪತ್ರೆಗೆ ವರದಿ ಮಾಡಿಕೊಳ್ಳಲು ಹೋದೆ. ನಾನು ಬಂದಿರುವ ವಿಷಯ ತಿಳಿದ ಮಹಿಳಾ ಸರ್ಜನರೂ ಕಚೇರಿಗೆ ಬಂದರು. ಕಾಲೇಜಿಲ್ಲಿ ಸಹಪಾಠಿಗಳಾಗಿ ನಿಕಟ ಪರಿಚಯವಿದ್ದವರಾದ್ದರಿಂದ ಹಸನ್ಮುಖದ ಸ್ವಾಗತ ನಿರೀಕ್ಷಿಸಿದ್ದೆ; ಹಾಗೇನೂ ಅನಿಸಲಿಲ್ಲ. ಔಪಚಾರಿಕ ಸಂಭಾಷಣೆಗಳಾದವು. ಹಾಗೆಯೇ ಅಧಿಕಾರ ಹಸ್ತಾಂತರಿಸುವ ಪ್ರಸ್ತಾವಗಳಾದವು. ಆ ಸ್ಥಾನಕ್ಕೆ ನಾನು ವರ್ಗ ಮಾಡಿಸಿಕೊಂಡು ಬಂದಿದ್ದರಿಂದ ಅವರೊಂದು ರೀತಿಯ ಮುಜುಗರಕ್ಕೆ ಸಿಲುಕಿದಂತಾಯಿತೆಂದು ಉದ್ಗಾರವೆತ್ತಿದರು. ಅದನ್ನು ಕೇಳಿ ನಾನೂ ಅವಾಕ್ಕಾದೆ. ನಾನು ಅಲ್ಲಿಗೆ ಬರುವ ನಿರ್ಧಾರ ಮಾಡುವ ಮೊದಲು ಅವರ ಅಭಿಪ್ರಾಯ ತಿಳಿದುಕೊಂಡೇ ಮುಂದಡಿ ಇಟ್ಟದ್ದನ್ನು ಅವರ ಗಮನಕ್ಕೆ ತಂದೆ. "ಹೌದು, ಯಾರೋ ಕೇಳಿದರು; ನಾನೂ ಏನೋ ಹೇಳಿಬಿಟ್ಟೆ" ಎಂದವರು ಉತ್ತರಿಸಿದರು. ಮುಂದೇನು ಹೇಳ ಬೇಕೆಂಬುದು ನನಗೊಂದು ಕ್ಷಣ ಹೊಳೆಯಲೇ ಇಲ್ಲ. ಆದರೂ ಸಾವರಿಸಿಕೊಂಡು "ನಿಮ್ಮನ್ನು ಪೇಚಿಗೆ ಸಿಕ್ಕಿಸುವ ಅಭಿಲಾಷೆ ನನಗಿರಲಿಲ್ಲ. ಬಹುಶಃ ವಿಷಯದ ತಪ್ಪು ಗ್ರಹಿಕೆಯಿಂದ ಹೀಗಾಯಿತೋ ಏನೋ. ಈಗಲೂ ಅದನ್ನು ಸರಿಪಡಿಸಲು ಸಾಧ್ಯವಾಗಬಹುದೆಂದು ನನಗನಿಸುತ್ತಿದೆ. ನಿಮ್ಮನ್ನು ಡಿಸ್ಟ್ರಿಕ್ಟ್ ಸರ್ಜನ್ ಹುದ್ದೆಗೂ, ಹಾಗೂ ನನ್ನನ್ನು ಮಹಿಳಾ ಸರ್ಜನ್ ಸ್ಥಾನಕ್ಕೂ ಮರು ನೇಮಕ ಮಾಡುವಂತೆ ಪರಸ್ಪರ ಒಪ್ಪಿಗೆ ಪತ್ರ ಬರೆದು ಇಲಾಖೆಗೆ ಕಳುಹಿಸೋಣ. ನನಗೇನು ಡಿಸ್ಟ್ರಿಕ್ಟ್ ಸರ್ಜನ್ ಹುದ್ದೆಯೇ ಬೇಕೆಂಬ ಉತ್ಕಟಾಕಾಂಕ್ಷೆ ಇಲ್ಲ" ಎಂದು ಹೇಳಿದೆ. ಅದನ್ನು ಕೇಳಿದ ನಂತರ ಅವರ ಮನಸ್ಸಿನಲ್ಲಿ ಮತ್ತಾವ ಯೋಚನೆಗಳು ಹೊಳೆದವೋ. ಹಾಗೇನೂ ಬೇಡ, ಈಗಿರುವಂತೆಯೇ ಮುಂದುವರಿಯಲಿ ಎಂದು ಹೇಳಿದರಲ್ಲದೆ, ಸಂಬಂಧಿಸಿದ ಗುಮಾಸ್ತರನ್ನು ಕರೆಸಿದರು. ಅಧಿಕಾರ ಹಸ್ತಾಂತರದ ವಿಧಿ ವಿಧಾನಗಳನ್ನು ಏರ್ಪಡಿಸುವಂತೆ ಆದೇಶ ಮಾಡಿದರು.

ಸೇವಾ ಹಿರಿತನದ ಸಮಸ್ಯೆ ನಾನು ಕೆಲಸಕ್ಕೆ ಸೇರಿದಾಗಿನಿಂದಲೂ ಬೆಂಬತ್ತಿದ್ದು, ಸೇವೆ ಮುಗಿಯುವ ಹಂತದವರೆಗೂ ನನ್ನನ್ನು ಪೇಚಿಗೆ ಸಿಲುಕಿಸುತ್ತಿದುದರ ಪ್ರಸ್ತಾಪ ಅಲ್ಲಲ್ಲೇ ಬಂದಿದೆ. ಈ ಸಾರಿ ಹೆಚ್ಚಿನ ಗೋಜಲು ಸೃಷ್ಟಿಸದೆ ಪರಿಹಾರವಾಯಿತು*. ಶುರುವಿನಲ್ಲಿ ಸ್ವಲ್ಪ ಅಸಮಾಧಾನ

---

*ನನ್ನ ಸರ್ಕಾರೀ ಸೇವಾ ಅವಧಿಯುದ್ದಕ್ಕೂ 'ಸೇವಾ ಹಿರಿತನ' (ಸೀನಿಯಾರಿಟಿ)ವನ್ನು ನಿರ್ಧರಿಸುವಲ್ಲಾದ ಅನ್ಯಾಯದಿಂದುಂಟಾದ ಕಿರಿಕಿರಿಗಳ ಉಲ್ಲೇಖಗಳಾಗಿವೆಯಷ್ಟೆ. ಈ ಕೃತಿಯನ್ನು ಬರೆದು ಮುಗಿಸುವಷ್ಟರಲ್ಲಿ ಭಾರತದ ಸರ್ವೋಚ್ಚ ನ್ಯಾಯಾಲಯ ನೀಡಿದ ತೀರ್ಪೊಂದು ನನ್ನ ಹಾಗೆ 'ನರಳು' ವವರಿಗೆ ಆಶಾದೀಪವಾಗಬಹುದೆಂಬ ಅಭಿಲಾಷೆಯಿಂದ ಅದನ್ನು ಸಂಕ್ಷಿಪ್ತವಾಗಿ ದಾಖಲಿಸುತ್ತೇನೆ: ಉತ್ತರ ಪ್ರದೇಶದ ವೈದ್ಯಕೀಯ ಇಲಾಖೆಯಲ್ಲಿ ಕೆಲವು ವರ್ಷಗಳ ಹಿಂದೆ ಹಂಗಾಮಿಯಾಗಿ ನೇಮಕವಾದ ಕೆಲವು ವೈದ್ಯರ ಸೇವೆಯನ್ನು ಕ್ರಮಗೊಳಿಸುವಾಗ (REGULATE) ಅವರ ಹಾಗೂ ಅದೇ ಸಂದರ್ಭದಲ್ಲಿ ಅಲ್ಲಿಯ ಪಬ್ಲಿಕ್ ಸರ್ವಿಸ್ ಕಮೀಷನ್ ಮೂಲಕ ಆಯ್ಕೆಯಾದ ವೈದ್ಯರ ಸೇವಾ ಹಿರಿತನವನ್ನು ನಿರ್ಧರಿಸಬೇಕಾಯಿತು. ಆ ದಿಸೆಯಲ್ಲಿ ಆ ರಾಜ್ಯದ ಹೈಕೋರ್ಟು ಮತ್ತು ಸರ್ವೋಚ್ಚ ನ್ಯಾಯಾಲಯದ ಎರಡು ವಿಭಾಗೀಯ ಪೀಠಗಳು ನೀಡಿದ ತೀರ್ಪುಗಳಲ್ಲಿ ಸಾಮರಸ್ಯವಿದ್ದಂತಿರಲಿಲ್ಲ. ಮುಖ್ಯ ನ್ಯಾಯಾಧೀಶರ ನೇತೃತ್ವದಲ್ಲಿ ಐದು ನ್ಯಾಯ ಮೂರ್ತಿಗಳ ಸಂವಿಧಾನ ಪೀಠ ಈ ಪ್ರಕರಣವನ್ನು ವಿಚಾರಣೆ ಮಾಡಿ ನೀಡಿದ ತೀರ್ಪಿನಲ್ಲಿ - ಕೆಲವು ವರ್ಷಗಳಿಂದ ಸರ್ಕಾರದ ಸೇವೆಯಲ್ಲಿ ಹಂಗಾಮಿ ವೈದ್ಯರ ಸೇವಾ ಹಿರಿತನವನ್ನು ಅವರು ಮೊದಲು ಕೆಲಸಕ್ಕೆ ಸೇರಿದಾಗಿನಿಂದಲೇ (ಅನಂತರ ಪ.ಸ.ಕ.ದಿಂದ ಆಯ್ಕೆಯಾದ ವೈದ್ಯರಿಗಿಂತಲೂ) ಪರಿಗಣಿಸಬೇಕೆಂಬ ತತ್ವವನ್ನು ಪ್ರತಿಪಾದಿಸಿತು. (ನೋಡಿ: DECCAN HERALD dated 8-4-2002 - S.C. CALLS FOR CONSISTENCY IN RULINGS ) ರೂಢಿಗತ ಕಾನೂನುಗಳ ಅರ್ಥವಿವರಣೆಯಲ್ಲಿ ತಡವಾಗಿಯಾದರೂ ಈ ತರಹೆ ಭಾವನೆಗಳು ವಿಕಸನವಾಗುತ್ತಿರುವುದು ಸ್ವಾಗತಾರ್ಹ ಬೆಳವಣಿಗೆ ಅಂದುಕೊಂಡೆ!

ವ್ಯಕ್ತವಾದರೂ, ಮಹಿಳಾ ಸರ್ಜನರು ಮುಂದೆ ಅಲ್ಲಿದ್ದ ಆರು ತಿಂಗಳ ಅವಧಿಯಲ್ಲಿ ತುಂಬಾ ಸಹಕಾರ ನೀಡಿ ಕಾರ್ಯ ನಿರ್ವಹಿಸಿದ್ದನ್ನು ಮರೆಯಲಾರೆ.

ಚಿಕ್ಕಮಗಳೂರು ಆಸ್ಪತ್ರೆ ಹಾಗೂ ಅಲ್ಲಿನ ಸಿಬ್ಬಂದಿಯವರು ನನಗೆ ಹೊಸದಾಗೇನೂ ಕಂಡು ಬರಲಿಲ್ಲ. ವೈದ್ಯರಲ್ಲಿ ಕೆಲವರು ಸ್ವಲ್ಪ ಸಮಯ ಬೇರೆ ಊರುಗಳಿಗೆ ವರ್ಗವಾಗಿದ್ದರೂ, ಮತ್ತೆ ಹಲವರು ಅಲ್ಲಿಗೇ ವಾಪಸ ಬಂದು ಕಾರ್ಯ ನಿರತರಾಗಿದ್ದರು. ತವರು ಮನೆಗೆ ಹಿಂದಿರುಗಿದ ವಾತಾವರಣ ನಿರ್ಮಾಣವಾದಂತಿತ್ತು.

## ಬಸ್ ಅಪಘಾತ - ರೋಗಿಗಳ ಬವಣೆ - ಪತ್ರಿಕಾ ಸಮರ

ಚಿಕ್ಕಮಗಳೂರಿನಲ್ಲಿ ಕಾರ್ಯಾರಂಭ ಮಾಡಿದ ಒಂದು ವಾರದಲ್ಲೇ ಹತ್ತಿರದಲ್ಲೇ ಒಂದು ಬಸ್ ಅಪಘಾತಕ್ಕೀಡಾಯಿತು. ಅಂದು ಸಾಯಂಕಾಲ ೩೦-೪೦ ಗಾಯಾಳುಗಳು ಆಸ್ಪತ್ರೆಗೆ ದಾಖಲಾದರು. ಹಲವರಿಗೆ ಮೂಳೆಗಳು ಮುರಿದಿದ್ದವು. ಆಸ್ಪತ್ರೆ ಸಿಬ್ಬಂದಿ ವರ್ಗ ಹಾಗೂ ವೈದ್ಯರೆಲ್ಲಾ ಸೇರಿ ಅವರಿಗೆ ತತ್ಕ್ಷಣದ ಪ್ರಥಮ ಚಿಕಿತ್ಸೆ ನೀಡಿದೆವು. ವೈಯಕ್ತಿಕವಾಗಿ ನಾನೂ ಅವರೊಡನಿದ್ದು ಚಿಕಿತ್ಸೆಗಳ ಏರ್ಪಾಡಿನಲ್ಲಿ ಮುತುವರ್ಜಿ ವಹಿಸಿದ್ದೆ. ಅಂದಿನ ರಾತ್ರಿಯೂ ಹಲವಾರು ಸಾರಿ ವಾರ್ಡುಗಳಿಗೆ ಭೇಟಿ ನೀಡಿ ಚಿಕಿತ್ಸೆಯಲ್ಲಿ ಲೋಪ ದೋಷಗಳುಂಟಾಗದಂತೆ ನಿಗಾ ವಹಿಸಿದ್ದೆ.

ಮರುದಿನವೂ ಮುಂಚಿತವಾಗಿ ವಾರ್ಡಿಗೆ ಹೋಗಿ ಮೂಳೆಗಳು ಮುರಿದಿರುವ ಅನುಮಾನವಿರುವರಿಗೆಲ್ಲಾ ಸಂಬಂಧಿಸಿದ ವೈದ್ಯರಿಂದ ಚೀಟಿಗಳನ್ನು ಬರೆಸಿ ಆದಷ್ಟು ಶೀಘ್ರವಾಗಿ ಎಕ್ಸ್‌ರೇ ತೆಗೆಸುವ ಏರ್ಪಾಡು ಮಾಡಬೇಕೆಂದು ವಾರ್ಡಿನ ಸಿಬ್ಬಂದಿಗಳಿಗೆ ತಾಕೀತು ಮಾಡಿದೆ; ಎಕ್ಸ್‌ರೇ ವಿಭಾಗಕ್ಕೂ ಹೋಗಿ ಅಪಘಾತದ ರೋಗಿಗಳ ಎಕ್ಸರೇ ಪಟಗಳು ತಯಾರಾದಂತೆಲ್ಲಾ 'ಹಸಿ ಫಿಲಂ' (Wet Film) - ಗಳನ್ನು ನನಗೆ ತೋರಿಸುವಂತೆ ಹೇಳಿದೆ. ಆದರೆ ಮಧ್ಯಾಹ್ನ ಹನ್ನೆರಡೂವರೆ-ಒಂದು ಗಂಟೆಯವರೆಗೂ ಫಿಲಂಗಳು ನನ್ನ ಕಡೆ ಬರಲಿಲ್ಲ. ಎಕ್ಸ್‌ರೇ ತಂತ್ರಜ್ಞರನ್ನು ಕರೆಸಿ ವಿಚಾರಿಸಿದೆ. ಅಂತಹ ರೋಗಿಗಳನ್ನು ಅಲ್ಲಿಯವರೆಗೆ ಎಕ್ಸ್‌ರೇ ವಿಭಾಗಕ್ಕೆ ಕಳುಹಿಸಿಯೇ ಇಲ್ಲವೆಂದು ವರದಿ ಮಾಡಿದರು. ಕಾರಣವೇನೆಂದು ವಾರ್ಡಿನ ಸಿಬ್ಬಂದಿಗಳನ್ನು ವಿಚಾರಿಸಿದೆ. ಆ ರೋಗಿಗಳನ್ನು ನೋಡಿಕೊಳ್ಳುವ ವೈದ್ಯರು ಆ ತನಕ ವಾರ್ಡಿಗೇ ಬಂದಿಲ್ಲವೆಂದು ಹೇಳಿದರು. ಆ ಬಗೆಗೆ ಮುಂದುವರಿದ ತನಿಖೆಯಿಂದ ಸಂಬಂಧಿಸಿದ ವೈದ್ಯರು ಹಿಂದಿನ ದಿನ ಅಪಘಾತದಿಂದ ದಾಖಲಾದ ತುರ್ತು ಪರಿಸ್ಥಿತಿಯಲ್ಲಿರುವ ರೋಗಿಗಳನ್ನು ಆದ್ಯತೆಯಿಂದ ನೋಡುವ ಬದಲು ಇನ್ನಿತರ ವಾರ್ಡುಗಳಲ್ಲಿರುವ ಹಳೆಯ ರೋಗಿಗಳನ್ನು ನೋಡುವುದರಲ್ಲಿ ಮಗ್ನರಾಗಿರುವುದು ತಿಳಿದು ಬಂದಿತು! ವಿಷಯ ಅಷ್ಟರಲ್ಲೇ ನನ್ನ ಗಮನಕ್ಕೆ ಬಂದದ್ದು ಗೊತ್ತಾಗಿ, ಅವರು ಗಾಯಾಳುಗಳಿದ್ದ ವಾರ್ಡಿಗೆ ಧಾವಿಸಿದರಂತೆ. ತೀವ್ರ ಅಪಘಾತದಿಂದುಂಟಾದ ಗಾಯಾಳುಗಳ ಬಗೆಗೆ ಅನುಕಂಪ ತೋರಲಾರದ ಇಂತಹ ವೈದ್ಯರ ನಡೆವಳಿಕೆಗೆ ಏನು ಹೇಳಬೇಕೋ ತಿಳಿಯದಾಯಿತು.

ಅಂದು ಮಧ್ಯಾಹ್ನ ಎಕ್ಸ್‌ರೇ ಪಟಗಳು ದೊರೆತವು. ಮೂಳೆ ಮುರಿದವರಿಗೆ ಸೂಕ್ತ ರೀತಿಯ ಚಿಕಿತ್ಸೆಗಳನ್ನು ಅಳವಡಿಸಲಾಯಿತು. ಆದರೆ ಈ ವಿಷಯ ಸ್ಥಳೀಯ ಪತ್ರಿಕೆಗಳಲ್ಲಿ ಹಲವು ರೀತಿಯ ಉತ್ಪ್ರೇಕ್ಷೆಗಳೊಂದಿಗೆ ಪ್ರಕಟವಾದವು. ಆಸ್ಪತ್ರೆಯಲ್ಲಿ ಅಪಘಾತಕ್ಕೊಳಗಾದವರ ಬಗೆಗೆ ದಿವ್ಯ ನಿರ್ಲಕ್ಷ್ಯ, ಎಕ್ಸ್‌ರೇ ತೆಗೆಯುವಲ್ಲಿ, ಚಿಕಿತ್ಸೆ ನೀಡುವಲ್ಲಿ ತಾತ್ಸಾರ, ಆಸ್ಪತ್ರೆಗೆ ಸೇರಿದ

ರೋಗಿಗಳಿಗೆ ರಾತ್ರಿ ಉಪವಾಸ— ಮುಂತಾದ ತಲೆಬರಹಗಳಡಿಯಲ್ಲಿ ವರ್ಣರಂಜಿತ ವರದಿಗಳು ಪ್ರಕಟವಾದವು. ಎಕ್ಸ್‌ರೇ ಪಟಗಳನ್ನು ತೆಗೆಸುವಲ್ಲಿ ವಿಳಂಬವಾದುದು ನಿಜ. ಆದರೆ ಮಿಕ್ಕುಳಿದ ವಿಷಯಗಳಲ್ಲಿ ನಾನೇ ಮುಂದೆ ನಿಂತು ಮುತುವರ್ಜಿವಹಿಸಿದ್ದನ್ನು ಈಗಾಗಲೇ ವಿವರಿಸಲಾಗಿದೆ.

ಈ ದಿಸೆಯಲ್ಲಿ ಒಂದು ಸ್ಪಷ್ಟನೆ ಅಗತ್ಯವೆನಿಸುತ್ತದೆ. ಹೊತ್ತಲ್ಲದ ಹೊತ್ತಿನಲ್ಲಿ ಆಸ್ಪತ್ರೆಗಳಿಗೆ ಸೇರುವವರಿಗೆ ಕೂಡಲೇ ಆಹಾರ ಪದಾರ್ಥಗಳನ್ನು ಒದಗಿಸುವುದು ದುಸ್ಸಾಧ್ಯವೆ ಸರಿ. ಮುಂದಿನ ದಿನದ ರೋಗಿಗಳಿಗೆ ಬೇಕಾಗುವ ಆಹಾರ ಸಾಮಗ್ರಿಗಳ ಬೇಡಿಕೆಯನ್ನು ಹಿಂದಿನ ದಿನ ಸಾಯಂಕಾಲ ಗುತ್ತಿಗೆದಾರರಿಗೆ ಸಲ್ಲಿಸಲಾಗಿರುತ್ತದೆ. ನಡುವೆ ದಾಖಲಾಗುವವರಿಗೆ ಆಹಾರ ಪದಾರ್ಥಗಳನ್ನು ಒದಗಿಸಲು ಆಸ್ಪತ್ರೆಯವರು ಅಸಹಾಯಕರಾಗುತ್ತಾರೆ. ಅಪಘಾತ ಸಂಭವಿಸಿದ ಬಸ್ಸಿನ ಮಾಲೀಕರು ಇಂತಹ ಸಂದರ್ಭಗಳಲ್ಲಿ ರೋಗಿಗಳಿಗೆ ಸಹಾಯ ಮಾಡುವಂತಾಗಬೇಕು. ಆದರೆ ಆಸ್ಪತ್ರೆಗಳಿಗೆ ಗಾಯಾಳುಗಳನ್ನು ತಂದು ಹಾಕಿದ ನಂತರ ಅವರೆಲ್ಲಾ ನಾಪತ್ತೆಯಾಗಿ ಬಿಡುತ್ತಾರೆ. ಅಂತಹ ಸಂದರ್ಭಗಳಲ್ಲಿ ಆಸ್ಪತ್ರೆಯಲ್ಲಿ ಲಭ್ಯವಿರುವ ವೈದ್ಯರು ಮತ್ತು ಸಿಬ್ಬಂದಿ ವರ್ಗದವರಿಗೆ ಗಾಯಾಳುಗಳಿಗೆ ಸೂಕ್ತ ಚಿಕಿತ್ಸಾ ವಿಧಾನಗಳನ್ನು ಅಳವಡಿಸುವುದೇ ಪ್ರಯಾಸದ ಕಾರ್ಯವಾಗುತ್ತದೆ. ಅಲ್ಲದೆ ತುರ್ತಾಗಿ ಗುತ್ತಿಗೆದಾರರನ್ನು ಸಂಪರ್ಕಿಸುವುದಕ್ಕಾಗಲೀ, ನೇರವಾಗಿ ಖರೀದಿಸುವ ಬಗೆಗಾಗಲೀ ಆಗಿನ ಕಾಲದಲ್ಲಿ ಮಾರ್ಗದರ್ಶನಗಳಿರಲಿಲ್ಲ. ಆಸ್ಪತ್ರೆಯವರು ಎದುರಿಸುವ ಸಂದಿಗ್ಧ ಪರಿಸ್ಥಿತಿಯನ್ನು ಅರ್ಥಮಾಡಿ ಕೊಳ್ಳದೆ ಸುದ್ದಿ ಮಾಧ್ಯಮದವರು ಮತ್ತು ಸಾರ್ವಜನಿಕರು ಸಹಾ ಆಸ್ಪತ್ರೆಯನ್ನು ಸಲ್ಲದ ಟೀಕೆಗಳಿಗೊಳಮಾಡಿ ಅಲ್ಲಿ ಕಾರ್ಯ ನಿರ್ವಹಿಸುವವರ ಮನಃಸ್ಥೈರ್ಯ ಕುಗ್ಗುವಂತೆ ಮಾಡುತ್ತಾರೆ. ಈ ಎಲ್ಲಾ ವಿಷಯಗಳನ್ನು ವಿವರಿಸಿ ಪತ್ರಿಕೆಗಳಿಗೂ, ವೈದ್ಯಕೀಯ ಇಲಾಖಾ ವರಿಷ್ಠರಿಗೂ ಪತ್ರಗಳನ್ನು ಬರೆದೆ. ಇಲಾಖೆಯವರು ಅಂತಹ ಸಂದರ್ಭಗಳಲ್ಲಿ ಗುತ್ತಿಗೆದಾರರಿಗೆ ತುರ್ತು ಬೇಡಿಕೆ ಕಳುಹಿಸುವ ಏರ್ಪಾಡು ಮಾಡುವ ಸಲಹೆ ಮಾಡಿದರು. ತಾಂತ್ರಿಕ ಕಾರಣಗಳಿಂದ ಅದೂ ಸಹ ಅಸಾಧ್ಯವಾಗಬಹುದು. ಬಹುಶಃ ಆಸ್ಪತ್ರೆಯವರೇ ನೇರವಾಗಿ ಕೆಲವು ಆಹಾರ ಪದಾರ್ಥಗಳನ್ನು ಖರೀದಿಸುವ ವ್ಯವಸ್ಥೆ ಮಾಡಲು ಸಾಧ್ಯವಾಗುವಂತೆ ಮಾಡಿದರೆ ಈ ಸಮಸ್ಯೆ ಸ್ವಲ್ಪ ಮಟ್ಟಿಗೆ ಪರಿಹಾರವಾಗಬಹುದು.

## ಸಂದರ್ಶಕ ಸಮಿತಿಗಳ ಪಾತ್ರ

ಸರ್ಕಾರಿ ಆಸ್ಪತ್ರೆಗಳಿಗೆ ಚಿಕಿತ್ಸೆಗಾಗಿ ಹೋಗುವ ರೋಗಿಗಳಿಗಾಗುವ ಅತಿ ಸಾಮಾನ್ಯವೆನ್ನಬಹುದಾದ ಒಂದೆರಡು ನ್ಯೂನತೆಗಳನ್ನು ಉದಾಹರಿಸಿ, ಈ ಸಮಸ್ಯೆಯ ವಿಶ್ಲೇಷಣೆ ಮಾಡ ಬಯಸುತ್ತೇನೆ.

ಹೆರಿಗೆ ಆಸ್ಪತ್ರೆಯ ಆವರಣದಲ್ಲಿ ಕುಟುಂಬ ಕಲ್ಯಾಣ ಇಲಾಖೆಯವರು ವಿವಿಧೋದ್ದೇಶ ಕಟ್ಟಡ ಸಮುಚ್ಚಯವೊಂದನ್ನು ಹೊಸದಾಗಿ ನಿರ್ಮಿಸಿದ್ದರು. ಅದರ ವಿಶಾಲ ಕೊಠಡಿಯೊಂದರಲ್ಲಿ ಮಹಿಳಾ ಹೊರರೋಗಿಗಳನ್ನು ಪರೀಕ್ಷಿಸುವ ಸಲುವಾಗಿ ಹಂಗಾಮಿ ವ್ಯವಸ್ಥೆ ಮಾಡಲಾಗಿತ್ತು. ಒಂದು ಗೋಡೆಯ ಪಕ್ಕದಲ್ಲಿ ಪರೀಕ್ಷಾ ಮೇಜನ್ನು ಇರಿಸಿ, ಅದು ಹೊರಗಿನವರಿಗೆ ಕಾಣಿಸದಂತೆ ಎರಡು ಬಟ್ಟೆಪರದೆಗಳನ್ನು ಜೋಡಿಸಿ ಬೇರ್ಪಡಿಸಲಾಗಿತ್ತು. ಒಂದು ಸಾರಿ ಸಂದರ್ಶಕ ಸಮಿತಿಯವರು ಅಲ್ಲಿಗೂ ಭೇಟಿ ನೀಡಿದರು. ಸದಸ್ಯರೊಬ್ಬರು ಆ ವ್ಯವಸ್ಥೆಯಲ್ಲಿ ಎದ್ದು ಕಾಣುವ ನ್ಯೂನತೆಯ ಬಗೆಗೆ ತಮ್ಮ ಆಕ್ರೋಶವನ್ನು ವ್ಯಕ್ತಪಡಿಸಿದರು. ಎರಡು ಪರದೆಗಳು ಸೇರುವೆಡೆಯಲ್ಲಿ ಸಾಕಷ್ಟು ತೆರಪಾದ ಜಾಗವಿದ್ದು, ಹೊರಗಡೆ ಕುಳಿತಿರುವವರು ರೋಗಿಯ

ಪರೀಕ್ಷೆಯ ವಿಧಾನಗಳನ್ನು ನೋಡಬಹುದಾಗಿತ್ತು. ಆ ನ್ಯೂನತೆ ಅಲ್ಲಿ ಪ್ರತಿದಿನ ಕಾರ್ಯ ನಿರ್ವಹಿಸುತ್ತಿದ್ದ ಮಹಿಳಾ ವೈದ್ಯರಿಗಾಗಲೀ, ಹಾಗೂ ಆಗಾಗ್ಗೆ ಪರಿವೀಕ್ಷಣೆಗೆ ಹೋಗುತ್ತಿದ್ದ ನನಗಾಗಲೀ ಹೊಳೆದಿರಲೇ ಇಲ್ಲ! ಆಗಿರುವ ತಪ್ಪನ್ನು ಒಪ್ಪಿಕೊಂಡು ಮುಂದಿನ ಸಾರಿ ಸಂದರ್ಶಕರು ಬರುವಷ್ಟರಲ್ಲೇ ಅಲ್ಲಿ ಇಟ್ಟಿಗೆ ಗೋಡೆ ನಿರ್ಮಿಸಿ ನ್ಯೂನತೆಯನ್ನು ಸರಿಪಡಿಸಿದೆ.

ಆಸ್ಪತ್ರೆಯ ಪ್ರಧಾನ ಕಟ್ಟಡದ ಹೊರರೋಗಿಗಳ ವಿಭಾಗದಲ್ಲಿ ಕಾಂಪೌಂಡಿಂಗ್ ಕೊಠಡಿಯಿಂದ ರೋಗಿಗಳಿಗೆ ಔಷಧಗಳನ್ನು ವಿತರಿಸುವ ಕಿಂಡಿ ಹೊರಗಡೆ ಬಯಲಿನ ಕಡೆಗೆ ತೆರೆದುಕೊಂಡು ನಿರ್ಮಾಣವಾಗಿತ್ತು. ಮಾತ್ರೆ, ಔಷಧ ಸಾಮಗ್ರಿಗಳನ್ನು ಪಡೆದುಕೊಳ್ಳುವವರು ಬಿಸಿಲು ಮಳೆಗಳನ್ನು ಸಹಿಸಿಕೊಂಡು ಅಲ್ಲಿ ಕಾಯ್ದು ನಿಂತುಕೊಂಡಿರ ಬೇಕಾಗುತ್ತಿತ್ತು. ಒಳಭಾಗ ದಲ್ಲಿ ವಿಶಾಲವಾದ ಹಜಾರವಿದ್ದರೂ, ಆ ಕೊಠಡಿಯನ್ನು ನಿರ್ಮಾಣ ಮಾಡುವ ಸಮಯದಲ್ಲಿ ಆ ನ್ಯೂನತೆ ಯಾರಿಗೂ ಹೊಳೆದಿರಲಿಲ್ಲವೇನೋ. ಹಿಂದಿನ ಸಾರಿ ಆಕ್ಷೇಪವೆತ್ತಿದ ಸಂದರ್ಶಕರೇ ಈ ನ್ಯೂನತೆಯತ್ತ ನಮ್ಮೆಲ್ಲರ ಗಮನ ಸೆಳೆದರು. ಬಹಳ ಸಮಯದಿಂದ ಅಂತಹ ಪರಿಸ್ಥಿತಿ ಮುಂದುವರಿದುಕೊಂಡು ಬಂದಿದ್ದರೂ, ಆಸ್ಪತ್ರೆ ಅಧಿಕಾರ ವರ್ಗದವರಾಗಲೀ, ಇಲ್ಲವೆ ರೋಗಿಗಳಾಗಲೀ ಆ ಬಗೆಗೆ ಗಮನ ಹರಿಸಿರಲಿಲ್ಲವೆಂದರೆ ಅಂತಹ ಸಾಮಾನ್ಯ ವಿಚಾರಗಳಲ್ಲಿ ನಾವೆಷ್ಟು ಯಾಂತ್ರಿಕವಾಗಿ ನಡೆದುಕೊಳ್ಳುತ್ತೇವೆ! ಮುಂದೆ ಔಷಧ ವಿತರಣಾ ಕಿಂಡಿಯನ್ನು ಒಳಗಿನ ಹಜಾರದ ಕಡೆ ತೆರೆಸಲಾಯಿತು.

ಆಸ್ಪತ್ರೆಗಳಿಗೆ 'ಸಂದರ್ಶಕ ಸಮಿತಿ' (Board of Visitors)ಗಳನ್ನು ನೇಮಿಸುವ ಪರಿಪಾಟ ಬಹಳ ಹಿಂದಿನಿಂದಲೂ ಮುಂದುವರಿಯುತ್ತಿದೆ. ಅದು ಸರಿಯಾದ ರೀತಿಯಲ್ಲಿ ಕಾರ್ಯ ನಿರ್ವಹಿಸಿದರೆ ಜನ ಸಾಮಾನ್ಯರಿಗೆ ತುಂಬಾ ಉಪಕಾರವಾಗುತ್ತದೆಂಬುದರಲ್ಲಿ ಸಂದೇಹವಿಲ್ಲ. ಅಂತಹ ಸಂಸ್ಥೆಗಳ ಜಡ್ಡುಗಟ್ಟಿದ ಆಡಳಿತ ವರ್ಗದವರು ಸಾಮಾನ್ಯವಾಗಿ ನಿರ್ಲಕ್ಷ್ಯ ಮಾಡಿರಬಹುದಾದ ಹಲವು ಅವ್ಯವಸ್ಥೆಗಳ ಬಗೆಗೆ ಕಣ್ತೆರೆದು ನೋಡುವಂತೆ ಮಾಡಲು ಸಾಧ್ಯ. ಕೆಲವು ದಿನಗಳ ಹಿಂದೆ ಇಂಗ್ಲೆಂಡ್‌ನ ಆಸ್ಪತ್ರೆಗಳಲ್ಲಿರುವ ಇಂತಹ ಸಮಿತಿಗಳ ಕಾರ್ಯ ನಿರ್ವಹಣೆಯ ಬಗೆಗೆ ಗ್ರಂಥವೊಂದರಲ್ಲಿದ್ದ ವಿವರಣೆಗಳು ನನ್ನ ಗಮನ ಸೆಳೆದಿದ್ದವು. ಅಲ್ಲಿಯ ಬಹುಪಾಲು ಆಸ್ಪತ್ರೆಗಳು ಖಾಸಗಿ/ಸ್ವಯಂಸೇವಾ ಸಂಸ್ಥೆಗಳಿಂದ ನಿರ್ವಹಿಸಲ್ಪಡುತ್ತವಂತೆ. ಅವುಗಳ ನಿರ್ವಹಣೆ ಅಂತಹ ಸಂಸ್ಥೆಗಳು ಇಲ್ಲವೆ ಅರೆ ಸರ್ಕಾರಿ ವ್ಯವಸ್ಥೆಗಳ ಜವಾಬ್ದಾರಿಯಲ್ಲಿ ಇರುತ್ತವಂತೆ. ಅಲ್ಲಿಯೂ ಚಿಕಿತ್ಸೆಗಾಗಿ ಬರುವವರಿಗೆ ಸಹಾಯ ಮಾಡುವ ಸಂದರ್ಶಕ ಸಮಿತಿಗಳಿರುತ್ತವಂತೆ. ಆಸ್ಪತ್ರೆಗಳಿಗೆ ಬರುವ ರೋಗಿಗಳ ಅನುಕೂಲ-ಅನಾನುಕೂಲ, ದೊರಕಿಸ ಬಹುದಾದ ಸೌಲಭ್ಯ ಮುಂತಾದವನ್ನು ಉತ್ತಮ ಪಡಿಸುವುದು ಅವರ ಉದ್ದೇಶ. ಅವುಗಳಿಗೆ ಸಾಮಾನ್ಯವಾಗಿ ವೃತ್ತಿ ರಾಜಕಾರಿಣಿಗಳನ್ನಾಗಲೀ ಅಥವಾ ಇತರ ಕ್ಷೇತ್ರಗಳಲ್ಲಿ ಕ್ರಿಯಾಶೀಲ ವಾಗಿರುವವರನ್ನು ನೇಮಿಸಿಕೊಳ್ಳುವುದಿಲ್ಲ. ನಿಸ್ವಾರ್ಥ ಮನೋಭಾವದ ಸಮಾಜಸೇವಕರು, ಉದ್ಯೋಗಗಳಿಂದ ನಿವೃತ್ತರಾದವರು, ಮುಂತಾದವರಿಗೇ ಅವುಗಳಲ್ಲಿ ಪ್ರಾಶಸ್ತ್ಯ, ಹಾಗೆ ನೇಮಕ ವಾದವರು ಆಸ್ಪತ್ರೆಯ ಬೇರೆ ಬೇರೆ ವಿಭಾಗಗಳಲ್ಲಿ ಸಾಮಾನ್ಯ ರೋಗಿಗಳಂತೆ ಕಾಯ್ದುಕೊಂಡಿದ್ದು ಅಲ್ಲಿಯ ಆಗುಹೋಗುಗಳನ್ನು ಗಮನಿಸುತ್ತಿರುತ್ತಾರೆ. ಮತ್ತೆ ಕೆಲವರು ಉದ್ದೇಶಪೂರ್ವಕ ವಾಗಿಯೇ ತಮ್ಮ ಪರಿಚಯ ಮಾಡಿಕೊಂಡು ತಮಗಿಷ್ಟವಾದ ವಿಭಾಗದ ಕಾರ್ಯಕ್ರಮಗಳನ್ನು ವೀಕ್ಷಿಸುತ್ತಾರೆ. ಅಲ್ಲಿರುವ ರೋಗಿಗಳೇ ಅಲ್ಲದೆ ಸಿಬ್ಬಂದಿ ವರ್ಗದವರೊಡನೆಯೂ ವಿಚಾರ ವಿಮರ್ಶೆ ನಡೆಸುತ್ತಾರೆ. ಅನಂತರ ಆಸ್ಪತ್ರೆಯ ನಿರ್ದೇಶಕರನ್ನು ಭೇಟಿ ಮಾಡಿ, ಆಗ ಬೇಕಾದ

ಸುಧಾರಣೆಗಳ ಬಗೆಗೆ ಚರ್ಚಿಸುತ್ತಾರೆ; ಸಲಹೆ ಸೂಚನೆಗಳನ್ನು ನೀಡುತ್ತಾರೆ. ನಿರ್ದೇಶಕರ ಮಟ್ಟದಲ್ಲಿ ಸರಿಪಡಿಸಲಾಗದ ನ್ಯೂನತೆಗಳನ್ನು ಆಸ್ಪತ್ರೆಯ ನಿರ್ವಹಣಾ ಜವಾಬ್ದಾರಿ ಹೊಂದಿರುವವರನ್ನು ಸಂಪರ್ಕಿಸಿ, ಅಗತ್ಯವಾಗಿ ಮಾಡಬೇಕಾದ ಸುಧಾರಣೆಗಳು ಜಾರಿಯಾಗುವಂತೆ ಮಾಡುತ್ತಾರಂತೆ.

ಶಿಕಾರಿಪುರದಲ್ಲಿ ಮೊತ್ತ ಮೊದಲು ಸರ್ಕಾರದ ಕೆಲಸಕ್ಕೆ ಸೇರಿದಾಗಿನಿಂದಲೂ ಸಂದರ್ಶಕ ಸಮಿತಿಗಳೊಂದಿಗೆ ನಿಕಟ ಸಂಪರ್ಕ ನನಗಿರುತ್ತಿತ್ತು. ಅವು ಬಹುಪಾಲು ರಾಜಕೀಯ ಪುಢಾರಿಗಳಿಗೆ ಸ್ಥಾನಮಾನ ಒದಗಿಸುವ ತಾಣಗಳಾಗಿರುವುದೇ ಹೆಚ್ಚು. ಆ ವಲಯದ ಮಂತ್ರಿಗಳೋ, ಶಾಸಕರೋ, ಅದರ ಅಧ್ಯಕ್ಷರಾಗಿ ಬಿಡುತ್ತಾರೆ. ಆಡಳಿತ ಪಕ್ಷದ ಹಲವರು, ವಿರೋಧ ಗುಂಪಿನ ಕೆಲವರು, ವಿವಿಧ ಜಾತಿ/ಕೋಮುಗಳಿಗೆ ಸೇರಿದವರು, ಎಂಬುದೇ ಅವರ ಆಯ್ಕೆಗೆ ಮಾನದಂಡ. ಬಹುಪಾಲು ಸದಸ್ಯರಿಗೆ ಸರ್ಕಾರಿ ಆಸ್ಪತ್ರೆಗಳು ಕಾರ್ಯ ನಿರ್ವಹಿಸುವ ರೀತಿ ನೀತಿಗಳಾಗಲೀ, ಆಸ್ಪತ್ರೆ ನಡೆಸುವವರ ಇತಿಮಿತಿಗಳ ಬಗೆಗಾಗಲೀ ಹೆಚ್ಚಿನ ತಿಳಿವಳಿಕೆ ಇರಲಾರದು. ಆಸ್ಪತ್ರೆಗಳಿಗೆ ಹಾಜರಾಗುವ ರೋಗಿಗಳ ಅವಶ್ಯಕತೆಗಳು, ಆಸ್ಪತ್ರೆಗಳಲ್ಲಿನ ಕುಂದು ಕೊರತೆಗಳ ಬಗೆಗೆ ಅಭ್ಯಾಸ ಮಾಡಿ ಅವುಗಳನ್ನು ಸರಿಪಡಿಸಬಹುದಾದ ವಿಧಿವಿಧಾನಗಳ ಪರಿಚಯವಿರುವುದಿಲ್ಲ. ಸಂದರ್ಶಕ ಸಮಿತಿಯ ಸದಸ್ಯರಾಗುವುದು ಕೆಲವರಿಗೆ ಪ್ರತಿಷ್ಠೆಯ ಸಂಕೇತವಾಗಿ ಬಿಡುತ್ತದೆ! ಆಸ್ಪತ್ರೆ ಅಥವಾ ಯಾವುದೋ ವೈದ್ಯರ ಕರ್ತವ್ಯದಲ್ಲಿ ಲೋಪ ಉಂಟಾಗಿದೆಯೆಂಬುದರ ಅನುಮಾನ ಉಂಟಾದರೂ ಆ ಬಗೆಗೆ ಗಲಾಟೆ ಎಬ್ಬಿಸುವುದೇ ಅವರ ಕರ್ತವ್ಯವೆಂದು ಪರಿಗಣಿಸುವವರೂ ಇರುತ್ತಾರೆ. ಶಿವಮೊಗ್ಗಾದಲ್ಲಿ ಸಂದರ್ಶಕ/ಪತ್ರಕರ್ತರೊಬ್ಬರು ನನ್ನ ವಿರುದ್ಧವೇ ಹುಯಿಲೆಬ್ಬಿಸಿದ ಪ್ರಕರಣ ಅಂತಹ ನಡವಳಿಕೆಯ ಒಂದು ಮಾದರಿ. ಆದುದರಿಂದ ಆಸ್ಪತ್ರೆಗಳಿಗೆ ಸಂದರ್ಶಕರ ಸಮಿತಿಗಳನ್ನು ನೇಮಿಸುವಲ್ಲಿ ಅವುಗಳ ಗುರಿ, ಧ್ಯೇಯೋದ್ದೇಶ, ಇತಿಮಿತಿಗಳೇ ಅಲ್ಲದೆ, ನ್ಯೂನತೆಗಳನ್ನು ಶೀಘ್ರವಾಗಿ ನಿವಾರಿಸುವುದರ ವಿಧಿ ವಿಧಾನಗಳ ಬಗೆಗೆ ಮರುಚಿಂತನೆ ಮಾಡುವ ಅವಶ್ಯಕತೆ ಇದೆ.

## ಆಹಾರ ವಸ್ತುಗಳ ಸರಬರಾಜು - ಕಟ್ಟೆಚ್ಚರ

ಚಿಕ್ಕಮಗಳೂರು ಆಸ್ಪತ್ರೆಯಲ್ಲಿ ಕಾರ್ಯಾರಂಭ ಮಾಡಿದ ಶುರುವಿನಿಂದಲೇ ಅಲ್ಲಿ ಸರಬರಾಜಾಗುತ್ತಿದ್ದ ತರಕಾರಿ, ಹಾಲು ಮುಂತಾದ ಸಾಮಗ್ರಿಗಳ ಗುಣಮಟ್ಟವನ್ನು ಸುಧಾರಿಸುವತ್ತ ಗಮನ ಹರಿಸಿದೆ. ಆಸ್ಪತ್ರೆ ಆವರಣದಲ್ಲೇ ನಮ್ಮ ಪ್ರತಿನಿಧಿಯ ಸಮಕ್ಷಮ ಹಾಲು ಕರೆದು ಕೊಡಬೇಕೆಂಬುದು ಸಾಮಾನ್ಯ ನಿಯಮವಾದರೂ, ಚಿಕ್ಕಮಗಳೂರಲ್ಲಿ ಬಹಳ ವರ್ಷಗಳಿಂದಲೂ ಅದು ಸಾಧ್ಯವಾಗಿರಲಿಲ್ಲ. ಗುತ್ತಿಗೆದಾರರು ಹೊರಗಡೆಯಿಂದ ಸರಬರಾಜು ಮಾಡುತ್ತಿದ್ದ ಹಾಲನ್ನು ಆಗಾಗ್ಗೆ ಲ್ಯಾಕ್ಟೋಮೀಟರ್ ಪರೀಕ್ಷೆಗೊಳಪಡಿಸಲಾಗುತ್ತಿತ್ತು. ಹಾಲಿನ ಸ್ಯಾಂಪಲ್ಲನ್ನು ಆಗಾಗ್ಗೆ ಬೆಂಗಳೂರಿನ ಸರ್ಕಾರಿ ರಾಸಾಯನಿಕ ಪ್ರಯೋಗಾಲಯಕ್ಕೆ ಕಳುಹಿಸಿ ಪರೀಕ್ಷೆ ಮಾಡಿಸುತ್ತಿದ್ದೆ. ಪ್ರತಿ ದಿನ ಸರಬರಾಜಾಗುವ ಬ್ರೆಡ್ಡು, ತರಕಾರಿಗಳು ಅಡಿಗೆ ಮನೆ ತಲುಪುವ ಮೊದಲು ನನ್ನ ಕಚೇರಿಗೆ ತೆಗೆದುಕೊಂಡು ಬರುವ ಪರಿಪಾಟವೇರ್ಪಡಿಸಿದೆ. ಅವುಗಳ ಗುಣಮಟ್ಟ ಮತ್ತು ಪ್ರಮಾಣಗಳನ್ನು ಪರೀಕ್ಷಿಸಿ ಕಳಪೆಯಾದವನ್ನು ತ್ಯಜಿಸುತ್ತಿದ್ದೆ. ನನ್ನ ಈ 'ಉಪಟಳ' ವನ್ನು ಸಹಿಸಲಾಗದ ಗುತ್ತಿಗೆದಾರರು ಒಂದು ದಿನ ನನ್ನ ಮನೆಗೆ ಬಂದರು. ಆಹಾರ ವಸ್ತುಗಳ ಬಗೆಗೆ ನಾನು ತುಂಬಾ ಕಟ್ಟುನಿಟ್ಟಾದ ಮಾನದಂಡಗಳನ್ನು ಅನುಸರಿಸುತ್ತಿರುವುದರಿಂದ ಅವರಿಗೆ ತುಂಬಾ

ನಷ್ಟವಾಗುತ್ತಿದೆಯೆಂದು ಗೊಣಗುತ್ತಾ ಅವರ ಜೇಬಿನಿಂದ ಲಕೋಟೆಯೊಂದನ್ನು ಹೊರತೆಗೆದು ನನಗೆ ನೀಡಲು ಕೈ ಮುಂದು ಮಾಡಿದರು; ಅಲ್ಲದೆ ಪ್ರತಿ ತಿಂಗಳೂ ಹಾಗೆಯೇ ಸ್ವಲ್ಪ ಹಣ ಕೊಡುವುದಾಗಿ ಹೇಳಲಾರಂಭಿಸಿದರು. ಸಿಟ್ಟು ನೆತ್ತಿಗೇರಿದಂತಾದರೂ, ಸಾವರಿಸಿಕೊಂಡು "ನೋಡಿ, ... ಇವರೇ ಕೆಲವು ವರ್ಷಗಳ ಹಿಂದೆ ಇದೇ ಆಸ್ಪತ್ರೆಯಲ್ಲಿ ವೈದ್ಯನಾಗಿ ನಾನು ಕಾರ್ಯ ನಿರ್ವಹಿಸಿದ ರೀತಿ ನೀತಿಗಳು ನಿಮಗೆ ತಿಳಿದಿರಬಹುದೆಂದು ಭಾವಿಸಿದ್ದೆ. ರೋಗಿಗಳು ಇಲ್ಲವೇ ನಿಮ್ಮಂಥವರಿಂದ ಲಂಚ-ರುಷುವತ್ತು ಪಡೆದುಕೊಂಡು ಹಣ ಸಂಪಾದಿಸುವ ಉದ್ದೇಶದಿಂದ ಎರಡನೇ ಸಾರಿ ನಾನಿಲ್ಲಿಗೆ ಬಂದುದಲ್ಲ. ಇನ್ನು ಮುಂದಾದರೂ ಇಂತಹ ಅಭ್ಯಾಸಗಳನ್ನು ಬಿಟ್ಟು, ಕಾಯಿಲೆ ಕಸಾಲೆಗಳಿಂದ ನರಳುತ್ತಾ ಆಸ್ಪತ್ರೆಯಲ್ಲಿ ಮಲಗಿರುವ ದೀನದಲಿತರಿಗೆ ಒಳ್ಳೇ ಗುಣ ಮಟ್ಟದ ಆಹಾರ ಪದಾರ್ಥಗಳನ್ನು ನೀಡಿ ಪುಣ್ಯ ಸಂಪಾದಿಸಿಕೊಳ್ಳಿ. ಮುಂದೆಂದೂ ಹೀಗೆ ವರ್ತಿಸ ಬೇಡಿ" ಎಂದು ಹೇಳಿದೆ. ಸಪ್ಪೆ ಮೋರೆ ಹಾಕಿಕೊಂಡು ಹೊರಟು ಹೋದರು.

ಆನಂತರದ ಕೆಲ ಸಮಯ ಆಹಾರ ವಸ್ತುಗಳ ಗುಣಮಟ್ಟ ಉತ್ತಮವಾಗಿರುತ್ತಿದ್ದವು. ಆದರೆ ಮತ್ತೆ ಕೆಲವೇ ದಿನಗಳಲ್ಲಿ ಪರಿಸ್ಥಿತಿ ಹಿಂದಿನ ಜಾಡನ್ನೇ ಹಿಡಿಯಲಾರಂಭಿಸಿತು. ಆ ಬಗೆಗೆ ಲಿಖಿತ ನೋಟೀಸುಗಳನ್ನು ಜಾರಿ ಮಾಡಿ ಕಠಿಣ ಕ್ರಮಗಳನ್ನು ತೆಗೆದುಕೊಳ್ಳುವ ಬೆದರಿಕೆ ಹಾಕುತ್ತಿದ್ದೆ. ಒಂದು ದಿನ ಅವರು ನನ್ನ ಆಫೀಸಿಗೆ ಬಂದು "ನೋಡಿ ಸಾರ್, ನನಗೆ ತುಂಬಾ ವಯಸ್ಸಾಗಿದೆ; ಆರೋಗ್ಯದ ಸ್ಥಿತಿಯೂ ಸರಿಯಿಲ್ಲ; ಅವನ್ನೆಲ್ಲಾ ಗಮನಿಸದೇ ತಾವು ನನಗೆ ತೊಂದರೆ ಕೊಡುತ್ತಿರುವಿರಿ; ದೇವರ ದಯೆಯಿಂದ ಹೇಗೋ ಇಷ್ಟು ದಿನ ಬದುಕಿ ಬಾಳಿದೆ; ನೀವು ಬಂದ ಮೇಲೆ ನನ್ನ ಕಷ್ಟ ಕಾರ್ಪಣ್ಯಗಳು ಹೆಚ್ಚಾಗುತ್ತಲೇ ಇವೆ", ಎಂದು ಗೋಗರಿಯ ಲಾರಂಭಿಸಿದರು. "ಇರಬಹುದು .... ನೀವಿಷ್ಟು ವಯಸ್ಸಾಗಿ ನರಳುತ್ತಿರುವುದು ದೇವರ ದಯೆ ಎಂದೇಕೆ ಭಾವಿಸುವಿರಿ; ಅವೆಲ್ಲಾ ನೀವು ಮಾಡುತ್ತಿರುವ ಕರ್ಮದ ಪ್ರತಿಫಲವೆಂದೇಕೆ ಭಾವಿಸಬಾರದು? ನಿಮ್ಮ ಹಾಗೆ ಆಸ್ಪತ್ರೆಯಲ್ಲಿ ನರಳುತ್ತಿರುವ ರೋಗಿಗಳ ವಿಷಯದಲ್ಲಿ ಸ್ವಲ್ಪ ಕರುಣೆ ತೋರಿಸುವ ದಾರಿ ಹಿಡಿದರೆ ನಿಮಗೆ ಒಳ್ಳೆಯದಾಗಬಹುದಲ್ಲವೆ?" ಎಂದು ಸಮಾಧಾನ ಹೇಳಿದೆ. ಮತ್ತೆ ಗೊಣಗಿಕೊಳ್ಳುತ್ತಾ ಹೊರಟು ಹೋದರು.

ಒಂದು ಭಾನುವಾರ ಬೆಳಿಗ್ಗೆ ಆಸ್ಪತ್ರೆ ತಲುಪಿದವನು ನೇರವಾಗಿ ಅಡಿಗೆ ಮನೆಗೇ ಹೋದೆ. ಆಸ್ಪತ್ರೆಯ ಅಡಿಗೆಯವಳೊಬ್ಬಳು ಹೊರಗಿನ ೩-೪ ಜನರನ್ನು ಒಳಗಿನ ಕೊಠಡಿಯಲ್ಲಿ ಕೂರಿಸಿಕೊಂಡು ಬ್ರೆಡ್ಡು, ಹಾಲು ಸೇವಿಸುತ್ತಾ ಹರಟೆಯಲ್ಲಿ ಮಗ್ನರಾಗಿರುವುದನ್ನು ನೋಡಿದೆ. ತತ್‌ಕ್ಷಣ ಅಡಿಗೆ ಮನೆಯ ಹೊರಬಾಗಿಲನ್ನು ಮುಚ್ಚಿ ಚಿಲಕ ಹಾಕಿದೆ; ಬೀಗವನ್ನೂ ಹಾಕಿಸಿದೆ. ಪೋಲೀಸ್ ಸ್ಟೇಷನ್‌ಗೆ ಫೋನ್ ಮಾಡಿ ದೂರಿತ್ತೆ. ಒಬ್ಬರು ಧಫೇದಾರ/ಸಬ್ ಇನ್‌ಸ್ಪೆಕ್ಟರ್ ಬಂದರು. ಬೀಗ ತೆಗೆಸಿ ಅವರನ್ನೆಲ್ಲಾ ಪೋಲೀಸರಿಗೆ ಒಪ್ಪಿಸಿದೆ. ಅಲ್ಲೇ ಪಂಚನಾಮೆ ಬರೆಸಿ ಸಾಕ್ಷಿಗಳ ರುಜು ಹಾಕಿಸಿದರು. ಹಾಗೂ ಅವರನ್ನೆಲ್ಲಾ ಪೋಲೀಸ್ ಸ್ಟೇಷನ್‌ಗೆ ಕರೆದುಕೊಂಡು ಹೋದರು. ಬಹುಶಃ ಕೋರ್ಟಿನಲ್ಲಿ ಅವರ ವಿಚಾರಣೆ ಆರಂಭವಾಗಿ ನನಗೂ ಹಾಜರಾಗಲು ಸಮನ್ಸ್ ಬರಬಹುದೆಂಬ ನಿರೀಕ್ಷೆಯಲ್ಲಿದ್ದೆ. ಒಂದು ವರ್ಷದ ನಂತರ ನನಗೊಂದು ಪತ್ರ ಬಂದಿತು. ಆ ಕೇಸನ್ನು ಕೋರ್ಟಿನಲ್ಲಿ ಸಾಬೀತು ಪಡಿಸಲು ಸಾಕಷ್ಟು ಆಧಾರಗಳಿಲ್ಲದಿರುವುದರಿಂದ ನೀಡಿದ 'ಬಿ ಷೀಟ್' (B-Sheet) ಆದಾಗಿತ್ತು! ಮುಂದೇನೂ ಮಾಡಲಾಗದೆ ತೆಪ್ಪಗಾದೆ.

# ಆರೋಗ್ಯ ಸಚಿವರ ಭೇಟಿ

ಚಿಕ್ಕಮಗಳೂರಿಗೆ ಹೋದ ಕೆಲವೇ ತಿಂಗಳುಗಳಲ್ಲಿ ಅಂದಿನ ಆರೋಗ್ಯ ಸಚಿವರ ಭೇಟಿಯ ದಿನ ನಿಗದಿಯಾಯಿತು. ಅಂತಹವರು ಭೇಟಿಯಾಗಿ ಆಗಮಿಸುವ ದಿನ ಊರಿನ ಹೊರವಲಯದಲ್ಲೇ ಅವರನ್ನು ಸ್ವಾಗತಿಸಬೇಕೆಂಬ ಓಬೀರಾಯನ ಕಾಲದ ನಿಯಮವಿದೆಯಂತೆ. ಹಿಂದೆ ಇಂತಹ ಸಂದರ್ಭಗಳಲ್ಲಿ ಆಸ್ಪತ್ರೆಯ ಕೆಲಸ ಕಾರ್ಯಗಳಲ್ಲಿ ನಿರತನಾಗಿರುತ್ತಿದ್ದೆ. ಹೆಚ್ಚೆಂದರೆ ಪ್ರವಾಸಿ ಮಂದಿರದಲ್ಲೋ, ಆಸ್ಪತ್ರೆಯಲ್ಲೋ ಸ್ವಾಗತಿಸುತ್ತಿದ್ದೆ. ಈ ಸಾರಿ ಜಿಲ್ಲಾ ಆಸ್ಪತ್ರೆಯ ಆಡಳಿತ ಚುಕ್ಕಾಣಿ ಹಿಡಿದಿದ್ದರಿಂದ, ಆರೋಗ್ಯ ಇಲಾಖೆಯ ಇತರ ಅಧಿಕಾರಿ ವರ್ಗದವರ ಜೊತೆ ನಿಗದಿತ ದಿನ ಊರ ಹೊರವಲಯದಲ್ಲಿ ನಾನೂ ಹಾಜರಿರಬೇಕಾಯಿತು. ಮಧ್ಯಾಹ್ನ ಎರಡು ಗಂಟೆಯ ಸಮಯದಿಂದಲೇ ಅಧಿಕಾರಿಗಳ ತಂಡ ಹಾರತುರಾಯಿಗಳ ಸಮೇತ ರಸ್ತೆ ಬದಿಯಲ್ಲಿ ಕಾಯುತ್ತಾ ನಿಂತುಕೊಂಡಿತು. ಅಂತೂ ರಾತ್ರಿ ಒಂದೂವರೆ ಗಂಟೆಯ ಹೊತ್ತಿಗೆ ಮಂತ್ರಿಗಳ ವಾಹನಗಳು ಸಾಲು ಸಾಲಾಗಿ ಬರಲಾರಂಭಿಸಿದವು. ಮಂತ್ರಿಗಳನ್ನು (ಕೃತಕ) ಹಸನ್ಮುಖದಿಂದ ಸ್ವಾಗತಿಸಿ ಹಾರ ತುರಾಯಿಗಳನ್ನು ಅರ್ಪಿಸಿದೆವು. ಅವರ ಕುಲಬಾಂಧವ ಪುರಸಭಾ ಸದಸ್ಯರೊಬ್ಬರ ಮನೆಯಲ್ಲಿ ಅಂದಿನ ಭೋಜನ ಏರ್ಪಾಡಾಗಿತ್ತು. ಭೋಜನಕೂಟದಲ್ಲಿ ನಾವೂ ಸಹ ಭಾಗವಹಿಸಿ ಮನೆಗೆ ಹಿಂದಿರುಗುವಲ್ಲಿ ಬೆಳಗಿನಜಾವವೇ ಆಯಿತು. ನಿದ್ದೆ ಹತ್ತುವುದರೊಳಗೇ ಮಂತ್ರಿಗಳ ವಾಹನ ಚಾಲಕ ಪ್ರವಾಸಿ ಮಂದಿರದ ಆಳಿನ ಜೊತೆ ಮನೆಗೆ ಬಂದು ಕರೆಗಂಟೆ ಒತ್ತಿದ. ಮಂತ್ರಿಗಳು ಬೆಳಿಗ್ಗೆ ಹಾಸಿಗೆಯಿಂದ ಏಳುತ್ತಲೇ ಮೂಸಂಬಿ ಹಣ್ಣಿನ ರಸ ಕುಡಿಯುವ ಅಭ್ಯಾಸವಿದೆಯಂತೆ; ಆ ಸಲುವಾಗಿ ಹಣ ಪಡೆಯಲು ಬಂದಿದ್ದು!

ಮರುದಿನ ಆಸ್ಪತ್ರೆಗೆ ಭೇಟಿ ನೀಡುವ ಮೊದಲು ಪ್ರವಾಸಿ ಮಂದಿರದಲ್ಲಿ ಸ್ಥಳೀಯ ವಿಧಾನ ಸಭಾಸದಸ್ಯರು, ಸಂಸದರು ಹಾಗೂ ಮತ್ತಿತರ ಮುಖಂಡರೊಡನೆ ವಿಚಾರ ವಿನಿಮಯ ಕಾರ್ಯಕ್ರಮ. ನಾನೂ ಅದರಲ್ಲಿ ಭಾಗವಹಿಸಲು ಅವಕಾಶ ಕಲ್ಪಿಸಿದ್ದರು. ವಿರೋಧ ಪಕ್ಷದ ಧುರೀಣರೊಬ್ಬರು ಆಸ್ಪತ್ರೆಯ ಮೂಳೆ ತಜ್ಞವೈದ್ಯರೊಬ್ಬರ ನಡವಳಿಕೆ ಬಗೆಗೆ ದೂರಲಾರಂಭಿಸಿದರು. ಆಸ್ಪತ್ರೆಯಲ್ಲಿ ಅವರಿಂದ ಚಿಕಿತ್ಸೆ ಪಡೆಯಲು ಹೋದವರನ್ನು ಸರಿಯಾಗಿ ಪರೀಕ್ಷಿಸದೆ, ಅವರು ಉಳಿದುಕೊಂಡಿದ್ದ ಹೋಟೆಲಿಗೆ ಬರುವಂತೆ ಹೇಳುತ್ತಾರೆಂತಲೂ, ಆಸ್ಪತ್ರೆಯ ಜವಾನನೊಬ್ಬ ಅವರ ಏಜೆಂಟ್‌ನಾಗಿ ವರ್ತಿಸುತ್ತಿರುವುದಾಗಿ ದೂರಿದರು. ಆ ವಿಷಯವನ್ನು ಡಿ.ಎಂ.ಓ. ಅವರ ಗಮನಕ್ಕೆ ಅವರೆಂದಾದರೂ ತಂದಿದ್ದರೇ ಎಂದು ಸಚಿವರು ವಿಚಾರಿಸಿದರು. ಒಂದೆರಡು ಸಾರಿ ಅವರಿಗೆ ದೂರಿತ್ತರೂ ಅವರೇನೂ ಮಾಡಿಲ್ಲವೆಂದವರು ಉತ್ತರಿಸಿದರು. ಆ ದಿಸೆಯಲ್ಲಿ ನಾನೇನು ಕ್ರಮ ಜರುಗಿಸಿದ್ದೆನೆಂಬುದರ ಬಗೆಗೆ ಸಚಿವರು ನನ್ನನ್ನು ಪ್ರಶ್ನಿಸಿದರು. ಅಂತಹ ವಿಷಯವನ್ನು ಬರೆದುಕೊಟ್ಟರೆ ಕ್ರಮ ಜರುಗಿಸುವುದಾಗಿ ಹೇಳಿದ್ದೆ. ಆದರೆ ಅವರು ಬರೆದು ಕೊಡಲಿಲ್ಲವೆಂದು ಉತ್ತರಿಸಿದೆ.

ಮುಂದೆ ಆಸ್ಪತ್ರೆಗೆ ತೆರಳಿ ವಿವಿಧ ಭಾಗಗಳಿಗೆ ಭೇಟಿ ನೀಡಿದರು. ಪ್ರವಾಸಿ ಮಂದಿರದಲ್ಲಿ ದೂರಿದ ವೈದ್ಯರು ಮತ್ತು ಜವಾನನ ತೋರಿಸುವಂತೆ ಮುಖಂಡರಿಗೆ ಹೇಳಿದರು. ಜವಾನ ನಾಪತ್ತೆಯಾಗಿದ್ದ! ದೋಷಾರೋಪಣೆಗೊಳಗಾಗಿದ್ದ ವೈದ್ಯರನ್ನು ಪರೋಕ್ಷವಾಗಿ ತೋರಿಸಲಾಯಿತು. ಅವರೊಡನೆ ಮಾತಾಡಿ, ಪೂರ್ವಾಪರಗಳ ಬಗೆಗೆ ವಿಚಾರಿಸಿದರು. ಪಕ್ಕದ ಜಿಲ್ಲೆಯ ಶಾಸಕರೊಬ್ಬರ ಪುತ್ರ ಅವರೆಂದಾಗ ಅವರ ವಿಚಾರಣೆ ಅಷ್ಟಕ್ಕೆ ಸ್ಥಗಿತವಾಯಿತು. ಕೆಲ

ಸಮಯದ ನಂತರ ವೈದ್ಯ ಸಮೂಹದವರನ್ನು ಉದ್ದೇಶಿಸಿ, ರೋಗಿಗಳಿಗೆ ಪ್ರಾಮಾಣಿಕ ಸೇವೆ ನೀಡಬೇಕೆಂದು ಹಿತನುಡಿಗಳನ್ನಾಡಿದರೂ ಆ ವೈದ್ಯರ ವಿಷಯ ಪ್ರಸ್ತಾಪವಾಗಲೇ ಇಲ್ಲ!

ಸರ್ಕಾರದ ಮಂತ್ರಿ ಮಹೋದಯರು, ಉನ್ನತ ಅಧಿಕಾರಿಗಳು ಪ್ರವಾಸ ಬಂದಾಗ ಅವರ ಆತಿಥ್ಯದ ಖರ್ಚುವೆಚ್ಚಗಳನ್ನು ಸ್ಥಳೀಯ ಇಲಾಖಾ ಮುಖ್ಯಸ್ಥರು ಅಥವಾ ಅವರ ಕಚೇರಿಯವರು ಭರಿಸಬೇಕಾದ ಪರಿಪಾಟವಿದೆ. ಅಂತಹ ಹುದ್ದೆಗಳಲ್ಲಿ ನಾನಿದ್ದಾಗ ಆ ರೀತಿಯ ಪ್ರಕರಣಗಳು ಅಷ್ಟಾಗಿ ಒದಗಿ ಬರದಿದ್ದುದು ನನ್ನ ಸುದೈವವೇ ಸರಿ. ಮುಂದೊಂದು ಸಾರಿ ಚಿಕ್ಕಮಗಳೂರಿನಲ್ಲಿ ಬೃಹತ್ ಗಾತ್ರದ ಸಮೂಹಕ್ಕೆ ಆತಿಥ್ಯ ಏರ್ಪಡಿಸಬೇಕಾದ ಪ್ರಮೇಯ ನನ್ನೆದುರಾದರೂ ಅದನ್ನು ದಿಟ್ಟ ನಿಲುವಿನಿಂದ ನಿಭಾಯಿಸಿದ್ದರ ಪ್ರಸ್ತಾಪ ಮುಂದೆ ಬರಲಿದೆ. ಇತರ ಇಲಾಖೆಯವರು ಈ ದಿಸೆಯಲ್ಲಿ ಅನುಭವಿಸುತ್ತಿರುವ ಬವಣೆಗಳನ್ನು ನೋಡಿದಾಗ ಕನಿಕರ ಉಂಟಾಗುತ್ತದೆ. ಬಹುಶಃ ಅದರಿಂದಲೇ ಲಂಚ ರುಷುವತ್ತುಗಳನ್ನು ಪಡೆದು ಭರಿಸಿದ ಖರ್ಚು ವೆಚ್ಚಗಳನ್ನು ಸರಿದೂಗಿಸಿಕೊಳ್ಳುತ್ತಿದ್ದರೆನಿಸುತ್ತದೆ. ಅಂತಹ ಸಂದರ್ಭಗಳನ್ನು ನಿಭಾಯಿಸಲು ಪೋಲೀಸ್ ಇಲಾಖೆಯವರಿಗೆ ಅಧಿಕೃತವಾಗಿಯೇ "ಆತಿಥ್ಯದ ಭತ್ಯ" (Sumptuary allowance) ಎಂಬ ಪ್ರತ್ಯೇಕ ಮೊಬಲಗನ್ನು ಮಂಜೂರು ಮಾಡಿರುತ್ತಾರಂತೆ.

## ಹೊಸ ಕಟ್ಟಡದ ಬೃಹತ್ ಯೋಜನೆ

ಚಿಕ್ಕಮಗಳೂರಿನ ಜಿಲ್ಲಾ ಆಸ್ಪತ್ರೆಯ ವಿವಿಧ ಕಟ್ಟಡ/ವಿಭಾಗಗಳು ಬೇರೆ ಬೇರೆ ಕಡೆ ಹರಿದು ಹಂಚಿ ಹೋಗಿದ್ದರ ವಿವರಣೆಗಳನ್ನು ಈಗಾಗಲೇ ಮಾಡಲಾಗಿದೆ (ಪುಟ ೨೧೩) ಈ ಸಾರಿ ನಾನು ಮತ್ತೆ ಅಲ್ಲಿಗೆ ಬರುವಷ್ಟರಲ್ಲಿ ಮತ್ತಷ್ಟು ಸಮಸ್ಯೆಗಳು ಸೃಷ್ಟಿಯಾಗಿದ್ದವು. ಆಸ್ಪತ್ರೆಯ ಪ್ರಮುಖ ಕಟ್ಟಡದ ಬಹುದೂರದ ಹಿಂಭಾಗದಲ್ಲಿ (ನೆಹರು ಕ್ರೀಡಾಂಗಣಕ್ಕೆ ಹೊಂದಿಕೊಂಡಂತೆ) ಮೂರು ಮಹಡಿಗಳ ಕಟ್ಟಡವೊಂದು ನಿರ್ಮಾಣವಾಗಿತ್ತು. ದಾದಿಯರ ತರಬೇತಿಯ ಸಲುವಾಗಿ ನಿರ್ಮಾಣವಾದ ಅದರ ಮೇಲುಗಡೆಯ ಎರಡು ಮಹಡಿಗಳನ್ನು ಅವರ ವಸತಿ ಹಾಗೂ ತರಬೇತಿಗಾಗಿ ಬಳಸಿಕೊಂಡು ನೆಲ ಅಂತಸ್ತನ್ನು (ಹಂಗಾಮಿಯಾಗಿ) ಆಸ್ಪತ್ರೆಯ ಹೊರ ರೋಗಿಗಳ ವಿಭಾಗವನ್ನಾಗಿ ಪರಿವರ್ತಿಸಲಾಗಿತ್ತು. ಆಸ್ಪತ್ರೆಯ ವಾರ್ಡುಗಳು ಹಾಗೂ ಮತ್ತಿತರ ವಿಭಾಗಗಳೆಲ್ಲಾ ಪ್ರಧಾನ ಕಟ್ಟಡದಲ್ಲೇ ಮುಂದುವರಿದಿದ್ದು ಕಾರ್ಯ ನಿರ್ವಹಣೆ ಕಷ್ಟಕರವಾಗಿತ್ತು. ಸಿಬ್ಬಂದಿ ವರ್ಗದವರ ಬಹುಪಾಲು ಸಮಯ ಅತ್ತಿಂದಿತ್ತ ತಿರುಗಾಡುತ್ತಿರುವುದರಲ್ಲೇ ಕಳೆಯುವಂತಾಗಿತ್ತು. ಪ್ರಸ್ತುತ ಹೊರರೋಗಿಗಳ ವಿಭಾಗವೂ ಕಿಷ್ಕಿಂದೆಯಂತಾಗಿ ಸುಸೂತ್ರವಾಗಿ ಕೆಲಸ ಕಾರ್ಯಗಳು ಜರುಗುವಂತಿರಲಿಲ್ಲ. ಅದರಿಂದ ಪ್ರಧಾನ ಕಟ್ಟಡದ ಹಿಂಭಾಗದಲ್ಲಿ ಅದರ ನಿಕಟ ಸಂಪರ್ಕ ಹೊಂದಿರುವಂತೆ ಹೊರರೋಗಿಗಳ ವಿಭಾಗವೇ ಅಲ್ಲದೆ ಇನ್ನೂ ಕೆಲವು ವಿಭಾಗಗಳಿಗೆ ಅನುಕೂಲವಾಗುವಂತೆ ಒಂದೆರಡು ಮಹಡಿಗಳಿರುವ ಕಟ್ಟಡ ನಿರ್ಮಾಣ ಮಾಡುವ ಬಗೆಗೆ ನನ್ನ ಯೋಚನಾ ಲಹರಿ ರೂಪುಗೊಳ್ಳುತ್ತಿತ್ತು. ಅಂತಹ ಪ್ರಸ್ತಾವಗಳನ್ನು ಕೆಲವು ಸ್ಥಳೀಯ ಜನಪ್ರತಿನಿಧಿಗಳೊಡನೆ ಚರ್ಚಿಸುತ್ತಲೂ ಇದ್ದೆ. ಆಗಿನ ಲೋಕ ಸಭಾ ಸದಸ್ಯರಾಗಿದ್ದ ಡಿ.ಎಂ. ಪುಟ್ಟೇ ಗೌಡರಿಗೆ ನನ್ನ ಪ್ರಸ್ತಾವಗಳ ಅವಶ್ಯಕತೆಗಳು ಮನದಟ್ಟಾಗಿರಬೇಕು. ಆ ದಿಸೆಯಲ್ಲಿ ಗಂಭೀರವಾಗಿ ಯೋಚಿಸಿ ಚಿಕ್ಕಮಗಳೂರಿನಲ್ಲಿ ಒಂದು ಬೃಹತ್ತಾದ, ಸುಸಜ್ಜಿತ ಆಸ್ಪತ್ರೆಯನ್ನು ನಿರ್ಮಿಸುವ ಯೋಜನೆ ಮೂಡಿ ಬಂದಿತು. ದೇಶದಲ್ಲೇ ಪ್ರಮುಖ ಕಾಫಿ ಬೆಳೆಯುವ ತಾಣ ಅದಾಗಿದ್ದು ಅಂತಹ ಯೋಜನೆಗೆ ಸಂಪನ್ಮೂಲಗಳ ಕೊರತೆ ಇರಲಿಲ್ಲ; ಅಂತಹ ಕಾರ್ಯಕ್ಕೆ

ಉದಾರವಾಗಿ ದೇಣಿಗೆ ನೀಡುವ ದಾನಶೀಲರೂ ಅಲ್ಲಿದ್ದರು. ಅವೆಲ್ಲಕ್ಕಿಂತ ಮಿಗಿಲಾಗಿ ಆಗಿನ ಪ್ರಧಾನ ಮಂತ್ರಿ ಶ್ರೀಮತಿ ಇಂದಿರಾಗಾಂಧಿಯವರಿಗೆ ರಾಜಕೀಯ ಪುನರುಜ್ಜೀವನ ನೀಡಿದ ಕ್ಷೇತ್ರವೂ ಅದಾಗಿದ್ದು, ಕೇಂದ್ರ ಹಾಗೂ ಸ್ಥಳೀಯ ಸರ್ಕಾರಗಳ ಹೆಚ್ಚಿನ ನೆರವು ಸಹಾ ದೊರಕಿಸಿಕೊಳ್ಳಬಹುದಾಗಿತ್ತು.

ಮೊದಲಿಗೆ ಲೋಕಸಭಾ ಸದಸ್ಯರು ಜಿಲ್ಲೆಯ ಕಾಫಿ ಪ್ಲಾಂಟರುಗಳು, ದಾನಿಗಳು, ಕಾಫೀ ಬೋರ್ಡ್ ಮುಂತಾದವರೊಡನೆ ಸಮಾಲೋಚನಾ ಸಭೆಗಳನ್ನು ನಡೆಸಿದರು. ಆ ದಿಸೆಯಲ್ಲಿ ಹಲವು ದಾನಿಗಳು ಸಾಕಷ್ಟು ಮೊತ್ತದ ದೇಣಿಗೆ ನೀಡಲು ಮುಂದಾದರು. ಕಾಫೀ ಬೋರ್ಡ್‌ನವರು ಕಾಫಿ ಬೆಳೆಗಾರರು ನೀಡುವ ಕಾಫಿ ಬೀಜದ ಪ್ರಮಾಣದಲ್ಲಿ ಒಂದು ನಿಗದಿತ ಪ್ರಮಾಣದಲ್ಲಿ ಪ್ರತಿಯೊಬ್ಬರಿಂದಲೂ ಹಣವನ್ನು ಶೇಖರಿಸಿ ಆಸ್ಪತ್ರೆಯ ನಿಧಿಗೆ ಸಲ್ಲಿಸಬಹುದೆಂಬ ಒಮ್ಮತಾಭಿಪ್ರಾಯವೂ ಮೂಡಿ ಬಂದಿತು. ಕೇಂದ್ರ ಹಾಗೂ ಸ್ಥಳೀಯ ಸರ್ಕಾರಗಳು ಯೋಜನೆಯಲ್ಲಿ ತಮ್ಮ ತಮ್ಮ ಜವಾಬ್ದಾರಿಗಳನ್ನು ನಿರ್ವಹಿಸುವ ಭರವಸೆಗಳನ್ನು ವ್ಯಕ್ತಪಡಿಸಿದರು.

ಕಟ್ಟಡ ನಿರ್ಮಾಣದ ಯೋಜನೆಯನ್ನು ದೆಹಲಿಯ ಹೆಸರಾಂತ ವಾಸ್ತು ಶಿಲ್ಪಿ ಸಂಸ್ಥೆಯವರಿಂದ ಸಂಸದರೇ ತಯಾರು ಮಾಡಿಸಿದರು. ಸುಮಾರು ಎರಡು ಕೋಟಿ, ಹದಿನೈದು ಲಕ್ಷ ರೂಪಾಯಿಗಳ ಏಳು ಮಹಡಿಗಳ ಬೃಹತ್ ಕಟ್ಟಡದ ರೂಪರೇಷೆಗಳ ನೀಲನಕ್ಷೆ ತಯಾರಾಯಿತು.

ಇಷ್ಟೆಲ್ಲಾ ನಿರ್ಧಾರಗಳಾದನಂತರ ಪ್ರಧಾನ ಮಂತ್ರಿ ಶ್ರೀಮತಿ ಇಂದಿರಾಗಾಂಧಿಯವರು ಆಸ್ಪತ್ರೆ ಕಟ್ಟಡದ ಶಂಕುಸ್ಥಾಪನೆ ನಡೆಸುವ ದಿನಾಂಕವೂ ನಿಗದಿಯಾಯಿತು. ಮುಂದೆ ಆ ಬಗೆಗೆ ಹಲವು ಸಮಿತಿ, ಉಪಸಮಿತಿಗಳು ರಚನೆಯಾದವು. ಪ್ರಧಾನ ಮಂತ್ರಿಯವರ ಚಿಕ್ಕಮಗಳೂರು ಭೇಟಿ ಆಸ್ಪತ್ರೆ ಕಟ್ಟಡ ನಿರ್ಮಾಣ(ಚಿಕ್ಕಮಗಳೂರು ನಗರಕ್ಕೆ ಕುಡಿಯುವ ನೀರು ಸರಬರಾಜು ಮಾಡುವ ಯೋಜನೆಯೂ ಸೇರಿತ್ತು)ವಾದ್ದರಿಂದ ನಾನು ಅಂತಹ ಸಭೆಗಳಲ್ಲಿ ಭಾಗವಹಿಸಬೇಕಾಗುತ್ತಿತ್ತು. ಜಿಲ್ಲಾ ಉಸ್ತುವಾರಿ ಮಂತ್ರಿಗಳಾದ ಬೇಗಾನೆ ರಾಮಯ್ಯನವರ ಸಮ್ಮುಖದಲ್ಲಿ ಬೆಂಗಳೂರಿನಲ್ಲಿ ಜರುಗಿದ ಸಭೆಯೊಂದರಲ್ಲಿ ಪ್ರಧಾನ ಮಂತ್ರಿಗಳ ಭೇಟಿಯ ಸಮಯದಲ್ಲಿ ವಿವಿಧ ಇಲಾಖೆಯವರು ನಿರ್ವಹಿಸಬೇಕಾದ ಜವಾಬ್ದಾರಿಗಳ ಬಗೆಗೆ ಚರ್ಚೆಗಳು ನಡೆದವು. ಬಹುಪಾಲು ಗುರುತರ ಜವಾಬ್ದಾರಿಗಳು ಪೋಲೀಸ್, ಲೋಕೋಪಯೋಗಿ, ನೀರಾವರಿ ಹಾಗೂ ಜಿಲ್ಲಾಡಳಿತ ಇಲಾಖೆಗಳದ್ದಾಯಿತು. ಪ್ರಧಾನ ಮಂತ್ರಿಗಳು ಅಲ್ಲಿಗೆ ಬಂದು ಒಂದು ರಾತ್ರಿ ತಂಗಿದ್ದು ಮರುದಿನ ನಿರ್ಗಮಿಸುವವರೆಗಿನ ವೈದ್ಯಕೀಯ ನೆರವಿನ, ಅದರಲ್ಲೂ ವೈಯಕ್ತಿಕವಾಗಿ ಪ್ರಧಾನ ಮಂತ್ರಿಗಳ ಆರೋಗ್ಯಕ್ಕೆ ಸಂಬಂಧಿಸಿದ ಏರ್ಪಾಡುಗಳು ಆಸ್ಪತ್ರೆಯವರದ್ದಾಯಿತು.

ಸಭೆ ಮುಗಿಯುವ ಹಂತದಲ್ಲಿ ನೀರಾವರಿ ಇಲಾಖೆಯ ಪ್ರತಿನಿಧಿಯೊಬ್ಬರು ಪ್ರಧಾನ ಮಂತ್ರಿಗಳ ಭೇಟಿಯು ಪ್ರಮುಖವಾಗಿ ಆಸ್ಪತ್ರೆ ಶಂಕುಸ್ಥಾಪನೆಗೆ ಸಂಬಂಧಪಟ್ಟಿರುವುದು; ಅವರ ಭೇಟಿಗೆ ಸಂಬಂಧಿಸಿದ ಪ್ರಮುಖ ಜವಾಬ್ದಾರಿಯ ಕಾರ್ಯಕ್ರಮಗಳನ್ನು ವಿವಿಧ ಇಲಾಖೆಯವರದ್ದಾಗಿದ್ದರೂ ಆರೋಗ್ಯ ಇಲಾಖೆ (ಆಸ್ಪತ್ರೆ)ಯವರ ಪಾತ್ರ ಅಷ್ಟೇನೂ ಗಣನೀಯವಾದುದಲ್ಲ; ಆದರಿಂದ ಆ ದಿನ ಚಿಕ್ಕಮಗಳೂರಿಗೆ ಕಾರ್ಯಾರ್ಥವಾಗಿ ಬರುವ ಅಧಿಕಾರಿ ವರ್ಗದವರ ಆತಿಥ್ಯದ ಜವಾಬ್ದಾರಿಯನ್ನು ಅವರಿಗೆ ಒಪ್ಪಿಸುವುದು ಸೂಕ್ತ ಎಂಬ ವಾದವನ್ನು ಮುಂದಿಟ್ಟರು. ಅಂತಹ ಸಂಪನ್ಮೂಲಗಳು ಆಸ್ಪತ್ರೆಯವರಿಗಿರುವುದಿಲ್ಲವೆಂತಲೂ, ಆರೋಗ್ಯ ಇಲಾಖೆಯವರು

ಆ ದಿಸೆಯಲ್ಲಿ ಸಹಾಯ ಮಾಡಲು ಮುಂದಾದರೆ ಮಾತ್ರ ಅಂತಹ ಪ್ರಸ್ತಾವವನ್ನು ಪರಿಗಣಿಸಬಹುದೆಂದು ಉತ್ತರಿಸಿ ಅವರ ಸಲಹೆಯನ್ನು ನಿರಾಕರಿಸಿದೆ. ಸಭೆಯಲ್ಲಿ ಹಾಜರಿದ್ದ ಆರೋಗ್ಯ ಇಲಾಖೆಯ ನಿರ್ದೇಶಕರು ಅಂತಹ ಹಣಕಾಸಿನ ವಿಷಯ ತಮಗೆ ಅಷ್ಟಾಗಿ ತಿಳಿದಿಲ್ಲವೆಂತಲೂ, ಇಲಾಖೆಯ ಹಣಕಾಸಿನ ಸಲಹೆಗಾರರ ಅಭಿಪ್ರಾಯ ಪಡೆದುಕೊಂಡು ಮುಂದಿನ ನಿರ್ಧಾರ ತಿಳಿಸುವುದಾಗಿ ಹೇಳಿದರು. ಅಂತಹ ವಿಚಾರಗಳ ಬಗೆಗೆ ನನಗಿದ್ದ ಸಾಮಾನ್ಯ ಅರಿವಿನಂತೆ ಅದು ಸಾಧ್ಯವೇ ಇಲ್ಲವೆಂದು ಹೇಳಿ ಸಭೆ ಮುಗಿದ ನಂತರ ಹೊರಬಂದೆ.

ನಿರ್ದೇಶಕರು ಅವರ ಜೊತೆಯಲ್ಲೇ ಇಲಾಖೆಯ ಕಚೇರಿಗೆ ನನ್ನನ್ನು ಕರೆದುಕೊಂಡು ಹೋದರು. ಹಣಕಾಸಿನ ಸಲಹೆಗಾರರನ್ನು ಅಲ್ಲಿಗೇ ಕರೆಸಿ ಸಭೆಯಲ್ಲಾದ ಪ್ರಸ್ತಾವದ ಬಗೆಗೆ ಅವರ ಅಭಿಪ್ರಾಯವನ್ನು ಕೇಳಿದರು. ಆತಿಥ್ಯ ನೀಡುವಂಥ ಅನಧಿಕೃತ ಖರ್ಚು ವೆಚ್ಚಗಳಿಗೆ ಸರ್ಕಾರದ ಹಣಕಾಸನ್ನು ಬಳಸಿಕೊಳ್ಳುವುದಕ್ಕೆ ಕಾನೂನು ಪ್ರಕಾರ ಅವಕಾಶವಿಲ್ಲವೆಂದು ಅವರ ಸ್ಪಷ್ಟ ಅಭಿಪ್ರಾಯ ನೀಡಿದರು. ನಾನೂ ಸಹ ಅಂತಹ ಜವಾಬ್ದಾರಿಯನ್ನು ವಹಿಸಿಕೊಳ್ಳಲು ಸಾಧ್ಯವಿಲ್ಲವೆಂದು ಹೇಳಿ ಹೊರಬಂದೆ.

ಚಿಕ್ಕಮಗಳೂರಿಗೆ ಹಿಂದಿರುಗುವಷ್ಟರಲ್ಲಿ ವಿಷಯ ಸ್ವಲ್ಪ ಮಟ್ಟಿಗೆ ಪರಿಹಾರವಾಗುವ ಸೂಚನೆಗಳಿದ್ದವು. ಪ್ರಧಾನ ಮಂತ್ರಿಗಳ ಭೇಟಿಯ ಸಮಯದಲ್ಲಿ ಹಲವು ರಾಜಕೀಯ ಮುಖಂಡರು ಅಲ್ಲಿಗೆ ಬರುತ್ತಿದ್ದು ಅವರೆಲ್ಲರ ಆತಿಥ್ಯದ ಏರ್ಪಾಡುಗಳನ್ನು ಅವರ ಪಕ್ಷದ ಹತೋಟಿಯಲ್ಲಿದ್ದ ಪುರಸಭೆಯವರು ವಹಿಸಿಕೊಳ್ಳಬೇಕೆಂದು ನಿರ್ಧಾರವಾಯಿತಂತೆ. ಹಾಗೂ ಆ ಸಮಯದಲ್ಲಿ ಅಲ್ಲಿಗೆ ಬರುವ ಸರ್ಕಾರಿ ಅಧಿಕಾರಿ ವರ್ಗದವರ ಅತಿಥ್ಯವನ್ನೂ ಅವರೇ ನಿರ್ವಹಿಸುವ ತೀರ್ಮಾನವೂ ಆಯಿತಂತೆ. ಅದರಿಂದಾಗಿ ಸ್ವಲ್ಪ ಸಮಯ ನಾನು ನಿರಾಳವಾಗಿರುವಂತಾಯಿತು. ಆದರೆ ಕಾರ್ಯಕ್ರಮಗಳೆಲ್ಲಾ ಮುಗಿದ ನಂತರ ಪುರಸಭೆಯ ಮುಖ್ಯಾಧಿಕಾರಿಗಳು ಅತಿಥ್ಯದ ಬಗೆಗೆ ಅವರು ಖರ್ಚು ಮಾಡಿದ್ದಕ್ಕೆ ಆಸ್ಪತ್ರೆಯವರ ಪಾಲು ನೀಡಬೇಕೆಂದು ಆಗಾಗ್ಗೆ ಟೆಲಿಫೋನು ಮಾಡಲಾರಂಭಿಸಿದರು. ನಾನೆಂದೂ ಅಂತಹ ಪ್ರಸ್ತಾವಕ್ಕೆ ಸಮ್ಮತಿಸಿರಲೇ ಇಲ್ಲವೆಂದು ಹೇಳಿ ಅವರ ಒತ್ತಾಯಗಳನ್ನು ನಿರಾಕರಿಸಿದೆ!

ಪ್ರಧಾನ ಮಂತ್ರಿಗಳ ಭೇಟಿಯ ಸಮಯಕ್ಕೆ ಅವಶ್ಯಕವೆನಿಸಿದ ಎಲ್ಲಾ ವೈದ್ಯಕೀಯ ಏರ್ಪಾಡುಗಳನ್ನು ಮಾಡುವುದರಲ್ಲಿ ತೊಡಗಿಸಿಕೊಂಡೆ. ಆ ಬಗೆಗೆ ಪೋಲೀಸ್ ಇಲಾಖೆಯವರಿಂದ ಗುಪ್ತ ಸಮಾಚಾರಗಳು ಪ್ರತಿ ದಿನವೂ ಬರುತ್ತಲೇ ಇದ್ದವು. ಅಗತ್ಯವೆನಿಸಿದ ಔಷಧ ಸಾಮಗ್ರಿಗಳು ಜಮಾವಣೆಯಾದವು. ಆಸ್ಪತ್ರೆಯಲ್ಲೂ ತುರ್ತು ಪರಿಸ್ಥಿತಿಗಳನ್ನು ನಿಭಾಯಿಸಲು ಏರ್ಪಾಡುಗಳಾದವು. ಪಕ್ಕದ ಜಿಲ್ಲೆಗಳಿಂದ ಮೂರ್ನಾಲ್ಕು ಆಂಬುಲೆನ್ಸ್ ವಾಹನಗಳನ್ನು ತರಿಸಿಕೊಂಡು, ಸುಸ್ಥಿತಿಯಲ್ಲಿ ಸಜ್ಜುಗೊಳಿಸಿ, ಅವುಗಳ ಟ್ಯಾಂಕು ತುಂಬುವಷ್ಟು ಪೆಟ್ರೋಲ್ ಭರ್ತಿಮಾಡಲಾಯಿತು. ವೈದ್ಯರ ತಂಡಗಳು ಹಾಗೂ ಆಂಬುಲೆನ್ಸ್‌ಗಳನ್ನು ನೆಲೆಗೊಳಿಸುವ ತಾಣಗಳನ್ನು ಸಹ ನಿರ್ಧರಿಸಲಾಯಿತು.

ಚಿಕ್ಕಮಗಳೂರಿನ ಕಾಲೇಜು ಮೈದಾನದ ಹೆಲಿಪ್ಯಾಡಿನಲ್ಲಿ ಬಂದಿಳಿದ ಪ್ರಧಾನ ಮಂತ್ರಿಗಳನ್ನು ಕಟ್ಟುನಿಟ್ಟಾದ ಬಂದೋಬಸ್ತಿನಲ್ಲಿ ಮೆರವಣಿಗೆಯಲ್ಲಿ ಪ್ರವಾಸಿ ಮಂದಿರಕ್ಕೆ ಕರೆತರಲಾಯಿತು. ಕೆಲ ಸಮಯದ ನಂತರ ನೆಹರೂ ಕ್ರೀಡಾಂಗಣದ ಮೈದಾನದಲ್ಲಿ ಅಪಾರ ಜನಸ್ತೋಮವನ್ನುದ್ದೇಶಿಸಿ ಮಾತಾಡಿದರು. ಸಾಮಾನ್ಯವಾಗಿ ತಾವು ಶಂಕುಸ್ಥಾಪನಾ ಸಮಾರಂಭ ಗಳಲ್ಲಿ ಭಾಗವಹಿಸುವುದಿಲ್ಲವೆಂದೂ, ಆದರೆ ಚಿಕ್ಕಮಗಳೂರಿನ ಜನರ ಬಗೆಗೆ ತಮಗಿರುವ ಆದರದ

ಸಂಕೇತವಾಗಿ ತಾವು ಶಂಕುಸ್ಥಾಪನೆ ಮಾಡುತ್ತಿರುವುದಾಗಿಯೂ ಹೇಳಿದರು; ಹಾಗೂ ಅತ್ಯಂತ ಶೀಘ್ರಗತಿಯಲ್ಲಿ ಹೊಸ ಆಸ್ಪತ್ರೆ ಕಾರ್ಯಾರಂಭವಾಗುತ್ತದೆಂದು ಹಾರೈಸಿದರು.

ಪ್ರಧಾನ ಮಂತ್ರಿಯವರ ಭೇಟಿ ತುಂಬಾ ಅದ್ದೂರಿ ಹಾಗೂ ಕಟ್ಟುನಿಟ್ಟಾದ ಭದ್ರತಾ ಏರ್ಪಾಡುಗಳಿಂದಲೇ ಜರುಗಿತು. ಆನಂತರದ ದಿನಗಳಲ್ಲಿ ಉನ್ನತ ಮಟ್ಟದ ಅಧಿಕಾರಿಗಳ ಸಭೆ ಸಮಾರಂಭಗಳು ಜರುಗಿದವು. ಕಟ್ಟಡ ನಿರ್ಮಾಣವಾಗುವ ಸ್ಥಳ ಪರಿಶೀಲನೆ, ಮಣ್ಣಿನ ಗುಣ ಮಟ್ಟ ಮುಂತಾದವುಗಳ ಪರೀಕ್ಷೆಗಳಾದವು. ಬರು ಬರುತ್ತಾ ಅವುಗಳ ಕಾರ್ಯಗತಿ ನಿಧಾನವಾಗ ತೊಡಗಿತು. ಆ ಬಗೆಗೆ ಹಲವು ಊಹಾಪೋಹಗಳೂ ಎದ್ದವು. ಅಂತಹ ಬೃಹತ್ ಆಸ್ಪತ್ರೆ ಅಲ್ಲಿ ಪ್ರಾರಂಭವಾದರೆ ಹಿಂದಿನ ದಾನಿಗಳ ಹೆಸರಿನ ಪ್ರಾಮುಖ್ಯತೆಗೆ ಧಕ್ಕೆ ಬರುತ್ತದೆಂಬ ಅಪಸ್ವರ ಕೆಲವು ಮೂಲಗಳಲ್ಲುಂಟಾದವಂತೆ; ಕಾಫೀ ಬೋರ್ಡ್ ಮುಖಾಂತರ ಬೆಳೆಗಾರರಿಂದ ಹಣ ಪಡೆಯುವ ವಿಧಾನದ ಬಗೆಗೂ ಕೆಲವು ಕಾನೂನಿನ ತೊಡಕುಗಳು ಉದ್ಭವವಾಗಬಹುದೆಂಬ ಊಹಾಪೋಹಗಳೂ ತಲೆಎತ್ತಿದವಂತೆ. ಎಲ್ಲಕ್ಕಿಂತ ಮಿಗಿಲಾಗಿ ರಾಜ್ಯದಲ್ಲಿ ಆ ತನಕ ಅಸ್ತಿತ್ವದಲ್ಲಿದ್ದ ಕಾಂಗ್ರೆಸ್ ಸರ್ಕಾರದ ಪತನವಾಗಿ ಜನತಾ ಪಕ್ಷದ ಸರ್ಕಾರ ಆಡಳಿತದ ಚುಕ್ಕಾಣಿ ಹಿಡಿಯು ವಂತಾಯಿತು; ಆಸ್ಪತ್ರೆ ನಿರ್ಮಾಣದ ವಿಚಾರದಲ್ಲಿ ಹಿಂದಿನವರಿಗಿದ್ದ ಹುಮ್ಮಸ್ಸು ಅವರಿಗಿದ್ದಿರ ಲಾರದು. ಮಹತ್ವಾಕಾಂಕ್ಷೆಯಿಂದ ಆರಂಭವಾದ ಯೋಜನೆಯೊಂದು ಕಾರ್ಯಗತವಾಗ ದಿದ್ದುದು ಬೇಸರವಾಯಿತು. ಅದರಲ್ಲಿ ಸಕ್ರಿಯವಾಗಿ ಭಾಗವಹಿಸಿದ ನನಗೆ ನಿವೃತ್ತನಾಗು ವುದರೊಳಗೆ ಕಾರ್ಯಾರಂಭವಾಗಬಹುದೆಂಬ ಆಶೆ ನಿರಾಶೆಯಾಯಿತು!

## ನಿರ್ದೇಶಕರ ಬೋಳೆತನ!

ಆ ಸಮಯದಲ್ಲಿ ಇಲಾಖಾ ನಿರ್ದೇಶಕರಾಗಿದ್ದವರು ಪ್ರಧಾನ ಮಂತ್ರಿಗಳ ಭೇಟಿಯ ಕಾರ್ಯಕ್ರಮಗಳ ಬಗೆಗೆ ಜಿಲ್ಲಾ ಉಸ್ತುವಾರಿ ಮಂತ್ರಿಗಳ ಸಮ್ಮುಖದಲ್ಲಿ ಜರುಗಿದ ಸಮಯದಲ್ಲಿ ಹಣಕಾಸುಗಳ ಬಗೆಗೆ ವ್ಯಕ್ತಪಡಿಸಿದ ಅಜ್ಞಾನದ ಬಗೆಗೆ ಸಂಕ್ಷಿಪ್ತವಾಗಿ ಪ್ರಸ್ತಾಪಿಸಲಾಗಿತ್ತಷ್ಟೆ. ಆಸ್ಪತ್ರೆ ಯೊಂದರ ಕಟ್ಟಡದ ಶಿಲಾನ್ಯಾಸ ರಾಷ್ಟ್ರದ ಪ್ರಧಾನ ಮಂತ್ರಿಗಳಿಂದ ಜರುಗುವ ಸಂದರ್ಭದಲ್ಲಿ ಮೊದಲೇ ಹಾಜರಿದ್ದು ಏರ್ಪಾಡುಗಳ ಮೇಲುಸ್ತುವಾರಿ ಮಾಡುವುದು ಅವರ ಕರ್ತವ್ಯವಾಗ ಬೇಕಿತ್ತು. ಬದಲಿಗೆ ಕಾರ್ಯಕ್ರಮದ ದಿನವೇ ಬೆಂಗಳೂರಿನಿಂದ ಹೊರಟರು. ಮಾರ್ಗಮಧ್ಯದಲ್ಲಿ ವಾಹನ ಕೆಟ್ಟು ನಿಂತಿತು. ಪರ್ಯಾಯ ವ್ಯವಸ್ಥೆ ಮಾಡಿಕೊಂಡು ಚಿಕ್ಕಮಗಳೂರನ್ನು ತಲುಪುವಷ್ಟ ರಲ್ಲಿ ಕಾರ್ಯಕ್ರಮ ಮುಕ್ತಾಯವಾಗುವುದರಲ್ಲಿತ್ತು. ಹಾಗಾಗಿ ಅವರ ಆಗಮನ ಯಾರ ಗಮನಕ್ಕೂ ಬರಲಿಲ್ಲ. ಅಂದು ಅಲ್ಲೇ ತಂಗಿದ್ದು ಮರುದಿನ ಆಸ್ಪತ್ರೆಯ ಪರಿಶೀಲನಾ ಕ್ರಮ ನಿಗದಿಯಾಗಿತ್ತು. ಬೆಳಿಗ್ಗೆ ಆಸ್ಪತ್ರೆಗೆ ಬಂದ ಅವರಿಗೆ ವಿವಿಧ ವಿಭಾಗಗಳನ್ನು ತೋರಿಸಲಾಯಿತು. ಅನಂತರ ಆಸ್ಪತ್ರೆಯಲ್ಲಿ ಕುಂದುಕೊರತೆಗಳು ವೈದ್ಯರು ಮತ್ತಿತರರ ಸಮಸ್ಯೆಗಳ ಬಗೆಗೆ ಚರ್ಚೆ, ವಿಚಾರ ವಿನಿಮಯ ಕಾರ್ಯಕ್ರಮವೇರ್ಪಟ್ಟಿತ್ತು. ಬಹಳ ಸಮಯದಿಂದಲೂ ಚರ್ಮವ್ಯಾಧಿ ತಜ್ಞರಿಲ್ಲದಿರುವುದನ್ನು ಅವರ ಗಮನಕ್ಕೆ ತರಲಾಯಿತು. "ಓಹೋ ಚರ್ಮದ ಬಗೆಗೆ ಅದೇನಿರುತ್ತದೆ? ಕೇವಲ ನಾಲ್ಕು ಬಗೆಯ ಮುಲಾಮುಗಳನ್ನು ತಯಾರಿಸಿ, ವಿತರಿಸಲು ಒಬ್ಬರನ್ನು ಬಿಟ್ಟರಾಯಿತು" ಎಂದು ಹೇಳಿ ತಮ್ಮ ಬೋಳೆತನವನ್ನು ಪ್ರದರ್ಶಿಸಿದರು. ಹಾಗೆಯೇ ಅರಿವಳಿಕಾ ತಜ್ಞರ ಕೊರತೆಯ ಬಗೆಗೂ ನಿವೇದಿಸಲಾಯಿತು. "ಅದಕ್ಕೇನಂತೆ, ಹತ್ತಿರದ ಹಿರೇಮಗಳೂರಿನಲ್ಲಿ ರುವ ವೈದ್ಯರನ್ನು ಕರೆಸಿ ಆಪರೇಷನ್ ಆಗುವವರಿಗೆ ಈಥರ್ ಹೊಯ್ಯಿಸಿದರಾಯಿತು!"

ಮುಂದುವರಿದು ಆಗ ಹಾಜರಿದ್ದ ಜಿಲ್ಲಾ ಆರೋಗ್ಯಾಧಿಕಾರಿಯನ್ನು ಉದ್ದೇಶಿಸಿ ಅಲ್ಲಿಯ ವೈದ್ಯರನ್ನು ಆಗಾಗ್ಗೆ ನಮ್ಮ ಆಸ್ಪತ್ರೆಗೆ ಕಳುಹಿಸುವ ಆದೇಶವನ್ನು ಸಹಾ ನೀಡಿದರು. ಅಲ್ಲಿರುವವರು ಆಯುರ್ವೇದದಲ್ಲಿ ತರಬೇತಾದವರೆಂದು ಹೇಳಿದಾಗ, ಈಥರ್ ನೀಡುವುದಕ್ಕೆ ಯಾರಾದರೇನಂತೆ ಎಂದು ಉದ್ಗರಿಸಿ ಅವರಲ್ಲಿ ವೈದ್ಯಕೀಯ ವಿಚಾರಗಳ ಬಗೆಗಿದ್ದ ಅಜ್ಞಾನದ ಗಾಢಾಂಧಕಾರವನ್ನು ಪ್ರಕಟಿಸಿದರು. ರಾಜ್ಯವೊಂದರ ವೈದ್ಯಕೀಯ ಇಲಾಖೆಯ ನಿರ್ವಹಣೆಯ ಜವಾಬ್ದಾರಿ ಹೊತ್ತ ನಿರ್ದೇಶಕರ ತಿಳಿವಳಿಕೆ ಮಟ್ಟ ಹಾಗಿದ್ದರೆ ಆಡಳಿತದ ವ್ಯವಸ್ಥೆಯ ಬಗೆಗಾಗಲೀ, ಜನಾರೋಗ್ಯದ ಬಗೆಗಾಗಲೀ ಹೇಳುವುದಿನ್ನೇನಿದೆ?

ಈ ಹಂತದಲ್ಲಿ ಮರೆತ ಇನ್ನೊಂದು ಪ್ರಕರಣದ ಉಲ್ಲೇಖ ಸಕಾಲಿಕವೆನಿಸುತ್ತದೆ. ಮೆಗ್ಗಾನ್ ಆಸ್ಪತ್ರೆಯಲ್ಲಿ ಆರ್.ಎಂ.ಓ. ಆಗಿದ್ದ ಸಮಯದಲ್ಲಿ ನಿರ್ದೇಶಕರೊಬ್ಬರ ಪರಿವೀಕ್ಷಣಾ ಪ್ರಹಸನ ಅದು. ಗಣೇಶನ ಹಬ್ಬದ ದಿನವೇ ಅವರ ಸಕುಟುಂಬ ಸಮೇತ ಶಿವಮೊಗ್ಗೆಯ ಭೇಟಿ ನಿಗದಿಯಾಗಿದ್ದು, ಆ ದಿನ ಸರ್ಕಾರಿ ರಜೆ ಇದ್ದರೂ ಆಸ್ಪತ್ರೆಯ ಸಿಬ್ಬಂದಿ ವರ್ಗದವರೆಲ್ಲಾ ಮಧ್ಯಾಹ್ನದವರೆಗೂ ಅವರಿಗಾಗಿ ಕಾಯ್ದು ಕುಳಿತಿರಬೇಕಾಯಿತು. ವಿವಿಧ ವಿಭಾಗಗಳಲ್ಲಿ ಅವರನ್ನು ಸುತ್ತಾಡಿಸಲಾಯಿತು. ಯಾವ ಯಾವ ಜಾಗಗಳಲ್ಲಿ ಹೂವಿನ ಕುಂಡಗಳನ್ನಿರಿಸಬೇಕು, ನೇತು ಹಾಕಿದ್ದ ವಿವಿಧ ಚಾರ್ಟುಗಳಿಗೆ ಸೆಲ್ಲೋಫೇನ್ ಟೇಪು ಅಂಟಿಸಬೇಕೆಂಬ ಅಮೂಲ್ಯ ಸಲಹೆಗಳು ಅವರಿಂದ ದೊರಕಿದ್ದು. ಆ ವಿಭಾಗಗಳಲ್ಲಿದ್ದ ಅವ್ಯವಸ್ಥೆ, ಅಥವಾ ನ್ಯೂನತೆಗಳ ಕಡೆಗೆ ಅವರ ದೃಷ್ಟಿ ಹರಿಯಲಿಲ್ಲ. ಎಲ್ಲಕ್ಕಿಂತ ವಿಚಿತ್ರವೆನಿಸಿದ ಸಲಹೆ - ಆ ದಿನದ ಪರಿವೀಕ್ಷಣೆಯ ಸಮಯದಲ್ಲಿ ಅವರು ಮಾಡಿದ ರಿಮಾರ್ಕು(ಅಣಿ ಮುತ್ತುಗಳೇ ಸರಿ!)ಗಳನ್ನು ನಮ್ಮಲ್ಲೊಬ್ಬರು ಟಿಪ್ಪಣಿ ಮಾಡಿಕೊಂಡು ಅನಂತರ ಆ ಬಗೆಗೆ ನಾವು ತೆಗೆದುಕೊಂಡ ಕ್ರಮಗಳನ್ನು ವಿವರಿಸಿ ಅವರ ನಿರ್ದೇಶನಾಲಯಕ್ಕೆ ವರದಿ ಮಾಡಬೇಕಂತೆ - ಎಂತಹ ಹಾಸ್ಯಾಸ್ಪದ ವರ್ತನೆ ಇಲಾಖಾ ವರಿಷ್ಠ ರೊಬ್ಬರಿಂದ. ಮುಂದೆ ಅವರು ಜೋಗ್‌ಗೆ ಸಂಸಾರ ಸಮೇತ ಪ್ರಯಾಣ ಮುಂದುವರಿಸಿದರು!

ಹಿಂದಿನ ಪುಟಗಳಲ್ಲಿ ಡಾ॥ ಡಿ. ಶಾಮಣ್ಣನವರಂಥ ಡಿ.ಎಂ.ಓ.ಗಳು, ಡಾ॥ ವಿ. ಆರ್. ನಾಯ್ಡು ಅವರಂಥ ಇಲಾಖಾ ನಿರ್ದೇಶಕರು, ಹಾಗೂ ಡಾ॥ ಕೆ. ಕೆ. ಹೆಗ್ಗಡೆಯವರಂಥ ಆರೋಗ್ಯ ಸಚಿವರು ಆಸ್ಪತ್ರೆಗಳನ್ನು ಪರಿವೀಕ್ಷಣೆ ಮಾಡಿದ ವಿವರಗಳ ದಾಖಲೆ ನೆನಪಾಗಬಹುದು. ಕೇವಲ ಸೇವಾ ಹಿರಿತನದ ಆಧಾರದ ಮೇಲೆ (ಅದು ಹೇಗೆ ನಿರ್ಧಾರವಾಗುತ್ತವೆಂಬುದಕ್ಕೆ ನಾನೇ ಜ್ವಲಂತ ಸಾಕ್ಷಿ) ಉನ್ನತ ಹುದ್ದೆಗಳಿಗೆ ಆಯ್ಕೆಯಾದವರಿಂದ ಉಂಟಾಗಬಹುದಾದ ಹಾನಿಯನ್ನು ಗಮನಕ್ಕೆ ತರುವ ಸಲುವಾಗಿ ಈ ವಿಚಾರಗಳನ್ನು ವಿವರವಾಗಿ ಹೇಳ ಬೇಕಾಯಿತು. ಮೊದಲು ಪ್ರಸ್ತಾಪ ಮಾಡಿದವರು ಇಲಾಖೆಯಲ್ಲಿನ ಹಿರಿತನದ ಆಧಾರದ ಮೇಲೆ ನಿರ್ದೇಶಕರಾದವರಂತೆ; ಎರಡನೆ ನಿದರ್ಶನದವರು ಖಾಸಗಿ ಮೆಡಿಕಲ್ ಕಾಲೇಜೊಂದಕ್ಕೆ ಬೇರೊಂದು ರಾಜ್ಯದಿಂದ ಬಂದು ಬೋಧಕರಾಗಿ ಕೆಲಸಕ್ಕೆ ಸೇರಿದವರು; ಬಹುಶಃ ಆ ಖಾಸಗಿ ಮೆಡಿಕಲ್ ಕಾಲೇಜನ್ನು ಸರ್ಕಾರದವರು ವಹಿಸಿಕೊಂಡಾಗ ಇಲಾಖೆಗೆ ಸೇರುವಂತಾಯಿತು. ಅದೇ ಸಮಯದಲ್ಲೇ ಇರಬೇಕು ಆ ತನಕ ಪ್ರತ್ಯೇಕವಾಗಿ ಅಸ್ತಿತ್ವದಲ್ಲಿದ್ದ ಆರೋಗ್ಯ ಇಲಾಖೆ, ವೈದ್ಯ ಇಲಾಖೆ, ವೈದ್ಯ ಶಿಕ್ಷಣ ಇಲಾಖೆ ಮುಂತಾದ ವಿಭಾಗಗಳನ್ನು ಒಂದು ಗೂಡಿಸಿ ಸಾರ್ವಜನಿಕ ಆರೋಗ್ಯ ಇಲಾಖೆ ಎಂಬ ಒಂದೇ ವ್ಯವಸ್ಥೆ ಜಾರಿಗೆ ಬಂದದ್ದು; ಅವುಗಳ ವಿವಿಧ ಹುದ್ದೆಗಳನ್ನು ಸಮೀಕರಣ ಗೊಳಿಸಿದಾಗ ಇಂತಹ ಪರಿಸ್ಥಿತಿ ಉಂಟಾಗಿರಬೇಕು.

## ಆಡಳಿತ ನಿರ್ವಹಣಾ ತರಬೇತಿಗಳಲ್ಲಿ ಭಾಗವಹಿಸುವ ಅವಕಾಶ

ಯಾವುದೇ ಇಲಾಖೆಯ ಆಡಳಿತ ನಿರ್ವಹಣೆಯ ಜವಾಬ್ದಾರಿ ಹೊತ್ತಿರುವವರಿಗೆ ಆ ದಿಸೆಯಲ್ಲಿ ವೈಜ್ಞಾನಿಕ ರೀತಿಯ ತರಬೇತಿ ಇಲ್ಲದಿರುವುದೇ ನಮ್ಮೆಲ್ಲಾ ಅವ್ಯವಸ್ಥೆಗಳ ಪ್ರಮುಖ ಕಾರಣವೆಂದರೆ ಅತಿಶಯೋಕ್ತಿಯಾಗಲಾರದು. ಅದರಲ್ಲೂ ಕೇವಲ ವೈದ್ಯಕೀಯ ವಿಷಯಗಳ ತಾಂತ್ರಿಕತೆಗಳಲ್ಲಿ ಪರಿಣತಿ ಪಡೆದ ವೈದ್ಯರು ಆರಂಭದಿಂದಲೇ ಆಡಳಿತ ನಿರ್ವಹಣೆ ಜರುಗಿಸುವ ಅವಕಾಶ ಉಂಟಾದ ಪರಿಸ್ಥಿತಿಗಳಿಗೆ ನನ್ನದೇ ಒಂದು ಉದಾಹರಣೆ ಎನ್ನಬಹುದು. ಆ ತನಕದ ಸುಮಾರು ಕಾಲು ಶತಮಾನ ಸರ್ಕಾರದ ಸೇವೆಯಲ್ಲಿ ಹದಿನೇಳು ವರ್ಷಗಳಷ್ಟು ಕಾಲ ಒಂದಲ್ಲ ಒಂದು ರೀತಿಯಲ್ಲಿ (ರೋಗಿಗಳ ಶುಶ್ರೂಷಣೆಯ ಜೊತೆಗೆ) ಆಡಳಿತ ನಿರ್ವಹಣೆ ನನ್ನ ಬೆಂಬತ್ತಿ ಬರುತ್ತಿತ್ತು. ಶಿಕಾರಿಪುರದಲ್ಲಿ ಮೊದಲು ಕಾರ್ಯಾರಂಭ ಮಾಡಿದಾಗಿನಿಂದಲೂ ಅದನ್ನು ಒಂದು ರೀತಿಯ ಸವಾಲೆಂದೇ ಸ್ವೀಕರಿಸಿ, ವೈಯಕ್ತಿಕ ಆಸಕ್ತಿ ಹಾಗೂ ಪರಿಶ್ರಮದಿಂದ ಆಡಳಿತದ ಜವಾಬ್ದಾರಿಗಳನ್ನು ಬಹಳಷ್ಟು ಯಶಸ್ವಿಯಾಗಿ ನಿರ್ವಹಿಸಿದ ಸಂತೃಪ್ತಿಯೇನೋ ಇತ್ತು. ಚಿಕ್ಕಮಗಳೂರಿಗೆ ಜಿಲ್ಲಾ ಸರ್ಜನ್ ಆಗಿ ಹೋದ ಮೂರ್ನಾಲ್ಕು ತಿಂಗಳ ಅವಧಿಯಲ್ಲೇ ಆಸ್ಪತ್ರೆ ಹಾಗೂ ಆರೋಗ್ಯ ಸೇವಾ ಇಲಾಖೆಗಳ ಆಡಳಿತ ನಿರ್ವಹಣೆ ಬಗೆಗೆ ತರಬೇತಿಯ ಕೋರ್ಸ್‌ಗಳಲ್ಲಿ ಭಾಗವಹಿಸುವ ಅವಕಾಶಗಳು ಒಂದಾದ ಮೇಲೊಂದರಂತೆ ಒದಗಿ ಬಂದವು.

ಅವುಗಳಲ್ಲಿ ಮೊದಲನೆಯ ಅವಕಾಶ ಕೇರಳದ ತಿರುವಾಂಕೂರಿನಲ್ಲಿ ಏರ್ಪಾಡಾಗಿತ್ತು. ಅಲ್ಲಿಯ ಮೆಡಿಕಲ್ ಕಾಲೇಜಿನಲ್ಲಿ ಅದೇ ಮೊದಲ ಸಾರಿಗೆ ಎರಡು ವಾರಗಳ ಕಾಲ - ೨೭-೧-೧೯೮೧ರಿಂದ ೯-೨-೮೧ - ಆ ತರಬೇತಿ ನಡೆಯುವುದರಲ್ಲಿತ್ತು. ಕೇರಳ ಸರ್ಕಾರದವರು ತಮ್ಮ ಅಧಿಕಾರಿಗಳಿಗೆ ಆಡಳಿತ ತರಬೇತಿಯ ಬಗೆಗೆ Kerala Institute of Public Administration - 'KIPA' ಎಂಬ ಸಂಸ್ಥೆಯನ್ನು ಬಹಳ ವರ್ಷಗಳ ಹಿಂದೆ ಸ್ಥಾಪಿಸಿದ್ದರು. ಅದರ ಕಾರ್ಯಕ್ರಮದ ಒಂದು ಭಾಗವಾಗಿ ತಿರುವಾಂಕೂರು ಮೆಡಿಕಲ್ ಕಾಲೇಜಿನ ಪ್ರಾಂಶುಪಾಲ ಡಾ॥ ಮಾಧವನ್ ಕುಟ್ಟಿಯವರ ನಿರ್ದೇಶನದಲ್ಲಿ ಈ ಕಾರ್ಯಕ್ರಮವನ್ನು ಆಯೋಜಿಸಲಾಗಿತ್ತು. ಆ ದಿಸೆಯಲ್ಲಿ ಭಾರತಾದ್ಯಂತ ಸುಮಾರು ೨೫ ಮಧ್ಯಮ ಹಂತದ ವೈದ್ಯ ಆಡಳಿತಗಾರರನ್ನು ಆಯ್ಕೆ ಮಾಡಲಾಗಿತ್ತು. ಕರ್ನಾಟಕದಿಂದ ಬಿಜಾಪುರ ಜಿಲ್ಲೆಯ ಡಾ॥ ಪಿ. ಜಿ. ದಲಾಲ್ ಮತ್ತು ನಾನು ಆಯ್ಕೆಯಾಗಿದ್ದೆವು. ಬಹುಪಾಲು ಜಿಲ್ಲಾ ಮಟ್ಟದ ಅಧಿಕಾರಿಗಳಾದ ಡಿ.ಎಂ.ಓ., ಡಿ.ಎಚ್.ಓ., ಮೆಡಿಕಲ್ ಕಾಲೇಜುಗಳ ಪ್ರಾಧ್ಯಾಪಕರು ಮುಂತಾದವರನ್ನೇ ಹೆಚ್ಚಾಗಿ ಆಯ್ಕೆ ಮಾಡಿಕೊಂಡಿದ್ದರು.

ತರಬೇತಿ ನೀಡಬೇಕಾದ ವಿಷಯಗಳ ಬಗೆಗೆ ಮೊದಲೇ ಯೋಚಿಸಿ ಪಠ್ಯಕ್ರಮ ತಯಾರಾಗಿತ್ತು. ಅಂತಹ ವಿಷಯಗಳಲ್ಲಿ ಪರಿಣತರಾದ ಮಾರ್ಗದರ್ಶಕರಿಂದ ಲೇಖನಗಳನ್ನು ಸಿದ್ಧಪಡಿಸಿ ಪುಸ್ತಕಗಳ ರೂಪದಲ್ಲಿ ಪ್ರಕಟಿಸಿ, ನಾವೆಲ್ಲಾ ಹಾಜರಾಗುತ್ತಲೇ ವಿತರಿಸಿದರು. ಕೇವಲ ವೈದ್ಯಕೀಯ/ಆರೋಗ್ಯ ಸೇವಾ ವ್ಯವಸ್ಥೆಗಳ ಆಡಳಿತಗಳೇ ಅಲ್ಲದೆ ಸಾಮಾನ್ಯ ಆಡಳಿತ ನಿರ್ವಹಣೆ, ಹಣಕಾಸಿನ ನಿರ್ವಹಣೆ, ಆಧುನಿಕ ಮ್ಯಾನೇಜ್‌ಮೆಂಟಿನ ಮೂಲಭೂತ ತತ್ವಗಳ ಪರಿಚಯ, ಆಸ್ಪತ್ರೆಯಂತಹ ಸಂಕೀರ್ಣ ಸಂಸ್ಥೆಯ ಕಾರ್ಯಕಲಾಪದ ಸಲುವಾಗಿ ನಿರ್ಮಿಸುವ ಕಟ್ಟಡಗಳ ಯೋಜನೆ, ವಿನ್ಯಾಸ ಮುಂತಾದವುಗಳ ಬಗೆಗೆ ಅನುಸರಿಸಬೇಕಾದ ಇಂಜಿನಿಯರಿಂಗ್, ವಾಸ್ತು ಶಿಲ್ಪ (Architecture) ಮುಂತಾದ ಹಲವಾರು ವಿಚಾರಗಳ ಬಗೆಗೆ ತಜ್ಞರಿಂದ ಭಾಷಣಗಳು ಏರ್ಪಾಡಾಗಿರುತ್ತಿದ್ದವು. ಕೇರಳ ಸರ್ಕಾರದ ಮುಖ್ಯ ಕಾರ್ಯದರ್ಶಿಗಳೇ ಅಲ್ಲದೆ ಕೆಲವು ಉನ್ನತ

ಅಧಿಕಾರಿಗಳು ಈ ಕಾರ್ಯಕ್ರಮಗಳಲ್ಲಿ ಭಾಷಣ ಮಾಡುತ್ತಿದ್ದರು. ಮತ್ತೆ ಕೆಲವು ಪ್ರಮುಖ ವಿಷಯಗಳ ಬಗೆಗೆ ಭಾಷಣ ಮಾಡಲು ದೆಹಲಿ, ಮುಂಬಯಿ, ಮದ್ರಾಸುಗಳಿಂದಲೂ ವಿಶೇಜ್ಞ ಅಧ್ಯಾಪಕ ವರ್ಗದವರನ್ನೂ ಕರೆಸುತ್ತಿದ್ದರು.

ಭಾರತದ ಇತರ ಎಲ್ಲಾ ರಾಜ್ಯಗಳಿಗಿಂತಲೂ ವಿದ್ಯಾಭ್ಯಾಸ, ಆಡಳಿತ ನಿರ್ವಹಣೆ, ರಾಜಕೀಯ ಮತ್ತು ಸಾಮಾಜಿಕ ವಿಚಾರಗಳಲ್ಲಿ ಕೇರಳ ಮುಂಚೂಣಿಯಲ್ಲಿದೆ ಎಂಬ ಪ್ರತೀತಿ ಇದೆಯಷ್ಟೆ. ಅಷ್ಟೇಕೆ ನೆರೆಯ ಶ್ರೀಲಂಕಾ ಹಾಗೂ ದೂರದ ಕೊರಿಯಾ ದೇಶಗಳಿಗೆ ಹೆಗಲೆಣೆಯಾಗಿ ಪ್ರಗತಿ ಸಾಧಿಸಿದೆ ಎಂಬ ಹೆಗ್ಗಳಿಕೆ ಕೇರಳದವರದು. ವೈದ್ಯಕೀಯ ಮತ್ತು ಆರೋಗ್ಯ ಸೇವಾ ಕ್ಷೇತ್ರಗಳಲ್ಲೂ ಅದರ ಸಾಧನೆ ಇತರ ರಾಜ್ಯಗಳಿಗಿಂತಲೂ ಹೆಚ್ಚಿನದು. ಕ್ರಿ.ಶ. ಎರಡು ಸಾವಿರದ ಇಸವಿಯ ಕುಟುಂಬ ಕಲ್ಯಾಣ ಇಲಾಖೆ ಗುರಿಗಳನ್ನು ಅವರಾಗಲೇ ಮುಟ್ಟಿಯಾಗಿತ್ತು! ಆ ಸಾಧನೆಗಳನ್ನು ಪಡೆಯುವಲ್ಲಿ ಅವರಿಗೆ ಹಣಕಾಸಿನ ಕೊರತೆ ಕಂಡುಬರುತ್ತಿಲ್ಲವೆಂಬುದು ಭಾಷಣ ನೀಡುತ್ತಿದ್ದ ಕೇರಳ ಸರ್ಕಾರದ ಅಧಿಕಾರಿಗಳ ಅಭಿಪ್ರಾಯವಾಗಿರುತ್ತಿತ್ತು. ಆದರೆ ಆ ಸಾಧನೆಗಳ ಗುಟ್ಟೇನೆಂದು ಪ್ರಶ್ನಿಸಿದರೆ ಅವರೆಲ್ಲಾ ನೀಡುವ ಉತ್ತರ : ಅಲ್ಲಿನ ಜನರ ವ್ಯಾಪಕ ವಿದ್ಯಾಭ್ಯಾಸ; ಪುರುಷರಿಗಿಂತ ಮಹಿಳೆಯರೇ ಹೆಚ್ಚಾಗಿ ವಿದ್ಯಾವಂತರಾಗಿರುವುದು; ಅದರಲ್ಲೂ ಪೇಟೆ ಪಟ್ಟಣಗಳಲ್ಲಿರುವವರಿಗಿಂತ ಹಳ್ಳಿಗಾಡಿನ ಮಹಿಳೆಯರೇ ಹೆಚ್ಚು ವಿದ್ಯಾವಂತರಾಗಿರುವುದು! ಎಂಬ ಒಕ್ಕೊರಲಿನ ಉತ್ತರ.

ತಿರುವನಂತಪುರದಲ್ಲಿ ನಾವಿದ್ದ ಕೇವಲ ಎರಡು ವಾರಗಳ ಅವಧಿಯಲ್ಲಿ ಆಸ್ಪತ್ರೆ ಮತ್ತು ಆರೋಗ್ಯ ಸೇವಾ ವ್ಯವಸ್ಥೆಗಳ ಆಡಳಿತದ ವಿಷಯಗಳಲ್ಲಿ ಹೊಸ ಆಯಾಮಗಳನ್ನು ಕಂಡುಕೊಳ್ಳಲು ಸಾಧ್ಯವಾಯಿತು. ನಮ್ಮಲ್ಲಿ ಬಹುಪಾಲು ವೈದ್ಯರು ಆಡಳಿತ ನಿರ್ವಹಣೆಯಲ್ಲಿ ಕಾಲುಶತಮಾನ ದಷ್ಟು ಸಮಯ ಕಳೆದಿದ್ದರೂ, ಆ ತನಕ ಒಂದು ರೀತಿಯ ಕತ್ತಲಲ್ಲಿ ತಡಕಾಡುತ್ತಿದ್ದೆವೆನಿಸಿತು. ಅಲ್ಲಿನ ಬೆಳವಣಿಗೆಗಳ ಬಗೆಗೆ ನನಗೆ ಅದೆಷ್ಟು ಆಸಕ್ತಿಯುಂಟಾಗಿತ್ತೆಂದರೆ, ಕೇರಳದ ಆರೋಗ್ಯ ಸೇವಾ ವ್ಯವಸ್ಥೆಗಳ ಸುಧಾರಣೆಗೆ ನೇಮಕವಾದ 'ಪೈ ಕಮೀಷನ್'ವರದಿಯನ್ನು (ಅಲ್ಲೊಬ್ಬರು ಡಾ॥ ಕೆ. ಎನ್. ಪೈ ಇದ್ದರು!) ಪಡೆದುಕೊಳ್ಳುವ ಅಭಿಲಾಷೆಯನ್ನು ನಮ್ಮ ಕೋರ್ಸ್ ನಿರ್ದೇಶಕರಿಗೆ ವ್ಯಕ್ತಪಡಿಸಿದೆ. ಆ ವರದಿ (Report of the High Power Committe on Health Services - 1979) ಅಧಿಕೃತವಾಗಿ ಬಿಡುಗಡೆಯಾಗಿರದಿದ್ದರೂ ನಿರ್ದೇಶಕರ ಶಿಫಾರಸಿ ನಿಂದಾಗಿ ಒಂದು ಪ್ರತಿಯನ್ನು ಕೊಂಡುಕೊಳ್ಳಲು ಸಾಧ್ಯವಾಯಿತು!

ಇನ್ನು ೧೯೮೧ರ ವರ್ಷ ಅಂತ್ಯವಾಗುವುದರೊಳಗೇ ಹೊಸದೆಹಲಿಯ - National Institute of Health and Family-Welfare - NIHFW- ಸಂಸ್ಥೆಯಲ್ಲಿ ಮತ್ತೆ ಒಂದು ತಿಂಗಳ ಅವಧಿಯಲ್ಲಿ (೨-೧೧-೧೯೮೧ ರಿಂದ ೨೮-೧೧-೮೧) ಇದೇ ರೀತಿಯ ತರಬೇತಿಗೆ (Course on Hospital Administration) ಹಾಜರಾಗಬೇಕೆಂಬ ಆದೇಶ ಕರ್ನಾಟಕ ಸರ್ಕಾರದಿಂದ ಬಂದಿತು. ಕರ್ನಾಟಕದಿಂದ ಹಾಸನ ಜಿಲ್ಲಾ ಸರ್ಜನ್ ಡಾ॥ ಗಿರಿಗೌಡ (ನನ್ನ ಸಹಪಾಠಿಯಾಗಿದ್ದ ವರು) ಹಾಗೂ ನಾನೂ ಸೇರಿದಂತೆ ನಾಲ್ಕು ಜನರನ್ನು ಆಯ್ಕೆ ಮಾಡಲಾಗಿತ್ತು. ಅದೇ ವರ್ಷ ಇನ್ನೊಂದು ಕಡೆ ಅಂತಹುದೇ ತರಬೇತಿಗೊಳಗಾದ ನನ್ನನ್ನು ಮತ್ತೆ ಆಯ್ಕೆ ಮಾಡಿದ್ದರ ಕಾರಣ ತಿಳಿಯದಿದ್ದರೂ, ಈ ರೀತಿಯ ತರಬೇತಿಗಳ ಸಲುವಾಗಿ ತಿಂಗಳು ಗಟ್ಟಲೆ 'ತಮ್ಮ ಕೆಲಸ ಕಾರ್ಯ ಗಳನ್ನು ಬದಿಗೊತ್ತಿ ಹೋಗಲು ಬಹಳ ಜನ ವೈದ್ಯರು ಇಷ್ಟಪಡದಿರುವುದು' ಕಾರಣವಾಗಿತ್ತೆಂದು ಅನಂತರ ತಿಳಿಯಿತು. ಈ ಸಾರಿ ಆಯ್ಕೆಯಾದವರಲ್ಲಿ ಒಬ್ಬರು ತರಬೇತಿಗೆ ಹಾಜರಾಗಲಿಲ್ಲ!

NIHFW ತರಬೇತಿ ಸಂಸ್ಥೆ ದೆಹಲಿಯ ಮುನೀರ್ಖಾ ವಲಯದಲ್ಲಿದೆ. ಒಂದು ಮೆಡಿಕಲ್ ಕಾಲೇಜಿನ ಮಾದರಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಆ ಸಂಸ್ಥೆ ಹಲವಾರು ವರ್ಷಗಳಿಂದ ಅಸ್ತಿತ್ವದಲ್ಲಿದೆ. ಆರೋಗ್ಯ ಸೇವಾ ಇಲಾಖೆಗಳ ಆಡಳಿತ ನಿರ್ವಹಣೆಯ ಬಗೆಗೆ ಪದವಿ, ಸ್ನಾತಕೋತ್ತರ ಪದವಿ, ಡಿಪ್ಲೋಮಾ, ಆರು ತಿಂಗಳ, ಒಂದು ತಿಂಗಳ ಹಾಗೂ ಕೆಲವು ವಾರಗಳ ಅವಧಿಯ ನಾನಾ ರೀತಿಯ ತರಬೇತಿಗಳನ್ನು ನೀಡುವ ಅವಕಾಶಗಳು ಅದರಲ್ಲಿವೆ. ಆಸ್ಪತ್ರೆ ಮತ್ತು ಆರೋಗ್ಯ ಇಲಾಖೆಗಳ ವಿವಿಧ ಸ್ತರಗಳ ಅಧಿಕಾರಿ ವರ್ಗದವರಿಗೆ - ಡಿ.ಎಂ.ಓ., ಡಿ.ಎಚ್.ಓ., ಆರ್.ಎಂ.ಓ., ನರ್ಸ್‌ಗಳು, ಹೆಲ್ತ್ ಇನ್ಸ್‌ಪೆಕ್ಟರ್, ಫಾರ್ಮಸಿಸ್ಟ್ (ಕಾಂಪೌಂಡರ್) ಇತ್ಯಾದಿ, ತರಬೇತಿ ನೀಡುವ ಅನುಕೂಲಗಳು ಅಲ್ಲಿವೆ. ಜೊತೆಗೆ ಇಡೀ ವರ್ಷವೆಲ್ಲಾ ಡಿಗ್ರಿ, ಡಿಪ್ಲೊಮಾ, ಸ್ನಾತಕೋತ್ತರ ಪದವಿಗಾಗಿ ತರಗತಿಗಳು ಜರುಗುತ್ತಿರುತ್ತವೆ. ಅದರಿಂದಾಗಿ NIHFW ಸಂಸ್ಥೆ ತನ್ನದೇ ಖಾಯಂ ಬೋಧಕ ಸಿಬ್ಬಂದಿಗಳನ್ನು ಹೊಂದಿದೆ; ಹಾಗೂ ಸುವ್ಯವಸ್ಥಿತ ಹಾಸ್ಟೆಲ್ ಸಹ ಇದೆ.

ಈ ಸಂಸ್ಥೆಯ ಇನ್ನೊಂದು ವಿಶೇಷವೆಂದರೆ ಆರೋಗ್ಯ ವ್ಯವಸ್ಥೆಗಳ ಆಡಳಿತಗಾರರೇ ಅಲ್ಲದೆ ಆ ಇಲಾಖೆಯ ಧೋರಣೆ, ಧ್ಯೇಯೋದ್ದೇಶಗಳನ್ನು ನಿರ್ದೇಶಿಸುವ ಉನ್ನತ ಮಟ್ಟದ ವೈದ್ಯರಲ್ಲದ ಅಧಿಕಾರಿಗಳಿಗೂ ತರಬೇತಿ ನೀಡುವ ಅನುಕೂಲತೆಗಳಿದ್ದುದು. ಬರೇ ಸರ್ಕಾರೀ ಅಧಿಕಾರಿವರ್ಗದವರೇ ಅಲ್ಲದೆ ರೈಲ್ವೇ, ಮಿಲಿಟರಿ, ಕೈಗಾರಿಕಾ ವೈದ್ಯ ಸೇವೆಯ ವಿವಿಧ ಸ್ತರದ ಅಧಾಕಾರಿವರ್ಗದವರಿಗೂ ಅವಕಾಶವಿರುತ್ತಿತ್ತು. ಪ್ರಸ್ತುತ ಹೆಸರುವಾಸಿ ಪಡೆದಿರುವ ದೆಹಲಿಯ ಎಸ್ಕಾರ್ಟ್ ಹಾರ್ಟ್ ಹಾಸ್ಪಿಟಲ್ ಆಗಿನ್ನೂ ಅಸ್ತಿತ್ವಕ್ಕೆ ಬಂದಿರದಿದ್ದರೂ, ಮುಂದೆ ಅದರ ನಿರ್ವಹಣೆಗೆ ನಿಯೋಜಿತರಾದ ಕರ್ನಲ್ ದರ್ಜೆಯ (ನಿವೃತ್ತ) ಅಧಿಕಾರಿಯೊಬ್ಬರು ನಮ್ಮ ತಂಡದಲ್ಲಿದ್ದರು!

NIHFWನ ಪಠ್ಯಕ್ರಮವು ಬಹುಪಾಲು ತಿರುವಾಂಕೂರು ಕೋರ್ಸ್‌ನ ಮಾದರಿಯಲ್ಲೆ ಇದ್ದವೆನ್ನಬಹುದಾದರೂ ಅವುಗಳ ಆಳ ವಿಸ್ತಾರಗಳಲ್ಲಿ ವಿವಿಧತೆಗಳಿರುತ್ತಿದ್ದವು. ಜೊತೆಗೆ ಮೆಟೀರಿಯಲ್ಸ್ ಮ್ಯಾನೇಜ್‌ಮೆಂಟ್, ಸಿಬ್ಬಂದಿಗಳ ನಿರ್ವಹಣೆ, ಮೆಡಿಕಲ್ ಸ್ಟೋರ್ಸ್ ನಿರ್ವಹಣೆ, ರಾಷ್ಟ್ರೀಯ ಆರೋಗ್ಯ ಸೇವಾ ನೀತಿ (Policy) ಮುಂತಾದ ಆಸ್ಪತ್ರೆಗೆ ಸಂಬಂಧಿಸಿದ ವಿಷಯಗಳಿಗೆ ಹೆಚ್ಚಿನ ಒತ್ತು ಕೊಡಲಾಗಿತ್ತು. ಅಂತಹ ಎಲ್ಲಾ ವಿಷಯಗಳನ್ನೊಳಗೊಂಡ ೩೦೦ ಪುಟಗಳಿಗಿಂತಲೂ ಮಿಗಿಲಾದ ಹಿನ್ನೆಲೆ ಲೇಖನಗಳ (Background papers) ಗ್ರಂಥವನ್ನು ತಯಾರಿಸಿ ಕೊಟ್ಟಿದ್ದರು. ತರಬೇತಿಯ ಸಮಯದಲ್ಲಿ ಗುಂಪು ಚರ್ಚೆಗಳು, ಪ್ರಾತ್ಯಕ್ಷಿಕೆಗಳು, ದೆಹಲಿಯ ಕೆಲವು ಪ್ರಮುಖ ಆಸ್ಪತ್ರೆಗಳಿಗೆ - ಅಖಿಲ ಭಾರತ ವೈದ್ಯಕೀಯ ಸಂಸ್ಥೆ (AIMS), ಸಫ್‌ದರ್‌ಜಂಗ್ ಆಸ್ಪತ್ರೆ - ಕರೆದುಕೊಂಡು ಹೋಗಿ ಅವು ಕಾರ್ಯ ನಿರ್ವಹಿಸುತ್ತಿರುವ ಬಗೆಗೆ ಪರಿಚಯ ಮಾಡಿಸಿದರು. ಮೆಟೀರಿಯಲ್ಸ್ ಮ್ಯಾನೇಜ್‌ಮೆಂಟ್‌ನ ಪ್ರಾತ್ಯಕ್ಷಿಕೆಗಾಗಿ ಸಫ್‌ದರ್‌ಜಂಗ್ ಆಸ್ಪತ್ರೆಗೆ ಒಂದು ವರ್ಷದ ಅವಧಿಯಲ್ಲಿ ಖರೀದಿಸಿದ ಔಷಧ ಮತ್ತಿತರ ಸಾಮಗ್ರಿಗಳ ಪಟ್ಟಿ, ಅವುಗಳನ್ನು ಹಂತ ಹಂತವಾಗಿ ಒದಗಿಸಿಕೊಂಡ ರೀತಿ, ಬಳಸಿಕೊಂಡ ಬಗೆ, ಆ ಸಲುವಾಗಿ ಮಂಜೂರಾದ ಹಣಕಾಸಿನ ವಿವರಗಳನ್ನೊದಗಿಸಿ ವಿವಿಧ ಗುಂಪುಗಳು ವಿಶ್ಲೇಷಿಸುವಂತೆ ಮಾಡಿದುದು ಬೋಧಪ್ರದವಾಗಿತ್ತು; ನಮ್ಮೆಲ್ಲರ ಕಣ್ಣು ತೆರಸುವಂತಿತ್ತು!

ಆ ವಿಶ್ಲೇಷಣೆಯ ಫಲಿತಾಂಶವನ್ನು ಸಂಕ್ಷಿಪ್ತವಾಗಿ ಹೇಳುವುದು ಅಪ್ರಸ್ತುತವಾಗಲಾರದು. ಒಂದು ವರ್ಷದಲ್ಲಿ ಸರಬರಾಜಾದ ಔಷಧ ಸಾಮಗ್ರಿಗಳ ವಿವರಗಳನ್ನು

ನೋಡಿದಾಗ ಶೇಕಡ ೧೫ರಷ್ಟು ರಖಮುಗಳ ಖರೀದಿಗೆ ಆಸ್ಪತ್ರೆಗೆ ಮಂಜೂರಾದ ಶೇ. ೭೫ ರಿಂದ ೮೦ ರಷ್ಟು ಹಣ ವ್ಯಯಾಗುತ್ತಿರುವುದು ಕಂಡು ಬಂದಿತು. ಅಂತಹ ರಖಮುಗಳೆಂದರೆ ಜೀವಿರೋಧಕ ಮದ್ದುಗಳು, ಗ್ಲೂಕೋಸ್ ಮುಂತಾದ ದ್ರವ ಪದಾರ್ಥಗಳ ಬಾಟಲುಗಳು, ಬ್ಯಾಂಡೇಜ್ ಬಟ್ಟೆ ಇತ್ಯಾದಿಗಳೇ ಹೆಚ್ಚಾಗಿದ್ದವು. ಯಾವುದೇ ಆಸ್ಪತ್ರೆಯೊಂದರಲ್ಲಿ ಇಂತಹ ಸಾಮಗ್ರಿಗಳಿಗೇ ಹೆಚ್ಚಿನ ಬೇಡಿಕೆ ಇರುತ್ತದೆಂಬುದರಲ್ಲಿ ಅನುಮಾನವಿರುವುದಿಲ್ಲ. ಆಸ್ಪತ್ರೆಗಳಲ್ಲಿ ಇಂತಹ ರಖಮುಗಳ ಕೊರತೆ ಇರುವುದರ ಬಗೆಗೇ ಜನಸಾಮಾನ್ಯರಿಂದ ದೂರುಗಳು ಬರುವುದು ನಮ್ಮೆಲ್ಲರ ಅನುಭವವಾಗಿರುತ್ತಿದ್ದರೂ, ಆಡಳಿತದ ಚುಕ್ಕಾಣಿ ಹಿಡಿದವರ ಗಮನ ಅತ್ತ ಹರಿಯದೆ ಇರುವುದು ಅಪರೂಪವೇನಲ್ಲ. ಅವುಗಳ ಸರಬರಾಜಿನ ಜವಾಬ್ದಾರಿಯನ್ನು ಸಮರ್ಥವಾಗಿ ನಿರ್ವಹಿಸಿದರೆ ಆಸ್ಪತ್ರೆಗಳ ಬಹುಪಾಲು ದೂರುಗಳನ್ನು ಕಡಿಮೆ ಮಾಡಲು ಸಾಧ್ಯವಾಗಬಹುದು. ಆಸ್ಪತ್ರೆಗಳಿಗೆ ಸರಬರಾಜಾಗುವ ಇತರ ಎಲ್ಲಾ ಔಷಧಗಳಂತೆಯೇ ಇವುಗಳ ಸರಬರಾಜು ವ್ಯವಸ್ಥೆಯ ಹೊಣೆಯೂ ಆರ್.ಎಂ.ಓ. ಅಂತಹ ಮಧ್ಯಮ ಶ್ರೇಣಿಯ ಅಧಿಕಾರಿಯದ್ದಾಗಿರುತ್ತದೆ. ಅಂತಹ ಹುದ್ದೆಯಲ್ಲಿರುವ ಬಹುಪಾಲು ವೈದ್ಯರು ತಾವು ಗಳಿಸಿಕೊಂಡಿರುವ ವಿಶೇಷತೆಗಳ (Speciality) ನಿರ್ವಹಣೆಯಲ್ಲಿ ಮಗ್ನರಾಗಿದ್ದು ಔಷಧ ಸಾಮಗ್ರಿಗಳ ಸರಬರಾಜಿನ ಬಗೆಗೆ ಹೆಚ್ಚಿನ ಗಮನ ವಹಿಸಲು ಸಾಧ್ಯವಾಗಲಾರದು. ಆದರಿಂದ ಸಾಮಾನ್ಯವಾಗಿ ಔಷಧ ಉಗ್ರಾಣದ ಕರ್ತವ್ಯ ನಿರತ ಫಾರ್ಮಸಿಸ್ಟ್/ಕಾಂಪೌಂಡರ್ ಆಗಿಂದಾಗ್ಗೆ ಸೂಚಿಸುವ ಅವಶ್ಯಕವೆನಿಸಿದ ರಖಮುಗಳಿಗೆ ಆದೇಶ ನೀಡಲು ಸಮ್ಮತಿಸುತ್ತಾರಷ್ಟೆ. ಆದುದರಿಂದ ಇಂತಹ ಪ್ರಮುಖ ಬಾಬತ್ತುಗಳ ಖರೀದಿಯ ಜವಾಬ್ದಾರಿ ಆಸ್ಪತ್ರೆ ನಿರ್ವಹಣೆಯ ಉನ್ನತ ಮಟ್ಟದ ಅಧಿಕಾರಿಯೊಬ್ಬರ ಮೇಲ್ವಿಚಾರಣೆಯಲ್ಲಿ ಜರುಗುವಂತಿದ್ದರೆ ಪರಿಸ್ಥಿತಿಯನ್ನು ಬಹಳಷ್ಟು ಸುಧಾರಿಸಬಹುದು. ಅಲ್ಲದೆ ಲಭ್ಯವಿರುವ ಹಣಕಾಸಿನ ಮೊತ್ತವನ್ನನುಸರಿಸಿ, ಅವಶ್ಯಕತೆಗಳ ದೃಷ್ಟಿಯಿಂದ ಸಾಮಾಗ್ರಿಗಳನ್ನು ಕಂಪನಿಗಳಿಂದ ತರಿಸಿಕೊಳ್ಳುವ ಏರ್ಪಾಡು ಮಾಡುವಂತಾಗಬೇಕು.

ಇದೇ ರೀತಿಯಲ್ಲಿ ಆಸ್ಪತ್ರೆ ಕಟ್ಟಡಗಳನ್ನು ನಿರ್ಮಿಸುವಾಗ ಆಧುನಿಕ ಮ್ಯಾನೇಜ್‌ಮೆಂಟ್ ತತ್ವಗಳನ್ನು ಅನುಸರಿಸುವುದರ ಮಹತ್ವವನ್ನು ಮನದಟ್ಟು ಮಾಡಿದರು. ಆಸ್ಪತ್ರೆಗಳ ವಿವಿಧ ವಿಭಾಗಗಳಲ್ಲಿ ಕಾರ್ಯ ನಿರ್ವಹಿಸುವ ಎಲ್ಲಾ ಬಗೆಯ ಸಿಬ್ಬಂದಿಯವರ ಅನಾವಶ್ಯಕ ಚಲನವಲನಗಳನ್ನು ಮಿತಿಗೊಳಿಸುವುದನ್ನು ಅವುಗಳನ್ನು ಯೋಜಿಸುವ ಹಂತದಲ್ಲೇ ಹೇಗೆ ಅಳವಡಿಸಬೇಕೆಂಬುದನ್ನು ಪ್ರತ್ಯಕ್ಷ ನಿದರ್ಶನಗಳಿಂದ ಶ್ರುತ ಪಡಿಸಿದರು. ಕಟ್ಟಡಗಳ ನಿರ್ಮಾಣದಲ್ಲಿ PERT - Project Evaluation and Review Technic ಮತ್ತು C.P.M. - Critical Pathway Method - ನಿಯಮಗಳನ್ನು ಅನುಸರಿಸುವುದರಿಂದ, ಅವುಗಳ ನಿರ್ಮಾಣ ಹಂತಗಳ ವಿಳಂಬ, ನಿರ್ಮಾಣದ ವೆಚ್ಚವನ್ನು ಮಿತಿಗೊಳಿಸುವುದರಲ್ಲಿ ಅವುಗಳ ಉಪಯುಕ್ತತೆ, ನಿರ್ಮಾಣಕಾರ್ಯ ಮುಗಿದಾಕ್ಷಣ ಉದ್ದೇಶಿತ ಧ್ಯೇಯಗಳಿಗೆ ಅವುಗಳನ್ನು ಯಾವುದೇ ಅಡೆತಡೆಗಳಿಲ್ಲದೆ ಉಪಯೋಗಿಸಿಕೊಳ್ಳಬಹುದಾದ ಸಾಧ್ಯತೆಗಳು ಮನವರಿಕೆಯಾದವು. ಪ್ರಸ್ತುತ ನಮ್ಮ ರಾಜ್ಯವೇ ಅಲ್ಲದೆ ದೇಶದ ವಿವಿಧೆಡೆಗಳಲ್ಲಿ ಗಣ್ಯಾತಿಗಣ್ಯರಿಂದ ಹಲವು ದಶಕಗಳ ಹಿಂದೆ ಶಂಕುಸ್ಥಾಪನೆ ಮಾಡಿಸಿ, ಅರ್ಧಂಬರ್ಧ ಕೆಲಸವಾಗಿ ನಿಂತಿರುವ 'ಹಳೆಯ ಪಳೆಯುಳಿಕೆ' ಯಂತಿರುವ ಸಾವಿರಾರು ನಿದರ್ಶನಗಳನ್ನು ನೋಡಬಹುದು. ಅವುಗಳ ನಿರ್ಮಾಣದ ವಿವಿಧ ಸಮಸ್ಯೆಗಳನ್ನು ಮುಂಗಾಣದೆ ಯಾವುದೇ ಸಣ್ಣ ತಡೆಯಾದರೂ ಮುಂದೆ ಪ್ರಗತಿಯಾಗುವುದಿಲ್ಲ; ಕಟ್ಟಡ ನಿರ್ಮಾಣ ವೆಚ್ಚ ವರ್ಷದಿಂದ ವರ್ಷಕ್ಕೆ ಏರುತ್ತಾ ಹೋಗುತ್ತದೆ; ಆ ತನಕ ಖರ್ಚು

ಮಾಡಿದ ಹಣವೂ ವ್ಯರ್ಥವಾಗುತ್ತದೆ. ಎಷ್ಟೋ ಕಡೆ ಸಂಪೂರ್ಣಗೊಂಡ ಕಟ್ಟಡವೂ ವಿದ್ಯುಚ್ಛಕ್ತಿ, ನೀರು ಅಥವಾ ಇನ್ನಾವುದರದ್ದೋ ಕೊರತೆಯಿಂದ ಹಾಳು ಬಿದ್ದಿರುವುದನ್ನು ಆಗಾಗ್ಗೆ ಪತ್ರಿಕೆಗಳಲ್ಲಿ ಓದುತ್ತಿರುತ್ತೇವೆ. ಮುಂದೊದಗಬಹುದಾದ ಇಂತಹ ಸಮಸ್ಯೆಗಳನ್ನು ಆರಂಭ ಹಂತದಲ್ಲೇ ಆ ತತ್ವಾನುಸರಣೆಯಿಂದ ಗುರುತಿಸಿಕೊಂಡಿದ್ದರೆ ಆ ರೀತಿಯ ಪರಿಸ್ಥಿತಿಗಳುಂಟಾಗುತ್ತಿರಲಿಲ್ಲ. ಸುಮಾರು ಎರಡು ದಶಕಗಳ ಹಿಂದೆ ಭಾರತದ ಪ್ರಧಾನ ಮಂತ್ರಿ ಹಾಗೂ ಕರ್ನಾಟಕ ಮುಖ್ಯ ಮಂತ್ರಿಯವರಂಥ ಮಹೋದಯರಿಂದ ಆಡಂಬರದ ಪ್ರದರ್ಶನ, ಬಾಜಾಬಜಂತ್ರಿಗಳ ನಡುವೆ ಶಂಖುಸ್ಥಾಪನೆಯಾದ ಚಿಕ್ಕಮಗಳೂರು, ಶಿವಮೊಗ್ಗಾ ನಗರಗಳಲ್ಲಿ ಇನ್ನೂ ಪೂರ್ಣವಾಗದ ಕಟ್ಟಡಗಳ ಜ್ವಲಂತ ನಿದರ್ಶನಗಳು ನಮ್ಮ ಮುಂದಿವೆ. ಈ ನಿಯಮಗಳನ್ನು ಆ ತನಕ ನಾವ್ಯಾರೂ ಕೇಳಿಯೇ ಇರಲಿಲ್ಲ. ಅವುಗಳ ಬಗೆಗೆ ಇಂಜಿನಿಯರಿಂಗ್ ತಜ್ಞರು, ವಾಸ್ತುಶಿಲ್ಪ ಪರಿಣತರು, ಮ್ಯಾನೇಜ್‌ಮೆಂಟ್ ಸಲಹೆಗಾರರು ಮುಂತಾದವರಿಂದ ಭಾಷಣ, ಪ್ರಾತ್ಯಕ್ಷಿಕೆಗಳ ಮೂಲಕ ಮನದಟ್ಟು ಮಾಡಿಕೊಟ್ಟರು. ನಮ್ಮ ನಿಮ್ಮ ಸ್ವಂತ ಮನೆಗಳ ನಿರ್ಮಾಣದಲ್ಲೂ ಈ ತತ್ವಗಳ ಅನುಸರಣೆ ತುಂಬಾ ಉಪಯುಕ್ತವಾಗುತ್ತದೆ. ಆದರೆ ತಜ್ಞರೆನಿಸಿ ಕೊಂಡವರೂ ಸಹ ರಾಜಕೀಯ ಮುಖಂಡರ ಪ್ರಭಾವಗಳಿಗೆ ಮಣಿದು ಯಾವುದೇ ಪೂರ್ವಭಾವಿ ತಯಾರಿ ಮಾಡಿಕೊಳ್ಳದೆ ಕಟ್ಟಡ ನಿರ್ಮಾಣ ಆರಂಭಿಸುವುದಕ್ಕೆ ಮುಂದಾಗುವುದು ಇಂದಿನ ದಿನಗಳಲ್ಲೂ ಅಪರೂಪವೇನಲ್ಲ!

ಹರಿದ್ವಾರದ ಹತ್ತಿರ ವೀರಭದ್ರವೆಂಬ ತಾಣದಲ್ಲಿ ಪೆನಿಸಿಲಿನ್ ಮೊದಲಾದ ಜೀವಿರೋಧಕ ಮದ್ದುಗಳನ್ನು ತಯಾರಿಸುವ ಸರ್ಕಾರಿ ಸ್ವಾಮ್ಯದ Indian Drugs And Pharmaceuticals Ltd - (IDPL) ಕಾರ್ಖಾನೆಯು ಇರುವುದರ ಹೆಸರು ಕೇಳದ ವೈದ್ಯರಿಲ್ಲವೆನ್ನಬಹುದು. ಆದರೆ ಒಂದು ಪೆನಿಸಿಲಿನ್ ಇಂಜಕ್ಷನ್‌ನ್ನು ತಯಾರಿಸುವುದರ ಹಿಂದೆ ಅಡಗಿರುವ ವ್ಯವಸ್ಥೆಯ ಬಗೆಗೆ ಅದೆಷ್ಟು ಜನ ತಿಳಿದಿರುತ್ತಾರೆ? ಆ ವಿಧಿವಿಧಾನಗಳನ್ನು ತೋರಿಸಲು ಅಲ್ಲಿಗೆ ನಮ್ಮನ್ನು ಕರೆದುಕೊಂಡು ಹೋಗಿದ್ದರು. ಅವುಗಳ ತಯಾರಿಕೆಯ ಮೊದಲ ಹಂತದಲ್ಲಿ ಬಳಸುವ ಕಚ್ಚಾ ವಸ್ತುಗಳ ಆಯ್ಕೆಯಿಂದ ಹಿಡಿದು ಅಂತಿಮವಾಗಿ ಬಳಕೆಗೆ ತಯಾರಾಗುವ ಹಂತದ ವರೆಗೂ ಗುಣನಿಯಂತ್ರಣದ ವಿಧಿವಿಧಾನಗಳು ಅತ್ಯಂತ ಕಟ್ಟುನಿಟ್ಟಾಗಿ ಜರುಗುವುದು ಬೆರಗು ಗೊಳಿಸುವಂತಿತ್ತು. ಇನ್ನೂ ಆಶ್ಚರ್ಯಕರ ಸಂಗತಿಯೆಂದರೆ ಆ ಸಂಸ್ಥೆಯಲ್ಲಿ ತಯಾರಾದ ಹಲವು ಜೀವಿರೋಧಕ ಮದ್ದುಗಳನ್ನು ಬಹುಪಾಲು ಖಾಸಗಿ ಔಷಧ ಕಂಪನಿಗಳು ಸಗಟು ಪ್ರಮಾಣದಲ್ಲಿ ಖರೀದಿಸಿ ಮತ್ತೆ ಬಾಟಲೀಕರಿಸಿ, ಮೂಲ ಸಂಸ್ಥೆಯೊಡನೆ ಪೈಪೋಟಿಗಿಳಿದು ಅದಕ್ಕಿಂತಲೂ ಹೆಚ್ಚು ಲಾಭಗಳಿಸುತ್ತಿದ್ದುದು! ಬಹುಶಃ ಅಲ್ಲಿಯೂ ದಕ್ಷ ನಿರ್ವಹಣೆಯ ಕೊರತೆಯಿಂದ ಇಂತಹ ಸರ್ಕಾರಿ ಸಂಸ್ಥೆಗಳು ಸೊರಗುವಂತಾಗಿದ್ದೆನಿಸಿತು.

ಸರ್ಕಾರಿ ಸೇವೆಯಿಂದ ನಿವೃತ್ತಿ ಹೊಂದುವ ಒಂದೆರಡು ವರ್ಷಗಳಿರುವ ಮೊದಲು ಎರಡು ಕಡೆ ಆಸ್ಪತ್ರೆಗಳ ನಿರ್ವಹಣೆಯ ಬಗೆಗೆ ತರಬೇತಿಯ ಒಳ್ಳೆಯ ಅವಕಾಶಗಳೇನೋ ದೊರಕಿದವು. ಆ ತರಬೇತಿ ಸಂದರ್ಭದಲ್ಲಿ ಉಂಟಾದ ಅನುಭವಗಳನ್ನು ಜಾರಿಗೆ ತರುವಲ್ಲಿ ಅದೆಷ್ಟು ಯಶಸ್ವಿಯಾಗಿದ್ದೆನೆಂದು ಹೇಳಲಾರೆ. ಆದರೆ ಸರ್ಕಾರಿ ಕೆಲಸಗಳಿಗೆ ಸೇರುವ ಎಲ್ಲಾ ವೈದ್ಯರಿಗೂ ಇಂತಹ ತರಬೇತಿಯ ಅವಕಾಶಗಳನ್ನು ಕಲ್ಪಿಸಿದರೆ ಆಡಳಿತದ ದೃಷ್ಟಿಯಿಂದಲೇ ಅಲ್ಲದೆ ರೋಗಿಗಳಿಗೂ ಪ್ರಯೋಜನವಾಗುವುದರಲ್ಲಿ ಸಂದೇಹವಿಲ್ಲ. ಇಂತಹ ನಿಯಮಿತ ಕಾಲದ ತರಬೇತಿಗಳೇ ಅಲ್ಲದೆ ಯುವ ವೈದ್ಯರು ಈ ದಿಸೆಯಲ್ಲಿ ಲಭ್ಯವಿರುವ ಡಿಪ್ಲೋಮಾ, ಡಿಗ್ರಿ ಮತ್ತು ಸ್ನಾತಕೋತ್ತರ ಪದವಿ ಪಡೆಯುವಂತಾದರೆ ಇಡೀ ಆರೋಗ್ಯ ಇಲಾಖೆಯ ಆಡಳಿತ ವ್ಯವಸ್ಥೆಯಲ್ಲಿ

ಕ್ರಾಂತಿಕಾರಕ ಬದಲಾವಣೆಗಳನ್ನು ನಿರೀಕ್ಷಿಸಬಹುದು. ಆದರೆ ಸರ್ಕಾರದ ಮಟ್ಟದಲ್ಲಿ ಹಾಗೂ ವೈದ್ಯ ಸಮೂಹ ದವರೂ ಸಹಾ ಇಂತಹ ಪ್ರಮುಖ ಕ್ಷೇತ್ರದತ್ತ ಗಮನ ಹರಿಸದಿರುವುದು ಶೋಚನೀಯ*.

## ಮರುಕಳಿಸಿದ ಹಂದಿಗೋಡು ಕೀಲು ಬೇನೆ

ನನ್ನ ಸರ್ಕಾರಿ ಸೇವಾ ಅವಧಿಯಲ್ಲಿ ಶಿವಮೊಗ್ಗಾ ಜಿಲ್ಲೆಯ ಸಾಗರ ವಲಯದಲ್ಲಿ ಪ್ರಪಂಚದಲ್ಲೇ ಮೊದಲ ಬಾರಿಗೆ ತಲೆದೋರಿದ ಎರಡು ವಿಶಿಷ್ಟ ವ್ಯಾಧಿಗಳ ಗುಣಲಕ್ಷಣಗಳನ್ನು ತೀರಾ ಹತ್ತಿರದಿಂದ ಅಭ್ಯಾಸ ಮಾಡುವ ಅವಕಾಶಗಳು ಲಭಿಸಿದವು. ಅವುಗಳಲ್ಲಿ ಕ್ಯಾಸನೂರು ಕಾಡಿನ ಕಾಯಿಲೆಯ ಬಗೆಗೆ ಶಿಕಾರಿಪುರದಲ್ಲಿದ್ದ ಅವಧಿಯಲ್ಲಿ ಅನುಭವದ ನಿರೂಪಣೆಯಲ್ಲಿ ಪ್ರಸ್ತಾಪವಾಗಿದೆ. ಅದೇ ವಲಯದಲ್ಲಿ ೧೯೭೫ರ ಸಮಯದಲ್ಲಿ ತಲೆದೋರಿದ ಹಂದಿಗೋಡು ಕೀಲು ಬೇನೆ (Handigodu Syndrome) ಕೆಲವು ಪ್ರಕರಣಗಳನ್ನು ಮೊದಲ ಸಾರಿ ಚಿಕ್ಕಮಗಳೂರಿನಲ್ಲಿದ್ದ ಸಮಯದಲ್ಲಿ ನೋಡುವ ಅವಕಾಶ ಉಂಟಾಗಿತ್ತು. ಅದರ ಬಗೆಗೂ ನನ್ನಲ್ಲಿ ಆಸಕ್ತಿ ಉಂಟಾಗಿದ್ದು ಸಾಕಷ್ಟು ವಿಷಯ ಸಂಗ್ರಹ ಮಾಡಿದ್ದೆನಲ್ಲದೆ ನಿಯತಕಾಲಿಕಗಳಲ್ಲಿ ಲೇಖನಗಳನ್ನೂ ಪ್ರಕಟಿಸಿದ್ದೆ. ಈ ಸಾರಿ ಅದೊಂದು ನಾಟಕೀಯ ರೀತಿಯಲ್ಲಿ ಮುಖಾ ಮುಖಿಯಾಯಿತು.

ಸೆಪ್ಟೆಂಬರ್ ತಿಂಗಳ (೧೯೮೧) ಒಂದು ದಿನ ಬೆಳಿಗ್ಗೆ ಚಿಕ್ಕಮಗಳೂರಿನ ಜಿಲ್ಲಾ ಪೋಲೀಸ್ ವರಿಷ್ಠಾಧಿಕಾರಿಗಳು (ಎಸ್.ಪಿ.) ಸುಮಾರು ಹದಿನೈದು ಜನ ಅಂಗವಿಕಲ ರೋಗಿಗಳನ್ನು ಆಸ್ಪತ್ರೆಯ ನನ್ನ ಕಚೇರಿಗೆ ಕರೆ ತಂದರು. ಅವರ ಇಲಾಖೆಯ ಪೇದೆಗಳು ಶೃಂಗೇರಿ ತಾಲ್ಲೂಕಿನ ಹಾಲಂದೂರು ಎಂಬ ಹಳ್ಳಿಯ ಹರಿಜನ ಕೇರಿಗೆ ಭೇಟಿ ನೀಡಿದಾಗ ಇಂತಹ ಹಲವರು ಅಲ್ಲಿರುವುದು ಕಂಡುಬಂದಿತಂತೆ. ಅವರಲ್ಲಿ ಬಹುಪಾಲು ಹದಿಹರಯದ ಬಾಲಕ ಬಾಲಕಿಯ ರಾಗಿದ್ದು ಕುಂಟುತ್ತಾ, ತೆವಳುತ್ತಾ ಒಳಗೆ ಬಂದರು. ಆಸ್ಪತ್ರೆಗೆ ಕರೆತರುವ ಮೊದಲೇ ಅವರನ್ನು ಪತ್ರಿಕಾಗೋಷ್ಠಿಯಲ್ಲಿ ಹಾಜರುಪಡಿಸಿ ಆ ದಿಸೆಯಲ್ಲಿ ವೈದ್ಯಕೀಯ ಇಲಾಖೆಯ ನಿರ್ಲಕ್ಷ್ಯದತ್ತ ಗಮನ ಸೆಳೆದಿದ್ದರಂತೆ! ನನ್ನೊಡನೆ ಮಾತಾಡುವಾಗಲೂ ಆಸ್ಪತ್ರೆಯವರು ಅಂತಹವರನ್ನು ಗಮನಕ್ಕೆ ತೆಗೆದುಕೊಳ್ಳದಿರುವ ಬಗೆಗೆ ಆಕ್ಷೇಪಣೆ ಮಾಡಿದರು. ನಿಜ, ಅಂತಹವರ ಪರಿಸ್ಥಿತಿ ಯಾರ ಮನಸ್ಸನ್ನಾದರೂ ಕರಗಿಸುತ್ತದೆ. ಆದರೆ ಆಸ್ಪತ್ರೆಯಂಥ ಸೀಮಿತ ಕಾರ್ಯವ್ಯಾಪ್ತಿಯ ಸಂಸ್ಥೆ ಯವರು ಅವರಿದ್ದಲ್ಲಿಗೇ ಹೋಗಿ ನೆರವು ನೀಡುವುದು ಹೇಗೆ ಸಾಧ್ಯವಾಗುವುದಿಲ್ಲವೆಂಬುದನ್ನು ಅವರಿಗೆ ಮನದಟ್ಟು ಮಾಡಿದೆ. ಅಲ್ಲದೆ ಅವರನ್ನೆಲ್ಲಾ ಪರೀಕ್ಷೆ ಮಾಡಿ ಒಂದು ದಶಕದ ಹಿಂದೆ ಸಾಗರ ತಾಲ್ಲೂಕಿನ ಹಂದಿಗೋಡು ಎಂಬಲ್ಲಿ ಪತ್ತೆಯಾದ ವ್ಯಾಧಿಯೆ ಅದೆಂದು ಅವರಿಗೆ ಶ್ರುತ ಪಡಿಸಿದೆ. ಹಂದಿಗೋಡು ಕೀಲು ಬೇನೆ ಪತ್ತೆಯಾದ ಕೆಲವು ವರ್ಷಗಳು ಸಂಬಂಧಿಸಿದವರು ಕಾಳಜಿ ವಹಿಸಿದರೂ ನಂತರದ ವರ್ಷಗಳಲ್ಲಿ ಅದ್ಹೇಗೆ ನಿರ್ಲಕ್ಷ್ಯಕ್ಕೊಳಗಾಗಿದೆಯೆಂಬುದನ್ನೂ ಹೇಳಿದೆ. ಅವರನ್ನೆಲ್ಲಾ ಆಸ್ಪತ್ರೆಗೆ ಸೇರಿಸಿಕೊಂಡು ಸದ್ಯದ ತೊಂದರೆಗಳ ನಿವಾರಣೆಗೆ ಚಿಕಿತ್ಸೆಗೆ ಏರ್ಪಾಡು ಮಾಡಿದೆ. ಅವರಿಗೆಲ್ಲಾ ಅಂಗವಿಕಲತೆ ಬಗೆಗೆ ದೃಢೀಕರಣ ಪತ್ರ ನೀಡಿ ಆ ಬಗೆಗೆ

---

*ಈ ಸಾಲುಗಳನ್ನು ಬರೆಯುತ್ತಿರುವಾಗಲೇ ಕರ್ನಾಟಕದ ಆರೋಗ್ಯ ಸಚಿವರು "ವೈದ್ಯರಿಗೆ ಆಡಳಿತ ನಿರ್ವಹಣೆ ತರಬೇತಿ ಯೋಜನೆ" ಎಂಬ ಹೇಳಿಕೆ ಪ್ರಕಟವಾಗಿದೆ!(ಪ್ರಜಾವಾಣಿ, ೧೧-೩-೨೦೦೨)

ಸರ್ಕಾರದವರು ನೀಡುವ ಅಂಗವಿಕಲರ ಮಾಸಾಶನ ದೊರಕಿಸಲು ಅನುವು ಮಾಡಿಕೊಟ್ಟೆ. ಇಂತಹ ಪ್ರಕರಣಗಳು ಚಿಕ್ಕಮಗಳೂರು ಜಿಲ್ಲೆಯ ಹಲವು ಕಡೆ ಕಾಣಿಸಿಕೊಳ್ಳುತ್ತಿರುವುದರ ಬಗೆಗೆ ಆರೋಗ್ಯ ಇಲಾಖೆಗೆ ವರದಿಯನ್ನು ಕಳುಹಿಸಿದೆ.

ಮುಂದಿನ ಕೆಲವು ದಿನಗಳಲ್ಲಿ ಸ್ಥಳೀಯ ಹಾಗೂ ರಾಜ್ಯ ಮಟ್ಟದ ಪತ್ರಿಕೆಗಳಲ್ಲಿ ಈ ಪ್ರಕರಣಗಳ ಸಚಿತ್ರ ವರದಿಗಳಾದವು. ವಿಧಾನ ಸಭೆಯಲ್ಲೂ ಅದರ ಪ್ರತಿಧ್ವನಿ ಮೊಳಗಿತು. ಮುಂದೆ ಬೆಂಗಳೂರಿನಿಂದ ಮೂಳೆರೋಗಗಳ ತಜ್ಞರೇ ಅಲ್ಲದೆ ಇತರ ವಿಷಯ ತಜ್ಞರ ತಂಡಗಳೂ ಆ ರೋಗಿಗಳಿದ್ದ ಹಳ್ಳಿಗಳಿಗೆ ಭೇಟಿ ನೀಡಲಾರಂಭಿಸಿದರು. ಅಂತಹ ಒಂದು ತಂಡದಲ್ಲಿ ನಾನೂ ಭಾಗಿಯಾಗಿದ್ದೆ. ಅವರಿದ್ದ ಪರಿಸರ, ಬಳಸುತ್ತಿದ್ದ ಆಹಾರ ಪದಾರ್ಥಗಳೇ ಅಲ್ಲದೆ ನೆಲ, ಜಲ ಮುಂತಾದವುಗಳ ಮಾದರಿಗಳನ್ನು ಕೊಂಡುಹೋಗಿ ಪರೀಕ್ಷೆಗೊಳಪಡಿಸಿದರು. ಆದರೂ ಈ ತನಕ ಆ ಬೇನೆಯ ಕಾರಣಗಳ ಬಗೆಗೆ ಯಾವುದೇ ಸ್ಪಷ್ಟ ಮಾಹಿತಿ ದೊರೆತಿಲ್ಲ. ತೀರಾ ಇತ್ತೀಚಿನ ದಿನಗಳಲ್ಲಿ ಹಿಂದೆ ಜಪಾನಿನಲ್ಲಿ ಕಾಣಿಸಿಕೊಂಡಿದ್ದ 'ಇಟಾಯಿ ಇಟಾಯಿ' ಕೀಲು ಬೇನೆಗೆ ಕಾರಣ ವೆನ್ನಲಾಗಿದ್ದ "ಕ್ಯಾಡ್‌ಮಿಯಂ" (Cadmium) ಭಾರಲೋಹ ವಿಷತೆಯಂತಹ ಕಾರಣವೇ ಇದಕ್ಕೂ ಆಗಿರಬಹುದೆಂಬ ಸೂಚನೆಗಳಿದ್ದರೂ, ಆ ಬಗೆಗೆ ಇನ್ನೂ ಮುಂದುವರಿದ ಪರೀಕ್ಷೆಗಳಾಗ ಬೇಕಿದೆ.

## ಉದರ ದರ್ಶಕ ಸಂತಾನ ನಿಯಂತ್ರಣ ಚಿಕಿತ್ಸೆಯಲ್ಲಾದ ತೊಡಕು

ಕುಟುಂಬ ನಿಯಂತ್ರಣ ಯೋಜನೆಯಡಿಯಲ್ಲಿ ಉದರ ದರ್ಶಕ ಸಂತಾನ ನಿಯಂತ್ರಣ ಶಸ್ತ್ರಚಿಕಿತ್ಸೆ (Laparoscopic Tubectomy) ಯನ್ನು ವ್ಯಾಪಕವಾಗಿ ಜರುಗಿಸುತ್ತಿದ್ದ ಕಾಲವದು. ಚಿಕ್ಕಮಗಳೂರಿನಲ್ಲೂ ಅಂತಹ ಒಂದು ಶಿಬಿರವನ್ನು ಏರ್ಪಡಿಸಲಾಯಿತು. ಆಸ್ಪತ್ರೆಯ ಪಕ್ಕದಲ್ಲಿದ್ದ ಶಾಲೆಯೊಂದರಲ್ಲಿ ಅದರ ಕಾರ್ಯಕ್ರಮಗಳೆಲ್ಲಾ ಜರುಗುವಂತೆ ಏರ್ಪಾಡು ಮಾಡಿದೆವು. ಜಿಲ್ಲಾ ಆರೋಗ್ಯ ಇಲಾಖೆಯ ವತಿಯಿಂದ ಜರುಗುವ ಆ ಕಾರ್ಯಕ್ರಮದಲ್ಲಿ ಆಪರೇಷನ್‌ಗೆ ಸಂಬಂಧಿಸಿದ ವ್ಯವಸ್ಥೆಗಳ ಮೇಲ್ವಿಚಾರಣೆ ಆಸ್ಪತ್ರೆಯವರದ್ದಾಗಿತ್ತು. ಆ ಬಗೆಗೆ ಎಲ್ಲಾ ಏರ್ಪಾಡುಗಳನ್ನು ವೈಯಕ್ತಿಕವಾಗಿ ಮುತುವರ್ಜಿ ವಹಿಸಿ ಮಾಡಿಸಿದೆ. ಸುಮಾರು ೭೫-೮೦ ಅರ್ಹ ಮಹಿಳೆಯರು ಹಿಂದಿನ ದಿನವೇ ದಾಖಲಾಗಿದ್ದರು. ಆಪರೇಷನ್ ಜರುಗಿಸಲು ಹುಬ್ಬಳ್ಳಿಯಿಂದ ಆ ವಿಧಾನದಲ್ಲಿ ನುರಿತ ಇಬ್ಬರು ಶಸ್ತ್ರವೈದ್ಯರು ಬಂದಿದ್ದರು.

ಮರುದಿನ ಬೆಳಿಗ್ಗೆ ಇಬ್ಬರೂ ವೈದ್ಯರು ತಮ್ಮ ಕಾರ್ಯದಲ್ಲಿ ತೊಡಗಿಕೊಂಡರು. ಮೇಲ್ವಿಚಾರಣೆಗಾಗಿ ನಾನು ಅಲ್ಲೇ ತಿರುಗಾಡುತ್ತಿದ್ದೆ; ಅವರಲ್ಲೊಬ್ಬ ವೈದ್ಯರು ನನ್ನ ಗಮನ ಸೆಳೆದು ಅವರತ್ತ ಕರೆದರು. ಅವರು ಆಗ ಆಪರೇಷನ್ ಮಾಡುತ್ತಿದ್ದ ಮಹಿಳೆಗೆ ಹಿಂದಿನ ಸಾರಿ ನಾನು ಅಲ್ಲಿದ್ದಾಗ ಎರಡು ಸಾರಿ ಹೊಟ್ಟೆ ನೋವಿನ ಸಲುವಾಗಿ ಆಪರೇಷನ್ ಮಾಡಿದ್ದನ್ನು ಆಕೆ ಜ್ಞಾಪಿಸಿ ದಳಂತೆ. ಆಕೆಯನ್ನು ಮಾತಾಡಿಸಿ ಒಳ್ಳೆಯದಾಗುತ್ತದೆಂದು ಭರವಸೆ ನೀಡಿ ಮುಂದುವರಿದೆ.

ಮಧ್ಯಾಹ್ನದ ಹೊತ್ತಿಗೆ ಅದೇ ಮಹಿಳೆಯ ಸಾಮಾನ್ಯ ಪರಿಸ್ಥಿತಿ ಇಳಿಮುಖವಾಗುತ್ತಿರು ವುದರ ಬಗೆಗೆ ನನಗೆ ವರದಿ ಬಂದಿತು. ಕೂಡಲೇ ಅವಳಿದ್ದಲ್ಲಿಗೆ ಧಾವಿಸಿ ಪರೀಕ್ಷೆ ಮಾಡಿದೆ. ಅವಳು ತುಂಬಾ ಬಿಳಚಿಕೊಂಡಂತೆ ಕಂಡಳು; ತುಂಬಾ ಬೆವರುತ್ತಿದ್ದಳು; ನಾಡಿ ಮಿಡಿತದ ಗತಿ ಏರಿಕೆಯಾಗುತ್ತಿದ್ದು, ರಕ್ತದೊತ್ತಡ ಕಡಿಮೆಯಾಗಿತ್ತು. ಆಕೆಗೆ ಆಪರೇಷನ್ ಮಾಡಿದ ವೈದ್ಯರನ್ನು ತಕ್ಷಣ ಅಲ್ಲಿಗೆ ಬರಮಾಡಿಕೊಂಡು ಪರಿಶೀಲಿಸುವಂತೆ ಮಾಡಿದೆ. ಪರೀಕ್ಷೆ ಮಾಡಿದ ಅವರು

ಆಕೆಯಲ್ಲಿ ಬಹುಶಃ ರಕ್ತದ ಪ್ರಮಾಣ ಕಡಿಮೆಯಾಗಿರಬಹುದಾದ್ದರಿಂದ ಹಾಗಾಗಿರಬೇಕೆಂದು ಅಭಿಪ್ರಾಯ ಪಟ್ಟರು; ಹಾಗೂ ಒಂದೆರಡು ಬಾಟಲು ಗ್ಲೂಕೋಸ್ ನೀಡಲು ಸೂಚಿಸಿದರು. ಅವಳ ಪರಿಸ್ಥಿತಿಯ ಮೇಲೆ ತೀವ್ರ ನಿಗಾ ವಹಿಸುವ ಸಲುವಾಗಿ ತುರ್ತು ಚಿಕಿತ್ಸಾ ವಾರ್ಡಿಗೆ ವರ್ಗಾಯಿಸಿದೆವು. ಹಾಗೂ ವೈದ್ಯರು ಸೂಚಿಸಿದಂತೆ ಗ್ಲೂಕೋಸ್ ಬಾಟಲುಗಳನ್ನೂ ನೀಡುವ ಏರ್ಪಾಡು ಮಾಡಿದೆವು. ಸಾಯಂಕಾಲದ ಸಮಯಕ್ಕೆ ಆಕೆಯ ಪರಿಸ್ಥಿತಿ ಸುಧಾರಿಸಿದಂತೆ ಕಂಡು ಬಂದಿತು.

ಎಲ್ಲರ ಆಪರೇಷನ್‌ಗಳು ಮುಗಿಯುವ ಹೊತ್ತಿಗೆ ರಾತ್ರಿಯಾಯಿತು. ಆ ದಿನ ಆಪರೇಷನ್ ಮಾಡಿದ ಇಬ್ಬರೂ ಸರ್ಜನರು, ರೋಗಿಗಳಿದ್ದ ವಾರ್ಡುಗಳಿಗೆ ಭೇಟಿ ನೀಡಿ ಎಲ್ಲರ ಸ್ಥಿತಿಗತಿಗಳ ಬಗೆಗೆ ವಿಚಾರಿಸಿದರು. ತುರ್ತು ಚಿಕಿತ್ಸಾ ವಾರ್ಡಿನಲ್ಲಿದ್ದ ಮಹಿಳೆಯನ್ನೂ ಪರೀಕ್ಷಿಸಿ, ಆಕೆಯ ಪರಿಸ್ಥಿತಿ ಸುಧಾರಿಸಿದೆಯೆಂದು ಅಭಿಪ್ರಾಯಪಟ್ಟು, ಅದೇ ರೀತಿಯ ಚಿಕಿತ್ಸೆಯನ್ನು ಮುಂದುವರಿಸುವ ಸಲಹೆ ಮಾಡಿದರು. ಅನಂತರ ಭೋಜನ ಮುಗಿಸಿ ರಾತ್ರಿಯೇ ಕಾರಿನಲ್ಲಿ ಹುಬ್ಬಳ್ಳಿಯತ್ತ ಪ್ರಯಾಣ ಮಾಡಿದರು.

ಶಸ್ತ್ರವೈದ್ಯರಿಬ್ಬರನ್ನು ಕಳುಹಿಸಿದ ನಂತರ ಆಪರೇಷನ್ ಆದವರೆಲ್ಲರನ್ನೂ ಮತ್ತೊಂದು ಸಾರಿ ನೋಡುವ ಸಲುವಾಗಿ ಎಲ್ಲಾ ವಾರ್ಡುಗಳಿಗೂ ಹೋದೆ. ತುರ್ತು ಚಿಕಿತ್ಸೆಯ ವಾರ್ಡಿಗೆ ಬಂದಾಗ ಆಶ್ಚರ್ಯ ಕಾದಿತ್ತು. ಆಕೆಯ ಹೊಟ್ಟೆಯ ತೂತಿಗೆ ಅಂಟಿಸಿದ್ದ ಬ್ಯಾಂಡೇಜಿನ ಪಕ್ಕದಲ್ಲಿ ದುರ್ಗಂಧ ಭರಿತ ಮಲದಂಥ ದ್ರವ ಹೊರಸೂಸುತ್ತಿತ್ತು. ಅಂದರೆ ಆಪರೇಷನ್‌ಗಾಗಿ ಲೋಹದ ಉದರ ದರ್ಶಕ ನಳಿಕೆಯನ್ನು ಹೊಟ್ಟೆಯೊಳಗೆ ತೂರಿಸಿದಾಗ ಅದು ಕರುಳನ್ನು ತೂತು ಮಾಡಿತ್ತು ಎಂದರ್ಥ!

ಮುಂದೇನಾಗಬಹುದೆಂಬುದರ ಬಗೆಗೆ ಒಂದು ಕ್ಷಣ ಯೋಚಿಸಿದೆ. ಆಪರೇಷನ್ ಮಾಡಿದ ಸರ್ಜನ್‌ರನ್ನೇ ಮತ್ತೆ ಕರೆಸುವುದು ಉಚಿತವೆನಿಸಿತು. ಬಹುಪಾಲು ಅವರು ಕಡೂರನ್ನು ದಾಟಿ ಹೋಗಿರಲಾರದೆಂಬ ಅಂದಾಜಿನಿಂದ ಪೋಲೀಸ್ ಕಂಟ್ರೋಲ್‌ರೂಂನಿಂದ ಕಡೂರು ಸ್ಟೇಷನ್ನಿನ ಪೋಲೀಸರನ್ನು ಸಂಪರ್ಕಿಸಿದೆವು. ಕಾರಿನ ಚಹರೆಯನ್ನು ತಿಳಿಸಿ, ಸಿಕ್ಕರೆ ಅವರನ್ನು ನಮ್ಮಲ್ಲಿಗೆ ವಾಪಸು ಕಳುಹಿಸುವಂತೆ ಕೇಳಿಕೊಂಡೆವು. ಆದರೆ ಅಂತಹದೊಂದು ಕಾರು ಸ್ವಲ್ಪ ಸಮಯದ ಹಿಂದೆ ಮುಂದೆ ಹೋಗಿತ್ತೆಂಬ ಉತ್ತರ ದೊರೆಯಿತು.

ಮುಂದಿನ ಚಿಕಿತ್ಸೆಯನ್ನು ನಾವೇ ಕೈಗೊಳ್ಳಬೇಕೆಂಬ ನಿರ್ಧಾರ ಅನಿವಾರ್ಯವಾಗಿತ್ತು. ಮೊದಲಿಗೆ ಇಳಿಮುಖವಾಗುತ್ತಿದ್ದ ಆಕೆಯ ಪರಿಸ್ಥಿತಿಯನ್ನು ಉತ್ತಮಗೊಳಿಸಬೇಕಾಗಿತ್ತು. ಆಸ್ಪತ್ರೆಯ ವೈದ್ಯರು ಮತ್ತಿತರ ಸಿಬ್ಬಂದಿಗಳೆಲ್ಲಾ ಮುತುವರ್ಜಿ ವಹಿಸಿ, ಎರಡು ಬಾಟಲಿ ರಕ್ತ ಶೇಖರಿಸಿ ನೀಡಿದೆವು. ಪರಿಸ್ಥಿತಿ ಸ್ವಲ್ಪ ಉತ್ತಮವಾದ ನಂತರ ಬೆಳಗಿನ ಜಾವ ಆಪರೇಷನ್ ಮಾಡಿದೆವು. ಆಕೆಗೆ ಹಿಂದಿನ ಸಾರಿ ಆಗಿದ್ದ ಎರಡು ಆಪರೇಷನ್‌ಗಳ ಪರಿಣಾಮದಿಂದ ಸಣ್ಣ ಕರುಳಿನ ಸುರುಳಿಗಳು ಅಲ್ಲಲ್ಲೇ ಅಂಟಿಕೊಂಡು ಮುದ್ದೆಯಂತಾಗಿದ್ದವು. ಕರುಳಿನ ಎರಡು ಕಡೆ ನಳಿಕೆ ತೂರಿದ್ದರಿಂದ ತೂತುಗಳಾಗಿದ್ದವು. ಉದರ ಕೋಶದ ತುಂಬೆಲ್ಲಾ ಮಲದ ದ್ರವ ಹರಡಿ ಕೊಂಡಿತ್ತು. ಅದನ್ನೆಲ್ಲಾ ಹೊರತೆಗೆದು ಶುಚಿಗೊಳಿಸಲಾಯಿತು. ತೂತಾಗಿದ್ದ ಕರುಳಿನ ಭಾಗವನ್ನು ಕತ್ತರಿಸಿ ತೆಗೆದು, ಎರಡು ತುದಿಗಳನ್ನು ಬಾಯಿಗೂಡಿಸಿ ಹೊಲಿಗೆ(Anastomosis) ಹಾಕಲಾಯಿತು. ಆಪರೇಷನ್ ಮುಂದುವರಿಯುತ್ತಿದ್ದಂತೆ ಇನ್ನೂ ಎರಡು ಬಾಟಲು ರಕ್ತ ನೀಡಲಾಯಿತು.

ಮರುದಿನ ಆಕೆಯ ಪರಿಸ್ಥಿತಿ ಸ್ವಲ್ಪ ಸುಧಾರಿಸಿದಂತೆ ಕಂಡರೂ, ಅಪಾಯದಿಂದ ಪಾರಾಗಿದ್ದಳೆಂದು ಪರಿಗಣಿಸುವಂತಿರಲಿಲ್ಲ. ಮುಂದೆ ಆಕೆಯನ್ನು ತುಂಬಾ ನಿಗಾವಹಿಸಿ ನೋಡಿಕೊಳ್ಳುವ ವ್ಯವಸ್ಥೆ ಮಾಡಿದೆವು. ಜಿಲ್ಲಾ ಆರೋಗ್ಯ ಇಲಾಖೆಯವರು ಹಿರೇಮಗಳೂರಿನ ವೈದ್ಯರನ್ನು ಕೆಲವು ದಿನಗಳು ನಮ್ಮ ಆಸ್ಪತ್ರೆಯಲ್ಲಿದ್ದುಕೊಂಡು ಎಡೆಬಿಡದೆ ಆಕೆಯ ಪರಿಸ್ಥಿತಿಯ ಕಡೆ ಗಮನವಿಡುವಂತೆ ಮಾಡಿದರು. ಆದರೂ ಆಕೆಯ ಚೇತರಿಕೆ ಅಷ್ಟೇನೂ ಆಶಾದಾಯಕವಾಗಿರಲಿಲ್ಲ. ನಾಲ್ಕೈದು ದಿನಗಳಾದ ಮೇಲೆ ಒಂದು ಭಾನುವಾರ ಮಧ್ಯಾಹ್ನ ಹೆರಿಗೆ ಆಸ್ಪತ್ರೆಯಲ್ಲಿ ಗಂಭೀರ ಸ್ಥಿತಿಯಲ್ಲಿದ್ದ ಬೇರೊಂದು ರೋಗಿಯನ್ನು ನೋಡಲು ನನಗೆ ಕರೆ ಕಳುಹಿಸಿದ್ದರು. ಆ ರೋಗಿಯನ್ನು ನೋಡಿಕೊಂಡು ವಾಪಸಾಗುವಾಗ ನಮ್ಮ ತುರ್ತು ಪರಿಸ್ಥಿತಿಯ ರೋಗಿಯನ್ನು ನೋಡುವ ಮನಸ್ಸಾಯಿತು. ಅಷ್ಟರಲ್ಲಿ ಅವಳ ಪರಿಸ್ಥಿತಿ ತುಂಬಾ ಹದಗೆಟ್ಟಿತ್ತು. ಕೂಡಲೇ ಚೇತರಿಕೆಗಾಗಿ ಮತ್ತಷ್ಟು ಕ್ರಮಗಳನ್ನು ಜಾರಿಮಾಡಿದೆವು. ಅವಾವುವೂ ಫಲಕಾರಿಯಾಗಲಿಲ್ಲ; ಸಂಜೆಯ ಹೊತ್ತಿಗೆ ಅಸು ನೀಗಿದಳು. ಆಕೆಯ ಪರಿಸ್ಥಿತಿಯ ಬಗೆಗೆ ನಿಗಾವಹಿಸಲು ನಿಯೋಜಿಸಿದ್ದ ಹಿರೇಮಗಳೂರಿನ ವೈದ್ಯರು ಅಂದು ಬೆಳಗಿನಿಂದಲೇ ನಾಪತ್ತೆಯಾಗಿದ್ದರಂತೆ!

ಈ ಪ್ರಕರಣದ ಬಗೆಗೆ ಮರುದಿನವೇ ಆಪರೇಷನ್ ಮಾಡಿದ ಹುಬ್ಬಳ್ಳಿಯ ತಜ್ಞ ವೈದ್ಯರಿಗೆ ನನ್ನ ಅಸಮಾಧಾನವನ್ನು ವ್ಯಕ್ತಪಡಿಸಿ ಪತ್ರ ಬರೆದೆ. ಹಿಂದೊಮ್ಮೆ ಯಾವುದೇ ಕಾರಣದಿಂದ ಹೊಟ್ಟೆಯನ್ನು ತೆರೆದು ಆಪರೇಷನ್‌ಗೊಳಗಾದವರಲ್ಲಿ ಕರುಳಿನ ಸುರುಳಿಗಳು ಹಾಗೂ ಹೊಟ್ಟೆಯ ಭಿತ್ತಿಗೂ ಒಂದಕ್ಕೊಂದು ಅಂಟಿಕೊಳ್ಳುವ (Adhesions) ಸಾಧ್ಯತೆಗಳಿದ್ದೇ ಇರುತ್ತವೆ. ಅಂತಹವರ ಹೊಟ್ಟೆಯೊಳಗೆ ಮತ್ತೆ ಆಪರೇಷನ್ ಮಾಡಲೇ ಬೇಕಾದ ಪ್ರಸಂಗ ಒದಗಿದರೆ ಮತ್ತೆ ಹೊಟ್ಟೆಯನ್ನು ತೆರೆದೇ ಆಪರೇಷನ್ ಮಾಡುವುದು ಸರಿಯಾದ ಕ್ರಮ. ಹೊಟ್ಟೆಯೊಳಗಡೆ ಕರುಳಿನ ಪರಿಸ್ಥಿತಿ ಏನಾಗಿರಬಹುದೆಂಬುದನ್ನು ಗಣನೆಗೆ ತೆಗೆದುಕೊಳ್ಳದೇ ನೇರವಾಗಿ ವೀಕ್ಷಿಸದೆ (blindly) ಉದರ ದರ್ಶಕ ಯಂತ್ರದ ನಳಿಕೆಯನ್ನು ತೂರಿಸಿ ಟ್ಯೂಬೆಕ್ಟಮಿ ಮಾಡುವುದರ ಔಚಿತ್ಯವನ್ನು ಪ್ರಶ್ನಿಸಿದ್ದೆ, ನನ್ನ ಪತ್ರದಲ್ಲಿ. ಅವರು ಹಿಂದೆ ಕೆಲವು ಸಾರಿ ಅಂತಹ ಸಂದರ್ಭಗಳಲ್ಲಿ ಅದೇ ವಿಧಾನವನ್ನು ಅನುಸರಿಸಿದ್ದರೂ, ಇಂತಹ ದುರ್ಘಟನೆ ಜರುಗಿರಲಿಲ್ಲವೆಂದು ಉತ್ತರಿಸಿದರಲ್ಲದೆ, ಈ ಪ್ರಕರಣ ಅವರ ಕಣ್ಣು ತೆರೆಯಿಸಿತೆಂದು ಹೇಳಿ ಮುಂದೆ ಆ ರೀತಿಯವರಿಗೆ ಉದರದರ್ಶಕ ಟ್ಯೂಬೆಕ್ಟಮಿ ಮಾಡುವುದಿಲ್ಲವೆಂದೂ, ಮತ್ತು ಆ ಕ್ಷೇತ್ರದಲ್ಲಿರುವ ಇತರರ ಗಮನಕ್ಕೂ ತರುವುದಾಗಿ ತಿಳಿಸಿದ್ದರು. ಕುಟುಂಬ ಕಲ್ಯಾಣ ಇಲಾಖೆಯ ನಿರ್ದೇಶಕರಿಗೂ ಈ ಬಗೆಗೆ ವರದಿ ಕಳುಹಿಸಿದ್ದೆ. ಅವರೂ ಸಹಾ ಈ ಕಾರ್ಯದಲ್ಲಿ ತೊಡಗಿರುವವರಿಗೆಲ್ಲಾ ಸುತ್ತೋಲೆ ಕಳುಹಿಸಿ ಒಂದು ಸಾರಿ ಹೊಟ್ಟೆಯ ಆಪರೇಷನ್ ಆದವರಿಗೆ ಉದರ ದರ್ಶಕ ವಿಧಾನವನ್ನು ಅಳವಡಿಸದಂತೆ ಸೂಚಿಸಿದರು.

## ಸಲಕರಣೆಗಳ ರಿಪೇರಿಯ ಅವ್ಯವಸ್ಥೆ

ಆಸ್ಪತ್ರೆಯ ಎಕ್ಸ್‌ರೇ ಯಂತ್ರ ಒಂದು ಸಾರಿ ಕೆಟ್ಟುಹೋಯಿತು. ಆ ಬಗೆಗೆ ಇಲಾಖೆಗೆ ವರದಿ ಮಾಡಿ ದುರಸ್ತಿ ಮಾಡಿಸುವ ಏರ್ಪಾಡು ಮಾಡಬೇಕೆಂದು ಕೇಳಿಕೊಂಡೆವು. ಇಲಾಖೆಯಲ್ಲಿ ಆ ಬಗೆಗೆ ಇದ್ದ ತಾಂತ್ರಿಕ ಇಂಜಿನಿಯರ್ ನಮ್ಮ ಎಕ್ಸ್‌ರೇ ಯಂತ್ರದ ಒಳವಿನ್ಯಾಸದ ಬಗೆಗೆ ಇರುವ ಪ್ಲಾನ್‌ನ ನಕಾಶೆಯ ಪ್ರತಿಯನ್ನು ಕಳುಹಿಸಿಕೊಡುವಂತೆ ಪತ್ರ ಬರೆದರು. ಯಂತ್ರ ಸರಬರಾಜಾಗಿ ಹದಿನೈದು ವರ್ಷಗಳ ಮೇಲಾಗಿದ್ದು ಅಂತಹ ನಕಾಶೆ ನಮ್ಮಲ್ಲಿ ಲಭ್ಯವಿಲ್ಲವೆಂದು ಉತ್ತರಿಸಿದೆವು.

ಮುಂದೆ ನಾಲ್ಕಾರು ತಿಂಗಳು ಸಂದರೂ ಇಲಾಖೆಯವರು ಅದರ ರಿಪೇರಿಯ ಬಗೆಗೆ ಯಾವುದೇ ಕ್ರಮ ಜರುಗಿಸಲಿಲ್ಲ. ಸಾರ್ವಜನಿಕರಿಂದ ದೂರುಗಳು ಬರಲಾರಂಭಿಸಿದವು. ಸಂದರ್ಶಕ ಸಮಿತಿಯವರೂ ನಿರ್ಣಯ ಮಾಡಿ ಹೊಸದೊಂದು ಎಕ್ಸ್‌ರೇ ಯಂತ್ರವನ್ನು ಮಂಜೂರು ಮಾಡಬೇಕೆಂದು ಒತ್ತಾಯ ಮಾಡಲಾರಂಭಿಸಿದರು. ಕೆಲ ಕಾಲಾನಂತರ ಸರ್ಕಾರದವರು ಹೊಸ ಎಕ್ಸರೇ ಯಂತ್ರ ಮಂಜೂರು ಮಾಡಿ ಆದೇಶ ಹೊರಡಿಸಿದರು.

ಈ ನಡುವೆ, ನಮ್ಮ ಎಕ್ಸ್‌ರೇ ಯಂತ್ರದ ಕಂಪನಿಯ ಪ್ರತಿನಿಧಿಯೊಬ್ಬರು, ಮೂಡಿಗೆರೆಯಲ್ಲಿ ಅವರ ಯಂತ್ರವನ್ನು ಜೋಡಿಸುವ ಸಲುವಾಗಿ ಬಂದಿದ್ದರು. ನಮ್ಮ ಆಸ್ಪತ್ರೆಯಲ್ಲಿ ಅವರ ಕಂಪನಿಯವರು ಹಿಂದೆ ಜೋಡಿಸಿದ್ದ ಯಂತ್ರ ಹೇಗೆ ಕಾರ್ಯ ನಿರ್ವಹಿಸುತ್ತಿದೆಯೆಂಬುದನ್ನು ತಿಳಿಯುವ ಕುತೂಹಲಕ್ಕಾಗಿ ಬಂದರು. ಕೆಲ ಕಾಲದಿಂದ ಅದು ಕೆಟ್ಟು ನಿಂತಿರುವ ವಿಷಯವನ್ನು ತಿಳಿಸಿದೆವು. ಅವರೊಂದು ಸಾರಿ ಅದನ್ನು ಪರಿಶೀಲಿಸಬಹುದೇ ಎಂದು ವಿಚಾರಿಸಿದರು. ಸಮ್ಮತಿಸಿದ ನಂತರ ಯಂತ್ರವಿದ್ದೆಡೆಗೆ ಹೋಗಿ, ಅದರ ಕೆಲವು ತಂತಿಗಳನ್ನು ಎಳೆದು ಜಗ್ಗಿಸಿದರು; ಕೆಲವು ಸ್ಕ್ರೂಗಳನ್ನು ಬಿಗಿ ಮಾಡಿದರು. ಅನಂತರ ಎಕ್ಸ್‌ರೇ ಯಂತ್ರವನ್ನು ಚಾಲೂ ಮಾಡಿದರು. ಪವಾಡವೋ ಎಂಬಂತೆ ಯಂತ್ರ ಕಾರ್ಯ ನಿರ್ವಹಿಸುವಂತೆ ಮಾಡಿದರು; ಆ ಬಗೆಗೆ ಇಲಾಖೆಗಾಗಲೀ, ಅವರ ಕಂಪನಿಗಾಗಲೀ ವರದಿ ಮಾಡಬಾರದೆಂದು ಕೇಳಿಕೊಂಡರು. ಇಲಾಖೆಯವರು ಅವರ ಪರವಾನಿಗೆ ಇಲ್ಲದೆ ಕಂಪನಿಯವರಿಂದ ದುರಸ್ತಿ ಮಾಡಿಸಿದ್ದಕ್ಕೆ ಆಕ್ಷೇಪಣೆ ಎತ್ತಬಹುದು; ಕಂಪನಿಯವರು ಅಂತಹ ರಿಪೇರಿ ಮಾಡುವುದಕ್ಕೆ ಸಾಮಾನ್ಯವಾಗಿ ನಾಲ್ಕಾರು ಸಾವಿರ ರೂಪಾಯಿಗಳ ಶುಲ್ಕ ಪಡೆಯುವ ಸಾಧ್ಯತೆ ಇದ್ದು ಅದನ್ನು ತಪ್ಪಿಸಿದ್ದಕ್ಕೆ - ಅದರಲ್ಲೂ ಕಂಪನಿಯ ಅಪ್ಪಣೆ ಪಡೆಯದೆ - ಅವರ ಮೇಲೆ ಶಿಸ್ತಿನ ಕ್ರಮ ಜರುಗಿಸಲೂಬಹುದಾಗಿತ್ತು. ಅದರಂತೆ ವಿಷಯವನ್ನು ಯಥಾವತ್ತಾಗಿ ಯಾರಿಗೂ ವರದಿ ಮಾಡಲಿಲ್ಲ. ಇಲಾಖೆಗೆ ಪತ್ರ ಬರೆದು ಎಕ್ಸ್‌ರೇ ಯಂತ್ರ ಕೆಲವು ಎಲೆಕ್ಟ್ರಿಕ್ ಸಂಪರ್ಕಗಳನ್ನು ಸರಿಪಡಿಸಿದ್ದರಿಂದ ಅದೀಗ ಸರಿಯಾಗಿ ಕಾರ್ಯ ನಿರ್ವಹಿಸುತ್ತಿದೆಯೆಂದು ವರದಿ ಮಾಡಿದೆವು; ಹಾಗೂ ಹೊಸ ಯಂತ್ರ ಬೇಕಾಗಲಾರದೆಂದೂ ತಿಳಿಸಿದೆವು.

ನಮ್ಮ ವರದಿಯನ್ನು ಯಾರಾದರೂ ಗಂಭೀರವಾಗಿ ಪರಿಗಣಿಸಿದರೋ ಇಲ್ಲವೋ ತಿಳಿಯದು; ಕೆಲವೇ ದಿನಗಳಲ್ಲಿ ಹೊಸ ಎಕ್ಸ್‌ರೇ ಯಂತ್ರ ಆಸ್ಪತ್ರೆಗೆ ಬಂದಿಳಿಯಿತು. ಆದರೆ ಅದನ್ನು ಪ್ರತ್ಯೇಕವಾಗಿ ಸ್ಥಾಪಿಸಲು ಆಸ್ಪತ್ರೆಯ ಬೇರೆ ಯಾವ ಕಡೆಯೂ ಸ್ಥಳಾವಕಾಶವಿರಲಿಲ್ಲ. ಅದರಿಂದಾಗಿ ಮೊದಲಿದ್ದ ಯಂತ್ರವನ್ನು ಬೇರ್ಪಡಿಸಿ ತೆಗೆಯಲೇ ಬೇಕಾಯಿತು. ಅದನ್ನು ಕೂಡಿಡಲೂ ಸಹ ಸರಿಯಾದ ಕೊಠಡಿ ಲಭ್ಯವಿರದಿದ್ದುದರಿಂದ, ಹೆರಿಗೆ ಆಸ್ಪತ್ರೆಯ ಕೊಠಡಿಯೊಂದರಲ್ಲಿ ಇರಿಸಿದೆವು.

ಇನ್ನು ಹಳೇ ಎಕ್ಸ್‌ರೇ ಯಂತ್ರವನ್ನು ಏನು ಮಾಡಬೇಕೆಂಬುದರ ಬಗೆಗೆ ಇಲಾಖೆಯವರೊಂದಿಗೆ ಪತ್ರವ್ಯವಹಾರ ಆರಂಭಿಸಿದೆವು. ಇಲಾಖೆಯವರು ದೀರ್ಘಾಲೋಚನೆಯ ನಂತರ ಅದನ್ನು ಧಾರವಾಡದ ಜಿಲ್ಲಾ ಆಸ್ಪತ್ರೆಗೆ ವರ್ಗಾಯಿಸಬಹುದೆಂಬ ಆದೇಶ ಬಂದಿತು. ಅಷ್ಟರಲ್ಲೇ ಹಳೇ ಯಂತ್ರ ಸರಿಯಾಗಿ ಕಾರ್ಯನಿರ್ವಹಿಸುವ ಸ್ಥಿತಿಯಲ್ಲಿದೆ ಎಂಬ ವಿಷಯ ಸಂದರ್ಶಕ ಸಮಿತಿಯವರ ಗಮನಕ್ಕೂ ಬಂದಿತು. ಅದನ್ನು ಹೆರಿಗೆ ಆಸ್ಪತ್ರೆಯಲ್ಲೇ ಮರುಸ್ಥಾಪಿಸಬೇಕೆಂತಲೂ, ಯಾವುದೇ ಕಾರಣಕ್ಕೆ ಅದನ್ನು ಚಿಕ್ಕಮಗಳೂರಿನಿಂದ ಬೇರೆ ಕಡೆಗೆ ವರ್ಗಾಯಿಸಬಾರದೆಂದೂ ನಿರ್ಣಯ ಮಾಡಿದರು. ಎಕ್ಸ್‌ರೇ ಯಂತ್ರಗಳಂಥ ಸಂಕೀರ್ಣ ಕಾರ್ಯದ

ಸಲಕರಣೆಗಳು ಒಂದೇ ಆಸ್ಪತ್ರೆಯ ಬೇರೆ ಬೇರೆ ಕಡೆ, ಅದರಲ್ಲೂ ದೂರದಲ್ಲಿದ್ದರೆ ಅವುಗಳನ್ನು ನಿಭಾಯಿಸುವುದು ಸುಲಭ ಸಾಧ್ಯವಲ್ಲವೆಂದು ವಾದಿಸಿದರೂ ಸಮಿತಿಯವರು ಸಮ್ಮತಿಸಲಿಲ್ಲ. ಹೀಗಾಗಿ ಅದರ ಭವಿಷ್ಯ ನೆನೆಗುದಿಗೆ ಬಿದ್ದಿತು. ನಾನು ನಿವೃತ್ತಿಯಾಗುವವರೆಗೂ ಯಾವುದೇ ನಿರ್ಧಾರ ಸಾಧ್ಯವಾಗಲಿಲ್ಲ. ಎಕ್‌ರೇ ಯಂತ್ರದಲ್ಲಿ ಪ್ರಮುಖವಾದ 'ಎಕ್ಸ್‌ರೇ ಟ್ಯೂಬ್' ಬಹಳ ಸಮಯ ಕಾರ್ಯ ನಿರ್ವಹಿಸದಿದ್ದರೆ, ಮುಂದೆ ಅದು ನಿಷ್ಕ್ರಿಯ ಹಂತ ತಲುಪಿ ಅಂತಿಮವಾಗಿ ಕೆಟ್ಟುಹೋಗುತ್ತದೆ. ಬಹುಶಃ ಹಾಗೇ ಆಯಿತೇನೋ.

## ಸಿಬ್ಬಂದಿಗಳ ವರ್ತನೆ ಬಗೆಗೆ ದೂರುಗಳು

ಆಸ್ಪತ್ರೆಗಳ ಕಾರ್ಯವಿಧಾನ, ಸಿಬ್ಬಂದಿಗಳ ವರ್ತನೆ ಮುಂತಾದವುಗಳ ಬಗೆಗೆ ದೂರುವುದು ತೀರಾ ಸಾಮಾನ್ಯವೆಂಬಂತಾಗಿದೆ. ಆದರೂ ಅವುಗಳನ್ನು ಮಿತಿಗೊಳಿಸುವ ದೃಷ್ಟಿಯಿಂದ ಪ್ರತಿ ತಿಂಗಳೂ ವೈದ್ಯರು, ದಾದಿಯರು ಹಾಗೂ ನಾಲ್ಕನೆ ದರ್ಜೆ ನೌಕರರ ಸಭೆಗಳನ್ನು ಪ್ರತ್ಯೇಕವಾಗಿ ಏರ್ಪಡಿಸಿ, ಆಡಳಿತದ ಸಮಸ್ಯೆಗಳನ್ನೇ ಅಲ್ಲದೆ, ಅವರೆಲ್ಲರ ವೈಯಕ್ತಿಕ ಕಷ್ಟ ಸುಖಗಳ ಬಗೆಗೂ ವಿಚಾರ ವಿನಿಮಯ ಮಾಡಿಕೊಳ್ಳುತ್ತಿದ್ದೆ. ಸಮಸ್ಯೆಗಳ ನಿವಾರಣೆ ಬಗೆಗೆ ಅವರಿಂದಲೇ ಸಲಹೆ, ಸೂಚನೆಗಳನ್ನು ಪಡೆದುಕೊಳ್ಳುವುದಲ್ಲದೆ, ಆಸ್ಪತ್ರೆಯ ವಿರುದ್ಧದ ದೂರುಗಳು ಮತ್ತಿತರ ನ್ಯೂನತೆಗಳ ಬಗೆಗೂ ಸೂಕ್ತ ಪರಿಹಾರ ಸೂಚಿಸುತ್ತಿದ್ದೆ; ಅವು ಮರುಕಳಿಸದಂತೆ ಎಚ್ಚರಿಕೆಯ ಮಾತುಗಳನ್ನಾಡುತ್ತಿದ್ದೆ. ಆದರೂ ಕೆಲವು ಅಹಿತಕರ ಪ್ರಕರಣಗಳು ಜರುಗುತ್ತಲೇ ಇದ್ದವು.

ಈ ದಿಸೆಯಲ್ಲಿ ದಂತ ವೈದ್ಯರೊಬ್ಬರ ವರ್ತನೆ ಉಲ್ಲೇಖನೀಯ. ಒಂದು ಬಗೆಯ ಜೀವಿರೋಧಕದ ಇಂಜಕ್ಷನ್ ಆಸ್ಪತ್ರೆಯಲ್ಲಿ ಲಭ್ಯವಿಲ್ಲವೆಂಬ ನೆಪದಿಂದ ಅದರ ಐದು ಡೋಸ್‌ಗಳಿರುವ ಬಾಟಲಿಯನ್ನು ಅಂಗಡಿಯಿಂದ ರೋಗಿಗಳು ತರುವಂತೆ ಮಾಡುತ್ತಿದ್ದರು. ಅದರಿಂದ ಒಂದು ಡೋಸ್ ಇಂಜಕ್ಷನ್ ಮಾಡಿ, ಇನ್ನುಳಿದುದನ್ನು ತಾವೇ ಇರಿಸಿಕೊಳ್ಳುತ್ತಿದ್ದರಂತೆ! ಹಲ್ಲು ಕೀಳುವಾಗಿನ ನೋವು ನಿವಾರಣೆಗಾಗಿ ನೀಡುವ ಇಂಜಕ್ಷನ್ ಆಸ್ಪತ್ರೆಯಲಿಲ್ಲವೆಂದು ಹೇಳಿ ರೋಗಿಯ ಕಡೆಯವರಿಂದ ಅಂತಹ ಇಂಜಕ್ಷನ್‌ನ ಹಲವು ಡೋಸ್‌ಗಳಿರುವ ಬಾಟಲನ್ನು ತರಿಸಿ ಮೇಜಿನ ಒಂದು ಬದಿಯಲ್ಲಿಟ್ಟು, ಅಲ್ಲೇ ಇದ್ದ ಅಂತಹುದೇ (ಸರ್ಕಾರದಿಂದ ಲಭ್ಯವಾದ) ಬಾಟಲಿಯಿಂದ ಒಂದು ಡೋಸ್ ಔಷಧವನ್ನು ತೆಗೆದು ಹಲ್ಲಿನ ಬುಡಕ್ಕೆ ಇಂಜಕ್ಷನ್ ಮಾಡುತ್ತಿದ್ದರಂತೆ. ಅದನ್ನು ಗಮನಿಸಿದ ರೋಗಿಯೊಬ್ಬರು ನನಗೆ ಲಿಖಿತ ದೂರಿತ್ತರು; ಆ ಬಗೆಗೆ ವಿಚಾರಣೆ ನಡೆಸಬೇಕೆಂದು ಆದೇಶ ಹೊರಡಿಸಿದೆ. ಅವರೂ ಸಹಾ ವಿಧ್ಯುಕ್ತವಾಗಿ ವಿಚಾರಣೆ ಆರಂಭಿಸಿ, ಮುಗಿಸುವುದರಲ್ಲಿದ್ದರು. ಅಷ್ಟರಲ್ಲೇ ದಂತ ವೈದ್ಯರು ದೂರು ನೀಡಿದ ವ್ಯಕ್ತಿಯ ಜಾತಿಯ ತಮ್ಮ ಸಹೋದ್ಯೋಗಿಯ ಮೂಲಕ ಸಂಪರ್ಕಿಸಿ, ಅವರು ದೂರನ್ನು ಹಿಂದಕ್ಕೆ ಪಡೆಯುವಂತೆ ಮಾಡಿದರು! ಮುಂದೇನೂ ಮಾಡಲಾಗಲಿಲ್ಲ.

ಇನ್ನೊಂದು ಪ್ರಕರಣದಲ್ಲಿ ಸುಮಾರು ಹದಿನಾರು ವರ್ಷದ ಯುವತಿಯನ್ನು ಎರಡನೇ ಶನಿವಾರದ ಒಂದು ಮಧ್ಯಾಹ್ನ ತೀವ್ರ ಹೊಟ್ಟೆ ನೋವಿನ ಚಿಕಿತ್ಸೆಗಾಗಿ ಕರೆ ತಂದರು. ಅಂದು ಕರ್ತವ್ಯ ನಿರತ ವೈದ್ಯರು ಆಕೆಯನ್ನು ಪರೀಕ್ಷೆ ಮಾಡಿ ಆಸ್ಪತ್ರೆಗೆ ದಾಖಲು ಮಾಡಲು ಬಹಳ ಸಮಯ ಸತಾಯಿಸಿದರಂತೆ. ನಂತರ ನೋವಿನ ಶಮನಕ್ಕೆ ಒಂದು ಇಂಜಕ್ಷನ್ ಕೊಡಿಸಿ, ಒಂದು ಗ್ಲೂಕೋಸ್ ಬಾಟಲನ್ನು ನೀಡಿದರಂತೆ. ತಿಂಗಳ ಎರಡನೇ ಶನಿವಾರದ ಮಧ್ಯಾಹ್ನವಾದ್ದರಿಂದ

ಬೇರಾವ ವೈದ್ಯರೂ ಅಲ್ಲಿರಲಿಲ್ಲ. ಸಾಯಂಕಾಲ ತುರ್ತು ಚಿಕಿತ್ಸಾ ವಾರ್ಡಿನ ಪರಿಶೀಲನೆಗಾಗಿ ಬಂದ ಆರ್.ಎಂ.ಓ. ಅಲ್ಲಿಯ ಹಾಸಿಗೆಗಳೆಲ್ಲಾ ಭರ್ತಿಯಾಗಿದ್ದನ್ನು ಗಮನಿಸಿ ಒಬ್ಬಿಬ್ಬರನ್ನು ಬೇರೆ ವಾರ್ಡುಗಳಿಗೆ ವರ್ಗಾಯಿಸಿದರಂತೆ. ಮಧ್ಯಾಹ್ನ ದಾಖಲಾದ ಯುವತಿಯ ನೋವು ಸ್ವಲ್ಪ ಉಪಶಮನವಾದಂತಿದ್ದು ಆಕೆಯನ್ನು ಹೆಂಗಸರ ಸರ್ಜಿಕಲ್ ವಾರ್ಡಿಗೆ ಬದಲಾಯಿಸುವಂತೆ ಹೇಳಿದರಂತೆ. ಸ್ವಲ್ಪ ಸಮಯದ ನಂತರ ಆ ದಿನ ತುರ್ತಾಗಿ ಚಿಕಿತ್ಸೆಗೊಳ ಪಡಿಸಬೇಕಾದ ರೋಗಿಗಳನ್ನು ನೋಡುವ ಜವಾಬ್ದಾರಿಯ ಸರ್ಜನ್ ಸಹ ತುರ್ತು ಚಿಕಿತ್ಸಾ ವಾರ್ಡಿಗೆ ಬಂದಾಗ ಅಂತಹವರಾರೂ ಆಗ ಅಲ್ಲಿರಲಿಲ್ಲ. ಉದರ ಬೇನೆಯ ರೋಗಿಯನ್ನು ಹೆಂಗಸರ ವಾರ್ಡಿಗೆ ವರ್ಗಾಯಿಸಿದ್ದನ್ನೂ ಅವರ ಗಮನಕ್ಕೆ ಯಾರೂ ತರಲಿಲ್ಲ. ಆದರೂ ಅವರು ತಮ್ಮ ರೋಗಿಗಳನ್ನು ಒಂದು ಸಾರಿ ನೋಡಲು ಇತರ ವಾರ್ಡುಗಳಿಗೆ ಹೋಗಿದ್ದರು. ಮಹಡಿಯ ಮೇಲಿದ್ದ ಆಪರೇಷನ್‌ಗೊಳಗಾದವರನ್ನೂ ನೋಡಿ ಮೆಟ್ಟಿಲಿಳಿಯುತ್ತಿದ್ದಾಗ ಎಲೆಕ್ಟ್ರಿಕ್ ಕರೆಂಟ್ ಹೋಯಿತಂತೆ. ಹೆಂಗಸರ ಸರ್ಜಿಕಲ್ ವಾರ್ಡಿನಲ್ಲಿ ಅಂತಹ ಗಂಭೀರ ಸ್ವರೂಪದ ರೋಗಿಗಳಿರಲ್ಲಿಲ್ಲವಾದ್ದರಿಂದ ಕತ್ತಲೆಯಲ್ಲಿ ಅಲ್ಲಿಗೆ ಹೋಗುವುದಕ್ಕೆ ಮನಸ್ಸಾಗದೇ ಮನೆಗೆ ಹಿಂದಿರುಗಿದರು.

ಆದರೆ ರಾತ್ರಿ ಯುವತಿಯ ಹೊಟ್ಟೆ ನೋವು ಉಲ್ಬಣಗೊಂಡಿತು. ಮಧ್ಯಾಹ್ನ ಆಕೆಯನ್ನು ಸೇರಿಸಿದ್ದವರೇ ಕರ್ತವ್ಯ ನಿರ್ವಹಿಸುವ ವೈದ್ಯರಾಗಿದ್ದರು. ವಾರ್ಡಿನ ದಾದಿ ಮೂರ್ನಾಲ್ಕು ಸಾರಿ ಅವರನ್ನು ನೋಡಿ, ಆಕೆ ಒದ್ದಾಡುತ್ತಿರುವುದನ್ನು ವರದಿ ಮಾಡಿದರಂತೆ. ಅನಳಿದ್ದ ವಾರ್ಡಿಗೆ ಹೋಗಿ ಅವಳನ್ನು ಪರೀಕ್ಷೆ ಮಾಡುವ ಶ್ರಮ ತೆಗೆದುಕೊಳ್ಳಲಿಲ್ಲ. ಬದಲಿಗೆ ಪ್ರತಿಸಾರಿ ಒಂದಲ್ಲ ಒಂದು ತರಹದ ಇಂಜಕ್ಷನ್ ನೀಡುವಂತೆ ಕೇಸ್‌ಷೀಟ್ ಮೇಲೆ ಬರೆದು ಕಳುಹಿಸಿದರು. ಎಲ್ಲಕ್ಕಿಂತ ಮಿಗಿಲಾಗಿ ಅಂತಹ ಪ್ರಕರಣಗಳನ್ನು ಅಂದಿನ ಡ್ಯೂಟಿ ಸರ್ಜನ್‌ರಿಗೆ ಕರೆ ಕಳುಹಿಸಿ ತೋರಿಸುವುದು ಅವರ ಕರ್ತವ್ಯವಾಗಿತ್ತು; ಹಾಗೂ ಮಾಡಲಿಲ್ಲ. ಇಡೀ ರಾತ್ರಿ ಅದೇ ರೀತಿಯಲ್ಲಿ ಆಕೆ ಒದ್ದಾಡಿದಳಂತೆ. ಬೆಳಿಗ್ಗೆ ಎಂಟು ಗಂಟೆ ಸಮಯಕ್ಕೆ ಶೌಚಾಲಯಕ್ಕೆ ಹೋದವಳು ಅಲ್ಲೇ ಕುಸಿದು ಬಿದ್ದು ಅಸು ನೀಗಿದಳು. ಅಷ್ಟರಲ್ಲೇ ಅಂದಿನ ಡ್ಯೂಟಿ ವೈದ್ಯರು ಹಾಜರಾಗಿದ್ದರು; ಅವರು ಬಂದು ನೋಡಿ ಆಕೆ ಸತ್ತು ಹೋಗಿರುವುದನ್ನು ದೃಢಪಡಿಸಿದರು. ಆಕೆಯ ತಂದೆ ತಾಯಿಯರು ಸಾಕಷ್ಟು ರೋದಿಸಿ, ಗಲಾಟೆಯೆಬ್ಬಿಸಿ ಮೃತ ದೇಹವನ್ನು ಕೊಂಡೊಯ್ದರು.

ಈ ಘಟನೆ ಜರುಗಿದ ಸಮಯದಲ್ಲಿ ನಾನು ರಜೆಯಲ್ಲಿದ್ದೆ. ಕೆಲಸಕ್ಕೆ ಹಾಜರಾಗುತ್ತಲೇ ಮೃತಳ ಸಂಬಂಧಿಗಳು ನನ್ನನ್ನು ಭೇಟಿ ಮಾಡಿದರು. ಮುಗ್ಧ ಯುವತಿ ಆಸ್ಪತ್ರೆಯಲ್ಲಿ ಅನುಭವಿಸಿದ ಯಾತನೆ ಹಾಗೂ ಅವಳು ಅಸು ನೀಗಿದ ಬಗೆಗೆ ಹೃದಯ ವಿದ್ರಾವಕ ವಿವರಣೆ ನೀಡಿದರು. ಸಂಬಂಧಿಸಿದ ಡ್ಯೂಟಿ ಡಾಕ್ಟರ ವರ್ತನೆ ಬಗೆಗೆ ವಿಚಾರಣೆ ನಡೆಸಿ ಕ್ರಮ ತೆಗೆದುಕೊಳ್ಳಬೇಕೆಂದು ಒತ್ತಾಯ ಮಾಡಿದರು. ಅವರು ನಿರ್ಗಮಿಸಿದ ನಂತರ ಸಂಬಂಧಿಸಿದ ವೈದ್ಯರನ್ನು ಕರೆಸಿ ಪ್ರಕರಣದ ಬಗೆಗೆ ವಿಚಾರಿಸಿದೆ. ಅವರ ಬಗೆಗೆ ಬಂದ ದೂರುಗಳನ್ನು ನಿರಾಕರಿಸಿದರಲ್ಲದೆ, ಆ ರಾತ್ರಿ ೨-೩ ಸಾರಿ ವಾರ್ಡಿಗೆ ಹೋಗಿ ರೋಗಿಯನ್ನು ಪರೀಕ್ಷಿಸಿ ಚಿಕಿತ್ಸೆ ನೀಡಿರುವುದಾಗಿ ಎಂದಿನಂತೆ ಉಡಾಫೆಯ ಧಾಟಿಯಲ್ಲೇ ಉತ್ತರಿಸಿದರು. ಅದರಿಂದ ತೃಪ್ತನಾಗದೆ ಸಂಬಂಧಿಸಿದ ಕೇಸ್ ಷೀಟ್‌ನ್ನು ತರಿಸಿಕೊಂಡು ಪರಿಶೀಲಿಸಿದೆ; ಅಲ್ಲದೆ ಅಂದು ರಾತ್ರಿ ಕಾರ್ಯನಿರತರಾಗಿದ್ದ ದಾದಿ ಮತ್ತು ಆಯಾರನ್ನು ಕರೆಸಿ ವಿಚಾರಿಸಿದೆ. ಅದೆಷ್ಟು ಸಾರಿ ಹೇಳಿ ಕಳುಹಿಸಿದರೂ ಅವರು ಬರಲಿಲ್ಲ; ದಾದಿಯೇ ಮೂರ್ನಾಲ್ಕು ಸಾರಿ ಖುದ್ದು ಹೋಗಿ ಕರೆದರೂ ಬರಲಿಲ್ಲವೆಂದು ಹೇಳಿಕೆ ನೀಡಿದರು. ಅದರಿಂದ ಅಂದಿನ ಡ್ಯೂಟಿ ವೈದ್ಯರು ತಮ್ಮ ಕರ್ತವ್ಯ ನಿರ್ವಹಿಸಿರಲಿಲ್ಲವೆಂಬುದು ಖಚಿತ

ವಾಯಿತು. ಆ ಬಗೆಗೆ ಅವರಿಗೆ ಲಿಖಿತ ರೂಪದಲ್ಲಿ ಎಚ್ಚರಿಕೆ ನೀಡಿದೆ; ಹಾಗೂ ಇಲಾಖಾ ನಿರ್ದೇಶಕರಿಗೂ ವರದಿ ಮಾಡಿದೆ. ಸಂಬಂಧಿಸಿದ ವೈದ್ಯರು ಆ ತನಕದ ಅವರ ಸೇವಾ ಅವಧಿಯಲ್ಲಿ ಯಾರೂ ಅಂತಹ ಲಿಖಿತ ಎಚ್ಚರಿಕೆ ನೀಡಿರಲಿಲ್ಲವೆಂದು ಗೊಣಗಿಕೊಳ್ಳುತ್ತಿದ್ದರಂತೆ!

ಮೃತಳ ಸಂಬಂಧಿಕರು ನನ್ನಲ್ಲಿ ದೂರಿಕೊಳ್ಳುವ ಮೊದಲೇ ಇಲಾಖಾ ನಿರ್ದೇಶಕರಿಗೂ, ಆರೋಗ್ಯ ಸಚಿವರಿಗೂ ದೂರು ಸಲ್ಲಿಸಿದ್ದರಂತೆ. ಪರಿಸ್ಥಿತಿಯ ಗಂಭೀರತೆಯನ್ನು ಮನಗಂಡು, ಆಸ್ಪತ್ರೆಯ ತತ್ಕ್ಷಣದ ನಿಯಂತ್ರಣಾಧಿಕಾರಿಗಳಾದ ಮೈಸೂರಿನ ನಮ್ಮ ಇಲಾಖೆಯ ಜಂಟೀ ನಿರ್ದೇಶಕರು ಖುದ್ದಾಗಿ ವಿಚಾರಣೆ ಮಾಡಬೇಕೆಂದು ಆದೇಶ ನೀಡಿದರು. ಅವರು ತಡಮಾಡದೆ ಚಿಕ್ಕಮಗಳೂರಿಗೆ ಬಂದು ಮೃತಳ ಸಂಬಂಧಿಕರು, ಸಂಬಂಧಿಸಿದ ವೈದ್ಯರು, ದಾದಿಯರನ್ನೆಲ್ಲಾ ಕರೆಸಿ ವಿಚಾರಣೆ ನಡೆಸಿದರು. ಇಲಾಖೆಗೆ ಅವರೇನು ವರದಿ ಮಾಡಿದರೋ ತಿಳಿಯಲಿಲ್ಲ. ಆದರೆ ಕೆಲವೇ ದಿನಗಳಲ್ಲಿ ಆ ವೈದ್ಯರಿಗೆ ಬೇರೆ ಊರಿಗೆ ವರ್ಗವಾಯಿತು.

ಸರಿಸುಮಾರು ಅದೇ ಸಮಯದಲ್ಲಿ ಅಂತಹುದೇ ಇನ್ನೂ ಒಂದು ಘಟನೆ ಜರುಗಿತು. ಆಗಲೂ ನಾನು ರಜೆಯಲ್ಲಿದ್ದೆ. ಸುಮಾರು ಹದಿನೈದು ವರ್ಷ ವಯಸ್ಸಿನ ಬಾಲಕಿಯೊಬ್ಬಳನ್ನು ಆಕೆಯ ತಾಯಿಯೆ ಕರೆತಂದು ರಾತ್ರಿ ಒಂಬತ್ತು ಗಂಟೆ ಸಮಯಕ್ಕೆ ಸೇರಿಸಿದರು. ಆಸ್ಪತ್ರೆಗೆ ಸೇರುವ ಸಮಯದಲ್ಲಿ ಒಂದು ತರಹ ಮಾನಸಿಕ ಗಲಿಬಿಲಿ (Confusion) ಯಲ್ಲಿದ್ದವಳು, ಸ್ವಲ್ಪ ಸಮಯದಲ್ಲೇ ಅರೆ ಪ್ರಜ್ಞಾವಸ್ಥೆಗೆ ಜಾರಿ, ಇನ್ನೊಂದು ಗಂಟೆಯಲ್ಲಿ ಸಂಪೂರ್ಣ ಪ್ರಜ್ಞೆ ಕಳೆದುಕೊಂಡಳಂತೆ. ಅಂದು ಮಕ್ಕಳ ವ್ಯಾಧಿ ಪರಿಣಿತ ವೈದ್ಯರೇ ಕಾರ್ಯ ನಿರತರಾಗಿದ್ದವರು. ಮೊದಲು ಅವಳು ಅಷ್ಟೊಂದು ಶೀಘ್ರಗತಿಯಲ್ಲಿ ಪ್ರಜ್ಞಾಹೀನಳಾದುದಕ್ಕೆ ಕಾರಣ ಯೋಚಿಸಲು ಕಷ್ಟವಾದರೂ ಆನಂತರ ವ್ಯಕ್ತಪಟ್ಟ ಕೆಲವು ಲಕ್ಷಣಗಳಿಂದ ಮಿದುಳಿನ ಒಂದು ವಿಶಿಷ್ಟ ವಲಯದಲ್ಲಿ ಅಪರೂಪಕ್ಕೆ ಸಂಭವಿಸುವ ರಕ್ತಸ್ರಾವ - "ಪಾಂಟೈನ್ ರಕ್ತಸ್ರಾವ" (Pontaine Haemorrhage) ದಿಂದಾಗಿರಬಹುದೆಂಬ ನಿರ್ಧಾರ ಮಾಡಲು ಸಾಧ್ಯವಾಯಿತಂತೆ. ಸಾಮಾನ್ಯವಾಗಿ ವಯಸ್ಸಾದವರಲ್ಲೇ ಆ ರೀತಿಯ ರಕ್ತಸ್ರಾವವಾಗುತ್ತದೆಂಬ ಸಾರ್ವತ್ರಿಕ ನಂಬಿಕೆ ಇರುವುದರಿಂದ ಅಷ್ಟು ಎಳೆಯ ಬಾಲಕಿಯಲ್ಲಿ ಹಾಗಾಯಿತೆಂದರೆ ಯಾರಾದರೂ ನಂಬುವುದು ಕಷ್ಟವೇ. ಜನಿಸುವಾಗಲೇ ಮಿದುಳಿನ ಕೆಲವೆಡೆ ರಕ್ತನಾಳದಲ್ಲಾಗಿರಬಹುದಾದ ವ್ಯತ್ಯಯದಿಂದ ಹೀಗೆ ರಕ್ತಸ್ರಾವ ಉಂಟಾಗಬಹುದು. ಇಡೀ ರಾತ್ರಿ ವೈದ್ಯರು ಹಲವು ಸಾರಿ ಆಕೆಯನ್ನು ಪರೀಕ್ಷಿಸಿ ವಿವಿಧ ರೀತಿಯ ಚಿಕಿತ್ಸೆ ನೀಡಿದರೂ ಅವಳನ್ನು ಬದುಕಿಸಲಾಗಲಿಲ್ಲ. ಅಷ್ಟೊಂದು ಎಳೆಯ ವಯಸ್ಸಿನಲ್ಲಿ ಕೆಲವೇ ಗಂಟೆಗಳಲ್ಲಿ ಪ್ರಜ್ಞೆತಪ್ಪಿ ಸಾವಿಗೀಡಾಗಿದ್ದನ್ನು ಸಂಬಂಧಿಕರಿಗೆ ಅರ್ಥವಾಗುವಂತೆ ವಿವರಿಸುವುದು ಕಷ್ಟದ ಕೆಲಸ. ಶೋಕಸಾಗರದಲ್ಲಿ ಮುಳುಗಿದ ಆಕೆಯ ತಾಯಿ ಮತ್ತಿತರ ಸಂಬಂಧಿಕರು ರೋದಿಸುತ್ತಾ ಶವವನ್ನು ಕೊಂಡೊಯ್ದರು.

ಆಕೆಯ ತಂದೆ ಬೇರೊಂದು ಊರಲ್ಲಿ ಸರ್ಕಾರಿ ಕೆಲಸದಲ್ಲಿದ್ದವರು. ನಾನು ರಜೆಯಿಂದ ಹಿಂದುರಿಗಿದ ನಂತರ, ಅವರ ಮಗಳು ಅಷ್ಟೊಂದು ಶೀಘ್ರಗತಿಯಲ್ಲಿ ಸಾಯುವಂತಾದುದಕ್ಕೆ ವೈದ್ಯರ ನಿರ್ಲಕ್ಷ್ಯವೇ ಕಾರಣವೆಂದು ಆ ಬಗೆಗೆ ವಿಚಾರಣೆ ನಡೆಯಬೇಕೆಂದು ಲಿಖಿತ ದೂರು ಸಲ್ಲಿಸಿದರು. ಅಂದು ರಾತ್ರಿ ಕಾರ್ಯನಿರತರಾಗಿದ್ದ ವೈದ್ಯರು ಮುತುವರ್ಜಿ ವಹಿಸಿ ಚಿಕಿತ್ಸೆ ನೀಡಿದ್ದರೆಂದು ಆಕೆಯ ತಾಯಿ ಅದೆಷ್ಟು ಹೇಳಿದರೂ ಅವರು ಗಮನಕ್ಕೆ ತೆಗೆದುಕೊಳ್ಳದೆ ದೂರಿತ್ತಿದ್ದರು. ಅವರು ನನ್ನಲ್ಲಿ ಬಂದಾಗಲೂ ಸಂಬಂಧಿಸಿದ ವೈದ್ಯರು ಮತ್ತು ಆಕೆಯ ಕೇಸ್ ಷೀಟನ್ನು ಸಹ ತರಿಸಿ ಅಂದು ಅವರ ಮಗಳಿಗಾಗಿರಬಹುದಾದ ಪರಿಸ್ಥಿತಿ, ನೀಡಿದ ಚಿಕಿತ್ಸಾ

ವಿಧಾನಗಳ ಬಗೆಗೆ ಮನದಟ್ಟು ಮಾಡಲು ಪ್ರಯತ್ನಿಸಿದೆ. ಅವುಗಳಿಂದ ಅವರಿಗೆ ಸಮಾಧಾನ ಉಂಟಾದಂತೆ ಕಾಣಲಿಲ್ಲ. ಅಂತಹ ನವಿರಾದ ವೈದ್ಯಕೀಯ ವಿಷಯಗಳ ಬಗೆಗೆ ಗೊತ್ತಿರದ ಬೇರೆ ಯಾರಾದರೂ ಹಾಗೆಯೇ ವರ್ತಿಸುತ್ತಿದ್ದರೆನಿಸಿತು. ಅಲ್ಲಿಗೇ ಅವರು ಸುಮ್ಮನಿರದೆ ಕೆಲವು ದಿನಗಳ ನಂತರ ಮತ್ತೊಂದು ಪತ್ರ ಬರೆದು ಸಂಬಂಧಿಸಿದ ಕೇಸ್ ಷೀಟ್‌ನ ಪ್ರತಿಯೊಂದನ್ನು ನೀಡಬೇಕೆಂದು ಒತ್ತಾಯಿಸಿದರು. ಹಾಗೆ ನೀಡುವ ಬಗೆಗೆ ನನಗೆ ಅನುಮಾನವಿದ್ದುದರಿಂದ ಇಲಾಖೆಯವರಿಗೆ ಪತ್ರ ಬರೆದು ಮಾರ್ಗದರ್ಶನ ಕೇಳಿದೆ. ಅವರೂ ಸಹ ಸರ್ಕಾರಿ ದಾಖಲೆ ಪತ್ರಗಳನ್ನು ಹಾಗೆಲ್ಲಾ ಕೊಡಲಾಗದೆಂದೂ, ಅವರೇನಾದರೂ ಕೋರ್ಟಿಗೆ ಹೋದರೆ ಅಲ್ಲಿ ಅದನ್ನು ಹಾಜರು ಪಡಿಸುವುದಾಗಿ ಉತ್ತರ ನೀಡಬಹುದೆಂದು ಆದೇಶವಿತ್ತರು.

ಅದರಂತೆಯೇ ಆಕೆಯ ತಂದೆಗೆ ಪತ್ರ ಬರೆದೆ. ಅಲ್ಲದೆ ಅವರ ಪ್ರೀತಿಯ ಮಗಳ ಅಕಾಲ ಮರಣಕ್ಕೆ ಆಸ್ಪತ್ರೆಯವರು ಹಾಗೂ ವೈಯಕ್ತಿಕವಾಗಿ ನಾನೂ ಸಹ ಸಂತಾಪ ವ್ಯಕ್ತಪಡಿಸಿ ಸಾಂತ್ವನ ಹೇಳಿದ್ದೆ. ಪ್ರಕರಣ ಅಲ್ಲಿಗೆ ಮುಕ್ತಾಯವಾಯಿತು.

## ಬೆಂಬಿಡದ ಮೆಡಿಕೋ ಲೀಗಲ್ ಪ್ರಹಸನಗಳು

ಈ ಸಾರಿ ಚಿಕ್ಕಮಗಳೂರಿನಲ್ಲಿದ್ದಾಗ ಮೆಡಿಕೋ ಲೀಗಲ್ ಪ್ರಕರಣಗಳನ್ನು ನೇರವಾಗಿ ನಿಭಾಯಿಸುವ ಜವಾಬ್ದಾರಿ ನನಗಿರಲಿಲ್ಲ. ಜಿಲ್ಲೆಯ ಇತರ ಆಸ್ಪತ್ರೆಗಳ ಸರ್ಕಾರಿ ವೈದ್ಯರು ಜರುಗಿಸುತ್ತಿದ್ದ ಶವಪರೀಕ್ಷಾ ವರದಿಗಳನ್ನು ಪರಿಶೀಲಿಸಿ, ಅವರ ಅಭಿಪ್ರಾಯಗಳು ತರ್ಕಬದ್ಧವಾಗಿರುವುವೇ ಎಂಬುದನ್ನು ಖಚಿತಪಡಿಸಿ ಅವುಗಳಿಗೆ 'ಮೇಲು ಸಹಿ' ಮಾಡುವ ಗುರುತರ ಜವಾಬ್ದಾರಿ ನನ್ನದಾಗಿರುತ್ತಿತ್ತು. ಆದರೂ ಒಂದು ಸಾರಿ ಕೆಲವು ತಿಂಗಳ ಹಿಂದೆ ಇನ್ನೊಬ್ಬ ವೈದ್ಯರು ಶವಪರೀಕ್ಷೆ ನಡೆಸಿ, ನಂತರ ಹೂಳಿದ್ದ ಹೆಣವನ್ನು ಹೊರತೆಗೆದು 'ಮರು ಪರೀಕ್ಷೆ' ಮಾಡಿದ ಪ್ರಕರಣ ಕುತೂಹಲಕಾರಿಯಾಗಿದೆ.

ಪಕ್ಕದ ತಾಲ್ಲೂಕಿನ ಹಳ್ಳಿಯಲ್ಲಿ ಸಂಶಯಾಸ್ಪದ ರೀತಿಯಲ್ಲಿ ಕೆಲವು ತಿಂಗಳ ಹಿಂದೆ ವ್ಯಕ್ತಿಯೊಬ್ಬ ಮರಣ ಹೊಂದಿದ್ದ. ಗುಂಡೇಟುಗಳು ತಗುಲಿದ್ದರಿಂದ ಅವನು ಸತ್ತಿರುವ ದೂರುಗಳೂ ಇದ್ದವಂತೆ. ಜೊತೆಗೆ ರಾಜಕೀಯ ಹಿನ್ನೆಲೆಯೂ ಇದ್ದುದರಿಂದ ಹತ್ತಿರವಿದ್ದ ಸರ್ಕಾರಿ ಆಸ್ಪತ್ರೆಯ ವೈದ್ಯರಿಂದ ಶವಪರೀಕ್ಷೆ ಮಾಡಿಸದೆ ನಮ್ಮ ಆಸ್ಪತ್ರೆಯ ವೈದ್ಯರಿಂದಲೇ ಶವಪರೀಕ್ಷೆ ಮಾಡಿಸಲಾಗಿತ್ತು. ಅವರು ನೀಡಿದ್ದ ಮರಣೋತ್ತರ ಪರೀಕ್ಷಾ ವರದಿಯಲ್ಲಿ ಗುಂಡೇಟುಗಳಿದ್ದುದರ ಪ್ರಸ್ತಾಪವಿಲ್ಲದಿದ್ದುದರಿಂದ ಮತ್ತೆ ತಕರಾರುಗಳೆದ್ದವು. ಪ್ರಕರಣ ಮ್ಯಾಜಿಸ್ಟ್ರೇಟರವರೆಗೂ ಹೋಯಿತು; ಅವರು ಹೂಳಿದ್ದ ಶವವನ್ನು ಹೊರ ತೆಗೆದು ಮರು ಪರೀಕ್ಷೆಯನ್ನು ಜಿಲ್ಲಾ ಸರ್ಜನ್‌ರಿಂದ ಮಾಡಿಸಬೇಕೆಂದು ಆದೇಶ ಹೊರಡಿಸಿದರು.

ಆಗ ಭೋರೆಂದು ಸುರಿಯುವ ಮಳೆಗಾಲ; ರಸ್ತೆಯ ಪಕ್ಕದ ಸ್ವಲ್ಪ ದೂರದ ಕಾಡಿನಲ್ಲಿ ಹೆಣವನ್ನು ಹೂಳಲಾಗಿತ್ತು. ತಾಲ್ಲೂಕು ಮ್ಯಾಜಿಸ್ಟ್ರೇಟರು, ವರಿಷ್ಠ ಪೋಲೀಸ್ ಅಧಿಕಾರಿಗಳು ಮುಂತಾದವರೊಡನೆ ನನ್ನ ಸಿಬ್ಬಂದಿ ಸಲಕರಣೆಗಳೊಡನೆ ಅಲ್ಲಿಗೆ ಹೋದೆವು. ಶವಪರೀಕ್ಷೆಯ ಸಮಯದಲ್ಲಿ ಮಳೆಯಿಂದ ರಕ್ಷಣೆ ನೀಡಲು ಟಾರ್ಪಾಲಿನ್‌ಗಳ ಚಾವಣಿ ನಿರ್ಮಿಸಿದ್ದರು! ಮೊದಲಿಗೆ ಶವವನ್ನು ಹೂತಿರುವ ಜಾಗ, ಶವದ ಗುರುತು ಮುಂತಾದ ವಿಷಯಗಳನ್ನು ಪೋಲೀಸರು ಹಾಗೂ ಸಂಬಂಧಿಗಳಿಂದ ಕಾನೂನು ಪ್ರಕಾರ ದಾಖಲಿಸಿಕೊಂಡೆ. ಅಲ್ಲಿದ್ದ ಕೆಲವರ ಸಹಾಯದಿಂದ ಹೂತಿದ್ದ ಸ್ಥಳದಿಂದ ಶವವನ್ನು ಹೊರತೆಗೆಯಲಾಯಿತು. ಮ್ಯಾಜಿಸ್ಟ್ರೇಟರು ಮತ್ತು

ಕೆಲವು ಪೋಲೀಸ್ ಅಧಿಕಾರಿಗಳಲ್ಲದೆ ಬೇರೆ ಯಾರೂ ಅಲ್ಲಿರದಂತೆ ತಾಕೀತು ಮಾಡಿದೆ. ಶವಕ್ಕೆ ಮೆತ್ತಿಕೊಂಡಿದ್ದ ಕೆಸರು ಮಣ್ಣನ್ನೆಲ್ಲಾ ನೀರು ಹಾಕಿಸಿ ಶುಚಿ ಮಾಡಿಸಿದೆ. ವ್ಯಕ್ತಿ ಸತ್ತು ಎರಡು ತಿಂಗಳ ಮೇಲಾಗಿದ್ದರೂ ಶವ ಅಷ್ಟಾಗಿ ಕೊಳೆತಿರದೇ ಸುಸ್ಥಿತಿಯಲ್ಲಿದ್ದಂತಿತ್ತು. ಬಹುಶಃ ಮಳೆಯಿಂದ ನೆಲವೆಲ್ಲಾ ಥಂಡಿಯಾಗಿದ್ದರಿಂದ ಹಾಗಿರುವುದು ಸಾಧ್ಯವೆನಿಸಿತು. ಮೊದಲ ಸಾರಿ ಜರುಗಿಸಿದ ಶವಪರೀಕ್ಷೆಯ ನಂತರ ಹಾಕಿದ ಹೊಲಿಗೆಯ ಗಾಯಗಳನ್ನು ಹೊರತು ಪಡಿಸಿದರೆ ಬೇರಾವ ಜಖಂಗಳೂ ಕಂಡು ಬರಲಿಲ್ಲ. ಮೃತನ ಸಂಬಂಧಿಕರು ಅವನ ಎದೆ ಮತ್ತು ಬೆನ್ನಿನಲ್ಲಿ ಗುಂಡೇಟುಗಳಿದ್ದವೆಂದು ಹೇಳಿಕೆ ನೀಡಿದ್ದರು. ಆದರೆ ಅಂತಹ ಗಾಯಗಳಾವುವೂ ಕಾಣಲಿಲ್ಲ. ಆ ಕ್ಷಣದಲ್ಲಿ ನನಗೊಂದು ಆಲೋಚನೆ ಹೊಳೆಯಿತು. ಹಿಂದಿನ ಸಾರಿ ಶವ ಪರೀಕ್ಷೆ ಮಾಡಿದವರು ನಮ್ಮ ಆಸ್ಪತ್ರೆಯ ವೈದ್ಯರಾಗಿದ್ದು, ನಾನೀಗ ನಿಜ ಸ್ಥಿತಿಯನ್ನು ಅದು ಇದ್ದ ಹಾಗೆಯೇ ಬರೆದರೆ, ಮೃತನ ಸಹೋದರರು ನನ್ನ ವರದಿಯನ್ನು ನಂಬದೆ ಮತ್ತೆ ಹುಯಿಲೆಬ್ಬಿಸಬಹುದು. ಅದರಿಂದ ಗುಂಡೇಟುಗಳನ್ನು ನೋಡಿದ್ದೆವೆಂದು ಹೇಳಿದವರನ್ನೇ ಅಲ್ಲಿಗೆ ಕರೆಸುವಂತೆ ಹೇಳಿದೆ. ಅಲ್ಲದೆ ಅವರು ಎಲ್ಲೆಲ್ಲಿ ಗುಂಡೇಟುಗಳನ್ನು ನೋಡಿದ್ದರೆಂಬುದನ್ನು ತೋರಿಸುವಂತೆ ಕೇಳಿದೆ. ಅವರು ಶವದ ಎದೆ, ಬೆನ್ನು ಮುಂತಾದ ಕಡೆಗಳಲೆಲ್ಲಾ ಸುತ್ತು ಬಂದು ಹುಡುಕಾಡಿದರು. ಅಲ್ಲೆಲ್ಲೂ ಗುಂಡೇಟುಗಳು ಕಂಡು ಬರಲಿಲ್ಲ. ಮತ್ತೆ ಅವರವರೇ 'ಅಲ್ಲಿ ಕಂಡ ಹಾಗಿತ್ತು, ಇಲ್ಲಿ ಕಂಡ ಹಾಗಿತ್ತು' ಎಂದು ಗೊಣಗತೊಡಗಿದರು. ಅಲ್ಲದೆ ಗುಂಡೇಟುಗಳಿರಲಿಲ್ಲವೆಂದು ಅವರೇ ಹೇಳಿಕೆ ನೀಡುವಂತೆ ಏರ್ಪಡಿಸಿದೆ. ಹಿಂದಿನ ಹೊಲಿಗೆಗಳನ್ನು ಬಿಚ್ಚಿ ಮತ್ತೊಂದು ಸಾರಿ ವಿಧಿವತ್ತಾಗಿ ಶವಪರೀಕ್ಷೆ ಜರುಗಿಸಿದೆ. ಸೇರಿದ್ದವರೆಲ್ಲಾ ನೆಮ್ಮದಿಯ ಉಸಿರು ಬಿಡುವಂತಾಯಿತು.

ಮೇ ತಿಂಗಳ ೩೧ನೇ ದಿನ (೧೯೮೮) ಸರ್ಕಾರಿ ಸೇವೆಯಿಂದ ನಾನು ನಿವೃತ್ತಿಯಾಗುವ ದಿನ; ಹಿಂದಿನ ದಿನ ಬೆಳಗಿನ ಹೊತ್ತು ಅಂತಿಮವಾಗಿ ನಾನು ಸಹಿ ಮಾಡಬೇಕಾಗಿದ್ದ ಕಾಗದ ಪತ್ರಗಳಲ್ಲಿ ಮುಳುಗಿ ಹೋಗಿದ್ದೆನೆಂದೇ ಹೇಳಬಹುದು. ಅಷ್ಟರಲ್ಲೇ ಹೆರಿಗೆ ಆಸ್ಪತ್ರೆಯಲ್ಲಿನ ಒಂದು ಸಮಸ್ಯಾತ್ಮಕ ರೋಗಿಯೊಬ್ಬಳು ದಾಖಲಾಗಿರುವುದಾಗಿಯೂ, ಆ ಸಲುವಾಗಿ ಅಲ್ಲಿಗೆ ಬರಬೇಕೆಂಬ ತುರ್ತು ಕರೆ ಬಂದಿತು.

ಮದುವೆಯಾಗದೆ ಗರ್ಭ ಧರಿಸಿದ ಯುವತಿ; ಅಕ್ರಮವಾಗಿ ಗರ್ಭಪಾತ ನಡೆಸುವ ಪ್ರಯತ್ನವನ್ನು ಹೊರಗಡೆ ಯಾರೋ ನಡೆಸಿದ್ದರಿಂದ ಗಂಭೀರ ತೊಡಕುಗಳುಂಟಾಗಿ ಅವಳನ್ನೀಗ ಹೆರಿಗೆ ಆಸ್ಪತ್ರೆಗೆ ಕರೆತಂದಿದ್ದಾರೆ. ಅಲ್ಲಿಗೆ ಹೋದವನೇ ಆಕೆಯ ಪೂರ್ವಾಪರಗಳ ಬಗೆಗೆ ವಿಚಾರಿಸಿದೆ. ಅಕ್ರಮವಾಗಿ ಗರ್ಭಧರಿಸಿದ ಅವಳಿಗೆ ಗರ್ಭಪಾತ ಮಾಡಿಸುವ ಪ್ರಯತ್ನವನ್ನು ಹೆರಿಗೆ ಆಸ್ಪತ್ರೆಯಲ್ಲಿ ಕಾರ್ಯನಿರತಳಾದ ಸೂಲಗಿತ್ತಿಯೊಬ್ಬಳು ನಾಲ್ಕೈದು ದಿನಗಳ ಹಿಂದೆ ಮಾಡಿದ್ದಳು.

ಮಹಿಳಾ ವೈದ್ಯೆಯೊಬ್ಬರಿಂದ ಆಕೆಯ ಪರೀಕ್ಷೆ ಮಾಡಿಸಿದೆ. ಬಹುಪಾಲು ಗರ್ಭಕೋಶದಲ್ಲಿ ತೂತಾಗಿದ್ದರ ಪರಿಣಾಮದಿಂದ ಉದರ ಕೋಶದೊಳಗೆ ಉರಿಯೂತ ಉಂಟಾಗಿದೆ (Peritonitis); ಅದನ್ನು ಸರಿಪಡಿಸಲು ಆಪರೇಷನ್ ಮಾಡಬೇಕಾಗುತ್ತದೆ. ಕಾನೂನು ಬಾಹಿರವಾಗಿ ಗರ್ಭಪಾತ ನಡೆಸಿದ್ದರಿಂದ ಅದನ್ನು ಪೋಲಿಸರಿಗೆ ವರದಿ ಮಾಡಿ, ನಂತರ ಮುಂದಿನ ಕ್ರಮ ಜರುಗಿಸುವಂತೆ ಸಲಹೆ ಮಾಡಿದೆ. ಅಲ್ಲದೆ ವಿಧಿವತ್ತಾಗಿ ಅಪಘಾತಗಳ ಪುಸ್ತಕದಲ್ಲಿ ದಾಖಲು ಮಾಡುವಂತೆ ಸೂಚಿಸಿ ಹೊರಬಂದೆ. ಅವಳ ಪರಿಸ್ಥಿತಿ ಸುಧಾರಿಸುವಂತೆ

ಮಾಡಿ, ಇನ್ನೊಬ್ಬ ಸರ್ಜನ್ ಆಪರೇಷನ್ ಮಾಡಿದರು. ಆದರೂ ಆಕೆಯ ಪರಿಸ್ಥಿತಿ ವಿಕೋಪಕ್ಕೆ ತಿರುಗಿ ಮುಂದಿನ ಒಂದೆರಡು ದಿನಗಳಲ್ಲಿ ಅಸು ನೀಗಿದಳಂತೆ.

ಶಿವಮೊಗ್ಗಾದಲ್ಲಿ ನೆಲಸಿದ ಎರಡು ವರ್ಷಗಳಾದ ನಂತರ ಆ ಪ್ರಕರಣದ ಸಂಬಂಧವಾಗಿ ಸೆಷೆನ್ಸ್ ಕೋರ್ಟಿನಲ್ಲಿ ಹಾಜರಾಗಲು ಸಮನ್ಸ್ ಜಾರಿಯಾಯಿತು. ಚಿಕ್ಕಮಗಳೂರು ತಲುಪಿದವನೇ ಆ ಪ್ರಕರಣದ ಯಾವ ಬಗೆಗೆ ಸಾಕ್ಷಿ ನೀಡಬೇಕೆಂಬುದರ ಬಗೆಗೆ ವಿಚಾರಿಸಲು ಮುಂಚಿತವಾಗಿಯೇ ಕೋರ್ಟಿಗೆ ಹೋದೆ. ಅಲ್ಲಿದ್ದ ಕೆಲವು ಪೋಲೀಸ್ ಅಧಿಕಾರಿಗಳ ಹತ್ತಿರ ನೇರವಾಗಿ ಭಾಗಿಯಾಗಿರದ ಆ ಪ್ರಕರಣಕ್ಕೆ ನನ್ನನ್ನು ಕರೆಸಿದ್ದರ ಔಚಿತ್ಯದ ಬಗೆಗೆ ವಿಚಾರಿಸಿದೆ. ಅಪರಾಧಿಯ ಪರ ವಕೀಲರು ನನ್ನ ಸಾಕ್ಷ್ಯವನ್ನು ಪಡೆಯಬೇಕೆಂದು ಒತ್ತಡ ಹೇರಿದ್ದರಿಂದ ಕರೆಸಲಾಗಿದೆ ಎಂದು ತಿಳಿಸಿದರು. ಕುತೂಹಲದಿಂದ ಆ ಪ್ರಕರಣಕ್ಕೆ ಸಂಬಂಧಿಸಿದ ಕೇಸ್ ಷೀಟ್, ಅಪಘಾತದ ಪುಸ್ತಕ ಮುಂತಾದವನ್ನು ಅವರ ವಶಕ್ಕೆ ತೆಗೆದುಕೊಂಡಿರುವರೇ ಎಂದು ವಿಚಾರಿಸಿದೆ. ಅಂತಹದೇನನ್ನೂ ಮಾಡಿಲ್ಲವೆಂದಾಗ ಅವೆಲ್ಲದರ ಹಿಂದೆ ಏನೆಲ್ಲಾ ನಡೆದಿರಬಹುದೆಂಬುದರ ಬಗೆಗೆ ಅನುಮಾನಗಳುಂಟಾದವು.

ಕೋರ್ಟಿನ ಕಟಕಟೆ ಏರಿ ಸಾಕ್ಷ್ಯ ಹೇಳಲಾರಂಭಿಸಿದೆ. ಸರಕಾರಿ ವಕೀಲರು ಆ ಪ್ರಕರಣದಲ್ಲಿ ನನ್ನ ಪಾತ್ರದ ಬಗೆಗೆ ಸ್ಪಷ್ಟನೆ ನೀಡಿದರು. ಪ್ರತಿವಾದಿಯ ವಕೀಲರು ಹಿಂದಿನಿಂದ ಪರಿಚಿತರಾದವರೇ. ಆದರೆ ಅಂದು ತುಂಬಾ ಸಿಟ್ಟು ಬಂದವರ ಹಾಗೆ ವರ್ತಿಸತೊಡಗಿದ್ದು ಆಶ್ಚರ್ಯವೆನಿಸಿತು. ಇಡೀ ಪ್ರಕರಣಕ್ಕೆ ಆಸ್ಪತ್ರೆಯವರೇ ಕಾರಣವೆಂಬ ರೀತಿಯಲ್ಲಿ ಪ್ರಶ್ನೆಗಳನ್ನು ಕೇಳಲಾರಂಭಿಸಿದರು. ಆಸ್ಪತ್ರೆಗೆ ಕೆಟ್ಟ ಹೆಸರು ಬರುತ್ತದೆಂದು, ಅದರಲ್ಲೂ ಸದ್ಯದಲ್ಲೇ ನಿವೃತ್ತನಾಗಲಿರುವ ನನ್ನ ಹೆಸರಿಗೂ ಕಳಂಕ ಬರುತ್ತದೆಂಬ ಕಾರಣದಿಂದ ಅಮಾಯಕ ಸೂಲಗಿತ್ತಿಯೊಬ್ಬಳನ್ನು ಬಲಿಪಶು ಮಾಡುವ ಸಲುವಾಗಿ ನಾನು ನಡೆಸಿದ ಸಂಚು ಅದೆಂದು ವಾದಿಸತೊಡಗಿದರು. ನಾನೂ ಸಹಾ ಅದೇ ಧಾಟಿಯಲ್ಲಿ ಅಂತಹ ಅವಶ್ಯಕತೆ ಆಸ್ಪತ್ರೆಗಾಗಲೀ, ನನಗಾಗಲೀ ಇರಲಿಲ್ಲವೆಂದು ಖಡಾಖಂಡಿತವಾಗಿ ಅಲ್ಲಗಳೆದೆ. ಬದಲಿಗೆ ಅವರು ತಮ್ಮ ಕಕ್ಷಿದಾರಳನ್ನು ರಕ್ಷಿಸಲು ಹೂಡಿದ ಪೂರ್ವ ನಿಯೋಜಿತ ಸಂಚು ಎಂಬುದು ವೇದ್ಯವಾಗುವಂತಿತ್ತು. ಮುಂದೆ ಹೇಗೆ ಇತ್ಯರ್ಥವಾಯಿತೆಂಬುದರ ಮಾಹಿತಿ ದೊರಕಲಿಲ್ಲ.

## ಸರ್ಕಾರದ ಹಣ ದುರುಪಯೋಗದ ಸಂಶಯ!

ನಿವೃತ್ತಿಗೆ ಕೆಲವು ತಿಂಗಳುಗಳ ಹಿಂದೆ ಆಗಾಗ್ಗೆ ಸ್ವಲ್ಪ ದಿನಗಳ ರಜೆಯಲ್ಲಿರುತ್ತಿದ್ದೆ. ಹಾಗೆ ರಜೆ ಹೋಗುವ ಒಂದು ಸಂದರ್ಭದಲ್ಲಿ ಸಿಬ್ಬಂದಿ ವರ್ಗದ ವೇತನ ವಿತರಿಸಿದೆ. ಆದರೆ ಅವರ ವೇತನದಲ್ಲಿ ಉಳಿತಾಯ ಯೋಜನೆಯನುಸಾರ ಸ್ವಲ್ಪ ಮೊತ್ತವನ್ನು ತೆಗೆದಿರಿಸಿ ಮುಂದಿನ ಒಂದೆರಡು ದಿನಗಳಲ್ಲಿ ಪೋಸ್ಟಾಫೀಸಿನಲ್ಲಿ ಠೇವಣಿ ಇಡುವ ಪದ್ಧತಿ ಇತ್ತು. ಹಾಗೆ ಠೇವಣಿ ಇಡುವವರೆಗೂ ನನ್ನ ಸ್ವಂತ ಜವಾಬ್ದಾರಿಯಲ್ಲಿರುತ್ತಿದ್ದರೂ, ಸಂಬಂಧಿಸಿದ ಗುಮಾಸ್ತರು ಆ ಕೆಲಸವನ್ನು ಪ್ರತಿ ತಿಂಗಳೂ ಮಾಡಿ, ನನಗೆ ವರದಿ ಮಾಡುತ್ತಿದ್ದರು. ಪ್ರಸ್ತುತ ಸಮಯದಲ್ಲಿ ರಜೆ ಹೋದಾಗ ಹಿಂದಿನ ಗುಮಾಸ್ತರು ಸಹ ರಜೆಯಲ್ಲಿದ್ದುದರಿಂದ ಆ ಜವಾಬ್ದಾರಿಯನ್ನು ಮತ್ತೊಬ್ಬರಿಗೆ ವಹಿಸಿ ಹೋಗಿದ್ದೆ. ಸುಮಾರು ಇಪ್ಪತ್ತು ಸಾವಿರ ರೂಪಾಯಿಗಳ ಆ ಮೊಬಲಗನ್ನು ಸದರಿ ಗುಮಾಸ್ತರು ಪೋಸ್ಟಾಫೀಸಿನಲ್ಲಿ ಠೇವಣಿ ಇಡುವ ಬದಲು ಸ್ವಂತಕ್ಕೆ ಬಳಸಿಕೊಂಡಿರಬೇಕು. ಹಲವಾರು ದಿನಗಳ ನಂತರ ಈ ಗುಟ್ಟು ಅದು ಹೇಗೋ ಆಸ್ಪತ್ರೆಯ ಇತರ ನೌಕರರ ಗಮನಕ್ಕೆ

ಬಂದಿತಂತೆ. ಬದಲಿಯಾಗಿ ನನ್ನ ಕಾರ್ಯ ನಿರ್ವಹಿಸುತ್ತಿದ್ದ ಜಿಲ್ಲಾ ಸರ್ಜನರಿಗೂ ವಿಷಯ ತಿಳಿಯಿತು. ಅವರು ಶಿವಮೊಗ್ಗೆಗೆ ಫೋನ್ ಮಾಡಿ ನನಗೂ ತಿಳಿಸಿದರು. ನನ್ನ ದೀರ್ಘ ಸೇವಾ ಅವಧಿಯಲ್ಲಿ ಎಂದೂ ಹಣ ದುರುಪಯೋಗ ಮಾಡಿದ ಅಪವಾದಕ್ಕೆ ಗುರಿಯಾಗದ ನಾನು ನಿವೃತ್ತಿಯ ಅಂಚಿನಲ್ಲಿರುವಾಗ ಅಂತಹುದೊಂದು ಕಳಂಕಕ್ಕೆ ಗುರಿಯಾಗುವ ಶಂಕೆ ಬಾಧಿಸ ತೊಡಗಿತು. ತಕ್ಷಣ ಚಿಕ್ಕಮಗಳೂರಿಗೆ ಹೋಗಿ ವಿಷಯವನ್ನು ಇತ್ಯರ್ಥ ಮಾಡುವ ತಯಾರಿ ಮಾಡಿದೆ. ಆದರೆ ಬದಲಿ ಜಿಲ್ಲಾ ಸರ್ಜನ್ ಸಮಸ್ಯೆಯನ್ನು ಬಗೆ ಹರಿಸಲು ಅವರೂ ಸೇರಿದಂತೆ ಆಸ್ಪತ್ರೆಯ ಇತರ ಸಿಬ್ಬಂದಿಯವರು ಪ್ರಯತ್ನಿಸಿ ಸಂಬಂಧಿಸಿದ ಗುಮಾಸ್ತರಿಂದ ಆ ಮೊಬಲಗನ್ನು ಠೇವಣಿ ಇಡಿಸುವ ಪ್ರಯತ್ನಗಳನ್ನು ಮಾಡುತ್ತಿದ್ದಾರೆಂತಲೂ, ಅನವಶ್ಯವಾಗಿ ಆ ವಿಷಯದಲ್ಲಿ ನಾನು ಗಾಬರಿ ಪಡುವ ಅವಶ್ಯಕತೆ ಇಲ್ಲವೆಂದೂ ಭರವಸೆ ನೀಡಿದರು. ಮುಂದಿನ ಕೆಲವು ದಿನಗಳಲ್ಲಿ ಹಾಗೆಯೇ ಮಾಡಿಸಲಾಗಿದೆ ಎಂದು ವರ್ತಮಾನ ತಿಳಿಸಿದರು. ಅದರಿಂದಾಗಿ ಸರ್ಕಾರಿ ಸೇವೆಯ ಅಂತ್ಯದಲ್ಲಿ ನನಗಂಟಬಹುದಾದ ಕಳಂಕದ ಭಯ ಮಾಯವಾಗಿ, ನೆಮ್ಮದಿಯುಂಟಾಯಿತು.

## ಅವ್ವನ ಅವಸಾನ

ಸುಮಾರು ೨೮ ವರ್ಷಗಳ ಸರ್ಕಾರಿ ಸೇವೆಯುದ್ದಕ್ಕೂ ಒಂದು ರೀತಿಯ ಹೋರಾಟದ ಜೀವನ ನಡೆಸಿ ಇನ್ನೇನು ತಂಟೆ ತಕರಾರುಗಳಿಲ್ಲದೆ ನಿವೃತ್ತನಾಗಿ ನೆಮ್ಮದಿಯ ಜೀವನ ನಡೆಸಬಹುದೆಂದು ಹಂಬಲಿಸುತ್ತಿದ್ದೆ. ಅದು ದುಃಖಕರ ಸನ್ನಿವೇಶದಲ್ಲಿ ಪರ್ಯವಸಾನವಾಗಬಹುದೆಂದು ನಾನೆಂದೂ ಎಣಿಸಿರಲಿಲ್ಲ. ಸುಮಾರು ಐದು ದಶಕಗಳಿಗಿಂತಲೂ ಹೆಚ್ಚು ಕಾಲ ನನ್ನನ್ನು ಸಾಕಿ, ಸಲಹಿ, ವಿದ್ಯಾಭ್ಯಾಸ ಮಾಡಿಸಿ, ಒಂದು ಆದರ್ಶ ಜೀವನ ಮಾರ್ಗದ ದಾರಿ ತೋರಿಸಿದ ಅಕ್ಕರೆಯ ಅವ್ವ ನಾನು ನಿವೃತ್ತಿಯಾಗುವ ಹದಿನೈದು ದಿನಗಳಲ್ಲೇ ತನ್ನ ಇಹಲೋಕ ಯಾತ್ರೆಯನ್ನು ಮುಗಿಸಿದ್ದು ನನ್ನ ಜೀವನದ ಅತ್ಯಂತ ದುಃಖಕರ ಸನ್ನಿವೇಶವನ್ನುಂಟು ಮಾಡಿತು. ನನ್ನ ಜೀವನದ ಅವಿಭಾಜ್ಯ ಅಂಗವಾಗಿದ್ದ ಅವ್ವನ ಅಗಲಿಕೆ ನನ್ನ ಮುಂದಿನ ಬದುಕನ್ನು ಶೂನ್ಯವಾಗಿಸಿತು.

ಚಿಕ್ಕಮಗಳೂರಿನ ವಾಸ್ತವ್ಯದ ಅಂತಿಮ ಹಂತದಲ್ಲಿ ನಿವೃತ್ತಿಯ ನಂತರ ಶಿವಮೊಗ್ಗಾದಲ್ಲಿ ನೆಲಸುವ ಬಗೆಗೆ ತೀರ್ಮಾನ ಮಾಡಿದ್ದೆವು. ಬಾಡಿಗೆಗೆ ಕೊಟ್ಟಿದ್ದ ಮನೆಯನ್ನು ವಾಪಸು ಪಡೆದು ಅದರ ದುರಸ್ತಿಯ ಕೆಲಸ ಕಾರ್ಯಗಳು ಆಗುತ್ತಿದ್ದವು. ಬೇಸಿಗೆ ರಜೆ ಶುರುವಾಗುತ್ತಲೇ ನನ್ನ ಪತ್ನಿ ಮತ್ತು ಮಕ್ಕಳು ಶಿವಮೊಗ್ಗೆಗೆ ಹೋಗಿ ವಾಸ ಮಾಡತೊಡಗಿದ್ದರು. ತಾಯಿಯವರು ಮಾತ್ರ ಹಿಂದಿನ ಮಳೆಗಾಲದ ಸಮಯದಿಂದ ಹೊಳೆಗದ್ದೆಯಲ್ಲೇ ಇದ್ದುಕೊಂಡು ಜಮೀನಿನ ಕೆಲಸ ಕಾರ್ಯಗಳನ್ನು ನೋಡಿಕೊಳ್ಳುತ್ತಿದ್ದರು. ಅಡಿಕೆ ತೋಟಕ್ಕೆ ಔಷಧಿ ಸಿಂಪಡಿಸುವುದು, ಮತ್ತೆ ಅಡಿಕೆ ಕೊಯ್ಲು ಮುಂತಾದ ಕೆಲಸಗಳನ್ನು ಹಿಂದಿನಿಂದಲೂ ಅವರು ಅಲ್ಲಿದ್ದುಕೊಂಡೇ ಮಾಡಿಸುವುದು ರೂಢಿಯಾಗಿತ್ತು. ಕೆಲವು ವರ್ಷಗಳಿಂದ ಅವರಲ್ಲಿ ರಕ್ತದೊತ್ತಡದ ಸಮಸ್ಯೆ ಉದ್ಭವವಾಗಿತ್ತು. ತಜ್ಞವೈದ್ಯರಿಂದ ಚಿಕಿತ್ಸೆ ಮಾಡಿಸಿ ಅದನ್ನು ಒಂದು ಹತೋಟಿಯಲ್ಲಿಡುವ ಏರ್ಪಾಡುಗಳನ್ನು ಮಾಡಿಸಿದ್ದೆ. ಚಿಕ್ಕಮಗಳೂರಿನಿಂದ ನನ್ನ ಸಂಸಾರದವರೆಲ್ಲಾ ಶಿವಮೊಗ್ಗೆಗೆ ಹಿಂದಿರುಗಿದಾಗ ಅವರೂ ಬಂದು ಅವರೊಡನಿರಲು ಹೇಳಿ ಕಳುಹಿಸಿದ್ದೆ. ಒಂದೆರಡು ಸಾರಿ ನನ್ನ ಮಗನನ್ನು ಆ ಸಲುವಾಗಿ ಊರಿಗೆ ಕಳುಹಿಸಿದ್ದರೂ, ಅಡಿಕೆ ಸಂಬಂಧಿಸಿದ ಕೆಲಸ ಕಾರ್ಯಗಳು ಮುಗಿದು ಮೂಟೆಗಳನ್ನು ಶಿವಮೊಗ್ಗಾ ಅಡಿಕೆ ಮಂಡಿಗೆ ಕಳುಹಿಸಿದ ನಂತರವೇ

ಬರುತ್ತೇನೆಂತಲೋ, ಇಲ್ಲವೆ ಇನ್ನಾವುದೋ ಸಬೂಬು ಹೇಳುತ್ತಲೋ ಅವರ ನಿರ್ಧಾರವನ್ನು ಮುಂದೂಡುತ್ತಲೇ ಇದ್ದರು. ಆ ಸಮಯದಲ್ಲಿ ನಮ್ಮೆಲ್ಲರ ಮೇಲೆ ಸ್ವಲ್ಪ ಮುನಿಸಿಕೊಂಡಂತಿದ್ದರೂ, ಹೊರಗಡೆ ವ್ಯಕ್ತಪಡಿಸುತ್ತಿರಲಿಲ್ಲವೆನಿಸುತ್ತಿತ್ತು. ಚಿಕ್ಕಮಗಳೂರಿನಲ್ಲಿ ಕೊನೆ ಹಂತದ ಸೇವೆಯಲ್ಲಿದ್ದ ನನಗೆ ಊರಿಗೆ ಹೋಗಿ ಅವರನ್ನು ಕರೆತರುವುದು ಕಷ್ಟವಾಗಿತ್ತು. ಮೇ ತಿಂಗಳಲ್ಲಿ ನಿವೃತ್ತನಾದ ನಂತರ ಅವ್ವನ ಬಗೆಗೆ ಹೆಚ್ಚಿನ ಮುತುವರ್ಜಿ ವಹಿಸಲು ಸಾಧ್ಯವಾಗಬಹುದೆಂದು ಭಾವಿಸಿ ಕೊಂಡಿದ್ದೆ.

ಯಕ್ಷಗಾನದ ಆಟಗಳನ್ನು ನೋಡುವುದರಲ್ಲಿ ಅವ್ವನಿಗೆ ತುಂಬಾ ಆಸಕ್ತಿ. ಮೇ ತಿಂಗಳ ಎರಡನೇ ವಾರದ ಒಂದು ದಿನ ನಮ್ಮ ಊರಲ್ಲಿ ಅಂತಹ ಒಂದು ಪ್ರದರ್ಶನ ಜರುಗುವುದರಲ್ಲಿತ್ತು. ನಮ್ಮ ಮನೆ ಇರುವಲ್ಲಿಂದ ಸ್ವಲ್ಪ ದೂರದಲ್ಲಿ ನಮ್ಮ ದಾಯಾದಿ ಶೇಷಪ್ಪಗೌಡರ ಮನೆಯ ಹತ್ತಿರ ಅದು ಜರುಗುವ ಏರ್ಪಾಡಾಗಿತ್ತು. ಒಂದು ದಿನ ಮೊದಲೇ ಆ ಸಲುವಾಗಿ ಅವರ ಮನೆಗೆ ಹೋಗಿದ್ದರಂತೆ. ಆಟದ ರಾತ್ರಿಯಿಡೀ ಕುಳಿತುಕೊಂಡು ನೋಡಿದರಂತೆ. ಬೆಳಿಗ್ಗೆ ಮನೆಗೆ ಹಿಂತಿರುಗಿ, ಕಾಫಿ ಕುಡಿಯುತ್ತಿರುವಾಗಲೇ ತಲೆ ಸುತ್ತಿ ಬಂದಂತಾಗಿ ಅಲ್ಲೇ ನೆಲಕ್ಕುರುಳಿದರಂತೆ. ಕೂಡಲೇ ತಕ್ಕ ಉಪಚಾರಗಳನ್ನು ಮಾಡಿದರು. ಹಾಗೂ ತೀರ್ಥಹಳ್ಳಿಯಿಂದ ವಾಹನವನ್ನು ತರಿಸಿ ಆಸ್ಪತ್ರೆಗೆ ಸಾಗಿಸುವ ಏರ್ಪಾಡು ಸಹ ಮಾಡಿದರು. ಆ ಭಾನುವಾರ ನಾನು ಶಿವಮೊಗ್ಗಕ್ಕೆ ಬಂದಿದ್ದೆ. ವಿಷಯ ತಿಳಿದಾಕ್ಷಣ ನಾವೆಲ್ಲಾ ತೀರ್ಥಹಳ್ಳಿಗೆ ಧಾವಿಸಿದೆವು. ಅವರಾಗ ಅರೆಪ್ರಜ್ಞಾವಸ್ಥೆಯಲ್ಲಿದ್ದರು. ನಾನು ಅವರನ್ನು ಮಾತಾಡಿಸುವ ಪ್ರಯತ್ನ ಮಾಡಿದೆ. ಒಂದು ಸಲ ಕಣ್ಣು ಬಿಟ್ಟು ನನ್ನ ಕಡೆ ನೋಡಿ, ತಡವರಿಸಿ ನನ್ನ ಕೈ ಹಿಡಿದು ಬಸವಳಿದರು. ಅದೇ ನನ್ನ ಮತ್ತು ಅವ್ವನ ಕಡೆಯ ಮೌನ ಸಂವಾದವಾಯಿತು.

ಅಲ್ಲಿಂದ ಅವರನ್ನು ಶಿವಮೊಗ್ಗೆಗೆ ಕರೆತಂದು ಮೆಗ್ಗಾನ್ ಆಸ್ಪತ್ರೆಗೆ ಸೇರಿಸಿದೆವು. ತಜ್ಞ ವೈದ್ಯರೆಲ್ಲಾ ಬಹಳಷ್ಟು ಮುತುವರ್ಜಿ ವಹಿಸಿ ಚಿಕಿತ್ಸಾ ವಿಧಾನಗಳನ್ನು ಅಳವಡಿಸಿದರೂ ಅವರು ಸಂಪೂರ್ಣ ಪ್ರಜ್ಞೆ ಕಳೆದುಕೊಳ್ಳುವುದನ್ನು ತಡೆಯಲಾಗಲಿಲ್ಲ. ನನ್ನ ಸೇವಾ ಅವಧಿಯ ಕಟ್ಟಕಡೆಯ ತಿಂಗಳು ಅದಾಗಿದ್ದು ಆ ಸಮಯದಲ್ಲಿ ನಾನು ದೀರ್ಘಕಾಲ ರಜೆ ಪಡೆಯದೆ ಕಾರ್ಯನಿರತನಾಗಿರುವುದು ಕಾನೂನು ಪ್ರಕಾರ ಅವಶ್ಯಕವಾಗಿತ್ತು. ತಾಯಿ ಆಗಿದ್ದ ಪರಿಸ್ಥಿತಿಯಲ್ಲಿ ಅವರನ್ನು ಬಿಟ್ಟು ಹೋಗದ ಪರಿಸ್ಥಿತಿಯಲ್ಲಿ ತೊಳಲಾಡಿದೆ. ಅವರ ಜೀವನದ ಕಡೇ ಘಳಿಗೆಯಲ್ಲಿ ಅವರೊಡನಿದ್ದು ಶುಶ್ರೂಷೆ ಮಾಡಲಾಗದ ಅಸಹಾಯಕ ನಾನಾಗಿದ್ದೆ. ಎಂತಹ ವಿಪರ್ಯಾಸ! ಮೂರ್ನಾಲ್ಕು ದಿನ ಅವರೊಡನಿದ್ದೆ. ಸಂಬಂಧಿಗಳೆಲ್ಲಾ ಮುತುವರ್ಜಿಯಿಂದ ಅವರನ್ನು ನೋಡಿಕೊಳ್ಳುವ ಭರವಸೆ ಇತ್ತು ನಾನು ಕರ್ತವ್ಯದ ಮೇಲೆ ಹಾಜರಾಗುವಂತೆ ಒತ್ತಾಯ ಹೇರಿದರು. ಮುಂದಿನ ಎರಡು-ಮೂರು ದಿನಗಳಲ್ಲಿ (೧೬-೫-೮೪) ಅವರ ಅವಸಾನದ ಸುದ್ದಿ ಬಂದಿತು. ಕೂಡಲೇ ಶಿವಮೊಗ್ಗೆಗೆ ಹಿಂತಿರುಗಿದೆ.

ಅವ್ವನ ಅವಸಾನದ ಸುದ್ದಿ ತಿಳಿದಾಗ ನನ್ನ ಮನದಾಳದ ಭಾವನೆಗಳನ್ನು ಅಕ್ಷರಗಳಲ್ಲಿ ವರ್ಣಿಸುವುದಸಾಧ್ಯ. ಕೇವಲ ನನಗಾಗಿ ತನ್ನ ಸರ್ವಸ್ವವನ್ನೂ ಅರ್ಪಿಸಿ, ಜೀವ ಸವೆಸಿದ ಜೀವದಾತೆಯ ಕೊನೆಯ ದಿನಗಳಲ್ಲಿ ನಾನೇನೂ ಮಾಡಲಾಗದ್ದಿದುದಕ್ಕೆ ಅಪರಾಧ ಪ್ರಜ್ಞೆ ನನ್ನನಾವರಿಸಿ ಬಿಟ್ಟಿತು. ದಾರಿಯುದ್ದಕ್ಕೂ ತೀರಾ ಎಳೆಯನಾಗಿದ್ದ ನಾನು ಅವ್ವನ ಸೆರಗಿಗೇ ಅಂಟಿಕೊಂಡು ಬೆಳೆದ ಕ್ಷಣಕ್ಷಣಗಳು ಕಣ್ಣು ಮುಂದೆ ಹಾಯ್ದು ಹೋಗಲಾರಂಭಿಸಿದವು. ನನಗೆ ಹೇಗಾದರೂ ಮಾಡಿ ನಾಲ್ಕಕ್ಷರ ಕಲಿಸಲೇಬೇಕೆಂಬ ಗೀಳು ಹಿಡಿಸಿಕೊಂಡ ಅವ್ವನ ಹಂಬಲ



ಮೂರು ತಲೆಮಾರು

ಮುಂದೆ ಹೆಮ್ಮರವಾಗಿ ಬೆಳೆದು ವೈದ್ಯನಾಗಿ, ಶಸ್ತ್ರವೈದ್ಯ ಪರಿಣತಿ ಗಳಿಸಿ ಜಿಲ್ಲಾ ವೈದ್ಯಾಧಿಕಾರಿಯಂಥ ಉನ್ನತ ಸ್ಥಾನಕ್ಕೇರಲು ಆಕೆಯ ತ್ಯಾಗ ಜೀವನ ನನ್ನ ಸ್ಮೃತಿ ಪಟಲದಲ್ಲಿ ಮಿಂಚಿ ಮಾಯ ಆಗುತ್ತಿದ್ದವು. ವ್ಯವಸ್ಥಿತವಾಗಿ ಹುದ್ದೆಯೊಂದರಲ್ಲಿ ನಾನು ಸುಖವಾಗಿ ಕಾಲ ಕಳೆಯುತ್ತಿದ್ದರೂ ಅವ್ವನಿಗೆ ಅಂತಹ ಸುಖದ ಅನುಭವ ಪಡೆಯುವ ಅವಕಾಶಗಳು ದೊರೆಯುತ್ತಿರಲಿಲ್ಲವೆಂದೇ ಹೇಳಬಹುದು. ಮುಂದಿನ ವರ್ಷಗಳಲ್ಲಿ ನಮ್ಮ ಕುಟುಂಬದಿಂದ ನನ್ನ ಪಾಲಿಗೆ ಬಂದಿದ್ದ ಗದ್ದೆ, ತೋಟಗಳನ್ನು ಅಭಿವೃದ್ಧಿಪಡಿಸುವತ್ತ ತನ್ನ ಇಳಿ ವಯಸ್ಸಿನಲ್ಲೂ ಹೆಣಗಾಡುತ್ತಿದ್ದುದನ್ನು ನೋಡಲಾಗುತ್ತಿರಲಿಲ್ಲ. ಬಾಲ್ಯದಲ್ಲಿ ನನ್ನ ಪುರೋಭಿವೃದ್ಧಿ ಅವ್ವನ ಏಕೈಕ ಗುರಿಯಾಗಿದ್ದರೆ, ಅನಂತರದ ವರ್ಷಗಳಲ್ಲಿ ತನ್ನ ಮೊಮ್ಮಕ್ಕಳ ಭವಿಷ್ಯ ಅವಳನ್ನು ಕಾಡಿಸುತ್ತಿದ್ದಂತಿತ್ತು. ನಮ್ಮ ಊರಿನ ಮನೆ ಜಮೀನುಗಳೆಲ್ಲಾ ವರಾಹಿ ಜಲವಿದ್ಯುತ್ ಯೋಜನೆಯಡಿಯಲ್ಲಿ ಮುಳುಗಡೆಯಾಗುವುದು ಖಚಿತವಾದಾಗ, ನಾನು ಮತ್ತೆಲ್ಲಾದರೂ ಜಮೀನು ಖರೀದಿಸಲೇಬೇಕೆಂದು ದುಂಬಾಲು ಬೀಳುತ್ತಿದ್ದಳು.

ಶಿವಮೊಗ್ಗ ಮನೆಗೆ ಹಿಂದಿರುಗಿ ಅವ್ವನ ಪಾರ್ಥಿವ ಶರೀರವನ್ನು ನೋಡಿದಾಗ ದುಃಖ ಉಮ್ಮಳಿಸಿ ಬಂದಿತು. ಆದರೆ ಅಷ್ಟಾಗಿ ಬಾಹ್ಯ ಪ್ರದರ್ಶನ ಮಾಡಲಿಲ್ಲ. ಮುಂದೆ ಅಂತಿಮ ಕ್ರಿಯೆಗಳೆಲ್ಲವನ್ನು ಶಾಸ್ತ್ರೋಕ್ತವಾಗಿ ಜರುಗಿಸಿದೆವು. ಆ ಬಗೆಗೆ ನನ್ನಲ್ಲಿ ವೈಚಾರಿಕ ಮನೋಭಾವ ಮನೆ ಮಾಡಿದ್ದರೂ, ಅವ್ವನ ನಂಬಿಕೆಗಳಿಗೆ ತಲೆಬಾಗುವುದು ನನ್ನ ಕರ್ತವ್ಯವೆನಿಸಿತು. ಅದರಿಂದ ಯಾವ ವಿಧಿ ವಿಧಾನಗಳನ್ನೂ ಮೊಟಕುಗೊಳಿಸಲಿಲ್ಲ. ಮೂರನೆ ದಿನದ ಸಂಸ್ಕಾರದಂತೆ ತಲೆ ಕೂದಲನ್ನೂ ತೆಗೆಸಿಕೊಂಡೆ. ವೈಕುಂಠ ಸಮಾರಾಧನೆಯೂ ಜರುಗಿತು. ನನಗಿಷ್ಟವಿರದಿದ್ದರೂ ಅಸ್ಥಿಸಂಚಯನವನ್ನು ಅವ್ವನ ಅಭಿಲಾಷೆಯಂತೆ ಗೋಕರ್ಣದಲ್ಲೇ ಮಾಡಿದೆ.

## ಅಂತಿಮ ನಮನ

ಮೊದಲ ಸಾರಿಯೂ ಸೇರಿದಂತೆ ಚಿಕ್ಕಮಗಳೂರು ಆಸ್ಪತ್ರೆಯಲ್ಲಿ ಸುಮಾರು ಎಂಟು ವರ್ಷ ಸೇವಾನಿರತನಾಗಿದ್ದೆ. ಅದೊಂದು ನನ್ನ ಎರಡನೇ ಮನೆಯಂತಾಗಿತ್ತು. ಮೊದಲ ಸಾರಿ ನನಗಾವ ಆಡಳಿತದ ಜವಾಬ್ದಾರಿಗಳಿಲ್ಲದೆ ನನ್ನ ವೃತ್ತಿಯ ಕಡೆಗೇ ಹೆಚ್ಚಿನ ಗಮನ ಕೊಡಲು ಸಾಧ್ಯವಾಗಿತ್ತು; ಆಸ್ಪತ್ರೆಯ ಸಿಬ್ಬಂದಿ ವರ್ಗದವರೊಡನೆ ಸಂಘರ್ಷಗಳಿಗವಕಾಶವಿರದೆ ಎಲ್ಲ ರೊಡನೆ ಸಾಮರಸ್ಯದ ವಾತಾವರಣವಿತ್ತು. ಪ್ರಸ್ತುತ ಸಮಯದಲ್ಲಿ ಆಸ್ಪತ್ರೆಯಂಥ ಬಹುಜನೋಪ ಯೋಗಿ ಸಂಸ್ಥೆಯ ಆಡಳಿತ ನಿರ್ವಹಣೆ ಜವಾಬ್ದಾರಿ ಇತ್ತು. ಕೆಲಸಾರಿ ವೈದ್ಯ ಸಮೂಹದವರೂ ಸೇರಿದಂತೆ ಇತರ ಸಿಬ್ಬಂದಿ ವರ್ಗದವರು ಕರ್ತವ್ಯ ಲೋಪವೆಸಗಿದಂತೆ ಕಂಡುಬಂದಾಗ ಶಿಸ್ತಿನ ಕ್ರಮಗಳನ್ನು ಜರುಗಿಸುವ ಸಂದರ್ಭಗಳೂ ಒದಗಿ ಬಂದಿದ್ದವು. ಮೇಲ್ನೋಟಕ್ಕೆ ಸೌಹಾರ್ದದ

ವಾತಾವರಣವಿರುವಂತಿದ್ದರೂ, ಕೆಲವರಲ್ಲಾದರೂ ಅಸಮಾಧಾನದ ಕಿಡಿ ಹುದುಗಿಕೊಂಡಿರುವುದು ನನಗೇನೂ ತಿಳಿಯದ ಸಂಗತಿಯಾಗಿರಲಿಲ್ಲ. ಅಂತಹದೊಂದು ಸನ್ನಿವೇಶದಲ್ಲಿ ನಿವೃತ್ತಿ ಸಮಯದ ಬೀಳ್ಕೊಡಿಗೆ ಸಮಾರಂಭದಲ್ಲಿ ಭಾಗಿಯಾಗಬಾರದೆಂಬ ತೀರ್ಮಾನಕ್ಕೂ ಬಂದಿದ್ದೆ. ಅದೇ ಸಮಯದಲ್ಲಿ ನನ್ನ ತಾಯಿಯವರ ಅವಸಾನವೂ ಆಗಿದ್ದು ಅಂತಹ ಸಮಾರಂಭವನ್ನು ನಿರಾಕರಿಸುವುದಕ್ಕೆ ಸರಿಯಾದ ಕಾರಣವನ್ನೂ ಒದಗಿಸಿತ್ತು. ಸಿಬ್ಬಂದಿ ವರ್ಗದವರೆಲ್ಲಾ ಒಟ್ಟಾಗಿ ಈ ಬಗೆಗೆ ಪ್ರಸ್ತಾಪಿಸಿದಾಗ ನಾನು ಅದನ್ನು ಖಡಾಖಂಡಿತವಾಗಿ ನಿರಾಕರಿಸಿಬಿಟ್ಟಿದ್ದೆ. ಆದರೆ ತಾಯಿಯ ಮರಣಾನಂತರದ ಸಂಸ್ಕಾರಗಳಲ್ಲಿ ಭಾಗಿಯಾಗಲು ಶಿವಮೊಗ್ಗೆಗೆ ತೆರಳಿದ್ದ ಸಮಯದಲ್ಲಿ ಆ ಬಗೆಗೆ ಎಲ್ಲಾ ಏರ್ಪಾಡುಗಳನ್ನು ಮಾಡಿಕೊಂಡು, ವಾಪಸು ಬಂದಾಗ ನನ್ನ ಮನಸ ವೊಲಿಸುವ ತೀರ್ಮಾನಕ್ಕೆ ಬಂದಿದ್ದರಂತೆ. ಕಡೇಸಲ ನಾನು ಹಿಂತಿರುಗಿದಾಗ ಮತ್ತೆ ಅವರೆಲ್ಲಾ ನನ್ನನ್ನು ಭೇಟಿಯಾಗಿ ಒತ್ತಡ ಹೇರಲಾರಂಭಿಸಿದರು. ಅಷ್ಟೊಂದು ವರ್ಷಗಳು ಅವರೆಲ್ಲರೊಡನಿದ್ದ ಬಾಂಧವ್ಯವನ್ನು ನಿರ್ದಾಕ್ಷಿಣ್ಯವಾಗಿ ನಿರಾಕರಿಸುವ ಮನಸ್ಸಾಗಲಿಲ್ಲ.

ಸಮಾರಂಭ ತುಂಬಾ ಆತ್ಮೀಯವಾಗಿ ಜರುಗಿತು. ವೈದ್ಯರೂ ಸೇರಿ ಇತರ ಸಿಬ್ಬಂದಿ ವರ್ಗದವರೆಲ್ಲಾ ಅವರಿಗುಂಟಾಗಿರಬಹುದಾದ ಅಸಮಾಧಾನ ಪ್ರಕರಣಗಳನ್ನು ಮರೆತು ಆತ್ಮೀಯವಾಗಿ ನನ್ನ ಬಗೆಗೆ ಹೊಗಳಿ ಮಾತಾಡಿದರು. ಹಾರ, ತುರಾಯಿ, ಫಲತಾಂಬೂಲ, ಮತ್ತು ನೆನಪಿನ ಕಾಣಿಕೆಗಳನಿತ್ತು ಸನ್ಮಾನಿಸಿದರು. ಉತ್ತರಿಸುವ ನನ್ನ ಸರದಿ ಬಂದಾಗ ಸುಮಾರು ಮೂರು ದಶಕಗಳ ಕಾಲ ನನ್ನ ಸರ್ಕಾರಿ ಸೇವೆಯಲ್ಲಿನ ಸಿಹಿಕಹಿ ಅನುಭವಗಳೆಲ್ಲಾ ಸ್ಮೃತಿ ಪಟಲದಲ್ಲಿ ಹಾಯ್ದು ಹೋದಂತಾದವು. ಅವುಗಳನ್ನು ಸಂಕ್ಷಿಪ್ತವಾಗಿ ಹೇಳಿದೆನೆನಿಸುತ್ತದೆ. ಆ ದಿಸೆಯಲ್ಲಿ ನನ್ನೊಡನೆ ಸಹಕರಿಸಿದ - ಅದರಲ್ಲೂ ಬಹುಪಾಲು ಸಮಯವನ್ನು ಕಳೆದ ಚಿಕ್ಕಮಗಳೂರಿನವರಿಗೆ - ನನ್ನ ಕೃತಜ್ಞತೆಗಳನ್ನು ಅರ್ಪಿಸಿದೆ. ನನ್ನ ಕನಸಿನ ಹಂಬಲವಾಗಿದ್ದ ಬೃಹತ್ ಆಸ್ಪತ್ರೆಯ ನಿರ್ಮಾಣ ನಾನು ನಿವೃತ್ತಿಯಾಗುವವರೆಗೂ ಸಾಧ್ಯವಾಗುವ ಸೂಚನೆಗಳು ಕಂಡುಬರದಿದ್ದುದಕ್ಕೆ ನನಗುಂಟಾದ ನಿರಾಶೆಯನ್ನು ವ್ಯಕ್ತಪಡಿಸಿ, ಸರ್ಕಾರಿ ಸೇವೆಗೆ ಅಂತಿಮ ನಮನ ಮಾಡಿದೆ.

---



ಸರ್ಕಾರಿ ಸೇವೆಗೆ ವಿದಾಯ - ಚಿಕ್ಕಮಗಳೂರು

# ೧೭. ಸಾಮಾಜಿಕ ಹಾಗೂ ಸಂಘ ಸಂಸ್ಥೆಗಳಲ್ಲಿ ಪಾತ್ರ

ತೀರ್ಥಹಳ್ಳಿಯಲ್ಲಿ ಪ್ರೌಢಶಾಲಾ ವಿದ್ಯಾರ್ಥಿಯಾಗಿದ್ದಾಗ 'ಮೈಸೂರು ಚಲೋ' (೧೯೪೭) ರಾಜಕೀಯ ಚಳವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದರ ವಿನಾ, ವಿದ್ಯಾರ್ಥಿ ದೆಸೆಯಲ್ಲಿ ಬೇರಾವ ಚಟುವಟಿಕೆಗಳಲ್ಲಿ ಪಾತ್ರವಹಿಸುವುದು ನನಗೆ ಸಾಧ್ಯವಾಗಿರಲಿಲ್ಲ. ಮುಂದೆ ವೈದ್ಯಕೀಯ ಪದವಿ ಗಳಿಸಿದಾಗ ವೈದ್ಯರೆಲ್ಲರ ಪ್ರಾತಿನಿಧಿಕ ಸಂಸ್ಥೆ - ಇಂಡಿಯನ್ ಮೆಡಿಕಲ್ ಅಸೋಸಿಯೇಷನ್‌ನ (ಐ.ಎಂ.ಎ.) ಸದಸ್ಯನಾಗಿ ಸುಮಾರು ಐದು ದಶಕಗಳಷ್ಟು ಸಮಯ ಅದರಲ್ಲಿ ಮುಂದುವರಿದಿದ್ದೆ. ಮೊದಲ ವರ್ಷಗಳಲ್ಲಿ ಅದರ ಶೈಕ್ಷಣಿಕ ಮತ್ತು ಕೆಲವು ಸಾಮಾಜಿಕ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಿದ್ದೆ. ಕೊಳ್ಳೇಗಾಲ ಮತ್ತು ಶಿವಮೊಗ್ಗಾಗಳಲ್ಲಿದ್ದ ಸಮಯದಲ್ಲಿ ಸ್ಥಳೀಯ ಶಾಖೆಗಳ ಅಧ್ಯಕ್ಷನೂ ಆಗಿದ್ದೆ. ಸ್ನಾತಕೋತ್ತರ ಎಂ.ಎಸ್. ಪದವಿ ಗಳಿಸಿದಾಗಿನಿಂದ (೧೯೬೬) ಭಾರತೀಯ ಶಸ್ತ್ರವೈದ್ಯರ ಸಂಘ (Association of Surgeons of India - ASI)ದ ಸದಸ್ಯನಾಗಿ ಇಪ್ಪತ್ತೈದು ವರ್ಷಗಳಿಗಿಂತಲೂ ಹೆಚ್ಚು ಸಮಯ ಮುಂದುವರಿದೆ. ನಂತರ ನನ್ನನ್ನು ಒಬ್ಬ ಹಿರಿಯ ಸದಸ್ಯನೆಂದು ಪರಿಗಣಿಸಿದ್ದು, ಅದರೊಡನೆ ಔಪಚಾರಿಕ ಸಂಬಂಧ ಮುಂದುವರಿದುಕೊಂಡು ಬಂದಿದೆ.

## ಸರ್ಕಾರಿ ಸೇವಾನಿರತ ವೈದ್ಯರ ಸಮಿತಿ

ದಾವಣಗೆರೆಯಲ್ಲಿ ೧೯೭೧ರಲ್ಲಿ ಐ.ಎಂ.ಎ.ಯ ರಾಜ್ಯ ಸಮ್ಮೇಳನ ಜರುಗಿತು. ಚಿಕ್ಕಮಗಳೂರಿನಿಂದ ಕೆಲವು ವೈದ್ಯರು ಅದರಲ್ಲಿ ಭಾಗವಹಿಸಿದ್ದೆವು. ಕಡೇ ದಿನದ ಬಹಿರಂಗ ಅಧಿವೇಶನದಲ್ಲಿ ಸರ್ಕಾರದ ಸೇವಾನಿರತ ವೈದ್ಯರ ಸ್ಥಿತಿಗತಿಗಳ ಬಗೆಗೆ ಚರ್ಚೆ ನಡೆಯುತ್ತಿತ್ತು. ಅವರು ಎದುರಿಸುತ್ತಿದ್ದ ಸಮಸ್ಯೆಗಳ ಬಗೆಗೆ ಅಧ್ಯಯನ ನಡೆಸಿ ಪರಿಹಾರ ಸೂಚಿಸಲು ಎರಡು ವರ್ಷಗಳ ಹಿಂದೆ ಉಪಸಮಿತಿಯೊಂದನ್ನು ನೇಮಿಸಲಾಗಿತ್ತಂತೆ. ಆದರೆ ಆ ಸಮಿತಿ ಒಂದು ಸಾರಿಯೂ ಸಭೆ ಸೇರಿ ಕಾರ್ಯ ನಿರ್ವಹಿಸಿರಲಿಲ್ಲವೆಂಬ ವಿಷಯ ಅಂದು ವ್ಯಕ್ತವಾಯಿತು. ಬಹುಪಾಲು ಖಾಸಗಿ ವೈದ್ಯರೇ ತುಂಬಿದ್ದ ಆ ಸಮಿತಿ ಸರ್ಕಾರಿ ವೈದ್ಯರ ಸ್ಥಿತಿಗತಿಗಳ ಬಗೆಗೆ ಹೆಚ್ಚಿನ ಆಸ್ಥೆ ವಹಿಸದಿದ್ದುದರಲ್ಲಿ ಅಚ್ಚರಿಯೇನೂ ಇರಲಿಲ್ಲ. ಆದರೂ ಸಲಹೆ ಸೂಚನೆಗಳನ್ನು ನೀಡಿ ಮಾತನಾಡುತ್ತಿದ್ದವರಿಗೇನೂ ಕೊರತೆ ಇರಲಿಲ್ಲ. ಆ ಸಮಯದಲ್ಲಿ ಅಧ್ಯಕ್ಷರ ಅನುಮತಿ ಪಡೆದು ನನ್ನ ಅಭಿಪ್ರಾಯಗಳನ್ನು ತಿಳಿಸಲು ಮುಂದಾದೆ. ಎರಡು ವರ್ಷಗಳ ಹಿಂದೆ ನೇಮಕವಾದ ಸಮಿತಿ ಒಂದು ಸಾರಿಯೂ ಸಭೆ ಸೇರಿ ಸರ್ಕಾರಿ ವೈದ್ಯರ ಸಮಸ್ಯೆಗಳ ಬಗೆಗೆ ವಿಚಾರ ವಿನಿಮಯ ಮಾಡಲಿಲ್ಲವೆಂದರೆ, ಬಹುಪಾಲು ಖಾಸಗಿ ವೈದ್ಯರೇ ಇರುವ ಐ.ಎಂ.ಎ. ಅವರಿಂದ ಈ ವರ್ಗದ ವೈದ್ಯರಿಗೆ ಯಾವ ಪ್ರಯೋಜನವೂ ಆಗಲಾರದು; ಇಂತಹದೇ ಪರಿಸ್ಥಿತಿಗಳಿದ್ದ ನೆರೆಯ ಮದ್ರಾಸು, ಕೇರಳಗಳಂಥ ರಾಜ್ಯಗಳಲ್ಲಿ ಸರ್ಕಾರಿ ವೈದ್ಯರು ಐ.ಎಂ.ಎ.ದಿಂದ ಹೊರಬಂದು ತಮ್ಮದೇ ಆದ ಸಂಘಟನೆಗಳನ್ನು ಸ್ಥಾಪಿಸಿಕೊಂಡಿದ್ದಾರೆ. ನಮ್ಮ ರಾಜ್ಯದಲ್ಲೂ ಸರ್ಕಾರಿ ವೈದ್ಯರು ಅಂತಹ ಪ್ರತ್ಯೇಕ ಸಂಘಟನೆಗಳನ್ನು ಹುಟ್ಟುಹಾಕಲು ಇದೀಗ ಕಾಲ ಸನ್ನಿಹಿತವಾಗಿದೆಯೆಂದು ಪ್ರಬಲವಾಗಿಯೇ

ಪ್ರತಿಪಾದಿಸಿದೆ. ವೇದಿಕೆಯ ಮೇಲೆ ಆಸೀನರಾಗಿದ್ದ ಐ.ಎಂ.ಎ.ಯ ಕೆಲವು ಅಧ್ವರ್ಯುಗಳಿಗೆ ನಾನಾಡಿದ ಮಾತು ರೇಗುವಂತೆ ಮಾಡಿರಬೇಕು. ಆ ತನಕ ಒಗ್ಗಟ್ಟಿನಿಂದ ಇದ್ದ ಸಂಸ್ಥೆಯನ್ನು ಒಡೆಯುವ ಅಪಸ್ವರದ ಮಾತುಗಳನ್ನು ನಾನಾಡುತ್ತಿದ್ದೇನೆಂದು ಆಕ್ಷೇಪಿಸಲಾರಂಭಿಸಿದರು. ಕೆಲವರಂತೂ ನನ್ನನ್ನು ಖಂಡಿಸಿ ಮಾತಾಡಿದರು. ಆದರೆ ಸಭಾಭವನದಲ್ಲಿದ್ದ ಹಲವಾರು ಸರ್ಕಾರಿ ವೈದ್ಯರು ಒಟ್ಟಾಗಿ ಎದ್ದು ನಿಂತು ನಾನಾಡಿದ ಮಾತುಗಳನ್ನು ಸಮರ್ಥಿಸಲು ತಯಾರಾದರು. ಮತ್ತೆ ಕೆಲವರು ವೇದಿಕೆಗೂ ಧಾವಿಸಿ ನಾನಾಡಿದ ಧಾಟಿಯಲ್ಲೇ ಐ.ಎಂ.ಎ.ಯನ್ನು ದೂಷಿಸ ತೊಡಗಿದರು. ಅಧ್ಯಕ್ಷರು ನಡುವೆ ಪ್ರವೇಶಿಸಿ ಪರಿಸ್ಥಿತಿಯನ್ನು ಹತೋಟಿಗೆ ತರಬೇಕಾಯಿತು. ಹಾಗೂ ಉಪಸಮಿತಿಯನ್ನು ಪುನಾರಚಿಸಿ, ಸರ್ಕಾರಿ ವೈದ್ಯರಿಗೆ ಸರಿಯಾದ ಪ್ರಾತಿನಿಧ್ಯ ಕೊಡುವುದಲ್ಲದೆ, ಅವರ ಸಮಸ್ಯೆಗಳನ್ನು ಬಗೆ ಹರಿಸುವಲ್ಲಿ ಇನ್ನು ಮುಂದೆ ಐ.ಎಂ.ಎ. ಜವಾಬ್ದಾರಿಯುತ ಪಾತ್ರ ವಹಿಸುವುದಾಗಿ ಭರವಸೆ ನೀಡಿದರು.

ಮುಂದಿನ ಕೆಲವೇ ದಿನಗಳಲ್ಲಿ ಐ.ಎಂ.ಎ. ಯವರು ಶಿವಮೊಗ್ಗಾದ ಡಿ.ಎಂ.ಓ. ಡಾ॥ ಎಂ. ರಾಜಶೇಖರಪ್ಪನವರ ಸಂಚಾಲಕತ್ವದಲ್ಲಿ ಸರ್ಕಾರಿ ವೈದ್ಯರ ಸಮಸ್ಯೆಗಳ ಬಗೆಗೆ ಉಪಸಮಿತಿಯೊಂದನ್ನು -Doctors in Employment Committee (ಡಿ.ಇ.ಸಿ.) ರಚಿಸಿದರು. ಅದರಲ್ಲಿ ನನ್ನ ಹೆಸರೂ ಸೇರಿತ್ತೆಂದು ಬೇರೆ ಹೇಳಬೇಕಾಗಿಲ್ಲ!

ಮುಂದಿನ ಕೆಲವು ದಿನಗಳಲ್ಲಿ ಐ.ಎಂ.ಎ. ಅಧ್ಯಕ್ಷರು ಬೆಂಗಳೂರಲ್ಲಿ ಡಿ.ಇ.ಸಿ.ಯ ಸಭೆ ಏರ್ಪಡಿಸಿದರು. ಬಹುಪಾಲು ಸದಸ್ಯರು ಸರ್ಕಾರಿ ವೈದ್ಯರ ಸಮಸ್ಯೆಗಳ ಬಗೆಗೆ ತಮ್ಮ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದರು. ಅಂತಹ ಅಭಿಪ್ರಾಯಗಳಿಗೆ ಸಮ್ಮತಿಸದೆ, ಸಮಸ್ಯೆಗಳನ್ನು ಆಮೂಲಾಗ್ರವಾಗಿ ಅಭ್ಯಾಸ ಮಾಡಿ, ಅವುಗಳನ್ನು ಜಾರಿ ಮಾಡುವ ಬಗೆಗೆ ಸರ್ಕಾರವನ್ನು ಒತ್ತಾಯ ಮಾಡಬೇಕೆಂಬ ನನ್ನ ಸ್ಪಷ್ಟ ಅಭಿಪ್ರಾಯವನ್ನು ಪ್ರತಿಪಾದಿಸಿದೆ. ಆದರೆ ಅಧ್ಯಕ್ಷರಿಗೆ ಅದೇನೆನ್ನಿಸಿತೋ ತಿಳಿಯದು. ಆರೋಗ್ಯ ಇಲಾಖೆಯ ನಿರ್ದೇಶಕರು ತಮ್ಮ ಆಪ್ತ ಸ್ನೇಹಿತ ರಂತಲೂ, ಕೂಡಲೇ ಅವರನ್ನು ಫೋನ್‌ನಲ್ಲಿ ಸಂಪರ್ಕಿಸಿ ಅವರನ್ನು ಭೇಟಿ ಮಾಡಿ ನಮ್ಮ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಬಹುದೆಂದು ಹೇಳಿದರು! ಸರ್ಕಾರಿ ವೈದ್ಯರ ಸಮಸ್ಯೆಗಳ ಬಗೆಗೆ ಐ.ಎಂ.ಎ.ಯವರಲ್ಲಿದ್ದ ಅರಿವಿನ ಪ್ರತೀಕ ಅದೆನ್ನಬಹುದು. ನಾನು ಮತ್ತೆ ಮಾತಾಡಿ ನಮ್ಮ ಸಮಸ್ಯೆಗಳ ಪರಿಹಾರ ನಿರ್ದೇಶಕರ ಜೇಬಿನಲ್ಲಿರುವುದಿಲ್ಲ; ಅಂತಹ ಅವಸರದ ವಿಧಾನಗಳಿಂದ ಏನನ್ನೂ ಸಾಧಿಸಿದಂತಾಗುವದಿಲ್ಲ; ಸಮಸ್ಯೆಗಳ ವಿವರಗಳನ್ನು ತಿಳಿದುಕೊಂಡು ಸರಿಯಾದ ರೀತಿಯಲ್ಲಿ ನಾವು ಮುಂದುವರಿಯ ಬೇಕಾಗುತ್ತದೆಂದು ಪಟ್ಟು ಹಿಡಿದು ವಾದಿಸಿದೆ. ಅಧ್ಯಕ್ಷರು ಸಭೆಯನ್ನು ಅಷ್ಟಕ್ಕೇ ಮುಗಿಸಿ ಮುಂದಿನ ಸಭೆಗೆ ಬರುವಾಗ ಸಮಸ್ಯೆಗಳ ಬಗೆಗೆ ಸದಸ್ಯರೆಲ್ಲರೂ ನಿರ್ದಿಷ್ಟ ಸಲಹೆ ಮತ್ತು ಪರಿಹಾರ ಮಾರ್ಗಗಳನ್ನು ತಯಾರುಮಾಡಿಕೊಂಡು ಬರಬೇಕೆಂಬ ಸಲಹೆ ಇತ್ತರು.

ಬೆಂಗಳೂರಿನಿಂದ ಹಿಂದಿರುಗುವಷ್ಟರಲ್ಲೇ ಅಂದಿನ ಸಭೆ ನಡೆದ ರೀತಿ ನೀತಿಗಳನ್ನು ಗಮನಿಸಿ, ಐ.ಎಂ.ಎ.ಯವರು ತಾಳಬಹುದಾದ ನಿಲುವುಗಳ ಬಗೆಗೆ ನನ್ನಲ್ಲಿ ಅನುಮಾನ ಗಳುಂಟಾದವು. ಒಂದೆರಡು ದಿನ ಯೋಚಿಸಿ ಅಂತಹ ಸಮಿತಿಯಲ್ಲಿ ನಾನು ಮುಂದುವರಿಯುವು ದರಿಂದ ಪ್ರಯೋಜನವಾಗಲಾರದೆಂಬ ನಿರ್ಧಾರಕ್ಕೆ ಬಂದೆ. ಹಾಗೂ ಡಿ.ಇ.ಸಿ.ಯ ಸಂಚಾಲಕ ಡಾ॥ ರಾಜಶೇಖರಪ್ಪನವರಿಗೆ ನನ್ನ ಅನಿಸಿಕೆಗಳನ್ನು ತಿಳಿಸಿ ಸಮಿತಿಯಲ್ಲಿ ಮುಂದುವರಿಯಲು ನನಗೆ ಸಾಧ್ಯವಾಗುವುದಿಲ್ಲವೆಂದು ಹೇಳಿ ರಾಜೀನಾಮೆ ನೀಡುತ್ತಿರುವುದಾಗಿ ಪತ್ರ ಬರೆದೆ.

ಅವರೀಗ ಪೇಚಿಗೆ ಸಿಲುಕಿದರೆನಿಸುತ್ತದೆ. ನನ್ನ ಕಾಳಜಿ ತಮಗೆ ಅರ್ಥವಾಗುತ್ತದೆಂತಲೂ ಮುಂದಿನ ಸಭೆಗಳಲ್ಲಿ ನಾನು ಸೂಚಿಸಿದ ರೀತಿಯಲ್ಲೇ ಕಾರ್ಯನಿರ್ವಹಿಸುವ ಭರವಸೆ ನೀಡಿ, ರಾಜೀನಾಮೆಯನ್ನು ಅಂಗೀಕರಿಸುವುದಿಲ್ಲವೆಂದು ಪತ್ರ ಬರೆದರು.

ಮುಂದಿನ ಸಭೆಗಳಲ್ಲೂ ನಾನು ಕೆಲವು ಪ್ರಮುಖ ವಿಷಯಗಳನ್ನು ಪ್ರತಿಪಾದಿಸುತ್ತಿದ್ದೆ. ಅವುಗಳಲ್ಲಿ ಪ್ರಮುಖವಾದುದು ಸರ್ಕಾರಿ ವೈದ್ಯರಿಗಿರುವ ರಜೆಗಳ ಸೌಲಭ್ಯಗಳಿಗೆ ಕುರಿತಾದದ್ದು. ಸರ್ಕಾರದ ಸೇವೆಯಲ್ಲಿ ನಿರತರಾದವರೆಲ್ಲರಿಗೂ ೧೫ ದಿನ ಸಾಂದರ್ಭಿಕ ರಜೆ (ಸಿ.ಎಲ್.) ಅವಕಾಶವಿರುತ್ತದೆಯಷ್ಟೆ. ಇದಲ್ಲದೆ ಇತರ ಇಲಾಖೆಗಳಲ್ಲಿರುವ ನೌಕರರು ವರ್ಷದಲ್ಲಿ ೫೨ ಭಾನುವಾರಗಳು, ೧೨ ಎರಡನೇ ಶನಿವಾರಗಳು ಹಾಗೂ ಸುಮಾರು ೨೫ ಸಾರ್ವಜನಿಕ ರಜಾ ದಿನಗಳನ್ನು ಬಳಸಿಕೊಳ್ಳುವ ಅವಕಾಶಗಳಿರುತ್ತವೆ. ಆದ್ದರೆ ಸರ್ಕಾರಿ ವೈದ್ಯರು ಈ ಎಲ್ಲಾ ರಜೆಗಳನ್ನು ಬಳಸಿಕೊಳ್ಳುವಂತಿರುವುದಿಲ್ಲ. ಅದರಿಂದ ನಮಗೆ ಕನಿಷ್ಠ ೪೫ ದಿನಗಳ ವಿಶೇಷ ಸಾಂದರ್ಭಿಕ ರಜೆ ನೀಡುವ ಅವಕಾಶ ನೀಡುವಂತೆ ಸರ್ಕಾರವನ್ನು ಒತ್ತಾಯಿಸಬೇಕೆಂದು ಪ್ರತಿಪಾದಿಸಿದೆ. ಈ ವಾದವನ್ನು ಮಂಡಿಸಿದಾಗ ಡಾ॥ ರಾಜಶೇಖರಪ್ಪನವರೇ "ಆಸ್ಪತ್ರೆಗಳ ವೈದ್ಯರಿಗೆಲ್ಲಾ ಅಷ್ಟೊಂದು ರಜೆ ನೀಡುವುದಾದರೆ ಅದು ಹೇಗೆ ಆಸ್ಪತ್ರೆಗಳನ್ನು ನಡೆಸುವುದು ಸಾಧ್ಯ" ಎಂದು ನನ್ನ ಮೇಲೆ ಹೌಹಾರಿದ್ದು ಜ್ಞಾಪಕವಿದೆ. ರಜಾದಿನಗಳಲ್ಲಿ ಆಸ್ಪತ್ರೆಗಳ ಕಾರ್ಯ ನಿರ್ವಹಿಸುವ ಕಷ್ಟ ಪರಿಸ್ಥಿತಿಯ ಅರಿವು ಅವರಿಗಿತ್ತು. ನಾನು ಪ್ರತಿಪಾದಿಸುವಷ್ಟು ದಿನಗಳ ರಜೆಯನ್ನು ಕೊಡಲು ಸಾಧ್ಯ ಆಗದಿದ್ದರೆ, ಯಾವುದೋ ಒಂದು ಸೂತ್ರದ ಪ್ರಕಾರ ಇತರ ನೌಕರರಿಗಿಂತ ಹೆಚ್ಚು ದಿನಗಳ ಸಾಂದರ್ಭಿಕ ರಜಾ ದಿನಗಳನ್ನು ಮಂಜೂರು ಮಾಡಬೇಕೆಂಬ ನನ್ನ ವಾದಕ್ಕೆ ಬೆಂಬಲ ದೊರೆತು ಅದರಂತೆ ನಿರ್ಣಯ ಮಾಡಲಾಯಿತು. (ಮುಂದೆ ಈ ಪ್ರಸ್ತಾವ ಸರ್ಕಾರದ ಮಟ್ಟದಲ್ಲಿ ಚರ್ಚೆಯಾಗಿ ಅಂತಿಮವಾಗಿ ಸರ್ಕಾರಿ ವೈದ್ಯರಿಗೆ ಇತರರಿಗಿಂತ ೧೦ ದಿನಗಳ ವಿಶೇಷ ಸಾಂದರ್ಭಿಕ ರಜೆ ಕೊಡಬಹುದೆಂಬ ಮಂಜೂರಾತಿ ದೊರೆಯಿತು. ಅದರಿಂದಾಗಿ ವೈದ್ಯ ಸಮೂಹದವರು ಈಗಲೂ ವರ್ಷದಲ್ಲಿ ಒಟ್ಟು ೨೫ ದಿನಗಳ ಸಿ.ಎಲ್. ಪಡೆಯುತ್ತಾರೆ). ಹೀಗೆ ಪ್ರತಿಯೊಂದು ಸಭೆಯಲ್ಲಿ ಇಂತಹ ಬೇರೆ ಬೇರೆ ವಿಷಯಗಳ ಬಗೆಗೆ ಚರ್ಚಿಸುವ ಬದಲು ನಾನು ಹಿಂದಿನಿಂದಲೂ ಪ್ರತಿಪಾದಿಸುತ್ತಿದ್ದಂತೆ ಸರ್ಕಾರಿ ವೈದ್ಯರ ಸಮಸ್ಯೆಗಳ ಬಗೆಗೆ ರಾಜ್ಯಾದ್ಯಂತವಿರುವ ಸರ್ಕಾರಿ ವೈದ್ಯರ ಅಭಿಪ್ರಾಯ ಸಂಗ್ರಹಣೆ ಮಾಡುವುದೇ ಸರಿಯಾದ ಮಾರ್ಗವೆಂಬ ನಿರ್ಧಾರ ಮಾಡಲು ಸಾಧ್ಯವಾಯಿತು. ಅಂತಹ ಒಂದು ವ್ಯವಸ್ಥೆಯ ಸಂಚಾಲಕನ ಜವಾಬ್ದಾರಿಯನ್ನು ನನಗೇ ವಹಿಸಿದರು.

ಮುಂದೆ ಸರ್ಕಾರಿ ವೈದ್ಯರ ಸೇವಾನಿಯಮಗಳು ವೇತನ, ಬಡತಿ, ರಜಾ ಸೌಕರ್ಯ ಮುಂತಾದ ಹತ್ತು ಹಲವು ವಿಷಯಗಳ ಪಟ್ಟಿಯೊಂದನ್ನು ತಯಾರು ಮಾಡಿದೆ. ಅವುಗಳನ್ನೊಳಗೊಂಡ ಪ್ರಶ್ನಾವಳಿಯ ಪ್ರತಿಗಳನ್ನೂ ಎಲ್ಲಾ ಐ.ಎಂ.ಎ. ಶಾಖೆಗಳಿಗೂ, ಸರ್ಕಾರಿ ವೈದ್ಯರಿಗೂ ಕಳುಹಿಸಿ ಕೊಡಲಾಯಿತು. ಅವರೆಲ್ಲರಿಂದ ಬಂದ ಅಭಿಪ್ರಾಯಗಳನ್ನು ಕ್ರೋಢೀಕರಿಸಿ ಡಿ.ಇ.ಸಿ.ಯ ಸಭೆಯೊಂದರಲ್ಲಿ ಚರ್ಚಿಸಲಾಯಿತು; ಹಾಗೂ ಸರ್ಕಾರಕ್ಕೆ ಸಲ್ಲಿಸಲು ಒಂದು ಸಮಗ್ರ ವರದಿಯನ್ನು ತಯಾರು ಮಾಡಿದೆವು. ಈ ಹಂತವನ್ನು ತಲುಪುವಷ್ಟರಲ್ಲಿ ಎರಡು ವರ್ಷಗಳೇ ಸಂದು ಹೋಗಿದ್ದವು. ಆ ಸಮಯದಲ್ಲಿ ಡಾ॥ ರಾಜಶೇಖರಪ್ಪನವರ ಸ್ಥಾನದಲ್ಲಿ ನನ್ನನ್ನೇ ಡಿ.ಇ.ಸಿ.ಯ ಸಂಚಾಲಕನನ್ನಾಗಿ ನೇಮಿಸಲಾಗಿತ್ತು. ಹಾಗೆ ತಯಾರಿಸಿದ ವರದಿಯನ್ನು ಜ್ಞಾಪನಾಪತ್ರದ (Memorandum) ಮಾದರಿಯಲ್ಲಿ ಐ.ಎಂ.ಎ. ಅಧ್ಯಕ್ಷರು ಹಾಗೂ ಡಿ.ಇ.ಸಿ.

ಯವರನ್ನೊಳಗೊಂಡ ನಿಯೋಗ ಆರೋಗ್ಯ ಸಚಿವರು, ಇಲಾಖಾ ನಿರ್ದೇಶಕರು ಮುಂತಾದವರನ್ನು ಭೇಟಿ ಮಾಡಿ ಸಲ್ಲಿಸುವ ನಿರ್ಧಾರವೂ ಆಯಿತು. ಆದರೆ ಕೆಲವು ತಿಂಗಳುಗಳ ನಂತರ ಆಗಿನ ಅಧ್ಯಕ್ಷರು (ಬಹುಶಃ ಮೆಡಿಕಲ್ ಕಾಲೇಜೊಂದರ ಅಧ್ಯಾಪಕರೆಂದು ನೆನಪು) ಮತ್ತೆ ಕೆಲವು ಕಾರ್ಯಕಾರಿ ಸಮಿತಿಯ ಸದಸ್ಯರೊಡನೆ ಅದನ್ನು ಆರೋಗ್ಯ ಸಚಿವರಿಗೆ ಒಪ್ಪಿಸಿ ಬಂದರಂತೆ! ಸುಮಾರು ಎರಡು ವರ್ಷಗಳ ಕಾಲ ಶ್ರಮವಹಿಸಿ ತಯಾರಿಸಿದ ವರದಿಯನ್ನು ಡಿ.ಇ.ಸಿ. ಯವರ ಗಮನಕ್ಕೆ ತರುವ ಸೌಜನ್ಯವನ್ನೂ ಸಹ ತೋರಿಸಲಿಲ್ಲವೆಂದರೆ ಐ.ಎಂ.ಎ. ವಲಯದಲ್ಲಿ ಸರ್ಕಾರಿ ವೈದ್ಯರ ಬಗೆಗೆ ಇದ್ದ ಒಲವು, ಅನುಕಂಪಗಳ ಪ್ರತೀಕ ಅದೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಇಂತಹ ಧೋರಣೆಯಿಂದಲೇ ಕೆಲವೇ ವರ್ಷಗಳಲ್ಲಿ ಸರ್ಕಾರಿ ವೈದ್ಯರ ಸಂಘ ಸ್ಥಾಪನೆ ಆಗುವಂತಾಯಿತು. ಆ ವರದಿ ಮೈಸೂರು ಮೆಡಿಕಲ್ ಜರ್ನಲ್ ೧೯೭೩ರ ಏಪ್ರಿಲ್-ಜೂನ್ ಸಂಚಿಕೆಯಲ್ಲಿ ಪ್ರಕಟವಾಗಿದೆ!

## ಸ್ನಾತಕೋತ್ತರ ಪದವಿಧರ ವೈದ್ಯರ ಸಂಘ

ಕೊಳ್ಳೇಗಾಲದಲ್ಲಿ ನಾನು ಕಾರ್ಯನಿರತನಾಗಿದ್ದ ಸಮಯ (೧೯೬೭-೭೧); ಮೈಸೂರು ರಾಜ್ಯದಲ್ಲಿ ವೈದ್ಯಕೀಯದ ವಿವಿಧ ವಿಭಾಗಗಳಲ್ಲಿ ಸ್ನಾತಕೋತ್ತರ ಪದವಿ, ಡಿಪ್ಲೋಮ (M.S., M.D., D.CH., D.L.O., D.G.O.) ಕೋರ್ಸ್‌ಗಳು ಆರಂಭವಾಗಿ ಐದಾರು ವರ್ಷಗಳಾಗಿದ್ದವು. ಅವರಲ್ಲಿ ಬಹುಪಾಲು ಸರ್ಕಾರಿ ವೈದ್ಯರು. ಹಾಗೆ ಪದವಿ ಗಳಿಸಿದವರೆಲ್ಲಾ ಮೆಡಿಕಲ್ ಕಾಲೇಜುಗಳಲ್ಲಿ, ಜಿಲ್ಲಾ ಆಸ್ಪತ್ರೆಗಳಲ್ಲಿ "ವಿಶೇಷ ತಜ್ಞರೆನಿಸಿಕೊಂಡು" ಕಾರ್ಯ ನಿರ್ವಹಿಸಲಾರಂಭಿಸಿದ್ದರು. ಅವರ ಪ್ರಮಾಣ ಹೆಚ್ಚಾಗುತ್ತಿದ್ದು ನನ್ನಂತಹವರು ತಾಲ್ಲೂಕು ಕೇಂದ್ರದ ಆಸ್ಪತ್ರೆಗಳಿಗೂ ಹೋಗುವ ಹಂತವೇರ್ಪಟ್ಟಿತ್ತು. ಆಸ್ಪತ್ರೆಗಳಲ್ಲಿ ಈ ರೀತಿ ವಿಶೇಷ ನೈಪುಣ್ಯತೆ ಪಡೆದ ವೈದ್ಯರ ಸೇವೆ ಲಭ್ಯವಾದಾಗಿನಿಂದ ಅವುಗಳಲ್ಲಿನ ಚಿಕಿತ್ಸಾ ಮಟ್ಟ ಹಿಂದಿಗಿಂತ ಉತ್ತಮಗೊಂಡಿತ್ತೆಂದು ಬೇರೆ ಹೇಳಬೇಕಾಗಿರಲಿಲ್ಲ. ಆ ಮೊದಲು ಸಾಮಾನ್ಯ ರೀತಿಯ ತುರ್ತು ಆಪರೇಷನ್‌ಗಳಿಗೆ ಜಿಲ್ಲಾ ಮಟ್ಟ ಅಥವಾ ಇನ್ನೂ ಉತ್ತಮ ದರ್ಜೆಯ ಆಸ್ಪತ್ರೆಗಳಿಗೆ ರೋಗಿಗಳು ಹೋಗಬೇಕಾದ ಪರಿಸ್ಥಿತಿ ಬದಲಾಗಿ ತಾಲ್ಲೂಕು ಮಟ್ಟದಲ್ಲೇ ಅಂತಹ ಅವಕಾಶಗಳು ಲಭ್ಯವಾದವು. ಅಂದರೆ ಅಂತಹ ಪರಿಣತಿ ಪಡೆದುಕೊಂಡು ಬಂದವರಿಂದ ರೋಗಿಗಳ ಚಿಕಿತ್ಸಾ ನಿರ್ವಹಣೆ ಉತ್ತಮವಾಯಿತು; ಸರ್ಕಾರದವರಿಗೂ ಅದರಿಂದ ಉಪಕಾರವೂ ಆಗುತ್ತಿತ್ತು. ಈ ತರಹದ ಉತ್ತಮದರ್ಜೆಯ ಪರಿಣತಿ ಪಡೆದು, ಅದು ಇಲಾಖೆಯ ಕಾರ್ಯದಕ್ಷತೆಯನ್ನು ಹೆಚ್ಚಿಸುತ್ತಾದರೆ, ಅಂತಹವರ ಸ್ಥಾನಮಾನಗಳನ್ನು ಉತ್ತಮ ಪಡಿಸಲು ಅವರಿಗೆ ಮುಂಬಡತಿಯೋ, ಇಲ್ಲವೆ ಅವರ ವೇತನ ಶ್ರೇಣಿಯನ್ನು ಉತ್ತಮ ಪಡಿಸುವ ಪರಿಪಾಟ ಇತರ ಇಲಾಖೆಗಳಲ್ಲಿರುತ್ತಿತ್ತು. ಉದಾಹರಣೆಗೆ ಶಿಕ್ಷಣ ಇಲಾಖೆಯ ಪದವೀಧರ ಬೋಧಕರು ಸ್ನಾತಕೋತ್ತರ ಪದವಿ ಗಳಿಸಿದರೆ ಅವರಿಗೆ ೨ ರಿಂದ ೪ ವಾರ್ಷಿಕ ಮುಂಬಡತಿ ನೀಡುವ ಅವಕಾಶವಿರುತ್ತಿತ್ತು. ಆದರೆ ಸರ್ಕಾರಿ ವೈದ್ಯರು ಅಂತಹ ಹೆಚ್ಚಿನ ವಿಶೇಷತೆಗಳ ತರಬೇತಿ ಪಡೆದು ರೋಗಿಗಳಿಗೆ ಉತ್ತಮ ಸೇವೆ ಒದಗಿಸುತ್ತಿದ್ದುದು ಕಣ್ಣಿಗೆ ಕಾಣಿಸುವಂತಿದ್ದರೂ, ಅವರಿಗಾವ ವೇತನ ಮುಂಬಡತಿ ಮಾಡಲಿಲ್ಲ; ಅದಿರಲಿ, ಅವರ ಕಾರ್ಯವಿಧಾನಗಳಲ್ಲೂ ಬದಲಾವಣೆ ಉಂಟು ಮಾಡಲಿಲ್ಲ. ಹಿಂದೆ ಅವರಿದ್ದ ಅಸಿಸ್ಟೆಂಟ್ ಸರ್ಜನ್ ಶ್ರೇಣಿಯ ಕಾರ್ಯಕಲಾಪಗಳನ್ನೆಲ್ಲಾ ಚಾಚೂ ತಪ್ಪದೆ - ಹೊರರೋಗಿಗಳ ನಿರ್ವಹಣೆ, ಒಳರೋಗಿಗಳ ನಿರ್ವಹಣೆ, ತುರ್ತು ಸಂದರ್ಭಗಳ ನಿರ್ವಹಣೆ, ವಾರದಲ್ಲಿ

ಒಂದೆರಡು ಸಾರಿಯಾದರೂ ದಿನದ ೨೪ ಗಂಟೆಗಳ ಡ್ಯೂಟಿ, ಅಪಘಾತಗಳಲ್ಲಿ ಸತ್ತವರ ಶವಪರೀಕ್ಷೆ, ಸಾಕ್ಷ್ಯ ನೀಡಲು ಕೋರ್ಟುಗಳಲ್ಲಿ ಹಾಜರಾತಿ ಇತ್ಯಾದಿಗಳಲ್ಲದೆ ಶಸ್ತ್ರ ಚಿಕಿತ್ಸೆಯಲ್ಲಿ ಪರಿಣತಿ ಪಡೆದವರಾದರೆ ವಾರದಲ್ಲಿ ೨-೩ ಸಾರಿಯಾದರೂ ಆಪರೇಷನ್ ಜರುಗಿಸುವುದನ್ನೂ ಮಾಡಬೇಕಾಗಿರುತ್ತಿತ್ತು. ಮೊದಲಸಾರಿ ಚಿಕ್ಕಮಗಳೂರಿನಲ್ಲಿದ್ದಾಗ ಆ ದಿಸೆಯಲ್ಲಿ ನಾನು ಜರುಗಿಸುತ್ತಿದ್ದ ಕಾರ್ಯ ವೈಖರಿಗಳ ನೆನಪಿರಬಹುದು. ಆ ರೀತಿಯ ಆಸ್ಪತ್ರೆಗಳ ಕಾರ್ಯ ನಿರ್ವಹಿಸುತ್ತಿದ್ದವರೆಲ್ಲಾ ಒಂದೇ ದರ್ಜೆಯ ಅಸಿಸ್ಟೆಂಟ್ ಸರ್ಜನ್‌ಗಳಾಗಿರುತ್ತಿದ್ದುದರಿಂದ ಸಹಾಯಕ ವೈದ್ಯರ ನೆರವೂ ಸಹಾ ಲಭ್ಯವಿರುತ್ತಿರಲಿಲ್ಲ. ಈ ತರಹದ ಪೇಚಾಟ, ಸಂದಿಗ್ಧತೆಗಳನ್ನು ಕೆಲವರು ಒಂದು ಸಾರಿ ಇಲಾಖಾ ನಿರ್ದೇಶಕರಲ್ಲಿ ನಿವೇದಿಸಿಕೊಂಡಾಗ, ಸ್ನಾತಕೋತ್ತರ ಪದವಿಗಳನ್ನು ಪಡೆಯಲು ಅವರಿಗೆ ಸರ್ಕಾರವೇನೂ ಒತ್ತಾಯ ಮಾಡಿರಲಿಲ್ಲವೆಂದು ಉತ್ತರ ನೀಡಿದರಂತೆ!

ಈ ಪರಿಸ್ಥಿತಿಯ ಸುಧಾರಣೆಗಾಗಿ ನಮ್ಮಲ್ಲಿ ಕೆಲವರು ಒಂದೆಡೆ ಸೇರಿದಾಗ ವಿಚಾರ ವಿನಿಮಯಗಳಾಗುತ್ತಿದ್ದವು. ಮೈಸೂರು ಕ್ಷಯ ರೋಗ ಆಸ್ಪತ್ರೆಯ ಆರ್.ಎಂ.ಓ. ಡಾ|| ಎಚ್. ಜಿ. ಅನಂತರಾಮಯ್ಯ ಮತ್ತು ನಾನು ೧೯೬೪ರ ಅಂತಿಮ ದಿನಗಳಲ್ಲಿ ಸ್ನಾತಕೋತ್ತರ ಪದವೀಧರ ಸರ್ಕಾರಿ ವೈದ್ಯರು ಒಂದೆಡೆ ಸೇರುವ ಪ್ರಯತ್ನ ಮಾಡಿದೆವು. ಡಾ|| ಅನಂತರಾಮಯ್ಯನವರ ನಿವಾಸದಲ್ಲಿ ಒಂದು ಭಾನುವಾರ ಸಭೆಯೊಂದನ್ನು ಏರ್ಪಡಿಸಿ, ಆಗ ನಮಗೆ ತಿಳಿದಿದ್ದ ೫೦-೬೦ ವೈದ್ಯರ ವಿಳಾಸಗಳಿಗೆ ಪತ್ರ ಬರೆದೆವು. ನಿಗದಿತ ದಿನ ನಾನು ಕೊಳ್ಳೇಗಾಲದಿಂದ ಮೈಸೂರಿಗೆ ಹೋದೆ. ಬಂಗಾರಪೇಟೆಯಿಂದ ಡಾ|| ಎಚ್. ಬಿ. ದೊರೆಸ್ವಾಮಿ ಮಾತ್ರ ಅಲ್ಲಿಗೆ ಬಂದಿದ್ದ ಇನ್ನೊಬ್ಬ ಸ್ನಾತಕೋತ್ತರ ಪದವಿಧರ ವೈದ್ಯರು! ವೈದ್ಯ ಸಮೂಹದವರ ಮೇಲಾದ ರೋಷ ಹಾಗೂ ಜುಗುಪ್ಸೆಯಿಂದ ಹಿಂದಿರುಗಿದೆವು.

ಆ ಬಗೆಗೆ ಇನ್ನೇನೂ ಮಾಡಲಾಗದೆಂದು ಕೆಲವು ದಿನಗಳು ಸುಮ್ಮನಿದ್ದರೂ, ಮತ್ತೊಂದು ಪ್ರಯತ್ನವನ್ನೇಕೆ ಮಾಡಬಾರದೆಂದು ಮನಸ್ಸು ಪ್ರಚೋದಿಸಿತು. ನಮ್ಮೆಲ್ಲರ ಆಗಿನ ಪರಿಸ್ಥಿತಿಯನ್ನು ವಿವರಿಸಿ ಇನ್ನೊಂದು ಮನವಿಯನ್ನು ತಯಾರಿಸಿದೆ. ಪುರಸೊತ್ತಿಲ್ಲದ ಕೆಲಸ ಕಾರ್ಯಗಳಲ್ಲಿ ತೊಡಗಿರುವ ಈ ಸಮೂಹದ ವೈದ್ಯರು ತಮ್ಮ ಸ್ಥಿತಿಗತಿಗಳ ಹಾಗೂ ಭವಿಷ್ಯದ ಬಗೆಗೆ ಕಿಂಚಿತ್ತಾದರೂ ಗಮನಹರಿಸುವ ವ್ಯವಧಾನವಿಲ್ಲದಿರುವುದರ ಬಗೆಗೆ ಛೇಡಿಸುವಂತೆ ಅದರಲ್ಲಿ ಬರೆದಿದ್ದೆ. ಹಿಂದೆ ಮೈಸೂರಲ್ಲಿ ಮಾಡಿದ ಪ್ರಯತ್ನಕ್ಕೆ ಅವರೆಲ್ಲಾ ತೋರಿದ ದಿವ್ಯ ನಿರ್ಲಕ್ಷ್ಯಕ್ಕೆ ಅಸಮಾಧಾನ ವ್ಯಕ್ತಪಡಿಸಿದ್ದೆ. ಈಗ ಮತ್ತೊಂದು ಪ್ರಯತ್ನ ಮಾಡುವ ಬಗೆಗೆ ಪ್ರಸ್ತಾಪಿಸಿ ಅವರೆಲ್ಲಾ ಬೆಂಗಳೂರಲ್ಲಿ ಸೇರುವ ಸಲಹೆ ಮಾಡಿದ್ದೆ. ಅದರ ನೂರಾರು ಪ್ರತಿಗಳನ್ನು ಸೈಕ್ಲೋಸ್ಟೈಲ್ ಮಾಡಿಸಿ ಸುಮಾರು ೮೦ ಜನ ವೈದ್ಯರಿಗೆ ಕಳುಹಿಸಿದೆ. (ಒಂದು ನೂರು ರೂಪಾಯಿ ಗಳಿಗಿಂತಲೂ ಹೆಚ್ಚು ಖರ್ಚು ನಾನೇ ಮಾಡಿದೆ). ಒಂದು ಭಾನುವಾರ ವಿಧಾನ ಸೌಧದ ಎದುರು ಬೆಳಿಗ್ಗೆ ೧೧ ಗಂಟೆ ಸಮಯದಲ್ಲಿ ಸಭೆ ಸೇರುವುದೆಂದು ಸೂಚಿಸಿದ್ದೆ. ತೀರಾ ಉತ್ತೇಜನಕರವೆನ್ನ ಲಾಗದಿದ್ದರೂ ಹಲವರು ನಾನು ಎತ್ತಿದ್ದ ವಿಷಯಗಳ ಬಗೆಗೆ ಸಹಮತ ವ್ಯಕ್ತಪಡಿಸಿ, ನಿಗದಿತ ದಿನ ಬೆಂಗಳೂರಿಗೆ ಬರುವುದಾಗಿ ಉತ್ತರ ಬರೆದಿದ್ದರು.

ನಿಗದಿತ ಸಮಯದಲ್ಲಿ ಡಾ|| ಅನಂತರಾಮಯ್ಯ ಮತ್ತು ನಾನು ವಿಧಾನ ಸೌಧದ ಎದುರಿನ ಹುಲ್ಲುಹಾಸಿನ ಮೇಲೆ ಕುಳಿತು ಕಾಯ ತೊಡಗಿದೆವು. ನಿಧಾನವಾಗಿ ವೈದ್ಯರು ಬರಲಾರಂಭಿಸಿದರು. ಹನ್ನೆರಡು ಗಂಟೆಯ ಸಮಯಕ್ಕೆ ೨೫-೩೦ ಜನ ವೈದ್ಯರಲ್ಲಿದ್ದರು. ಸ್ಥಳೀಯ

ಬೆಂಗಳೂರು ಹಾಗೂ ಅಕ್ಕಪಕ್ಕದ ತುಮಕೂರು, ಕೋಲಾರದ ಕಡೆಯವರೇ ಅಪರೂಪವೆಂಬಂತಿದ್ದರು. ಶಿವಮೊಗ್ಗ, ಧಾರವಾಡ, ಚಿತ್ರದುರ್ಗಗಳಂಥ ದೂರದ ಊರುಗಳಿಂದ ಬಂದವರೇ ಹೆಚ್ಚಾಗಿದ್ದರು! ಡಾ॥ ರಾಜಶೇಖರಪ್ಪನವರೇ ಅಧ್ಯಕ್ಷತೆ ವಹಿಸಿದ್ದರು. ಡಾ॥ ಅನಂತರಾಮಯ್ಯ ಮತ್ತು ನಾನು ಅಂದಿನ ಸಭೆಯ ಧ್ಯೇಯೋದ್ದೇಶಗಳನ್ನು ವಿವರಿಸಿದೆವು. ಇತರ ಕೆಲವರೂ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದರು. ಈ ವರ್ಗದ ವೈದ್ಯರ ಸಂಘಟನೆ ಯೊಂದನ್ನು ಹುಟ್ಟು ಹಾಕುವುದರಲ್ಲಿ ಅಂದು ಸಹಮತವೇರ್ಪಟ್ಟಿತು. ಡಾ॥ ರಾಜಶೇಖರಪ್ಪ ನವರನ್ನು ಅಧ್ಯಕ್ಷರನ್ನಾಗಿಯೂ, ಡಾ॥ ಅನಂತರಾಮಯ್ಯನವರನ್ನು ಕಾರ್ಯದರ್ಶಿಗಳನ್ನಾಗಿಯೂ ಆರಿಸಲಾಯಿತು. ಸಂಘದ ಬೈಲಾ ಮತ್ತಿತರ ವಿಧಿವಿಧಾನ, ನೋಂದಾವಣೆ ಮುಂತಾದವುಗಳನ್ನು ರಚಿಸಲು ಸಮಿತಿಯನ್ನು ನೇಮಿಸಲಾಯಿತು. ಅದೆಲ್ಲಾ ಪೂರ್ಣವಾಗುವುದಕ್ಕೆ ಆರು ತಿಂಗಳಿಗಿಂತಲೂ ಹೆಚ್ಚು ಸಮಯ ಹಿಡಿಯಿತು. ಅಂತಿಮವಾಗಿ ರಾಜ್ಯಪಾಲ ಧರ್ಮವೀರ ಅವರಿಂದ ದಿನಾಂಕ ೧೯-೫-೧೯೭೧ ರಂದು ಮೈಸೂರು ಸ್ಟೇಟ್ ಪೋಸ್ಟ್ ಗ್ರಾಜುಯೇಟ್ ಮೆಡಿಕಲ್ ಅಸೋಸಿಯೇಷನ್ (ಎಂ.ಎಸ್.ಪಿ.ಜಿ.ಎಂ.ಎ. MSPGMA) ಉದ್ಘಾಟನೆಯಾಯಿತು.

ಮುಂದಿನ ದಿನಗಳಲ್ಲಿ ಎಂ.ಎಸ್.ಪಿ.ಜಿ.ಎಂ.ಎ.ಗೆ ಸಾಕಷ್ಟು ಸದಸ್ಯರು ಸೇರಿಕೊಂಡರು. ಸಂಘಟಿತರಾದ ನಾವೀಗ ಆರೋಗ್ಯ ಇಲಾಖೆ ಹಾಗೂ ಸರ್ಕಾರದ ವರಿಷ್ಠರಿಗೆ ನಮ್ಮ ಸಮಸ್ಯೆಗಳ ಬಗೆಗೆ ಮನವಿಗಳನ್ನು ಮಾಡಿಕೊಳ್ಳಲು ಸಾಧ್ಯವಾಯಿತು. ಕಾಲಾನಂತರದಲ್ಲಿ ಅದು ಕರ್ನಾಟಕ ಪಿ.ಜಿ.ಎಂ.ಎ. ಆಗಿ ಪರಿವರ್ತನೆಯಾಯಿತು. ನಮ್ಮ ಸೇವಾ ಪರಿಸ್ಥಿತಿಗಳನ್ನು ಸುಧಾರಿಸುವಲ್ಲಿ ಪ್ರಯತ್ನಗಳನ್ನು ಜರುಗಿಸುತ್ತಲೇ ಇದ್ದೆವು. ಡಾ॥ ಅನಂತರಾಮಯ್ಯನವರು ೧೯೭೩ರ ಸಮಯದಲ್ಲಿ ಉನ್ನತ ವ್ಯಾಸಂಗಕ್ಕಾಗಿ ಇಂಗ್ಲೆಂಡಿಗೆ ತೆರಳಿದರು. ಮುಂದೆ ನಾನೇ ಅದರ ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸುವ ಅನಿವಾರ್ಯತೆಯುಂಟಾಯಿತು. ಆ ಸಮಯದಲ್ಲಿ ನಾನು ಚಿಕ್ಕಮಗಳೂರಿನಲ್ಲಿದ್ದು, ಸಂಘದ ಅಧಿಕೃತ ಮುಖ್ಯ ಕೇಂದ್ರ ಚಿಕ್ಕಮಗಳೂರಿಗೆ ಬದಲಾಯಿತು. ಕಾಗದ ಪತ್ರಗಳನ್ನು ಬರೆಯುವುದರಿಂದ ಹಿಡಿದು, ಲೆಕ್ಕ ಪತ್ರಗಳ ಜವಾಬ್ದಾರಿಗಳೆಲ್ಲಾ ನನ್ನ ಮೇಲೆ ಬಿದ್ದವು.

ಸದಸ್ಯರ ಶೈಕ್ಷಣಿಕ ಜ್ಞಾನವನ್ನು ವಿಸ್ತರಿಸುವ ಸಲುವಾಗಿ ವಾರ್ಷಿಕ ಸಮ್ಮೇಳನಗಳನ್ನು ಜರುಗಿಸುತ್ತಿದ್ದೆವು. ಮೊದಲ ಸಮ್ಮೇಳನ ೧೯೭೧ರಲ್ಲಿ ಬೆಂಗಳೂರಲ್ಲಿ ಸಂಘ ಉದ್ಘಾಟನೆಯಾದಾಗ ಜರುಗಿತು. ನಂತರ ೧೯೭೨ರಲ್ಲಿ ಶಿವಮೊಗ್ಗ, ೧೯೭೩ರಲ್ಲಿ ಹುಬ್ಬಳ್ಳಿ, ೧೯೭೪ರಲ್ಲಿ ದಾವಣಗೆರೆಯಲ್ಲಿ, ೧೯೭೫ರಲ್ಲಿ ತುಮಕೂರಿನಲ್ಲಿ ಅಂತಹ ಸಮ್ಮೇಳನಗಳನ್ನು ನಡೆಸಿದೆವು. ಮಂತ್ರಿ ಮಹೋದಯರಿಂದ ಹಿಡಿದು ಮುಂಬಯಿ, ಮದ್ರಾಸು, ಬೆಂಗಳೂರು ಕಡೆಯ ವಿಶೇಷ ತಜ್ಞರನ್ನು ಆಹ್ವಾನಿಸಿ ಭಾಷಣಗಳನ್ನು ಏರ್ಪಡಿಸಲಾಗುತ್ತಿತ್ತು. ಎಲ್ಲಕ್ಕಿಂತ ಮಿಗಿಲಾಗಿ ನಮ್ಮ ಸದಸ್ಯರ ಅನುಭವದ ಪ್ರತಿಫಲವಾಗಿ ಮೂಡಿ ಬಂದ ವೈದ್ಯಕೀಯ ಲೇಖನಗಳನ್ನು ಮಂಡಿಸುವ ಸುಲಭ ಅವಕಾಶಗಳುಂಟಾದವು. ಪ್ರತಿ ಸಮ್ಮೇಳನದಲ್ಲೂ ನಾನು ೨-೩ ಪ್ರಬಂಧಗಳನ್ನು ಮಂಡಿಸುತ್ತಿದ್ದೆ. ಈ ಮೊದಲೇ ಪ್ರಸ್ತಾಪವಾದ ಥೈರಾಯಿಡ್ ಗ್ರಂಥಿಯ ತೀರಾ ಅಪರೂಪದ ವ್ಯಾಧಿ (Riedel's Thyroiditis) ಲೇಖನದ ಮಂಡನೆಯಾದದ್ದು ಇಂತಹ ಒಂದು ಸಮ್ಮೇಳನದಲ್ಲೇ. ಆಗ ತಾನೇ ತಲೆಯೆತ್ತಿದ್ದ ಹಂದಿಗೋಡು ಕೀಲು ಬೇನೆ ಬಗೆಗೆ ಆ ತನಕ ಜರುಗಿದ ಸಂಶೋಧನೆಗಳ ಮೊದಲ ಅಧಿಕೃತ ವರದಿ ತುಮಕೂರಿನ ಸಮ್ಮೇಳನದಲ್ಲಾಯಿತು.

ಸಂಘ ಆರಂಭವಾದ ಎರಡನೇ ವರ್ಷದಲ್ಲೇ (೧೯೭೯) ಅದರ ಮುಖವಾಣಿಯಾಗಿ JOURNAL OF MYSORE (KARNATAKA) POST-GRADUATE MEDICAL ASSOCIATION ಎಂಬ ವೈದ್ಯಕೀಯ ಪತ್ರಿಕೆಯೂ ಪ್ರಕಟವಾಯಿತು. ಸದಸ್ಯರ ಅನುಭವದ ಲೇಖನಗಳ ಪ್ರಕಟಣೆಗೆ ಅವಕಾಶ ಅದರಿಂದುಂಟಾಯಿತು. ನಾನು ಸುಮಾರು ೮-೧೦ ಲೇಖನಗಳನ್ನು ಅದರಲ್ಲಿ ಪ್ರಕಟಿಸಿದ್ದೆ.

ಸಂಸ್ಥೆಯ ಸಂಘಟನೆ ಸುವ್ಯವಸ್ಥಿತವಾಗಿದ್ದು ಇತರ ಕ್ಷೇತ್ರಗಳಲ್ಲಿ ಮುನ್ನಡೆಯುತ್ತಿದ್ದರೂ ನಮ್ಮ ಮೂಲ ಉದ್ದೇಶವಾದ ಸೇವಾ ಸಮಸ್ಯೆಗಳನ್ನು ಸರ್ಕಾರದ ಮೂಲಕ ಈಡೇರಿಸಿಕೊಳ್ಳುವಲ್ಲಿ ಅಷ್ಟೊಂದು ಪ್ರಭಾವ ಬೀರುವಲ್ಲಿ ಯಶಸ್ವಿಯಾಗಲಿಲ್ಲವೆಂದೇ ಹೇಳಬೇಕು. ವರಿಷ್ಠರನ್ನು ಭೇಟಿ ಮಾಡಿ ಸಲ್ಲಿಸುತ್ತಿದ್ದ ಜ್ಞಾಪನಪತ್ರಗಳನ್ನು ಪರಿಗಣನೆಗೆ ತೆಗೆದುಕೊಳ್ಳುತ್ತಲೇ ಇರಲಿಲ್ಲ. ದಾವಣಗೆರೆ ಸಮ್ಮೇಳನದ ಸಮಯದಲ್ಲಿ ಆಗಿನ ಆರೋಗ್ಯ ಸಚಿವರನ್ನು ಉದ್ಘಾಟನೆಗಾಗಿ ಆಹ್ವಾನಿಸಿದ್ದೆವು. ಹಿಂದಿನ ದಿನ ಅವರನ್ನು ಭೇಟಿಯಾಗಿ ನಮ್ಮ ಸಮಸ್ಯೆಗಳನ್ನು ನಿವೇದಿಸಿಕೊಳ್ಳುವ ಪ್ರಯತ್ನ ಮಾಡಿದೆವು. ಅವುಗಳನ್ನು ಕೇಳುವ ವ್ಯವಧಾನವನ್ನೂ ತೋರಿಸದೆ, ಸಚಿವರು ರಾಜ್ಯದ ರೈತರ ಸಮಸ್ಯೆಗಳ ಬಗೆಗೆ ಮಾತಾಡಿದರು. ವೈದ್ಯವೃತ್ತಿಯವರ ಬಗೆಗೆ ಆಡಳಿತಾರೂಢ ವಲಯದಲ್ಲಿರುವ ಅಸಡ್ಡೆಯ ಪ್ರತೀಕವೇ ಇಂದಿನ ದಿನಗಳಲ್ಲಿ ಸರ್ಕಾರಿ ವೈದ್ಯರು ಕಾರ್ಮಿಕ ಸಂಘಟನೆಗಳಂತೆ ಹಠಾತ್ತಾಗಿ ಮುಷ್ಕರ ಹೂಡಿ, ಅಮಾಯಕ ರೋಗಿಗಳನ್ನು ನಿರ್ಲಕ್ಷಿಸುವ ಪರಿಸ್ಥಿತಿ ಉಂಟಾಗಿದೆಯೆಂದರೆ ಅತಿಶಯೋಕ್ತಿಯಲ್ಲ.

ಹೀಗೆ ಒಂದು ರೀತಿಯ ಹತಾಶೆಯ ಹಂತದಲ್ಲಿರುವ ಸಮಯದಲ್ಲಿ ರಾಜ್ಯದ ಎಲ್ಲಾ ಸರ್ಕಾರಿ ನೌಕರರ ವೇತನ, ಮತ್ತಿತರ ಸೇವಾ ನಿಯಮಗಳ ಪರಿಶೀಲಿಸಿ ಸೂಕ್ತ ಶಿಫಾರಸು ಮಾಡಲು ಸರಕಾರವು ಜಸ್ಟಿಸ್ ನಾರಾಯಣ ಪೈಯವರ ನೇತ್ರತ್ವದಲ್ಲಿ ವೇತನ ಪರಿಷ್ಕರಣ ಸಮಿತಿ (PAY COMMISSION) ಯನ್ನು ನೇಮಿಸಿತು. ಐ.ಎಂ.ಎ. ಹಾಗೂ ಎಂ.ಎಸ್.ಪಿ.ಜಿ.ಎಂ.ಎ. ಗಳು ಹಾಗೆ ಒದಗಿ ಬಂದ ಅವಕಾಶಗಳ ಸದುಪಯೋಗಪಡಿಸಿಕೊಳ್ಳುವ ನಿರ್ಧಾರ ಮಾಡಿದವು. ಎರಡೂ ಸಂಸ್ಥೆಗಳ ಪ್ರತಿನಿಧಿಗಳು ಪ್ರತ್ಯೇಕವಾಗಿ ಜಸ್ಟಿಸ್ ಪೈ ಸಮಿತಿಯನ್ನು ಭೇಟಿ ಮಾಡಿ ತಮ್ಮ ಅಹವಾಲುಗಳನ್ನು ಮುಂದಿಟ್ಟವು. ಸ್ನಾತಕೋತ್ತರ ಪದವೀಧರರ ನಿಯೋಗದಲ್ಲಿ ನಾನು ಪ್ರಮುಖ ಪಾತ್ರ ವಹಿಸಿದ್ದೆ. ಸಮಿತಿಯವರು ನಮ್ಮ ಸಮಸ್ಯೆ ಮತ್ತು ಬೇಡಿಕೆಗಳ ಬಗೆಗೆ ಸಹಾನುಭೂತಿ ತೋರಿಸುವಂತೆ ವರ್ತಿಸಿದರು. ನಮ್ಮ ವರ್ಗದವರಿಗೇ ಪ್ರತ್ಯೇಕ ಶ್ರೇಣಿಯನ್ನು (Cadre) ಸೃಷ್ಟಿಸುವ ರೀತಿಯಲ್ಲಿ ನಮ್ಮೊಡನೆ ಚರ್ಚಿಸಿದ್ದರು. ಆದರೆ ವರದಿ ಹೊರಬಂದಾಗ, ಅದು ನಮ್ಮ ವರ್ಗದವರೇ ಅಲ್ಲದೆ ಇಡೀ ಸರ್ಕಾರಿ ವೈದ್ಯ ಸಮೂಹವನ್ನೇ ದಿಗ್ಭ್ರಾಂತಿಗೊಳಿಸುವಂತಿತ್ತು. ನಮ್ಮ ವರ್ಗದವರಿಗೆ ಪ್ರತ್ಯೇಕ ಶ್ರೇಣಿಯನ್ನು ಸೃಷ್ಟಿಸುವ ಪ್ರಸ್ತಾಪವೇ ಇರಲಿಲ್ಲ. ಬದಲಿಗೆ ಸ್ನಾತಕೋತ್ತರ ಡಿಗ್ರಿ ಪಡೆದವರಿಗೆ ಮಾಹೆಯಾನ ಒಂದು ನೂರು ರೂಪಾಯಿ ಮತ್ತು ಡಿಪ್ಲೋಮಾದವರಿಗೆ ಐವತ್ತು ರೂಪಾಯಿಗಳ ವಿಶೇಷ ವೇತನ ನೀಡುವ ಶಿಫಾರಸು ಮಾಡಿದ್ದರಷ್ಟೆ. ಎಂ.ಬಿ.ಬಿ.ಎಸ್. ಪದವೀಧರರನ್ನು ಸರ್ಕಾರಿ ಕೆಲಸಕ್ಕೆ ನೇಮಕ ಮಾಡುವಾಗ ಹಿಂದಿನಿಂದಲೂ ಅವರ ಹುದ್ದೆಯನ್ನು ಅಸಿಸ್ಟೆಂಟ್ ಕಮೀಷನರ್, ಮುನ್ಸಿಫ್ ಮ್ಯಾಜಿಸ್ಟ್ರೇಟ್ ಮುಂತಾದ ಶ್ರೇಣಿಗಳಿಗೆ ಸಮೀಕರಿಸಿ ಅಸಿಸ್ಟೆಂಟ್ ಸರ್ಜನ್ ಎಂದು ಪರಿಗಣಿಸಿ ಗೆಜೆಟೆಡ್ ಹುದ್ದೆಗೆ ನೇಮಕ ಮಾಡುವ ರೂಢಿ ಇತ್ತಷ್ಟೆ. ಆದರೆ ಪೇ ಕಮೀಷನ್‌ನವರು ಗೆಜೆಟೆಡ್ ಶ್ರೇಣಿ ಹಾಗೂ ಅಸಿಸ್ಟೆಂಟ್ ಕಮೀಷನರ್ ವರ್ಗದಿಂದ ಪೋಲೀಸ್ ಇಲಾಖೆಯ ನಾನ್ ಗೆಜೆಟೆಡ್ ಶ್ರೇಣಿಯ ಸರ್ಕಲ್ ಇನ್ಸ್‌ಪೆಕ್ಟರ್ ದರ್ಜೆಗೆ

ಇಳಿಸಿಬಿಟ್ಟಿದ್ದರು! ವೈದ್ಯ ಪದವಿ ಗಳಿಸಿದವರ ಜ್ಞಾನ, ಜವಾಬ್ದಾರಿಯ ಕರ್ತವ್ಯ, ಶ್ರೇಷ್ಠತೆಗಳು ಮೇಲ್ನೋಟಕ್ಕೆ ಮಾತ್ರವೇ ಹೊರತು, ಅವರ ಮಟ್ಟ ಬಿ.ಎ., ಬಿ.ಎಸ್ಸಿ., ಬಿ.ಎಸ್ಸಿ.(ಅಗ್ರಿಕಲ್ಚರ್), ಮುಂತಾದ ಪದವೀಧರರಿಗಿಂತ ಮಿಗಿಲಾದುದೇನಲ್ಲ ವೆಂಬ ವಾದವನ್ನು ಸೃಷ್ಟಿಸಿದ್ದರು.

ಪೇ ಕಮೀಷನ್‌ನವರ ಇಂತಹ ಅವಹೇಳನಾತ್ಮಕ ಅಭಿಪ್ರಾಯ ವೈದ್ಯ ಸಮುದಾಯದ ಘನತೆಯನ್ನೇ ಪ್ರಶ್ನಿಸುವಂತಿತ್ತು. ಅದು ಸರ್ಕಾರಿ ವೈದ್ಯರನ್ನೇ ಅಲ್ಲದೆ ಖಾಸಗಿ ಸಮುದಾಯದ ವೈದ್ಯರನ್ನೂ ಬಡಿದೆಬ್ಬಿಸಿತು. ವೈದ್ಯ ವೃತ್ತಿಗೆ ಸಂಬಂಧಿಸಿದ ಸಂಘಟನೆಗಳೆಲ್ಲಾ ಒಟ್ಟಾಗಿ ಪ್ರತಿಭಟಿಸಿದವು. ಎಲ್ಲರೂ ಒಗ್ಗಟ್ಟಿನಿಂದ ಹೋರಾಡುವ ನಿರ್ಧಾರವೂ ಆಯಿತು. ರಾಜಕೀಯ ಹಾಗೂ ಸಾಮಾಜಿಕ ಮುಂದಾಳುಗಳೂ ಸಹ ವೈದ್ಯರಿಗಾದ ಅನ್ಯಾಯವನ್ನು ಸರಿಪಡಿಸಲು ಸರ್ಕಾರದ ಮೇಲೆ ಪ್ರಭಾವ ಬೀರಲಾರಂಭಿಸಿದರು. ಸಕಾಲದಲ್ಲಿ ಸರ್ಕಾರವೂ ಎಚ್ಚೆತ್ತುಕೊಂಡಿತೆನ್ನಬಹುದು. ಆರೋಗ್ಯ ಇಲಾಖೆಯ ಕಾರ್ಯದರ್ಶಿಗಳಾದ ಎನ್. ನರಸಿಂಹ ರಾವ್ ಅವರನ್ನು ಈ ಸಮಸ್ಯೆಯನ್ನು ಪರಿಶೀಲಿಸಿ ವಸ್ತುಸ್ಥಿತಿಯನ್ನು ವರದಿ ಮಾಡಲು ನೇಮಿಸಿತು. ಐ.ಎಂ.ಎ. ಮತ್ತು ಎಂ.ಎಸ್.ಪಿ.ಜಿ.ಎಂ.ಎ. ಗಳೆರಡರ ನಿಯೋಗಗಳೂ ಅವರನ್ನು ಭೇಟಿ ಮಾಡಿ ತಮ್ಮ ಅಭಿಪ್ರಾಯಗಳನ್ನು ಮುಂದಿಟ್ಟವು. ಅವರು ಇಡೀ ಸಮಸ್ಯೆಯ ಮೂಲವನ್ನು ಪರಿಶೀಲಿಸಿದರಂತೆ. ಹಿಂದಿನಿಂದಲೂ ಅಸಿಸ್ಟೆಂಟ್ ಕಮೀಷನರ್ ಮುಂತಾದ ಗೆಜೆಟೆಡ್ ಶ್ರೇಣಿಯಲ್ಲಿದ್ದ ಅಸಿಸ್ಟೆಂಟ್ ಸರ್ಜನ್ ಹುದ್ದೆಯನ್ನು ಕೆಳದರ್ಜೆಯ ನಾನ್-ಗೆಜೆಟೆಡ್ ಶ್ರೇಣಿಗೆ ಇಳಿಸಲು ಪೇ ಕಮೀಷನ್‌ನವರು ಯಾವುದೇ ಕಾರಣ ನೀಡಿರದಿದ್ದುದು ಅವರ ಗಮನ ಸೆಳೆಯಿತು. ಅಲ್ಲದೆ ಆರೋಗ್ಯ ಇಲಾಖೆಯ ಕಾರ್ಯದರ್ಶಿಗಳಾಗಿದ್ದ ಅವರು ವೈದ್ಯ ಸಮೂಹದವರು ಹಗಲಿರುಳೆನ್ನದೆ ನಿರ್ವಹಿಸುತ್ತಿದ್ದ ಜವಾಬ್ದಾರಿಯುತ ಕೆಲಸ ಕಾರ್ಯಗಳನ್ನು ತುಂಬಾ ಹತ್ತಿರದಿಂದ ನೋಡುತ್ತಿದ್ದವರು. ಅದರಿಂದ ಅಸಿಸ್ಟೆಂಟ್ ಸರ್ಜನರ ಹಿಂದಿನ ಶ್ರೇಣಿಯಲ್ಲೇ ಮುಂದುವರಿಸಿ ಆ ಶ್ರೇಣಿಯ ವೇತನ ನೀಡಲು ಶಿಫಾರಸು ಮಾಡಿದರು. ಅಲ್ಲದೆ ದಶಕಗಟ್ಟಲೇ ಒಂದೇ ಶ್ರೇಣಿಯಲ್ಲಿರುವ ಅಸಿಸ್ಟೆಂಟ್ ಸರ್ಜನ್‌ಗಳಿಗೆ ನಿಗದಿತ ಕೆಲವು ವರ್ಷಗಳ ನಂತರ, ಮುಂದಿನ ಶ್ರೇಣಿಯ ವೇತನ ನೀಡುವ ಶಿಫಾರಸು ಮಾಡಿದ್ದರೆಂಬುದು ನನ್ನ ನೆನಪು.

ಪೇ ಕಮೀಷನ್‌ನವರು ನಮಗೆ ವಿಶೇಷವಾಗಿ ಒಂದು ನೂರು ರೂಪಾಯಿ ನೀಡಬೇಕೆಂದು ಶಿಫಾರಸು ಮಾಡಿದ್ದನ್ನು ಜಾರಿಗೊಳಿಸುವ ಹಂತದಲ್ಲಿ ಸಚಿವ ಮಟ್ಟದ ಅವ್ಯಕ್ತ ಕಾರಣಗಳಿಂದ ಎಪ್ಪತ್ತೈದು ರೂಪಾಯಿಗಳಿಗೆ ಇಳಿಸಿಬಿಟ್ಟರು!

ಕೆಲವು ವರ್ಷಗಳ ನಂತರವಾದರೂ ಅಲ್ಪ ಸಾಧನೆಗಳು ನಮ್ಮ ಸಂಘಟನೆಯಿಂದ ಸಾಧ್ಯವಾದರೂ, ಸದಸ್ಯರ ಬೆಂಬಲ ಹಿಂದಿನಂತೆ ಮುಂದುವರಿಯುತ್ತಿರಲಿಲ್ಲ. ಮೂರ್‍ನಾಲ್ಕು ವರ್ಷಗಳು ನಾನೇ ಕಾರ್ಯರ್ಶಿಯಾಗಿದ್ದು ನನ್ನ ಉತ್ಸಾಹವೂ ಇಳಿಮುಖವಾಗತೊಡಗಿತು. ಕಡೆಯ ಸಮ್ಮೇಳನವೊಂದರಲ್ಲಿ ಕಾರ್ಯದರ್ಶಿಯಾಗಿ ಮುಂದುವರಿಯಲು ನಿರಾಕರಿಸಿದೆ. ಒಂದು ವರ್ಷದ ಮಟ್ಟಿಗಾದರೂ ಇನ್ನೊಬ್ಬರು ನಿರ್ವಹಿಸುವಂತೆ ಪಟ್ಟು ಹಿಡಿದೆ. ಸಂಘಟನೆಯನ್ನು ಏರ್ಪಡಿಸುವಲ್ಲಿ ಉತ್ಸಾಹಭರಿತರಾಗಿದ್ದ ಡಾ|| ಬಿ. ಕೆ. ಷಡಕ್ಷರಪ್ಪನವರನ್ನು ಕಾರ್ಯದರ್ಶಿಗಳನ್ನಾಗಿ ಆರಿಸಲಾಯಿತು. ಮುಂದಿನ ಮೂರು ತಿಂಗಳಲ್ಲಿ ಅವರು ಹಾಸನದಲ್ಲಿ ಕಾರ್ಯಕಾರಿ ಸಮಿತಿಯ ಸಭೆಯನ್ನು ಕರೆದರು. ನಾನೂ ಸೇರಿದಂತೆ ನಾಲ್ಕೈದು ಸದಸ್ಯರು ಅಲ್ಲಿಗೆ ಹೋಗಿದ್ದೆವು. ವಿಪರ್ಯಾಸದ ಸಂಗತಿಯೆಂದರೆ, ಸಭೆ ನಡೆಸುವಂತೆ ಆಹ್ವಾನಿಸಿದ ಹಾಸನದ ವೈದ್ಯರೇ ನಾಪತ್ತೆ!

- ಇಲಾಖೆಯ ವರಿಷ್ಠರ ಭೇಟಿ ಇತ್ತಂತೆ! ಅದೇ ಎಂ.ಎಸ್.ಪಿ.ಜಿ.ಎಂ.ಎ.ಯ ಕಟ್ಟಕಡೆಯ ಕಾರ್ಯಕ್ರಮ. ಅಂದಿನಿಂದ ಅದು ದೀರ್ಘ ನಿದ್ರಾಪರವಶವಾಯಿತು!

ಸ್ನಾತಕೋತ್ತರ ಪದವೀಧರ ವೈದ್ಯರ ಸಂಘದ ಚಟುವಟಿಕೆಗಳು ಬಹುಪಾಲು ತುಮಕೂರಿನಲ್ಲಿ ಜರುಗಿದ ಸಮಯದಲ್ಲೇ ತನ್ನ ಅಂತಿಮ ಹಂಸಗೀತೆಯನ್ನು ಹಾಡುವುದರಲ್ಲಿತ್ತೆನ್ನ ಬಹುದು. ಆ ದಿಸೆಯಲ್ಲಿ ಸದಸ್ಯರಲ್ಲಿದ್ದ ಯೋಜನಾ ಲಹರಿಯ ಬಗೆಗೆ ವ್ಯಕ್ತವಾದ ಘಟನೆ ಉಲ್ಲೇಖನೀಯವೆನಿಸುತ್ತದೆ. ಬಹುಶಃ ಆ ತನಕ ನಾವು ಹೆಚ್ಚಿನದ್ದೇನನ್ನೂ ಸಾಧಿಸಲಾಗದ್ದನ್ನು ಗಮನಿಸಿ ಕೆಲವು ಸದಸ್ಯರು ಸಮ್ಮೇಳನಕ್ಕೆ ಬರುವ ಮೊದಲು ಸರ್ಕಾರದ/ಇಲಾಖೆಯ ಸೂತ್ರಧಾರ ಸ್ಥಾನದ ವರಿಷ್ಠರನ್ನು ಭೇಟಿಯಾಗಿದ್ದರಂತೆ. ನಮ್ಮ ವರ್ಗದ ಸ್ಥಾನಮಾನ ಮತ್ತಿತರ ಸಮಸ್ಯೆಗಳ ಬಗೆಗೆ ಪ್ರಸ್ತಾವ ಮಾಡಿದಾಗ ನಾವೆಲ್ಲರೂ ಅವರಿಗೆ ೧೦-೧೫ ಸಾವಿರ ರೂಪಾಯಿಗಳನ್ನು (ಪ್ರತಿಯೊಬ್ಬರೂ) ಕೊಡಲು ತಯಾರಿರುವುದಾದರೆ ನಮ್ಮೆಲ್ಲರಿಗೂ ಸರ್ಜನ್ ಶ್ರೇಣಿ (ಡಿಸ್ಟ್ರಿಕ್ಟ್ ಸರ್ಜನ್)ಗೆ ಮುಂಬಡ್ತಿ ನೀಡುವ ಭರವಸೆ ನೀಡಿದರಂತೆ. (ಪೈ ಪೇ ಕಮೀಷನ್‌ನವರು ಒಂದು ನೂರು ರೂಪಾಯಿಗಳ ವಿಶೇಷ ವೇತನ ಶಿಫಾರಸು ಮಾಡಿದ್ದನ್ನು ಎಪ್ಪತ್ತೈದು ರೂಪಾಯಿಗಳಿಗೆ ಇಳಿಸುವುದರಲ್ಲಿ ಅವರದೇ ಕೈವಾಡವಿತ್ತೆಂಬ ಗುಮಾನಿಗಳಿದ್ದವು!). ಕೆಲವರು ಆ ಪ್ರಸ್ತಾವವನ್ನು ಬೆಂಬಲಿಸಿ ಮಾತನಾಡಿದರು. ನಾನೂ ಸಹ ಮಾತಾಡಿ ಅಂತಹ ವಾಮ ಮಾರ್ಗದಲ್ಲಿ ಮುಂಬಡ್ತಿ ಪಡೆಯುವುದು ನಮ್ಮ ಹಾಗೂ ವೃತ್ತಿಯ ಘನತೆಗೆ ಸರಿಯಾದ ಕ್ರಮವಲ್ಲವೆಂದು ವಾದಿಸಿದೆ. ಅಲ್ಲದೆ ಬಹುಪಾಲು ಸದಸ್ಯರು ಅದಕ್ಕೆ ಸಮ್ಮತಿಸುವಂತಿದ್ದರೆ, ಅಂತಹ ಯೋಜನೆಯಿಂದ ವೈಯಕ್ತಿಕವಾಗಿ ಹೊರಗಿರಲು ಬಯಸುತ್ತೇನೆಂದು ಹೇಳಿದೆ. ಆ ಬಗೆಗೆ ಸಭೆಯಲ್ಲಿ ಕೆಲವರು ಗೊಣಗಿಕೊಂಡರೂ, ಆ ದಿಸೆಯಲ್ಲಿ ಮುಂದೆ ಯಾವ ನಿರ್ಧಾರವೂ ಆಗಲಿಲ್ಲ. ಮುಂದೆ ಶಿವಮೊಗ್ಗದಲ್ಲಿದ್ದಾಗ ಸಹದ್ಯೋಗಿ ಡಾ|| ನೀಲಕಂಠಯ್ಯನವರು ಅವರ ಪರಿಚಿತ ವೈದ್ಯರೊಬ್ಬರಿಂದ ಬಂದಿದ್ದ ಪತ್ರವೊಂದನ್ನು ನೀಡಿ ಓದುವಂತೆ ಹೇಳಿದರು. ಪತ್ರ ಬರೆದ ಅವರ ಸ್ನೇಹಿತರು ತುಮಕೂರು ಸಮ್ಮೇಳನದಲ್ಲಿ ನಾನು 'ಆದರ್ಶತನದ' ಉದ್ಧಟತನ ಪ್ರದರ್ಶಿಸದಿದ್ದರೆ ಅಷ್ಟರಲ್ಲೇ ಅವರೆಲ್ಲಾ ಮುಂಬಡ್ತಿ ಪಡೆದಿರುತ್ತಿದ್ದರೆಂದು ನನ್ನನ್ನು ಹಳಿದು ಬರೆದಿದ್ದರು. ಅದರಿಂದ ನನಗೆ ಬೇಸರವೇನೂ ಆಗಲಿಲ್ಲ; ಬದಲಿಗೆ ಒಂದು ಬಗೆಯ ಸಂತೃಪ್ತಿಯೇ ಆಯಿತು.

## ಸರ್ಕಾರಿ ವೈದ್ಯರ ಸಂಘ

ಸರ್ಕಾರದ ಸೇವಾನಿರತ ವೈದ್ಯ ಸಮೂಹದವರ ಸೇವಾ ನಿಯಮಗಳು, ವೇತನ, ಬಡ್ತಿ, ಮುಂತಾದ ವಿಚಾರಗಳ ಬಗೆಗೆ ಸರ್ಕಾರ, ಅದರಲ್ಲೂ ಅವರದೇ ಆರೋಗ್ಯ/ವೈದ್ಯ ಇಲಾಖೆಯವರು ತೋರಿಸುತ್ತಿದ್ದ ಅಸಡ್ಡೆ, ಅನಾದರಣೆ ಅವರನ್ನೆಲ್ಲಾ ಅಸಹಾಯಕ ಪರಿಸ್ಥಿತಿಗೆ ತಳ್ಳಿತ್ತು. ಅವರ ಪ್ರಾತಿನಿಧಿಕ ಸಂಘಟನೆಗಳಾದ ಐ.ಎಂ.ಎ., ಕೆ.ಎಸ್.ಪಿ.ಜಿ.ಎಂ.ಎ., ಗಳು ನ್ಯಾಯ ಸಮ್ಮತವಾಗಿ ನಡೆಸುತ್ತಿದ್ದ ಹೋರಾಟಗಳನ್ನು ಸರ್ಕಾರದವರು ಗಣನೆಗೇ ತೆಗೆದುಕೊಳ್ಳುತ್ತಿರಲಿಲ್ಲ. ಅಖಿಲ ಭಾರತದ ಮಟ್ಟದಲ್ಲೂ ಪರಿಸ್ಥಿತಿ ಇಂತಹುದೇ ಆಗಿತ್ತು. ಆ ಕಾಲದಲ್ಲಿ ಐ.ಎಂ.ಎ.ಯ ಹೆಸರಾಂತ ಧುರೀಣರೆನಿಸಿಕೊಂಡಿದ್ದ ಪಾಟ್ನಾದ ಡಾ|| ಎ.ಕೆ.ಎನ್. ಸಿನ್ಹಾ (ಮುಂದೆ ಜಾಗತಿಕ ವೈದ್ಯರ ಸಂಘದ ಅಧ್ಯಕ್ಷರಾದರು) ಅವರು ವೈದ್ಯ ಸಮೂಹದವರು ಕಾರ್ಮಿಕ ಸಂಘಟನೆಗಳ ಕಾರ್ಯವಿಧಾನವನ್ನನುಸರಿಸಿ (Trade Union) ಕಾರ್ಯಪ್ರವೃತ್ತರಾಗಬೇಕಾಗುತ್ತದೆಂದು ಪ್ರತಿಪಾದಿಸಲಾರಂಭಿಸಿದ್ದರು. ಈ ಹಿನ್ನೆಲೆಯಲ್ಲಿ ನಮ್ಮ ರಾಜ್ಯದ ಸರ್ಕಾರಿ ವೈದ್ಯರೆಲ್ಲರೂ ಒಟ್ಟಾಗಿ ಸರ್ಕಾರಿ

ವೈದ್ಯರ ಸಂಘ (ಕೆ.ಜಿ.ಎಂ.ಓ.ಎ.) ಎಂಬ ಪ್ರತ್ಯೇಕ ಸಂಘಟನೆಯನ್ನು ಸ್ಥಾಪಿಸಿದರು. ಡಾ॥ ರಾಜಶೇಖರಪ್ಪನವರೇ ಅದರ ನೇತೃತ್ವ ವಹಿಸಿದರು. ಅದಾಗಲೇ ಅಂತಹ ಸಂಘಟನೆಗಳಲ್ಲಿ ಶ್ರಮಿಸಿ ಬೇಸತ್ತು ಹೋಗಿದ್ದ ನಾನು ಮೊದಲ ವರ್ಷಗಳಲ್ಲಿ ಅದರೊಡನೆ ಕೈ ಜೋಡಿಸಲಿಲ್ಲ. ಮುಂದೆ ಅದರ ಸದಸ್ಯತ್ವ ಪಡೆದುಕೊಂಡೆ; ಕಾರ್ಯಕಾರಿ ಸಮಿತಿ, ಮತ್ತಿತರ ನೀತಿ ನಿರೂಪಣೆಯ ಸಮಿತಿಗಳಲ್ಲೂ ಸಕ್ರಿಯವಾಗಿ ಪಾತ್ರ ವಹಿಸಲಾರಂಭಿಸಿದೆ. ಇತರ ಸರ್ಕಾರಿ ಇಲಾಖೆಗಳ ನೌಕರರ ಸಂಘ ಸಂಸ್ಥೆಗಳಂತೆ ಕೆ.ಜಿ.ಎಂ.ಓ.ಎ. ಬಿರುಸಾಗಿಯೇ ಕಾರ್ಯ ನಿರ್ವಹಿಸಿತು. ಬಹುಪಾಲು ಸರ್ಕಾರಿ ವೈದ್ಯರು ಅದರ ಸದಸ್ಯರಾಗಿದ್ದರಿಂದ ಸರ್ಕಾರ ಅದರ ಬೇಡಿಕೆಗಳನ್ನು ಹಿಂದಿನಂತೆ ಹಗುರವಾಗಿ ಪರಿಗಣಿಸುವಂತಿರಲಿಲ್ಲ. ಕಳೆದ ೨೫-೩೦ ವರ್ಷಗಳಿಂದ ಸರ್ಕಾರದ ಇತರ ನೌಕರ ವರ್ಗದವರಿಗೆ ದೊರೆಯುವ ಸೌಲಭ್ಯಗಳನ್ನು ಪಡೆದುಕೊಳ್ಳುವಲ್ಲಿ ಬಹುಮಟ್ಟಿಗೆ ಯಶಸ್ವಿಯಾಗುತ್ತಿದೆ. ವೈದ್ಯ ಸಮೂಹದವರು ರೋಗಿಗಳ ಹಿತಾಸಕ್ತಿಗೆ ವಿರುದ್ಧವಾಗಿ ಸಂಪು ಹೂಡಬಾರದೆಂಬ ನಿಯಮವನ್ನೂ ಸಹ ಉಲ್ಲಂಘಿಸಿದ ನಿದರ್ಶನಗಳೂ ಇವೆ. ಅಂತಹ ಒಂದು ನಿರ್ದಾಕ್ಷಿಣ್ಯ ಕ್ರಮಕ್ಕೆ ವೈದ್ಯರು ಹೋಗುವಂತೆ ಮಾಡುವಲ್ಲಿ ಸರ್ಕಾರದವರ ಪಾತ್ರವಿರುವುದನ್ನು ಅಲ್ಲಗಳೆಯುವಂತಿಲ್ಲ.

ವೈದ್ಯ ಸಮೂಹದವರ ಕ್ಷೇಮಾಭಿವೃದ್ಧಿಯ ಬಗೆಗೆ ಈ ಸಂಘಟನೆ ವ್ಯವಸ್ಥಿತ ರೀತಿಯಲ್ಲಿ ಅದೇ ಮೊದಲಬಾರಿಗೆ ಶಾಶ್ವತ ನಿಧಿಯನ್ನು ಸ್ಥಾಪಿಸಿ, ಜಾರಿಗೊಳಿಸುತ್ತಿರುವುದು ಶ್ಲಾಘನೀಯ.

## ವಿಶಿಷ್ಟ ಸಲಹೆಯೊಂದರ ಮಂಡನೆ

ಬಹಳ ಕಾಲದಿಂದ ಭಾರತದ ಶಸ್ತ್ರವೈದ್ಯರ ಸಂಘದ (ಎ.ಎಸ್.ಐ.ನ) ಸದಸ್ಯನಾಗಿದ್ದರೂ ಅದರ ೨-೩ ವಾರ್ಷಿಕ ಸಮಾವೇಶಗಳಲ್ಲಿ ಮಾತ್ರ ಭಾಗವಹಿಸಲು ಸಾಧ್ಯವಾಗಿತ್ತು. ದೇಶದ ದೂರದ ವಿವಿಧ ಭಾಗಗಳಲ್ಲಿ ಜರುಗುವ ಅದರ ಸಮ್ಮೇಳನಗಳಲ್ಲಿ ಸರ್ಕಾರಿ ಸೇವೆಯಲ್ಲಿರುವ ನಮ್ಮಂತಹವರು ಪ್ರತಿ ವರ್ಷ ಭಾಗವಹಿಸುವುದು ಹಲವು ಕಾರಣಗಳಿಂದ ಸಾಧ್ಯವಾಗುತ್ತಿರಲಿಲ್ಲ. ಆದರೆ ಅವುಗಳಲ್ಲಿ ಸಕ್ರಿಯವಾಗಿ ಭಾಗವಹಿಸುವುದರಿಂದ ವೈದ್ಯಕೀಯ ಕ್ಷೇತ್ರದಲ್ಲಿ ಅತ್ಯಂತ ಬಿರುಸಿನಿಂದ ಜರುಗುತ್ತಿರುವ ಮುನ್ನಡೆಗಳು, ಹೊಸ ಹೊಸ ಚಿಕಿತ್ಸಾ ವಿಧಾನಗಳ ಪರಿಚಯವಾಗುತ್ತವೆನ್ನುವುದರಲ್ಲಿ ಸಂದೇಹವಿಲ್ಲ. ಅದರಿಂದ ಭಾಗವಹಿಸಿದ ವೈದ್ಯರಿಗೇ ಅಲ್ಲದೆ ಪರೋಕ್ಷವಾಗಿ ರೋಗಿಗಳಿಗೂ ಉಪಕಾರವಾಗುತ್ತವೆ. ಒಂದು ರೀತಿಯಲ್ಲಿ ಸರ್ಕಾರವೇ ಆಗಿಂದಾಗ್ಗೆ ಪರಿಣತ ವೈದ್ಯರಿಂದ ಇಂತಹ ಪುನರಧ್ಯಯನ ಶಿಕ್ಷಣ ಶಿಬಿರಗಳನ್ನು (Refresher Course) ಏರ್ಪಡಿಸುವುದು ಆದ್ಯ ಕರ್ತವ್ಯವಾಗಬೇಕು.

ಚಿಕ್ಕಮಗಳೂರಿನಲ್ಲಿ ಮೊದಲ ಸಾರಿ ನಾನಿದ್ದ ಸಮಯದಲ್ಲಿ ದೆಹಲಿಯಲ್ಲಿ ಎ.ಎಸ್.ಐ.ನ ವಾರ್ಷಿಕ ಸಮ್ಮೇಳನ ಜರುಗುವುದರಲ್ಲಿತ್ತು. ಅದರ ಜೊತೆಗೆ International College of Surgeonsನವರೂ ತಮ್ಮ ಸಮ್ಮೇಳನ ಜರುಗುವ ಏರ್ಪಾಡು ಮಾಡಿದ್ದರು. ಅದರ ಒಂದು ಮುಖ್ಯ ಉದ್ದೇಶವೆಂದರೆ ಪ್ರಪಂಚದ ಅಭಿವೃದ್ಧಿಶೀಲ ರಾಷ್ಟ್ರಗಳ ಜಿಲ್ಲಾ ಮಟ್ಟದ ಆಸ್ಪತ್ರೆಗಳಲ್ಲಿ ಜರುಗುತ್ತಿರುವ ಶಸ್ತ್ರ ಚಿಕಿತ್ಸಾ ವಿಧಾನಗಳ ಬಗೆಗೆ ವಿಚಾರವಿನಿಮಯ Symposium on Surgery Conducted in District Hospitals of Developing Countries. ಇದು ನನ್ನ ತೀವ್ರ ಗಮನ ಸೆಳೆಯಿತು. ಆ ಸಮ್ಮೇಳನದಲ್ಲಿ ನಮ್ಮ ರಾಜ್ಯದ ಕೆಲವು ಜಿಲ್ಲಾ ಮತ್ತು ತಾಲ್ಲೂಕು ಆಸ್ಪತ್ರೆಗಳಲ್ಲಿ ಕಾರ್ಯನಿರತರಾದ ತರಬೇತಿ ಪಡೆದ ಶಸ್ತ್ರವೈದ್ಯರಲ್ಲಿ ಕೆಲವರಾದರೂ

ಭಾಗವಹಿಸುವಂತಾದರೆ ನಮ್ಮ ಕಾರ್ಯವಿಧಾನಗಳಲ್ಲಿ ಬಹಳಷ್ಟು ಸುಧಾರಣೆಗಳನ್ನು ತರಲು ಸಾಧ್ಯವಾಗಬಹುದೆನಿಸಿತು. ದೂರದ ದೆಹಲಿಯಲ್ಲಿ ಜರುಗುವ ಆ ಸಮ್ಮೇಳನಕ್ಕೆ ಅಪಾರ ಖರ್ಚುವೆಚ್ಚಗಳಾಗಬಹುದಾದುದರಿಂದ ಸರ್ಕಾರದ ಕೆಲಸದಲ್ಲಿರುವ ಶಸ್ತ್ರವೈದ್ಯರು ಹಾಜರಾಗುವುದು ಅಸಾಧ್ಯವೆನಿಸಿತು. ನನ್ನ ಮನಸ್ಸಿನ ಈ ಉದ್ದೇಶಗಳನ್ನು ವಿವರಿಸಿ ಆರೋಗ್ಯ ಇಲಾಖೆಯ ನಿರ್ದೇಶಕರಿಗೆ ಪತ್ರ ಬರೆದೆ. ದೆಹಲಿಯ ಸಮ್ಮೇಳನಕ್ಕೆ ನಮ್ಮ ರಾಜ್ಯದ ಕೆಳಮಟ್ಟದ ಆಸ್ಪತ್ರೆಗಳಲ್ಲಿನ ಶಸ್ತ್ರವೈದ್ಯರ ಒಂದು ತಂಡವನ್ನು ಸರ್ಕಾರದ ವೆಚ್ಚದಲ್ಲಿ ಕಳುಹಿಸುವುದರಿಂದಾಗುವ ಪ್ರಯೋಜನಗಳನ್ನು ನನ್ನ ಪತ್ರದಲ್ಲಿ ವಿವರಿಸಿದ್ದೆ. ಹಾಗೂ ಪ್ರತಿ ವರ್ಷ ಜರುಗುವ ಸಮ್ಮೇಳನಗಳಲ್ಲಿ ಭಾಗವಹಿಸಲು ಬೇರೆ ಬೇರೆ ತಂಡಗಳನ್ನು ಕಳುಹಿಸುವ ಸಲಹೆ ಮಾಡಿದ್ದೆ.

ನನ್ನ ಪತ್ರದ ಬಗೆಗೆ ನಿರ್ಧಾರ ಜಂಟಿ ನಿರ್ದೇಶಕರೊಬ್ಬರ ಮಟ್ಟದಲ್ಲಿ ಆಗಬೇಕಿತ್ತು. ಆ ಹುದ್ದೆ ನಿರ್ವಹಿಸುವವರು ಸ್ವಲ್ಪ ಸಮಯ ರಜೆಯಲ್ಲಿದ್ದರು. ಅವರ ಬದಲಿಗಿದ್ದವರು ನನ್ನ ಸಲಹೆಗಳು ತುಂಬಾ ಉಪಯುಕ್ತವಾದವೆಂದು ಉತ್ತರಿಸಿ, ಸಮ್ಮೇಳನ ಜರುಗಿಸುವ ಸಂಘ ಸಂಸ್ಥೆಗಳ ಬಗೆಗೆ ಹೆಚ್ಚಿನ ವಿವರಗಳನ್ನು ಒದಗಿಸುವಂತೆ ಕೇಳಿದರು. ಅದರಂತೆ ವಿವರಗಳನ್ನು ಒದಗಿಸಿದೆ. ಅಷ್ಟರಲ್ಲೇ ಖಾಯಂ ಜಂಟಿ ನಿರ್ದೇಶಕರು ರಜೆಯಿಂದ ವಾಪಸಾಗಿದ್ದರು. ಹಿಂದೆ ನಡೆದ ಪತ್ರ ವ್ಯವಹಾರಗಳನ್ನೆಲ್ಲಾ ಪರಿಶೀಲಿಸಿ ಸಮ್ಮೇಳನ ಖಾಸಗಿ ಸಂಘ ಸಂಸ್ಥೆಗಳ ವತಿಯಿಂದ ಏರ್ಪಾಡಾಗಿರುವುದರಿಂದ ಸರ್ಕಾರಿ ವೈದ್ಯರನ್ನು ಖರ್ಚುವೆಚ್ಚಗಳನ್ನು ಭರಿಸಿ ಕಳುಹಿಸುವುದಕ್ಕಾಗುವುದಿಲ್ಲವೆಂದು ನನ್ನ ಪ್ರಸ್ತಾವವನ್ನು ತಳ್ಳಿ ಹಾಕಿದರು! ಅಂತಹ ಖಾಸಗಿ ಸಮ್ಮೇಳನಗಳಿಗೆ ಅವರಾಗಿಯೇ ಹೋಗುವವರಿಗೆ ಸರ್ಕಾರ ವಿಶೇಷ ರಜೆ ನೀಡುವ ಪರಿಪಾಟ ಹಿಂದಿನಿಂದಲೂ ಇತ್ತು; ಅಲ್ಲದೆ ಪ್ರಸ್ತಾಪವನ್ನು ನಿರಾಕರಿಸಿದವರು ಹೊರದೇಶಧಲ್ಲಿದ್ದು ಸರ್ಕಾರದ ಖರ್ಚಿನಲ್ಲಿ ತರಬೇತಿ ಪಡೆದುಕೊಂಡು ಬಂದವರೆಂದರೆ ಇಂತಹ ವಿಚಾರಗಳಲ್ಲಿ ನಮ್ಮ ಅಧಿಕಾರಶಾಹಿ ಏನೆಲ್ಲಾ ತಂತ್ರ ಹೂಡುತ್ತದೆಂಬುದರ ಅರಿವಾಗಬಹುದು. ದೆಹಲಿಯ ಸಮಾವೇಶಕ್ಕೆ ನನಗೆ ಹೋಗಲಾಗದಿದ್ದರೂ ಅದರ ಕಾರ್ಯಕಲಾಪಗಳ ಅಚ್ಚಾದ ಪುಸ್ತಕವನ್ನು ತರಿಸಿಕೊಂಡು ಅಭ್ಯಸಿಸಿದೆ.

## ವೈದ್ಯ ಸಾಹಿತ್ಯ ಪರಿಷತ್ತು

ಸರ್ಕಾರಿ ಸೇವೆಯಿಂದ ೧೯೮೪ರಲ್ಲಿ ನಿವೃತ್ತನಾದ ಮೇಲೆ ಕೆಲವು ಸಂಘ ಸಂಸ್ಥೆಗಳಲ್ಲಿ ಸಕ್ರಿಯವಾಗಿ ಭಾಗವಹಿಸುವ ಅವಕಾಶಗಳು ಒದಗಿ ಬಂದಿದ್ದವು. ಅಷ್ಟರಲ್ಲೇ ಜನಪ್ರಿಯ ವೈದ್ಯಕೀಯ ವಿಷಯಗಳ ಬಗೆಗೆ ಹಲವಾರು ಲೇಖನಗಳೇ ಅಲ್ಲದೆ ೩-೪ ಪುಸ್ತಕಗಳನ್ನೂ ಪ್ರಕಟಿಸಲು ಸಾಧ್ಯವಾಗಿತ್ತು. ಆ ಕ್ಷೇತ್ರದಲ್ಲಿ ಅದಾಗಲೇ ಹೆಸರುಗಳಿಸಿದ್ದ ವೈದ್ಯ ಸಾಹಿತಿಗಳಿದ್ದರೂ ಆ ಸಾಹಿತ್ಯ ಪ್ರಕಾರವನ್ನು ಉತ್ಕೃಷ್ಟತೆಯತ್ತ ಒಯ್ಯಲು ಮಾರ್ಗದರ್ಶನ ನೀಡಬಹುದಾದ ಸಂಘಟನೆಯೊಂದರ ಅಭಾವವಿದ್ದಂತಿತ್ತು. ಜನಪ್ರಿಯ ವೈದ್ಯ ಸಾಹಿತ್ಯದ ಗುರಿ, ವ್ಯಾಪ್ತಿ, ವೈವಿಧ್ಯತೆ, ಶೈಲಿ, ಗುಣಮಟ್ಟಗಳ ಬಗೆಗೆ ಉದಯೋನ್ಮುಖ ಬರಹಗಾರರಿಗೆ ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತಿನ ಮಾದರಿಯಲ್ಲಿ ಸಂಸ್ಥೆಯೊಂದನ್ನು ಆರಂಭಿಸುವುದು ಉಪಯುಕ್ತವೆನಿಸಿತು.

ಶಿವಮೊಗ್ಗಾ ಆಸ್ಪತ್ರೆಯಲ್ಲಿ ಹಿಂದೆ ನನ್ನ ಸಹೋದ್ಯೋಗಿಯಾಗಿದ್ದು ಆಗಲೇ ಮನೋವೈಜ್ಞಾನಿಕ ಸಾಹಿತ್ಯ ರಚನೆಯಲ್ಲಿ ತೊಡಗಿದ್ದ ಡಾ|| ಕೆ. ಎ. ಅಶೋಕ ಪೈಯವರೊಡನೆ ಈ ವಿಷಯದ ಬಗೆಗೆ ಚರ್ಚೆಗಳಾಗುತ್ತಿದ್ದವು. ಮೆಡಿಕಲ್ ವಿದ್ಯಾರ್ಥಿಯಾಗಿದ್ದಾಗಲೇ ಬೆಳಗಾವಿಯಲ್ಲಿ ಅಂತಹ ಒಂದು ಸಮ್ಮೇಳನವನ್ನು ಜರುಗಿಸಿದ್ದರ ಅನುಭವವೂ ಅವರಿಗಿತ್ತು. ಈ ಹಿನ್ನೆಲೆಯಿಂದ

ಶಿವಮೊಗ್ಗಾದ ಕರ್ನಾಟಕ ಸಂಘ ಹಾಗೂ ಐ.ಎಂ.ಎ. ಯಂಥ ಸಂಸ್ಥೆಗಳ ಸಹಕಾರದಿಂದ ೧೯೮೮ರ ಅಕ್ಟೋಬರ್‌ನಲ್ಲಿ ಶಿವಮೊಗ್ಗಾದಲ್ಲೇ ಅಖಿಲ ಕರ್ನಾಟಕ ವೈದ್ಯಕೀಯ ಸಾಹಿತ್ಯ ಸಮ್ಮೇಳನವನ್ನು ಏರ್ಪಡಿಸಿದೆವು. ವಿಜ್ಞಾನ, ವೈದ್ಯ ವಿಜ್ಞಾನದ ಸಾಹಿತ್ಯಾಸಕ್ತರೇ ಅಲ್ಲದೆ, ಸೃಜನಶೀಲ ಸಾಹಿತಿಗಳ ಬೃಹತ್ ಸಮ್ಮೇಳನವೇ ಅದಾಯಿತು. ಹೆಸರಾಂತ ಸಾಹಿತಿಗಳಿಂದ ಭಾಷಣ, ಚರ್ಚಾಗೋಷ್ಠಿ, ಮಾರ್ಗದರ್ಶಕ ಕಮ್ಮಟಗಳೂ ಜರುಗಿದವು.




ಪ್ರಥಮ ವೈದ್ಯಕೀಯ ಸಾಹಿತ್ಯ ಸಮ್ಮೇಳನ (೧೯೮೮) - ಶಿವಮೊಗ್ಗ.

ಅಂದಿನ ಸಮ್ಮೇಳನದ ಉಪಯುಕ್ತತೆಯನ್ನು ಪರಿಗಣಿಸಿ ಅಂದೇ ಕಾಯಂ ಸಂಘಟನೆಯೊಂದನ್ನು ಸ್ಥಾಪಿಸುವ ಬಗೆಗೆ ಸಭೆಯೊಂದನ್ನು ಏರ್ಪಾಡು ಮಾಡಲಾಗಿತ್ತು. ಆ ದಿಸೆಯಲ್ಲಿ ೧೯೮೭-೮೭ರಲ್ಲಿ ಬೆಂಗಳೂರಲ್ಲಿ "ಕನ್ನಡ ವೈದ್ಯ ಸಾಹಿತ್ಯ ಪರಿಷತ್ತು (ರಿ)" ಎಂಬ ಸಂಸ್ಥೆ ಕಾನೂನು ಪ್ರಕಾರ ನೊಂದಾವಣೆಯಾಗಿರುವ ವಿಷಯವನ್ನು ಸಭೆಯಲ್ಲಿ ಭಾಗವಹಿಸಿದ ಡಾ॥ ಪುಟ್ಟಶಂಕರಪ್ಪನವರು ಪ್ರಸ್ತಾಪಿಸಿದರು. ಹಾಗೂ ನಾವೆಲ್ಲರೂ ಅದರಲ್ಲಿ ಸದಸ್ಯತ್ವ ಪಡೆದುಕೊಳ್ಳಬಹುದೆಂದು ಆಹ್ವಾನಿಸಿದರು. ಆ ಪರಿಷತ್ತಿನ ಉದ್ದೇಶವೂ, ನಮ್ಮ ಗುರಿಯಂತೆಯೇ ಇದ್ದುದರಿಂದ ಹಾಗೆ ಸೇರಿಕೊಳ್ಳುವುದೇ ಸರಿಯೆಂದು ನಾನೂ ಸೇರಿದಂತೆ ಹಲವರು ಸಮ್ಮತಿಸಿದೆವು. ಅಲ್ಲದೆ ಹೊಸದೊಂದು ಸಂಸ್ಥೆಯನ್ನು ಸ್ಥಾಪಿಸಿ, ಧ್ಯೇಯೋದ್ದೇಶ, ಬೈಲಾ ಮುಂತಾದ ವಿಧಿವಿಧಾನಗಳನ್ನು ರೂಪಿಸಿ ನೋಂದಣಿ ಮಾಡಿಸುವುದರ ಸಾಧಕ-ಬಾಧಕಗಳ ದೃಷ್ಟಿಯಿಂದಲೂ ಆ ಸಲಹೆ ಸರಿಯಾದುದೇ ಆಗಿತ್ತು. ಆದರೆ ಮತ್ತೆ ಕೆಲವರು ಆ ಪ್ರಸ್ತಾವನೆಗೆ ಸಮ್ಮತಿಸದೆ ನಮ್ಮದೇ ಪ್ರತ್ಯೇಕ ಪರಿಷತ್ತನ್ನು ಸ್ಥಾಪಿಸುವ ಬಗೆಗೆ ಒಲವು ತೋರಿದರು. ಆ ಪ್ರಸ್ತಾವ ಹಾಗೇ ನೆನೆಗುದಿಗೆ ಬಿದ್ದಿತು. ಪ್ರತ್ಯೇಕ ಪರಿಷತ್ತನ್ನು ಹುಟ್ಟು ಹಾಕುವುದರ ಬಗೆಗೆ ಸಹಮತವಿರದಿದ್ದ ನಾನು ಮುಂದಿನ ಕೆಲವೇ ತಿಂಗಳಲ್ಲಿ ಬೆಂಗಳೂರು ಪರಿಷತ್ತಿನ ಆಜೀವ ಸದಸ್ಯತ್ವವನ್ನು ಪಡೆದುಕೊಂಡೆ. ಮುಂದಿನ ವರ್ಷ (೧೯೮೯) ಬೆಳಗಾವಿಯಲ್ಲಿ ಮತ್ತೊಂದು ಸಮ್ಮೇಳನ ಏರ್ಪಾಡಾಯಿತು. ಹೊಸದಾಗಿ ಪರಿಷತ್ತನ್ನು ಸ್ಥಾಪಿಸುವ ಬಗೆಗೆ ಅಲ್ಲೂ ಚರ್ಚೆಗಳಾದರೂ ಒಮ್ಮತಕ್ಕೆ ಬರಲಾಗಲಿಲ್ಲ. ಆದರೆ ಪರಿಷತ್ತನ್ನು ಸ್ಥಾಪಿಸುವ ಬಗೆಗೆ ಬೆಂಗಳೂರಿನ ವೈದ್ಯರೊಬ್ಬರಿಗೆ ಅಂತಹ ಪರಿಷತ್ತಿನ ಬೈಲಾ ಮತ್ತಿತರ ವಿಧಾನಗಳನ್ನು ತಯಾರಿಸುವ ಜವಾಬ್ದಾರಿಯನ್ನು ವಹಿಸಲಾಯಿತು. ಮುಂದಿನ ವರ್ಷಗಳಲ್ಲಿ

ಬಿಜಾಪುರ, ಮೈಸೂರು ಕಡೆಯ ವೈದ್ಯ ಸಾಹಿತಿಗಳು ಆ ಕೆಲಸವನ್ನು ಮಾಡುವ ಭರವಸೆಗಳನ್ನು ನೀಡುತ್ತಿದ್ದರೂ ಯಾವ ಪ್ರಗತಿಯೂ ಆಗಲಿಲ್ಲ.

ಮುಂದಿನ ವರ್ಷಗಳಲ್ಲಿ ಕೆಲವು ಊರುಗಳಲ್ಲಿ ಸ್ಥಳೀಯ ಸಾಹಿತಿಗಳ ಸಹಕಾರದಿಂದ ವೈದ್ಯಸಾಹಿತ್ಯ ಸಮ್ಮೇಳನಗಳೇನೋ ನಡೆಯುತ್ತಿದ್ದುದುಂಟು. ಬೆಂಗಳೂರಿನ ಪರಿಷತ್ತು ಸ್ಥಾಪನೆಯಾಗಿ ನಾಲ್ಕಾರು ವರ್ಷಗಳಾಗಿದ್ದರೂ ಕಾರ್ಯಕಲಾಪಗಳು ಅಷ್ಟೇನೂ ಆಶಾದಾಯಕವಾಗಿರಲಿಲ್ಲ. ಈ ಬೆಳವಣಿಗೆಗಳನ್ನು ಗಮನಿಸುತ್ತಿದ್ದ ಡಾ॥ ಸಿ. ಆರ್. ಚಂದ್ರಶೇಖರ್, ನಾನು ಮತ್ತೂ ಕೆಲವರು ಬೆಂಗಳೂರಿನ ಪರಿಷತ್ತಿಗೇ ಇನ್ನೂ ಹೆಚ್ಚು ಸಂಖ್ಯೆಯ ಸದಸ್ಯರನ್ನು ಸೇರಿಸುವ ಪ್ರಯತ್ನ ಮುಂದುವರಿಸಿದೆವು. ಆ ತನಕ ವೈದ್ಯ ಸಾಹಿತ್ಯ ರಚನೆಯಲ್ಲಿ ಆಸಕ್ತಿ ಹೊಂದಿದವರಿಗೆಲ್ಲಾ ಪ್ರವೇಶ ಪತ್ರದ ಫಾರಂಗಳನ್ನು ಕಳುಹಿಸಿ, ಅದರ ಸದಸ್ಯತ್ವ ಪಡೆಯುವಂತೆ ಕೇಳಿಕೊಂಡೆವು. ಶಿವಮೊಗ್ಗಾ ಕಡೆಯಿಂದ ನಾನೇ ಆರೆಂಟು ಜನ ವೈದ್ಯ ಸಾಹಿತ್ಯಾಸಕ್ತರು ಸೇರುವ ಏರ್ಪಾಡು ಮಾಡಿದೆ. ಮುಂದೆ ೧೯೯೪ರಲ್ಲಿ ಜರುಗಿದ ಅದರ ಸರ್ವಸದಸ್ಯರ ಸಭೆಯಲ್ಲಿ ಡಾ॥ ಸಿ.ಆರ್. ಚಂದ್ರಶೇಖರ್ ಅವರನ್ನು ಅಧ್ಯಕ್ಷರನ್ನಾಗಿ ಆಯ್ಕೆ ಮಾಡಲಾಯಿತು. ವೈಯಕ್ತಿಕ ಅನಾನುಕೂಲತೆಯಿಂದ ಆ ದಿನ ನಾನು ಹಾಜರಿರಲು ಸಾಧ್ಯವಾಗದಿದ್ದರೂ ಕಾರ್ಯಕಾರಿ ಸಮಿತಿಯಲ್ಲಿ ನನ್ನನ್ನೂ ಸೇರಿಸಲಾಗಿತ್ತು.

ಅನಂತರದ ವರ್ಷಗಳಲ್ಲಿ "**ಕನ್ನಡ ವೈದ್ಯ ಸಾಹಿತ್ಯ ಪರಿಷತ್ತು**(ರಿ)" ವ್ಯವಸ್ಥಿತ ರೀತಿಯಲ್ಲಿ ಕಾರ್ಯನಿರ್ವಹಿಸುತ್ತಿದೆ. ಪ್ರತಿ ವರ್ಷವೂ ಸಾಹಿತ್ಯ ಸಮಾವೇಶಗಳನ್ನು ಏರ್ಪಡಿಸುವುದಲ್ಲದೆ, ಸಾಹಿತ್ಯ ರಚನಾ ಕಮ್ಮಟಗಳು, ವೈದ್ಯ ಸಾಹಿತ್ಯ ಕೃತಿಗಳ ವಿಮರ್ಶಾಸ್ಪರ್ಧೆ, ಪುಸ್ತಕಗಳ ಪ್ರಕಟಣೆ, 'ವೈದ್ಯಕೀಯ ಸಾಹಿತ್ಯ'ವೆಂಬ ನಿಯತಕಾಲಿಕ ಪತ್ರಿಕೆಯ ಪ್ರಕಟಣೆ ಮುಂತಾದ ಚಟುವಟಿಕೆಗಳು ಮುಂದುವರಿಯುತ್ತಿರುವುದು ವೈಯಕ್ತಿಕವಾಗಿ ನನಗೆ ಸಂತಸ ಉಂಟುಮಾಡಿದೆ. ಅದರ ಮಾರ್ಗದರ್ಶನದಿಂದ ಹಲವು ಹೊಸ ಹಾಗೂ ಪ್ರತಿಭಾನ್ವಿತರು ವೈದ್ಯ ಸಾಹಿತ್ಯ ರಚನೆಯಲ್ಲಿ ತೊಡಗಿದ್ದಾರೆ. ಕನ್ನಡದಲ್ಲಿ ಅತ್ಯುತ್ತಮ 'ವೈದ್ಯಕೀಯ ಸಾಹಿತ್ಯ' ಕೃತಿಗಳು ಪ್ರಕಟವಾಗುತ್ತಿವೆ. ಕರ್ನಾಟಕ ಸಾಹಿತ್ಯ ಅಕಾಡೆಮಿ ಮತ್ತಿತರ ಸಂಸ್ಥೆಗಳಿಂದ ಪುರಸ್ಕೃತರಾಗುತ್ತಿದ್ದಾರೆ.

## ಕನ್ನಡದಲ್ಲಿ ವೈದ್ಯಕೀಯ ಸಾಹಿತ್ಯ - ವಿಚಾರ ಸಂಕಿರಣ

ಪ್ರೊ. ಬರಗೂರು ರಾಮಚಂದ್ರಪ್ಪನವರು ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿದ್ದ ಸಮಯದಲ್ಲಿ ಕನ್ನಡ ಸಾಹಿತ್ಯದ ವಿವಿಧ ಪ್ರಕಾರಗಳ ಬಗೆಗೆ ಹಲವು ವಿಚಾರ ಸಂಕಿರಣಗಳನ್ನು ಜರುಗಿಸುತ್ತಿದ್ದರು. ನಾನೊಂದು ಸಾರಿ ಅವರಿಗೆ ಪತ್ರ ಬರೆದು **ಕನ್ನಡದಲ್ಲಿ ವೈದ್ಯಕೀಯ ಸಾಹಿತ್ಯ** ಎಂಬ ವಿಷಯದಲ್ಲಿ ವಿಚಾರ ಸಂಕಿರಣವೊಂದನ್ನು ಜರುಗಿಸಲು ಕಾಲ ಸೂಕ್ತವಾಗಿದ್ದು, ಆ ಬಗೆಗೆ ಗಮನ ಹರಿಸಬೇಕೆಂದು ಕೇಳಿಕೊಂಡೆ. ಅವರು ಕೂಡಲೇ ಸಮ್ಮತಿಸಿ, ಅಂತಹ ಒಂದು ವಿಚಾರ ಸಂಕಿರಣವನ್ನು ಶಿವಮೊಗ್ಗಾದಲ್ಲೇ ಜರುಗಿಸಲು ಸೂಚಿಸಿ, ಅದರ ಸಂಚಾಲಕ ನಾಗಿ ನಾನೇ ಕಾರ್ಯ ನಿರ್ವಹಿಸಬೇಕೆಂತಲೂ ನಿಯೋಜಿಸಿದರು. ಆ ಬಗೆಗೆ ಶಿವಮೊಗ್ಗಾ ಕರ್ನಾಟಕ ಸಂಘದಲ್ಲಿ ಪ್ರಸ್ತಾಪಿಸಿ, ಅವರ ಸಹಯೋಗದಲ್ಲೇ ನಡೆಯತಕ್ಕದೆಂಬ ನಿರ್ಧಾರವೂ ಆಯಿತು.

ಆ ದಿಸೆಯಲ್ಲಿ ಮುಂದಿನ ಏರ್ಪಾಡುಗಳೆಲ್ಲಾ ಸಾಂಗವಾಗಿ ಜರುಗಿದವು. ದಿನಾಂಕ ೧೧-೧೦-೯೭ರಂದು ಜರುಗಿದ ವಿಚಾರ ಸಂಕಿರಣವನ್ನು ಹಿರಿಯ ವೈದ್ಯ ಸಾಹಿತಿಯಾದ ಡಾ॥




ಕನ್ನಡದಲ್ಲಿ ವೈದ್ಯಕೀಯ ಸಾಹಿತ್ಯ ವಿಚಾರ ಸಂಕಿರಣ (೧೯೯೨) ಶಿವಮೊಗ್ಗ

ದೊಡ್ಡೇರಿ ವೆಂಕಟಗಿರಿರಾವ್ ಉದ್ಘಾಟಿಸಿದರು. ಅದರಲ್ಲಿ ಸುಮಾರು ಹತ್ತು ಜನ ವಿವಿಧ ಪ್ರಕಾರಗಳ ಸಾಹಿತಿಗಳು - ಸೃಜನಶೀಲ ಸಾಹಿತಿಗಳು, ಜನಪ್ರಿಯ ವಿಜ್ಞಾನ/ವೈದ್ಯ ಸಾಹಿತಿಗಳು, ವಿವಿಧ ಮಾಧ್ಯಮಗಳ ಪ್ರತಿನಿಧಿಗಳು ಹಾಗೂ ಪುಸ್ತಕ ಪ್ರಕಾಶಕರು - ಬೋಧಪ್ರದ ಭಾಷಣಗಳನ್ನು ಮಾಡಿದರು; ವಿಚಾರ ವಿಮರ್ಶೆಗಳು ಜರುಗಿದವು. ಸಾಹಿತ್ಯ ಅಕಾಡೆಮಿಯವರು ಅವುಗಳನ್ನು ಸಂಪಾದಿಸಿ "**ಕನ್ನಡದಲ್ಲಿ ವಿಜ್ಞಾನ ಸಾಹಿತ್ಯ**"(೧೯೯೨) ಎಂದು ಪುಸ್ತಕ ರೂಪದಲ್ಲಿ ಪ್ರಕಟಿಸಿದ್ದಾರೆ.

## ಪರಿಸರ ಸಂರಕ್ಷಣಾ ವೇದಿಕೆ

ಸರ್ಕಾರಿ ಸೇವೆಯಿಂದ ನಿವೃತ್ತಿಯಾದ ಮುಂದಿನ ವರ್ಷವೇ ಪರಿಸರ ರಕ್ಷಣೆಯ ಬಗೆಗೆ ಹಲವು ಪರಿಸರಾಸಕ್ತರು ಆ ದಿಸೆಯಲ್ಲಿ ಸಂಘಟನೆಯೊಂದನ್ನು ಸ್ಥಾಪಿಸುವ ಪ್ರಯತ್ನ ನಡೆಸಿದ್ದರು. ಅದರಲ್ಲಿ ಆಸಕ್ತಿ ಇದ್ದ ನನ್ನನ್ನು ಶಿವಮೊಗ್ಗಾ ಜಿಲ್ಲಾ "**ಪರಿಸರ ಸಂರಕ್ಷಣಾ ವೇದಿಕೆ**"ಯ ಅಧ್ಯಕ್ಷನನ್ನಾಗಿ ಆರಿಸಿದರು. ಡಾ|| ಶಿವರಾಮ ಕಾರಂತರಿಂದ ಉದ್ಘಾಟನೆಯಾದ ಆ ವೇದಿಕೆಗೆ ಎರಡು ವರ್ಷ ಅಧ್ಯಕ್ಷನಾಗಿದ್ದೆ (೧೯೮೫-೧೯೮೭). ಅದರಿಂದ ಕೆಲವು ಸಭೆ ಸಮ್ಮೇಳನ, ಜಾತಾಗಳು ಜರುಗಿದವು. '**ಪಶ್ಚಿಮ ಘಟ್ಟ ಉಳಿಸಿ**' ಆಂದೋಳನ (೧೯೮೭) ಶುರುವಾದಾಗ ನಮ್ಮ ಸಂಸ್ಥೆ ಜಿಲ್ಲೆಯ ಕಾರ್ಯ ಚಟುವಟಿಕೆಯ ಮುಂಚೂಣಿಯಲ್ಲಿತ್ತು. ಒಂದು ಸಂದರ್ಭದಲ್ಲಿ ಮಲೆನಾಡಿನಲ್ಲಿ ಆ ಸಲುವಾಗಿ ಪಾದಯಾತ್ರೆಯಲ್ಲೂ ಭಾಗವಹಿಸಿದ್ದೆ.

ಶಿವಮೊಗ್ಗಾದಲ್ಲಿ ಖಾಸಗಿ ವಲಯದಲ್ಲಿ ಮೆಡಿಕಲ್ ಕಾಲೇಜನ್ನು ಸ್ಥಾಪಿಸುವಲ್ಲಿ ಅಲ್ಲಿಯ ಹೆಸರಾಂತ ರಾಷ್ಟ್ರೀಯ ಶಿಕ್ಷಣ ಸಂಸ್ಥೆ ಆಸಕ್ತಿ ವಹಿಸಿತು. ಅದರ ಕಾರ್ಯದರ್ಶಿಗಳಾದ ದೇಶಭಕ್ತ ಎಸ್.ಆರ್. ನಾಗಪ್ಪಶೆಟ್ಟರು, ತಾಂತ್ರಿಕ ಸಲಹೆ ನೀಡಲು ನನ್ನನ್ನೂ ಸೇರಿಸಿ ಕೊಂಡಿದ್ದರು. ಆ ಬಗೆಗೆ ಪರಿಶೀಲಿಸಲು ನೇಮಕವಾದ ತಜ್ಞರ ಸಮಿತಿ ಗಾ.ಶಿ.ಸ. ಯವರು ಮೆಡಿಕಲ್ ಕಾಲೇಜು ಸ್ಥಾಪಿಸಲು ಶಿಫಾರಸು ಮಾಡಿದ್ದರೂ(೧೯೮೫), ರಾಜಕೀಯ ಚದುರಂಗದಾಟದಲ್ಲಿ ಅದರ ಸ್ಥಾಪನೆ ಸಾಧ್ಯವಾಗಲಿಲ್ಲ. ಹಾಗೆ ಅವರೊಡನೆ ಉಂಟಾದ ಸಹಯೋಗದಿಂದ ಮುಂದೆ ಅದರ



ಪರಿಸಂರಕ್ಷಣಾ ವೇದಿಕೆ ಉದ್ಘಾಟನೆ - ಶಿವಮೊಗ್ಗ. (೧೯೮೫)

ಕಾರ್ಯಕಾರಿ ಸಮಿತಿಯ ಸದಸ್ಯ ಹಾಗೂ ಉಪಾಧ್ಯಕ್ಷ ಸ್ಥಾನಗಳಿಗೂ ಆಯ್ಕೆಯಾಗಿ ಕಾರ್ಯ ನಿರ್ವಹಿಸುವ ಅವಕಾಶ ಲಭಿಸಿತ್ತು. ಕಳೆದ ಮೂರ‍್ನಾಲ್ಕು ವರ್ಷಗಳಲ್ಲಿ ಸ್ವತಃ ನನ್ನ ಹಾಗೂ ಪತ್ನಿಯ ಆರೋಗ್ಯದ ಪರಿಸ್ಥಿತಿಯೂ ಹದಗೆಟ್ಟಿದ್ದರಿಂದ ರಾಜೀನಾಮೆ ನೀಡಿ ವಿರಮಿಸಿದೆ.

---



# ೧೮. ಸಾಹಿತ್ಯಲೋಕದಲ್ಲಿ ವಿಹಾರ

ತೀರ್ಥಹಳ್ಳಿಯ ಪ್ರೌಢಶಾಲಾ ವಿದ್ಯಾಭ್ಯಾಸದ ಸಮಯದಲ್ಲಿ ನನಗುಂಟಾಗಿದ್ದ ಸಾಹಿತ್ಯಾಸಕ್ತಿಯ ಬಗೆಗೆ ಪ್ರಸ್ತಾಪ ಮಾಡಿರುವೆ. ಮುಂದಿನ ವರ್ಷಗಳಲ್ಲಿ ಆಸಕ್ತಿ ತೀವ್ರವಾಗಿ ಮುಂದುವರಿದಿತ್ತು. ಅಂದಿನ ಖ್ಯಾತ ಸಾಹಿತಿಗಳ ಕೃತಿಗಳನ್ನು ಕೊಂಡು ಓದುವ ಹವ್ಯಾಸವೇನೋ ಮುಂದುವರಿಯಿತು. ಆದರೆ ವಾಸ್ತವಿಕವಾಗಿ ಸಾಹಿತ್ಯ ರಚನೆ ಸಾಧ್ಯವಾಗಲಿಲ್ಲ. ಮೆಡಿಕಲ್ ಕಾಲೇಜಿನ ವಿದ್ಯಾರ್ಥಿಯಾಗಿದ್ದಾಗ ಕಲಿಕೆಗೆ ಸಂಬಂಧಿಸಿದ ಪಠ್ಯ ಪುಸ್ತಕಗಳೇ ಅಲ್ಲದೆ ವೈದ್ಯಕೀಯ/ಆರೋಗ್ಯ ಸಮಸ್ಯೆಗಳ ಆಳವಾದ ಸಾಮಾನ್ಯ ಜ್ಞಾನ (General Knowledge) ಪಡೆಯುವುದರಲ್ಲಿ ತುಂಬಾ ಆಸಕ್ತಿಯುಂಟಾಯಿತು. ಆ ದಿಸೆಯಲ್ಲಿ ೧೯೫೪ರಷ್ಟು ಹಿಂದೆ ಕೊಂಡಿದ್ದ Medicine and Mankind ಎಂಬ ಕಿರು ಹೊತ್ತಗೆ ಈಗಲೂ ನನ್ನಲ್ಲಿದೆ. ಸ್ವಲ್ಪ ಸಮಯದ ನಂತರ ಖರೀದಿಸಿದ Devils, Drugs and Doctors (By Howard W. Haggard 1929-1954 Edition) - ವೈದ್ಯ ವಿಜ್ಞಾನ/ವೃತ್ತಿ ಅನಾದಿಯಿಂದಲೂ ವಿಕಾಸವಾದ ರೀತಿಯ ಮೈಲಿಗಲ್ಲುಗಳ ರೋಚಕ ಚಿತ್ರಣ. ಅದರ ಮನನದಿಂದ ವೈದ್ಯ ವೃತ್ತಿ ಹಂತ ಹಂತವಾಗಿ ವೃದ್ಧಿಯಾಗಿ ಆಧುನಿಕ ವೈಜ್ಞಾನಿಕ ರೀತಿ ನೀತಿಗಳನ್ನು ಅಳವಡಿಸಿಕೊಂಡ ಬಗೆ ಕುತೂಹಲ ಕೆರಳಿಸಿತು. ಅಂತಹ ವಿಷಯಗಳ ಬಗೆಗೆ ಹೆಚ್ಚು ಹೆಚ್ಚು ಓದಬೇಕೆಂಬ ಹಂಬಲ ತಂತಾನೆ ಮೈಗೂಡಿತು. ಮುಂದೆ ದೊಡ್ಡ ನಗರಗಳಿಗೆ ಹೋದಾಗಲೆಲ್ಲಾ ಹೆಸರಾಂತ ಪುಸ್ತಕ ಮಳಿಗೆಗಳಿಗೆ ಭೇಟಿ ನೀಡುವುದು ಒಂದು ಪ್ರಮುಖ ಉದ್ದೇಶವಾಗಿರುತ್ತಿತ್ತು. ಬೆಂಗಳೂರಿನ ಗಂಗಾರಾಮ್ ಪುಸ್ತಕ ಮಳಿಗೆಯ ಕಟ್ಟಡ ಕುಸಿದ ಹಿಂದಿನ ವಾರ ಒಂದೆರಡು ಗಂಟೆಗಳ ಕಾಲ ಅದರಲ್ಲಿ ಸುತ್ತಾಡಿದ್ದೆ!

ಈ ರೀತಿಯ ಹುಡುಕಾಟದ ಸಂದರ್ಭದಲ್ಲಿ The Century of The Surgeon (By Jurgen Thorwold - 1957) ಎಂಬ ಗ್ರಂಥ ಅನಾಯಾಸವಾಗಿ ದೊರಕಿತು. ಅದು ಕೊಳ್ಳೇಗಾಲದಲ್ಲಿದ್ದ ಸಮಯ. ಡಾ॥ ಸುಬ್ಬಯ್ಯ ಎಂಬ ದಂತ ವೈದ್ಯರು ಹೊಸದಾಗಿ ಬಂದಿದ್ದರು. ಲೋಕಾಭಿರಾಮವಾಗಿ ಅವರಲ್ಲಿದ್ದ ಆ ಪುಸ್ತಕವನ್ನು ಓದಲು ನನಗಿತ್ತರು. ಹಾಗೆ ನೋಡಿದರೆ ಅದು ಅವರದ್ದಲ್ಲ. ಬೆಂಗಳೂರಿನ ಸೆಂಟ್ ಜೋಸೆಫ್ಸ್ ಕಾಲೇಜಿನ ಸುಧೀರ್ ವಿ. ಎಸ್. ಎಂಬ ವಿದ್ಯಾರ್ಥಿಯದು; ಅಲ್ಲಿಯ Natural Science Association ನವರು ೧೯೬೦ರಲ್ಲಿ ಜರುಗಿಸಿದ ಪ್ರಬಂಧ ಸ್ಪರ್ಧೆಯಲ್ಲಿ ಅವನಿಗೆ ದೊರೆತ ಬಹುಮಾನ ಅದು.

ಅದೇ ತಾನೆ ಸರ್ಜರಿಯಲ್ಲಿ ವಿಶೇಷ ಪರಿಣಿತಿ ಪಡೆದು ಕಾರ್ಯಾರಂಭ ಮಾಡಿದ್ದೆ. ಅಂತಹ ಸಾಹಿತ್ಯ ಅಭ್ಯಾಸದ ಗೀಳೂ ಹಿಡಿಸಿಕೊಂಡಿದ್ದೆ. ಅದನ್ನು ಮನನ ಮಾಡುವುದಕ್ಕೆ ಶುರು ಮಾಡುತ್ತಲೇ ಅದು ನನ್ನನ್ನು ತನ್ನ ವಶಕ್ಕೆ ಸೆಳೆದುಕೊಂಡು ಬಿಟ್ಟಿತು! ಒಂದು ಕಾದಂಬರಿಯ ರೀತಿಯಲ್ಲಿ ಆರಂಭವಾಗುವ ಅದರಲ್ಲಿನ ನಿರೂಪಣೆ ಕೇವಲ ಒಂದು ಶತಮಾನದ ಅವಧಿಯಲ್ಲಿ ಶಸ್ತ್ರ ಚಿಕಿತ್ಸಾ ಕ್ಷೇತ್ರದಲ್ಲುಂಟಾದ ಅದ್ಭುತ ಬೆಳವಣಿಗೆಗಳನ್ನು ಅಚ್ಚರಿ ಪಡಿಸುವ ಹಾಗೆ ತೆರೆದಿಟ್ಟಿತ್ತು. ಅಂತಹ ಬೆಳವಣಿಗೆಗಳು ಸ್ನಾತಕೋತ್ತರ ಕಲಿಕೆಯ ಸಮಯದಲ್ಲಿ ನನಗೆ ತಿಳಿದವೇ ಆಗಿದ್ದರೂ, ಅವುಗಳ ಹಿಂದಿನ ಐತಿಹಾಸಿಕ ಘಟನೆಗಳು, ಏಳು ಬೀಳುಗಳು, ತಿರುವುಗಳು, ನಿಸ್ವಾರ್ಥ ಬದುಕು,

ಬಲಿದಾನಗಳು ನನ್ನಲ್ಲಿದ್ದ ಜ್ಞಾನ ಅದೆಷ್ಟು ಕಡಿಮೆ ಮಟ್ಟದ್ದಾಗಿತ್ತೆಂಬುದರ ಅರಿವನ್ನುಂಟು ಮಾಡಿತು; ಆ ತನಕ ನಾನು ಮಾಡುತ್ತಿದ್ದುದು ಒಂದು ರೀತಿಯ 'ತಾಂತ್ರಿಕ ಸೇವೆ' (Technical Service); ಆ ಗ್ರಂಥದಲ್ಲಿನ ವಿಷಯಗಳ ಬಗೆಗೆ ಅರಿವಿಲ್ಲದೆ ನಾನು ಗಳಿಸಿದ್ದ ಪಾಂಡಿತ್ಯ ಪರಿಪೂರ್ಣವಾದುದಲ್ಲವೆನಿಸಿತು. ಪುಸ್ತಕವನ್ನು ಹಲವು ಸಾರಿ ತಿರುವಿ ಹಾಕಿದೆ. ಪ್ರತಿಯೊಂದು ಬೆಳವಣಿಗೆಯ ಹಿಂದಿನ ರೋಚಕ ವಿಷಯಗಳನ್ನು ಜನ ಸಾಮಾನ್ಯರೂ ಅರಿಯು ವಂತಾದರೆ ಅವರಲ್ಲಿ ವೈಜ್ಞಾನಿಕ ಚಿಂತನೆ ಬೆಳೆಯಲು ಸಹಾಯಕವಾಗಬಹುದೆನಿಸಿತು.

ಈ ಹಿನ್ನೆಲೆಯಲ್ಲಿ ಆ ಪುಸ್ತಕವನ್ನು ಹಿಂದಿರುಗಿಸುವ ಮನಸ್ಸಾಗಲಿಲ್ಲ. ಅದು ಸರಿಯಾದ ವರ್ತನೆಯಲ್ಲವೆಂಬುದರ ಅರಿವು ಇಲ್ಲದವನು ನಾನಲ್ಲ. ಮೇಲಾಗಿ ಆ ವಿದ್ಯಾರ್ಥಿ ಪುಸ್ತಕದಲ್ಲಿ ತನ್ನದೇ ಆದ ಶಾಸನ ವಿಧಿಸಿದ್ದ ಕೂಡ :"First is my Book; Second is my Boot; Steal not the first, for the fear of the Second. V.S.S." ಅದನ್ನು ಗಮನಿಸಿದ ನಂತರವೂ Second-ಎರಡನೆಯದನ್ನೇ ಆಯ್ಕೆ ಮಾಡುವ ನಿರ್ಧಾರ ಮಾಡಿದೆ. ಡಾ|| ಸುಬ್ಬಯ್ಯನವರಿಗೂ ನನ್ನ ಇಂಗಿತವನ್ನು ತಿಳಿಸಿದೆ. ಮೇಲಧಿಕಾರಿಯ ಇಂಗಿತಕ್ಕೆ ನಕಾರ ಸೂಚಿಸುವ ಹಾಗೂ ಅವರು ಎರವಲು ಪಡೆದ ವಿದ್ಯಾರ್ಥಿ ಸುಧೀರ್‌ನನ್ನು ಎದುರಿಸುವ ಸಂದಿಗ್ಧತೆಯಲ್ಲಿ ಅವರು ಸಿಲುಕಿದರು. ವಿದ್ಯಾರ್ಥಿ ಸುಧೀರ್ ಮುಂದೆ ಏನಾದನೋ; ಅವನೂ ಒಬ್ಬ ವೈದ್ಯನಾಗಿರಬಹುದು! ಅದರಿಂದ ಮುಂದೆ ನನ್ನಲ್ಲಿ ಸಾಹಿತ್ಯ ರಚನೆಯ ಕಿಡಿ ಹತ್ತಿಕೊಳ್ಳಲು ಸಹಾಯವಾದುದಕ್ಕೆ ನನ್ನ ಕೃತಜ್ಞತೆಗಳು ಸುಧೀರ್‌ಗೆ ಸಲ್ಲುತ್ತವೆ.

ಈ ಹಂತದಲ್ಲಿದ್ದಾಗ ಕೊಳ್ಳೇಗಾಲದ ಪ್ರೌಢಶಾಲೆಯ ನನ್ನ ಅಭಿಮಾನಿ ಶಿಕ್ಷಕ ವರ್ಗದವರು, ಅವರ ಶಾಲಾ ವಾರ್ಷಿಕ ಸಮಾರಂಭದಲ್ಲಿ ಮುಖ್ಯ ಅತಿಥಿಯಾಗಿ ಭಾಷಣ ಮಾಡಬೇಕೆಂದು ಒತ್ತಾಯ ಹೇರಲಾರಂಭಿಸಿದರು. ಆ ತನಕ ಅಂತಹ ಸಮಾರಂಭಗಳಲ್ಲಿ ಮಾತಾಡಿದ ಅನುಭವವಿಲ್ಲದ್ದರಿಂದ ಮೊದಲಿಗೆ ಒಪ್ಪಲಿಲ್ಲ. ಆದರೂ ಅವರೆಲ್ಲಾ ನನ್ನ ಮೇಲೆ ಇರಿಸಿಕೊಂಡಿದ್ದ ಪ್ರೀತಿ ವಿಶ್ವಾಸದಿಂದ ಒಪ್ಪಿಕೊಳ್ಳಲೇಬೇಕಾಯಿತು. ಆ ದಿನದ ನನ್ನ ಮಾತಿನ ವಿಷಯವಾಗಿ "ಸೆಂಚುರಿ ಆಫ್ ದಿ ಸರ್ಜನ್" ಕೃತಿಯಲ್ಲಿ ವೈದ್ಯಕೀಯ ಪದ್ಧತಿ ವೈಜ್ಞಾನಿಕ ತತ್ವಗಳ ವಿಕಾಸದಿಂದ ಹೇಗೆ ಬೆಳೆದು ಬಂದಿದೆ ಎಂಬುದರ ಬಗೆಗೆ ಟಿಪ್ಪಣಿಯನ್ನು ತಯಾರು ಮಾಡಿಕೊಂಡೆ. ವಾರ್ಷಿಕೋತ್ಸವದ ದಿನ ಅದನ್ನೇ ವಿಸ್ತರಿಸಿ ಭಾಷಣ ಮಾಡಿದೆ. ಸ್ವಾರಸ್ಯಕರ ಕತೆಗಳ ರೂಪದಲ್ಲಿದ್ದ ವೈದ್ಯಕೀಯ ಇತಿಹಾಸದ ಘಟನೆಗಳು ವಿದ್ಯಾರ್ಥಿಗಳೇ ಅಲ್ಲದೆ ಬೋಧಕ ವರ್ಗದವರ ಕುತೂಹಲ ಕೆರಳುವಂತೆ ಮಾಡಿದವಂತೆ.

ಅದಕ್ಕಿಂತ ಮಿಗಿಲಾಗಿ ಆತ್ಮೀಯರಾಗಿದ್ದ ಕೆಲವು ಶಿಕ್ಷಕರು, ಹಾಗೂ ಸಾಹಿತ್ಯಾಸಕ್ತರು ನಂತರದ ದಿನಗಳಲ್ಲಿ ನನ್ನನ್ನು ಭೇಟಿಯಾದಾಗ ಅಂದಿನ ಭಾಷಣದ ಬಗೆಗೆ ತಮ್ಮ ಅನಿಸಿಕೆಗಳನ್ನು ವ್ಯಕ್ತಪಡಿಸಲು ಮರೆಯುತ್ತಿರಲಿಲ್ಲ. ಅದರಲ್ಲಿನ ಸಾಹಿತ್ಯಿಕ ಮೌಲ್ಯ, ಪರಿಶುದ್ಧ ಕನ್ನಡ ಪ್ರಯೋಗ, ಮಲೆನಾಡಿನ, ಅರ್ಥಾತ್ ಕುವೆಂಪು ಶೈಲಿಯ ಭಾಷೆಯಲ್ಲಿ ನಾನಂದು ಮಾತಾಡಿದೆನೆಂದು ಪ್ರಶಂಸೆಯ ಮಾತುಗಳನ್ನಾಡುತ್ತಿದ್ದರು. ಮೊದ ಮೊದಲು ಅಂತಹ ಪ್ರಶಂಸೆಗಳು ಕೇವಲ ಔಪಚಾರಿಕವೆಂದೆನಿಸುತ್ತಿದ್ದರೂ, ನನ್ನಲ್ಲೂ ಸಾಹಿತ್ಯ ರಚನೆಯ ಒಳಹರಿವು ಇರಬಹುದೇನೋ ಎಂಬ ಆಲೋಚನೆಗಳುಂಟಾಗುತ್ತಿದ್ದವು. ಅಷ್ಟರಲ್ಲೇ ವೈದ್ಯ ವಿಜ್ಞಾನ ಬೆಳವಣಿಗೆಯ ಐತಿಹಾಸಿಕ ಘಟನೆಗಳ ಬಗೆಗೆ ಜನ ಸಾಮಾನ್ಯರಿಗೆ ಅರಿವು ಉಂಟುಮಾಡುವ ತುಡಿತ ನನ್ನಲ್ಲುಂಟಾಗ

ತೊಡಗಿತ್ತಷ್ಟೆ. ಇವೆಲ್ಲದರಿಂದ ಬರವಣಿಗೆಯ ಹವ್ಯಾಸಕ್ಕೆ ತೊಡಗಬಹುದೆಂಬ ಆತ್ಮ ವಿಶ್ವಾಸ ಉಂಟಾಗತೊಡಗಿತು.

ಆ ಸಮಯದಲ್ಲೇ ಚಿಕ್ಕಮಗಳೂರಿಗೆ ವರ್ಗವಾಯಿತು. ವೃತ್ತಿ ನಿರ್ವಹಣೆಯಲ್ಲಿ ತುಂಬಾ ಬಿಝಿಯಾಗಿದ್ದರೂ ಆಡಳಿತ ನಿರ್ವಹಣೆಯ ಜವಾಬ್ದಾರಿ ನನಗಿರಲಿಲ್ಲ. ಅದರಿಂದ ಬಿಡುವಿನ ವೇಳೆಯಲ್ಲಿ ಬರವಣಿಗೆಯ ಬಗೆಗೆ ಆಸಕ್ತಿವಹಿಸಲು ಸಾಧ್ಯವಾಯಿತು. ಅದಾಗಲೇ ಸಂಪಾದಿಸಿದ ವಿಷಯಗಳ ಕುರಿತು, ಅರಿವಳಿಕೆ (ಅನೆಸ್ಥೇಷಿಯಾ), ಆಂಟಿ ಸೆಪ್ಟಿಕ್ ನಿಯಮಗಳು, ಜೀವಿರೋಧಕ ಮದ್ದುಗಳು (ಆಂಟಿ ಬಯೋಟಿಕ್ಸ್) ಮುಂತಾದವು ಉಗಮವಾದ ಹಿನ್ನೆಲೆಗಳ ಬಗೆಗೆ ಲೇಖನಗಳನ್ನು ಬರೆದೆ. ಮುಂದೊಂದು ಸಾರಿ ಮೈಸೂರಿಗೆ ಹೋದಾಗ ಬಾಲ್ಯ ಸ್ನೇಹಿತ ಡಾ|| ಹಾ. ಮಾ. ನಾಯಕರನ್ನು ಕಾಣುವ ಮನಸ್ಸಾಯಿತು. ಅವರಾಗ ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರಾಗಿದ್ದರು. ಮಾತುಗಳ ನಡುವೆ ಲೋಕಾಭಿರಾಮವಾಗಿ ನಾನಾಗ ಬರವಣಿಗೆಯ ಹವ್ಯಾಸದಲ್ಲಿ ತೊಡಗಿರುವುದನ್ನು ಪ್ರಸ್ತಾಪಿಸಿದೆ; ಹಾಗೂ ತಯಾರಾಗಿದ್ದ ೨-೩ ಲೇಖನಗಳನ್ನು ಅವರಿಗಿತ್ತೆ. ಯಾವುದೋ ಯೋಜನೆಯನ್ನು ಕಾರ್ಯಗತಗೊಳಿಸುವುದರಲ್ಲಿ ಮಗ್ನರಾಗಿದ್ದರಿಂದ, ಅವರ ಸಹಾಯಕರೊಬ್ಬರನ್ನು ಕರೆಸಿ, ಲೇಖನಗಳನ್ನು ಪರಿಶೀಲಿಸುವಂತೆ ಹೇಳಿದರು; ಹಾಗೂ ವಿಶ್ವ ವಿದ್ಯಾಲಯದವರ "ಜನಪ್ರಿಯ ವಿಜ್ಞಾನ" ಮಾಸಿಕದಲ್ಲಿ ಪ್ರಕಟಿಸಲು ಪ್ರಯತ್ನಿಸಬೇಕೆಂದು ಬೀಳ್ಕೊಟ್ಟರು.

ಅಲ್ಲಿಂದ ಹೊರಬಂದವನು ಕನ್ನಡ ಅಧ್ಯಯನ ಸಂಸ್ಥೆಯ ವಿವಿಧ ವಿಭಾಗಗಳನ್ನು ನೋಡುತ್ತಾ ವೆರಾಂಡಾದಲ್ಲಿ ಅಡ್ಡಾಡುತ್ತಿದ್ದೆ. ಒಂದು ಕೊಠಡಿಯ ಬಾಗಿಲ ಮುಂದೆ ಚಲಿಸುತ್ತಿದ್ದಾಗ ಉದ್ದನೆಯ ವ್ಯಕ್ತಿಯೊಬ್ಬರು ಹೊರಗಡೆ ಬಂದರು. ಅಪರಿಚಿತನಾದರೂ ನನ್ನನ್ನು ಮಾತಾಡಿಸಿ, ನಾನು ಯಾರು, ಏನು ಬೇಕಾಗಿತ್ತೆಂದೆಲ್ಲಾ ವಿಚಾರಿಸಿದರು. ಒಳಗಡೆ ಆಹ್ವಾನಿಸಿ ನನ್ನ ವಿಚಾರಗಳನ್ನು ತಿಳಿಯಲು ಮುಂದಾದರು. ಅವರು ಪ್ರೊ. ಜಿ. ಟಿ. ನಾರಾಯಣ ರಾವ್; ಅವರಾಗ ಕನ್ನಡ ವಿಶ್ವಕೋಶದ ವಿಜ್ಞಾನ ಸಂಪಾದಕರಾಗಿದ್ದರು. ಜನಪ್ರಿಯ ವೈದ್ಯಕೀಯ ವಿಷಯಗಳ ಬಗೆಗೆ ಲೇಖನಗಳನ್ನು ಬರೆಯುವ ನನ್ನ ಅಭಿಲಾಷೆಯನ್ನು ವ್ಯಕ್ತಪಡಿಸಿದೆ. ಬಹುಶಃ ಅಷ್ಟರಲ್ಲೇ ನನ್ನಲ್ಲಿ ಸಾಹಿತ್ಯಾಸಕ್ತಿ ಇರುವುದನ್ನು ಅವರು ಗ್ರಹಿಸಿದರೇನೋ. ಆ ದಿಸೆಯಲ್ಲಿ ನಾನು ತೊಡಗಿಸಿಕೊಳ್ಳ ಬೇಕೆಂತಲೂ, ಅಂತಹ ಲೇಖನಗಳನ್ನು '**ಪುಸ್ತಕ ಪ್ರಪಂಚ**'ದಲ್ಲಿ ಪ್ರಕಟಿಸಲು ನೆರವಾಗುವ ಭರವಸೆ ಇತ್ತರು. ಅವರಾಗ ಆ ಪತ್ರಿಕೆಯ ಸಂಪಾದಕ ಮಂಡಳಿಯಲ್ಲೂ ಇದ್ದರು. ಲೇಖನಗಳನ್ನು ನೇರವಾಗಿ ಅವರ ಮನೆಯ ವಿಳಾಸಕ್ಕೆ ಕಳುಹಿಸಬೇಕಾಗಿ ಆಗ್ರಹಪಡಿಸಿದರು ಕೂಡ.

ಪ್ರೊ. ಜಿ. ಟಿ. ನಾರಾಯಣ ರಾವ್ ಆಡಿದ ಉತ್ತೇಜನಕರ ಮಾತುಗಳು ಲೇಖನ ಬರೆಯುವ ಅಭಿಲಾಷೆಗೆ ಮತ್ತಷ್ಟು ಇಂಬು ಕೊಟ್ಟಿತು. ಆ ದಿಸೆಯಲ್ಲಿ ನನ್ನ ಮೊತ್ತ ಮೊದಲ ಲೇಖನ 'ರೇಬೀಸ್' (ನಾಯಿ ಹುಚ್ಚು) ೧೯೭೯ರ "ಪುಸ್ತಕ ಪ್ರಪಂಚ"ದ ಸೆಪ್ಟೆಂಬರ್ ಸಂಚಿಕೆಯಲ್ಲಿ ಪ್ರಕಟವಾಯಿತು ಮುಂದೆ 'ಟೆಟನಸ್' (ಧನುರ್ವಾಯು), ರಕ್ತದಾನ, 'ಆಹಾರ-ವಿಷತೆ' (Food Poisoning) ಮುಂತಾದ ವಿಷಯಗಳ ಲೇಖನಗಳು "ಪುಸ್ತಕ ಪ್ರಪಂಚ"ದಲ್ಲಿ ಪ್ರಕಟವಾದವು. ಮನದಾಳದಲ್ಲಿ ಬಹಳ ಸಮಯದಿಂದ ಮಡುಗಟ್ಟಿದ್ದ ವಿಚಾರಗಳು ಉಕ್ಕಿ ಹರಿಯಲು ಅವಕಾಶ ಉಂಟಾಗಿದ್ದು ಮುದನೀಡಿತು.

## ವಿಜ್ಞಾನ ಲೇಖಕರ ಶಿಬಿರ (ಕಮ್ಮಟ)

ಚಿಕ್ಕಮಗಳೂರಿನಲ್ಲಿ ಜಿಲ್ಲಾ ಸರ್ಜನ್ ಆಗಿದ್ದ ಸಮಯದಲ್ಲಿ ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತಿನವರ (ಕ.ರಾ.ವಿ.ಪ.) ಒಂದು ಪ್ರಕಟಣೆ ನನ್ನ ಗಮನ ಸೆಳೆಯಿತು. ಅದೇ ಮೊದಲ ಬಾರಿಗೆ ಉದಯೋನ್ಮುಖ ವಿಜ್ಞಾನ ಬರಹಗಾರರಿಗೆ ವಿಜ್ಞಾನ ಸಾಹಿತ್ಯ ರಚನೆಯ ಬಗೆಗೆ ತರಬೇತಿಯ ಶಿಬಿರ ಏರ್ಪಡಿಸಿದ್ದು, ಆಸಕ್ತರನ್ನು ಆಹ್ವಾನಿಸಿದ್ದರು. ಡಿಸೆಂಬರ್ (೧೯೮೩) ಕಡೇ ವಾರದಲ್ಲಿ ಜರುಗುವ ಈ ಕಮ್ಮಟದಲ್ಲಿ ಅಭ್ಯರ್ಥಿಗಳು ಅದಾಗಲೇ ರಚಿಸಿರುವ ಒಂದು ಲೇಖನವನ್ನು ಪರಿಶೀಲನೆಗಾಗಿ ಕಳುಹಿಸುವಂತೆಯೂ ಕೇಳಲಾಗಿತ್ತು. ಇತ್ತೀಚಿನ ದಿನಗಳಲ್ಲಿ ವೈದ್ಯ ವಿಜ್ಞಾನ ಲೇಖನಗಳನ್ನು ಬರೆಯುತ್ತಿದ್ದು, ಅಂತಹ ಶಿಬಿರದಲ್ಲಿ ಭಾಗವಹಿಸುವ ನನ್ನ ಅಭಿಲಾಷೆಯನ್ನು ವ್ಯಕ್ತಪಡಿಸಿ, ಪ್ರಕಟಣೆಗಾಗಿ ತಯಾರಾಗಿದ್ದ **"ನಾರುಗಾಜಿನ ಅಂತರ್ದರ್ಶಕ ದುರ್ಬೀನು"** ಎಂಬ ಲೇಖನವನ್ನು ಅವರ ಅವಗಾಹನೆಗಾಗಿ ಕಳುಹಿಸಿದ್ದೆ. ನನ್ನ ಸ್ಥಾನ ಮಾನ ಹಾಗೂ ವಯಸ್ಸನ್ನು ಗಮನಿಸಿದ ಕ.ರಾ.ವಿ.ಪ.ದವರು ನನ್ನಂಥವರು ಆ ತರಹದ ಶಿಬಿರ ವೊಂದರಲ್ಲಿ ಯುವ ವಯಸ್ಸಿನವರೊಡನೆ ಬೆಳಿಗ್ಗೆ ೯ ರಿಂದ ಸಂಜೆ ೫ ಗಂಟೆಯವರೆಗೆ ಸುಮಾರು ಒಂದು ವಾರ ಕಳೆಯಬಲ್ಲರೇ ಎಂದು ಮತ್ತೆ ಪತ್ರ ಬರೆದರು. ಅಂತಹದ್ದನ್ನೆಲ್ಲಾ ಗಮನದಲ್ಲಿರಿಸಿ ಕೊಂಡೇ ನಿರ್ಧಾರ ಮಾಡಿರುವುದಾಗಿ ಉತ್ತರಿಸಿದೆ. ಶಿಬಿರದಲ್ಲಿ ಭಾಗವಹಿಸಿದೆ; ನನ್ನ ವಯಸ್ಸು, ಸ್ಥಾನಮಾನಗಳ ಯಾವುದೇ ಹಮ್ಮು-ಬಿಮ್ಮು ಇಲ್ಲದೆ ಎಲ್ಲರೊಡನೆ ಒಡನಾಡಿದೆ. ಜನಪ್ರಿಯ ವಿಜ್ಞಾನ ರಚನೆಯ ಧ್ಯೇಯೋದ್ದೇಶಗಳು, ಶೈಲಿ, ಧಾಟಿ, ಇತಿ, ಮಿತಿ, ಬಳಸಬಹುದಾದ ವಿವಿಧ ಪ್ರಕಾರಗಳ ಬಗೆಗೆ ಖ್ಯಾತ ಸಾಹಿತಿಗಳಿಂದ ಭಾಷಣ, ಚರ್ಚಾಕೂಟ ಮಾರ್ಗದರ್ಶನಗಳಾದವು. ನಾನೂ ಸೇರಿದಂತೆ ಇತರ ಕೆಲವರ ಲೇಖನಗಳನ್ನು ಓದಿಸಿದರು. ನನ್ನ "ನಾರುಗಾಜಿನ ಅಂತರ್ದರ್ಶಕ ದುರ್ಬೀನು" ಲೇಖನದ ಬಗೆಗೆ ಯಾವುದೇ ಸಂಕೋಚವಿಲ್ಲದೆ ಟೀಕೆ ಟಿಪ್ಪಣಿ ಗಳಾದವು. ನಾನು ಬಳಸಿದ ತಾಂತ್ರಿಕ ಪದಗಳ ಬಗೆಗೆ ಸ್ಪಷ್ಟನೆ ಕೇಳಿದರು. ಅವನ್ನು ಉತ್ತಮ ಪಡಿಸಲು ಸಲಹೆ ಸೂಚನೆಗಳೂ ಬಂದವು. ಎಲ್ಲವನ್ನೂ ತೆರೆದ ಮನಸ್ಸಿನಿಂದ ಸ್ವೀಕರಿಸಿದೆ (ಆ ಲೇಖನ ಮುಂದೆ '**ಬಾಲವಿಜ್ಞಾನ**'ದಲ್ಲಿ ಪ್ರಕಟವಾಯಿತು). ಶಿಬಿರದಲ್ಲಿ ಭಾಗವಹಿಸಿದ್ದರಿಂದ ನನ್ನ ಬರವಣಿಗೆಯ ದಿಕ್ಕು ದೆಸೆ, ಓರೆಕೋರೆಗಳನ್ನು ಸರಿಪಡಿಸಿಕೊಳ್ಳಲು ಅವಕಾಶವಾದಂತಾಯಿತು.

ಹೀಗೆ ಕ.ರಾ.ವಿ.ಪ.ದೊಡನೆ ಉಂಟಾದ ಸಂಪರ್ಕದಿಂದ ವೈದ್ಯಕೀಯ ವಿಷಯಗಳ ಬಗೆಗೆ ಲೇಖನ ಬರೆಯಲು ಮತ್ತಷ್ಟು ಸ್ಫೂರ್ತಿ ದೊರೆತಂತಾಯಿತು. ವೈದ್ಯವಿಜ್ಞಾನದಲ್ಲಿನ ಕೆಲವು ಮೂಲಭೂತ ಸಂಶೋಧನೆಗಳು ಮತ್ತು ಅವುಗಳಿಗೆ ಕಾರಣರಾದವರ ಬಗೆಗೆ ೨-೩ ಪುಟಗಳ ಹಲವಾರು ಲೇಖನಗಳು ಬಾಲವಿಜ್ಞಾನದಲ್ಲಿ ಮುಂದೆ ಪ್ರಕಟವಾದವು. **"ಲೂಯೀ ಪ್ಯಾಶ್ಚರ್ ಮತ್ತು ರೇಬೀಸ್ ರೋಗದ ಕತೆ"** (ಬಾಲವಿಜ್ಞಾನ ಜನವರಿ ೧೯೮೭) ಲೇಖನಕ್ಕೆ ಮೈಸೂರಿನ **ಶ್ರೀಮತಿ ಯಮುನಾ ಬಾಯಿ ಸ್ಮಾರಕ ಬಹುಮಾನ** ದೊರೆಯಿತು. ಬಾಲವಿಜ್ಞಾನದಲ್ಲಿ ಆ ಸಾಲಿನಲ್ಲಿ ಪ್ರಕಟವಾದ ಲೇಖನಗಳಲ್ಲಿ ಅತ್ಯುತ್ತಮವಾದುದೆಂದು ಪರಿಗಣಿಸಿ ೨೫೦ ರೂಪಾಯಿಗಳ ಚೆಕ್ ಕಳುಹಿಸಿದ್ದರು. ನನ್ನ ಬರವಣಿಗೆಯಲ್ಲಿ ಸತ್ವವಿರಬಹುದೆಂಬುದರ ಬಗೆಗೆ ಅಭಿಮಾನ ಉಂಟಾಯಿತು; ಇನ್ನೂ ಹುರುಪಿನಿಂದ ಬರೆಯುವ ಸ್ಫೂರ್ತಿಯುಂಟಾಯಿತು.

ಶಿವಮೊಗ್ಗೆಯಲ್ಲಿದ್ದಾಗ ರಕ್ತದಾನದ ಬಗೆಗೆ ದೀರ್ಘ ಲೇಖನ ಮಾಲೆಯೊಂದನ್ನು ಬರೆಯುವ ಮನಸ್ಸಾಯಿತು. ಆ ದಿಸೆಯಲ್ಲಿ ಕೊಳ್ಳೇಗಾಲದಲ್ಲಿದ್ದ ಸಮಯದಲ್ಲಿ ಸ್ವಯಂಪ್ರೇರಿತ ರಕ್ತಪೂರಣೆಯ ಅನುಭವ ಸಹಾಯ ಮಾಡಿತು. ರಕ್ತಕ್ಕೆ ಸಂಬಂಧಿಸಿದ ಮೂಲಭೂತ

ವಿಷಯಗಳು, ರಕ್ತದ ಗುಂಪುಗಳು, ರಕ್ತದಾನದ ಅವಶ್ಯಕತೆ, ಮುಂತಾದ ಎಲ್ಲಾ ವಿಷಯಗಳನ್ನೊಳಗೊಂಡ ಲೇಖನವೇನೋ ತಯಾರಾಯಿತು. ಪ್ರಕಟಣೆಯ ಬಗೆಗೆ ಯೋಚಿಸುತ್ತಿದ್ದೆ. ಆ ಸಮಯದಲ್ಲಿ ಶಿವಮೊಗ್ಗೆಯ ಪತ್ರಿಕಾ ಸಂಪಾದಕರೊಬ್ಬರು ಮೆಡಿಕಲ್ ವಾರ್ಡಿನಲ್ಲಿ ಚಿಕಿತ್ಸೆ ಪಡೆಯುತ್ತಿದ್ದರು. ಪ್ರತಿದಿನದ ವಾರ್ಡುಗಳ ಸುತ್ತಾಟದ ಸಮಯದಲ್ಲಿ ಅವರ ಪರಿಚಯವಾಗಿತ್ತು. ನಾನು ಲೇಖನಗಳನ್ನು ಬರೆಯುವ ವಿಷಯ ಯಾರಿಂದಲೋ ಅವರಿಗೆ ತಿಳಿದಿತ್ತೆನಿಸುತ್ತದೆ. **"ಬೃಹಸ್ಪತಿವಾಣಿ"** ಎಂಬ ವಾರ ಪತ್ರಿಕೆಯ ಸಂಪಾದಕರಾಗಿದ್ದ ಅವರು ಪತ್ರಿಕೆಗೆ ಲೇಖನಗಳನ್ನು ಬರೆದು ಕೊಡುವ ಬಗೆಗೂ ವಿಚಾರಿಸಿದರು. ನಾನಾಗಲೇ ರಕ್ತದಾನದ ಬಗೆಗೆ ತಯಾರಿಸಿದ ಲೇಖನದ ವಿಷಯ ತಿಳಿಸಿದೆ. ಅದನ್ನು ಧಾರಾವಾಹಿಯಾಗಿ ಪ್ರಕಟಿಸುವುದಾಗಿ ಭರವಸೆ ಇತ್ತು, ಅದನ್ನು ನನ್ನಿಂದ ಪಡೆದುಕೊಂಡರು. ಸುಮಾರು ೧೧ ವಾರಗಳು ಧಾರಾವಾಹಿಯಾಗಿ ಅದು ಪ್ರಕಟವಾಯಿತು.

ಶಿವಮೊಗ್ಗೆಯಿಂದ ಬಡ್ತಿ ಪಡೆದು ಮಂಗಳೂರಿಗೆ ಹೋದಾಗ ಲೇಖನ ಬರೆಯುವುದಕ್ಕೆ ಸಾಕಷ್ಟು ಬಿಡುವು ಉಂಟಾಯಿತು. ಆ ಸಮಯದಲ್ಲಿ (೧೯೮೧) ಮಂಗಳೂರಿನಿಂದ **'ಸಂತೋಷ'** ಎಂಬ ಮಾಸ ಪತ್ರಿಕೆ ಆರಂಭವಾಯಿತು. ಅದರಲ್ಲೂ ನನ್ನ ಕೆಲವು ಲೇಖನಗಳ ಪ್ರಕಟಣೆಗೆ ಅವಕಾಶ ದೊರೆಯಿತು. ಶಿವಮೊಗ್ಗೆಯಲ್ಲಿದ್ದಾಗಲೇ **"ಎಕ್ಸ್‌ರೇ-ಅಪಾಯವೆಷ್ಟು"**ಎಂಬ ಲೇಖನವನ್ನು ಬೆಂಗಳೂರಿನ ಹೆಸರಾಂತ ವಾರ ಪತ್ರಿಕೆಯೊಂದಕ್ಕೆ ಆರು ತಿಂಗಳ ಹಿಂದೆ ಕಳುಹಿಸಿದ್ದೆ. ಪ್ರಕಟಿಸಲಾಗದಿದ್ದರೆ ತಿಳಿಸುವಂತೆ ಬರೆದರೂ ಪ್ರತ್ಯುತ್ತರ ಬಂದಿರಲಿಲ್ಲ. **'ಸಂತೋಷ'** ಮಾಸ ಪತ್ರಿಕೆಯವರಿಗೆ ಅದನ್ನು ನೀಡಿದೆ. ಅದು ಒಡನೆಯೇ ಪ್ರಕಟವಾಯಿತು. ಅನಾವಶ್ಯಕವಾಗಿ ಎಕ್ಸ್‌ರೇ ಪಟಗಳನ್ನು ತೆಗೆಸುವುದರಿಂದಾಗುವ ಅಡ್ಡ ಪರಿಣಾಮಗಳ ಬಗೆಗೆ ಅರಿವು ಮೂಡಿಸಿದ್ದಕ್ಕೆ ಉತ್ತಮ ಪ್ರತಿಕ್ರಿಯೆಗಳೂ ಬಂದಿದ್ದವು. ಅದೇ ಲೇಖನ ಬೆಂಗಳೂರಿಗೆ ಕಳುಹಿಸಿದ್ದ ಪತ್ರಿಕೆಯಲ್ಲಿ ಮೂರು ವರ್ಷಗಳ ನಂತರ ಪ್ರಕಟವಾಗಿ ಅಚ್ಚರಿಯುಂಟುಮಾಡಿತು. ಅದೇಕೆ ಹಾಗಾಯಿತೆಂದು ವಿಚಾರಿಸಿ ಬರೆದರೆ ಅದಕ್ಕೂ ನಿರುತ್ತರ. ಪತ್ರಿಕೆಗಳಲ್ಲಿ ಪ್ರಕಟಣೆಗೆ ಲೇಖನಗಳನ್ನು ಆಯ್ಕೆ ಮಾಡುವವರು ಯಾವ ತರಹದ ಮಾನದಂಡಗಳನ್ನಿಟ್ಟುಕೊಂಡಿರಬಹುದೆಂಬುದನ್ನು ಹೇಳಲಾಗದೆನಿಸುತ್ತದೆ. ಬಹುಶಃ ಹಿಂದಿನ ಕಡತವೊಂದರಲ್ಲಿ ಹುದುಗಿ ಕುಳಿತ್ತಿದ್ದ ಆ ಲೇಖನ (ಅದೃಷ್ಟವಶಾತ್ ಕಸದ ಬುಟ್ಟಿ ಸೇರಿರಲಿಲ್ಲ!) ಸಂಪಾದಕ ಮಂಡಳಿಯ ಇನ್ಯಾರದ್ದೋ ಗಮನ ಸೆಳೆದಿರಬೇಕು.

ಅಂತಹುದೇ ಒಂದು ಪ್ರಕರಣ ಮುಂದೆ ಕೆಲವು ಕಾಲದ ನಂತರ ಜರುಗಿದ್ದನ್ನು ಉಲ್ಲೇಖಿಸಬಹುದೆನಿಸುತ್ತದೆ. ಬಾಂಗ್ಲಾ ದೇಶದ ವಿಮೋಚನಾ ಸಮರದ ಸಂದರ್ಭದಲ್ಲಿ ಭಾರತಕ್ಕೆ ವಲಸೆ ಬಂದ ಲಕ್ಷಾಂತರ ನಿರಾಶ್ರಿತರು ವಾಂತಿ-ಭೇದಿಯಿಂದ ಸಾಯುತ್ತಿದ್ದರು. ಅದರಿಂದ ಉಂಟಾಗುತ್ತಿದ್ದ ನಿರ್ಜಲ ಸ್ಥಿತಿಗೆ ಲವಣಾಂಶಭರಿತ ಗ್ಲೂಕೋಸ್ ಬಾಟಲುಗಳನ್ನು ರಕ್ತನಾಳಗಳ ಮುಖಾಂತರ ರೋಗಿಗಳಿಗೆ ನೀಡುವುದೇ ಸರಿಯಾದ ಚಿಕಿತ್ಸಾ ವಿಧಾನವೆಂದು ಪರಿಗಣಿತವಾಗಿತ್ತು. ಪ್ರತಿ ದಿನ ಸಾವಿರಗಟ್ಟಲೆ ಹೆಚ್ಚಾಗಿ ಬರುತ್ತಿದ್ದ ಅಂತಹವರಿಗೆ ಆ ರೀತಿಯ ಚಿಕಿತ್ಸಾ ವಿಧಾನವನ್ನು ಅಳವಡಿಸುವುದಕ್ಕೆ ಸಿಬ್ಬಂದಿಗಳ ಕೊರತೆಯೇ ಅಲ್ಲದೆ, ಆರ್ಥಿಕವಾಗಿಯೂ ಅಸಾಧ್ಯ ಎಂಬಂತಾಯಿತು. ಆ ಸಮಯದಲ್ಲಿ ಬಾಯಿ ಮೂಲಕ **"ಮರು ನೀರ್ಗೂಡಿಕೆ ಚಿಕಿತ್ಸಾ ವಿಧಾನ"** (Oral Rehydration Therapy)ದ ಉಗಮ ಲಕ್ಷಾಂತರ ಜನ ವಾಂತಿ-ಭೇದಿ ಪೀಡಿತರನ್ನು ಬದುಕಿಸುವಲ್ಲಿ ವರಪ್ರಸಾದವಾಗಿದ್ದುದು ಈಗ ಇತಿಹಾಸವಾಗಿದೆ. ಮನೆಯಲ್ಲೇ ಲಭ್ಯವಿರುವ,

ಇಲ್ಲವೆ ತುಂಬಾ ಸೋವಿಯಾಗಿ ದೊರೆಯುವ ಸಕ್ಕರೆ (ಬೆಲ್ಲ), ಉಪ್ಪು, ನಿಂಬೆ ಹಣ್ಣಿನ ರಸಗಳನ್ನು ನೀರಿನಲ್ಲಿ ಕರಗಿಸುವ ವಿಧಾನ ಮುಂದೆ ಪ್ರಪಂಚಾದ್ಯಂತ ಬಳಕೆ ಬಂದಿತು. ಇಪ್ಪತ್ತನೇ ಶತಮಾನದ ಮಹತ್ತರದ ಸಂಶೋಧನೆಯೆಂದು '**ಲ್ಯಾನ್ಸೆಟ್**' (Lancet) ಪತ್ರಿಕೆ ಅದನ್ನು ಹಾಡಿ ಹೊಗಳಿತು. ವಿಶ್ವ ಆರೋಗ್ಯ ಸಂಸ್ಥೆ (W.H.O.) ಯುನಿಸೇಫ್(UNICEF)ಗಳಂಥ ಸಂಸ್ಥೆಗಳೇ ಅಲ್ಲದೆ ಪ್ರಪಂಚದಾದ್ಯಂತ ಹಲವು ಸರ್ಕಾರಗಳು ಈ ವಿಧಾನವನ್ನು ಜನಪ್ರಿಯಗೊಳಿಸಲು ವ್ಯಾಪಕ ಪ್ರಚಾರಾಂದೋಳನ ಜರುಗಿಸಿದವು. ಆದರೂ ಅಂತಹ ಸರಳ ಚಿಕಿತ್ಸಾ ವಿಧಾನ ನಿರೀಕ್ಷಿಸಿದ ಮಟ್ಟದಲ್ಲಿ ಜನಸಾಮಾನ್ಯರೇ ಏಕೆ, ವೈದ್ಯ ಸಮೂಹದವರೂ ತೆರೆದ ಮನಸ್ಸಿನಿಂದ ಆಚರಣೆಗೆ ತರುವುದಕ್ಕೆ ಉತ್ಸುಕರಾಗಲಿಲ್ಲ!

ಈ ಹಿನ್ನೆಲೆಯಲ್ಲಿ ಮರು ನೀರ್ಗೂಡಿಕೆ ದ್ರಾವಣವನ್ನು ತಯಾರಿಸಿ ಬಳಸುವ ವಿಧಾನದ ಬಗೆಗೆ ಲೇಖನವನ್ನು ತಯಾರಿಸಿದೆ. ಕರಾವಳಿ ಪ್ರದೇಶದಿಂದ ಪ್ರಕಟವಾಗುತ್ತಿದ್ದ ಜನಪ್ರಿಯ ವಾರ ಪತ್ರಿಕೆಯೊಂದಕ್ಕೆ ಕಳುಹಿಸಿದೆ. ಹೆಚ್ಚು ವಿಳಂಬ ಮಾಡದೆ (ಬಹುಶಃ ಅದನ್ನು ಯಾರಾದರೂ ಓದಿದರೋ ಇಲ್ಲವೋ!) ಲೇಖನವನ್ನು ಹಿಂದಿರುಗಿಸುವ ಉಪಕಾರವನ್ನಂತೂ ಮಾಡಿದರು. ಬೇಸರವಾದರೂ ಸಹಿಸಿಕೊಂಡು ಮುಂದಿನ ವಾರವೇ ಹಿಂದಿರುಗಿಸಿದ ವಾರಪತ್ರಿಕೆಯ ಸೋದರ ಮಾಸ ಪತ್ರಿಕೆಗೆ ಕಳುಹಿಸಿದೆ. ಮುಂದಿನ ತಿಂಗಳ ಸಂಚಿಕೆಯಲ್ಲೇ ಅದು ಪ್ರಕಟವಾಯಿತು. ಅದರ ಬಗೆಗೆ ಮುಂದಿನ ಸಂಚಿಕೆಯಲ್ಲಿ ಪ್ರಕಟವಾದ ಪ್ರತಿಕ್ರಿಯೆಯೊಂದು ಹೀಗಿದೆ :

"ಡಾ॥ ಎಚ್. ಡಿ. ಚಂದ್ರಪ್ಪ ಗೌಡರ **ಮರು ನೀರ್ಗೂಡಿಕೆ ಚಿಕಿತ್ಸಾ ವಿಧಾನ** ಅತ್ಯಂತ ಮಹತ್ವಪೂರ್ಣ ಲೇಖನ. ಈ ಅಪಾಯಕಾರಿ ರೋಗಕ್ಕೆ ಜನಸಾಮಾನ್ಯರೂ ಕೂಡ ಕಂಡುಕೊಳ್ಳ ಬಹುದಾದಂಥ, ತೀರಾ ಸುಲಭ ಮತ್ತು ಪರಿಣಾಮಕಾರೀ ಮಾರ್ಗವನ್ನು ತೋರಿಸಿದ್ದಕ್ಕಾಗಿ ಲೇಖಕ ವೈದ್ಯರಿಗೆ ಧನ್ಯವಾದಗಳು. ದಿನ ನಿತ್ಯ ಉಪಯೋಗಿಸಬಹುದಾದ ಕಡಿಮೆ ಬೆಲೆಯ ಸಾಮಗ್ರಿ ಗಳಿಂದಲೇ ತಯಾರಿಸಬಹುದಾದ ಈ ಅಮೂಲ್ಯ ದ್ರಾವಣದ ಬಗ್ಗೆ ತಿಳಿವಳಿಕೆ ನೀಡಿದ್ದಕ್ಕಾಗಿ ಎಲ್ಲರೂ ಕೇವಲ ಅಭಿನಂದಿಸುವುದು ಮಾತ್ರವಲ್ಲ, ಬಡ ರಾಷ್ಟ್ರದ ನಮ್ಮ ಸಾಮಾನ್ಯ ಜನತೆ ಇದರ ಪೂರ್ಣ ಪ್ರಯೋಜನ ಪಡೆದುಕೊಳ್ಳಬೇಕು.

"ಅದೆಷ್ಟು ಮುಂಜಾಗ್ರತೆ ವಹಿಸಿದರೂ ಪ್ರತಿ ಬೇಸಗೆಯ ಜಾತ್ರೆಗಳಲ್ಲಿ ದೇವರ ಪವಾಡಕ್ಕಿಂತಲೂ ಅಧಿಕ ವೇಗದಲ್ಲಿ ಹರಡಿ ಜೀವಗಳನ್ನು ಕಬಳಿಸುವ ಈ ಪಿಡುಗನ್ನು ಹತ್ತಿಕ್ಕಲು ಈ ಸರಳ ವಿಧಾನ ಸಂಜೀವಿನಿ ಇದ್ದಂತೆ ……

"ಮನೆಯಲ್ಲೇ ಹೊಂದಿಸಿಕೊಳ್ಳಬಹುದಾದ ಸುಲಭಸಾಧ್ಯ ಚಿಕಿತ್ಸೆ ಎಂದೊಡನೆ, ದಿವ್ಯ ನಿರ್ಲಕ್ಷ್ಯ ತಾಳಿ ಅದರ ಮಹತ್ವವನ್ನೇ ಕಡೆಗಾಣಿಸುವುದೊಂದು ನಮ್ಮ ಸಾಮಾನ್ಯ ದೌರ್ಬಲ್ಯ.

"ಮನುಷ್ಯನಿಗೆ ಪೀಡೆಯಾಗಿ ಕಾಡುವ ಪದಾರ್ಥಗಳನ್ನು ಅತ್ಯಾಕರ್ಷಕ ಜಾಹಿರಾತು ಗಳಿಂದ ಮೂಲೆ ಮೂಲೆಯಿಂದಲೂ ಮನ ಸೆಳೆದು ದಾರಿ ತಪ್ಪಿಸುವ ಬದಲು ಇಂತಹ ಮಹತ್ವ ಪೂರ್ಣ ವಿಷಯಗಳ ಪ್ರಚಾರ ಕೈಗೊಂಡು ಎಲ್ಲರಿಗೂ ಯಶಸ್ವಿಯಾಗಿ ತಲುಪಿಸಲು ಎಲ್ಲರೂ ಒಗ್ಗಟ್ಟಾಗಿ ಶ್ರಮಿಸಬೇಕು.

ಇಂಥ ಉಪಯುಕ್ತ ವೈದ್ಯಕೀಯ ಲೇಖನಗಳು ಮುಂಚಿನಂತೆಯೇ ಮತ್ತೆ ಮತ್ತೆ ಪ್ರಕಟ ವಾಗುತ್ತಿರಲಿ".

- ಬೈಲಹೊಂಗಲ, **ಶ್ರೀಮತಿ ಕೋ. ಅನಸೂಯ ಸಿದ್ಧರಾಮ.**

ಲೇಖನದ ಶ್ರೇಷ್ಠತೆಯ ಹೆಗ್ಗಳಿಕೆಯ ಪ್ರಚಾರಕ್ಕಾಗಿ ಇಷ್ಟುದ್ದದ ವಿವರಣೆ ನೀಡಿರುವೆನೆಂದು ಭಾವಿಸದಿರಿ. ಪತ್ರಿಕಾ ರಂಗದಲ್ಲಿ ಲೇಖನಗಳನ್ನು ಆಯ್ಕೆ ಮಾಡುವುದರಲ್ಲಿ ಖ್ಯಾತ ನಾಮದ ಅಥವಾ ಯಾವುದೋ ಗುಂಪಿನ ಲೇಖಕರಿಗೆ ನೀಡುವ ಆದ್ಯತೆ ಇತರರಿಗೆ ನೀಡರೆಂಬುದರ ನಿದರ್ಶನವಾಗಿ ಉದಾಹರಿಸಬೇಕಾಯಿತು. ಲೇಖಕರು ಪ್ರತಿಪಾದಿಸಿದ ವಿಷಯದ ಗಹನತೆ, ಅದರಿಂದ ಜನರಿಗುಂಟಾಗುವ ಪ್ರಯೋಜನಗಳು ಮುಂತಾದವು ಕೆಲಸಾರಿ ನಗಣ್ಯವೆನಿಸಿಬಿಡುತ್ತವೆ. ನಾನು ಬರವಣಿಗೆ ಆರಂಭಿಸಿದ ದಿನಗಳಲ್ಲಿ ಕೆಲವರು ಉತ್ತೇಜನ ನೀಡುತ್ತಿದ್ದರೂ ಬಹಳಷ್ಟು ಪತ್ರಿಕೆಗಳಿಂದ 'ಅನಂಗೀಕಾರ ಚೀಟಿ' ಸಹಿತ ವಾಪಸಾಗುತ್ತಿದ್ದುದು ಅಪರೂಪವೇನಾಗಿರಲಿಲ್ಲ. ಹಾಗೆ ನೋಡಿದರೆ ಆಗ ನಾನು ಬರೆಯುತ್ತಿದ್ದ ಲೇಖನಗಳು ಜನ ಸಾಮಾನ್ಯರನ್ನು ಅತಿಯಾಗಿ ಪೀಡಿಸುತ್ತಿದ್ದ ತೀರ ಸರಳ ಕಾಯಿಲೆಗಳೆನಿಸಿದ, ರೇಬೀಸ್, ಟೆಟನಸ್, ಕಜ್ಜಿಕಾಟ, ಅರಸಿನ ಕಾಮಾಲೆ, ಧೂಮಪಾನ-ಮದ್ಯಪಾನ ಸಮಸ್ಯೆ, ಮಕ್ಕಳ ಯಕೃತ್‌ರೋಗ, ದಡಾರ, ಇನ್‌ಪ್ಲುಯೆಂಜಾ, ಪ್ಲೇಗ್, ಎಕ್ಸ್‌ರೇ ಅಪಾಯ, ಮರು ನೀರ್ಗೂಡಿಕೆ ಮುಂತಾದವುಗಳನ್ನು ಕುರಿತವಾಗಿರುತ್ತಿದ್ದವು. ಹೆಸರಾಂತ ಹಾಗೂ ಜನಪ್ರಿಯಗೊಳಿಸಿಕೊಂಡವೆನಿಸಿದ ಪತ್ರಿಕೆಗಳಲ್ಲಿ ಅವುಗಳ ಪ್ರಕಟಣೆಗೆ ಅವಕಾಶ ದೊರಕದಿದ್ದಾಗ ಮನಕ್ಲೇಶ ಉಂಟಾಗುತ್ತಿದ್ದರೂ, ಕೆಲವರ ಉತ್ತಮ ಅಭಿಪ್ರಾಯ ಹಾಗೂ ಆಗಾಗ್ಗೆ ದೊರೆಯುತ್ತಿದ್ದ ಬಹುಮಾನಗಳು ನನ್ನ ಬರವಣಿಗೆ ಪಕ್ವತೆಯ ಹಾದಿಯಲ್ಲಿದೆಯೆಂಬ ಆತ್ಮ ವಿಶ್ವಾಸ ಉಂಟುಮಾಡಲು ಸಹಾಯಕವಾಗಿರುತ್ತಿದ್ದವು.

ಕನ್ನಡದ ಮುಖ್ಯವಾಹಿನಿಗಳೆನಿಸಿದ ಬಹುಪಾಲು ನಿಯತಕಾಲಿಕಗಳ ವರ್ತನೆಯಿಂದ ಬೇಸತ್ತು, ಸ್ವಾಸ್ಥ್ಯ ಸಮಸ್ಯೆಗಳಿಗೆ ಮೀಸಲಾದ ಪತ್ರಿಕೆಗಳತ್ತ ಹೊರಳುವುದು ಅನಿವಾರ್ಯವಾಯಿತು. ಮಹರಾಷ್ಟ್ರದ ಪುಣೆಯಿಂದ ಕ್ರಿಶ್ಚಿಯನ್ ಮಿಶನರಿ ಸಂಸ್ಥೆಯವರು - Seventh Day Adventist Society - ಬಹಳ ಸಮಯದಿಂದ ಇಂಗ್ಲೀಷ್ ಸೇರಿದಂತೆ ಹಲವು ಭಾರತೀಯ ಭಾಷೆಗಳಲ್ಲಿ ಸ್ವಾಸ್ಥ್ಯ ವಿಷಯಗಳ ಮಾಸ ಪತ್ರಿಕೆಗಳನ್ನು ಪ್ರಕಟಿಸುತ್ತಿತ್ತು. ಮುಂದೆ ಕನ್ನಡದಲ್ಲಿ '**ಆರೋಗ್ಯವಾಣಿ**' ಎಂಬ ಮಾಸಿಕ ಪತ್ರಿಕೆಯನ್ನು ಆರಂಭಿಸಿತು. ಅದರಲ್ಲಿ ನನ್ನ ಲೇಖನಗಳಿಗೆ ಆದ್ಯತೆ ದೊರೆಯಲಾರಂಭಿಸಿತು. ಪ್ರತಿ ಸಂಚಿಕೆಯಲ್ಲೂ ನನ್ನ ಒಂದೆರಡು ಲೇಖನಗಳು ಪ್ರಕಟವಾಗುತ್ತಿದ್ದುದುಂಟು. ಶಸ್ತ್ರಚಿಕಿತ್ಸೆಯಿಂದ ಗುಣಪಡಿಸಬೇಕಾದ ಕಾಯಿಲೆಗಳ ಕುರಿತ ಲೇಖನಗಳ ಸರಮಾಲೆಯೇ ಅದರಲ್ಲಿ ಪ್ರಕಟವಾಯಿತು. ಈ ಲೇಖನಗಳನ್ನು ಪರಿಷ್ಕರಿಸಿ ರಚಿಸಿದ, "**ಸಾಮಾನ್ಯ ಶಸ್ತ್ರ ವೈದ್ಯದ ಕಾಯಿಲೆಗಳು**" ಕೃತಿಯನ್ನು ಮುಂದೆ ಹಂಪಿಯ ಕನ್ನಡ ವಿಶ್ವವಿದ್ಯಾಲಯದವರು ಪ್ರಕಟಿಸಿದರು (೧೯೯೩). ಕೆಲವು ವರ್ಷಗಳ ನಂತರ ಮೈಸೂರಿನ ಡಾ|| ಎಸ್. ಪಿ. ಯೋಗಣ್ಣನವರು ಪ್ರಕಟಿಸುತ್ತಿದ್ದ '**ಆರೋಗ್ಯಯೋಗ**' ಮಾಸಿಕದಲ್ಲೂ ಹಲವು ಲೇಖನಗಳು ಪ್ರಕಟವಾದವು. ಹುಬ್ಬಳ್ಳಿಯ '**ಕಸ್ತೂರಿ**' ಮಣಿಪಾಲದ '**ತುಷಾರ**' ಮಂಗಳೂರಿನ '**ಸಂತೋಷ**' ಮಾಸ ಪತ್ರಿಕೆಗಳು ನನ್ನ ಲೇಖನಗಳನ್ನು ಪ್ರಕಟಿಸಿ ಸಹಕರಿಸಿವೆ.

ಅನಂತರದ ವರ್ಷಗಳಲ್ಲಿ ನೂರಾರು -(೧೫೦ ಇರಬಹುದು) ಬಿಡಿಲೇಖನಗಳನ್ನು ರಚಿಸಿರುವೆ. ಇಂದಿನ ಕೆಲವು ಮುಂಚೂಣಿಯ ಜನಪ್ರಿಯ ವೈದ್ಯ ಸಾಹಿತಿಗಳ ಸಾಧನೆಯ ಮುಂದೆ ನನ್ನ ಬರವಣಿಗೆ ನಗಣ್ಯವೇ ಸರಿ. ಆದರೆ ಬಹುಪಾಲು ಲೇಖನಗಳು ಆಯಾ ಸಮಯದ ಪ್ರಮುಖ ಸ್ವಾಸ್ಥ್ಯ ಸಮಸ್ಯೆಗಳ ಬಗೆಗೋ, ಇಲ್ಲವೆ ಹಿಂದೆ ಪ್ರಚಾರಕ್ಕೆ ಬಾರದಿರುವ ವಿಷಯಗಳ ಕುರಿತಾಗಿದ್ದವೆನ್ನಬಹುದು. ನಡುವೆ ಕೆಲವು ಪುಸ್ತಕಗಳ ರಚನೆಯಲ್ಲಿಯೂ ತೊಡಗಿರುತ್ತಿದ್ದೆ. ಅವುಗಳ ಪ್ರಸ್ತಾಪದ ಮೊದಲು ಕೆಲವು ಪ್ರಮುಖ ಲೇಖನಗಳ ಬಗೆಗೆ ಸಂಕ್ಷಿಪ್ತ ವಿವರಣೆ ನೀಡ

ಬಯಸುತ್ತೇನೆ. ಈ ನಿರೂಪಣೆಯನ್ನು ಅವು ಪ್ರಕಟವಾದ ಕಾಲಾನುಕ್ರಮದಲ್ಲಿ ಮಾಡಲು ಸಾಧ್ಯವಾಗಿಲ್ಲ.

ಈ ದಿಸೆಯಲ್ಲಿ ಜನಸಾಮಾನ್ಯರ ಸ್ವಾಸ್ಥ್ಯ ಸಮಸ್ಯೆಗಳ ಬಗೆಗೆ ಬರೆದ ಕೆಲವು ಲೇಖನಗಳು - 'ಸಾರ್ವಜನಿಕ ಆರೋಗ್ಯ ವ್ಯವಸ್ಥೆಗಳು ಸಾಗಿರುವುದೆತ್ತ?', 'ಎಲ್ಲರಿಗೂ ಆರೋಗ್ಯ ಕ್ರಿ.ಶ. ೨೦೦೦ಕ್ಕೆ', 'ಬದಲಿ ಆರೋಗ್ಯ ಸೇವಾ ವ್ಯವಸ್ಥೆಗಳ ಅವಶ್ಯಕತೆ', 'ಶಿಶು ಸಂರಕ್ಷಣೆಗೆ ಯುನಿಸೇಫ್ ಯೋಜನೆ', 'ಪಿಯಾಕ್ಲಟಾ ದಾರಿ ದೀಪ' (ಡೇವಿಡ್ ವರ್ನರ ಯೋಜನೆಗಳ ಬಗೆಗೆ), ಮದ್ಯಪಾನ ಧೂಮಪಾನಗಳ ದುಷ್ಪರಿಣಾಮಗಳು, 'ಕ್ಯಾಸನೂರು ಕಾಡಿನ ಕಾಯಿಲೆ', 'ಹಂದಿಗೋಡು ಕೀಲು ಬೇನೆ', ಗ್ರಾಮೀಣರ ಆರೋಗ್ಯ ಸುಧಾರಣೆಗೆ ವೈದ್ಯಕೀಯ ಶಿಕ್ಷಣದ ಸರಳೀಕರಣ, 'ಹಳ್ಳಿಗಳಿಗೇ ಪ್ರತ್ಯೇಕ ವೈದ್ಯ ಸೇವಾ ವ್ಯವಸ್ಥೆ', ಆಧುನಿಕ ಹಾಗೂ ವಿವಿಧ ಪರಂಪರಾನುಗತ ವೈದ್ಯ ಪದ್ಧತಿಗಳ ಸಮ್ಮಿಳನ ಮುಂತಾದ ವಿಷಯಗಳ ಬಗೆಗೆ ಕುರಿತು ಬರೆದ ಲೇಖನಗಳು ಹಲವು ನಿಯತ ಕಾಲಿಕಗಳಲ್ಲಿ ಪ್ರಕಟವಾಗಿವೆ. ಈ ಸರಣಿಯಲ್ಲಿ ಹೆಸರಿಸಬಹುದಾದ ಒಂದು ಲೇಖನ ಅನಾದಿ ಕಾಲದಿಂದಲೂ ಭಾರತದ ಮಕ್ಕಳನ್ನು ಕಾಡುತ್ತಿದ್ದ - **'ಭಾರತದ ಮಕ್ಕಳ ಯಕೃತ್ ರೋಗ'**(Indian Childhood Cirrhosis). 'ಮುಖಮಂಡಿಕಾ ಗ್ರಹ' ಎಂದು ಆಯುರ್ವೇದ ತಜ್ಞರು ಕರೆಯುತ್ತಿದ್ದ ಹಾಗೂ ಇತ್ತೀಚೆಗೆ 'ಲಿವರ್ ಆಗಿದೆ' ಎಂದು ಕುಖ್ಯಾತಿ ಪಡೆದ ಆ ವ್ಯಾಧಿಯ ಕಾರಣ ಪತ್ತೆಯಾಗಿರಲಿಲ್ಲ. ಕೆಲವು ದಶಕಗಳ ಹಿಂದೆ ಪತ್ರಿಕೆಗಳಲ್ಲಿ ಹೊಟ್ಟೆಯಲ್ಲಿ ನೀರು ತುಂಬಿ ಊದಿಕೊಂಡ ಬಡಕಲು ಮಗುವಿನ ಚಿತ್ರ, ಹಾಗೂ ಅದನ್ನು ವಾಸಿ ಮಾಡುತ್ತದೆಂಬ ನಾನಾ ಬಗೆಯ 'ಲಿವರ್‌ಕ್ಯೂರ್'ಗಳ ಜಾಹೀರಾತುಗಳನ್ನು ದಿನ ನಿತ್ಯ ನೋಡಬಹುದಾಗಿತ್ತು.

ಸಾಮಾನ್ಯವಾಗಿ ತೀರಾ ಬಡವರೂ ಅಲ್ಲದ, ಸಿರಿವಂತರೂ ಆಗಿರದವರ ಮಕ್ಕಳಲ್ಲಿ ಈ ವ್ಯಾಧಿ ಪ್ರಕಟವಾಗುತ್ತಿರಲಿಲ್ಲ! ಇದು ಕೆಲವು ತಂದೆ ತಾಯಿಯರ ಮಕ್ಕಳನ್ನು ನಾಲ್ಕೈದು ವರ್ಷಗಳಲ್ಲೇ ಒಂದಾದ ಮೇಲೊಂದರಂತೆ ಬಲಿತೆಗೆದುಕೊಳ್ಳುತ್ತಿತ್ತು. ಅಂತಿಮವಾಗಿ ಭಾರತದ ವೈದ್ಯರೇ ಅದರ ಗುಟ್ಟನ್ನು ಭೇದಿಸಿದ್ದು ಹೆಮ್ಮೆಯ ವಿಷಯ. ಒಂದು ಕುಟುಂಬದ ಅವಳಿ ಶಿಶುಗಳಿಬ್ಬರಲ್ಲಿ ಒಂದಕ್ಕೆ ಬರೇ ಮೊಲೆಯುಣ್ಣಿಸಿ ಸಾಕಿದರೆ, ಮತ್ತೊಂದಕ್ಕೆ ಸತತವಾಗಿ 'ಮೇಲು ಹಾಲು' ಹಾಕಿ ಸಲಹುತ್ತಿದ್ದರು. 'ಮೇಲು ಹಾಲು' ಹಾಕಿ ಸಲಹಿದ ಮಗುವಲ್ಲಿ ಯಕೃತ್ ರೋಗ ಕಾಣಿಸಿ ಕೊಂಡಿದ್ದರೆ, ಬರೇ ಮೊಲೆಯುಣಿಸಿ ಸಾಕಿದ ಮಗುವಿನಲ್ಲಿ ಅದು ಉದ್ಭವಿಸಲಿಲ್ಲ! ರೋಗ ಕಾಣಿಸಿಕೊಂಡಿದ್ದ ಮಗುವಿಗೆ ಕುಡಿಸುತ್ತಿದ್ದ ಹಸುವಿನ ಹಾಲನ್ನು ತಾಮ್ರದ (ಅಥವಾ ಕಲಾಯಿ ಇರದ ಹಿತ್ತಾಳೆ ಪಾತ್ರೆಯಲ್ಲಿ) ಕಾಯಿಸುತ್ತಿದ್ದುದು ಕಂಡು ಬಂದಿತು. ಮುಂದುವರಿದ ಸಂಶೋಧನೆಯಿಂದ ಯಕೃತ್ ರೋಗದಿಂದ ನರಳುತ್ತಿದ್ದ ಇತರ ಎಲ್ಲಾ ಮಕ್ಕಳಿಗೂ ಹಾಲನ್ನು ತಾಮ್ರ, ಅಥವಾ ಹಿತ್ತಾಳೆ ಪಾತ್ರೆಗಳಲ್ಲೇ ಕಾಯಿಸಿ ಕುಡಿಸುವ ಪರಿಪಾಟ ವ್ಯಾಪಕವಾಗಿ ಅನುಸರಿಸಲ್ಪಡುತ್ತಿದ್ದುದು ಬೆಳಕಿಗೆ ಬಂದಿತು. ತೀರಾ ಬಡವರು ಮಣ್ಣಿನ ಮಡಿಕೆ ಕುಡಿಕೆಗಳಲ್ಲಿ ಹಾಲು ಕುಡಿಸುತ್ತಿದ್ದರೆ ಸಿರಿವಂತರು ಸರಿಯಾಗಿ ಕಲಾಯಿ ಮಾಡಿಸಿದ ಇಲ್ಲವೇ ಇತ್ತೀಚಿನ ವರ್ಷಗಳಲ್ಲಿ ಬಂದ ಸ್ಟೇಯಿನ್‌ಲೆಸ್ ಸ್ಟೀಲ್ ಪಾತ್ರೆಗಳಲ್ಲಿ ಕಾಯಿಸುವುದು ಸರ್ವೇಸಾಮಾನ್ಯ ಪದ್ಧತಿಯಾಗಿತ್ತು. ಸಾಮಾನ್ಯವಾಗಿ ಮಧ್ಯಮ ವರ್ಗದವರಲ್ಲಿ ತಾಮ್ರ/ಹಿತ್ತಾಳೆ ಪಾತ್ರೆಗಳಲ್ಲಿ ಹಾಲು ಕಾಯಿಸಿ ಕುಡಿಸುತ್ತಿದ್ದುದರಿಂದ ಈ ವ್ಯಾಧಿ ಅಂಕುರಿಸುತ್ತದೆಂಬ ಅನುಮಾನ ಬಲವಾಯಿತು.

ಸರಿ ಸುಮಾರು ಅದೇ ಸಮಯದಲ್ಲಿ ಇಂಗ್ಲೆಂಡಿನ ವಿಜ್ಞಾನಿಗಳು ದೇಹದ ರಕ್ತದಂಥ ದ್ರವ, ಲಿವರ್ ಮುಂತಾದ ಅವಯವಗಳಲ್ಲಿ ತಾಮ್ರವೂ ಸೇರಿದಂತೆ ಕೆಲವು 'ಲೇಶ ಧಾತು' (Trace

elements)ಗಳನ್ನು ಪತ್ತೆ ಮಾಡುವ ವಿಧಾನವನ್ನು ಕಂಡು ಹಿಡಿದರು. ಯಕೃತ್ ರೋಗದ ಮಕ್ಕಳ ಲಿವರ್, ರಕ್ತ, ಉಗುರು, ಕೂದಲುಗಳನ್ನು ಆ ವಿಧಾನದಿಂದ ಪರೀಕ್ಷಿಸಿದಾಗ, ತಾಮ್ರದ ಮಟ್ಟ ಸಹಜವಾಗಿ ಇರಬೇಕಾದುದಕ್ಕಿಂತ ನೂರಾರು ಪಟ್ಟು ಹೆಚ್ಚಾಗಿರುವುದು ವ್ಯಕ್ತವಾಯಿತು. ಭಾರತದ ಮಕ್ಕಳಲ್ಲಿ ಇದೇ ಕಾರಣವೆಂಬುದು ಉದಯಪುರ ಮತ್ತು ಪೂನಾದ ಶಿಶುರೋಗ ತಜ್ಞರಾದ ಡಾ॥ ಭಂಡಾರಿ ಹಾಗೂ ಡಾ॥ ಶಾರದ ಅವರ ಸಂಶೋಧನೆಗಳಿಂದ ಸಾಬೀತಾಯಿತು. ಹೆಸರಾಂತ ಔಷಧ ತಯಾರಿಕಾ ಕಂಪನಿಯವರ MEDICAL TIMES ಪತ್ರಿಕೆಯ ೨-೩ ಸಂಚಿಕೆಗಳ ಧಾರವಾಹಿಯಾಗಿ ಈ ಸಂಶೋಧನೆ ಪ್ರಕಟವಾಗಿತ್ತು. ಅದನ್ನು ಸಂಕ್ಷಿಪ್ತವಾಗಿ '**ಸುಧಾ**' ವಾರಪತ್ರಿಕೆ (ಮೇ ೧೯೮೬)ಯಲ್ಲಿ ಪ್ರಕಟಿಸಿದೆ. ಮುಂದೆ ಇತರ ಪತ್ರಿಕೆಗಳಲ್ಲೂ ಅದು ರೂಪಾಂತರಗೊಂಡು ಪ್ರಕಟವಾಯಿತು. ಆಕಾಶವಾಣಿಯಲ್ಲೂ ಭಾಷಣ ಮಾಡಿ, ಸ್ಟೆಯಿನ್‌ಲೆಸ್ ಸ್ಟೀಲ್ ಪಾತ್ರೆಗಳಲ್ಲಿ ಹಾಲು ಕಾಯಿಸುವ ಸಲಹೆ ಮಾಡಿದೆ. ಜನರ ಆರ್ಥಿಕ ಪರಿಸ್ಥಿತಿ ಪ್ರಸ್ತುತ ಉತ್ತಮಗೊಂಡಿರುವುದರಿಂದ ಈಗ ಸ್ಟೇಯಿನ್‌ಲೆಸ್ ಸ್ಟೀಲ್ ಅಥವಾ ಅಲ್ಯೂಮಿನಿಯಂ ಪಾತ್ರೆಗಳಲ್ಲಿ ಹಾಲು ಕಾಯಿಸಿ ಕುಡಿಸುವ ಅಭ್ಯಾಸವಾಗಿದ್ದರಿಂದ ಭಾರತದ ಮಕ್ಕಳ ಯಕೃತ್ ರೋಗ ಹೇಳ ಹೆಸರಿಲ್ಲದಂತಾಗಿದೆ!

## ಗ್ರೈಪ್‌ವಾಟರ್ ಪ್ರಹಸನ!

ಎಳೆಯ ಶಿಶುಗಳ ಉದರ ಬೇನೆಗಳಿಗೆ '**ಗ್ರೈಪ್‌ವಾಟರ್**' ಎಂಬ ದ್ರವ ಕುಡಿಸುವ ಅಭ್ಯಾಸ ಬಹಳ ವರ್ಷಗಳಿಂದಲೂ ನಡೆದು ಬಂದಿದೆ. ಅವುಗಳನ್ನು ಬಾಧಿಸುತ್ತದೆನ್ನಲ್ಲಾದ ಹೊಟ್ಟೆ ಉಬ್ಬರ, ಸೆಳವು ಮುಂತಾದವನ್ನು ಅದು ಉಪಶಮನಗೊಳಿಸುತ್ತದೆಂಬ 'ಅಂತಃಪ್ರಜ್ಞೆ' ನಮ್ಮ ಜನರಲ್ಲಿ ಬೇರೂರಿದೆ. ಅದನ್ನು ತಯಾರು ಮಾಡುವ ಔಷಧ ಕಂಪನಿಗಳು ಅಬ್ಬರದ ಪ್ರಚಾರದಲ್ಲಿ ತೊಡಗಿಕೊಳ್ಳುತ್ತವೆ; ಇತ್ತೀಚೆಗೆ ಅದು ಹೇಗೆ ತಲೆತಲೆಮಾರುಗಳಿಂದಲೂ ಬಳಕೆಯಾಗುತ್ತಿದೆ ಯೆಂಬುದರ ಬಗೆಗೆ ಟೆಲಿವಿಷನ್ ಮಾಧ್ಯಮದಲ್ಲಿ ಸ್ವಾರಸ್ಯಕರ ಪ್ರಹಸನವೂ ಬಿತ್ತರವಾಗುತ್ತಿದೆ.

ಆ ದಿಸೆಯಲ್ಲಿ ಭಾರತೀಯ ಶಿಶುವೈದ್ಯರ ವಾರ್ಷಿಕ ಸಮ್ಮೇಳನ (೧೯೯೦)ದಲ್ಲಿ ಜರುಗಿದ ಚರ್ಚೆಯ ವಿಷಯವೊಂದು ನನ್ನ ಗಮನ ಸೆಳೆಯಿತು. ಆ ಸಂಸ್ಥೆಯವರು ಪ್ರಖ್ಯಾತ ಛಾಪು ಗಳಿಸಿದ್ದವೆನ್ನಲ್ಲಾದ ಹಲವು ಗ್ರೈಪ್‌ವಾಟರ್‌ಗಳಲ್ಲಿದ್ದ ಒಳ ಅಂಶಗಳ ಬಗೆಗೆ ತನಿಖೆ ನಡೆಸಿದ್ದ ಫಲಿತಾಂಶವನ್ನು ಸಮ್ಮೇಳನದಲ್ಲಿ ವರದಿ ಮಾಡಿದ್ದರು. ಅದರ ಪ್ರಕಾರ ಕೆಲವು ಪ್ರಖ್ಯಾತ ಗ್ರೈಪ್‌ವಾಟರುಗಳಲ್ಲಿ ಶೇ. ೫ರಷ್ಟು ಮದ್ಯಸಾರದ ಅಂಶವಿರುವುದು ಪತ್ತೆಯಾಗಿತ್ತು. ಅವರ ಅಂದಾಜಿನ ಪ್ರಕಾರ ಮಗುವೊಂದಕ್ಕೆ ಒಂದು ದಿನದಲ್ಲಿ ನೀಡಬಹುದಾದ ಗ್ರೈಪ್‌ವಾಟರ್‌ನಲ್ಲಿ ಸುಮಾರು ೫೦೦ ಮಿ.ಲೀ. ಮದ್ಯಸಾರದ ಅಂಶವಿರಬಹುದೆಂದು ಹೇಳಬಹುದಾಗಿತ್ತು. ಯಾವುದೇ ಕಾರಣದಿಂದ ಚಂಡಿ ಹಿಡಿದು ರೋದಿಸುವ ಹಸುಳೆಗೆ ಮದ್ಯಸಾರವಿರುವ ದ್ರಾವಣವನ್ನು ನೀಡಿದಾಗ, ಮಿದುಳಿನಲ್ಲಿ ಅದರಿಂದುಂಟಾಗುವ ನಿದ್ರಾಜನಕ ಪ್ರಭಾವದಿಂದ ಅದು ಕೆಲವೇ ಕ್ಷಣಗಳಲ್ಲಿ ಸುಮ್ಮನಾಗಿ ನಿದ್ರಿಸುತ್ತದೆಯೇ ಹೊರತು ಕುಡಿದ ಗ್ರೈಪ್‌ವಾಟರ್ ನಲ್ಲಿರುವ ಇತರ ಒಳ ಅಂಶಗಳಿಂದ ಅಲ್ಲವೆಂಬುದು ಸಾಬೀತಾದಂತಾಯಿತು! ಈ ವಿಷಯವನ್ನು ಟಿ.ವಿ. ಪ್ರಹಸನದ ಮಾದರಿಯಲ್ಲೇ ನಾಟಕೀಯ ರೀತಿಯ ಕಿರು ಲೇಖನವೊಂದನ್ನು ಬರೆದು ಸೊರಬದಿಂದ ಪ್ರಕಟವಾಗುವ '**ಆರೋಗ್ಯ ಸಂಪತ್ತು**' (ಮೇ ೧೯೯೨ ರಲ್ಲಿ) ಪತ್ರಿಕೆಯಲ್ಲಿ ಪ್ರಕಟಿಸಿದೆ. ಅದು ತುಂಬಾ ಜನಪ್ರಿಯತೆ ಗಳಿಸಿ ಇತರ ಕೆಲವು ಪತ್ರಿಕೆಗಳಲ್ಲೂ ಮರು ಪ್ರಕಟ

ವಾಯಿತು. ಎಲ್ಲಕ್ಕಿಂತ ಮಿಗಿಲಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯದವರ '**ಬಿತ್ತರ**' ಯೋಜನೆಯಡಿ ಯಲ್ಲಿ ಕರ್ನಾಟಕದಾದ್ಯಂತ ೭೦ ಪತ್ರಿಕೆಗಳಲ್ಲಿ ಮರು ಮುದ್ರಣವಾದ ಹೆಗ್ಗಳಿಕೆ ಅದರದಾಯಿತು.

## ವ್ಯಾಸೆಕ್ಟಮಿಯ ವ್ಯಾಖ್ಯಾನ

ಕುಟುಂಬ ಕಲ್ಯಾಣ ಯೋಜನೆಯ ಆರಂಭದ ವರ್ಷಗಳಲ್ಲಿ ಪುರುಷರಿಗೆ ಜರುಗಿಸುತ್ತಿದ್ದ ವ್ಯಾಸೆಕ್ಟಮಿ (ಯಾವುದೇ ಪ್ರೋತ್ಸಾಹಧನ ನೀಡದಿದ್ದರೂ) ತುಂಬಾ ಜನಪ್ರಿಯವಾಗಿತ್ತು. (ನೋಡಿ ಶಿಕಾರಿಪುರದ ಅನುಭವ) ಬರುಬರುತ್ತಾ ಅದರತ್ತ ಜನರ ಒಲವು ಕಡಿಮೆಯಾಗುತ್ತಾ ಬಂದಿದೆ. ಪ್ರಸ್ತುತ ಅದು ಜರುಗುತ್ತಿಲ್ಲವೆನ್ನಬಹುದು.

ಆ ದಿಸೆಯಲ್ಲಿ ನನ್ನ ಮನಸ್ಸಿನಲ್ಲಿ ಉದ್ಭವವಾದ ಯೋಚನಾಲಹರಿ ಲೇಖನವೊಂದನ್ನು ಬರೆಯಲು ಪ್ರಚೋದಿಸಿತು. ಪುರುಷನ ಬಾಹ್ಯ ಜನನಾಂಗಳ ಸನಿಹದಲ್ಲಿ ಜರುಗುವ ಈ ಶಸ್ತ್ರಕ್ರಿಯೆ ಕ್ರಮೇಣ ಅವನಲ್ಲಿಯ ಪುರುಷತ್ವವನ್ನೇ ಕುಂದಿಸುವುದೇ ಎಂಬ ಅನುಮಾನ ಕೆಲವರಲ್ಲಿ ಉಂಟಾಗುತ್ತಿರಬಹುದೆನಿಸಿತು. ಅಂತಹ ನಂಬಿಕೆಗೆ ಹಳ್ಳಿಗಾಡುಗಳಲ್ಲಿ ಪ್ರಾಯದ ಹೋರಿಗಳ ಪೌರುಷತ್ವದ ಬೀಜಗಳನ್ನು (Testicles) ಮರ್ಧಿಸುವ ಕಾರ್ಯಕ್ರಮ ಜನರೆದುರಿನಲ್ಲೇ ಸಾಮೂಹಿಕವಾಗಿ ಜರುಗುತ್ತದೆ. ಅನಂತರ ಅವು ಲೈಂಗಿಕಾಸಕ್ತಿಯನ್ನು ಕಳೆದುಕೊಂಡು ಕೇವಲ ದುಡಿಮೆಯ ಪಶುಗಳಾಗಿ ಜೀವನ ಕಳೆಯುವ ನಿದರ್ಶನ ಜನಸಾಮಾನ್ಯರಿಗೆ ತಿಳಿಯದ್ದೇನಲ್ಲ. ಜೊತೆಗೆ ವ್ಯಾಸೆಕ್ಟಮಿಗೊಳಗಾಗುವ ಬಹುಪಾಲು ಜನರು ಮಧ್ಯವಯಸ್ಸಿನ ಆಜುಬಾಜಿನಲ್ಲಿದ್ದು, ವಯೋಮಾನದ ಇತರ ಎಲ್ಲಾ ಕಾರ್ಯಗಳಂತೆ ಲೈಂಗಿಕಾಸಕ್ತಿಯೂ ಸಹಜವಾಗಿಯೇ ಇಳಿಮುಖ ವಾಗುವ ಸಮಯ ಕೂಡ. ಬಹಳಷ್ಟು ಜನ ಇಂತಹ ಪರಿಸ್ಥಿತಿಯನ್ನು ಇತರರಲ್ಲಿ ಹೇಳಿಕೊಳ್ಳು ವುದಿಲ್ಲ. ಅಂತಹವರಿಗೆ ವ್ಯಾಸೆಕ್ಟಮಿ ಜರುಗಿದರೆ ಕುಗ್ಗುತ್ತಿರುವ ಲೈಂಗಿಕಾಸಕ್ತಿಯೆ ಏಕೆ, ಬೇರೆಲ್ಲಾ ತೊಂದರೆಗಳಿಗೂ ತಮಗಾದ ವ್ಯಾಸೆಕ್ಟಮಿಯ ಮೇಲೆ ಗೂಬೆ ಕೂರಿಸಲಾರಂಭಿಸುತ್ತಾರೆ. ಬಹಿರಂಗವಾಗಿ ಅದನ್ನು ವ್ಯಕ್ತಪಡಿಸದಿದ್ದರೂ ಅದೇ ರೀತಿ ಚಿಕಿತ್ಸೆಗೆ ಒಳಗಾದವರು ಒಂದೆಡೆ ಸೇರಿದಾಗ ಆ ಬಗೆಗೆ ಗುಸುಗುಸು ಮಾತಾಡುತ್ತಾರೆ; ಬಹುಶಃ ಇತರರೊಡನೆ ತಮ್ಮ ಅನುಭವವನ್ನು ಹಂಚಿಕೊಳ್ಳಬಹುದು.

ಅಂತಹ ಸಂಶಯವನ್ನು ನಿವಾರಿಸುವ ಸಲುವಾಗಿ ಗಂಡಸರ ವೃಷಣದಲ್ಲಿ ವೀರ್ಯಾಣುಗಳು ಉತ್ಪಾದನೆಯಾಗುವ ತಾಣ ಹಾಗೂ ಪುರುಷತ್ವದ ಕಾರಣವಾದ ಟೆಸ್ಟೋಸ್ಟಿ ರೋನ್ (Testosterone) ರಸದೂತ ಸ್ರವಿಕೆಯಾಗುವ ಜಾಗಗಳು ಒಂದಕ್ಕೊಂದರ ಸಂಬಂಧವಿರದೆ ಇರುವ ವಸ್ತು ಸ್ಥಿತಿಯನ್ನು ಚಿತ್ರಗಳ ಸಹಿತ ರಚಿಸಿದೆ. ಹಾಗೂ ವೀರ್ಯಾಣು ಗಳನ್ನು ಸಾಗಿಸುವ ವ್ಯಾಸ್ ನಾಳವನ್ನು ಕಟ್ಟಿ ಬಂದು ಮಾಡುವುದರಿಂದ ರಸದೂತ ಉತ್ಪಾದನೆ ಯಾಗುವ ಪ್ರದೇಶಕ್ಕೆ ಯಾವುದೇ ಹಾನಿಯಾಗುವುದಿಲ್ಲವೆಂಬುದು ಮನದಟ್ಟಾಗುವಂತೆ ಮಾಡಿದ್ದೆ. ಆ ಲೇಖನ '**ತುಷಾರ**' ಮಾಸ ಪತ್ರಿಕೆಯಲ್ಲಿ (ಜುಲೈ ೧೯೮೮) ಪ್ರಕಟವಾಯಿತು. ಅದನ್ನೋದಿದ ಕುಟುಂಬ ಕಲ್ಯಾಣ ಇಲಾಖೆಯ ಕಾರ್ಯಕರ್ತರೊಬ್ಬರು ಪ್ರತಿಕ್ರಿಯಿಸಿ ವ್ಯಾಸೆಕ್ಟಮಿ ಬಗೆಗೆ ಇದ್ದ ಅಂತಹ ಮೂಲಭೂತ ವಿಷಯದ ಬಗೆಗೆ ಇಲಾಖೆಯಲ್ಲಿ ಆ ತನಕ ಯಾರೂ ಮಾಹಿತಿ ನೀಡಿರಲಿಲ್ಲವೆಂದು ಪ್ರತಿಕ್ರಿಯಿಸಿದ್ದರು!

ನಿವೃತ್ತಿಯ ನಂತರ ಒಂದು ಸಾಯಂಕಾಲ ರೇಡಿಯೋ ಕಾರ್ಯಕ್ರಮವನ್ನು ಆಲಿಸು ತ್ತಿದ್ದೆ. ಕುಟುಂಬ ಕಲ್ಯಾಣ ಶಸ್ತ್ರಚಿಕಿತ್ಸೆಗಳ ಬಗೆಗೆ ಮೆಡಿಕಲ್ ಕಾಲೇಜಿನ ಪ್ರಾಧ್ಯಾಪಕರೊಬ್ಬರೊಡನೆ

ಪ್ರಶ್ನೋತ್ತರ ನಡೆಯುತ್ತಿತ್ತು. ವ್ಯಾಸೆಕ್ಟಮಿಯ ನಂತರ ವ್ಯಕ್ತಿಯ ಮೇಲಾಗಬಹುದಾದ ಅಡ್ಡ ಪರಿಣಾಮಗಳ ಬಗೆಗೆ ಸಂದರ್ಶಕರು ಪದೇ ಪದೇ ಪ್ರಶ್ನೆ ಕೇಳುತ್ತಲಿದ್ದರು. ಆದರೆ ಪ್ರಾಧ್ಯಾಪಕರು ಮಾತ್ರ ಕೇವಲ ವ್ಯಾಸ್‌ನಾಳವನ್ನು ಕತ್ತರಿಸುವುದರಿಂದ ಏನೂ ಆಗುವುದಿಲ್ಲವೆಂದು ಹೇಳುತ್ತಿದ್ದರು. ಅದು ನಿಜವೆ; ಆದರೆ ಅದಕ್ಕೆ ಕಾರಣವೇನೆಂಬುದನ್ನು ವಿವರಿಸುವ ಪ್ರಯತ್ನ ಮಾಡಲಿಲ್ಲ. ಮರು ದಿನವೇ ಬೆಂಗಳೂರು ಆಕಾಶವಾಣಿಯವರಿಗೆ '**ತುಷಾರ**'ದಲ್ಲಿ ನಾನು ಪ್ರಕಟಿಸಿದ "**ವ್ಯಾಸೆಕ್ಟಮಿ ಹಾನಿಕರವಲ್ಲ**" ಲೇಖನದ ಕ್ಸೆರಾಕ್ಸ್ ಪ್ರತಿಯನ್ನು ಕಳುಹಿಸಿ, ಮುಂದೆ ವ್ಯಾಸೆಕ್ಟಮಿ ಬಗೆಗೆ ಜರುಗುವ ಅಂತಹ ಚರ್ಚೆಗಳಲ್ಲಿ ಲೇಖನದಲ್ಲಿರುವ ಅಂಶಗಳನ್ನು ಬಳಸಿಕೊಳ್ಳಬಹುದೆಂದು ಸೂಚಿಸಿದೆ. ಅದನ್ಯಾರಾದರೂ ಓದಿದರೋ ಇಲ್ಲವೋ ತಿಳಿಯದು. ಆ ಲೇಖನ ಪತ್ರಿಕೆಯೊಂದರಲ್ಲಿ ಆಗಲೇ ಪ್ರಕಟವಾಗಿರುವುದರಿಂದ ಅದನ್ನೇನೂ ಮಾಡಲಾಗದೆಂದು ಮರು ಟಪಾಲಿನಲ್ಲೇ ನನಗೆ ಹಿಂದಿರುಗಿಸಿದರು!

ಸುಮಾರು ಎರಡು ವರ್ಷಗಳ ನಂತರ - ಜುಲೈ ೧೯೮೬ - ಆಕಾಶವಾಣಿಯವರು ಪತ್ರ ಬರೆದು **ವ್ಯಾಸೆಕ್ಟಮಿ ಹಾನಿಕರವಲ್ಲ** ಎಂಬ ವಿಚಾರವಾಗಿ ಭಾಷಣ ಮಾಡಬೇಕೆಂದು ಕೇಳಿಕೊಂಡರು! ಬೆಂಗಳೂರಿನ ಆಕಾಶವಾಣಿ ಕೇಂದ್ರದಲ್ಲೇ ಅದು ರೆಕಾರ್ಡ್ ಆಗಿ ಬಿತ್ತರ ವಾಯಿತು. ಮುಂದೆಯೂ ಹಲವು ಸಾರಿ ಮರು ಪ್ರಸಾರವಾಯಿತಂತೆ.

ವ್ಯಾಸೆಕ್ಟಮಿ ಜರುಗಿಸುವ ವಿಧಾನ ಇತ್ತೀಚಿನ ವರ್ಷಗಳಲ್ಲಿ ತುಂಬ ಸರಳವಾಗಿದೆ. ಬಹುಪಾಲು ಚಾಕುವನ್ನು ಬಳಸದೇ, ಹೊಲಿಗೆಯನ್ನು ಹಾಕದೇ ಅದನ್ನು ಜರುಗಿಸುವ ವಿಧಾನ ಆಚರಣೆಗೆ ಬಂದಿದೆ (Scalpelless, Sutureless Vasectomy). ಹಿಂದೆ ಪ್ರತಿಪಾದಿಸಿದ ವಿಷಯಗಳನ್ನು ಸೇರಿಸಿ, ಈಗಿನ ವಿಧಾನವನ್ನೂ ಅಳವಡಿಸಿ ಮತ್ತೊಂದು ಸಚಿತ್ರ ಲೇಖನ ಬರೆದದ್ದು ಹಂಪಿ ಕನ್ನಡ ವಿಶ್ವವಿದ್ಯಾಲಯದ '**ವಿಜ್ಞಾನ ಸಂಗಾತಿ**'ಯಲ್ಲಿ (ನವೆಂಬರ್ ೨೦೦೧) '**ವ್ಯಾಸೆಕ್ಟಮಿಗೆ ಮತ್ತೊಮ್ಮೆ ಆಮಂತ್ರಣ**' ಎಂದು ಪ್ರಕಟವಾಗಿದೆ.

ಆಹಾರ ಸೇವಿಸುವಾಗ ಉಣಿಸಿನ ತುಣುಕುಗಳು ಗಂಟಲಲಿ ಸಿಲುಕಿಕೊಂಡು ಉಸಿರು ಕಟ್ಟಿ ಸಾವಿಗೀಡಾಗುವ ಪ್ರಕರಣಗಳು ಪ್ರಪಂಚದಾದ್ಯಂತ ವರದಿಯಾಗುವುದು ಅಪರೂಪವೇನಲ್ಲ. ಭಾರತದಲ್ಲೂ ನಾಲ್ಕು ದಶಕಗಳ ಹಿಂದೆ ವಾಯುಸೇನೆಯ ಮುಖ್ಯಾಧಿಕಾರಿಗಳೊಬ್ಬರು ಜಪಾನಿನ ಔತಣಕೂಟದಲ್ಲಿ ಅದರಿಂದಾಗಿಯೇ ಸಾಯುವಂತಾಗಿತ್ತು. ಕೆಲವು ವರ್ಷಗಳ ನಂತರ ಅಂತಹವರನ್ನು ಬದುಕಿಸುವ ಕೈ ಚಳಕದ ಪ್ರಥಮ ಚಿಕಿತ್ಸಾ ವಿಧಾನವೊಂದು ಹೆಸರಾಂತ ವೈದ್ಯಕೀಯ ಪತ್ರಿಕೆಯಲ್ಲಿ ವರದಿಯಾಗಿತ್ತು. "**ಹೈಮ್‌ಲಿಚ್ ಕೈ ಚಳಕ**" (Heimlich Manoeuvre) ಅಮೆರಿಕಾದಲ್ಲಿ ವ್ಯಾಪಕವಾಗಿ ಜಾರಿಗೆ ಬಂದದ್ದರಿಂದ ನೂರಾರು ಜನರನ್ನು ಬದುಕಿಸಲು ಸಾಧ್ಯವಾಗಿತ್ತು. ಗಂಟಲಲ್ಲಿ ಆಹಾರದ ತುಣುಕು ಸಿಕ್ಕುಹಾಕಿಕೊಂಡು, ಉಸಿರಾಡು ವುದಕ್ಕೆ ಪೇಚಾಡುವವರನ್ನು ಸ್ವಲ್ಪ ಎದ್ದು ನಿಲ್ಲಿಸಿ, ಹೊಟ್ಟೆಯ ಕುಳಿ ಪ್ರದೇಶ(Epigastrium) ದಲ್ಲಿ ಮುಷ್ಟಿಯಿಂದ ಹಿಮ್ಮುಖವಾಗಿ ಚಿಮ್ಮುವ ತರಹ ಒತ್ತಡ ನೀಡುವುದರಿಂದ, ಗಂಟಲಲ್ಲಿ ಸಿಕ್ಕುಹಾಕಿಕೊಂಡಿದ್ದ ತುಣುಕನ್ನು ರಭಸದಿಂದ ಹೊರ ತಳ್ಳಿದಂತಾಗುತ್ತದೆ; ಗಂಟಲಿಂದ ಹೊರ ಬಿದ್ದು ಉಸಿರಾಟ ಸಲೀಸಾಗುತ್ತದೆ. ಹಲವು ರೇಖಾ ಚಿತ್ರಗಳ ಸಹಾಯದಿಂದ ಅದರ ಹಿಂದಿನ ತತ್ವಗಳನ್ನು ವಿವರಿಸಿ ಬರೆದ ಲೇಖನ '**ತುಷಾರ**'ದಲ್ಲಿ (ಫೆ. ೧೯೮೨) ಪ್ರಕಟವಾಯಿತು. ಮುಂದೆ ಇತರ ಕೆಲವು ನಿಯತಕಾಲಿಕಗಳಲ್ಲೂ ರೂಪಾಂತರಗೊಂಡು ಪ್ರಕಟವಾಯಿತು. ಅದೀಗ ಪ್ರಥಮ ಚಿಕಿತ್ಸಾ ಪುಸ್ತಕಗಳಲ್ಲಿ ಖಾಯಂ ಸ್ಥಾನ ಪಡೆದುಕೊಂಡಿದೆ.

ಕೃಷಿ ಕ್ಷೇತ್ರದ ಪ್ರಯೋಗಾಲಯಗಳಿಂದ ಹೊರಬರುವ ಸಂಶೋಧನೆಗಳು, ಶೀಘ್ರಗತಿಯಲ್ಲಿ ರೈತರ ಪ್ರಯೋಗಕ್ಕೊಳಪಡಿಸುವುದು ಸಾಮಾನ್ಯ ಸಂಗತಿ. ಆದರೆ ವೈದ್ಯಕೀಯ ಕ್ಷೇತ್ರದ ಹೊಸ ವಿಷಯಗಳು ಜನರನ್ನು ಅಷ್ಟಾಗಿ ತಲುಪುತ್ತಿಲ್ಲವೆನ್ನಬಹುದು. ಹಿಂದಿನ ನಾಲ್ಕು ಲೇಖನಗಳು ಆ ದಿಸೆಯಲ್ಲಿ ಉಪಯುಕ್ತವೆನ್ನಬಹುದೇನೋ.

## ವಿವಾಹಪೂರ್ವ ವೈದ್ಯಕೀಯ ಸಮೀಕ್ಷೆ

ಸುಮಾರು ೧೯೯೦ರ ಸಮಯದಲ್ಲಿ **'ಪ್ರಜಾಮತ'** ವಾರ ಪತ್ರಿಕೆ **"ವಿವಾಹಪೂರ್ವ ವೈದ್ಯಕೀಯ ಸಮೀಕ್ಷೆ"** ಎಂಬ ವಿಷಯದ ಬಗೆಗೆ ವಿಚಾರ ಸಂಕಿರಣ ಏರ್ಪಡಿಸುವ ಅಭಿಲಾಷೆಯಿಂದ ವೈದ್ಯರು, ವಕೀಲರು ಹಾಗೂ ಇತರ ಜನ ಸಮುದಾಯದವರಿಂದ ಲೇಖನಗಳನ್ನು ಆಹ್ವಾನಿಸಿತು. ಆ ವಿಚಾರದ ವೈದ್ಯಕೀಯಕ್ಕೆ ಸಂಬಂಧಿಸಿದ ಮೂಲಭೂತ ವಿಷಯಗಳನ್ನು ಸಂಗ್ರಹಿಸಿ ತಯಾರಿಸಿದ ಸುದೀರ್ಘ ಲೇಖನವನ್ನು ಕಳುಹಿಸಿದೆ. ಅದನ್ನೇ ಅಗ್ರ ಲೇಖನವಾಗಿ ಪ್ರಕಟಿಸಿತು. ನನ್ನ ಲೇಖನದಲ್ಲಿ ಪುರುಷರ ಜನನಾಂಗಗಳಲ್ಲಿರಬಹುದಾದ ಕೆಲವು ವ್ಯತ್ಯಯಗಳನ್ನು ವಿವರಿಸಿ, ವಿವಾಹ ಪೂರ್ವದಲ್ಲೇ ಸರಿಪಡಿಸುವ ಅವಶ್ಯಕತೆಗೆ ಒತ್ತುಕೊಟ್ಟಿದ್ದೆ. ಆದರೆ ಸಂಪಾದಕರು ಅಂತಹ ವಿಷಯಗಳನ್ನು ಅವರ ಪತ್ರಿಕೆಯಲ್ಲಿ ಪ್ರಕಟಿಸುವುದು ಸರಿಯಲ್ಲವೆಂದು ಆ ಭಾಗವನ್ನು ಅಚ್ಚು ಮಾಡಲಿಲ್ಲ. ಅಂತಹ ಅನುಮಾನಗಳಿರುವವರು ನನ್ನನ್ನು ಪತ್ರ ಮುಖೇನ ಸಂಪರ್ಕಿಸಬಹುದೆಂದು ನನ್ನ ವಿಳಾಸವನ್ನು ಮುದ್ರಿಸಿದ್ದರು. ಆ ಬಗೆಗೆ ಮುಂಬಯಿ, ದೆಹಲಿಗಳಿಂದಲೇ ಅಲ್ಲದೆ ಬಹರಿನ್‌ನಂಥ ಹೊರದೇಶಗಳಿಂದಲೂ ಪತ್ರಗಳ ಮಹಾಪೂರವೇ ಬಂದಿತು. ಪತ್ರಿಕೆಯವರು ಮುದ್ರಿಸದೇ ಬಿಟ್ಟಿದ್ದ ವಿಚಾರಗಳನ್ನು ಜನಸಾಮಾನ್ಯರೂ ತಿಳಿದಿರಬೇಕಾದ ಪ್ರಾಮುಖ್ಯತೆಯನ್ನು ಅರಿತು, ಅವುಗಳನ್ನೂ ಸೇರಿಸಿ ಲೇಖನವನ್ನು ಇನ್ನೂ ವಿಸ್ತರಿಸಿ ಸ್ವಾಸ್ಥ್ಯ ವಿಷಯಗಳಿಗೇ ಮೀಸಲಾದ ಮೈಸೂರಿನ **"ಆರೋಗ್ಯ ಯೋಗ"** ಪತ್ರಿಕೆಗೆ ಕಳುಹಿಸಿದೆ. ಅದೂ ಪ್ರಕಟವಾಯಿತು. ಮುಂದೆ ಈ ವಿಸ್ತೃತ ಲೇಖನಕ್ಕೆ ಭಾರತೀಯ ಮನೋವೈದ್ಯರ ಸಂಘದ **ಡಾ|| ಜಯರಾಮ್ ಪುರಸ್ಕಾರ ಲಭಿಸಿತು**

## ವೃತ್ತಿ ಜೀವನದ ಅನುಭವ ಕಥನಗಳು

ಬಹುಶಃ ವೈದ್ಯ ವೃತ್ತಿ ನಿರತರಾದವರ ಜೀವನದಲ್ಲಿ ಎದುರಾಗುವಷ್ಟು ವಿಶಿಷ್ಟ ಬಗೆಯ ಅನುಭವಗಳು, ಸ್ವಾರಸ್ಯಕರ, ಕನಿಕರ ಹಾಗೂ ದುಃಖ ಪೂರಿತ ಸನ್ನಿವೇಶಗಳು ಇತರ ವೃತ್ತಿಯವರಲ್ಲಿ ಇರುವುದಿಲ್ಲವೆನ್ನಬಹುದೇನೋ. ನನ್ನ ಸೇವಾ ಅವಧಿಯಲ್ಲಿ ಎದುರಾದ ಹಲವಾರು ಪ್ರಸಂಗಗಳು ಈ ಬರವಣಿಗೆಯಲ್ಲಿ ಅಲ್ಲಲ್ಲೇ ಪ್ರಸ್ತಾಪವಾಗಿವೆ. ಅವುಗಳಲ್ಲಿ ಕೆಲವನ್ನು ಕೆಲವು ಪತ್ರಿಕೆಗಳಲ್ಲೂ ಪ್ರಕಟಿಸಿದ್ದೆ. ಅವುಗಳ ಪೈಕಿ **ಒಂದು ಹೆರಿಗೆ ಪ್ರಸಂಗ, ಒಂದು ಹೃದಯ ಸ್ತಂಭನ ಪ್ರಸಂಗ, ಮಿಸ್ಸಿಂಗ್ ಲೂಪ್, ಬ್ಲಡ್ ಬ್ಯಾಂಕ್ ಅಲ್ಲ...**, ಜೀವಂತ ರೋಗಿಗಳಿಗೆ ಸಂಬಂಧಿಸಿದವಾದರೆ **ದುಶ್ಮನ್ ಬಗಲ್ ಮೇ ಹೈ, ಮರೆಯಾದ ಮದುವಣಿಗ, ಸಾಯುವಾಗಲೂ ಸುಳ್ಳು ಹೇಳಿದ ಪ್ರಸಂಗ** ಮುಂತಾದ ಪೋಸ್ಟ್‌ಮಾರ್ಟಂಗಳಿಗೆ ಸಂಬಂಧಿಸಿದ ಕಥೆಗಳು. ಇವುಗಳಲ್ಲಿ ಕೆಲವು ಮೈಸೂರಿನ **ಸಂಜೆ ಸಮಾಚಾರ** ದಿನ ಪತ್ರಿಕೆಯಲ್ಲಿ ಪ್ರಕಟವಾದರೆ ಮತ್ತೆ ಕೆಲವು ಡಾ|| ಸಿ. ಆರ್. ಚಂದ್ರಶೇಖರ್ ಸಂಪಾದಕತ್ವದಲ್ಲಿ ಕನ್ನಡ ವೈದ್ಯ ಸಾಹಿತ್ಯ ಪರಿಷತ್ತಿನವರು ಪ್ರಕಟಿಸಿದ **ವೈದ್ಯರು ಮರೆಯಲಾಗದ ರೋಗಿಗಳು** ಕೃತಿಯಲ್ಲಿ ಬೆಳಕು ಕಂಡಿವೆ (೨೦೦೧).

## ವಿಶ್ವಕೋಶಗಳಿಗೆ ಲೇಖನಗಳು

ಹಂಪಿ ಕನ್ನಡ ವಿಶ್ವವಿದ್ಯಾಲಯದವರು ೧೯೯೫ರಲ್ಲಿ ಡಾ|| ಪಿ. ಎಸ್. ಶಂಕರ್ ಅವರ ಸಂಪಾದಕತ್ವದಲ್ಲಿ ಪ್ರಕಟಿಸಿದ **ವೈದ್ಯ ವಿಶ್ವಕೋಶ**ದಲ್ಲಿ ಉದರ ಕೋಶ ಮತ್ತಿತರ ಸಾಮಾನ್ಯ ಶಸ್ತ್ರವೈದ್ಯದ ಕಾಯಿಲೆಗಳಿಗೆ ಸಂಬಂಧಿಸಿದ ಬಹುಪಾಲು ಲೇಖನಗಳನ್ನು ಬರೆಯುವ ಅವಕಾಶ ನನ್ನದಾಗಿತ್ತು. ಅದೇ ರೀತಿಯಲ್ಲಿ ಬೆಂಗಳೂರಿನ **ನವಕರ್ನಾಟಕ ಪ್ರಕಾಶನ** ೧೯೯೮ರಲ್ಲಿ ಪ್ರಕಟಿಸಿದ **ಜ್ಞಾನ ವಿಜ್ಞಾನಕೋಶ** (ನಾಲ್ಕು ಸಂಪುಟಗಳಲ್ಲಿ) ಸಾಮಾನ್ಯ ಶಸ್ತ್ರವೈದ್ಯಕ್ಕೆ ಸಂಬಂಧಿಸಿದ ಬಹುಪಾಲು ಲೇಖನಗಳನ್ನು ಬರೆಯುವ ವಿಶಿಷ್ಟ ಅನುಭವ ನನ್ನದಾಯಿತು. ಇಂತಹ ಅವಕಾಶಗಳು ನನ್ನ ವೈದ್ಯಕೀಯ ಸಾಹಿತ್ಯ ಕೃಷಿಗೆ ಸಂದ ಗೌರವವೆಂದುಕೊಳ್ಳುತ್ತೇನೆ.

## ಸ್ವಾಸ್ಥ್ಯ ವ್ಯವಸ್ಥೆ ಸುಧಾರಣೆ ಕುರಿತ ಲೇಖನಗಳು

ಸುಮಾರು ಏಳು ದಶಕಗಳ ಹಿಂದೆ ವೈದ್ಯಕೀಯ ಸೌಲಭ್ಯಗಳ ಅಭಾವವಿದ್ದ ಮಲೆನಾಡಿನ ಮೂಲೆಯೊಂದರ ಹಳ್ಳಿಯಲ್ಲಿ ಜನಿಸಿದ ನನಗೆ ಸುತ್ತಮುತ್ತಲ ಜನ ಅಸ್ವಸ್ಥರಾದಾಗ ಅನುಭವಿಸುತ್ತಿದ್ದ ಕಷ್ಟ ಕೋಟಲೆಗಳ ಅರಿವು ಮೊದಲಿನಿಂದಲೂ ಇತ್ತು. ವೈದ್ಯ ಪದವಿ ಗಳಿಸಿದ ನಂತರವೂ ತೀರಾ ಕುಗ್ರಾಮವೆನ್ನಲಾಗದ ಶಿಕಾರಿಪುರದಂಥ ಪಟ್ಟಣವೊಂದರಲ್ಲಿ ಸರ್ಕಾರಿ ಸೇವೆಗೆ ಪಾದಾರ್ಪಣೆ ಮಾಡಿದ್ದೆ. ಅಲ್ಲಿಯ ಆಸ್ಪತ್ರೆಗೆ ದೂರದ ಹಳ್ಳಿಗಳಿಂದ ಕೊನೆಗಳಿಗೆಯಲ್ಲಿ ಬರುತ್ತಿದ್ದ ರೋಗಿಗಳ ಬಗೆಗೆ ಅನುಕಂಪ ಪಡುವಂತಾಗುತ್ತಿತ್ತು. ನಾನು ಕಾರ್ಯನಿರತನಾದ ಅರ್ಧಶತಕದ ಹಿಂದೆ ರಾಜ್ಯದೆಲ್ಲೆಡೆ ವೈದ್ಯರ ಅಭಾವವಿತ್ತು. ಹಾಗಾಗಿ ಬಹುಪಾಲು ಆಸ್ಪತ್ರೆಗಳಲ್ಲಿ ವೈದ್ಯರಿರುತ್ತಿರಲಿಲ್ಲ. ಪ್ರಸ್ತುತ ಸಮಯದಲ್ಲಿ ವೈದ್ಯರ ಸಂಖ್ಯೆ ವಿಪರೀತವಾಗಿದ್ದು ಅವರಲ್ಲೀಗ ನಿರುದ್ಯೋಗ ಸಮಸ್ಯೆ ತಲೆ ಎತ್ತಿದೆ. ಆದರೂ ಹಳ್ಳಿಗಾಡಿನ ಆರೋಗ್ಯ ಕೇಂದ್ರಗಳಿಗೆ ವೈದ್ಯರು ಹೋಗುವುದಕ್ಕೆ ಹಿಂಜರಿಯುವ ಪರಿಸ್ಥಿತಿ ಉದ್ಭವಿಸಿದೆ. ಬಹುಪಾಲು ಎಂ.ಬಿ.ಬಿ.ಎಸ್. ಪದವಿ ಗಳಿಸಿದ ವೈದ್ಯರು ಹಳ್ಳಿಗಾಡಿನ ಆಸ್ಪತ್ರೆಗಳಿಗೆ ಅಲ್ಲಿ ಸರಿಯಾದ ಸಾಧನ ಸಲಕರಣೆ ಮತ್ತಿತರ ವ್ಯವಸ್ಥೆಗಳು ಸರಿಯಿಲ್ಲವೆಂತಲೋ, ವಾಸಕ್ಕೆ ಮನೆಗಳಿಲ್ಲವೆಂತಲೋ, ನಾಗರಿಕ ಸೌಲಭ್ಯಗಳ ಕೊರತೆಯಿಂದಲೋ ಹೋಗಲು ಇಷ್ಟ ಪಡುತ್ತಿಲ್ಲ. ಹಾಗಾಗಿ ಹಳ್ಳಿಗಾಡಿನ ಆಸ್ಪತ್ರೆಗಳಲ್ಲಿ ವೈದ್ಯರು, ಸಿಬ್ಬಂದಿ ಹಾಗೂ ಔಷಧ ಸಾಮಗ್ರಿಗಳ ತೀವ್ರ ಕೊರತೆ ಇದೆ. ಪದವೀಧರ ವೈದ್ಯರನ್ನು ಹಳ್ಳಿಗಾಡುಗಳಿಗೆ ಕಳುಹಿಸುವಲ್ಲಿ ಸರ್ಕಾರದವರು ಮಾಡುವ ಪ್ರಯತ್ನಗಳು ಯಶಸ್ವಿಯಾಗುತ್ತಿಲ್ಲವೆಂದೇ ಹೇಳಬೇಕಾಗಿದೆ.

ಈ ದಿಸೆಯಲ್ಲಿ ನನ್ನದೇ ಆದ ಅಭಿಪ್ರಾಯಗಳಿವೆ. ವೈದ್ಯ ಪದವಿಯ ವಿದ್ಯಾಭ್ಯಾಸ ತುಂಬಾ ದೀರ್ಘವಾದುದು, ಅದರ ಪಠ್ಯಕ್ರಮ ವಿಸ್ತಾರವಾದುದು, ಅದನ್ನು ಪಡೆಯುವಲ್ಲಿ ಅಪಾರ ಹಣಕಾಸಿನ ವೆಚ್ಚವಾಗುತ್ತದೆ. ಬಹುಶಃ ಇಂತಹ ಕಾರಣಗಳಿಂದ ಇಂದಿನ ಪದವೀಧರ ವೈದ್ಯರು ಹಳ್ಳಿಗಳಿಗೆ ಹೋಗಲು ಇಷ್ಟಪಡಲಾರರು. ಹಾಗೆ ನೋಡಿದರೆ ಹಳ್ಳಿಗಾಡಿನವರ ಬಹುಪಾಲು ಸಾಮಾನ್ಯ ಸ್ವಾಸ್ಥ್ಯ ಸಮಸ್ಯೆಗಳನ್ನು ನಿಭಾಯಿಸಲು ಚೈನಾ ದೇಶದಲ್ಲಿ ಹಲವು ದಶಕಗಳಿಂದ **'ಬರಿಗಾಲು ವೈದ್ಯರು'** ಎಂಬ ಅಲ್ಪ ಪ್ರಮಾಣದ ತರಬೇತಿ ಪಡೆದ 'ವೈದ್ಯ'ರನ್ನು ತಯಾರು ಮಾಡಿ ಅವರ ಜನರ ಸ್ವಾಸ್ಥ್ಯವನ್ನು ಸುಧಾರಿಸುವಲ್ಲಿ ಯಶಸ್ಸು ಗಳಿಸಿದ್ದಾರೆ. ನಮ್ಮಲ್ಲೂ ಅಂತಹ ವ್ಯವಸ್ಥೆ ಕೆಲ ಸಮಯ ಜಾರಿಗೆ ಬಂದರೂ ಅದು ಯಶಸ್ವಿಯಾಗಲಿಲ್ಲ.

ಸ್ವಾತಂತ್ರ್ಯಪೂರ್ವದಲ್ಲಿ ಮೂರು ವರ್ಷಗಳ ತರಬೇತಿ ನೀಡಿದ **ಎಲ್.ಎಂ.ಪಿ.** ಡಿಪ್ಲೋಮಾ ವೈದ್ಯರ ಪಡೆಯೇ ಇತ್ತು. ಹಳ್ಳಿಗಾಡಿನ ಆರೋಗ್ಯ ವ್ಯವಸ್ಥೆಗಳ ಬೆನ್ನೆಲುಬುಗಳಂತೆ ಕಾರ್ಯ ನಿರ್ವಹಿಸುತ್ತಿದ್ದರು. ಅನಂತರದ ವರ್ಷಗಳಲ್ಲಿ ವೈದ್ಯವೃತ್ತಿಯವರಲ್ಲಿ ದರ್ಜೆಗಳಿರಬಾರದೆಂಬ ಕಲ್ಪನೆಯಿಂದ ಪ್ರೇರಿತರಾಗಿ ಆ ಕೋರ್ಸನ್ನು ರದ್ದು ಮಾಡಲಾಯಿತು. ಪ್ರಸ್ತುತ ಅಂತಹ ಅಲ್ಪಾವಧಿಯ ತರಬೇತಿ ಪಡೆದ ವೈದ್ಯ ಸಮೂಹವನ್ನು ತಯಾರು ಮಾಡುವ ಅವಶ್ಯಕತೆ ಇದೆ ಎಂಬುದು ನನ್ನ ದೃಢ ನಂಬಿಕೆ. ಆ ದಿಸೆಯಲ್ಲಿ ಹಲವು ವರ್ಷಗಳಿಂದ ಕನ್ನಡ, ಇಂಗ್ಲಿಷ್ ಪತ್ರಿಕೆಗಳ ಪತ್ರ ವ್ಯವಹಾರ ವಿಭಾಗದಲ್ಲಿ ಬರವಣಿಗೆಗಳು, ಎರಡೂ ಭಾಷೆಗಳ ದಿನಪತ್ರಿಕೆ, ನಿಯತಕಾಲಿಕಗಳಲ್ಲಿ ನಾನು ಬರೆದ ದೀರ್ಘ ಲೇಖನಗಳೂ ಪ್ರಕಟವಾಗಿವೆ. ಅಂತಹ ಒಂದು ವ್ಯವಸ್ಥೆಯನ್ನು ಜಾರಿಗೆ ತರುವುದರಿಂದ ಅಮಾಯಕ ಹಳ್ಳಿಗಾಡಿನ ಜನರನ್ನು '**ನಕಲಿ ವೈದ್ಯರ**' ತೆಕ್ಕೆಯಿಂದ ಪಾರುಮಾಡಲು ಸಾಧ್ಯ. ಆದರೆ ಕೆಲವು ಪಟ್ಟಭದ್ರ ಹಿತಾಸಕ್ತಿಗಳ ಪ್ರಭಾವದಿಂದ ಅಂತಹದೊಂದು ವೈದ್ಯಪಡೆಯನ್ನು ಹುಟ್ಟು ಹಾಕುವಲ್ಲಿ ಸಂಬಂಧ ಪಟ್ಟವರು ಆಸ್ಥೆ ತೋರಿಸುತ್ತಿಲ್ಲವೆಂದೇ ಹೇಳಬೇಕಾಗಿದೆ.

ಇದೇ ರೀತಿಯಲ್ಲಿ ಪ್ರಸ್ತುತ ಪ್ರಚಲಿತವಿರುವ ಆಧುನಿಕ ವೈದ್ಯಪದ್ಧತಿಯ (ಅಲೋಪತಿ ಎಂದು ತಪ್ಪಾಗಿ ಕರೆಯಲ್ಪಡುತ್ತಿರುವ) ಜೊತೆಗೆ ಆಯುರ್ವೇದ, ಹೋಮಿಯೋಪತಿಗಳಂಥ ಪದ್ಧತಿಯ ತತ್ವಗಳನ್ನು ಒಂದುಗೂಡಿಸುವ ಪ್ರಯತ್ನ ಮಾಡುವುದರ ಬಗೆಗೂ ನನ್ನ ಬರಹಗಳಲ್ಲಿ ಪ್ರತಿಪಾದಿಸುತ್ತಿರುವೆ. ಚೈನಾ ದೇಶದಲ್ಲಿ ಈ ವಿಚಾರದಲ್ಲಿ ತುಂಬಾ ಮುಂದುವರಿದಿದ್ದಾರೆಂದು ತಿಳಿದು ಬಂದಿದೆ.

ವೈದ್ಯಕೀಯಕ್ಕೆ ಸಂಬಂಧಿಸಿದ ವಿಷಯಗಳೇ ಅಲ್ಲದೆ ರಾಜಕೀಯ, ಸಾಮಾಜಿಕ ಸಮಸ್ಯೆಗಳ ಬಗೆಗೂ ನನ್ನ ಹಲವು ಲೇಖನಗಳು ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಅವುಗಳ ಹೆಚ್ಚಿನ ವಿವರ ಇಲ್ಲಿ ಅಪ್ರಸ್ತುತವೆಂದು ಭಾವಿಸುತ್ತೇನೆ.

## ಪುಸ್ತಕಗಳ ಪ್ರಕಟಣೆ

ಜನಪ್ರಿಯ ವೈದ್ಯಕೀಯ ಸಾಹಿತ್ಯ ರಚನೆಯಲ್ಲಿನ ನನ್ನ ಆಸಕ್ತಿ ಬಹಳ ಕಾಲ ಬಿಡಿ ಲೇಖನಗಳಿಗೆ ಸೀಮಿತವಾಗಿತ್ತು. ಈ ಕ್ಷೇತ್ರದಲ್ಲಿ ಸ್ವಲ್ಪ ಸಾಧನೆಯ ಅರಿವು ಹಾಗೂ ಮನ್ನಣೆ ದೊರೆತಂತೆಲ್ಲಾ ವೈದ್ಯಕೀಯ ವಿಷಯಗಳನ್ನು ಕುರಿತು ಕಿರು ಹೊತ್ತಿಗೆಗಳನ್ನು ಬರೆಯುವ ಹಂಬಲ ಉಂಟಾಗತೊಡಗಿತು. ಆ ದಿಸೆಯಲ್ಲಿ ಮೊದಲ ಹೆಜ್ಜೆ ಇಡುವಾಗ ನಾನು ಐವತ್ತರ ಅಂಚಿನಲ್ಲಿದ್ದೆ; ಸರ್ಜನ್ ದರ್ಜೆಗೆ ಬಡ್ತಿ ಪಡೆದು ಎರಡನೆ ಸಾರಿ ಮಂಗಳೂರಲ್ಲಿದ್ದ ಕಾಲವದು.

ಮದ್ಯಪಾನ, ಧೂಮಪಾನಗಳಂಥ ದುಶ್ಚಟಗಳ ಬಗೆಗೆ ನನ್ನಲ್ಲಿ ಹಿಂದಿನಿಂದಲೂ ತಾತ್ಸಾರ ಭಾವನೆ ಮನೆ ಮಾಡಿತ್ತು. ಬೆಂಗಳೂರಲ್ಲಿ ಎಂಬತ್ತರ ದಶಕದಲ್ಲಿ ಕಳ್ಳಭಟ್ಟಿ ದುರಂತ ೩೦೦-೪೦೦ ಜನರನ್ನು ಬಲಿತೆಗೆದುಕೊಂಡ ಘಟನೆ ನನ್ನ ಮನಸ್ಸಿನ ಸ್ವಾಸ್ಥ್ಯವನ್ನು ಕೆಡಿಸಿತ್ತು. ಮದ್ಯಪಾನೀಯಗಳನ್ನು ತಯಾರಿಸುವ ವಿಧಾನಗಳಂಥ ಮೂಲಭೂತ ಹಂತದಿಂದ, ಅವು ಮಾನವರ ದೇಹ ಮನಸ್ಸುಗಳ ಮೇಲೆ ಬೀರುವ ಪರಿಣಾಮ, ಅವುಗಳಿಂದಾಗಿ ಸೃಷ್ಟಿಯಾಗುವ ವ್ಯಾಧಿಗಳು, ಜನರ ಆರ್ಥಿಕ, ಸಾಮಾಜಿಕ ವ್ಯವಸ್ಥೆಗಳ ಮೇಲೆ ಬೀರುವ ಪರಿಣಾಮಗಳ ಬಗೆಗೆ ವಿಷಯ ಸಂಗ್ರಹ ಮಾಡಿದೆ. ಅವನ್ನೆಲ್ಲಾ ಪುಸ್ತಕ ರೂಪದಲ್ಲಿ ಹೊರತರುವ ಸಲುವಾಗಿ ಹಸ್ತಪ್ರತಿಯೊಂದನ್ನು ತಯಾರು ಮಾಡಿದೆ. ಕಸ್ತೂರ್ಬಾ ಮೆಡಿಕಲ್ ಕಾಲೇಜಿನಲ್ಲಿ ನನಗೆ ಸುಪರಿಚಿತರೂ,

ಮೆಡಿಸನ್ ವಿಭಾಗದ ಪ್ರಾಧ್ಯಾಪಕರೂ ಆಗಿದ್ದ ಡಾ॥ ಬಿ. ಎಂ. ಹೆಗ್ಗಡೆಯವರನ್ನು ಅದನ್ನು ಪರಿಶೀಲಿಸಿ ಸಲಹೆಗಳನ್ನು ನೀಡುವಂತೆ ಕೇಳಿಕೊಂಡೆ. ಅದನ್ನು ಪರಿಶೀಲಿಸಿದ ಅವರು ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿ, ಪ್ರಕಟಿಸುವ ಪ್ರಯತ್ನ ಮಾಡಬೇಕೆಂದು ಆಗ್ರಹಪಡಿಸಿದರು. ಆಗ ಅಸ್ತಿತ್ವದಲ್ಲಿದ್ದ ಕರ್ನಾಟಕ ಮದ್ಯಪಾನ ನಿಯಂತ್ರಣ ಮಂಡಳಿಗೆ (Karnataka Temperance Board) ಪ್ರಕಟಣೆಗಾಗಿ ಕಳುಹಿಸಿದೆ. ಮಂಡಳಿಗೆ ಹಸ್ತ ಪ್ರತಿ ತಲುಪುವಷ್ಟರಲ್ಲೇ ಅದು ವಿಸರ್ಜನೆಯ ಹಾದಿಯಲ್ಲಿತ್ತು. ಪುಸ್ತಕ ಪ್ರಕಟಣೆಯ ಮೊದಲ ಪ್ರಯತ್ನವೇ ನಿಷ್ಫಲವಾದುದಕ್ಕೆ ಬೇಸರವಾಯಿತು. ಅದರ ಇನ್ನೊಂದು ಪ್ರತಿ ಮಾಡಿಟ್ಟುಕೊಂಡಿರದಿದ್ದುದು ನನ್ನ ಅನನುಭವದ ಸಂಕೇತವೇ ಸರಿಯೆಂದು ಸುಮ್ಮನಾದೆ.

ಸುಮಾರು ಎರಡು ವರ್ಷಗಳ ನಂತರ ಬೆಂಗಳೂರು ವಿಶ್ವವಿದ್ಯಾಲಯದ ಪ್ರಸಾರಾಂಗದವರು ಅದನ್ನು ಪ್ರಕಟಿಸಿ ಗೌರವ ಪ್ರತಿಗಳನ್ನು ಕಳುಹಿಸಿದಾಗ ಸಖೇದಾಶ್ಚರ್ಯವಾಯಿತು. 'ಮದ್ಯಪಾನ ಮತ್ತು ಆರೋಗ್ಯ' ಎಂದು ನಾನು ನೀಡಿದ್ದ ಹೆಸರನ್ನು ಪ್ರಸಾರಾಂಗದ ಸಲಹೆಗಾರರಾದ ಡಾ॥ ಡಿ. ಎಸ್. ಶಿವಪ್ಪನವರು ಹಸ್ತಪ್ರತಿಯನ್ನು ಪರಿಶೀಲಿಸಿ **"ಮದ್ಯಪಾನದ ಸಮಸ್ಯೆ"** ಎಂದು ಬದಲಾಯಿಸಿದ್ದರು. ಸುಮಾರು ೬೫ ಪುಟಗಳ ಕಿರು ಹೊತ್ತಿಗೆ ಹಲವು ವ್ಯಂಗ್ಯರೇಖಾ ಚಿತ್ರಗಳೊಂದಿಗೆ ಸುಂದರವಾಗಿ ಮುದ್ರಿತವಾಗಿತ್ತು. ಮದ್ಯಪಾನ ಸಮಸ್ಯೆಯ ಬಗೆಗೆ ಮೂಲಭೂತ ವಿಷಯಗಳನ್ನು ಪರಿಚಯಿಸುವ ಈ ಕೃತಿ ಹಲವರ ಮೆಚ್ಚುಗೆಗೆ ಪಾತ್ರವಾಗಿದೆ.

## ವೈದ್ಯವಿಜ್ಞಾನ ಸಾಧಕರು

ವೈದ್ಯಕೀಯ ಸಂಶೋಧನೆಗಳಲ್ಲಿ ತೊಡಗಿಕೊಳ್ಳುತ್ತಿದ್ದವರು ಅನುಭವಿಸುತ್ತಿದ್ದ ಕಷ್ಟ ಕೋಟಲೆಗಳು, ಹಾಗೂ ಅಂತಹ ಸಂಶೋಧನೆಗಳ ಹಿಂದಿನ ರೋಚಕ ಪ್ರಸಂಗಗಳನ್ನು ಜನ ಸಾಮಾನ್ಯರ ಗಮನಕ್ಕೆ ತರಬೇಕೆಂಬ ಹಂಬಲದ ಪರಿಣಾಮವಾಗಿ ತಯಾರಾದ **"ವೈದ್ಯ ವಿಜ್ಞಾನ ಸಾಧಕರು"** ಕೃತಿಯನ್ನು ಮೈಸೂರು ವಿಶ್ವವಿದ್ಯಾಲಯದ ಪ್ರಸಾರಾಂಗದವರು ಪ್ರಕಟಿಸಿದರು (೧೯೮೬). ಸುಮಾರು ೧೨೦ ಪುಟಗಳ ಹೊತ್ತಿಗೆಯಲ್ಲಿ ನೋವಿನ ನಿವಾರಣೆಗಾಗಿ ಅರಿವಳಿಕಾ ಪದ್ಧತಿಯನ್ನು ಆವಿಷ್ಕರಿಸುವಲ್ಲಿನ ಹಲವು ಸಾಧಕರಿಂದ ಹಿಡಿದು ಆಂಟಿಸೆಪ್ಟಿಕ್, ರೋಗ ನಿರೋಧಕ ತತ್ವಗಳ ಶೋಧನೆ, ಜೀವಿರೋಧಕ ಮದ್ದುಗಳನ್ನು ಕಂಡು ಹಿಡಿಯುವಲ್ಲಿನ ಮಹಾನ್ ವೈದ್ಯ ವಿಜ್ಞಾನಿಗಳವರೆಗಿನ ಹಿನ್ನೆಲೆಯ ಕಥಾ ಚಿತ್ರಣ ಅದರಲ್ಲಿದ್ದಿತು. ಪುಸ್ತಕವನ್ನು ಪ್ರಕಟಿಸುವಲ್ಲಿ ೪-೫ ವರ್ಷಗಳಷ್ಟು ವಿಳಂಬವಾದದ್ದು ಬೇಸರ ಉಂಟುಮಾಡಿತ್ತು.

## ಡಾ॥ ಆಲ್ಬರ್ಟ್ ಶ್ವೈಟ್ಜರ್

ಮೆಡಿಕಲ್ ವಿದ್ಯಾರ್ಥಿ ದೆಸೆಯಲ್ಲಿದ್ದಾಗಲೇ ಆಫ್ರಿಕಾದ ಗೊಂಡಾರಣ್ಯದಲ್ಲಿ ನತದೃಷ್ಟ ನೀಗ್ರೋಗಳ ಸೇವೆಯಲ್ಲಿ ನಿರತನಾಗಿದ್ದ ಡಾ॥ ಆಲ್ಬರ್ಟ್ ಶ್ವೈಟ್ಜರ್‌ಗೆ ನೊಬೆಲ್ ಪ್ರಶಸ್ತಿ ದೊರೆತ ವಿಷಯವನ್ನು ಪತ್ರಿಕೆಗಳಲ್ಲಿ ಓದಿದ್ದೆ(೧೯೫೪). ಅದರಿಂದ ನನ್ನಲ್ಲೇನೋ ಒಂದು ಮಿಂಚಿನ ಸಂಚಾರವಾದಂತಾಯಿತು. ಅವನತ್ತ ಸೂಜಿಗಲ್ಲಿನಂತೆ ಆಕರ್ಷಿತನಾದೆ. ಅವನ ಬಗೆಗೆ ಹೆಚ್ಚಿನ ವಿಷಯಗಳನ್ನು ತಿಳಿದುಕೊಳ್ಳುವ ಹಂಬಲ ಉಂಟಾಯಿತು. ಹೋದ ಪುಸ್ತಕದಂಗಡಿಗಳಲ್ಲೆಲ್ಲಾ ಅವನ ಬಗೆಗೆ ಪುಸ್ತಕಗಳನ್ನು ಅರಸುತ್ತಿದ್ದೆ. ಸುಮಾರು ೧೯೭೧ರ ಸಮಯದಲ್ಲಿ Dr. ALBERT SCHWEITZER — MEDICAL— MISSIONARY ಎಂಬ ಕಿರು ಪುಸ್ತಕವನ್ನು

ಮುಂಬಯಿಯ ಪುಸ್ತಕದಂಗಡಿಯೊಂದರಿಂದ ತರಿಸಿಕೊಂಡೆ. ಮುಂದೆ ೧೯೮೦ರಲ್ಲಿ ಬೆಂಗಳೂರಿನ ಪುಸ್ತಕದಂಗಡಿಯೊಂದರಲ್ಲಿ ಸ್ವತಃ ಶ್ವೈಯಿಟ್ಸರ್ ರಚಿಸಿದ MY CHILDHOOD AND YOUTH (1926) ಎಂಬ ಪುಸ್ತಕ ದೊರೆಯಿತು. ಅವೆರಡನ್ನು ಮನನ ಮಾಡಿದ ನಂತರ ಕಿರು ಲೇಖನಗಳನ್ನು ಬರೆದು ಕೆಲವು ನಿಯತಕಾಲಿಕಗಳಿಗೆ ಕಳುಹಿಸಿದೆ. ಅವುಗಳಾವುವೂ ಪ್ರತಿಕ್ರಿಯಿಸಲಿಲ್ಲ! ಆದರೂ ಶ್ವೈಯಿಟ್ಸರ್ ಬಗೆಗಿನ ನನ್ನ ದಾಹ ಅಡಗಲಿಲ್ಲ. ಅವನ ಬಗೆಗೆ ಮಾಹಿತಿ ಕೋರಿ ಮದ್ರಾಸಿನ ಅಮೆರಿಕನ್ ಲೈಬ್ರರಿ, ಬೆಂಗಳೂರಿನ ಬ್ರಿಟಿಷ್ ಲೈಬ್ರರಿ ಮತ್ತು ಬಸವನಗುಡಿಯ Indian Institute of World Culture, ಲೈಬ್ರರಿಗಳಿಗೆ ಪತ್ರ ಬರೆದೆ. ಬೆಂಗಳೂರಿನ ಎರಡೂ ಲೈಬ್ರರಿಗಳವರು ಶ್ವೈಯಿಟ್ಸರ್ ಬಗೆಗೆ ತಮ್ಮಲ್ಲಿ ಕೆಲವು ಗ್ರಂಥಗಳಿರುವುದಾಗಿಯೂ, ಹೊರಗಡೆ ಕಳುಹಿಸಲಾಗದಿದ್ದುದರಿಂದ ಬೆಂಗಳೂರಿಗೆ ನಾನು ಬಂದಾಗ ಪರಾಮರ್ಶಿಸಬಹುದೆಂದು ಉತ್ತರಿಸಿದ್ದರು. ಅಮೆರಿಕನ್ ಲೈಬ್ರರಿಯವರು ಶ್ವೈಯಿಟ್ಸರ್ ಬಗೆಗೆ ಪ್ರಕಟವಾದ ಪುಸ್ತಕಗಳ ಪಟ್ಟಿ ಹಾಗೂ ದೊರೆಯಬಹುದಾದ ವಿಳಾಸಗಳನ್ನು ಒದಗಿಸಿದ್ದರು. ಬೆಂಗಳೂರಿಗೆ ಮುಂದಿನ ಸಾರಿ ಹೋದಾಗ ಎರಡೂ ಲೈಬ್ರರಿಗಳಿಗೆ ಹೋಗಿ ಕೆಲವು ಪುಸ್ತಕಗಳನ್ನು ಪರಾಮರ್ಶಿಸಿದೆ.

ಇಷ್ಟೆಲ್ಲಾ ವಿಷಯ ಸಂಗ್ರಹವಾದರೂ ನನಗೆ ತೃಪ್ತಿಯಾಗಲಿಲ್ಲ. ಡಾ|| ಶ್ವೈಯಿಟ್ಸರ್‌ನ ಕಾರ್ಯಕ್ಷೇತ್ರ ಆಫ್ರಿಕಾದ ಗೇಬನ್‌ನಲ್ಲಿದ್ದ ಅವನು ಸ್ಥಾಪಿಸಿದ ಆಸ್ಪತ್ರೆಯವರಿಗೇ ಪತ್ರ ಬರೆದೆ. ಆರೆಂಟು ತಿಂಗಳ ನಂತರ ಅಲ್ಲಿಂದ ಒಂದು ಪುಸ್ತಕ ಪಾರ್ಸೆಲ್ ಅಂಚೆ ಮೂಲಕ ಬಂದಿತು. ಅದರಲ್ಲಿ ಡಾ|| ಶ್ವೈಯಿಟ್ಸರ್‌ನ ಆತ್ಮಚರಿತ್ರೆ ಮತ್ತು ಅವನೇ ಬರೆದ ಎರಡು ಧಾರ್ಮಿಕ ಹಾಗೂ ತತ್ವಶಾಸ್ತ್ರೀಯ ಗ್ರಂಥಗಳಿದ್ದವು. ಜೊತೆಗೆ ಅವನ ಕಲರ್ ಫೋಟೋ ಹಾಗೂ ಫ್ರೆಂಚ್ ಭಾಷೆಯಲ್ಲಿ ಪುಟ್ಟ ಸಂದೇಶವಿತ್ತು. ಇಂಗ್ಲೆಂಡ್‌ನಲ್ಲಿದ್ದ ನನ್ನ ವೈದ್ಯ ಬಂಧು ಡಾ|| ಎಚ್. ಎಂ. ಪುಟ್ಟಸ್ವಾಮಿಯವರು ಊರಿಗೆ ಬಂದಾಗ ಶ್ವೈಯಿಟ್ಸರ್ ಬಗೆಗೆ ಆಸಕ್ತಿಯನ್ನು ತಿಳಿಸಿ, ಕೆಲವು ಪುಸ್ತಕಗಳ ಪಟ್ಟಿಯನ್ನು ಕೊಟ್ಟಿದ್ದೆ. ಅವರು James Brabazon ಎಂಬವರು ರಚಿಸಿದ Albert Schweitzer (1976) ಎಂಬ ೨೬೫ ಪುಟಗಳ ಗ್ರಂಥವನ್ನು ಕಳುಹಿಸಿದರು.

ಹಾಗೆ ಸಂಗ್ರಹವಾದ ಗ್ರಂಥಗಳನ್ನು ಓದಿದ ನಂತರ ಪ್ರಾಯೋಗಿಕವಾಗಿ ಸುಮಾರು ೧೦ ಪುಟಗಳ "ಜೀವೋಪಾಸನಾ ತತ್ವ ಪ್ರತಿಪಾದಕ ಡಾ|| ಆಲ್ಬರ್ಟ್ ಶ್ವೈಯಿಟ್ಸರ್" ಎಂಬ ಲೇಖನ ಬರೆದು ಮೈಸೂರಿನ ಜಗದ್ಗುರು ಶ್ರೀ ಶಿವರಾತ್ರೀಶ್ವರ ಮಹಾ ವಿದ್ಯಾಪೀಠದವರು ಪ್ರಕಟಿಸುತ್ತಿದ್ದ "ಪ್ರಸಾದ" ಎಂಬ ದ್ವೈಮಾಸಿಕ ಪತ್ರಿಕೆಗೆ ಕಳುಹಿಸಿದೆ. ಅದರ ೧೯೮೯ರ ಸಂಚಿಕೆಯಲ್ಲಿ ಪ್ರಕಟವಾಯಿತು. ಮುಂದೆ ಶ್ವೈಯಿಟ್ಸರ್‌ನ ಇಡೀ ಜೀವನದ ಸಾರವನ್ನು ಸಂಗ್ರಹ ಮಾಡಿ ಕಿರು ಜೀವನ ಚರಿತ್ರೆ - (ಸುಮಾರು ೨೫ ಪುಟಗಳು) ರಚಿಸಿ 'ಪುಸ್ತಕ ವಿಭಾಗ' ಶೀರ್ಷಿಕೆಯ 'ಕಸ್ತೂರಿ' ಮಾಸ ಪತ್ರಿಕೆಗೆ ಕಳುಹಿಸಿದೆ. ಅದು ಪ್ರಕಟವಾಗಲಿಲ್ಲ; ಲೇಖನ ವಾಪಸು ಬರಲಿಲ್ಲ; ಆ ಬಗೆಗೆ ಯಾವುದೇ ಉತ್ತರ ಬರಲಿಲ್ಲ!

ಆ ತನಕ ವೈದ್ಯಕೀಯ ವಿಷಯಗಳಲ್ಲಿ ೨-೩ ಕಿರುಹೊತ್ತಿಗೆಗಳನ್ನು ರಚಿಸಿದ ಹಿನ್ನೆಲೆಯಲ್ಲಿ ನಾನೇ ಆ ಮಹಾಪುರುಷನ ಜೀವನ ಚರಿತ್ರೆಯನ್ನು ವಿಸ್ತೃತವಾಗಿ ರಚಿಸಬಾರದೇಕೆಂದು ಯೋಚಿಸಿದೆ. ಜೀವನ ಚರಿತ್ರೆಗಳನ್ನು ಬರೆದ ಅನುಭವವಿರದಿದ್ದರೂ, ಬಾಲ್ಯದಿಂದಲೂ ಹಲವಾರು ಮಹಾ ಪುರುಷರ ಆತ್ಮ ಚರಿತ್ರೆ/ಜೀವನ ಚರಿತ್ರೆಗಳನ್ನು ಓದಿದ ಅನುಭವವಿತ್ತು. ಭಾರತೀಯ ಭಾಷೆಗಳಲ್ಲಿ ಬಹುಶಃ ಮರಾಠಿಯನ್ನು ಹೊರತು ಪಡಿಸಿದರೆ

ಬೇರಾವುದರಲ್ಲೂ ಶ್ವೆಯಿಟ್ಸರ್ ಜೀವನ ಚರಿತ್ರೆ ಪ್ರಕಟವಾದಂತಿರಲಿಲ್ಲ. ದಿವಂಗತ ಸುಮತಿ ದೇವಸ್ಥಲೆಯೆಂಬವರು ಮರಾಠಿಯಲ್ಲಿ ರಚಿಸಿದ 'ಆಲ್ಬರ್ಟ್ ಶ್ವೆಯಿಟ್ಸರ್' ಎಂಬ ಕೃತಿಗೆ ಮುಂಬಯಿಯ ಭಾರತೀಯ ವಿದ್ಯಾಭವನದವರು ಪುರಸ್ಕಾರ ನೀಡಿದ ಸುದ್ದಿಯನ್ನು ೧೯೮೮ರಲ್ಲಿ ಪತ್ರಿಕೆಗಳಲ್ಲಿ ಓದಿದ್ದೆ. ಈ ಹಿನ್ನೆಲೆಯಲ್ಲಿ ಸಾಹಿತ್ಯ ಕೃಷಿಯಲ್ಲಿ ಅಷ್ಟೇನು ಪಳಗಿರದ ನನ್ನಂಥವನು ಅಂತಹ ಶ್ರೇಷ್ಠ ವ್ಯಕ್ತಿಯ ಜೀವನ ಚರಿತ್ರೆಯನ್ನು ಕನ್ನಡದಲ್ಲಿ ರಚಿಸುವುದು ಒಂದು ರೀತಿಯ ಅಸಂಗತವಾಗಬಹುದೇ ಎಂಬ ಅಳುಕು ಇತ್ತು. ಒಂದು ವೇಳೆ ನಾನು ಬರೆದ ಜೀವನ ಚರಿತ್ರೆ ಸಾಹಿತ್ಯಿಕ ಮೌಲ್ಯಗಳಿಂದ ಉತ್ತಮವಾದುದಲ್ಲವೆನಿಸಿದರೂ, ಅಂತಹ ಮಹಾನ್ ವ್ಯಕ್ತಿಯನ್ನು ಕನ್ನಡದ ಜನತೆಗೆ ಪರಿಚಯ ಮಾಡಿಸಿದಂತಾಗಬಹುದು; ಅವನು ಪ್ರತಿಪಾದಿಸಿದ '**ಜೀವೋಪಾಸನ ತತ್ವ**' (REVERENCE FOR LIFE)ದ ಮಹತ್ವವನ್ನು ಪ್ರಚಾರ ಮಾಡಲು ಸಹಕಾರಿಯಾಗಬಹುದೆಂಬ ಉದ್ದೇಶದಿಂದ ಆ ದಿಸೆಯಲ್ಲಿ ಮುಂದುವರಿದೆ.

ಚಿಕ್ಕಮಗಳೂರಿನಲ್ಲಿ ಜಿಲ್ಲಾ ವೈದ್ಯಾಧಿಕಾರಿಯಾಗಿದ್ದ ಸಮಯ; ಪುರುಸೊತ್ತಿಲ್ಲದೆ ಆಡಳಿತ ಹಾಗೂ ರೋಗಿಗಳ ಚಿಕಿತ್ಸಾ ನಿರ್ವಹಣೆಯ ಜವಾಬ್ದಾರಿಗಳ ನಡುವೆಯೂ ಜೀವನ ಚರಿತ್ರೆಯ ಹಸ್ತಪ್ರತಿ ತಯಾರಾಗುತ್ತಿತ್ತು. ಸುಮಾರು ೨-೩ ವರ್ಷಗಳ ಸತತ ಪ್ರಯತ್ನದಿಂದ ೨೩೦ ಪುಟಗಳ ಶುದ್ಧ ಹಸ್ತಪ್ರತಿ ಅಂತಿಮವಾಗಿ ತಯಾರಾಯಿತು. ಅಷ್ಟರಲ್ಲೇ ಸೇವೆಯಿಂದ ನಿವೃತ್ತನಾಗಿ ಶಿವಮೊಗ್ಗಾದಲ್ಲಿ ನೆಲೆಸಿದ್ದೆ. ಪ್ರಕಟಣೆಯ ಬಗೆಗೆ ಆ ತನಕ ಯೋಚನೆಯೇ ಇರಲಿಲ್ಲ! ಆ ಸಮಯದಲ್ಲಿ ಡಾ|| ಅಶೋಕ ಪೈಗಳು ಧಾರವಾಡದ ಮನೋಹರ ಗ್ರಂಥಮಾಲದವರನ್ನು ಸಂಪರ್ಕಿಸುವ ಸಲಹೆ ಮಾಡಿದರು. ಉದಯೋನ್ಮುಖ ಬರಹಗಾರರ ಕೃತಿಗಳನ್ನು ಪ್ರಕಟಿಸುವಲ್ಲಿ ಅವರು ಮುಂದಾಗುತ್ತಾರೆಂಬ ಪ್ರತೀತಿ ಇತ್ತು. ಗ್ರಂಥಮಾಲೆಯ ವ್ಯವಸ್ಥಾಪಕ ನಿರ್ದೇಶಕರಾದ ರಮಾಕಾಂತ ಜೋಶಿಯವರಿಗೆ ಪತ್ರ ಬರೆದು ವಿಚಾರಿಸಿದೆ. ಆದಕ್ಕವರು ಸಮ್ಮತಿಸಿ ಉತ್ತರಿಸಿದಾಕ್ಷಣ ಹಸ್ತಪ್ರತಿಯನ್ನು ಕಳುಹಿಸಿದೆ.

ಗ್ರಂಥಮಾಲೆಯವರಿಂದ ಅಂತಿಮವಾಗಿ ಪ್ರಕಟಣೆಯಾಗುವುದಕ್ಕೆ ನಾಲ್ಕೈದು ವರ್ಷಗಳೇ ಹಿಡಿದವು. ಖ್ಯಾತ ಸಾಹಿತಿ ಹಾಗೂ ವಿಮರ್ಶಕ ಡಾ|| ಹಾ. ಮಾ. ನಾಯಕ ಅವರು ಅರ್ಥಪೂರ್ಣ ಮುನ್ನುಡಿ ಬರೆದಿದ್ದರು. ಶಿವಮೊಗ್ಗಾದ ಭಾರತೀಯ ವೈದ್ಯರ ಸಂಘ ಸಂಸ್ಥೆಗಳ ಸಹಕಾರದಿಂದ ೧೯೯೦ರ ಏಪ್ರಿಲ್‌ನಲ್ಲಿ ಅದರ ಬಿಡುಗಡೆ ಸಮಾರಂಭ ಜರುಗಿತು. ಖ್ಯಾತ ಸಾಹಿತಿಗಳಾದ ನಾ. ಡಿಸೋಜ, ಪ್ರೊ. ವೇಣುಗೋಪಾಲರಾವ್, ಪತ್ರಕರ್ತ ಸಂತೋಷ ಕುಮಾರ ಗುಲ್ವಾಡಿ ಮುಂತಾದವರು ಭಾಗವಹಿಸಿದ್ದರು. ಅವರೆಲ್ಲಾ ಡಾ|| ಶ್ವೆಯಿಟ್ಸರ್‌ನ ಆದರ್ಶ, ನಿಸ್ವಾರ್ಥ ಸೇವೆ ಮುಂತಾದ ಜೀವನದ ಮಾರ್ಗವನ್ನು ಮುಕ್ತ ಕಂಠದಿಂದ ಹೊಗಳಿದರು. ಯುವ ಜನರಿಗೆ ಆದರ್ಶದಂತಿರುವ ಈ ಜೀವನ ಚರಿತ್ರೆ ಪಠ್ಯ ಪುಸ್ತಕವಾಗಬೇಕೆಂದು ಹಾರೈಸಿದರು.

ಪುಸ್ತಕ ಪ್ರಕಟವಾದಾಗ ಹೊಗಳಿಕೆಯ ವಿಮರ್ಶೆಗಳ ಮಹಾಪೂರವೇ ಬಂದಂತಿತ್ತು. ಕನ್ನಡದ ಪ್ರಮುಖ ನಿಯತ ಕಾಲಿಕ/ ದಿನ ಪತ್ರಿಕೆಗಳೇ ಅಲ್ಲದೆ THE HINDU ಮತ್ತು INDIAN EXPRESS ಪತ್ರಿಕೆಗಳಲ್ಲೂ ವಿಮರ್ಶೆಯಾಗಿತ್ತು. ವಿಮರ್ಶೆಗಳ ಸಂಕ್ಷಿಪ್ತ ಉದ್ಧೃತ ಭಾಗಗಳನ್ನು ೨೦೦೦ರಲ್ಲಿ ಪ್ರಕಟವಾದ ಎರಡನೇ ಮುದ್ರಣದಲ್ಲಿ ಮುದ್ರಿಸಿರುವುದರಿಂದ ಪುನರುಚ್ಚರಿಸುವುದು ಸೂಕ್ತವೆನಿಸದು. ಇಂಗ್ಲಿಷ್ ವಿಮರ್ಶೆಯನ್ನು ಓದಿದ ಮದ್ರಾಸಿನ ಕನ್ನಡ ಬಾರದ ತಮಿಳು ಅಧಿಕಾರಿಯೊಬ್ಬರು ದೇಶ ಭಾಷೆಯಲ್ಲಿ ಮಹಾವ್ಯಕ್ತಿಯ ಜೀವನ ಚರಿತ್ರೆಯನ್ನು ಬರೆದಿದ್ದಕ್ಕೆ ಅಭಿನಂದಿಸಿ

ದ್ದರು; ಕನ್ನಡದ ವಿಮರ್ಶಕರೊಬ್ಬರು ಕನ್ನಡದಲ್ಲಿ ಆ ತನಕ ಪ್ರಕಟವಾದ ಮೂರ್‍ನಾಲ್ಕು ಉತ್ತಮ ಜೀವನ ಚರಿತ್ರೆಗಳ ಸಾಲಿಗೆ ಇದು ಸೇರುತ್ತದೆಂದು ಅಭಿಪ್ರಾಯಪಟ್ಟಿದ್ದರೆಂದರೆ ಸಾಕೆನಿಸುತ್ತದೆ.

ಶ್ವೆಯಿಟ್ಸರ್ ಜೀವನ ಚರಿತ್ರೆಯನ್ನು ವಿಮರ್ಶಿಸಿದವರೆಲ್ಲಾ ಅದು ಶಾಲಾ ಕಾಲೇಜುಗಳಲ್ಲಿ ಪಠ್ಯಪುಸ್ತಕವಾಗಬೇಕೆಂದು ಅಭಿಪ್ರಾಯ ಪಟ್ಟಿದ್ದರಷ್ಟೆ. ಬೆಂಗಳೂರು ವಿಶ್ವವಿದ್ಯಾಲಯದವರು ೧೯೯೧ರಲ್ಲಿ ಪಠ್ಯಪುಸ್ತಕಗಳ ಆಯ್ಕೆಯ ಬಗೆಗೆ ಹೊರಡಿಸಿದ ಜಾಹೀರಾತಿನಲ್ಲಿ, ಆ ಬಗೆಗೆ ಅಭಿಲಾಷೆ ಇರುವವರು ತಮ್ಮ ಕೃತಿಯ ೧೦ ಪ್ರತಿಗಳನ್ನು ಕಳುಹಿಸಬೇಕೆಂದು ಪ್ರಕಟಿಸಿದ್ದರು. ಅದರಂತೆ ಅಷ್ಟು ಪ್ರತಿಗಳನ್ನು ಕಳುಹಿಸಿದೆ. ಅದು ಆಯ್ಕೆಯಾಗಲಿಲ್ಲವೆಂಬುದನ್ನು ತಿಳಿಯಲು ಎರಡು ವರ್ಷಗಳೇ ಹಿಡಿದವು. ಪುಸ್ತಕ ಆಯ್ಕೆಯಾಗದಿರುವುದಕ್ಕೆ ಬೇಸರವಾಗದಿದ್ದರೂ ಆ ಪ್ರತಿಗಳು ಆಸಕ್ತ ಹತ್ತು ಜನರಿಗೆ ತಲುಪುವಂತಾಗಿದ್ದರೆ ಎಂದೆನಿಸಿತು. ಆದರೆ ಪುಸ್ತಕ ಪ್ರಕಟವಾದ ಹತ್ತು ವರ್ಷಗಳ ನಂತರ ಕುವೆಂಪು ವಿಶ್ವವಿದ್ಯಾಲಯದವರು ೨೦೦೦ - ೨೦೦೨ರ ಅವಧಿಗೆ ಪದವಿ ತರಗತಿಗಳಿಗೆ ಅವಿಸ್ತರ ಪಠ್ಯಪುಸ್ತಕವನ್ನಾಗಿ ಆರಿಸಿದರು. ಆ ಸಲುವಾಗಿ ಪುಸ್ತಕದ ಪ್ರತಿಗಳನ್ನು ಕಳುಹಿಸಿರಲಿಲ್ಲ; ಯಾರ ಮೇಲೂ ಪ್ರಭಾವ ಬೀರಿರಲಿಲ್ಲ. ಆಯ್ಕೆಯ ನಂತರ ಸ್ನೇಹಿತರು ಟೆಲಿಫೋನ್ ಮಾಡಿದಾಗಲೇ ನನಗೆ ತಿಳಿದದ್ದು. ಅದರಲ್ಲಿ ನನ್ನದೇನೂ ಹೆಚ್ಚುಗಾರಿಕೆ ಇಲ್ಲ; ಡಾ॥ ಆಲ್ಬರ್ಟ್ ಶ್ವೆಯಿಟ್ಸರ್‌ನ ಜೀವನವೇ ಪ್ರಭಾವಬೀರಿತ್ತೆಂದು ವಿನಮ್ರತೆಯಿಂದ ಹೇಳ ಬಯಸುತ್ತೇನೆ.

### ನವಕರ್ನಾಟಕ ಪ್ರಕಾಶನದವರ ಸಂಪರ್ಕ — ವಿಶ್ವವಿಖ್ಯಾತ ವೈದ್ಯವಿಜ್ಞಾನಿಗಳು

ಶ್ವೆಯಿಟ್ಸರ್ ಜೀವನ ಚರಿತ್ರೆಯ ಯಶಸ್ಸಿನಿಂದಾಗಿ ಇನ್ನೂ ಕೆಲವು ಪುಸ್ತಕಗಳನ್ನು ಬರೆಯಬಹುದೆಂಬ ಆತ್ಮವಿಶ್ವಾಸ ಉಂಟಾಯಿತು. ಆದರೆ ಅವುಗಳ ಪ್ರಕಟಣೆಯ ಸಮಸ್ಯೆ ನನ್ನನ್ನು ಬಾಧಿಸುತ್ತಿತ್ತು. ಸಾಹಿತಿ ಮಿತ್ರರರೊಬ್ಬರ ಮೂಲಕ ೧೯೯೧-೯೨ರ ಸಮಯದಲ್ಲಿ ಬೆಂಗಳೂರಿನ ಹೆಸರಾಂತ ನವಕರ್ನಾಟಕ ಪಬ್ಲಿಕೇಷನ್ಸ್ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕ ಆರ್. ಎಸ್. ರಾಜಾರಾಮ್‌ರೊಡನೆ ಸಂಪರ್ಕ ಉಂಟಾಯಿತು. ಮೊದಲ ಭೇಟಿಯ ಸಮಯದಲ್ಲೇ ಅವರಿಗೆ ನನ್ನ ಕೆಲವು ಕೃತಿಗಳ ಬಗೆಗೆ ತಿಳಿದಿದ್ದಿರಬಹುದೆನಿಸಿತು. ಕೆಲವು ಸುಪ್ರಸಿದ್ಧ ವೈದ್ಯವಿಜ್ಞಾನಿಗಳ ಬಗೆಗೆ ಸಂಕ್ಷಿಪ್ತವಾಗಿ '**ವಿಶ್ವವಿಖ್ಯಾತ ವೈದ್ಯವಿಜ್ಞಾನಿಗಳು**' ಎಂಬ ಕೃತಿಯೊಂದನ್ನು ಬರೆದು ಕೊಡಲು ಸಾಧ್ಯವೇ ಎಂದು ವಿಚಾರಿಸಿದರು. ಮೊದಲಿಗೆ ಸ್ವಲ್ಪ ಅಳುಕಿನಿಂದಲೇ ಸಮ್ಮತಿಸಿದೆ. ಅಂತಹ ಕೃತಿಯಲ್ಲಿ ಸೇರಿಸಬಹುದಾದ ಕೆಲವು ವೈದ್ಯವಿಜ್ಞಾನಿಗಳ ಪಟ್ಟಿಯನ್ನು ಅವರಾಗಲೇ ತಯಾರು ಮಾಡಿದಂತಿತ್ತು; ನಾನೂ ಮತ್ತೆ ಕೆಲವರ ಹೆಸರನ್ನು ಸೇರಿಸಿದೆ.

ಅಂತಹದೊಂದು ಕೃತಿಯನ್ನು ರಚಿಸುವಲ್ಲಿ ವಿಜ್ಞಾನಿಗಳ ಜೀವನ ಚರಿತ್ರೆಯ ಆಕರ ಗ್ರಂಥಗಳು ಲಭ್ಯವಿರಬೇಕಾಗುತ್ತದೆ. ಶಿವಮೊಗ್ಗೆಯಂಥ ಊರಲ್ಲಿ ಅವು ದೊರಕುವುದು ಅಸಾಧ್ಯವೆ. ಈ ದಿಸೆಯಲ್ಲಿ ಸುಮಾರು ೨೫-೩೦ ವರ್ಷಗಳಿಗಿಂತಲೂ ಹಿಂದಿನಿಂದ ರೂಢಿಸಿಕೊಂಡಿದ್ದ ಅಭ್ಯಾಸವೊಂದು ನನ್ನ ಸಹಾಯಕ್ಕೆ ಬಂದಿತು. ಈ ಹಿಂದೆ ಪ್ರಸ್ತಾಪ ಮಾಡಿದಂತೆ ವೈದ್ಯಕೀಯ/ಆರೋಗ್ಯದ ವಿಷಯಗಳ ಬಗೆಗೆ ಪಠ್ಯ ವಿಷಯಗಳಿಗೆ ಸಂಬಂಧಿಸದ ಸಾಮಾನ್ಯ ಜ್ಞಾನ ಗಳಿಸುವ ದೃಷ್ಟಿಯಿಂದ ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿದ್ದ ಬರಹ/ ಲೇಖನಗಳನ್ನು ಕತ್ತರಿಸಿಟ್ಟು ಕೊಂಡಿರುತ್ತಿದ್ದೆ (Paper cuttings). ಅವುಗಳನ್ನು ಯಾವುದೇ ವ್ಯವಸ್ಥಿತ ರೀತಿಯಲ್ಲಿ ಜೋಡಿಸಲು ಸಾಧ್ಯವಾಗಿರದಿದ್ದರೂ ನನ್ನಲ್ಲೀಗ ಅವು ರಾಶಿ ರಾಶಿಯಾಗಿ ಶೇಖರವಾಗಿವೆ.

ಮುಂದೆಂದಾದರೂ ನನ್ನ ಬರವಣಿಗೆಗೆ ಅವು ಸಹಾಯಕವಾಗಬಹುದೆಂಬ ಮುನ್ಸೂಚನೆ ಸುಪ್ತವಾಗಿತ್ತೋ ಏನೋ ನಾನರಿಯೆ. ಅವುಗಳೇ ಅಲ್ಲದೆ ವೈದ್ಯ ವಿಜ್ಞಾನದ ಇತಿಹಾಸದ ಬಗೆಗೂ ನನ್ನಲ್ಲಿ ಕೆಲವು ಗ್ರಂಥಗಳು ಶೇಖರವಾಗಿದ್ದವು. ಅವೆಲ್ಲದರ ನೆರವಿನಿಂದ ಸುಮಾರು ೩೦ ವೈದ್ಯ ವಿಜ್ಞಾನಿಗಳ ಬಗೆಗೆ ಒಬ್ಬೊಬ್ಬರಿಗೆ ಸಂಬಂಧಿಸಿದಂತೆಯೂ ಕೇವಲ ೨-೩ ಪುಟಗಳ ಕಿರು ಪ್ರಬಂಧಗಳನ್ನು ತಯಾರಿಸಲು ಸಾಧ್ಯವಾಯಿತು. ಪ್ರಾಚೀನ ಆಯುರ್ವೇದಾಚಾರ್ಯರಿಂದ ಹಿಡಿದು ಕ್ರಿಶ್ಚಿಯನ್ ಬರ್ನಾರ್ಡ್, ಹಾಗೂ ಭಾರತ ಸಂಜಾತ ಯಲ್ಲಾಪ್ರಗಡ ಸುಬ್ಬರಾವ್‌ರ ಜೀವನ ಚಿತ್ರಗಳು ಅದರಲ್ಲಿ ಮೂಡಿ ಬಂದಿದ್ದವು. ಮೊದಲು ೧೯೭೨ರಲ್ಲಿ ಪ್ರಕಟವಾದ ೧೩೪ ಪುಟಗಳ ಹೊತ್ತಿಗೆಯು ಈಗ ಐದನೆಯ ಮುದ್ರಣ ಕಂಡಿದೆ.

## ವೈದ್ಯಲೋಕದ ಕೌತುಕಗಳು

'ವಿಶ್ವವಿಖ್ಯಾತ ವೈದ್ಯ ವಿಜ್ಞಾನಿಗಳು' ರಚನೆಯಲ್ಲಿ ತೊಡಗಿರುವಾಗಲೇ ರಾಜಾರಾಮ್ ಅವರು "**ವೈದ್ಯಲೋಕದ ಕೌತುಕಗಳು**" ಎಂಬ ಕೃತಿಯನ್ನು ಬರೆಯಬಹುದಾದ ಸಾಧ್ಯತೆಯನ್ನು ನನ್ನ ಮುಂದಿಟ್ಟರು; ಅಂತಹ ಪುಸ್ತಕವನ್ನು ಬರೆಯಲು ಅವಶ್ಯವಾಗುವ 'ಸರಕು' ನನ್ನಲ್ಲಿರಬಹುದೆಂದು ಭಾವಿಸಿದಂತಿತ್ತು. ಅದಕ್ಕೂ ಸಮ್ಮತಿಸಿದೆ. ನನ್ನಲ್ಲಿದ್ದ ಪೇಪರ್ ಕಟ್ಟಿಂಗ್ ಮತ್ತಿತರ ಪುಸ್ತಕಗಳನ್ನು ತಡಕಾಡಿದಾಗ ನಾನೇ ಅಚ್ಚರಿ ಪಡುವಷ್ಟು ಆಕರ ಸಾಮಗ್ರಿ ಇರುವುದು ತಿಳಿಯಿತು. ವೈದ್ಯಕೀಯ ಕ್ಷೇತ್ರದ ಸುಮಾರು ೨೮ ವಿಷಯಗಳನ್ನು ಆರಿಸಿಕೊಂಡು ನಾಲ್ಕಾರು ಪುಟಗಳ ಪ್ರಬಂಧಗಳನ್ನು ಬರೆಯತೊಡಗಿದೆ. ಕುತೂಹಲಕರ ಸನ್ನಿವೇಶಗಳ ಹಿನ್ನೆಲೆಗಳನ್ನು ಪ್ರಸ್ತಾಪಿಸಿ ಲಘು ಹರಟೆಯ ಧಾಟಿಯಲ್ಲಿ ಸೋದಾಹರಣ ರೀತಿಯ ಬರಹಗಳನ್ನು ತಯಾರು ಮಾಡಿದೆ. ಸುಮಾರು ೧೮೫ ಪುಟಗಳ, ಹಲವು ರೇಖಾ ಚಿತ್ರಗಳನ್ನೊಳಗೊಂಡ ಪುಸ್ತಕ ೧೯೭೩ರಲ್ಲಿ ನವಕರ್ನಾಟಕದಿಂದ ಪ್ರಕಟವಾಯಿತು. ವಿಮರ್ಶಕರೊಬ್ಬರು ಸಸ್ಯವಿಜ್ಞಾನಿ ಬಿ.ಜಿ.ಎಲ್. ಸ್ವಾಮಿಯವರ ಲೇಖನಗಳು ಆಸಕ್ತಿ ಕೆರಳಿಸುವ ರೀತಿಯ ಪ್ರಬಂಧಗಳಿವು ಎಂದಿದ್ದರು. ಕೆಲವು ವರ್ಷಗಳ ನಂತರ ಕೃತಿಯನ್ನು ಓದಿದ ಗಿರಡ್ಡಿ ಗೋವಿಂದ ರಾಜು (ಕರ್ನಾಟಕ ಸಾಹಿತ್ಯ ಅಕಾಡೆಮಿ ಅಧ್ಯಕ್ಷರು) "ಪುಸ್ತಕ



ಕರ್ನಾಟಕ ಸಾಹಿತ್ಯ ಅಕಾಡೆಮಿ ಪುರಸ್ಕಾರ (ವಿಜ್ಞಾನ ಸಾಹಿತ್ಯ) ೧೯೭೩ - ತುಮಕೂರು

ಕುತೂಹಲದಿಂದ ಓದಿಸಿಕೊಂಡು ಹೋಯಿತು. ಅನೇಕ ವೈದ್ಯಕೀಯ ಪರಿಕಲ್ಪನೆಗಳನ್ನು ಸರಳವಾಗಿ ನಮ್ಮಂಥ ಸಾಮಾನ್ಯ ಓದುಗರಿಗೂ ಅರ್ಥವಾಗುವಂತೆ ನಿರೂಪಿಸಿದ್ದೀರಿ. ಪಾರಿಭಾಷಿಕ ಶಬ್ದಗಳನ್ನು ಭಾರವಾಗದಂತೆ ನಿವಾರಿಸಿ ಬಳಸಿದ್ದೀರಿ. ಅಲ್ಲಲ್ಲಿ ಬರವಣಿಗೆ ನಾಟಕೀಯತೆ ಪಡೆದುಕೊಂಡು ರೋಚಕವಾಗುತ್ತದೆ. ವೈದ್ಯಕೀಯ ವಿಷಯಗಳ ನಿರೂಪಣೆಗೆ ತಕ್ಕುದಾದ ಬರವಣಿಗೆಯನ್ನು ಸಾಧಿಸಿದ್ದೀರಿ, ಅಭಿನಂದನೆಗಳು" ಎಂದು ಬರೆದಿದ್ದರು. ಅದು ಪ್ರಕಟವಾದ ವರ್ಷದಲ್ಲೇ (೧೯೯೩) **ಕರ್ನಾಟಕ ಸಾಹಿತ್ಯ ಅಕಾಡೆಮಿ ಪುಸ್ತಕ ಪುರಸ್ಕಾರ** ಲಭಿಸಿದ್ದು ನನ್ನ ಸಾಹಿತ್ಯ ಕೃಷಿಯ ಸಾರ್ಥಕತೆ ಎಂದು ಕೊಳ್ಳುತ್ತೇನೆ. ಅದೀಗ ಮೂರು ಸಾರಿ ಮರುಮುದ್ರಣವಾಗಿದೆ.

## ಸಾಮಾನ್ಯ ಶಸ್ತ್ರ ವೈದ್ಯದ ಕಾಯಿಲೆಗಳು

ಬಿಡಿಲೇಖನಗಳನ್ನು ಬರೆಯುವದರಲ್ಲಿ ತೊಡಗಿದ್ದಾಗ ಬಹುಪಾಲು ಲೇಖನಗಳು ಶಸ್ತ್ರಚಿಕಿತ್ಸಾ ವಿಧಾನಗಳಿಂದ ಗುಣಪಡಿಸಬಹುದಾದ ಕಾಯಿಲೆಗಳನ್ನು ಕುರಿತಾದವಾಗಿರುತ್ತಿದ್ದವು. ಸುಮಾರು ೧೯೯೦ರ ಸಮಯಕ್ಕೆ ಅಂತಹ ಸಾಕಷ್ಟು ಲೇಖನಗಳು ವಿವಿಧ ನಿಯತಕಾಲಿಕಗಳಲ್ಲಿ ಪ್ರಕಟವಾಗಿದ್ದವು. ಶಸ್ತ್ರ ವೈದ್ಯದ ಕಾಯಿಲೆಗಳ ಬಗೆಗೇ ಒಂದು ಗ್ರಂಥವನ್ನು ಬರೆಯುವ ತುಡಿತ ನನ್ನಲ್ಲುಂಟಾಗ ತೊಡಗಿತು. ಆ ತನಕ ಪ್ರಕಟವಾದ ಲೇಖನಗಳನ್ನು ಪರಿಷ್ಕರಿಸಿ, ಶಸ್ತ್ರ ಚಿಕಿತ್ಸೆಯ ಇತಿಹಾಸ, ಜರುಗಿಸುವ ಮೊದಲಿನ ತಯಾರಿ, ರೋಗ ನಿದಾನ, ಹಾಗೂ ಅರಿವಳಿಕೆಯ ಸುರಕ್ಷತೆ ಮುಂತಾದ ವಿಷಯಗಳ ಬಗೆಗೆ ಸೂಕ್ತ ಪೀಠಿಕೆಯನ್ನು ಸೇರಿಸಿ ಸುಮಾರು ೪೦೦ ಪುಟಗಳ ಹಸ್ತ ಪ್ರತಿಯನ್ನು ತಯಾರಿಸಿದೆ.

ಎಂದಿನಂತೆ ಪ್ರಕಟಣೆಯ ಸಮಸ್ಯೆ ಪೆಡಂಭೂತವಾಗಿ ಬೆನ್ನುಹತ್ತಿತು. ತಾಂತ್ರಿಕ ವಿಷಯಗಳನ್ನು ಕುರಿತ ಅಷ್ಟೊಂದು ಹಿರಿಯ ಗಾತ್ರದ ಪುಸ್ತಕ ಪ್ರಕಟಣೆಯನ್ನು ಕೈಗೆತ್ತಿಕೊಳ್ಳಲು ಪ್ರಕಾಶಕರಾರೂ ಮುಂದಾಗಲಿಲ್ಲ. ಮೈಸೂರು ವಿಶ್ವವಿದ್ಯಾಲಯದ ಪ್ರಸಾರಾಂಗದಲ್ಲಿದ್ದ ಪರಿಚಿತರೊಬ್ಬರು, ಪ್ರಕಟಿಸುವ ಭರವಸೆ ಇತ್ತು, ಹಸ್ತಪ್ರತಿಯನ್ನು ಪಡೆದುಕೊಂಡರು. ಮುಂದೆ ಒಂದೆರಡು ವರ್ಷಗಳು ಸಂದರೂ ಆ ಬಗೆಗೆ ಪ್ರಗತಿಯಾಗಲಿಲ್ಲ. ಅವರಿಂದ ಅದಾಗದೆಂದು ತಿಳಿದು ಹಸ್ತ ಪ್ರತಿಯನ್ನು ವಾಪಸು ಪಡೆದುಕೊಂಡೆ. ಅಷ್ಟರಲ್ಲಿ ಹಂಪಿಯಲ್ಲಿ ಕನ್ನಡ ವಿಶ್ವವಿದ್ಯಾಲಯ ಆರಂಭವಾಗಿದ್ದು ಡಾ॥ ಚಂದ್ರಶೇಖರ ಕಂಬಾರರು ಕುಲಪತಿಯಾಗಿ ಉತ್ಸಾಹದಿಂದ ಕಾರ್ಯನಿರತರಾಗಿದ್ದರು. ಅವರು ಪ್ರಕಟಿಸಲು ಯೋಜಿಸಿದ್ದ '**ವೈದ್ಯ ವಿಶ್ವಕೋಶ**'ದ ಬಗೆಗೆ ವೈದ್ಯ ಸಾಹಿತ್ಯಾಸಕ್ತರ ಸಭೆಯೊಂದಕ್ಕೆ ಆಹ್ವಾನಿತನಾಗಿ ನಾನೂ ಬೆಂಗಳೂರಿಗೆ ಹೋಗಿದ್ದೆ. ಸಭೆ ಮುಗಿದ ನಂತರ **ಸಾಮಾನ್ಯ ಶಸ್ತ್ರವೈದ್ಯದ ಕಾಯಿಲೆಗಳು** ಹಸ್ತ ಪ್ರತಿಯನ್ನು ಡಾ॥ ಕಂಬಾರರ ಕೈಗಿತ್ತೆ. ಅದರ ಪುಟಗಳನ್ನು ತಿರುವಿ ಹಾಕಿದ ಅವರು ಪ್ರಕಟಣೆಯ ನಿರ್ಧಾರವನ್ನು ಒಂದೆರಡು ವಾರಗಳಲ್ಲೇ ತಿಳಿಸುವುದಾಗಿ ಹೇಳಿ ಅದನ್ನು ತಮ್ಮ ವಶಕ್ಕೆ ತೆಗೆದುಕೊಂಡರು.

ಅವರು ಹಾಗೆಯೇ ಮಾಡಿದರು. ಅದರ ಮುದ್ರಣ ಕಾರ್ಯ ಶಿವಮೊಗ್ಗಾದಲ್ಲೇ ಇರುವ ಅತ್ಯಾಧುನಿಕ '**ಪ್ರಗತಿ ಪ್ರಿಂಟರ್ಸ್**'ನಲ್ಲಿ ಜರುಗಿಸಲು ಸಾಧ್ಯವಾದರೆ, ಅದರ ಕರಡಚ್ಚನ್ನು ನಾನು ಪರಿಶೀಲಿಸಲು ಅನುಕೂಲವಾಗುತ್ತದೆಂಬ ನನ್ನ ಸಲಹೆಗೂ ಒಪ್ಪಿದರು. ಅದರಂತೆ ಶಿವಮೊಗ್ಗಾದಲ್ಲೇ ಮುದ್ರಿತವಾಯಿತು.

ಈ ಕೃತಿಯ ಹಸ್ತ ಪ್ರತಿಯನ್ನು ಮೈಸೂರಿಗೆ ಹೋಗಿದ್ದಾಗ ರಾಷ್ಟ್ರಕವಿ ಕುವೆಂಪು ಅವರನ್ನು ಭೇಟಿಯಾಗಿ ತೋರಿಸಿದ್ದೆ. ಅದರಲ್ಲಿ ಅಡಕವಾಗಿರುವ ವಿಷಯಗಳು ಮತ್ತು

ಚಿತ್ರಗಳನ್ನು ಅವಲೋಕಿಸಿ ಶಸ್ತ್ರ ಚಿಕಿತ್ಸೆಯಂತಹ ತಾಂತ್ರಿಕ ವಿಷಯದ ಬಗೆಗೆ ಕನ್ನಡದಲ್ಲಿ ಕೃತಿ ಹೊರಬರುತ್ತಿರುವುದಕ್ಕೆ ಹರ್ಷ ವ್ಯಕ್ತಪಡಿಸಿ, ಹರಸಿದ್ದರು. ಅದು ಅಂತಿಮವಾಗಿ ಪ್ರಕಟವಾದಾಗ ಕನ್ನಡ ಭಾಷೆ, ಹಾಗೂ ಅದರಲ್ಲೂ ವಿಜ್ಞಾನ ಸಾಹಿತ್ಯ ರಚನೆಯಾಗಬೇಕೆಂದು ಪ್ರತಿಪಾದಿಸುವ ಮುಂಚೂಣಿಯಲ್ಲಿದ್ದ ಅವರಿಗೇ ಕೃತಿಯನ್ನು ಅರ್ಪಣೆ ಮಾಡಿದೆ. ಅಲ್ಲದೆ ಮಂಗಳೂರಲ್ಲಿ ಎಂ.ಎಸ್. ಪದವಿಯ ತರಬೇತಿ ಪಡೆಯುವಲ್ಲಿ ನನಗೆ ಮಾರ್ಗದರ್ಶಕರಾಗಿದ್ದ ಡಾ॥ ಎಂ. ಪಿ. ಪೈಯವರು ಮುನ್ನುಡಿ ಬರೆದುಕೊಡುವಂತೆ ವಿನಂತಿಸಿದೆ. ಅವರೂ ಸಹ ಅದನ್ನು ಪರಾಮರ್ಶಿಸಿ ವಿಮರ್ಶಾತ್ಮಕ ಮುನ್ನುಡಿಯನ್ನು ಬರೆದುಕೊಟ್ಟರು. ಕನ್ನಡ ವಿಶ್ವವಿದ್ಯಾಲಯದವರ ಸಮಾರಂಭ ವೊಂದರಲ್ಲಿ ಮುಂದೆ ಬಿಡುಗಡೆಯಾಯಿತು.

ಈ ಕೃತಿಯ ಬಗೆಗೆ ವ್ಯಕ್ತವಾದ ಒಂದೆರಡು ಅಭಿಪ್ರಾಯಗಳನ್ನು ಸಂಕ್ಷಿಪ್ತವಾಗಿ ದಾಖಲಿ ಸಲಿಚ್ಚಿಸುತ್ತೇನೆ. ಕನ್ನಡ ವಿಶ್ವವಿದ್ಯಾಲಯದ '**ಪುಸ್ತಕ ಮಾಹಿತಿ**'ಯಲ್ಲಿ ಡಾ॥ ಎಚ್. ಎಸ್. ಶ್ರೀಮತಿ ಯವರು ಬರೆಯುತ್ತಾ (ಮೊದಲ ಪ್ಯಾರಾದಲ್ಲಿ ಬೇರೊಬ್ಬರ ಕೃತಿಯ ಬಗೆಗೆ ಅಸಮಾಧಾನ ವ್ಯಕ್ತ ಪಡಿಸಿದ ನಂತರ).... "ಸಾಮಾನ್ಯ ಶಸ್ತ್ರ ವೈದ್ಯದ ಕಾಯಿಲೆಗಳು' ಮೇಲೆ ಹೇಳಿದ ಸಮಸ್ಯೆಗಳನ್ನೆಲ್ಲಾ ಎದುರಿಸಿದೆ ಎನ್ನಬಹುದು. ಇಲ್ಲಿನ ವಸ್ತು ಸಾಕಷ್ಟು ಸಂಕೀರ್ಣವಾದ ತಾಂತ್ರಿಕ ವಿವರಗಳನ್ನು, ಪಾರಿಭಾಷಿಕ ಪದಗಳ ಬಳಕೆಯನ್ನು ಹೊಂದಿರುವಂತಹದು. ಡಾ॥ ಎಚ್. ಡಿ. ಚಂದ್ರಪ್ಪಗೌಡರು '**ಜನಪ್ರಿಯ ವಿಜ್ಞಾನ ಸಾಹಿತ್ಯ**' ಎಂಬ ಗುಂಪಿಗೆ ಸುಲಭವಾಗಿ ಸೇರಿಸಲಾಗದ ಇಂಥ ವಸ್ತುವನ್ನು ಕನ್ನಡದಲ್ಲಿ ಹೇಳುವಲ್ಲಿ ಸಮರ್ಥರಾಗಿದ್ದಾರೆ. ಗ್ರಂಥದ ಕೊನೆಯ ಅಕಾರಾದಿಯಲ್ಲಿ ಕೊಟ್ಟಿರುವ ಪಾರಿಭಾಷಿಕ ಪದಗಳ ಅರ್ಥಕೋಶ ಇಂಥ ಸಾಹಿತ್ಯವನ್ನು ಬೆಳಸಿ, ಬಳಸುವಲ್ಲಿ ತುಂಬಾ ಉಪಯುಕ್ತವಾದುದಾಗಿದೆ; ಕನ್ನಡದ್ದೇ ಆದ ಪಾರಿಭಾಷಿಕ ಪದಗಳನ್ನು ಸೃಷ್ಟಿಸುವ ಆಶಾದಾಯಕ ಸಾಧ್ಯತೆಗಳನ್ನು ಈ ಕೃತಿ ಸ್ಪಷ್ಟವಾಗಿ ತೋರಿದೆ".

'**ಕರ್ಮವೀರ**' ವಾರಪತ್ರಿಕೆಯಲ್ಲಿ ಡಾ॥ ಹಾ. ಮಾ. ನಾಯಕರು "ಡಾ॥ ಚಂದ್ರಪ್ಪ ಗೌಡರು... ಶಸ್ತ್ರ ಚಿಕಿತ್ಸಕರಾಗಿ ಹೆಸರು ಮಾಡಿದವರು. ಈ ಪುಸ್ತಕವು ಅವರ ತಿಳಿವಳಿಕೆಯ ಆಳ ವ್ಯಾಪ್ತಿಗಳನ್ನು ಪರಿಚಯಿಸುತ್ತದೆ. ವೈದ್ಯಕೀಯ ಕ್ಷೇತ್ರದ ...... ಒಂದು ಪ್ರಕಾರಕ್ಕೆ ಸಂಬಂಧಿಸಿದಂತೆ '**ಸಾಮಾನ್ಯ ಶಸ್ತ್ರ ವೈದ್ಯದ ಕಾಯಿಲೆಗಳು**' ಗಮನಾರ್ಹವಾದ ಮೊದಲನೆಯ ಕನ್ನಡ ಪುಸ್ತಕ. .

"ಇಂಥ ತಾಂತ್ರಿಕ ಪುಸ್ತಕಗಳಲ್ಲಿ ಪಾರಿಭಾಷಿಕ ಪದಗಳದ್ದೇ ದೊಡ್ಡ ಸಮಸ್ಯೆಯೆಂದು ಇಂದೂ ಅನೇಕರು ಹೇಳುತ್ತಾರೆ. ನಿಜದಲ್ಲಿ ಅದು ಸಮಸ್ಯೆಯೇ ಅಲ್ಲ! ಕೆಲವರು ಪ್ರತಿಯೊಂದು ಪದಕ್ಕೂ ಸಂವಾದಿಯಾದ ದೇಶಭಾಷಾ ಪದವೊಂದನ್ನು ಸೃಷ್ಟಿಸಲು ಪ್ರಯತ್ನಿಸುತ್ತಾರೆ; ಇನ್ನು ಕೆಲವರು ಎಲ್ಲಾ ಪದಗಳನ್ನು ಎರವಲಾಗಿ ಎತ್ತಿಕೊಳ್ಳುತ್ತಾರೆ. ಈ ಎರಡೂ ತುದಿಗಳಿಗೂ ನಡುವಿನ ಮಾರ್ಗವೊಂದಿದೆ ಎಂಬುದನ್ನು ಡಾ॥ ಚಂದ್ರಪ್ಪಗೌಡರು ತೋರಿಸಿಕೊಟ್ಟಿದ್ದಾರೆ. ನಮ್ಮಲ್ಲಿರುವ ಬಳಕೆಯ ಪದಗಳನ್ನು ಬಳಸಿಕೊಳ್ಳುವುದರಲ್ಲಿ ತೊಂದರೆ ಏನೂ ಇಲ್ಲ. ಆದರೆ ಪದಗಳ ಸೃಷ್ಟಿಗೆ ತೊಡಗಿದಾಗ ತೊಂದರೆಗಳೂ ತೊಡಗುತ್ತವೆ. ವೈದ್ಯಕೀಯದಂಥ ಕ್ಷೇತ್ರಗಳಲ್ಲಿ ಹೀಗೆ ಪದಗಳ ಸೃಷ್ಟಿಗೆ ಹೋಗಬಾರದು. ಎಲ್ಲಿ ಅಗತ್ಯವೋ, ಉಚಿತವೋ, ಅಲ್ಲಿ ಮೂಲ ಪದಗಳನ್ನೇ ಉಳಿಸಿ ಕೊಳ್ಳುವುದೇ ಜಾಣ ಮಾರ್ಗ; ಗೌಡರು ಈ ಕೆಲಸವನ್ನು ಪರಿಣಾಮಕಾರಿಯಾಗಿಯೇ ಮಾಡಿದ್ದಾ ರೆಂದು ಹೇಳಬೇಕು. ಅವರ ಬರವಣಿಗೆ ಯಾವುದೇ ಕಾರಣದಿಂದಲೂ ಜಡಕಾದುದಲ್ಲ; ಕ್ಲಿಷ್ಟವಾದುದಲ್ಲ; ಅದು ಸಂವಹನವನ್ನು ಕಳೆದುಕೊಳ್ಳುವುದಿಲ್ಲ. ಇದೇ ನಿಜವಾದ ಸಾಧನೆ.

"ಕನ್ನಡದಲ್ಲಿ ವೈದ್ಯಕೀಯ ಸಾಹಿತ್ಯವನ್ನು ಬೆಳಸಿದವರಲ್ಲಿ ಡಾ॥ ಚಂದ್ರಪ್ಪಗೌಡರ ಹೆಸರು ನಿಚ್ಚಳವಾಗಿ ಕಾಣಿಸಿಕೊಳ್ಳುತ್ತದೆ. ಈ ಯಶಸ್ಸಿನ ಒಂದು ಗರಿ ಪ್ರಸ್ತುತ ಪುಸ್ತಕವೆಂದರೆ ತಪ್ಪಾಗುವುದಿಲ್ಲ. ಇದರಿಂದ ಡಾ॥ ಎಂ. ಪಿ. ಪೈಗಳು ಹೇಳಿರುವಂತೆ ಕನ್ನಡ ಭಾಷೆ, ಮತ್ತು ಕನ್ನಡಿಗರಿಗೆ ಉಪಕಾರ ಮಾಡಿದ್ದಾರೆ" ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದರು. ಈ ಪುಸ್ತಕಕ್ಕೆ ೧೯೯೩ರ **'ಆರ್ಯಭಟ ಸಾಹಿತ್ಯ ಪ್ರಶಸ್ತಿ'** ದೊರೆತದ್ದು ಒಂದು ರೀತಿ ಸಂತೃಪ್ತಿಯುಂಟು ಮಾಡಿತು.

ಆದರೆ ಅದರ ಬಗೆಗೆ ಉಂಟಾದ ಅಸಂತೃಪ್ತಿಯೊಂದನ್ನು ವ್ಯಕ್ತಪಡಿಸದಿರಲಾರೆ. ಡಾ॥ ಕಂಬಾರರು ಶಿವಮೊಗ್ಗೆಯಲ್ಲಿ ಭಾಗವಹಿಸುವ ಸಮಾರಂಭವೊಂದರಲ್ಲಿ ಈ ಕೃತಿಯನ್ನೂ ಬಿಡುಗಡೆ ಮಾಡುವ ಬಗೆಗೆ ಪ್ರಸ್ತಾಪ ಮಾಡಿದ್ದರು. ಅವರೂ ಸೇರಿದಂತೆ ಇತರ ಕೆಲವು ಪ್ರತಿಭಾವಂತರಿಗೆ ಸನ್ಮಾನ ಸಮಾರಂಭವನ್ನು ಪ್ರತಿಭಾವಂತರನ್ನು ಸತ್ಕರಿಸುವುದನ್ನೇ ತನ್ನ ಧ್ಯೇಯವಾಗಿಟ್ಟುಕೊಂಡಿದೆ ಎಂದು ಬೀಗುವ ಸಂಸ್ಥೆಯವರು ಏರ್ಪಡಿಸಿದ್ದರೆಂದು ತಿಳಿಯಿತು. ನನ್ನ ಪುಸ್ತಕ ಬಿಡುಗಡೆಯನ್ನೂ ಆ ಕಾರ್ಯಕ್ರಮದಲ್ಲಿ ಅಳವಡಿಸುವ ಬಗೆಗೆ ಅದರ ಮುಖ್ಯಸ್ಥರನ್ನು ಸಂಪರ್ಕಿಸುವ ಪ್ರಯತ್ನ ಮಾಡಿದೆ. ಸತತವಾಗಿ ಒಂದು ವಾರ ನಾನೇ ಅಲ್ಲದೆ ಇತರ ಕೆಲವರು ಅವರನ್ನು ಸಂಪರ್ಕಿಸುವ ಪ್ರಯತ್ನ ಮಾಡಿದೆವು. 'ಅವರು ಊರಲಿಲ್ಲ, ಸಂಜೆ ಬರುತ್ತಾರೆ, ನಾಳೆ ಬರುತ್ತಾರೆ' ಎಂಬ ಉತ್ತರಗಳು ಕಾದಿರುತ್ತಿದ್ದವು. ಅಂತೂ ಸಮಾರಂಭದ ದಿನ ಅವರು ಬಂದೇ ಬಿಟ್ಟರು; ಇತರರಿಗೆ ಸತ್ಕಾರಗಳಾದವು; ಮಿಗಿಲಾಗಿ ಅವರೂ ಸಹಾ ಅದೇ ಸಮಾರಂಭದಲ್ಲಿ ಸತ್ಕರಿಸಿಕೊಂಡರು! ಇಂತಹ ಘಟನೆಗಳು ಕೆಲಸಮಯ ಮನಸ್ಸಿನ ಸ್ವಾಸ್ಥ್ಯವನ್ನು ಕೆಡಿಸಬಹುದು; ಆದರೆ ಪ್ರತಿಭೆಯನ್ನು ಹತ್ತಿಕ್ಕಲಾರವಷ್ಟೆ.

## ಭಟ್ಟಿ ಜಾರುವುದರಿಂದ — ಕಂಪ್ಯೂಟರ್ ಕಥೆಯವರೆಗೆ...

'ಭಟ್ಟಿ ಜಾರುವುದು' ಎಂಬುದು ಜನ ಸಾಮಾನ್ಯರಲ್ಲಿ ಅನಾದಿಯಿಂದಲೂ ನೆಲಸಿರುವ ಒಂದು (ಮೂಢ) ಕಲ್ಪನೆ; ಕಂಪ್ಯೂಟರ್ ತೀರಾ ಇತ್ತೀಚಿನ ದಿನಗಳಲ್ಲಿ ಉಗಮಿಸಿ ಆಧುನಿಕ ಜನಜೀವನದ ಮಾರ್ಗದ ಮೇಲೆ ತೀವ್ರ ಪರಿಣಾಮ ಬೀರಲಾರಂಭಿಸಿದೆ. ಹಳ್ಳಿಗಾಡಿನ ಹಿನ್ನೆಲೆ ಇದ್ದ ನನಗೆ ಭಟ್ಟಿ ಜಾರಿಕೆ ಬಗೆಗೆ ಸಾಕಷ್ಟು ತಿಳಿವಳಿಕೆ ಇತ್ತು; ಕಂಪ್ಯೂಟರ್ ವಿಜ್ಞಾನದ ಬಗೆಗೆ ತಿಳಿವಳಿಕೆಗಿಂತ ಅಜ್ಞಾನವೇ ನನ್ನಲ್ಲಿದ್ದುದು. ಅವೆರಡರ ಬಗೆಗೆ ಏಕಕಾಲದಲ್ಲಿ ಬರವಣಿಗೆಯಲ್ಲಿ ತೊಡಗುವಂತಾದುದು ಕಾಕತಾಳೀಯವಿರಬಹುದೇನೋ.

ಕನ್ನಡ ಸಾಹಿತ್ಯ ಪರಿಷತ್ತಿನವರು ೧೯೯೦ರ ಸಮಯದಲ್ಲಿ ನವ ಸಾಕ್ಷರಿಗಳಿಗಾಗಿ ಕಿರು ಪುಸ್ತಕಗಳ ಹಸ್ತ ಪ್ರತಿಗಳನ್ನು ಆಹ್ವಾನಿಸಿದ್ದರು. ಹೊಸದಾಗಿ ಅಕ್ಷರಸ್ಥರಾದವರಿಗೆ ಹಳ್ಳಿಗಾಡಿನಲ್ಲಿ ವ್ಯಾಪಕವಾಗಿ ಆಚರಣೆಯಲ್ಲಿರುವ **'ಭಟ್ಟಿ ಕಟ್ಟುವ'** ಪದ್ಧತಿಯಿಂದುಂಟಾಗುವ ಅನಾಹುತಗಳ ಬಗೆಗೆ ಬರೆಯುವ ಮನಸ್ಸಾಯಿತು. ಅದೇ ಸಮಯದಲ್ಲೇ ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತಿನವರಿಂದ (ಕ.ರಾ.ವಿ.ಪ.) ೯ ರಿಂದ ೧೪ರ ವಯೋಮಾನದವರಿಗೆ ಕಂಪ್ಯೂಟರ್ ಬಗೆಗೆ ಕಿರು ಹೊತ್ತಿಗೆಯನ್ನು ಬರೆದು ಕೊಡಲು ಸಾಧ್ಯವೇ ಎಂದು ಬರೆದ ಪತ್ರವೂ ತಲುಪಿತು. ನಾನು ವೈದ್ಯಕೀಯ ವಿಷಯಗಳ ಬಗೆಗೆ ಬರೆಯುವ ಹವ್ಯಾಸದವನೆಂಬುದು ಅವರಿಗೆ ಗೊತ್ತಿದ್ದ ವಿಚಾರವಾದರೂ ಕಂಪ್ಯೂಟರ್ ಬಗೆಗೆ ಬರೆಯಲು ನನಗೇಕೆ ಬರೆದರೆಂಬುದು ವಿಸ್ಮಯ ಉಂಟು ಮಾಡಿತು. ಪ್ರಸ್ತಾವವನ್ನು ನಿರಾಕರಿಸಿ ಪತ್ರ ಬರೆಯುವ ಮನಸ್ಸಾದರೂ ಅದನ್ನೊಂದು ಪಂಥಾಹ್ವಾನವೆಂದೇಕೆ ಸ್ವೀಕರಿಸಬಾರದೆಂಬ ನಿರ್ಧಾರ ಮಾಡಿದೆ; ಕ.ರಾ.ವಿ.ಪ. ದವರಿಗೆ ಸಮ್ಮತಿ ನೀಡಿದೆ.

ಕಂಪ್ಯೂಟರ್ ವಿಜ್ಞಾನದ ಬಗೆಗೆ ಇಂಗ್ಲಿಷ್‌ನಲ್ಲಿ ಪ್ರಕಟವಾದ ಜನಪ್ರಿಯ ಪುಸ್ತಕವನ್ನು ಕೊಂಡು ತಂದು ಶ್ರದ್ಧೆಯಿಂದ ಅಭ್ಯಾಸ ಮಾಡಿದೆ. ಕಂಪ್ಯೂಟರ್ ತತ್ವದ ಬಗೆಗಿನ ಸಿದ್ಧಾಂತದ ವಿಕಾಸ, ಮುಂದೆ ಬೆಳವಣಿಗೆಯಾದ ವಿವಿಧ ಹಂತಗಳು ಹಾಗೂ ಅದೀಗ ತಲುಪಿರುವ ಮಟ್ಟಗಳನ್ನು ಎಳೆಯರಿಗೆ ಮನವರಿಕೆಯಾಗುವಂತೆ ತಿಳಿಸುವ ಹಂಬಲವಾಯಿತು. ಆ ವಯಸ್ಸಿನವರಿಗೆ ಕಂಪ್ಯೂಟರ್ ಬಗೆಗಿನ ವಿವರಗಳನ್ನು ನೇರವಾಗಿ ಬರೆದು ತಿಳಿಸುವ ಬದಲು ಅದೆಲ್ಲಾ ಅಜ್ಜ-ಮೊಮ್ಮಗನ ನಡುವೆ ಜರುಗುವ ಆತ್ಮೀಯ ಸಂಭಾಷಣೆಯ ರೂಪದಲ್ಲಿ ಹಸ್ತ ಪ್ರತಿಯನ್ನು ತಯಾರು ಮಾಡಿದೆ. ಆ ವಿಷಯಕ್ಕೆ ಹೊರಗಿನವನಾಗಿದ್ದರಿಂದ ಇಂಜಿನಿಯರಿಂಗ್ ಕಾಲೇಜಿನ ಕಂಪ್ಯೂಟರ್ ತಜ್ಞರೊಬ್ಬರ ಪರಿಶೀಲನೆಗೊಳಪಡಿಸಿ ಓರೆ-ಕೋರೆಗಳನ್ನು ಸರಿಪಡಿಸಿಕೊಂಡೆ.

ಒಂದೇ ಅವಧಿಯಲ್ಲಿ ತಯಾರಾದ '**ಭಟ್ಟಿ ಜಾರುವುದು**' ಮತ್ತು '**ಕಂಪ್ಯೂಟರ್ ಕಥೆ**'ಯ ಹಸ್ತ ಪ್ರತಿಗಳನ್ನು ಒಂದೇ ಸಾರಿ ಆಯಾ ಪ್ರಕಾಶಕರಿಗೆ ಕಳುಹಿಸಿದೆ. ಕ.ರಾ.ವಿ.ಪ.ದವರಿಗೆ ಬರೆದ ಪತ್ರದಲ್ಲಿ ಕಂಪ್ಯೂಟರ್ ಬಗೆಗೆ ಪರಿಣಿತಿ ಇಲ್ಲದ ನಾನು ಬರೆದಿರುವುದರಲ್ಲಿ ವಿರೋಧಾಭಾಸಗಳಿದ್ದು ಪ್ರಕಟಣೆಗೆ ಅರ್ಹವಲ್ಲವೆನಿಸಿದರೆ ಬೇಸರಪಟ್ಟುಕೊಳ್ಳುವುದಿಲ್ಲವೆಂದು ಸೇರಿಸಿದ್ದೆ.

'ಭಟ್ಟಿ ಜಾರುವುದು' ಕೇವಲ ಇಪ್ಪತ್ತು ಪುಟಗಳ ಕಿರು ಪುಸ್ತಿಕೆ. ನವಸಾಕ್ಷರ ಮಾಲೆಯ ಇತರ ಪುಸ್ತಕಗಳ ಜೊತೆ ಕೆಲವೇ ದಿನಗಳಲ್ಲಿ ಬಿಡುಗಡೆಯಾಯಿತು. ವೈದ್ಯಕೀಯ ಪಠ್ಯಪುಸ್ತಕಗಳಲ್ಲಿ ದಾಖಲಾಗಿರದ, ಬಹುಪಾಲು ವೈದ್ಯರಿಗೂ ತಿಳಿದಿರದ ವಿಷಯವನ್ನು ಅಕ್ಷರಗಳಲ್ಲಿ ಅದೇ ಮೊದಲ ಬಾರಿಗೆ ಪುಸ್ತಕ ರೂಪದಲ್ಲಿ ಹೊರತಂದ ಹಿರಿಮೆಯಾಯಿತು. ಆ ಮೊದಲು ಒಂದೆರಡು ನಿಯತಕಾಲಿಕಗಳಲ್ಲಿ ಆ ಬಗೆಗೆ ಲೇಖನಗಳನ್ನು ಬರೆದಿದ್ದೆ. ಮುಂದೆ ನವಕರ್ನಾಟಕದವರು ಪ್ರಕಟಿಸಿದ '**ಜ್ಞಾನ ವಿಜ್ಞಾನಕೋಶ**'ದಲ್ಲಿ ವರ್ಣಚಿತ್ರ ಸಹಿತ ಲೇಖನವೂ ಪ್ರಕಟವಾಯಿತು.

ಸ್ವಲ್ಪ ಸಮಯದಲ್ಲೇ ಕ.ರಾ.ವಿ.ಪ.ದವರು ತುಂಬಾ ಅಚ್ಚುಕಟ್ಟಾಗಿ ಸುಂದರ ವಿನ್ಯಾಸದಿಂದ '**ಕಂಪ್ಯೂಟರ್ ಕಥೆ**'ಯನ್ನು ಹೊರತಂದರು. ಪ್ರತಿ ಪುಟಕ್ಕೂ ಕಂಪ್ಯೂಟರ್ ಗ್ರಾಫಿಕ್ಸ್‌ನ ಅಂಚಿನ ಚಿತ್ತಾರಗಳು ಶೋಭೆಯನ್ನುಂಟು ಮಾಡಿದ್ದವು. ಬೆನ್ನುಡಿಯಲ್ಲಿ ಎಳೆಯರಿಗೆ ಕಂಪ್ಯೂಟರ್ ವಿಷಯ ಸುಲಭವಾಗಿ ಅರ್ಥವಾಗಲು ಅಳವಡಿಸಿದ ಕಥಾ ನಿರೂಪಣೆಯ ಸರಳ ಶೈಲಿ ಬಗೆಗೆ ಮೆಚ್ಚಿಗೆ; ಕಂಪ್ಯೂಟರ್ ಬಗೆಗೆ ಅದೊಂದು 'ಬಾಲಬೋಧೆ' ಎಂದೆಲ್ಲಾ ವಿವರಿಸಿದ್ದರು.

ಅದು ಪ್ರಕಟವಾದ ಮುಂದಿನ ೨-೩ ವರ್ಷಗಳಲ್ಲಿ ಪದೇ ಪದೇ ಮರು ಮುದ್ರಣಗಳಾದವು. ಕೇಂದ್ರ ಸರ್ಕಾರದ 'ಕಪ್ಪು ಹಲಗೆ' ಯೋಜನೆಯಡಿಯಲ್ಲಿ ಆಯ್ಕೆಯಾದ ಪುಸ್ತಕಗಳಲ್ಲಿ ಅದೂ ಸೇರಿತ್ತು. ಆ ಸಮಯದಲ್ಲಿ ಮೂವತ್ತು ಸಾವಿರ ಪ್ರತಿಗಳು ಅಚ್ಚಾಗಿದ್ದವು. ಈಗ್ಗೆ ಮೂರ್‍ನಾಲ್ಕು ವರ್ಷಗಳ ಹಿಂದೆ ಕೇಂದ್ರ ಸರ್ಕಾರದವರ ವಿಜ್ಞಾನವನ್ನು ಜನಪ್ರಿಯಗೊಳಿಸುವ ಯೋಜನೆಯಡಿಯಲ್ಲಿ ಈ ಕೃತಿಯೇ ಅಲ್ಲದೆ ಕ.ರಾ.ವಿ.ಪ.ದವರು ಕೆಲವು ವರ್ಷಗಳ ಹಿಂದೆ ಪ್ರಕಟಿಸಿದ್ದ ನನ್ನ ಇನ್ನೊಂದು ಕಿರುಪುಸ್ತಕ '**ಜೀರ್ಣಾಂಗ ರೋಗಗಳು**' ಆಯ್ಕೆಯಾಗಿದ್ದವು. ಈ ಎಲ್ಲಾ ಯೋಜನೆಗಳೂ ಸೇರಿದಂತೆ '**ಕಂಪ್ಯೂಟರ್ ಕಥೆಯ**' ೫೦-೬೦ ಸಾವಿರ ಪ್ರತಿಗಳು ಅಚ್ಚಾಗಿರಬಹುದು.

## ಅಪೆಂಡಿಸೈಟಿಸ್ - ಪೂರ್ವೋತ್ತರ ಕಥೆ

ಪ್ರಸ್ತುತ ಸರ್ವವ್ಯಾಪಿಯೆನಿಸಿರುವ 'ಅಪೆಂಡಿಸೈಟಿಸ್' ರೋಗ ಇಪ್ಪತ್ತನೇ ಶತಮಾನದ ಮೊದಲನೇ ವರ್ಷದವರೆಗೂ ನಿಗೂಢವಾಗಿಯೇ ಇತ್ತು. ಆಗ ಬ್ರಿಟಿಷ್ ಚಕ್ರವರ್ತಿ

ಪಟ್ಟಾಭಿಷೇಕದ ಸಮಯದಲ್ಲಿ ಈ ವ್ಯಾಧಿಯಿಂದ ನರಳುವಂತಾದದ್ದು ಮುಂದೆ ಅದು ಹೆಚ್ಚಿನ ಪ್ರಚಾರಕ್ಕೆ ಬರಲು ಕಾರಣವಾಯಿತು. ಅದಕ್ಕೂ ಹಿಂದೆ ಹಲವು ಶತಮಾನಗಳ ರೋಚಕ ಘಟನೆಗಳ ಇತಿಹಾಸ ಅದಕ್ಕಿದೆ. ಅದರ ಬಗೆಗೆ ಸೋದಾಹರಣ ರೀತಿಯ ತೀರಾ ಲಘುವೂ ಅಲ್ಲದ, ಬಹಳ ಗಂಭೀರವೂ ಅಲ್ಲದ ಶೈಲಿಯಲ್ಲಿ ಹಸ್ತಪ್ರತಿಯನ್ನು ತಯಾರಿಸಿದೆ. ಪ್ರೊ. ಜಿ. ಆರ್. ಲಕ್ಷ್ಮಣರಾಯರು ಮುನ್ನುಡಿ ಬರೆದು ಮೆಚ್ಚಿಗೆ ವ್ಯಕ್ತಪಡಿಸಿದ್ದರು. ಸುಮಾರು ೮೦ ಪುಟಗಳ ಸಚಿತ್ರ ಪುಸ್ತಕವನ್ನು ಎಂದಿನಂತೆ ನವಕರ್ನಾಟಕದವರೇ ಪ್ರಕಟಿಸಿದರು (೧೯೯೪). ಅದೀಗ ಮೂರು ಸಾರಿ ಮರು ಮುದ್ರಣ ಗೊಂಡಿದೆ.

## ಕ್ಯಾನ್ಸರ್ ಲೋಕ

ಕ್ಯಾನ್ಸರ್ ರೋಗದ ಬಗೆಗೆ ಕನ್ನಡದಲ್ಲಿ ಕೆಲವು ವೈದ್ಯ ಸಾಹಿತಿಗಳು ಲೇಖನಗಳನ್ನಲ್ಲದೆ ಪುಸ್ತಕಗಳನ್ನು ಪ್ರಕಟಿಸಿದ್ದಾರೆ. ಅವಾವುವೂ ಆ ವ್ಯಾಧಿಯ ಬಗೆಗೆ ಸಮಗ್ರ ತಿಳಿವಳಿಕೆಯನ್ನು ಜನಸಾಮಾನ್ಯರಿಗೆ ಒದಗಿಸಿಲ್ಲವೆಂಬ ಭಾವನೆ ನನ್ನದಾಗಿತ್ತು. ಬಹಳ ಸಮಯದಿಂದ ಇಂಗ್ಲಿಷ್ ಭಾಷೆಯಲ್ಲಿ ಕ್ಯಾನ್ಸರ್ ಬಗೆಗೆ ಪ್ರಕಟವಾಗುತ್ತಿದ್ದ ಲೇಖನಗಳು/ಪುಸ್ತಕಗಳನ್ನು ಓದಿ ಸಂಗ್ರಹಿಸು ತ್ತಲೇ ಇದ್ದೆ. ಸುಮಾರು ೨-೩ ವರ್ಷಗಳ ಚಿಂತನ-ಮಂಥನದ ನಂತರ '**ಕ್ಯಾನ್ಸರ್ ಲೋಕ**' ಎಂಬ ಹಸ್ತ ಪ್ರತಿಯನ್ನು ತಯಾರಿಸಿದೆ. ಮಣಿಪಾಲ್ ಕೆ.ಎಂ.ಸಿ.ಯಲ್ಲಿ ಸರ್ಜರಿ ವಿಭಾಗದ ಮುಖ್ಯಸ್ಥರು, ಎಂ.ಎಸ್. ತರಬೇತಿಯ ಸಮಯದಲ್ಲಿ ಸಹಪಾಠಿಯಾಗಿದ್ದ ಡಾ॥ ಎಂ. ಎನ್. ನಾಯಕ್ ಅವರು ವಿವಿಧ ಬಗೆಯ ಕ್ಯಾನ್ಸರ್‌ಗಳ ಫೋಟೊಗಳನ್ನು ಒದಗಿಸಿ ಪುಸ್ತಕಕ್ಕೆ ಹೆಚ್ಚಿನ ಮೆರಗು ಬರುವಂತೆ ಸಹಕರಿಸಿದರು. ಖ್ಯಾತ ವೈದ್ಯ ಸಾಹಿತಿ ಹಾಗೂ ಕರ್ನಾಟಕದ ಹೆಸರಾಂತ ರೋಗ ಶಾಸ್ತ್ರಜ್ಞ (Pathologist)ರಾದ ಡಾ॥ ಸ. ಜ. ನಾಗಲೋಟಿಮಠ ಅವರು ಮುನ್ನುಡಿ, ಹಾಗೂ ಬೆಂಗಳೂರು ಕ್ಯಾನ್ಸರ್ ಆಸ್ಪತ್ರೆಯ ಶಸ್ತ್ರವೈದ್ಯ ಡಾ॥ ಕೆ. ಎಸ್. ಗೋಪಿನಾಥ್ ಅವರು ಹಿನ್ನುಡಿ ಬರೆದಿದ್ದರು. ಸುಮಾರು ೧೯೦ ಪುಟಗಳ '**ಕ್ಯಾನ್ಸರ್ ಲೋಕ**'ವನ್ನು ನವಕರ್ನಾಟಕ ಪ್ರಕಾಶನದವರೇ ಪ್ರಕಟಿಸಿದರು(೧೯೯೫). ಪ್ರಕಟವಾದ ವರ್ಷವೇ ಮರು ಮುದ್ರಣವಾಯಿತು. ಉತ್ತಮ ವಿಮರ್ಶೆಗಳೂ ಪ್ರಕಟವಾದವು. ಡಾ॥ ಹಾ. ಮಾ. ನಾಯಕರು ತಮ್ಮ ಪತ್ರದಲ್ಲಿ "ಇದೀಗ ನಿಮ್ಮ ಇತ್ತೀಚಿನ ಪುಸ್ತಕ 'ಕ್ಯಾನ್ಸರ್ ಲೋಕ'ವನ್ನು ಓದಿ ನನಗಾದ ಸಂತೋಷವನ್ನು ವ್ಯಕ್ತಪಡಿಸಲು ಈ ಕಾಗದ ಬರೆಯುತ್ತಿದ್ದೇನೆ. ದಯವಿಟ್ಟು ನನ್ನ ಅಭಿನಂದನೆಗಳನ್ನು ಸ್ವೀಕರಿಸಿ. ಕ್ಯಾನ್ಸರ್ ರೋಗದ ಸಮಗ್ರ ಪರಿಚಯವನ್ನು ನೀವು ಇಲ್ಲಿ ಮಾಡಿಕೊಟ್ಟಿದ್ದೀರಿ. ಕ್ಯಾನ್ಸರ್ ಎಂಬ ಭಯಂಕರ ರೋಗವನ್ನು ಆರಂಭದಲ್ಲಿಯೇ ಕಂಡುಕೊಂಡರೆ ಅದಕ್ಕಾಗಿ ಹೆದರಬೇಕಾಗಿಲ್ಲ! ಈ ಸತ್ಯಕ್ಕೆ ಹೆಚ್ಚಿನ ಪ್ರಚಾರ ಸಿಕ್ಕಬೇಕು. ಪುಸ್ತಕ ಈ ನಿಟ್ಟಿನಲ್ಲೂ ಪರಿಣಾಮಕಾರಿಯಾಗಿದೆ. ನಿಮ್ಮ ಭಾಷೆ, ಶೈಲಿಗಳು ಹದವಾಗಿವೆ" ಎಂದು ಬರೆದಿದ್ದರು.

THE HINDU ಪತ್ರಿಕೆಯಲ್ಲಿ ಖ್ಯಾತ ವಿಮರ್ಶಕರೊಬ್ಬರು, *"This is a very valuable and comprehensive work on Cancer in all its aspects as a disease which has come to be dreaded world wide in recent years and whose treatment has been excercising the minds and ingenuity of the Medical Profession... According to the author, a well-known, popular medical science writer in Kannada, contributory factors for the disease included the present style of living and habits,*

*degradation of the environment... The various aspects of the disease are dealt exhaustively"* ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದರು.

ಈ ಕೃತಿಗೆ ಕನ್ನಡ ವೈದ್ಯ ಸಾಹಿತ್ಯ ಪರಿಷತ್ತಿನ (ಕ.ವೈ.ಸಾ.ಪ.) **ರಸಋಷಿ ಕುವೆಂಪು ವೈದ್ಯ ಸಾಹಿತ್ಯ ಪುರಸ್ಕಾರವೂ** ದೊರೆಯಿತು (೧೯೯೬-೯೭). ಪುರಸ್ಕಾರ ಸಮಾರಂಭ ಶಿವಮೊಗ್ಗಾದಲ್ಲೇ ಕ.ವೈ.ಸಾ.ಪ.ದ ವಾರ್ಷಿಕ ಸಮಾವೇಶದಲ್ಲಿ ಜರುಗಿತು. ಆ ಕೃತಿ ಪುರಸ್ಕಾರಕ್ಕೆ ಆಯ್ಕೆಯಾದ ಬಗೆಗೆ ಅಧಿಕೃತವಾದ ಮಾಹಿತಿಯನ್ನು ನನಗೆ ನೀಡಿರಲಿಲ್ಲ. ಸಮಾರಂಭದಲ್ಲಿ ಆ ಬಗೆಗೆ ಘೋಷಣೆ ಮಾಡಿ ನನ್ನನ್ನು ವೇದಿಕೆಗೆ ಆಹ್ವಾನಿಸಲಾಯಿತು. ಶಿವಮೊಗ್ಗಾದ ಕ.ವೈ.ಸಾ.ಪ.ದ ಸದಸ್ಯರೊಬ್ಬರು ಕೃತಿ ಮತ್ತು ಕರ್ತೃವಿನ ಬಗೆಗೆ ತಾವೇ ಮಾತಾಡುವುದಾಗಿ ಹೇಳಿ ಔಪಚಾರಿಕವಾಗಿ ಕೆಲವು ಮಾತುಗಳನ್ನಾಡಿದರು. ಕೃತಿಯ ಮಹತ್ವ, ಅದರ ಆಯ್ಕೆ ಬಗೆಗೆ ಪರಿಶೀಲಿಸಿದವರು ವ್ಯಕ್ತಪಡಿಸಿದ ಅಭಿಪ್ರಾಯಗಳನ್ನೂ ಸಹ ಹೊರಗೆಡಹಲಿಲ್ಲ. ಹಾರ ಹಾಕಿದರು; ಅಧಿವೇಶನದಲ್ಲಿ ಭಾಗವಹಿಸಿದ ಅತಿಥಿಗಳಿಗೆ ನೆನಪಿನ ಕಾಣಿಕೆಯಾಗಿ ನೀಡುವ ಎರಕದ ಕಂದು ಬಣ್ಣದ ನಟರಾಜನ ಉಬ್ಬು ತಗ್ಗಿನ ಹಾಳೆಯಂಥ ಬೊಂಬೆಯನ್ನು ಕೈಯಲ್ಲಿತ್ತರು. ಪುರಸ್ಕಾರಕ್ಕೆ ಸಂಬಂಧಿಸಿದಂತೆ ಸಾಮಾನ್ಯವಾಗಿ ನೀಡುವ ಪ್ರಶಸ್ತಿ ಪತ್ರವನ್ನೂ ನೀಡಲಿಲ್ಲ. ಆಯ್ಕೆಯ ಸಲುವಾಗಿ ನೀಡುವ ಗೌರವ ಧನದ ಪ್ರಸ್ತಾಪವನ್ನೂ ಮಾಡಲಿಲ್ಲ.

ನನ್ನೂರಲ್ಲೇ ನಮ್ಮವರಿಂದಲೇ ನಡೆದ ಒಂದು ರೀತಿಯ ತಾತ್ಸಾರದ ಸನ್ಮಾನವೆಂಬ ನಾಟಕೀಯ ಪ್ರಹಸನ ನನ್ನನ್ನು ದಂಗುಬಡಿಸಿತು. ರೂಢಿಯಂತೆ ಸನ್ಮಾನಕ್ಕೆ ಉತ್ತರಿಸಬೇಕಾಗಿತ್ತಷ್ಟೆ. ಕ.ವೈ.ಸಾ.ಪ. ಹಾಗೂ ಕುವೆಂಪು ಸಾಹಿತ್ಯ ಪ್ರಶಸ್ತಿಗಳನ್ನು ಸ್ಥಾಪಿಸುವಲ್ಲಿ ನನ್ನ ಅಳಿಲು ಸೇವೆಯ ಪಾತ್ರವನ್ನು ಜ್ಞಾಪಿಸಿದೆ. ನಾನೇ ಸ್ಥಾಪಿಸಲು ಕಾರಣವಾದ ಪ್ರಶಸ್ತಿಗೆ ಅದೇಕೆ ಸ್ಪರ್ಧಿಸಿದ್ದೆ ಎಂಬುದನ್ನು ವಿವರಿಸಿದೆ. ಕೃತಿಯ ಮೌಲ್ಯ ಮಾಪನದ ಉದ್ದೇಶದಿಂದ ಹಾಗೆ ಮಾಡಿದ್ದೇ ಹೊರತು, ಅದರಿಂದ ಲಭಿಸಬಹುದಾದ ಮೊಬಲಿಗಾಗಿಯಲ್ಲ. ಹಾಗೆ ದೊರೆಯಬಹುದಾದ ಮೊಬಲಗನ್ನು ದೇಣಿಗೆಯಾಗಿ ಕ.ವೈ.ಸಾ.ಪ.ಕ್ಕೆ ಹಿಂದಿರುಗಿಸುವುದಾಗಿಯೂ ಹೇಳಿದೆ. ಅಚ್ಚರಿಯ ಸಂಗತಿಯೆಂದರೆ ಆಗ ಕ.ವೈ.ಸಾ.ಪ.ದ ಮುಖವಾಣಿಯಾಗಿ ಪ್ರಕಟವಾಗುತ್ತಿದ್ದ **"ವೈದ್ಯಕೀಯ ಸಾಹಿತ್ಯ"** ಮಾಸಿಕದ ಮುಂದಿನ ಸಂಚಿಕೆಯಲ್ಲಿ ಅದಕ್ಕೆ ಸಂಬಂಧಿಸಿದ ವಿಚಾರಗಳಾವುವೂ ಪ್ರಸ್ತಾಪವಾಗಲೇ ಇಲ್ಲ!

ಕುವೆಂಪು ವೈದ್ಯ ಸಾಹಿತ್ಯ ಪುರಸ್ಕಾರ ಅಸ್ತಿತ್ವಕ್ಕೆ ಬಂದ ಹಿನ್ನೆಲೆಯನ್ನು ಈ ಸಂದರ್ಭದಲ್ಲಿ ಸಂಕ್ಷಿಪ್ತವಾಗಿ ದಾಖಲಿಸುವುದು ಉಚಿತವೆನಿಸುತ್ತದೆ. ಶಿವಮೊಗ್ಗಾದ ಐ.ಎಂ.ಎ.ಯ ಅಂಗ ಸಂಸ್ಥೆಯಾಗಿ ಐ.ಎಂ.ಎ. ಕ್ಲಬ್ ಎಂಬ ಸಾಂಸ್ಕೃತಿಕ/ಕ್ರೀಡಾ ವಿಭಾಗವೊಂದು ಬಹಳ ಕಾಲದಿಂದಿದೆ. ಅವರೊಂದು ಸಾರಿ ಖ್ಯಾತ ನಟ ಸಿ. ಆರ್. ಸಿಂಹ ಅವರಿಂದ ಅವರು ಜನಪ್ರಿಯಗೊಳಿಸಿದ **'ರಸಋಷಿ ಕುವೆಂಪು'** ಎಂಬ ಏಕ ಪಾತ್ರಾಭಿನಯದ ಪ್ರದರ್ಶನವನ್ನು ಏರ್ಪಡಿಸಿದರು. ನಾನು ಆ ಕ್ಲಬ್‌ನ ಸದಸ್ಯನಾಗಿರದಿದ್ದರೂ ಆ ಕಾರ್ಯಕ್ರಮದ ಯಶಸ್ಸಿನ ಬಗೆಗೆ ಸಕ್ರಿಯವಾಗಿ ಸಹಕರಿಸಿದ್ದೆ. ಕಾರ್ಯಕ್ರಮದ ಅಂದಾಜು ವೆಚ್ಚಕ್ಕಿಂತಲೂ ಎರಡು ಪಟ್ಟು ಹಣ ಶೇಖರಿಸಲು ಸಾಧ್ಯವಾಗಿತ್ತು. ಎಲ್ಲಾ ಖರ್ಚುವೆಚ್ಚಗಳು ಮುಗಿದ ನಂತರ ಸುಮಾರು ಇಪ್ಪತ್ತು ಸಾವಿರ ರೂಪಾಯಿಗಳ ಉಳಿತಾಯವಾಗಿತ್ತು. ಆ ಮೊಬಲಗನ್ನು ಮುಂದೆ ಹೇಗೆ ಬಳಸಿಕೊಳ್ಳಬಹುದೆಂದು ಕ್ಲಬ್‌ನ ಕೆಲವು ಸದಸ್ಯರು ನನ್ನೊಡನೆ ಚರ್ಚಿಸಿದರು. ಕುವೆಂಪು ಸ್ಮರಣೆಯ ಉದ್ದೇಶದಿಂದ ಸಂಗ್ರಹಿಸಿದ ಆ ಮೊಬಲಗನ್ನು ಅವರ ಹೆಸರಿನಲ್ಲಿ ಯಾವುದಾದರೂ ಶಾಶ್ವತ ಕಾರ್ಯಕ್ರಮಕ್ಕೆ ಬಳಸುವ ಸಲಹೆ

ಮಾಡಿದೆ. ಅಲ್ಲದೆ ಆ ಕ್ಷಣದಲ್ಲಿ ನನಗೊಂದು ಯೋಜನೆ ಥಟ್ಟನೆ ಹೊಳೆಯಿತು. ಕೆಲ ಸಮಯದಿಂದ ಸ್ಥಗಿತವಾಗಿದ್ದ ಕ.ವೈ.ಸಾ.ಪ. ಆಗತಾನೆ ಪುನರುತ್ಥಾನವಾಗಿ ಬಿರುಸಿನಿಂದ ಕಾರ್ಯಶೀಲವಾಗಿತ್ತು. ಈ ಹಣವನ್ನು ಅದರಲ್ಲಿ ಡಿಪಾಸಿಟ್ ಇಡಿಸಿ ಪ್ರತಿ ವರ್ಷ ಶೇಖರವಾಗುವ ಬಡ್ಡಿಯನ್ನು, ಆ ವರ್ಷ ಪ್ರಕಟವಾಗುವ ಶ್ರೇಷ್ಠ ವೈದ್ಯಸಾಹಿತ್ಯ ಕೃತಿಗೆ ನೀಡಿ ಪುರಸ್ಕರಿಸುವ ಸಲಹೆ ಮಾಡಿದೆ. ಐ.ಎಂ.ಎ. ಕ್ಲಬ್‌ನವರು ಉದಾರತೆಯಿಂದ ಸಮ್ಮತಿಸಿ, ಹದಿನೈದು ಸಾವಿರ ರೂಪಾಯಿಗಳನ್ನು ಕ.ವೈ.ಸಾ.ಪ.ಕ್ಕೆ ಕೊಡಲು ಒಪ್ಪಿದರು. ಕ.ವೈ.ಸಾ.ಪ.ದವರಿಗೆ ನಾನು ವಿಷಯ ತಿಳಿಸಿದಾಗ ಅವರೂ ಸ್ವಾಗತಿಸಿದರು.

ಪುರಸ್ಕಾರವನ್ನು ನೀಡುವ ನಿಯಮಗಳ ಬಗೆಗೆ ಕ.ವೈ.ಸಾ.ಪ., ಐ.ಎಂ.ಎ. ಕ್ಲಬ್ ಡಾ॥ ಸಿ. ಆರ್. ಚಂದ್ರಶೇಖರ್ ಮತ್ತು ನಾನು ವಿಚಾರ ವಿನಿಮಯ ಮಾಡಿ ರೀತಿ ನೀತಿಗಳನ್ನು ರೂಪಿಸಿದೆವು. ಮೊದಲ ವರ್ಷದ ಪುರಸ್ಕಾರಕ್ಕೆ ಮದ್ರಾಸಿನ ಜೀವಶಾಸ್ತ್ರ ಪ್ರಾಧ್ಯಾಪಕ ಡಾ॥ ಕೆ. ಎಚ್. ಕೃಷ್ಣಮೂರ್ತಿಯವರ '**ದೃಷ್ಟಿ ವಿಜ್ಞಾನ**' ಆಯ್ಕೆಯಾಯಿತು. ಬೆಂಗಳೂರಿನಲ್ಲಿ ಜರುಗಿದ ಕ.ವೈ.ಸಾ.ಪ.ದ ವಾರ್ಷಿಕ ಸಮ್ಮೇಳನದಲ್ಲಿ ಘನತೆ, ಗಾಂಭೀರ್ಯದೊಂದಿಗೆ ಪ್ರಶಸ್ತಿ ಪ್ರದಾನ ಮಾಡಲಾಯಿತು. ಇಬ್ಬರು ವೈದ್ಯ ಸಾಹಿತಿಗಳು ವಿಮರ್ಶಾತ್ಮಕವಾಗಿ ಮಾತಾಡಿದರು. ನನಗೆ ದೊರೆತ ಮುಂದಿನ ವರ್ಷ ಬಿಜಾಪುರದ ವೈದ್ಯ ಸಾಹಿತಿ ಡಾ॥ ವಸಂತ ಕುಲಕರ್ಣಿಯವರ ಕೃತಿ **ದೇಹದಲ್ಲಿ ಏಳು ದಿನಗಳ ಪಯಣ** ಆಯ್ಕೆಯಾಯಿತು. ದಾವಣಗೆರೆಯಲ್ಲಿ ಜರುಗಿದ ಪ್ರಶಸ್ತಿ ಪ್ರದಾನ ಸಮಾರಂಭ ತುಂಬಾ ಅಚ್ಚುಕಟ್ಟಾಗಿ ಜರುಗಿತು. ಕೃತಿಯ ಬಗೆಗೇ ಅಲ್ಲದೆ, ಕೃತಿ ರಚಿಸಿದವರ ಸಾಹಿತ್ಯ ಸಾಧನೆಗಳ ಬಗೆಗೂ ಒಂದಿಬ್ಬರು ಮಾತಾಡಿದರು. ಅದಕ್ಕಿಂತ ಮಿಗಿಲಾಗಿ ಕುವೆಂಪು ಅವರ ಎದೆ ಮಟ್ಟದ ಉಬ್ಬು ಶಿಲ್ಪದ ತರಹೆಯ ಸ್ಮರಣಿಕೆಯೇ ಅಲ್ಲದೆ ಪ್ರಶಸ್ತಿ ಪತ್ರವನ್ನು ನೀಡಿ ಅದೊಂದು ಶಾಶ್ವತ ಸ್ಮಾರಕದಂತೆ ಮಾಡಿದರು. ಕುವೆಂಪು ಅವರಂಥ ಉದ್ದಾಮ ಸಾಹಿತಿಯ ಹೆಸರಿನಲ್ಲಿ ನೆರವೇರಿಸಿದ ಅಂದಿನ ಕಾರ್ಯಕ್ರಮ ನನ್ನ ಮನಸ್ಸಿಗೆ ಮುದ ನೀಡಿತು.

ಕುವೆಂಪು ಸಾಹಿತ್ಯ ಪುರಸ್ಕಾರ ಅಶ್ರದ್ಧೆಯ ರೀತಿಯಲ್ಲಿ ನನಗೆ ನೀಡಿದ ಪ್ರಕರಣ ಮುಂದೆ ಪೇಚಿಗೆ ಸಿಲುಕುವಂತೆಯೂ ಮಾಡಿತು. **ಕ್ಯಾನ್ಸರ್ ಲೋಕ** ಕೃತಿಯ ಕೆಲವು ಪ್ರತಿಗಳನ್ನು ಸರ್ಕಾರ ಖರೀದಿಸುವ ಸಾಧ್ಯತೆಯುಂಟಾದಾಗ ಪ್ರಕಾಶಕರು ಅದಕ್ಕೆ ಕುವೆಂಪು ಪುರಸ್ಕಾರ ಲಭಿಸಿರುವ ಬಗೆಗೆ ಪ್ರಶಸ್ತಿ ಪತ್ರದ ಪ್ರತಿಯನ್ನು ಕೋರಿದರು. ಆಗಿನ ನನ್ನ ಪರಿಸ್ಥಿತಿಯನ್ನು ಊಹಿಸಿಕೊಳ್ಳಬಹುದಷ್ಟೆ. ಕ.ವೈ.ಸಾ.ಪ.ದ ನಿರ್ವಹಣೆ ಶಿವಮೊಗ್ಗಾ ತಂಡದವರಿಂದ ದಾವಣಗೆರೆಯವರಿಗೆ ಹಸ್ತಾಂತರವಾಗಿತ್ತು. ದಾವಣಗೆರೆ ಶಾಖೆಯವರಿಗೆ ಪತ್ರ ಬರೆದು ಹಿಂದಿನ ವರ್ಷ ಅಂತಹ ಪ್ರಶಸ್ತಿ ದೊರಕ್ಕಿದ್ದರ ಬಗೆಗೆ ದೃಢೀಕರಣ ಪತ್ರ ಪಡೆದುಕೊಳ್ಳಬೇಕಾಯಿತು!

## ಭಾಷಾಂತರ ಲೋಕದಲ್ಲಿ .... ಮಾನವಯಂತ್ರ...

ಭಾಷಾಂತರ ಕ್ಷೇತ್ರಕ್ಕೆ ಪ್ರವೇಶ ಮಾಡುವ ಅವಕಾಶ ೧೯೯೧ರಲ್ಲಿ ಅದಾಗಿಯೇ ಒದಗಿ ಬಂದಿತು. ದೆಹಲಿಯ ನ್ಯಾಷನಲ್ ಬುಕ್‌ಟ್ರಸ್ಟ್ - ಇಂಡಿಯ (ಎನ್.ಬಿ.ಟಿ.) ಯವರು ಪ್ರಕಟಿಸಿದ HUMAN MACHINE - HOW TO PREVENT BREAKDOWNS (Dr. R. L. Bijalani and Dr. S. K. Manchanda) ಎಂಬ ೨೩೬ ಪುಟಗಳ ಇಂಗ್ಲಿಷ್ ಪುಸ್ತಕವನ್ನು ಕನ್ನಡಕ್ಕೆ ಅನುವಾದ ಮಾಡಿಕೊಡಲು ಸಾಧ್ಯವೇ ಎಂಬುದಾಗಿ ಪತ್ರ ಬರೆದರು. ಬಹುಶಃ ನನ್ನ ಸಾಹಿತ್ಯದ ಪರಿಚಯ ಅವರಿಗಿಲ್ಲದುದರಿಂದ ಆ ಕೃತಿಯ ೨೦ ಪುಟಗಳನ್ನು ಮಾದರಿಗಾಗಿ ಅನುವಾದ

ಮಾಡಲು ಪುಸ್ತಕವನ್ನೇ ಕಳುಹಿಸಿದರು. ಅದರಂತೆ ಅನುವಾದ ಮಾಡಿ ಕಳುಹಿಸಿದೆ. ಅದು ತೃಪ್ತಿಕರವೆನಿಸಿರಬೇಕು. ಮೂರು ತಿಂಗಳ ಅವಧಿಯೊಳಗೆ ಅನುವಾದ ಮಾಡಿ, ಎರಡು ಪ್ರತಿಗಳನ್ನು ಕಳುಹಿಸಿಕೊಡಬೇಕೆಂದು ತಿಳಿಸಿದರು.

ಭಾಷಾಂತರ ಕ್ಷೇತ್ರ ನನಗೆ ಆಗಿನ್ನು ಹೊಸದು. ಆದರೂ ಯಾವುದೇ ಗುಣದೊಷ ಗಳಿಗೆಡೆಯಿಲ್ಲದ ಅನುವಾದ ಅದಾಗಬೇಕೆಂದು ನಿರ್ಧಾರ ಮಾಡಿದೆ. ಅದಕ್ಕೆ ಪೂರ್ವಸಿದ್ಧತೆ ಮಾಡಿಕೊಳ್ಳಲು ಪ್ರೊ. ಪ್ರಧಾನ್ ಗುರುದತ್ ಅವರ, "ಭಾಷಾಂತರ ಕಲೆ", ಮತ್ತು ಪ್ರೊ. ಟಿ. ವಿ. ವೆಂಕಟಾಚಲ ಶಾಸ್ತ್ರಿಯವರ "ಆಧುನಿಕ ಕನ್ನಡ ವ್ಯಾಕರಣ"ಗಳನ್ನು ಕೊಂಡು ತಂದು ಶ್ರದ್ಧೆಯಿಂದ ಮನನ ಮಾಡಿದೆ.

ಎನ್. ಬಿ. ಟಿ. ಯವರು ನಿಗದಿಪಡಿಸಿದ ಅವಧಿಯೊಳಗೆ ಅನುವಾದ ಮಾಡಿ ಕಳುಹಿಸಿದೆ. ಕೂಡಲೇ ಸಲ್ಲಬೇಕಾದ ರಾಯಧನವನ್ನೇನೋ ತಡವಿಲ್ಲದೆ ಪಾವ್ತಿಸಿದರು. ಆದರೆ ಅಂತಿಮವಾಗಿ ಪ್ರಕಟವಾಗುವುದಕ್ಕೆ ಐದು ವರ್ಷಗಳೇ ಬೇಕಾಯಿತು. **"ಮಾನವ ಯಂತ್ರ-ಕುಸಿದು ಬೀಳದಂತೆ ತಡೆಯುವುದು ಹೇಗೆ"**(೧೯೯೬). ಕೃತಿಯ ಮುದ್ರಣ ವಿನ್ಯಾಸ ಹಾಗೂ ರೇಖಾಚಿತ್ರಗಳು ವ್ಯವಸ್ಥಿತವಾಗಿಯೇನೋ ಇದ್ದವು; ಆದರೆ ಮುದ್ರಾರಾಕ್ಷಸನ ಹಾವಳಿ ವಿಕರಾಳವಾಗಿತ್ತು. ಆ ಬಗೆಗೆ ನನ್ನ ತೀವ್ರ ವಿಷಾದದ ಪ್ರತಿಭಟನೆಯ ಪತ್ರ ಬರೆದೆ. ದೆಹಲಿಯ ಕನ್ನಡಿಗರೊಬ್ಬರಿಂದ ಕರಡಚ್ಚು ತಿದ್ದಿಸಿದ್ದರಿಂದ ಹಾಗಾಯಿತೆಂದು, ಮುಂದಿನ ಸಾರಿ ಆ ಕೆಲಸವನ್ನು ನನ್ನಿಂದಲೇ ಮಾಡಿಸುವ ಭರವಸೆಯಿತ್ತು ಪತ್ರ ಬರೆದರು. ಅಷ್ಟರೊಳಗೆ ಮತ್ತೊಂದು ಪುಸ್ತಕ NARCOTIC DRUGS' (Anil Aggraval)ವನ್ನು ಅನುವಾದ ಮಾಡಲು ಕಳಿಸಿಕೊಟ್ಟರು!

ನನ್ನ ಮೊದಲ ಅನುವಾದ ಕೃತಿಗೆ 'ಪ್ರಜಾವಾಣಿ'ಯಲ್ಲಿ ಪ್ರಕಟವಾದ ವಿಮರ್ಶೆಯ ತುಣುಕೊಂದನ್ನು ಉಲ್ಲೇಖಿಸ ಬಯಸುತ್ತೇನೆ. ಬಿಜಾಪುರ ಮೆಡಿಕಲ್ ಕಾಲೇಜಿನ ಅಂಗಕ್ರಿಯಾ ಶಾಸ್ತ್ರದ ಪ್ರಾಧ್ಯಾಪಕರೂ, ಖ್ಯಾತ ವೈದ್ಯಸಾಹಿತಿಗಳೂ ಆದ ಡಾ॥ ವಸಂತಕುಲಕರ್ಣಿಯವರು "ಈ ಶಾಸ್ತ್ರದಲ್ಲಿ (ಅಂಗಕ್ರಿಯಾ ಶಾಸ್ತ್ರ) ಭಾರತದಲ್ಲೇ ಮೇಧಾವಿಗಳೆನಿಸಿಕೊಂಡ ಲೇಖಕರು ಮೂಲ ಇಂಗ್ಲಿಷ್‌ನಲ್ಲಿ ಜನಸಾಮಾನ್ಯರಿಗಾಗಿ ರಚಿಸಿದ ಕೃತಿಯನ್ನು ಕನ್ನಡದಲ್ಲಿ ಹಿರಿಯ ವೈದ್ಯ



ಕರ್ನಾಟಕ ಸಾಹಿತ್ಯ ಅಕಾಡೆಮಿ ಪುರಸ್ಕಾರ ೧೯೯೫ (ಅನುವಾದ) -ಮಂಗಳೂರು

ಲೇಖಕರೊಬ್ಬರು ಅತ್ಯಂತ ರುಚಿಕಟ್ಟಾಗಿ ಕನ್ನಡದಲ್ಲಿ ನೀಡಿದ್ದಾರೆ. ಆಂಗ್ಲಭಾಷೆಯಲ್ಲಿ ಲೇಖಕರು ಮಂಡಿಸಿದ ಅಂಗಕ್ರಿಯಾ ಶಾಸ್ತ್ರದ ವಿವಿಧ ಕ್ರಿಯಾ ಸೂತ್ರಗಳನ್ನು ಅದಕ್ಕೂ ಒಂದು ಕೈ ಮೇಲೆ ಅನಿಸುವ ರೀತಿಯಲ್ಲಿ ಕೃತಿ ಮೈದುಂಬಿ ಬಂದಿದೆ... ಕನ್ನಡದಲ್ಲಿಯೂ ವೈದ್ಯವಿಜ್ಞಾನದ ಕ್ಲಿಷ್ಟ ವಿಷಯಗಳನ್ನು ಸರಳ-ಸುಂದರ ಸುಭಗ ಶೈಲಿಯಲ್ಲಿ ತರಬಹುದು ಎಂಬುದಕ್ಕೆ ಉತ್ತಮ ಉದಾಹರಣೆ ಈ ಕೃತಿ. ಅನುವಾದದ ಕಸರತ್ತಿನಲ್ಲಿ ಮೂಲಕೃತಿಗೆ ಎಲ್ಲಿಯೂ ಅಪಚಾರ ವೆಸಗಿಲ್ಲ... ಪುಸ್ತಕದುದ್ದಕ್ಕೂ ಅನೇಕ ರಂಜನೀಯ ಮಾತುಗಳನ್ನು ಕಾಣಬಹುದು.... ಎಲ್ಲಿಯೂ ಸಮ ಪದಗಳ ಗೊಂದಲವಿಲ್ಲ" ಎಂಬ ಅಭಿಪ್ರಾಯ ಸೂಚಿಸಿದ್ದರು.

**ಕರ್ನಾಟಕ ಸಾಹಿತ್ಯ ಅಕಾಡೆಮಿಯ ೧೯೯೮ರ ಅನುವಾದ-೨** ಪ್ರಕಾರದ **ಪುಸ್ತಕ ಬಹುಮಾನ** ಈ ಕೃತಿಗೆ ಲಭ್ಯವಾಯಿತು. ಅಂಜುತ್ತಲೇ ಭಾಷಾಂತರ ಕ್ಷೇತ್ರಕ್ಕೆ ಅಡಿ ಇಟ್ಟಿದ್ದ ನನಗೆ ಒಂದು ಗರಿ ಮೂಡಿದಂತಾಯಿತು.

## ಮಾದಕ ಮದ್ದುಗಳು

ಈ ಹಿಂದೆ ಪ್ರಸ್ತಾಪಿಸಿದಂತೆ ಎನ್.ಬಿ.ಟಿ.ಯವರ ಎರಡನೆ ಪುಸ್ತಕ Narcotic Drugs(ಮಾದಕ ಮದ್ದುಗಳು) ಅನುವಾದದ ಪ್ರತಿಗಳನ್ನು ೧೯೯೬ರ ಜುಲೈನಲ್ಲಿ ದೆಹಲಿಗೆ ಕಳುಹಿಸಿದೆ. ಅದರ ಕರಡಚ್ಚನ್ನು ತಿದ್ದಲು ನನಗೇ ಕಳುಹಿಸಲಾಗಿತ್ತು. ತಿದ್ದಿದ ನಂತರ ೨೦೦೦ ವರ್ಷದ ಆಗಸ್ಟ್ ತಿಂಗಳಲ್ಲಿ ಅವರಿಗೆ ಹಿಂದಿರುಗಿಸಿದೆ. ಆದರೆ ಆರು ವರ್ಷಗಳಾದರೂ ಅದಿನ್ನೂ ಅಚ್ಚಾಗದಿರುವುದು ವಿಷಾದನೀಯ.

ಈ ನಡುವೆ ಎನ್.ಬಿ.ಟಿ.ಯವರು Ayurveda Unravelled (Dr. Sharadini Dahanukar ಮತ್ತು Dr. Urmila Thatte ಎಂಬ ಮತ್ತೊಂದು ಪುಸ್ತಕವನ್ನು ಅನುವಾದಕ್ಕಾಗಿ ಕಳುಹಿಸಿದರು (ಆಗಸ್ಟ್ ೧೯೯೯). "**ಆಯುರ್ವೇದ ದರ್ಶನ**" ಎಂದು ಅನುವಾದ ಮಾಡಿದ ಅದರ ಹಸ್ತ ಪ್ರತಿಗಳನ್ನು ಅದೇ ವರ್ಷ ನವೆಂಬರ್ ತಿಂಗಳಲ್ಲಿ ಹಿಂತಿರುಗಿಸಿದೆ. ಅದು ಅಚ್ಚಾಗುವುದರ ಬಗೆಗೆ ಇನ್ನೂ ಏನೂ ತಿಳಿದು ಬಂದಿಲ್ಲ.

ಈ ಹಂತದಲ್ಲಿ ಎನ್.ಬಿ.ಟಿ.ಯವರು ಕನ್ನಡ ಪುಸ್ತಕಗಳನ್ನು ಪ್ರಕಟಿಸುತ್ತಿರುವ ವಿಳಂಬ ಧೋರಣೆಯ ಬಗೆಗೆ ಒಂದೆರಡು ಮಾತುಗಳನ್ನು ಹೇಳುವುದು ಅವಶ್ಯಕವೆನಿಸುತ್ತದೆ. ಪುಸ್ತಕಗಳನ್ನು ಭಾಷಾಂತರಕ್ಕೆ ಕಳುಹಿಸುವಾಗ ಆ ಕಾರ್ಯವನ್ನು ಮುಗಿಸುವುದಕ್ಕೆ ಕೆಲವೇ ತಿಂಗಳುಗಳ ಗಡುವು ನಿಗದಿ ಪಡಿಸುತ್ತಾರೆ. ಆ ಬಗೆಗೆ ಲಿಖಿತ ಒಪ್ಪಂದ ಮಾಡಿಸಿಕೊಳ್ಳುತ್ತಾರೆ. ರಾಯಧನವನ್ನೂ ತಡಮಾಡದೆ ಪಾವತಿಸುತ್ತಾರೆ. ಆದರೆ ಪ್ರಕಟಿಸುವಲ್ಲಿ ಬಹಳಷ್ಟು ವಿಳಂಬವಾಗುತ್ತದೆ. ವೈದ್ಯಕೀಯ ದಂಥ ವಿಷಯಗಳಲ್ಲಿ ಇಂಗ್ಲೀಷ್‌ನಲ್ಲಿ ಪ್ರಕಟವಾಗುವುದಕ್ಕೆ ಕೆಲಸಮಯ ಹಿಡಿದಿರುತ್ತದೆ. ಅಂತಹವು ದೇಶ ಭಾಷೆಗಳಿಗೆ ಅನುವಾದ ಮಾಡುವ ಹಸ್ತ ಪ್ರತಿ ತಯಾರಾಗುವುದರಲ್ಲಿ ಇನ್ನೂ ಕೆಲವು ವರ್ಷಗಳು ಕಳೆದಿರುತ್ತವೆ. ಅಂತಿಮವಾಗಿ ಅಚ್ಚಾಗುವುದಕ್ಕೆ ಮತ್ತೆ ಹಲವಾರು ವರ್ಷಗಳೇ ಬೇಕಾಗುತ್ತದೆ. ಶೀಘ್ರಗತಿಯಲ್ಲಿ ಬದಲಾಗುತ್ತಿರುವ ವೈದ್ಯ ವಿಜ್ಞಾನದಂಥ ಪ್ರಮುಖ ವಿಷಯ ಕನ್ನಡದ ಓದುಗರಿಗೆ ಲಭ್ಯವಾಗುವುದರೊಳಗೆ ಹಳಸಿ ನಿಷ್ಪ್ರಯೋಜಕ ಹಂತ ತಲುಪಿರುತ್ತವೆ. ಈ ದಿಸೆಯಲ್ಲಿ ನನ್ನಿಂದ ಅನುವಾದವಾದ '**ಮಾನವ ಯಂತ್ರ**'...ದಲ್ಲಿನ ವಿಷಯಗಳು ಮೊತ್ತ ಮೊದಲು ೧೯೭೫ರಲ್ಲಿ ದೆಹಲಿಯಲ್ಲಿ ಜರುಗಿದ ಅಂತಾರಾಷ್ಟ್ರೀಯ ಸಮ್ಮೇಳನವೊಂದರಲ್ಲಿ

ಪ್ರಸ್ತಾಪವಾದವು. ಅವು ಮೊದಲು ಹಿಂದಿಯಲ್ಲಿ ನಂತರ ಇಂಗ್ಲೀಷ್ ಭಾಷೆಗಳಲ್ಲಿ ಪ್ರಕಟವಾಗಿ ಅಂತಿಮವಾಗಿ ಕನ್ನಡದಲ್ಲಿ ಬೆಳಕಿಗೆ ಬಂದದ್ದು ೧೯೯೬ರಲ್ಲಿ!

ಇದರಲ್ಲಿ ಕನ್ನಡದವರ ಕೊರಗನ್ನೂ ಅರುಹದಿರಲಾರೆ. ಎನ್.ಬಿ.ಟಿ.ಯವರು ಪ್ರತಿ ತಿಂಗಳು ಪ್ರಕಟಿಸುವ 'ಬುಲೆಟಿನ್'ನಲ್ಲಿ ಹಿಂದಿ, ಮಲೆಯಾಳಂ, ಬಂಗಾಳಿ ಮುಂತಾದ ಪುಸ್ತಕಗಳು ಆ ಸಂಸ್ಥೆಯಿಂದ ಹೇರಳವಾಗಿ ಪ್ರಕಟವಾದ ಪಟ್ಟಿ ಇರುತ್ತದೆ. ಕನ್ನಡ ಪುಸ್ತಕಗಳ ಹೆಸರನ್ನು ನೋಡುವುದು ತೀರಾ ಅಪರೂಪ. ವಿಚಾರಿಸಿದಾಗ ಕನ್ನಡ ಹಸ್ತ ಪ್ರತಿಗಳ 'ಹಿಂದುಳಿಕೆ' (backlog) ಉಳಿದುಕೊಂಡಿದೆ ಎಂಬ ಸಿದ್ಧ ಉತ್ತರ ತಯಾರಿರುತ್ತದೆ. ಕನ್ನಡ ಸಾಹಿತ್ಯದ ಬಗೆಗೆ ಕಳಕಳಿ ಇರುವವರು ಇತ್ತ ಗಮನ ಹರಿಸುವರೇ?

## ಜೀವನ ಚರಿತ್ರೆಗಳ ಆಕರ್ಷಣೆ

ಜೀವನ ಚರಿತ್ರೆ, ಆತ್ಮ ಚರಿತ್ರೆಗಳ ಬಗೆಗೆ ಬಾಲ್ಯದಿಂದಲೂ ನನಗಿರುತ್ತಿದ್ದ ಆಸಕ್ತಿಯ ಪ್ರಸ್ತಾಪ ಮಾಡಿರುವೆ. ಡಾ॥ ಆಲ್ಬರ್ಟ್ ಶ್ವೈಯಿಟ್ಸರ್‌ನ ಜೀವನ ಚರಿತ್ರೆಯ ಯಶಸ್ಸು ಆ ಬಗೆಗಿನ ನನ್ನ ದಾಹವನ್ನು ಇನ್ನೂ ಹೆಚ್ಚಿಸಿತು. ಅದೇ ಮೊದಲ ಸಾರಿಗೆ ಅಸ್ತಿತ್ವಕ್ಕೆ ಬಂದ ಕನ್ನಡ ಪುಸ್ತಕ ಪ್ರಾಧಿಕಾರದವರು ೧೯೯೪ರಲ್ಲಿ ವಿಜ್ಞಾನಿಗಳ ಜೀವನ ಚರಿತ್ರೆಗಳನ್ನು ರಚಿಸುವ ಬಗೆಗೆ ಒಂದು ಕಮ್ಮಟವನ್ನು ಏರ್ಪಡಿಸಿದ್ದರು. ಅದರಲ್ಲಿ ಭಾಗವಹಿಸಲು ನನಗೂ ಆಹ್ವಾನವಿತ್ತು. ಒಂದು ನೂರು ವಿಜ್ಞಾನಿಗಳ ಜೀವನ ಚರಿತ್ರೆಗಳನ್ನು ಪ್ರಕಟಿಸುವ ಅವರ ಯೋಜನೆಯಲ್ಲಿ ಆಂಟಿಸೆಪ್ಟಿಕ್ ಯುಗ ಪ್ರವರ್ತಕ **ಜೋಸೆಫ್ ಲಿಸ್ಟರ್**‌ನ ಜೀವನ ಚರಿತ್ರೆ ಬರೆಯುವ ಜವಾಬ್ದಾರಿಯನ್ನು ನನಗೆ ವಹಿಸಲಾಯಿತು.

ವಿಜ್ಞಾನಿಗಳ ಪೂರ್ಣ ಪ್ರಮಾಣದ ಜೀವನ ಚರಿತ್ರೆಗಳನ್ನು ರಚಿಸುವಲ್ಲಿ ಆಕರ ಗ್ರಂಥಗಳ ಅಭಾವ ನಮ್ಮಲ್ಲಿ ಬಹಳ ಇದೆ. ಲಿಸ್ಟರ್ ಬಗೆಗೆ ನನ್ನಲ್ಲಿದ್ದ ಪುಸ್ತಕಗಳಲ್ಲಿ ಹಲವು ವಿಷಯಗಳ ಪ್ರಸ್ತಾಪಗಳಿದ್ದರೂ ಅವು ಸಾಲದೆನಿಸಿತು. ಕಸ್ತೂರ್ಬಾ ಮೆಡಿಕಲ್ ಕಾಲೇಜು (ಮಣಿಪಾಲ) ಪುಸ್ತಕ ಭಂಡಾರದಲ್ಲಿ ಅವನ ಜೀವನ ಚರಿತ್ರೆಯ ಗ್ರಂಥವೊಂದಿರುವುದು ತಿಳಿಯಿತು. ಅದರ ಕ್ಸೆರಾಕ್ಸ್ ಪ್ರತಿಯನ್ನು ತರಿಸಿಕೊಂಡೆ. ನನ್ನಲ್ಲಿದ್ದ ವಿಷಯ ಸಂಗ್ರಹ ಮತ್ತು ಆ ಗ್ರಂಥದ ಸಹಾಯದಿಂದ ಜೋಸೆಫ್ ಲಿಸ್ಟರ್‌ನ ಜೀವನ ಚರಿತ್ರೆ (೧೨೫ ಪುಟಗಳು)ಯನ್ನು ತಯಾರು ಮಾಡಿದೆ. ಕನ್ನಡ ಪುಸ್ತಕ ಪ್ರಾಧಿಕಾರದವರು ೧೯೯೫ರಲ್ಲಿ ಅದನ್ನು ಪ್ರಕಟಿಸಿದರು. ಅದು ೧೯೯೯ರಲ್ಲಿ ಮರು ಮುದ್ರಣಗೊಂಡಿತು.

## ಡಾ॥ ಯಲ್ಲಾಪ್ರಗಡ ಸುಬ್ಬರಾವ್

ಜೀವಮಾನವೆಲ್ಲಾ ಅಮೇರಿಕಾವನ್ನೇ ತಮ್ಮ ಕಾರ್ಯಕ್ಷೇತ್ರವನ್ನಾಗಿಸಿಕೊಂಡಿದ್ದ ಡಾ॥ ಯಲ್ಲಾಪ್ರಗಡ ಸುಬ್ಬರಾವ್ ಅವರ ಜೀವನ ಚರಿತ್ರೆಯ ರಚನೆ ಕನ್ನಡ ಪುಸ್ತಕ ಪ್ರಾಧಿಕಾರದವರು ನನಗೆ ವಹಿಸಿದ ಎರಡನೇ ಜವಾಬ್ದಾರಿ. "**ವಿಶ್ವ ವಿಖ್ಯಾತ ವೈದ್ಯ ವಿಜ್ಞಾನಿಗಳು**" ಕೃತಿಯಲ್ಲಿ ಅವರ ಸಂಕ್ಷಿಪ್ತ ಜೀವನ ಚರಿತ್ರೆಯನ್ನು ರಚಿಸುವಲ್ಲಿ ಅವರ ಬಗೆಗೆ ಸ್ವಲ್ಪ ತಿಳಿವಳಿಕೆಯುಂಟಾಗಿತ್ತು. ಬಡತನವನ್ನೇ ಬಳುವಳಿಯಾಗಿ ಪಡೆದು ಜನ್ಮ ತಾಳಿದ ಸುಬ್ಬರಾಯರು, ತೀರಾ ಕಷ್ಟದ ಪರಿಸ್ಥಿತಿಯಲ್ಲಿ ಅಮೆರಿಕೆಗೆ ತೆರಳಿದರು; ಅಲ್ಲೂ ಬಡತನದ ಬೇಗೆಯಿಂದ ಬಳಲಿ, ಆಸ್ಪತ್ರೆಯೊಂದರಲ್ಲಿ ಜಾಡಮಾಲಿಯ ಕಾರ್ಯ ನಿರ್ವಹಿಸಿ, ಮಹಾನ್ ಸಂಶೋಧಕರಾಗುತ್ತಾರೆ.

ಬಹಳಷ್ಟು ಜೀವರಕ್ಷಕ ಜೀವಿರೋಧಕ ಮದ್ದುಗಳು, ಜೀವಸತ್ವಗಳನ್ನು ಆವಿಷ್ಕರಿಸಿದರು; ವೈದ್ಯ ವಿಜ್ಞಾನದ ಕೆಲವು ಮೂಲಭೂತ ಅಂಶಗಳ ಸಂಶೋಧನೆಗಳಿಗೆ ಕಾರಣರಾದರು. ಅಮೆರಿಕನ್ನರ ನಡುವೆ **ಶತಮಾನದ ವಿಜ್ಞಾನಿ** ಎಂಬ ಹೊಗಳಿಕೆಗೆ ಪಾತ್ರರಾಗಿ ತಮ್ಮ ೫೨ನೇ ವಯಸ್ಸಿನಲ್ಲಿ ಅಕಾಲ ಸಾವಿಗೀಡಾದ ಮಹಾನ್ ವ್ಯಕ್ತಿ ಅವರು; ಅವರೊಬ್ಬ ನನ್ನ ಆರಾಧಕ ವ್ಯಕ್ತಿಯೆಂದೇ ಪರಿಗಣಿಸಿದ್ದೆ.

ಸುಬ್ಬರಾಯರ ಜೀವನದ ವಿವರಗಳ ಬಗೆಗೆ In Quest of Panacea - Successes and Failures of Yellapragada Subbarao (S.P.K. Gupta, Evelyn Publishers, New Delhi. P 310 - 1987)ಎಂಬ ಆ ಗ್ರಂಥವನ್ನು ಬಿಟ್ಟರೆ ಬೇರಾವ ಆಕರ ಗ್ರಂಥಗಳು ಪ್ರಕಟವಾಗಿಲ್ಲ. ಆಂಧ್ರದ ಕಡೆಯವರಾದರೂ ಬಹುಪಾಲು ಬೆಂಗಳೂರಲ್ಲೇ ಅಭ್ಯಾಸ ಮಾಡಿದ ಕನ್ನಡಿಗರೆನ್ನಬಹುದಾದ ಎಸ್.ಪಿ.ಕೆ. ಗುಪ್ತ ಅವರು ಆ ಕೃತಿಯ ಗ್ರಂಥಕರ್ತರು. ದೆಹಲಿಯಿಂದ ಆ ಗ್ರಂಥವನ್ನು ತರಿಸಿಕೊಂಡೆ. ಅದರಲ್ಲಿ ಡಾ॥ ಸುಬ್ಬರಾಯರ ಜೀವನದ ವಿವಿಧ ಘಟ್ಟಗಳ ವಿವರಣೆಗಳ ಜೊತೆಗೆ ಅವರು ಜರುಗಿಸಿದ ಸಂಶೋಧನೆಗಳ ಸೂಕ್ಷ್ಮ ವಿವರಗಳು, ರಾಸಾಯನಿಕ ಸೂತ್ರಗಳು ಮುಂತಾದವುಗಳ ವಿಪುಲ ದಾಖಲೆಗಳಿವೆ. ಸಾಮಾನ್ಯ ಓದುಗರಿಗೆ ಅಂತಹ ಕೃತಿಯ ನೇರ ಅನುವಾದ ಪ್ರಯೋಜನವಾಗಲಾರದು. ಅದರ ಸಂಕ್ಷಿಪ್ತ ಕನ್ನಡ ರೂಪಾಂತರ ಮಾಡುವ ನಿರ್ಧಾರ ಮಾಡಿದೆ. ಇಂಗ್ಲೀಷ್ ಮೂಲ ಗ್ರಂಥವು ಅಂತಾರಾಷ್ಟ್ರೀಯ ಕೃತಿ ಸ್ವಾಮ್ಯಕ್ಕೆ ಒಳಪಟ್ಟಿದ್ದರಿಂದ ಆ ಬಗೆಗೆ ಮೂಲಗ್ರಂಥ ಕರ್ತರ, ಅನುಮತಿ ಹಾಗೂ ರಾಯಧನದಲ್ಲಿ ಹಂಚಿಕೆ ಮುಂತಾದವುಗಳ ಬಗೆಗೆ ಛಾಪಾ ಕಾಗದದಲ್ಲಿ ಒಪ್ಪಂದವನ್ನೂ ಮಾಡಿಕೊಳ್ಳಬೇಕಾಯಿತು!

ಮುಂದೆ ಅಗಾಧ ಗಾತ್ರದ ಇಂಗ್ಲಿಷ್ ಮೂಲದ, ಹಾಗೂ ಬಹುಪಾಲು ತಾಂತ್ರಿಕ ವಿಷಯವೊಳಗೊಂಡಿದ್ದ ಪುಸ್ತಕವನ್ನು ಕನ್ನಡಕ್ಕೆ ರೂಪಾಂತರಗೊಳಿಸುವುದಕ್ಕೆ ಬಹಳ ಸಮಯ ಹಿಡಿಯಿತು. ಅಂತಿಮವಾಗಿ ಅಚ್ಚಾಗುವುದರೊಳಗೆ ಮೂಲ ಗ್ರಂಥ ಕರ್ತರ ಪರಿಶೀಲನೆಗೊಳಗ ಬೇಕೆಂಬ ಷರತ್ತೂ ಇದ್ದುದರಿಂದ ಅವರಿದ್ದ ದೆಹಲಿಗೆ ಕಳುಹಿಸಬೇಕಾಯಿತು. ಅಂತಿಮವಾಗಿ ಅಚ್ಚಿನ ಮನೆಗೆ ಹೋಗುವಷ್ಟರಲ್ಲಿ ಎರಡು ವರ್ಷಗಳೇ ಹಿಡಿದವು(೧೯೯೯). ಅಷ್ಟರಲ್ಲಿ ಪ್ರಾಧಿಕಾರದ ಅಧ್ಯಕ್ಷರೂ ಬದಲಾದರು. ಅಚ್ಚಿನ ಮನೆಯಲ್ಲಿ ಏನಾಯಿತೆಂಬುದನ್ನು ವಿಚಾರಿಸು ವವರೂ ಗತಿ ಇಲ್ಲದೆ ಅಲ್ಲಿಯೂ ಒಂದೆರಡು ವರ್ಷ ಬಿದ್ದು ಕೊಂಡಿತ್ತು. ಮುಂದೆ ೧೯೯೯ರಲ್ಲಿ ನನಗೆ ಹೃದಯಾಘಾತ ಸಂಭವಿಸಿ ಪರೀಕ್ಷೆಗಳಿಗೊಳಗಾಗುವ ಸಲುವಾಗಿ ಬೆಂಗಳೂರಿಗೆ ಹೋಗಿದ್ದೆ. ಪ್ರಾಧಿಕಾರದವರನ್ನು ಟೆಲಿಫೋನಿನಲ್ಲಿ ವಿಚಾರಿಸಿದಾಗ ರಾಜಾಜಿನಗರದ ಅಚ್ಚಿನ ಮನೆಯೊಂದ ರಲ್ಲಿರುವುದು ತಿಳಿಯಿತು. ಅಲ್ಲಿಗೆ ಹೋಗಿ ಅದಾಗಲೇ ಕರಡಚ್ಚಾದ ಪ್ರತಿಗಳನ್ನು ಮನೆಗೆ ತಂದು ಕರಡಚ್ಚು ತಿದ್ದಿ ಅಚ್ಚಿನ ಮನೆಗೆ ಹಿಂದಿರುಗಿಸಿದೆ. ಅಂತಿಮವಾಗಿ ೧೯೯೯ರ ಅಂತಿಮ ದಿನಗಳಲ್ಲಿ ಪ್ರಕಟವಾಯಿತು.

ನಮ್ಮ ದೇಶದ ಅತ್ಯಂತ ಶ್ರೇಷ್ಠ ವಿಜ್ಞಾನಿಯೊಬ್ಬರ ಜೀವನ ಚರಿತ್ರೆ ಅದೇ ಮೊದಲ ಬಾರಿಗೆ ದೇಶಭಾಷೆಯೊಂದರಲ್ಲಿ ಪ್ರಕಟವಾಗಿತ್ತು. ಅದನ್ನು ವಿಜ್ಞಾನಿಗಳು/ವೈದ್ಯ ಸಮೂಹದವರ ಸಮ್ಮುಖದಲ್ಲಿ ಬಿಡುಗಡೆ ಮಾಡುವ ಅಭಿಲಾಷೆ ನನ್ನದಾಗಿತ್ತು. ಆ ಬಗೆಗೆ ಆಗಿನ ಪ್ರಾಧಿಕಾರದ ಅಧ್ಯಕ್ಷರ ಹತ್ತಿರ ಪ್ರಸ್ತಾಪಿಸಿದ್ದೆ. ವೈದ್ಯರ ಪ್ರಾತಿನಿಧಿಕ ಸಂಸ್ಥೆ ಐ.ಎಂ.ಎ. ಪದಾಧಿಕಾರಿಗಳೊಬ್ಬರೊಡ ನೆಯೂ ಪ್ರಸ್ತಾಪ ಮಾಡಿದ್ದೆ. ಆದರೆ ಅಂತಹದೇನೂ ಆಗಲಿಲ್ಲ. ಪುಸ್ತಕ ಪ್ರಾಧಿಕಾರದವರ ಹಲವು ಗ್ರಂಥಗಳನ್ನು ಬಿಡುಗಡೆ ಮಾಡುವ ಸಲುವಾಗಿ ಹಾಸನದಲ್ಲಿ ಏರ್ಪಡಿಸಿದ ಸಮಾರಂಭದಲ್ಲಿ (ಜಾತ್ರೆ?) ಯಲ್ಲಿ ಶತಮಾನದ ಶ್ರೇಷ್ಠ ವಿಜ್ಞಾನಿಯ ಜೀವನ ಚರಿತ್ರೆಯನ್ನು ಬಿಡುಗಡೆ

ಮಾಡಿದರಂತೆ. ನನಗೊಂದು ಆಹ್ವಾನ ಪತ್ರಿಕೆಯನ್ನು ಕಳುಹಿಸುವ ಸೌಜನ್ಯವನ್ನೂ ಸಹ ತೋರಲಿಲ್ಲ! ಅದೂ ಹೋಗಲಿ, ಪುಸ್ತಕವನ್ನು ಕೆಲವು ಪತ್ರಿಕೆಗಳಿಗೆ ವಿಮರ್ಶೆಗಾಗಿ ಕಳುಹಿಸಲು ವಿನಂತಿಸಿಕೊಂಡಿದ್ದೆ. ಅದನ್ನೂ ಮಾಡಲಿಲ್ಲ. ಒಂದು ವರ್ಷದ ನಂತರ ಪ್ರಾಧಿಕಾರದಿಂದ ನಾನೇ ಕೆಲವನ್ನು ಕೊಂಡು ತಂದು ವಿಮರ್ಶಕರು ಹಾಗೂ ಪತ್ರಿಕೆಗಳಿಗೆ ಕಳುಹಿಸಿದೆ. 'ಪ್ರಜಾವಾಣಿ' ವಿಜ್ಞಾನ ಸಂಗಾತಿ, THE HINDU ಮುಂತಾದ ಪತ್ರಿಕೆಗಳಲ್ಲಿ ಒಳ್ಳೆಯ ಅಭಿಪ್ರಾಯಗಳು ಪ್ರಕಟವಾದವು. ಡಾ॥ ಹಾ.ಮಾ.ನಾಯಕರು ತಮ್ಮ ಪತ್ರದಲ್ಲಿ "ಯಲ್ಲಾಪ್ರಗಡ ಸುಬ್ಬರಾಯರನ್ನು ನೀವು ಶತಮಾನದ ವಿಜ್ಞಾನಿ ಎಂದು ಕರೆದಿರುವುದು ಸೂಕ್ತವಾಗಿದೆ. ನಿಮ್ಮ ಪುಸ್ತಕ ಅತ್ಯಂತ ವಾಚನೀಯವಾಗಿದೆ. ಅಪರೂಪದ ವಿಜ್ಞಾನಿಯೊಬ್ಬರನ್ನು ತುಂಬ ಸಮರ್ಥವಾಗಿ ಈ ಪುಸ್ತಕದಲ್ಲಿ ಪರಿಚಯಿಸಿದ್ದೀರಿ" ಎಂದು ಬರೆದಿದ್ದರು.

ಪುಸ್ತಕ ಪ್ರಾಧಿಕಾರದ ಮೇಲೆ ಇಷ್ಟೆಲ್ಲಾ ಬರೆದಿರುವುದಾದರೂ ಅವರೊಂದು ರೀತಿಯ ಒಳ್ಳೆಯ ಕೆಲಸವನ್ನು ಮಾಡಿದ್ದರೆನಿಸಿತು. ಸುಮಾರು ೧೮೦ ಪುಟಗಳ ಪುಸ್ತಕಕ್ಕೆ ಕೇವಲ ೩೦ ರೂಪಾಯಿಗಳ ಬೆಲೆ ನಿಗದಿ ಪಡಿಸಿದ್ದರು. ಆದರೇನು ಮಾಡುವುದು, ನನ್ನ ಪುಸ್ತಕವೂ ಸೇರಿದಂತೆ ಇತರ ಹಲವರ ಪುಸ್ತಕಗಳು ಮಾರಾಟವಾಗದೆ ಅದರ ಗೋದಾಮುಗಳಲ್ಲಿ 'ಕೊಳೆಯುತ್ತಾ' ಬಿದ್ದಿರಬೇಕು. ಅದರಿಂದ ಅವುಗಳನ್ನೆಲ್ಲಾ ಅರ್ಧ ಬೆಲೆಗೆ ಮಾರಾಟ ಮಾಡುವ ನಿರ್ಧಾರವಾಗಿದೆ. ಕೆಲವು ದಿನಗಳ ಹಿಂದೆ ಸುಬ್ಬರಾಯರ ಪುಸ್ತಕದ ಕೆಲವು ಪ್ರತಿಗಳನ್ನು ೧೫ ರೂಪಾಯಿಗಳಿಗೆ ಕೊಂಡು ತಂದೆ. ಉತ್ತಮ ಧ್ಯೇಯೋದ್ದೇಶಗಳಿಂದ ಸರ್ಕಾರ ಸ್ಥಾಪಿಸುವ ಸಂಸ್ಥೆಗಳು ಇಂತಹ ಪರಿಸ್ಥಿತಿಗೆ ಇಳಿಯುವುದು ಜನ ಪ್ರತಿನಿಧಿಗಳ ಗಮನಕ್ಕೆ ಬರಲಾರದೆ?

## ಡಾ॥ ವ್ಲಾದಿ ಹಾಫ್‌ಕಿನ್

ಕಾಲರ ಮತ್ತು ಪ್ಲೇಗ್‌ಗಳಂಥ ಮಾರಕ ಪಿಡುಗುಗಳ ನಿರೋಧಕ್ಕೆ ಕಳೆದ ಶತಮಾನದಲ್ಲಿ ಯಶಸ್ವಿ ವ್ಯಾಕ್ಸೀನುಗಳನ್ನು ಕಂಡು ಹಿಡಿದ ನಿಸ್ವಾರ್ಥ ವಿಜ್ಞಾನಿ ರಷ್ಯಾ ಸಂಜಾತ ಡಾ॥ ವ್ಲಾದಿಮಿರ್ ಹಾಫ್‌ಕಿನ್ ಅವರ ದಾರುಣ ಜೀವನಗಾಥೆಯ ಕೆಲವು ಪುಟಗಳನ್ನು ೧೯೮೬ರಷ್ಟು ಹಿಂದೆ 'ಉತ್ಥಾನ' ಮಾಸ ಪತ್ರಿಕೆಯಲ್ಲಿ ಓದಿದ್ದೆ. '**ನಾಗಾನಂದ**' ಎಂಬ ಕಾವ್ಯನಾಮದ ಡಾ॥ ಟಿ. ವಿಶ್ವನಾಥ್ ರಾವ್ ಅಂದು ಕಿರುಧಾರಾವಾಹಿಯಾಗಿ ಪ್ರಕಟಿಸಿದ್ದರು. ಅವರ ವಿಸೃತ ಜೀವನ ಚರಿತ್ರೆಯನ್ನು ಬರೆಯುವ ಹಂಬಲ ನನಗಿತ್ತು. ಆದರೆ ಪುಸ್ತಕ ಪ್ರಾಧಿಕಾರದ ಜೀವನ ಚರಿತ್ರೆಗಳನ್ನು ರಚಿಸುವ ಯೋಜನೆಯಲ್ಲಿ ಅದನ್ನು ಬೇರೊಬ್ಬ ಲೇಖಕರಿಗೆ ವಹಿಸಿದ ನೆನಪು(೧೯೯೪). ಆದರೆ ೧೯೯೭ರವರೆಗೂ ಅದು ಪ್ರಕಟವಾದಂತಿರಲಿಲ್ಲ. ಆ ಸಮಯದಲ್ಲಿ ಪ್ರಾಧಿಕಾರದ ಕಚೇರಿಯಲ್ಲಿ ಆಗಿನ ಅಧ್ಯಕ್ಷರಲ್ಲಿ ಆ ಬಗೆಗೆ ವಿಚಾರಿಸಿದೆ. ಸಂಬಂಧಿಸಿದ ಕಡತವನ್ನು ತರಿಸಿ ನೋಡಿದರು. ಅದನ್ನು ಯಾರಿಗೂ ವಹಿಸಿದ ಬಗೆಗೆ ದಾಖಲೆಗಳು ಕಂಡು ಬರಲಿಲ್ಲ. ಅದರಿಂದ ಅಧ್ಯಕ್ಷರು ಆ ಜೀವನ ಚರಿತ್ರೆಯನ್ನು ನಾನು ರಚಿಸಬೇಕೆಂದು ಆಗ್ರಹಪಡಿಸಿದರು.

ಆಕರ ಗ್ರಂಥಗಳ ಸಮಸ್ಯೆ ಎದುರಾಯಿತು. ಆ ಸಲುವಾಗಿ 'ಉತ್ಥಾನ' ಪತ್ರಿಕೆಯ ಸಂಪಾದಕರೂ (ಹಿಂದೆ ನನ್ನ ಪರಿಚಿತರೂ ಆಗಿದ್ದ) ಎಸ್. ಆರ್. ರಾಮಸ್ವಾಮಿಯವರಿಗೆ ಪತ್ರ ಬರೆದೆ. ಹಿಂದೆ ಧಾರಾವಾಹಿಯನ್ನು ಬರೆದ ಡಾ॥ ವಿಶ್ವನಾಥರಾವ್ ಸಂಗ್ರಹಿಸಿದ ಕೆಲವು ಗ್ರಂಥಗಳು ಅವರಲ್ಲಿರುವುದಾಗಿ ತಿಳಿಸಿದರಲ್ಲದೆ, ಆ ಬಗೆಗೆ ಹರಿಯಾಣಾದ ಮಹರ್ಷಿ ಆಯುರ್ವೇದಾಶ್ರಮದಲ್ಲಿ ಕಾರ್ಯನಿರತರಾದ ಡಾ॥ ವಿಶ್ವನಾಥರಾವ್ ಅವರನ್ನು ಸಂಪರ್ಕಿಸಲು

ಅವರ ವಿಳಾಸವನ್ನು ಒದಗಿಸಿದರು. ಮೂಲತಃ ತೀರ್ಥಹಳ್ಳಿ ಕಡೆಯವರೇ ಆದ ವಯೋವೃದ್ಧ ಡಾ॥ ರಾಯರು ಒಡನೆಯೇ ಸಮ್ಮತಿಸಿದರಲ್ಲದೆ, ಆಕರ ಗ್ರಂಥಗಳನ್ನು ಪಡೆದುಕೊಳ್ಳಲು ಅನುಮತಿ ನೀಡಿದರು.

ಆನಂತರ 'ಉತ್ಥಾನ'ದವರು Mark Popousky ಅವರ THE STORY OF Dr.HAFKINE ಹಾಗೂ ಮುಂಬಯಿಯ ಹಾಫ್‌ಕಿನ್ ಇನ್ಸಿಟಿಟ್ಯೂಟ್‌ನ Platinum Jubileeಯ ಸ್ಮರಣ ಸಂಚಿಕೆಯನ್ನು ಕಳುಹಿಸಿದ್ದರು. ಜೊತೆಗೆ ನನ್ನೊಡನಿದ್ದ ಕೆಲವು ಆಕರಗಳ ಸಹಾಯದಿಂದ ಜೀವನ ಚರಿತ್ರೆಯನ್ನು ಬರೆಯಲಾರಂಭಿಸಿದೆ. ಸುಮಾರು ೧೦೦ ಪುಟಗಳಷ್ಟು ಹಸ್ತಪ್ರತಿಯ ಹಂತದಲ್ಲಿದ್ದಾಗ ಪ್ರಾಧಿಕಾರದವರು ಈ ಜೀವನ ಚರಿತ್ರೆಯನ್ನು ಮೊದಲು ಬರೆಯಲು ಸೂಚಿಸಿದ್ದರೆನ್ನಲಾದ ವೈದ್ಯ ಸಾಹಿತಿಯವರ ವಿಳಾಸ ದೊರೆಯಿತು. ಅವರನ್ನು ಸಂಪರ್ಕಿಸಿದಾಗ ಆ ತನಕ ಅವರು ಪ್ರಯತ್ನ ಮಾಡಿಲ್ಲವೆಂತಲೂ ಮುಂಬಯಿಯಿಂದ ಆಕರ ಗ್ರಂಥಗಳನ್ನು ತರಿಸಿ, ಮುಂದೆ ಬರೆಯುವುದಾಗಿ ಉತ್ತರಿಸಿದರು. ಡಾ॥ ವಿಶ್ವನಾಥರಾಯರಿಗೆ ಹಾಫ್‌ಕಿನ್ ಜೀವನ ಚರಿತ್ರೆ ಬರೆಯುವ ಆಶ್ವಾಸನೆ ನೀಡಿದ್ದು ಅದಾಗಲೇ ಅರ್ಧದಷ್ಟು ಹಸ್ತಪ್ರತಿ ತಯಾರಾಗಿದ್ದರಿಂದ ಅದನ್ನು ಪೂರ್ಣಗೊಳಿಸಿ ಬೇರೆ ಯಾರಾದರೂ ಪ್ರಕಾಶಕರಿಂದ ಪ್ರಕಟಿಸುವ ಯೋಚನೆ ಮಾಡಿದೆ. ನಡುವೆ ನನಗೆ ಹೃದಯಾಘಾತವಾಗಿ ಬೈ-ಪಾಸ್ ಶಸ್ತ್ರಚಿಕಿತ್ಸೆ ಮಾಡಿಸಿಕೊಂಡರೂ ನಂತರ ಹಸ್ತಪ್ರತಿಯನ್ನು ಬರೆದು ಮುಗಿಸಿದೆ. ಕಾಕತಾಳಿಯವೋ ಎಂಬಂತೆ ಹಿಂದೆ ಪುಸ್ತಕ ಪ್ರಾಧಿಕಾರದ ಅಧ್ಯಕ್ಷರಾಗಿದ್ದ ನೆಲಮನೆ ದೇವೇಗೌಡರು ಅವರ ಪ್ರಕಟಣ ಸಂಸ್ಥೆಯ ಮೂಲಕ ಪ್ರಕಟಿಸಲು ನನ್ನಲ್ಲಿ ಯಾವುದಾದರೂ ಹಸ್ತಪ್ರತಿ ಇದ್ದರೆ ಕಳುಹಿಸಬೇಕಾಗಿ ಬರೆದ ಪತ್ರ ಬಂದಿತು. ಹಾಫ್‌ಕಿನ್ ಜೀವನ ಚರಿತ್ರೆಯ ಹಸ್ತಪ್ರತಿಯನ್ನು ಒಡನೆಯೇ ಅವರಿಗೆ ಕಳುಹಿಸಿದೆ. ಸುಮಾರು ೧೭೫ ಪುಟಗಳ - "ಜೀವರಕ್ಷಕ ವ್ಯಾಕ್ಸೀನುಗಳ ಹರಿಕಾರ **ಡಾ॥ ವ್ಲಾದಿಮಿರ್ ಹಾಫ್‌ಕಿನ್**" ೨೦೦೦ ಇಸವಿಯಲ್ಲಿ ಪ್ರಕಟವಾಯಿತು. ಅಷ್ಟರಲ್ಲೆ ಅದರ ರಚನೆಗೆ ಎಲ್ಲಾ ಸಹಕಾರ ನೀಡಿದ ಡಾ॥ ವಿಶ್ವನಾಥರಾಯರು ವಿಧಿವಶರಾದರು. ಅವರು ನೀಡಿದ ಸ್ಫೂರ್ತಿಗಾಗಿ ಪುಸ್ತಕವನ್ನು ಅವರಿಗೆ ಅರ್ಪಿಸಿದೆ. ಕೆಲವು ತಿಂಗಳ ನಂತರ ನನಗೆ ದೊರೆತ ರಾಯಧನದಲ್ಲಿ ತುಂಬಾ ಕಷ್ಟದ ಸ್ಥಿತಿಯಲ್ಲಿದ್ದ ಅವರ ವಿಧವೆ ಶ್ರೀಮತಿ ಲಲಿತಮ್ಮನವರನ್ನು ಅವರಿದ್ದ ಹಳ್ಳಿಗೇ ಹುಡುಕಿಕೊಂಡು ಹೋಗಿ ೩೦೦೦ ರೂಪಾಯಿಗಳನ್ನು ಅರ್ಪಿಸಿದೆ.

**ಜೀವನ ಚರಿತ್ರೆ** ಪ್ರಕಾರದಲ್ಲಿ ೨೦೦೦ **ಸಾಲಿನ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪುಸ್ತಕ ಪುರಸ್ಕಾರ** ದೊರೆತಾಗ ನನ್ನ ಪ್ರಯತ್ನ ಸಾರ್ಥಕವೆನಿಸಿತು. '**ಉತ್ಥಾನ**' ಮಾಸ ಪತ್ರಿಕೆಯ ಸಂಪಾದಕ ಎಸ್. ಆರ್. ರಾಮಸ್ವಾಮಿಯವರು ತಮ್ಮ ಪತ್ರದಲ್ಲಿ "ಎರಡನ್ನೂ (ಡಾ॥ ಯಲ್ಲಾಪ್ರಗಡ ಸುಬ್ಬರಾವ್) ಓದಿದೆ. ಬಹಳ ಆನಂದವಾಯಿತು. ಇಬ್ಬರದೂ ಅದ್ಭುತವಾದ ಜೀವನಗಳು. ಇಂದಿನ, ಮುಂದಿನ, ಪೀಳಿಗೆಯವರಿಗೆ ತುಂಬಾ ಪ್ರೇರಣದಾಯಕವಾದವು. ಅವರ ಸಾಧನೆಯ ಮಟ್ಟಕ್ಕೆ ಸರಿದೂಗುವಂಥ ಅತ್ಯುತ್ತಮ ಜೀವನ ಚರಿತ್ರೆಗಳು ನಿಮ್ಮ ಲೇಖನಿಯಿಂದ ಹೊರ ಹೊಮ್ಮಿವೆ. ಇಂಥ ಗುಣಮಟ್ಟದ ಬರವಣಿಗೆ ಅಪರೂಪವೆಂದೇ ಹೇಳಬೇಕಾಗಿದೆ. ವಿಜ್ಞಾನದ ವಿಷಯಗಳ ಬಗ್ಗೆ ಸಮರ್ಥವಾಗಿಯೂ, ಆಕರ್ಷಕವಾಗಿಯೂ ಬರೆಯ ಬಲ್ಲವರು ನಮ್ಮಲ್ಲಿ ಹೆಚ್ಚಿಲ್ಲ. ಆ ವಿರಳರ ಪಂಕ್ತಿಯಲ್ಲಿ ನೀವು ಸ್ಥಾನ ಪಡೆದುಕೊಂಡಿದ್ದೀರಿ. ಇಂಥ ಬರಹಕ್ಕೆ ಎಷ್ಟು ವಿಸ್ತಾರ ಅಧ್ಯಯನವೂ, ಬೌದ್ಧಿಕ ವ್ಯಾಯಾಮವೂ ಬೇಕಾಗುತ್ತದೆಂದು ಬರಹಗಾರನಾದ ನಾನು ಊಹಿಸಬಲ್ಲೆ. ನಿಮಗೆ ಕನ್ನಡಿಗರೆಲ್ಲರ ಧನ್ಯವಾದ ಸಲ್ಲುತ್ತದೆ" ಎಂದು ಬರೆದಿದ್ದರು.




ಕರ್ನಾಟಕ ಸಾಹಿತ್ಯ ಅಕಾಡೆಮಿ ಪುರಸ್ಕಾರ ೨೦೦೦ (ಜೀವನ ಚರಿತ್ರೆ) - ಹಾವೇರಿ

ಡಾ॥ ಹಾ.ಮಾ.ನಾಯಕರು, "ನಿಮ್ಮ ಬರವಣಿಗೆ ತುಂಬಾ ಸೊಗಸಾಗಿದೆ; ಸುಗಮವಾಗಿ ಓದಿಸಿಕೊಂಡು ಹೋಗುತ್ತದೆ; ಪ್ರಸ್ತಾವನೆಯು ನಿಮ್ಮ ಆರಂಭವೇ ಆಕರ್ಷಕವಾಗಿದೆ. ನಿಜಕ್ಕೂ ಹೇಳಬೇಕೆಂದರೆ ನಿಮಗೆ ವೈಜ್ಞಾನಿಕ ಬರವಣಿಗೆ ಕರಗತವಾಗಿದೆ" ಎಂದು ಪತ್ರ ಬರೆದಿದ್ದರು. ಹಂಪಿ ಕನ್ನಡ ವಿಶ್ವವಿದ್ಯಾಲಯದ '**ವಿಜ್ಞಾನ ಸಂಗಾತಿ**'ಯಲ್ಲಿ ಟಿ. ಆರ್. ಅನಂತರಾಮು ಅವರು, "ವ್ಲಾದಿಮಿರ್ ಹಾಫ್‌ಕಿನ್ ಅವರ ಬದುಕು, ಸಾಧನೆಯನ್ನು ಹೃದ್ಯ ಶೈಲಿಯಲ್ಲಿ ಅನುಭವೀ ಲೇಖಕರಾದ ಡಾ॥ ಚಂದ್ರಪ್ಪಗೌಡರು ಓದುಗರಿಗಾಗಿ ಕುಂಚಿಸಿದ್ದಾರೆ. ಜೀವನ ಚರಿತ್ರೆ ಬರೆಯಬೇಕಾದರೆ ಯಾವ ಅಂಶಕ್ಕೆ ಹೆಚ್ಚು ಒತ್ತು ಕೊಡಬೇಕೆಂಬ ಸ್ಪಷ್ಟ ಅರಿವು ಲೇಖಕರಿಗಿದೆ. ಇದಕ್ಕೆ ಪೂರಕವಾಗಿ ನಿರೂಪಣಾ ಸಾಮರ್ಥ್ಯ, ಯುಕ್ತ ಪದಗಳ ಬಳಕೆ ಇಡೀ ಕೃತಿಯನ್ನು ಒಂದೇ ಓದಿನಲ್ಲಿ ಮುಗಿಸಲು ಚಾಲನೆ ನೀಡುತ್ತದೆ" ಎಂದು ವಿಶ್ಲೇಷಿಸಿದ್ದರು. '**ಪ್ರಜಾವಾಣಿ**', '**ಕನ್ನಡಪ್ರಭ**', '**ವಿಜಯ ಕರ್ನಾಟಕ**' ಪತ್ರಿಕೆಗಳಲ್ಲೂ ಉತ್ತಮ ಅಭಿಪ್ರಾಯಗಳು ಪ್ರಕಟವಾಗಿದ್ದವು. ಇದೇ ಕೃತಿಗೆ ವರ್ಷಾಂತ್ಯದಲ್ಲೇ ಬೆಂಗಳೂರಿನ ಗೊರೂರು ಪ್ರತಿಷ್ಠಾನದವರು ನೀಡುವ **ರನ್ನ ಸಾಹಿತ್ಯ ಪ್ರಶಸ್ತಿ**ಯೂ ದೊರೆಯಿತು.

## ವಿಶ್ವಮಾನವ ಪ್ರಶಸ್ತಿ

ಈ ಹಂತದಲ್ಲಿ ಮೈಸೂರಿನ ದೇಜಗೌ ಟ್ರಸ್ಟ್‌ನವರು ತಮ್ಮ ೧೯೯೯ರ ಸಾಲಿನ "**ವಿಶ್ವ ಮಾನವ ಪ್ರಶಸ್ತಿ**"ಗೆ ನನ್ನನ್ನು ಆಯ್ಕೆ ಮಾಡಿದ್ದನ್ನು ಪ್ರಸ್ತಾಪಿಸುವೆ. ಸಾಮಾನ್ಯವಾಗಿ ಸಾಹಿತ್ಯ ಕ್ಷೇತ್ರ ಅದರಲ್ಲೂ ಜೀವನ ಚರಿತ್ರೆಗಳ ರಚನೆಯಲ್ಲಿ ಗಮನಾರ್ಹ ಸಾಧನೆ ಮಾಡಿದವರು, ಇಲ್ಲವೆ ಸಾಮಾಜಿಕ ಸೇವೆಯಲ್ಲಿ ಗಣನೀಯ ಸೇವೆ ಸಲ್ಲಿಸಿದವರಿಗೆ ನೀಡುವ ಆ ಪ್ರಶಸ್ತಿಗೆ ಆಯ್ಕೆಯಾಗಿದ್ದು ನನಗೆ ಅತೀವ ತೃಪ್ತಿ, ಸಂತಸಗಳನ್ನುಂಟು ಮಾಡಿತು. ಒಂದು ರೀತಿಯಲ್ಲಿ ನನ್ನ ಆತನಕದ ಬದುಕು ಬರಹಗಳನ್ನು ಗುರುತಿಸಿದ ಪ್ರತೀಕ ಅದಿರಬಹುದೆಂದುಕೊಳ್ಳುತ್ತೇನೆ. ಡಿಸೆಂಬರ್ ೧೨ರಂದು (೨೦೦೦) ಮೈಸೂರಿನಲ್ಲಿ ಜರುಗಿದ ವರ್ಣರಂಜಿತ ಸಮಾರಂಭವೊಂದ




'ವಿಶ್ವಮಾನವ ಪ್ರಶಸ್ತಿ' - ಮೈಸೂರು

ರಲ್ಲಿ ಮಾಜಿ ಲೋಕಸಭಾ ಸದಸ್ಯರಾದ ಶ್ರೀ ತುಳಸಿದಾಸ್ ದಾಸಪ್ಪನವರಿಂದ ಪ್ರಶಸ್ತಿಯನ್ನು ಸ್ವೀಕರಿಸಿದ ಗಳಿಗೆ ಅವಿಸ್ಮರಣೀಯವಾಗಿತ್ತು.

## ಕಾರೋನರಿ ಹೃದ್ರೋಗ ಸಾಹಿತ್ಯ

ಪ್ರಪಂಚದಾದ್ಯಂತ ಹೆಚ್ಚಾಗುತ್ತಿರುವ ಕಾರೋನರಿ ಧಮನಿಗಳ ವ್ಯಾಧಿಯ ಬಗೆಗೆ ಒಂದು ದಶಕದಿಂದಲೂ ನನ್ನಲ್ಲಿ ಆಸಕ್ತಿ ಮೂಡಿತ್ತು. ಪುಣೆಯಿಂದ ಪ್ರಕಟವಾಗುವ 'ಆರೋಗ್ಯ ವಾಣಿ'ಯಲ್ಲಿ ೧೯೯೨ ಮತ್ತು ೧೯೯೪ರಲ್ಲಿ ಎರಡು ಸಾರಿ ವಿವರವಾದ ಎರಡು ಧಾರಾವಾಹಿಗಳನ್ನು ಪ್ರಕಟಿಸಿದ್ದೆ. ಶಿವಮೊಗ್ಗಾದಲ್ಲಿದ್ದಾಗ ವ್ಯಾಧಿಯ ಬಗೆಗೆ ಜನ ಸಾಮಾನ್ಯರಲ್ಲಿ ಜಾಗೃತಿಯುಂಟು ಮಾಡಲು ಕ.ವೈ.ಸಾ.ಪ, ಐ.ಎಂ.ಎ. ಮತ್ತು ತಜ್ಞ ವೈದ್ಯರ ಸಹಕಾರದಿಂದ ವಿಶಿಷ್ಟ ರೀತಿಯ ಪ್ರಾತ್ಯಕ್ಷಿಕೆಯ ಪ್ರದರ್ಶನವನ್ನು ಏರ್ಪಡಿಸುವಲ್ಲಿ ಪ್ರಮುಖ ಪಾತ್ರ ವಹಿಸಿದ್ದೆ (ಡಿಸೆಂಬರ್ ೧೯೯೪). ವ್ಯಾಧಿಯ ವಿವಿಧ ಮುಖಗಳ ಬಗೆಗೆ ಚಿತ್ರಪಟ, ಸ್ಲೈಡ್ಸ್ ಮುಂತಾದವುಗಳ ಪ್ರದರ್ಶನ, ವಿವರಣೆ, ಪ್ರಶ್ನೋತ್ತರಗಳ ಕಾರ್ಯಕ್ರಮ ಆದಾಗಿತ್ತು. ಅಂದು ತುಂಬಾ ಜನಪ್ರಿಯವಾಯಿತು. ಇತರ ೨-೩ ಊರುಗಳಲ್ಲಿ ನಮ್ಮ ತಂಡ 'ತಿರುಗಾಟ'ದ ರೀತಿಯಲ್ಲಿ ಅದರ ಪ್ರದರ್ಶನ ಮಾಡಿದ್ದೆವು.

ಈ ನಡುವೆ ವೈದ್ಯ ಮಿತ್ರರೊಬ್ಬರಿಂದ ಪಡೆದುಕೊಂಡಿದ್ದ Surgeon under the Knife (1976, William Nolen) ಪುಸ್ತಕ ನನ್ನ ಮೇಲೆ ತುಂಬಾ ಪ್ರಭಾವ ಬೀರಿತು. ಅದನ್ನು ಕನ್ನಡಕ್ಕೆ ಅನುವಾದ ಮಾಡುವ ಅಭಿಲಾಷೆಯಿಂದ ಪ್ರಕಾಶಕರ ಅನುಮತಿಗಾಗಿ ಅಮೆರಿಕಾಕ್ಕೂ ಪತ್ರ ಬರೆದೆ; ಆದರೆ ಉತ್ತರ ದೊರೆಯಲಿಲ್ಲ. ಮುಂದೆ ನನಗೇ ಕಾರೂನರಿ ಬೈ-ಪಾಸ್ ಸರ್ಜರಿಯಾದಾಗ **"ನನಗೆ ಬೈ-ಪಾಸ್ ಆಯಿತು"** ಎಂಬ ನನ್ನ ಅನುಭವ ಹಾಗೂ ಆ ವ್ಯಾಧಿಯ ಬಗೆಗಿನ ಇತರ ವಿವರಗಳ ಹಸ್ತಪ್ರತಿ ತಯಾರು ಮಾಡಿದೆ. ಅದೀಗ **ನವಕರ್ನಾಟಕ** ಪ್ರಕಾಶನದ ಪ್ರಕಟಣೆಯಾಗಿ ಹೊರಬಂದಿದೆ.

## ವಿಜ್ಞಾನ ಸಾಹಿತ್ಯ ೧೯೯೯

ಕರ್ನಾಟಕ ಸಾಹಿತ್ಯ ಅಕಾಡೆಮಿಯವರು ಪ್ರತಿವರ್ಷ ನಿಯತಕಾಲಿಕಗಳಲ್ಲಿ ಪ್ರಕಟವಾಗುವ ವಿಜ್ಞಾನಕ್ಕೆ ಸಂಬಂಧಿಸಿದ ಲೇಖನಗಳನ್ನು ಸಂಪಾದಿಸಿಕೊಡುವ ಜವಾಬ್ದಾರಿಯನ್ನು ನನಗೆ ವಹಿಸಿತು. ಆ ಬಗೆಗೆ ತಯಾರಿ ಮಾಡುಕೊಳ್ಳುತ್ತಿರುವಾಗಲೇ ನನಗೆ ಹೃದಯಾಘಾತವೂ ಆಯಿತು. ಅದರಿಂದ ಚೇತರಿಸಿಕೊಂಡ ನಂತರ ಆ ಕಾರ್ಯದಲ್ಲಿ ಮಗ್ನನಾದೆ. ಪ್ರಮುಖ ಕನ್ನಡ ಪತ್ರಿಕೆ/ನಿಯತಕಾಲಿಕೆಗಳಲ್ಲಿ ವಿಜ್ಞಾನ ವಿಷಯಗಳಿಗೆ ಸಂಬಂಧಿಸಿದ ೪೦ ಶ್ರೇಷ್ಠ ಲೇಖನಗಳನ್ನು ಸಂಗ್ರಹಿಸಿ, ಸಂಪಾದಕೀಯ ಬರೆದು ೩೧೫ ಪುಟಗಳ ಸಂಕಲನವನ್ನು ಕಳುಹಿಸಿದೆ ಅದೀಗ "**ವಿಜ್ಞಾನ ಸಾಹಿತ್ಯ ೧೯೯೯**"ವೆಂದು ಪ್ರಕಟವಾಗಿದೆ (೨೦೦೦).

## ನಮ್ಮೂರಿನ ನೆನಪುಗಳು

ನಾನು ಹುಟ್ಟಿ ಬೆಳೆದು ಬಾಲ್ಯದ ಆನಂದಮಯ ದಿನಗಳನ್ನು ಕಳೆದ ನನ್ನೂರು **ಹೊಳೆಗದ್ದೆಯೇ** ಅಲ್ಲದೆ ತಾಯಿಯ ತವರುಮನೆ **ಮಾನಿ** ವರಾಹಿ ಯೋಜನೆಯಡಿ ಮುಳುಗಿ ಜಲಾವೃತವಾಗಿ ಬಿಟ್ಟವು. ಬಾಲ್ಯದ ಕೇವಲ ಐದಾರು ವರ್ಷಗಳನ್ನು ಅವುಗಳಲ್ಲಿ ಕಳೆದಿದ್ದೆನಾದರೂ ಅವುಗಳ ಸುಮಧುರ ನೆನಪುಗಳು ಇಂದಿಗೂ ನನ್ನನ್ನು ಕಾಡಿಸುತ್ತವೆ. ಮುಂದಿನ ಪೀಳಿಗೆಯವರಿಗಾದರೂ ಅಂತಹ ಊರುಗಳಿದ್ದವೆಂಬ ನೆನಪನ್ನು ಶಾಶ್ವತವಾಗಿ ಉಳಿಸುವ ಅಭಿಲಾಷೆಯಿಂದ "**ನಮ್ಮೂರಿನ ನೆನಪುಗಳು**" ಎಂಬ ೮೦ ಪುಟಗಳ ಕಿರು ಹೊತ್ತಿಗೆಯನ್ನು ಬರೆದೆ. ನೆಲಮನೆ ಪ್ರಕಾಶನದವರು ಅದನ್ನು ಪ್ರಕಟಿಸಿದರು(೧೯೯೯). ನನ್ನ ನೆರೆಯ ಊರಿನ ಹಾಗೂ ಮುಳುಗಡೆ ಸಂತ್ರಸ್ಥರಾದ ವೈದ್ಯ ಕವಿ ಹೆದ್ನದ ಡಾ|| ಎಚ್. ಸಿ. ವಿಷ್ಣುಮೂರ್ತಿಯವರು ತಕ್ಕುದಾದ ಮುನ್ನುಡಿ ಬರೆದಿದ್ದಾರೆ.



# ೧೯. ಉಪಸಂಹಾರ

ಈ ತನಕದ ನಿರೂಪಣೆಯಲ್ಲಿ ನನ್ನ ಬಾಲ್ಯದ ಬೆಳವಣಿಗೆ, ವಿದ್ಯಾಭ್ಯಾಸ ಹಾಗೂ ವೃತ್ತಿ ಜೀವನದ ಘಟನೆಗಳ ಹೆಚ್ಚಿನ ವಿವರಗಳು ಮಾತ್ರ ದಾಖಲಾಗಿವೆ. ವಾಸ್ತವಾಗಿ ಜೀವನ ನಡೆಸಿದ ರೀತಿ ನೀತಿ, ಸಂಸಾರ ನಿರ್ವಹಣೆಯ ವಿವರಗಳು ಮೂಡಿಬರಲಿಲ್ಲ. ಆ ದಿಸೆಯಲ್ಲಿ ಒಂದು ಪಕ್ಷಿ ನೋಟವನ್ನು ಮುಂದಿನ ಪುಟಗಳಲ್ಲಿ ನೀಡಲು ಪ್ರಯತ್ನಿಸುತ್ತೇನೆ.

ಒಂದೂವರೆ ವರ್ಷದ ಶಿಶುವಾದಾಗಲೇ ತಂದೆಯನ್ನು ಕಳೆದುಕೊಂಡ ತಬ್ಬಲಿ ನಾನು. ತನ್ನ ಒಬ್ಬನೇ ಮಗ ಹಾಗೂ ಮುಂದಿನ ಆಶಾದೀಪವಾಗಬಲ್ಲವನೆಂಬ ಏಕೈಕ ಅಭಿಲಾಷೆಯಿಂದ ನನ್ನ ತಾಯಿ ಎಚ್ಚರ ವಹಿಸಿ ಸಾಕಿ, ಸಲಹಿ ಪರಿಪೋಷಣೆ ಮಾಡಿದಳು. ಅದೆಷ್ಟು ಅಕ್ಕರೆ, ಸಂರಕ್ಷಣೆ, ಸಲಿಗೆಯಿಂದ ಸಾಕಿದ್ದಳೆಂದರೆ, ಮಾತೆಯ ಮಮತೆಯ ಕಕ್ಷೆಯಿಂದ ಹೊರಬರಲು ಬಹಳ ಸಮಯ ನನಗೆ ಸಾಧ್ಯವಾಗಿರಲೇ ಇಲ್ಲ. ಬಹುಶಃ ಅದರಿಂದಾಗಿಯೇ ಬಾಲ್ಯದ ದಿನಗಳಲ್ಲಿ ಹಠಮಾರಿತನ, ಸ್ವಾರ್ಥಮನೋಭಾವ, ಕೀಳರಿಮೆಗಳಂಥ ವಿಲಕ್ಷಣಗಳು ನನ್ನಲ್ಲಿ ನೆಲೆಯೂರಲು ಕಾರಣವಾಗಿರಬೇಕು. ಅದರಿಂದಲೇ ಆರಂಭದ ದಿನಗಳಲ್ಲಿ ಶಾಲೆಗೆ ಸೇರುವುದಕ್ಕೆ ತೀವ್ರ ಪ್ರತಿಭಟನೆಗಳು ವ್ಯಕ್ತವಾಗುತ್ತಿದ್ದುದು. ಅದ್ಹೇಗೋ ದೂರದ ಊರಲ್ಲಿ ಶಾಲೆಗೆ ಸೇರಿ, ಅಪರಿಚಿತರ ನಡುವೆ ಜೀವನ ಸಾಗಿಸುವ ಸನ್ನಿವೇಶ ನಿರ್ಮಾಣವಾಯಿತು. ಬಹುಪಾಲು ಅದರಿಂದಲೇ ನನ್ನಲ್ಲಿದ್ದ ವಿಲಕ್ಷಣ ಗುಣಗಳು ಕಳಚುವುದಕ್ಕೆ ಕಾರಣವಾಗಿರಬೇಕು. ಶಾಲೆಯ ಕಲಿಕೆಯ ಪೈಪೋಟಿಯಲ್ಲಿ ಇತರ ಸಹಪಾಠಿಗಳ ಜೊತೆ 'ನಾನು ಸಮ ನಿಮಗೆಂದು' ಸೆಟೆದು ನಿಂತು ಮುನ್ನಡೆಯುವಂತಾಯಿತು.

ನಯ, ವಿನಯ, ವಿಧೇಯತೆ ಸ್ವಭಾವಗಳು ಎಳೆಯ ವಯಸ್ಸಿನಲ್ಲೇ ನನ್ನಲ್ಲಿ ಮೈಗೂಡಿದ್ದವು. ಜೀವಮಾನವೆಲ್ಲಾ ಅವು ನನ್ನ ಬೆಂಗಾವಲಾಗಿ ಅನುಸರಿಸಿದವು. ಸತ್ಯ ಸಂಧತೆ, ನಿಷ್ಕಪಟ ನಡೆವಳಿಕೆಗಳು ಸಹಜ ಪ್ರವೃತ್ತಿಯಂತಾಗಿದ್ದವೆಂದು ಹೇಳಬಲ್ಲೆ. ಸಮಯಪ್ರಜ್ಞೆ, ಕ್ಲುಪ್ತ ಕಾಲದಲ್ಲಿ ಶಾಲಾಕಾಲೇಜು, ಕಚೇರಿಗಳು ಹಾಗೂ ಸಮಾರಂಭಗಳಿಗೆ ಹಾಜರಾಗುವ ಅಭ್ಯಾಸ ಒಂದು ಬಗೆಯ ಗೀಳಾಗಿತ್ತು. ಧೂಮಪಾನ, ಮದ್ಯಪಾನಗಳಂಥ ಅಭ್ಯಾಸಗಳಲ್ಲಿ ನಾನೆಂದೂ ತೊಡಗಿಸಿಕೊಳ್ಳಲಿಲ್ಲ. ವಿದ್ಯಾಭ್ಯಾಸ ಸಮಯವೂ ಸೇರಿದಂತೆ, ಅಧಿಕಾರ ಸ್ಥಾನದಲ್ಲಿರುವಾಗಲೂ ಯಾವುದೇ ಆಸೆ, ಆಮಿಷ, ಒತ್ತಾಯಗಳಿಗೆ ಮಣಿದವನಲ್ಲ. ಅದರಿಂದ ಸ್ನೇಹಿತರು, ಸಹೋದ್ಯೋಗಿಗಳು, ಆಪ್ತೇಷ್ಟರ ಕೋಪ ತಾಪಗಳಿಗೊಳಗಾದ ಸನ್ನಿವೇಶಗಳಿಗೆ ಬರವಿರಲಿಲ್ಲ. ಅಂತಹ ಪರಿಶುದ್ಧ ಜೀವನ ನಡೆಸಲು ಸಾಧ್ಯವಾದುದನ್ನು ಹಿಂದಿರುಗಿ ನೋಡಿದಾಗ ಅಚ್ಚರಿ ಪಟ್ಟುಕೊಳ್ಳುವಂತಾಗುತ್ತದೆ. ಬಾಲ್ಯ ಹಾಗೂ ಯೌವನದಲ್ಲಿ ಇಂದಿನವರಂತೆ ಆಟೋಟ ಮತ್ತಿತರ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳಲು ಸಾಧ್ಯವಾಗಲೇ.ಇಲ್ಲ. ಅಂದಿನ ನನ್ನ ಪರಿಸ್ಥಿತಿ ಅಂತಹ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ಅನುಕೂಲಕರವಾಗಿರಲಿಲ್ಲವೆಂಬುದು ಸರ್ವವೇದ್ಯ.

ಅತ್ಯಂತ ಕಷ್ಟ ಪರಿಸ್ಥಿತಿಯಲ್ಲಿ ಪವಾಡವೋ ಎನ್ನುವ ಹಾಗೆ ವೈದ್ಯ ಪದವೀಧರನಾದೆ. ಕಾಯಂ ಸರ್ಕಾರಿ ಕೆಲಸಕ್ಕೆ ಸೇರಲು ಎಲ್ಲಾ ಅರ್ಹತೆಗಳಿದ್ದರೂ ಆ ಕಾಲದ ಕೆಲವರ ಅನುಚಿತ ವರ್ತನೆ ಹಾಗೂ ಪಕ್ಷಪಾತದ ಆಯ್ಕೆಯ ಪ್ರಕ್ರಿಯೆಗಳಿಂದಾಗಿ ಮೊದಲ ಪ್ರಯತ್ನದಲ್ಲಿ ಆಯ್ಕೆ

ಯಾಗಲಿಲ್ಲ. ಮುಂದಿನ ಸಾರಿ ಆಯ್ಕೆಯಾದರೂ ಸೇವಾ ಹಿರಿತನದ ಪೆಡಂಭೂತ ಅಂತಿಮ ಕ್ಷಣದವರೆಗೂ ನನ್ನ ಬೆಂಬತ್ತಿದ್ದ ಬವಣೆಗಳ ವಿವರಣೆಗಳನ್ನು ಈಗಾಗಲೇ ದಾಖಲಿಸಿದ್ದೇನೆ.

ಮೊತ್ತಮೊದಲು ಸರ್ಕಾರಿ ವೈದ್ಯನಾಗಿ ನೇಮಕವಾದಾಗ ತರಬೇತಿ ಪಡೆದ ವೃತ್ತಿಯಲ್ಲಾಗಲೀ, ಆಡಳಿತ ನಿರ್ವಹಣೆಯಲ್ಲಾಗಲೀ ಯಾವುದೇ ಅನುಭವ ನನಗಿರಲಿಲ್ಲ. ಹೊಸದಾಗಿ ಆರಂಭವಾದ ಊರ ಹೊರಗಿನ ಆಸ್ಪತ್ರೆಗೆ ಜನರನ್ನು ಆಕರ್ಷಿಸುವುದೇ ಮೊದಲು ಎದುರಿಸಿದ ಸಮಸ್ಯೆ. ಆ ಸಮಯದಲ್ಲಿ ಹಠಾತ್ತಾಗಿ ದಾಳಿ ಮಾಡಿದ ಎರಡು ಮಾರಕ ಪಿಡುಗುಗಳು ಜನರನ್ನು ಆಸ್ಪತ್ರೆ ಹಾಗೂ ನನ್ನತ್ತ ಸೆಳೆಯುವಂತೆ ಮಾಡಿದವು. ಜನ ಸಾಮಾನ್ಯರು ಇದ್ದಕ್ಕಿದ್ದಂತೆ ಅಸಹಾಯಕ ಪರಿಸ್ಥಿತಿಗೆ ಸಿಲುಕಿ ಪೇಚಾಡುವಂತಾದಾಗ ಯಾವುದೇ ರೀತಿಯ ಅನಾದರಣೆ ಮಾಡದೆ ಅವರಿಗೆ ನೆರವಾದೆ. ಆಗಿನ ಗುರುತರ ಜವಾಬ್ದಾರಿಯನ್ನು ಪ್ರಾಮಾಣಿಕತೆ, ಶ್ರದ್ಧೆ ಹಾಗೂ ಅರ್ಪಣಾ ಮನೋಭಾವದಿಂದ ನಿರ್ವಹಿಸಿದೆ. ಮುಂದೆ ಸುಮಾರು ೨೮ ವರ್ಷಗಳ ಸೇವಾ ಅವಧಿಯಲ್ಲಿ ೧೭ ವರ್ಷಗಳಷ್ಟು ಕಾಲ ರೋಗಿಗಳ ಚಿಕಿತ್ಸಾ ನಿರ್ವಹಣೆಯ ಜೊತೆಗೆ ಆಡಳಿತ ಸೂತ್ರವನ್ನೂ ಬಹುಪಾಲು ತಂಟೆ ತಕರಾರುಗಳಿಗವಕಾಶಗಳಿಲ್ಲದಂತೆ ನಿರ್ವಹಿಸಿದೆ. ಮೊದಲ ಕೆಲವು ವರ್ಷಗಳಲ್ಲಿ ಅನುಭವೀ ಮೇಲಧಿಕಾರಿಗಳು, ಇಲಾಖಾ ನಿರ್ದೇಶಕರು ಮತ್ತು ಆರೋಗ್ಯ ಸಚಿವರು ಜರುಗಿಸುತ್ತಿದ್ದ ಪರಿವೀಕ್ಷಣೆ (Inspection)ಗಳ ರೀತಿನೀತಿಗಳು ಮುಂದೆ ನಾನು ಒಳ್ಳೆಯ ಆಡಳಿತ ಕ್ರಮಗಳನ್ನನುಸರಿಸಲು ಮಾರ್ಗದರ್ಶನ ನೀಡಿದವೆಂದೇ ಹೇಳಬೇಕು. ಆಸ್ಪತ್ರೆಗಳಲ್ಲಿ ಹಿಂದಿನಿಂದ ಜಡ್ಡುಗಟ್ಟಿದ ವ್ಯವಸ್ಥೆಗಳಿಗೆ ಅಂಟಿಕೊಳ್ಳದೆ ಜನರಿಗೆ ಉಪಯುಕ್ತವಾಗಬಹುದಾದ ಬದಲಾವಣೆಗಳನ್ನು ಅನುಸರಿಸುತ್ತಿದ್ದೆ. ಕೇವಲ ಕಚೇರಿಯ ಗುಮಾಸ್ತರು ತಯಾರಿಸುತ್ತಿದ್ದ ಟಿಪ್ಪಣಿ/ವರದಿಗಳನ್ನವಲಂಬಿಸದೆ ಕಡತಗಳನ್ನು ಮನೆಗೆ ಕೊಂಡು ಹೋಗಿ ಸೂಕ್ತ ಬದಲಾವಣೆ ಮಾಡುತ್ತಿದ್ದೆ. ಮೇಲಧಿಕಾರಿಗಳಿಂದ ಇಲ್ಲವೆ ಸಾರ್ವಜನಿಕರಿಂದಾಗಲೀ ನಾನು ಕಾರ್ಯ ನಿರ್ವಹಿಸುತ್ತಿದ್ದ ಆಸ್ಪತ್ರೆಗಳ ಇಲ್ಲವೆ ವೈಯಕ್ತಿಕವಾಗಿ ನನ್ನ ವಿರುದ್ಧವೇ ದೂರುಗಳು ಬಂದಾಗ ಅವುಗಳ ಸತ್ಯಾಸತ್ಯತೆಗಳ ಬಗೆಗೆ ನಿಷ್ಪಕ್ಷಪಾತ ವಿಚಾರಣೆಗಳಿಗೆ ಏರ್ಪಾಡು ಮಾಡುತ್ತಿದ್ದೆ. ತಪ್ಪಿತಸ್ಥರ ಮೇಲೆ ಶಿಸ್ತಿನ ಕ್ರಮ ತೆಗೆದುಕೊಂಡ ಘಟನೆಗಳ ಪ್ರಸ್ತಾಪಗಳೂ ಹಿಂದೆ ಬಂದಿವೆ. ನನ್ನೊಡನೆ ವ್ಯವಹರಿಸುತ್ತಿದ್ದ ಸಂಘ ಸಂಸ್ಥೆಗಳಾಗಲೀ, ಆಕಾಶವಾಣಿ, ಪತ್ರಿಕಾ ಕಚೇರಿಗಳಂಥ ಸಾರ್ವಜನಿಕ ವ್ಯವಸ್ಥೆಗಳವರ ನಡವಳಿಕೆಗಳಲ್ಲಿ ಎದ್ದು ಕಾಣುವ ತಪ್ಪುಗಳಿದ್ದರೆ ನೇರವಾಗಿ ಆಕ್ಷೇಪಣೆ ಮಾಡುತ್ತಿದ್ದೆ. ಎರಡು ಕಡೆ ಆಕಾಶವಾಣಿ ನಿಲಯಗಳವರು ಅಸ್ವಾಭಾವಿಕ ರೀತಿಯಲ್ಲಿ ವ್ಯವಹರಿಸಿದಾಗ ಆಕ್ಷೇಪವೆತ್ತಿದೆ. ನನ್ನನ್ನು ಅಂತಹ ಕಾರ್ಯಕ್ರಮಗಳಿಗೆ ಆಹ್ವಾನಿಸಬಾರದೆಂದು ಬರೆದೆ. ಕೆಲವು ಸಂಘ ಸಂಸ್ಥೆಗಳು ಕಾರ್ಯನಿರ್ವಹಿಸುವ ರೀತಿ ನೀತಿಗಳು ನನಗೆ ಸರಿಬಾರದಿದ್ದರೆ ಅವುಗಳಿಂದ ಹೊರ ಬಂದು ಬಿಡುತ್ತಿದ್ದೆ. ಇಂತಹ ವರ್ತನೆಯಿಂದಾಗಿ ಕೆಲವರ ಅಸಮಾಧಾನಗಳಿಗೂ ಈಡಾಗಿದ್ದಿದೆ.

ಪ್ರಮುಖ ಕರ್ತವ್ಯವಾದ ವೈದ್ಯ ವೃತ್ತಿಯನ್ನು ನಿರ್ವಹಿಸುತ್ತಿದ್ದ ರೀತಿ ನೀತಿಗಳನ್ನು ಹಲವೆಡೆ ಪ್ರಸ್ತಾಪಿಸಿದ್ದೇನೆ. ಮೊದಲು ಕಾರ್ಯನಿರತನಾದಾಗ ಆಸ್ಪತ್ರೆಗಳಲ್ಲಿ ಖಾಸಗಿ 'ಪ್ರ್ಯಾಕ್ಟೀಸ್' ಮಾಡುವ ವಿಷಯ ಎದುರಾದಾಗ ನನ್ನ ವರ್ತನೆ, ರೋಗಿಗಳಿಗೆ ಅನುಕೂಲ ಮಾಡುವ ಸಲುವಾಗಿ ಬದಲಾಯಿಸಿಕೊಂಡ ವಿಧಾನದ ಬಗೆಗೆ ಮೇಲಧಿಕಾರಿಯಾದವರು, ಅಂತಹ ಉಪಕಾರಿ ವ್ಯವಸ್ಥೆಯೂ ಮುಂದೆ ಹೇಗೆ ಮುಳುವಾಗಬಹುದೆಂದು ಹಿತನುಡಿದದ್ದು ನನ್ನನ್ನು ಎಚ್ಚರಿಸಿತು. ಸರ್ಕಾರಿ ಸೇವೆಯಿಂದ ನಿವೃತ್ತನಾಗುವವರೆಗೂ ಆಸ್ಪತ್ರೆ, ಮನೆಯಲ್ಲಾಗಲೀ ಅಥವಾ ಖಾಸಗಿ

ಕ್ಲಿನಿಕ್ ತೆರೆದು 'ಪ್ರ್ಯಾಕ್ಟೀಸ್' ಮಾಡಲೇ ಇಲ್ಲ. ಅಂದ ಮಾತ್ರಕ್ಕೆ ರೋಗಿಗಳಿಂದ ಯಾವುದೇ ರೀತಿಯಲ್ಲಿ ಹಣ ಅಥವಾ ಇತರೆ ಉಡುಗೊರೆಗಳನ್ನು ಸ್ವೀಕರಿಸುತ್ತಿರಲಿಲ್ಲವೆಂದು ಹೇಳುವ ಧಾರ್ಷ್ಟ್ಯ ನನ್ನದಲ್ಲ. ಚಿಕಿತ್ಸಾ ಪ್ರಕ್ರಿಯೆ ಮುಗಿದು ಸಂತುಷ್ಟರಾಗಿ ಹೋಗುವ ಕೆಲವು ರೋಗಿಗಳು ಯಾ ಅವರ ಸಂಬಂಧಿಕರು ಕೃತಜ್ಞಾತಾಪೂರ್ವಕವಾಗಿ ಹೂವು, ಹಣ್ಣು ಇಲ್ಲವೆ ಹಣವನ್ನು ನನ್ನ ನಿವಾಸಕ್ಕೇ ತಂದು ಕೊಡುತ್ತಿದ್ದುದುಂಟು; ಇನ್ನು ಕೆಲವರು ತಾವು ಬೆಳೆದ ತರಕಾರಿ, ದವಸಧಾನ್ಯ, ಬೆಣ್ಣೆ, ತುಪ್ಪ ಮುಂತಾದವನ್ನು ಮನೆಗೆ ತಲುಪಿಸುತ್ತಿದ್ದರು. ಶಿಕಾರಿಪುರದಲ್ಲಿದ್ದಾಗ 'ಜಲೋದರ' (Ascites) ದಿಂದ ನರಳುತ್ತಿದ್ದ ಲಂಬಾಣಿ ರೈತನೊಬ್ಬನಿಗೆ ಎರಡು ತಿಂಗಳಿಗೊಂದಾವರ್ತಿ ಹೊಟ್ಟೆಯಿಂದ ನೀರು ತೆಗೆಯುತ್ತಿದ್ದೆ. ಪ್ರತಿಸಾರಿ ಗಾಡಿಯಲ್ಲಿ ಬರುತ್ತಿದ್ದ ಅವನು ನಮ್ಮ ಮನೆ ಎದುರು ಗಾಡಿ ನಿಲ್ಲಿಸಿ ಒಂದು ಕೋಳಿ ಹುಂಜವನ್ನು ಕೊಟ್ಟು ಆಸ್ಪತ್ರೆಗೆ ದಾಖಲಾಗುತ್ತಿದ್ದ! ಆ ವಿಷಯ ನಾನು ಮನೆಗೆ ಹೋದಾಗಲೇ ಗೊತ್ತಾಗುತ್ತಿದ್ದುದು. ಆದರೆ ಯಾವುದೇ ಚಿಕಿತ್ಸೆ ಅಥವಾ ಆಪರೇಷನ್ ಮಾಡುವುದಕ್ಕೆ ಫೀಜು ಕೊಡುವ ಬಗೆಗೆ ಪ್ರತ್ಯಕ್ಷವಾಗಿ ಇಲ್ಲವೆ ಪರೋಕ್ಷವಾಗಿ ಸೂಚನೆ/ಕೋರಿಕೆ ಮಾಡುತ್ತಿರಲಿಲ್ಲವೆಂದು ಆತ್ಮಸಾಕ್ಷಿಯಿಂದ ಹೇಳಬಲ್ಲೆ. ಬಹುಶಃ ನನ್ನ ಅಂತಹ ಪ್ರವೃತ್ತಿಯಿಂದಲೇ ಇರಬೇಕು, ಮೊತ್ತ ಮೊದಲು ಸರ್ಜನ್ ಆಗಿ ಕಾರ್ಯಪ್ರವೃತ್ತನಾದ ಆಸ್ಪತ್ರೆಯಲ್ಲಿ ಅಲ್ಲಿಯ ಕೆಲವರು ನನಗೆ ಫೀಜು ಕೊಡಬೇಕಾಗುತ್ತದೆಂದು ರೋಗಿಗಳ ಹತ್ತಿರ ಹಣವಸೂಲು ಮಾಡುತ್ತಿರುವುದರ ದಟ್ಟ ವದಂತಿಗಳಿರುತ್ತಿದ್ದವು! ಇಂತಹ ವಿಚಾರಗಳಲ್ಲಿ ಈ ಮೊದಲು ಪ್ರಸ್ತಾಪಿಸಿದ ದಿವಾನರಾದ ಸರ್ ಎಂ. ವಿಶ್ವೇಶ್ವರಯ್ಯನವರ ಅನಿಸಿಕೆ ನನ್ನ ಅಂತರಾಳದಲ್ಲಿದ್ದವು.

## ಸಹಧರ್ಮಿಣಿಯ ಸಹಕಾರ

ಸದಾ ಆಸ್ಪತ್ರೆಗಳ ಕೆಲಸ ಕಾರ್ಯಗಳಲ್ಲಿ ಮುಳುಗಿರುತ್ತಿದ್ದ ನನಗೆ ದೈನಂದಿನ ಗೃಹಕೃತ್ಯದ ಜವಾಬ್ದಾರಿಗಳ ಕಡೆ ಗಮನ ಹರಿಸಲು ಸಾಧ್ಯವಾಗುತ್ತಿರಲಿಲ್ಲ. ಮದುವೆಯಾದಾಗಿನಿಂದಲೂ ನನ್ನ ಪತ್ನಿಯೇ ಅವುಗಳನ್ನು ನಿರ್ವಹಿಸುವುದು ಅನಿವಾರ್ಯವೆಂಬಂತಾಯಿತು. ಅದೃಷ್ಟವಶಾತ್ ಆ ಬಗೆಗೆ ತವರು ಮನೆಯಲ್ಲೇ ಸಾಕಷ್ಟು ಅನುಭವವಾಗಿತ್ತು. ಬೆಳಿಗ್ಗೆ ಬಹಳ ಮುಂಚಿತವಾಗಿಯೇ ಮನೆ ಬಿಡುವುದು, ತಡವಾಗಿ ಮನೆಗೆ ಬರುವುದು, ಹಗಲು ರಾತ್ರಿಗಳೆನ್ನದೆ ತುರ್ತು ಕರೆಗಳಿಗೆ ಹೊರಟು ಹೋಗುವಂಥ ಕಿರಿಕಿರಿ ಸನ್ನಿವೇಶಗಳಿಗೆ ಅವಳೆಂದೂ ಮುನಿಸಿಕೊಂಡಿದ್ದಿಲ್ಲ. ಇಂತಹ ನನ್ನ ಅನಿಯಮಿತ ಕರ್ತವ್ಯ ನಿರ್ವಹಣೆಗೆ ಅಡೆತಡೆಗಳಾಗದಂತೆ ಹೊತ್ತಿಂದ್ಹೊತ್ತಿಗೆ ನಾಷ್ಟಾ, ಊಟ ಉಪಚಾರಗಳ ಏರ್ಪಾಡು ಮಾಡುವುದು ಅವಳ ಸಹಜ ಧರ್ಮವೆಂದೇ ಪರಿಗಣಿಸಿರಬೇಕು. ಯಾವುದೇ ರೀತಿಯಲ್ಲಿ ಅಸಮಾಧಾನ ವ್ಯಕ್ತಪಡಿಸದೇ ತನ್ನ ಕಾರ್ಯ ನಿರ್ವಹಿಸುತ್ತಿದ್ದಳು. ಬಹುಶಃ ವೈದ್ಯನೊಬ್ಬನ ಕೈಹಿಡಿದು ಜೀವನ ಸಾಗಿಸಬೇಕೆಂಬ ನಿರ್ಧಾರವಾದ ಮೇಲೆ ಈ ಬಗೆಯ ಜೀವನ ಕ್ರಮಕ್ಕೆ ಹೊಂದಿಕೊಳ್ಳುವ ದೃಢ ಮನಸ್ಸು ಮಾಡಿರಬೇಕು. ನನ್ನ ಜೀವಮಾನವೆಲ್ಲಾ ಸಹಧರ್ಮಿಣಿಯಿಂದ ಅಂಥ ಸಹಕಾರ ದೊರೆಯುವಂತಾದದ್ದು ನನ್ನ ಸುದೈವವೇ ಸರಿ.

ವಿದ್ಯಾರ್ಥಿ ದೆಸೆಯಲ್ಲಿ ಎಲ್ಲೋ ಅಪರೂಪಕ್ಕೆ ನಾಟಕ ಸಿನೆಮಾಗಳಂಥ ಮನರಂಜನಾ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಿದ್ದೆ. ವೈದ್ಯನಾಗಿ ಕಾರ್ಯನಿರತನಾದಾಗ ಅವಕ್ಕೆಲ್ಲಾ ಪುರಸೊತ್ತಿರಲಿಲ್ಲ; ಮೇಲಾಗಿ ಅವುಗಳಲ್ಲಿ ಅಂತಹ ಆಸಕ್ತಿಯೂ ನನಗಿರಲಿಲ್ಲ. ಆದರೆ ಮದುವೆ ಆಗುವ ಮೊದಲು ಪತ್ನಿಗೆ ಅಂತಹ ಆಸಕ್ತಿ ಇತ್ತು; ಭಾಗವಹಿಸುವ ಅವಕಾಶಗಳೂ ಇರುತ್ತಿದ್ದವು.

ಹಾಗಾಗಿ ನನ್ನೊಡನಿದ್ದಾಗ ಈ ದಿಸೆಯಲ್ಲಿ ಬೇಸರವಾಗುತ್ತಿದ್ದರೂ, ವ್ಯಕ್ತಪಡಿಸುತ್ತಿರಲಿಲ್ಲ. ನಾವಿರುತ್ತಿದ್ದ ಊರುಗಳಲ್ಲಿ ನನ್ನ ಒಡನಾಡಿ ಅಧಿಕಾರಿ ವರ್ಗದವರ ಪತ್ನಿಯರೆಲ್ಲಾ ಆಗಾಗ್ಗೆ ಒಂದೆಡೆ ಸೇರಿಕೊಂಡು ಅವರದೇ ಮನರಂಜನೆ, ಹರಟೆ, ಅಪರೂಪಕ್ಕೆ ಸಿನೆಮಾಗಳಿಗೆ ಹೋಗುವ ಕಾರ್ಯಕ್ರಮ ಏರ್ಪಡಿಸಿಕೊಳ್ಳುತ್ತಿದ್ದುದುಂಟು. ಕೆಲವು ಸಾರಿ ಒಬ್ಬೊಬ್ಬರ ಮನೆಗಳಲ್ಲಿ ಸೇರಿ ಔತಣ ಸಮಾರಂಭಗಳನ್ನು ಸರದಿಯಂತೆ ಏರ್ಪಡಿಸುತ್ತಿದ್ದರು. ಮತ್ತೆ ಕೆಲವು ಕಡೆ ಮಹಿಳಾ ಸಮಾಜದ ಸದಸ್ಯತ್ವ ಪಡೆದುಕೊಂಡು ಅಲ್ಲಿಯ ಕಾರ್ಯಗಳಲ್ಲೂ ಭಾಗವಹಿಸುತ್ತಿದ್ದಳು.

ಬಾಲ್ಯದಲ್ಲಿ ನಾನೆಷ್ಟು ದೈವ ಭಕ್ತನಾಗಿದ್ದೆನೆಂಬುದರ ಬಗೆಗೆ ಹಿಂದೆ ಪ್ರಸ್ತಾಪವಾಗಿದೆ. ಮುಂದಿನ ದಿನಗಳಲ್ಲಿ ನನ್ನಲ್ಲಿ ವೈಚಾರಿಕ ಪ್ರಜ್ಞೆ ಮತ್ತು ವೈಚಾರಿಕ ಮನೋಭಾವಗಳುಂಟಾದಂತೆಲ್ಲಾ ದೇವರು ದಿಂಡರ ಆರಾಧನೆ, ದೇವಸ್ಥಾನಗಳಿಗೆ ಭೇಟಿ ನೀಡುವಂಥ ಪ್ರವೃತ್ತಿ ಕಡಿಮೆಯಾಯಿತು; ಒಂದು ರೀತಿಯಲ್ಲಿ ನಿರೀಶ್ವರವಾದಿಯಾಗಿ ಮಾರ್ಪಟ್ಟೆನೆಂದು ಹೇಳಬಹುದು. ಆದರೆ ಪತ್ನಿ ಬಾಲ್ಯ ದಿಂದಲೂ ಅಂತಹ ವಿಷಯಗಳಲ್ಲಿರಿಸಿಕೊಂಡಿದ್ದ ಆಸಕ್ತಿಯನ್ನು ಬಿಡಲಿಲ್ಲ; ಪ್ರತಿದಿನ ದೇವರ ಪೂಜೆ, ಹರಕೆ, ವ್ರತಾಚರಣೆ, ಹಬ್ಬ ಹರಿದಿನಗಳ ಆಚರಣೆಗಳು ನಡೆಯುತ್ತಲೇ ಇರುತ್ತಿದ್ದವು. ನಾವಿರುತ್ತಿದ್ದ ಊರುಗಳ ಹತ್ತಿರದ ದೇವಾಲಯ, ಪುಣ್ಯಕ್ಷೇತ್ರ ಯಾತ್ರೆಗಳು ಆಗುತ್ತಿದ್ದವು.

ಶಿಕಾರಿಪುರದಲ್ಲಿದ್ದಾಗ ಮೊದಲ ಮಗಳ ಜನನವಾಯಿತು. ಎರಡನೇ ಮಗಳು ಕೆ.ಜಿ.ಎಫ್.ನಲ್ಲಿ ಜನಿಸಿದಳು. ಮೈಸೂರಿನಲ್ಲಿದ್ದಾಗ ಗಂಡು ಶಿಶುವೊಂದರ ಜನನವಾದರೂ ಕೆಲವೇ ದಿನಗಳಲ್ಲಿ ಅಕಾಲ ಮರಣಕ್ಕೀಡಾಯಿತು. ಅದರಿಂದ ಕೆಲಕಾಲ ಆಕೆಗೆ ಒಂದು ರೀತಿಯ ಮಾನಸಿಕ ಆಘಾತವೇ ಆದಂತಾಗಿತ್ತು; ಬಹಳ ಸಮಯ ಖಿನ್ನ ಮನಸ್ಕಳಾಗಿದ್ದಳು. ಮುಂದೆ ಮಂಗಳೂರಿನಲ್ಲಿದ್ದಾಗ ಒಂದು ಗಂಡು ಹಾಗೂ ಮತ್ತೊಂದು ಹೆಣ್ಣು ಮಗುವಾದವು; ಕೊಳ್ಳೇಗಾಲದಲ್ಲಿದ್ದ ಸಮಯದಲ್ಲಿ ಮತ್ತಿಬ್ಬರು ಗಂಡು ಮಕ್ಕಳಾದರು. ಇಷ್ಟೆಲ್ಲಾ ಮಕ್ಕಳು ಜನಿಸುತ್ತಿದ್ದರೂ ವ್ಯವಸ್ಥಿತ ರೀತಿಯಲ್ಲಿ ಕುಟುಂಬ ನಿಯಂತ್ರಣ ವಿಧಾನಗಳನ್ನು ಅನುಸರಿಸಲು ಸಾಧ್ಯವಾಗದಿದ್ದುದಕ್ಕೆ ಪಶ್ಚಾತ್ತಾಪವಿದೆ. ಕೊನೆಯ ಮಗು ಜನಿಸಿದಾಗ ನಾನೇ ವ್ಯಾಸೆಕ್ಟಮಿ ಮಾಡಿಸಿಕೊಂಡೆ. ಬಹುಪಾಲು ಹೆರಿಗೆಗಳು ಆಕೆಯ ತವರು ಮನೆಯಲ್ಲೇ ಜರುಗುತ್ತಿದ್ದವು. ಆ ನಿಟ್ಟಿನ ಸಾಧಕ ಬಾಧಕಗಳು ನಮಗರಿವಾಗದಂತೆ ಅವರು ನಿರ್ವಹಿಸುತ್ತಿದ್ದುದರಿಂದ ನಮಗಾವ ಕಷ್ಟ ಪರಿಸ್ಥಿತಿಗಳುದ್ಭವಿಸುತ್ತಿರಲಿಲ್ಲ.

ಮಕ್ಕಳು ದೊಡ್ಡವರಾಗುತ್ತಿದ್ದಂತೆಲ್ಲಾ ಅವರ ಶಾಲಾಭ್ಯಾಸ, ಮನೆಪಾಠ ಮುಂತಾದ ಜವಾಬ್ದಾರಿಗಳೂ ಪತ್ನಿಯವೇ ಆದವು. ಮುಂದೆ ಅವರ ಮದುವೆ ಮುಂತಾದ ಏರ್ಪಾಡುಗಳಲ್ಲೂ ಅವಳದೇ ಪ್ರಮುಖ ಪಾತ್ರ; ನನ್ನ ಎಂದಿನ ನಿರ್ಲಿಪ್ತ ಭಾವನೆ ಮುಂದುವರಿದಿತ್ತು.

ಹೊಳೆಗದ್ದೆಯಲ್ಲಿ ನನ್ನ ಪಾಲಿಗೆ ಬಂದಿದ್ದ ಅಲ್ಪಸ್ವಲ್ಪ ಆಸ್ತಿ ಮನೆಗಳೆಲ್ಲಾ ವರಾಹಿ ಯೋಜನೆಯಲ್ಲಿ ಮುಳುಗಡೆಯಾದವು. ದೊರೆತ ಪರಿಹಾರ ಧನವೂ ಹೆಚ್ಚಿನ ಮೊತ್ತದ್ದೇನೂ ಆಗಿರಲಿಲ್ಲ. ಸಾಮಾನ್ಯ ವೈದ್ಯ ಪದವೀಧರನಾಗಿ ಮೊದಲು ಸರ್ಕಾರಿ ಕೆಲಸಕ್ಕೆ ಸೇರಿ, ನಂತರ ತಜ್ಞ ವೈದ್ಯ(Specialist) ನೆನಿಸಿಕೊಂಡು, ಕಡೆಯ ಕೆಲವು ವರ್ಷಗಳು ಜಿಲ್ಲಾ ವೈದ್ಯಾಧಿಕಾರಿಯಂಥ ಉನ್ನತ ದರ್ಜೆಗೂ ಏರಿದ್ದೆನಷ್ಟೆ. ಆದರೂ ವೈದ್ಯ ವೃತ್ತಿ ಧರ್ಮದ ನೀತಿ ನಡವಳಿಕೆಗಳಿಂದ ದೂರ ಸರಿಯಲಿಲ್ಲ; ಸೇವಾನಿರತನಾಗಿರುವಾಗ ಸರ್ಕಾರದ ಕಾನೂನು ಕಟ್ಟಲೆಗಳ ಇತಿಮಿತಿಗಳಿಂದ ಕದಲಲಿಲ್ಲ. ಖಾಸಗಿ ಪ್ರ್ಯಾಕ್ಟೀಸ್, ಅಥವಾ ಲಂಚರುಷುವತ್ತುಗಳ ಆಮಿಷಗಳಿಗೊಳಗಾಗದೆ ಪ್ರಾಮಾಣಿಕ ಹಾಗೂ ಗೌರವಾರ್ಹ ಮಧ್ಯಮ ವರ್ಗದ ಜೀವನ ನಡೆಸಿದ ಸಂತೃಪ್ತಿ ನನಗಿದೆ.

ಕ್ರಿಕೆಟ್ ಆಟದ ಮಾತಿನ ರೂಢಿಯಲ್ಲಿರುವ That's Not Cricketಎಂಬ ಚೌಕಟ್ಟಿನೊಳಗೇ ಕಾರ್ಯನಿರ್ವಹಿಸಿದೆನೆಂದರೆ ಉತ್ಪ್ರೇಕ್ಷೆ ಮಾತೆಂದು ಭಾವಿಸಬಾರದೆಂದು ನಮ್ರವಾಗಿ ವಿನಂತಿಸುವೆ.

ಶ್ರೀಮಂತ ಕುಟುಂಬದ ಹಿನ್ನೆಲೆಯಿಂದ ಬಂದಿದ್ದ ಪತ್ನಿಗೆ ನಮ್ಮ ಜೀವನ ಮಟ್ಟದ ಬಗೆಗೆ ಒಂದು ರೀತಿಯ ಕೊರತೆಯ ಭಾವನೆ ಇರುವಂತಿತ್ತು; ಬಹಿರಂಗವಾಗಿ ಅದನ್ನು ವ್ಯಕ್ತಪಡಿಸುತ್ತಿರಲಿಲ್ಲ; ಆದರೂ ಅಂತಹ ಆಸೆ ಆಕಾಂಕ್ಷೆಗಳನ್ನು ಈಡೇರಿಸಿಕೊಳ್ಳುವ ಇರಾದೆ ಇರುವಂತಿತ್ತು. ಪಿತ್ರಾರ್ಜಿತ ಆಸ್ತಿಯೂ ಮುಳುಗಡೆಯಾಗಿದ್ದ ಹಿನ್ನೆಲೆಯಲ್ಲಿ ಸ್ವಲ್ಪ ಜಮೀನು ಪಡೆದುಕೊಳ್ಳಬೇಕೆಂಬ ಅಭಿಲಾಷೆಯನ್ನು ವ್ಯಕ್ತಪಡಿಸುತ್ತಿದ್ದುದುಂಟು. ನನ್ನ ತಾಯಿ ಗತಿಸುವವರೆಗೂ ಅದೇ ಅಭಿಲಾಷೆಯುಳ್ಳವರಾಗಿದ್ದರು. ನಿವೃತ್ತನಾದ ಸಮಯದಲ್ಲಿ ಶಿವಮೊಗ್ಗಾದ ಆಜು ಬಾಜಿನಲ್ಲಿ ಜಮೀನು ಖರೀದಿಸುವ ಪ್ರಯತ್ನಗಳನ್ನೂ ಮಾಡಿದ್ದೆವು; ಹಲವಾರು ಕಾರಣಗಳಿಂದ ಸಾಧ್ಯವಾಗಿರಲಿಲ್ಲ.

## ಕೃಷಿಕ ಜೀವನ

ಮುಂದೆ ೧೦-೧೨ ವರ್ಷಗಳ ನಂತರ ತೀರ್ಥಹಳ್ಳಿಯ ಹತ್ತಿರ ಕುಪ್ಪಳಿಯಲ್ಲಿ (ರಾಷ್ಟ್ರಕವಿ ಕುವೆಂಪು ಹುಟ್ಟೂರು) ಸ್ವಲ್ಪ ಜಮೀನು ಮಾರಾಟಕ್ಕಿರುವುದು ತಿಳಿದು ಬಂದಿತು. ನನ್ನಾಕೆಯ ಸಂಬಂಧಿಗಳಿಗೆ ಸೇರಿದ್ದ ಆ ಭೂಮಿಯನ್ನು ಪಡೆದುಕೊಳ್ಳುವ ಭಾವನಾತ್ಮಕ ಆಕರ್ಷಣೆ ಒಂದು ಕಡೆಯಾದರೆ, ಇನ್ನೇನು ಖಾಸಗಿ ಪ್ರ್ಯಾಕ್ಟೀಸನ್ನು ಸ್ಥಗಿತಗೊಳಿಸಿ ಪ್ರಶಾಂತ ವಾತಾವರಣದಲ್ಲಿ ನೆಲಸುವ ಒಲವು ನನಗಿತ್ತು. ಅತ್ಯಂತ ಪ್ರಯಾಸದಿಂದ ಆ ಜಮೀನು ಖರೀದಿಸುವಲ್ಲಿ ಒಂದು ವರ್ಷವೇ ಹಿಡಿಯಿತು.

ಶಿವಮೊಗ್ಗದ ಮನೆಯಲ್ಲಿ ಷೇರು ವ್ಯವಹಾರದಲ್ಲಿ ತೊಡಗಿಕೊಂಡಿರುವ ಒಬ್ಬ ಮಗನಿರುವಂತೆ ಮಾಡಿ, ಪತ್ನಿ, ನಾನು ಮತ್ತು ಕಿರಿಯ ಮಗನ ಜೊತೆಯಲ್ಲಿ ಕುಪ್ಪಳಿಯಲ್ಲಿ ನೆಲೆಯಾದೆವು(೧೯೯೬). ಆ ಸಮಯದಲ್ಲೇ ಪತ್ನಿಯ ಆರೋಗ್ಯದಲ್ಲಿ ಸ್ವಲ್ಪ ವ್ಯತ್ಯಾಸಗಳು ಪ್ರಕಟವಾದವು. ಹಿಂದಿನಿಂದಲೂ ಒಳ್ಳೆಯ ಆರೋಗ್ಯದ ಸ್ಥಿತಿಯಲ್ಲಿದ್ದ ಆಕೆಯ ತೂಕ ಕಡಿಮೆಯಾಗ ತೊಡಗಿತು. ನಿಶ್ಯಕ್ತಿ, ಅಸ್ಪಷ್ಟ ಎದೆನೋವು ಮುಂತಾದ ಲಕ್ಷಣಗಳೂ ಕಾಣಿಸಿಕೊಂಡವು. ಶಿವಮೊಗ್ಗೆಯಲ್ಲಿ ಜರುಗಿಸಿದ ತಪಾಸಣೆಯಿಂದ ಯಾವುದೇ ವ್ಯತ್ಯಾಸಗಳು ವ್ಯಕ್ತವಾಗಲಿಲ್ಲ. ಸ್ವಲ್ಪ ಸಮಯದನಂತರ ಬೆಂಗಳೂರಿನ ಮಣಿಪಾಲ್ ಆಸ್ಪತ್ರೆಯಲ್ಲಿ ಸಿ.ಟಿ. ಸ್ಕ್ಯಾನ್; ಎಂ.ಆರ್.ಐ.ಗಳಂಥ ಪರೀಕ್ಷೆಗಳಿಗೊಳಪಡಿಸಲಾಯಿತು. ಬಲಭಾಗದ ಎದೆಗೂಡಿನ ತಳದಲ್ಲಿ ಒಂದು ಬಗೆಯ ಬೆಳವಣಿಗೆ (Growth) ಇರುವುದು ಪತ್ತೆಯಾಯಿತು.

ಮುಂದಿನ ಒಂದೇ ವಾರದಲ್ಲಿ ಅದೇ ಆಸ್ಪತ್ರೆಯ ಖ್ಯಾತ ಸರ್ಜನ್ ಒಬ್ಬರು ಆಪರೇಷನ್ ಮಾಡಿದರು. ಎದೆಗೂಡಿನ ತಳದಲ್ಲಿರುವ ವಪೆ(Diaphragm)ಯ ಮೇಲ್ಭಾಗದಲ್ಲಿ ಪುಟ್ಟ ಆಮೆಯ ಆಕಾರದ ಗೆಡ್ಡೆ(Tumour)ಯೊಂದು ಬೆಳೆದುಕೊಂಡಿತ್ತು. ಅದನ್ನು ಸುಲಭವಾಗಿ ಹೊರತೆಗೆದರು. ಅದರ ಮುಂದುವರಿದ ಪರೀಕ್ಷೆಯಿಂದ ಅದು 'ಮೀಸೋಥೀಲಿಯೋಮಾ'(Mesothelioma) ಎಂಬ 'ಅಮಾರಕ ಸ್ವರೂಪದ ಗೆಡ್ಡೆ' (Benign tumour) ಅಂದರೆ ಕ್ಯಾನ್ಸರ್ ಆಗಿರದ, ತೀರಾ ಅಪರೂಪದ ಪರಿಸ್ಥಿತಿ ಎಂದು ತೀರ್ಮಾನವಾಯಿತು. ಮುಂದಿನ ಕೆಲವೇ ದಿನಗಳಲ್ಲಿ ಚೇತರಿಸಿಕೊಂಡು ಕುಪ್ಪಳಿಗೆ ಹಿಂತಿರುಗಿದಳು. ಗೃಹಕೃತ್ಯದ ಕೆಲಸಕಾರ್ಯಗಳ ಜೊತೆ ಕೃಷಿಕೆಲಸಗಳ ಮೇಲ್ವಿಚಾರಣೆಯಲ್ಲೂ ಭಾಗವಹಿಸಲಾರಂಭಿಸಿದಳು.

## ನಿವೃತ್ತಿ ನಂತರದ ಜೀವನ

ನಿವೃತ್ತಿಯ ನಂತರ ಶಿವಮೊಗ್ಗಾದಲ್ಲಿ ಖಾಸಗಿ ಕ್ಲಿನಿಕ್ ತೆರೆದು ಸಲಹಾ ಶಸ್ತ್ರ ವೈದ್ಯನಾಗಿ (Consulting Surgeon) ಕಾರ್ಯನಿರ್ವಹಿಸಲಾರಂಭಿಸಿದ ಬಗೆಗೆ ಪ್ರಸ್ತಾಪ ಮಾಡಿದ್ದೆನಷ್ಟೆ. ಕೆಲವು ಖಾಸಗಿ ನರ್ಸಿಂಗ್ ಹೋಮ್‌ಗಳಲ್ಲಿಯೂ ರೋಗಿಗಳನ್ನು ದಾಖಲು ಮಾಡಿ ಆಪರೇಷನ್‌ಗಳನ್ನು ಕೈಗೊಳ್ಳುತ್ತಿದ್ದೆ. ಆ ಸಮಯದಲ್ಲಿ ತಮ್ಮದೇ ನರ್ಸಿಂಗ್ ಹೋಮ್ ಇಲ್ಲದೆ ಸ್ವತಂತ್ರವಾಗಿ ಸರ್ಜನ್ ಕಾರ್ಯ ನಿರ್ವಹಿಸುತ್ತಿದ್ದವನು ನಾನೊಬ್ಬನೇ ಎನಿಸುತ್ತದೆ. ಅದರಿಂದಾಗಿ ಮೊದಲ ಕೆಲವು ವರ್ಷಗಳು ಕೈ ತುಂಬಾ ಕೆಲಸಗಳಿರುತ್ತಿದ್ದವು. ಹಿಂದೆಂದೂ ಈ ತರದ ಕಾರ್ಯ ನಿರ್ವಹಿಸದೆ, ನಾನಿತ್ತ ಸಲಹೆ ಅಥವಾ ಜರುಗಿಸಿದ ಆಪರೇಷನ್‌ಗಳಿಗೆ ಇಂತಿಷ್ಟೇ ಫೀಜು ಕೊಡಬೇಕೆಂದು ಕೇಳುವುದಕ್ಕೆ ಮುಜುಗರಪಟ್ಟುಕೊಳ್ಳುತ್ತಿದ್ದೆ. ಕೆಲಸಾರಿ ನರ್ಸಿಂಗ್ ಹೋಮ್‌ನವರೇ ರೋಗಿಯ ಸ್ಥಿತಿಗತಿಗಳನ್ನನುಸರಿಸಿ ನನ್ನ ಚಾರ್ಜ್ ನಿಗದಿ ಮಾಡುತ್ತಿದ್ದುದೂ ಉಂಟು. ವರ್ಷಗಳು ಕಳೆದಂತೆಲ್ಲಾ ನನ್ನ ಹಾಗೆ ಸ್ವತಂತ್ರವಾಗಿ ಕಾರ್ಯ ನಿರ್ವಹಿಸುವ ಇತರರೂ ಬಂದರು. ವಯಸ್ಸಾದಂತೆಲ್ಲಾ ವೃತ್ತಿಯ ಬಗೆಗೆ ಉತ್ಸಾಹವೂ ಕಡಿಮೆಯಾಗತೊಡಗಿತು. ಜೊತೆಗೆ ಶಿವಮೊಗ್ಗೆಯ ಕೆಲವು ಸಾಂಸ್ಕೃತಿಕ, ಸಾಹಿತ್ಯಿಕ, ಶೈಕ್ಷಣಿಕ ಸಂಘ ಸಂಸ್ಥೆಗಳ ಸದಸ್ಯನಾಗಿ ಕಾರ್ಯನಿರತನೂ ಆಗಿರುತ್ತಿದ್ದೆ. ಈ ಅವಧಿಯೆಲ್ಲಾ ನನ್ನ ಸಾಹಿತ್ಯ ಕೃಷಿಯೂ ಚುರುಕಾಗಿತ್ತು. ಕೆಲವು ಪುಸ್ತಕಗಳು, ಹಲವಾರು ಲೇಖನಗಳನ್ನೂ ಪ್ರಕಟಿಸಲು ಸಾಧ್ಯವಾಯಿತು. ಸಾಹಿತ್ಯ ಅಕಾಡೆಮಿ, ಆರ್ಯಭಟ, ಕುವೆಂಪು ಸಾಹಿತ್ಯ ಪುರಸ್ಕಾರಗಳಂಥ ಮನ್ನಣೆಗಳೂ ದೊರೆತವು. ಈ ತರಹೆಯ ಬೆಳವಣಿಗೆಗಳಿಂದ ಕುಪ್ಪಳಿಯಂಥ ಪ್ರಶಾಂತ ವಾತಾವರಣದಲ್ಲಿ ನೆಲಸುವ ಮನಸ್ಸಾಯಿತು.

ಆದರೆ ಕುಪ್ಪಳಿಯ ವಾಸ್ತವ್ಯ ಒಂದು ರೀತಿಯಲ್ಲಿ ನಾವು ಎಣಿಸಿದಂತೆ ಸುಗಮವಾಗಲಿಲ್ಲ. ಮೊದಲಿಗೆ ಪತ್ನಿಯ ಅನಾರೋಗ್ಯ ಧೃತಿಗೆಡಿಸಿತು. ಜಮೀನು ಕೃಷಿ ಕಾರ್ಯಗಳಲ್ಲಿ ಅಡಗಿದ್ದ ಕಷ್ಟಕೋಟಲೆಗಳು ಒಂದೊಂದಾಗಿ ಬಹಿರಂಗವಾಗ ತೊಡಗಿದವು. ಅಲ್ಲಿಯ ಪ್ರತಿಯೊಂದು ಕೆಲಸಕ್ಕೂ ಕಾರ್ಮಿಕರನ್ನೇ ಅವಲಂಬಿಸಬೇಕಾಗಿದ್ದು ಅದರಿಂದ ನಾನಾ ಬಗೆಯ ಸಮಸ್ಯೆಗಳು ಉದ್ಭವಿಸಲಾರಂಭಿಸಿದವು. ಸಾಲ ಮಾಡಿ ಹಣ ಸುರಿಯುತ್ತಿದ್ದರೂ ನಿರೀಕ್ಷಿಸಿದಂತೆ ಫಲದಾಯಕವಾಗಿರುತ್ತಿರಲಿಲ್ಲ. ಅದರಿಂದ ನಾನು ಚಿಂತಾಕ್ರಾಂತನಾಗಿ ಬಿಡುತ್ತಿದ್ದೆ.

ನಾನು ಕುಪ್ಪಳಿಯಲ್ಲಿ ನೆಲಸುವ ವಿಚಾರ ಬಹಿರಂಗವಾದ ಮೇಲೆ ಮತ್ತೊಂದು ಜವಾಬ್ದಾರಿ ನನ್ನನ್ನರಸಿ ಬಂದಿತು. ಕೆಲವು ವರ್ಷಗಳಿಂದ ಸರ್ಕಾರ ಪ್ರೇರಿತ 'ರಾಷ್ಟ್ರಕವಿ ಕುವೆಂಪು ಪ್ರತಿಷ್ಠಾನ (ರಿ)' ಸ್ಥಾಪನೆಯಾಗಿತ್ತು. ಪೂರ್ವಭಾವಿಯೋಜನೆಗಳು ತಯಾರಾಗಿದ್ದರೂ, ಕಾರ್ಯ ನಿರ್ವಹಿಸುವವರ ಅಭಾವದಿಂದ ಕೆಲಸ ಕಾರ್ಯಗಳು ಶುರುವಾಗಿರಲಿಲ್ಲ. ಸಾಹಿತ್ಯಾಸಕ್ತನಾದ ಹಾಗೂ ಅಲ್ಲೇ ನೆಲಸುವ ಪ್ರಯತ್ನದಲ್ಲಿದ್ದು ನನ್ನನ್ನು ಅದರ ಜವಾಬ್ದಾರಿ ಹೊರುವಂತೆ ಒತ್ತಾಯಗಳು ಬಂದವು. ಅಂತಹ ಕಾರ್ಯಭಾರಗಳ ಅನುಭವವಿಲ್ಲದ ಹಾಗೂ ವಯಸ್ಸಾಗುತ್ತಿದ್ದ ನನ್ನಿಂದ ಅಂತಹ ಜವಾಬ್ದಾರಿಯನ್ನು ನಿರ್ವಹಿಸಲಾಗದೆಂದು ನಿರಾಕರಿಸಿದರೂ, ಕೆಲವರ ಒತ್ತಾಯಗಳಿಗೆ ಮಣಿದು ಅದರ ಸಮ-ಕಾರ್ಯದರ್ಶಿಯ ಹುದ್ದೆಯನ್ನು ಒಪ್ಪಿಕೊಳ್ಳಬೇಕಾಯಿತು.

ಕುವೆಂಪು ಮನೆಯ ಜೀರ್ಣೋದ್ಧಾರ ಹಾಗೂ ಕವಿ ಶೈಲದ ಸ್ಮಾರಕಗಳ ಕೆಲಸಗಳು ಆರಂಭವಾಗುವುದಕ್ಕೆ ಚಾಲನೆ ನೀಡಿದೆ. ಪ್ರತಿಷ್ಠಾನದ ಬಗೆಗಿನ ಪತ್ರ ವ್ಯವಹಾರ ಮತ್ತು ಸಭೆ ಸಮಾರಂಭಗಳನ್ನೇನೊ ಜರುಗಿಸುತ್ತಿದ್ದೆ. ಸಾಮಾನು ಸರಂಜಾಮುಗಳ ಖರೀದಿ, ಕಟ್ಟಡ ನಿರ್ಮಾಣ ಮುಂತಾದ ಪ್ರಕ್ರಿಯೆಗಳಲ್ಲಿ ನನಗೆ ಪ್ರತ್ಯಕ್ಷ ಅನುಭವಗಳಿರಲಿಲ್ಲ. ಅಲ್ಲದೆ ಪುನರ್

ನಿರ್ಮಾಣದ ವಿವಿಧ ಕಾರ್ಯಗಳಲ್ಲಿ ತೊಡಗಿಸಿಕೊಂಡಿರುವವರ ನಡುವೆ ಸರಿಯಾದ ಸಹಕಾರ ಸಂಯೋಜನೆಗಳನ್ನುಂಟು ಮಾಡುವುದು ನನಗೆ ಪ್ರಯಾಸಕರವಾಗುತ್ತಿತ್ತು. ಸ್ವಭಾವತಃ ಸೂಕ್ಷ್ಮ ಸಂವೇದನಾಶೀಲನಾದ ನನ್ನ ಮನಸ್ಸಿನ ಮೇಲೆ ಅವೆಲ್ಲಾ ಪರಿಣಾಮ ಬೀರತೊಡಗಿದವು. ಕೃಷಿ ಕೆಲಸ ಕಾರ್ಯಗಳ ತೊಡಕಿನ ಜೊತೆ, ಇದೂ ಸೇರ್ಪಡೆಯಾಯಿತು. ಮನಸ್ಸಿನ ಸ್ವಾಸ್ಥ್ಯ ಏರುಪೇರಾಗಿ, ಬರುಬರುತ್ತಾ ಮನೋಸ್ವಾಸ್ಥ್ಯಕಾರಿ ಮಾತ್ರೆಗಳ (Tranquilizers) ಮೊರೆ ಹೋಗಬೇಕಾಯಿತು. ಮುಂದೆ ದೈಹಿಕವಾಗಿ ಪರಿಣಾಮ ಉಂಟಾಗತೊಡಗಿತು. ಸ್ವಲ್ಪ ಚುರುಕಾಗಿ ನಡೆದಾಡಿದರೆ, ಕಡಿದಾದ ದಾರಿಯಲ್ಲಿ ಚಲಿಸಿದಾಗಲೆಲ್ಲಾ ಉಬ್ಬಸ ಬಂದಂತಾಗುತ್ತಿತ್ತು. ಇತರ ರೊಡನೆ ನಡೆದಾಡುವಾಗ ನಾನು ಹಿಂದೆ ಉಳಿಯುತ್ತಿದ್ದೆ; ಆದರೂ ನನ್ನ ಆರೋಗ್ಯ ಕುಸಿಯುತ್ತಿ ರುವುದರ ಬಗೆಗೆ ಯೋಚಿಸಲೇ ಇಲ್ಲ!

ಬಾಲ್ಯದಲ್ಲಿ ಚಿಕ್ಕಪುಟ್ಟ ಅನಾರೋಗ್ಯದ ಸಮಸ್ಯೆಗಳನ್ನು ಅನುಭವಿಸಿದ್ದನ್ನು ಹೊರತು ಪಡಿಸಿದರೆ ಜೀವನದ ಬಹಳ ಸಮಯ ಬೇರಾವ ತೊಂದರೆಗಳಿಂದಲೂ ಬಳಲಿದವನಲ್ಲ. ಆದರೆ ಶಿವಮೊಗ್ಗಾದಲ್ಲಿದ್ದಾಗ (೧೯೭೭) ಡಯಾಬಿಟಿಸ್ ವ್ಯಾಧಿ ಅಂಕುರಿಸಿದ ಲಕ್ಷಣಗಳು ಪ್ರಕಟವಾದವು. ಅದು ತುಂಬಾ ಸೌಮ್ಯ ರೀತಿಯದೆಂದು ತಜ್ಞರು ಅಭಿಪ್ರಾಯಪಟ್ಟಿದ್ದರು. ಬಹಳ ವರ್ಷ ಸೂಕ್ತ ಆಹಾರ ಪದಾರ್ಥಗಳ ಬಳಕೆ ತಿರುಗಾಟದಂಥ ವ್ಯಾಯಾಮಗಳಿಂದಲೇ ಹತೋಟಿಯಲ್ಲಿರಿಸಲು ಸಾಧ್ಯವಾಗಿತ್ತು. ಇತ್ತೀಚಿನ ಕೆಲವು ವರ್ಷಗಳಿಂದ ಮಾತ್ರೆಗಳ ಸೇವನೆ ಅನಿವಾರ್ಯವಾಗಿತ್ತು. ಆದರೂ ಕುಪ್ಪಳಿಯಲ್ಲಿ ನೆಲಸುವವರೆಗೂ ಅದರಿಂದ ಹೆಚ್ಚಿನ ತೊಂದರೆ ಗಳುಂಟಾಗಿರಲಿಲ್ಲವೆಂದೇ ಹೇಳಬಹುದು.

## ಲಘು ಹೃದಯಾಘಾತ!

ಕುಪ್ಪಳಿಗೆ ಹೋದಾಗಿನಿಂದ ಗದ್ದೆ ತೋಟಗಳಲ್ಲಿ ತಿರುಗಾಡುವುದೇ ಅಲ್ಲದೆ, ಪ್ರತಿಸಂಜೆ ಮನೆ ಎದುರುಗಿನ ಅಂಗಳದಲ್ಲಿ ನಡೆದಾಡುತ್ತಿದ್ದೆ. ಅಕ್ಟೋಬರ್ ತಿಂಗಳ (೧೯೯೭) ಒಂದು ಮಧ್ಯಾಹ್ನ ಊಟದ ನಂತರ ಮಲಗಿ ಓದುತ್ತಿದ್ದಾಗ ಎಡಗೈ ಕಿರುಬೆರಳಿನಲ್ಲಿ ಒಂದರ್ಧ ನಿಮಿಷ ಸೆಳೆತ ಉಂಟಾಯಿತು. ಆದರೆ ಎದೆ ನೋವಾಗಲೀ ನಿಶ್ಯಕ್ತಿಯಾಗಲೀ ಪ್ರಕಟವಾಗಲಿಲ್ಲ. ಮುಂದಿನ ವಾರದ ಒಂದು ಸಂಜೆ ಮನೆ ಎದುರು ನಡೆದಾಡುತ್ತಿದ್ದಾಗ ಎದೆಯೊಳಗಡೆ ಒಂದು ರೀತಿಯ ಅಸೌಖ್ಯ (discomfort) ಉಂಟಾದಂತಾಯಿತು. ಸ್ವಲ್ಪ ವಿಶ್ರಾಂತಿ ಪಡೆದನಂತರ ಕಡಿಮೆ ಯಾಯಿತು. ಮೂರ್‍ನಾಲ್ಕು ದಿನಗಳಲ್ಲಿ ಕುವೆಂಪು ಟ್ರಸ್ಟ್‌ನ ಸಭೆಗಾಗಿ ಬೆಂಗಳೂರಿಗೆ ಹೋದಾಗ ಸಾಕಷ್ಟು ನಡೆದಿದ್ದರೂ ಹಿಂದಿನ ತೊಂದರೆ ಪ್ರಕಟವಾಗಲಿಲ್ಲ. ಅಲ್ಲಿಂದ ಶಿವಮೊಗ್ಗೆಗೆ ಹಿಂದಿರುಗಿದವನು ನಂಜಪ್ಪ ಆಸ್ಪತ್ರೆಯ ಹೃದ್ರೋಗ ತಜ್ಞ ಡಾ॥ ಜೆ. ನರೇಂದ್ರ, ಅವರಿಗೆ ತೋರಿಸುವ ಮನಸ್ಸಾಯಿತು. ವಿವರವಾಗಿ ಪರೀಕ್ಷಿಸಿ ಕೆಲವು ದಿನಗಳ ಹಿಂದೆ ನನಗೆ ಲಘು ಹದಯಾಘಾತವಾದ ಲಕ್ಷಣಗಳಿರುವುದನ್ನು ಶ್ರುತಪಡಿಸಿದರು. ಅದಕ್ಕೆ ಸೂಕ್ತ ಚಿಕಿತ್ಸೆ ಸೂಚಿಸಿದರು. ಅಲ್ಲದೆ ಒಂದು ತಿಂಗಳ ನಂತರ ಬೆಂಗಳೂರಲ್ಲಿ ಕಾರೋನರಿ ಆಂಜಿಯೋಗ್ರಫಿ (Coronary Angiography) ಮಾಡಿಸುವ ಸೂಚನೆ ನೀಡಿದರು. ಅದರಂತೆ ಆಂಜಿಯೋಗ್ರಫಿ ಯನ್ನೂ ಮಾಡಿಸಿದೆ. ನನ್ನ ಹೃದಯದ ಸ್ನಾಯುಗಳಿಗೆ ರಕ್ತ ಸರಬರಾಜು ಮಾಡುವ ಮೂರು ಪ್ರಮುಖ ಧಮನಿಗಳು ಬಹಳಷ್ಟು ಕಿರಿದಾಗಿರುವುದು ಕಂಡು ಬಂದಿತು. ಅಲ್ಲದೆ ಕೂಡಲೇ ಕಾರೋನರಿ ಬೈ-ಪಾಸ್ ಸರ್ಜರಿ ಮಾಡಿಸಬೇಕೆಂಬ ಒತ್ತಾಯಪೂರ್ವಕ ಸಲಹೆಯನ್ನಿತ್ತರು.

ಕಾರೋನರಿ ಧಮನಿ ವ್ಯಾಧಿಯ ಸಮಸ್ಯೆಯ ಬಗೆಗೆ ಹಲವು ವರ್ಷಗಳಿಂದ ನನಗಿದ್ದ ಆಸಕ್ತಿಯ ಬಗೆಗೆ ಈಗಾಗಲೇ ಪ್ರಸ್ತಾಪ ಮಾಡಿರುವೆ. ಅದೀಗ ನನ್ನಲ್ಲೇ ಅಂಕುರಿಸಿದೆಂದಾಗ ನನಗೇನಾಗಬೇಡ? ಯಾವುದೇ ಒಂದು ನಿರ್ಧಾರ ಮಾಡುವುದು ನನಗೊಂದು ಸಮಸ್ಯೆಯಾಗಿ ಪರಿಣಮಿಸಿತು. ಅದ್ದೇಗೋ ಆಪರೇಷನ್ ಮಾಡಿಸಿಕೊಳ್ಳುವುದರ ಬದಲು ಕೆಲವು ಹೃದ್ರೋಗ ತಜ್ಞರು ಪ್ರತಿಪಾದಿಸುತ್ತಿದ್ದ 'ಮಧ್ಯ ಮಾರ್ಗೀಯ' ಚಿಕಿತ್ಸಾ ವಿಧಾನಗಳಾದ ಸೂಕ್ತ ಪಥ್ಯಾಹಾರ, ಮದ್ದುಗಳ ಸೇವನೆ, ಜೀವನ ಶೈಲಿಯ ಸುಧಾರಣೆ ಮುಂತಾದ ಕ್ರಮಗಳ ಬಗೆಗೆ ಒಲವು ಉಂಟಾಗತೊಡಗಿತು. ಹಾಗೆ ನೋಡಿದರೆ ಅಂತಹ ಕ್ರಮಗಳನ್ನು ಕೆಲಕಾಲ ಅನುಸರಿಸಿದಾಗ ನನ್ನ ಪರಿಸ್ಥಿತಿ ಉತ್ತಮವಾದಂತೆಯೂ ಕಂಡುಬಂದಿತು.

## ತೀವ್ರ ಹೃದಯಾಘಾತ

ಆದರೆ ೧೯೯೯ರ ಜನವರಿ ೨೭ರಂದು ನನ್ನ ಯೋಜನೆಗಳೆಲ್ಲಾ ವಿಫಲವಾದವು. ಅಂದು ಸಾಯಂಕಾಲ ಯಾವುದೇ ಮುನ್ಸೂಚನೆ ಇಲ್ಲದೆ ನನಗೆ ತೀವ್ರ ಹೃದಯಾಘಾತವಾಯಿತು. ಅಂತಹ ತೀಕ್ಷ್ಣ ಹಾಗೂ ಭಯಂಕರ ನೋವನ್ನೆಂದೂ ಅನುಭವಿಸಿರಲಿಲ್ಲ. ನಾಡಿಮಿಡಿತವೇ ನಿಂತಂತಾಗಿ ನನ್ನ ಅವಸಾನ ಸಮೀಪಿಸಿತೆನಿಸಿತು. ಅಂದು ಕುಪ್ಪಳಿಯ ಮನೆಯಲ್ಲಿ ನನ್ನ ಪತ್ನಿ ಮತ್ತು ನಾನು ಇಬ್ಬರೇ ಇದ್ದೆವು. ಆಕೆಯ ಧೈರ್ಯ, ಸಮಯಸ್ಫೂರ್ತಿಯಿಂದ ತಡಮಾಡದೇ ತೀರ್ಥಹಳ್ಳಿಗೆ ನನ್ನನ್ನು ಸಾಗಿಸಿದರು. ಅಲ್ಲಿಯ ಖ್ಯಾತ ಫಿಜಿಷಿಯನ್ ಡಾ|| ಟಿ. ನಾರಾಯಣ ಸ್ವಾಮಿ ಚೇತರಿಕೆಗೆ ಸೂಕ್ತ ಚಿಕಿತ್ಸಾ ವಿಧಾನಗಳನ್ನು ನೀಡಿ ನನ್ನನ್ನು ಶಿವಮೊಗ್ಗೆಗೆ ಸಾಗಿಸುವ ಏರ್ಪಾಡು ಮಾಡಿದರು.

ಶಿವಮೊಗ್ಗೆಯಲ್ಲಿ ನಂಜಪ್ಪ ಆಸ್ಪತ್ರೆಗೆ ದಾಖಲು ಮಾಡಿದರು. ಹಿಂದಿನಿಂದಲೂ ನನ್ನನ್ನು ನೋಡಿಕೊಳ್ಳುತ್ತಿದ್ದ ಹೃದ್ರೋಗ ತಜ್ಞ ಡಾ|| ನರೇಂದ್ರ ಅವರು ಪರೀಕ್ಷಿಸಿ ಹೃದಯಾಘಾತ ವಾಗಿರುವುದನ್ನು ಖಚಿತಪಡಿಸಿದರು ಹಾಗೂ ಕಾರೋನರಿ ಧಮನಿಯಲ್ಲಿ ಅಡಚಣೆಗೆ ಕಾರಣ ವಾಗಿರಬಹುದೆಂದು ಶಂಕಿಸಿದ ರಕ್ತದ ಹೆಪ್ಪನ್ನು (Blood Clot) ಕರಗಿಸುವ ಚಿಕಿತ್ಸಾ ವಿಧಾನವನ್ನು - ಥ್ರಾಂಬೋಲಿಟಿಕ್ ಚಿಕಿತ್ಸೆ - (Thrombolytic Therapy) ತತ್‌ಕ್ಷಣ ಜಾರಿಗೊಳಿಸಿ, ಮತ್ತಿತರ ಬೆಂಬಲೋಪಚಾರ ಅಳವಡಿಸಿದರು. ಆ ರಾತ್ರಿ, ಸುಖವಾಗಿ ನಿದ್ರೆ ಮಾಡಿದೆ. ಹೃದಯಾಘಾತ ಸಂಭವಿಸಿದ ಕೇವಲ ಆರು ಗಂಟೆಯೊಳಗಡೆಯೆ ಥ್ರಾಂಬೋಲಿಟಿಕ್ ಚಿಕಿತ್ಸೆಯನ್ನು ನೀಡಲು ಸಾಧ್ಯವಾಗಿದ್ದರಿಂದ ರಕ್ತದ ಹೆಪ್ಪು ಸುಲಭವಾಗಿ ಕರಗಿ, ಕಾರೋನರಿ ಧಮನಿಯಲ್ಲಿನ ಅಡಚಣೆ ನಿವಾರಣೆಯಾಯಿತು; ಅದರ ಮೂಲಕ ರಕ್ತದ ಹರಿವು ಪ್ರಾರಂಭವಾಗಿ ದ್ದರಿಂದ ಹೃದಯದ ಸ್ನಾಯುಗಳಿಗೆ ಅಷ್ಟೊಂದು ಅಪಾಯ ಸಂಭವಿಸಿರಲಿಲ್ಲವೆಂದು ಅಭಿಪ್ರಾಯ ಪಟ್ಟರು. ಹಾಗೂ ಇನ್ನು ತಡಮಾಡದೆ ಬೆಂಗಳೂರಿಗೆ ತೆರಳಿ ಕಾರೋನರಿ ಬೈ-ಪಾಸ್ ಸರ್ಜರಿ ಮಾಡಿಸಿಕೊಳ್ಳಲೇ ಬೇಕೆಂದು ಆಗ್ರಹಪಡಿಸಿದರು.

ಬೆಂಗಳೂರಲ್ಲಿ ವ್ಹೋಕಾರ್ಡ್ ಹೃದ್ರೋಗ ಆಸ್ಪತ್ರೆಗೆ ದಾಖಲಾದೆ. ಖ್ಯಾತ ಹೃದಯ ಶಸ್ತ್ರಚಿಕಿತ್ಸಕ ಡಾ|| ವಿವೇಕ್ ಜವಳಿಯವರು ದಿನಾಂಕ ೧೫ ಫೆಬ್ರವರಿ ೧೯೯೯ರಂದು ಬೈ-ಪಾಸ್ ಸರ್ಜ[illegible]ಯನ್ನು ಜರುಗಿಸಿದರು. ಅದು ಯಶಸ್ವಿಯಾಯಿತು. ಅತಿ ಶೀಘ್ರದಲ್ಲೇ ಚೇತರಿಸಿಕೊಂಡೆ. ನನಗೆ ಹೃದಯಾಘಾತ ಉಂಟಾದ ಸಮಯ, ಸಂದರ್ಭ, ಲಭ್ಯವಿದ್ದ ಸೌಕರ್ಯಗಳ ಬಗೆಗೆ ಹಿಂದಿರುಗಿ ನೋಡಿದಾಗ ನಾನಿನ್ನೂ ಬದುಕಿ ಉಳಿಯಲು ಸಾಧ್ಯವಾಗಿದ್ದು ಆಶ್ಚರ್ಯ

ಹುಟ್ಟಿಸುತ್ತದೆ. ಶಸ್ತ್ರಚಿಕಿತ್ಸೆ ಜರುಗಿ ಇದೀಗ ಮೂರು ವರ್ಷಗಳ ಮೇಲಾಗಿದೆ; ಹಾಗೂ ೭೩ ವರ್ಷಗಳ ವಯಸ್ಸಾಗಿದೆ. ಹೃದಯಾಘಾತದ ಹಿಂದಿನಷ್ಟೇ ಕಾರ್ಯಶೀಲನಾಗಿರುವುದಕ್ಕೆ ಸಾಧ್ಯವಾಗಿರದಿದ್ದರೂ ನನ್ನ ಎಲ್ಲಾ ಇತಿಮಿತಿಗಳ ವಾಸ್ತವ ಸಂದರ್ಭಗಳಲ್ಲಿ ಒಂದು ರೀತಿಯ ಸೌಖ್ಯ ಜೀವನ ನಡೆಸುತ್ತಿರುವೆ. ಬಹಳ ಹಿಂದಿನಿಂದ ಕಾರೋನರಿ ಧಮನಿಗಳ ವ್ಯಾಧಿಯ ಬಗೆಗೆ ಬರೆಯಬೇಕೆಂಬ ಕೃತಿ "**ನನಗೆ ಬೈ-ಪಾಸ್ ಆಯಿತು**". ಹಸ್ತಪ್ರತಿ ತಯಾರಾಗಿ ನವಕರ್ನಾಟಕ ಪ್ರಕಾಶನದವರಿಂದ ಪ್ರಕಟಣೆಯಾಗಿದೆ (೨೦೦೨).

## ಉಲ್ಬಣಿಸಿದ ಪತ್ನಿಯ ಪರಿಸ್ಥಿತಿ

ವ್ಹೋಕಾರ್ಡ್ ಆಸ್ಪತ್ರೆಯಲ್ಲಿ ನನಗೆ ಶಸ್ತ್ರಚಿಕಿತ್ಸೆಯಾದಾಗ ಪತ್ನಿಯೂ ಜೊತೆಗಿದ್ದು ನೋಡಿಕೊಳ್ಳುತ್ತಿದ್ದಳು. ಆಕೆಗೆ ಹಿಂದಿನ ಕಾಯಿಲೆಯ ಅಥವಾ ಇನ್ನಾವ ಸಮಸ್ಯೆಗಳು ಬಾಹ್ಯವಾಗಿ ಗೋಚರಿಸಿರಲಿಲ್ಲ. ಆದರೂ ಆಸ್ಪತ್ರೆಯಲ್ಲಿರುವ ಸಂದರ್ಭದಲ್ಲೇ ಒಂದು ಸಾರಿ ಕೂಲಂಕಷವಾಗಿ ವೈದ್ಯಕೀಯ ತಪಾಸಣೆ ಮಾಡಿಸುವ ಏರ್ಪಾಡು ಮಾಡಿಸಿದೆವು. ಮತ್ತೆ ಸಿ.ಟಿ. ಸ್ಕ್ಯಾನ್, ಎಂ.ಆರ್.ಐ. ಮುಂತಾದ ಪರೀಕ್ಷೆಗಳನ್ನೂ ಮಾಡಿಸಲಾಯಿತು. ಫಲಿತಾಂಶಗಳು ನಿಬ್ಬೆರಗಾಗುವಂತಿದ್ದವು. ಹಿಂದಿನ ವ್ಯಾಧಿ ಮರುಕಳಿಸಿದ್ದಲ್ಲದೆ ವಪೆಯ ಆಜುಬಾಜುಗಳಿಗೂ ಹರಡಿತ್ತು; ಬಲಗಡೆಯ ಶ್ವಾಸಕೋಶಕ್ಕೂ ತನ್ನ ಕೆನ್ನಾಲಗೆಯನ್ನು ಚಾಚಿತ್ತು. ಅಷ್ಟೆಲ್ಲಾ ಹಾವಳಿ ನಡೆದಿದ್ದರೂ ಆಕೆಗೆ ಬಾಹ್ಯ ಚರ್ಯೆಗಳು ಪ್ರಕಟವಾಗದಿದ್ದುದು ಚಕಿತಗೊಳಿಸಿತು.

ಅದೀಗ ಹರಡಿದ ರೀತಿನೀತಿಗಳು ಅವಲೋಕಿಸಿದ ತಜ್ಞರು ಅದೊಂದು ಅತ್ಯಂತ ನಿಧಾನಗತಿಯಲ್ಲಿ ಹರಡುವ ಗುಣಲಕ್ಷಣದ ಅಪರೂಪದ ಒಂದು ಬಗೆಯ 'ಕ್ಯಾನ್ಸರ್' ಆಗಿರಬೇಕೆಂಬ ನಿರ್ಧಾರಕ್ಕೆ ಬರುವುದು ಅನಿವಾರ್ಯವಾಯಿತು. ಆಗಲೇ ವ್ಯಾಪಕವಾಗಿ ಹರಡಿಕೊಂಡಿರುವುದರಿಂದ ಮತ್ತೊಮ್ಮೆ ಆಪರೇಷನ್ ಮಾಡಿ ತೆಗೆದು ಪರಿಸ್ಥಿತಿಯನ್ನು ಸಂಪೂರ್ಣವಾಗಿ ವಾಸಿಮಾಡಬಹುದಾದ ಸಾಧ್ಯತೆಗಳಿಲ್ಲವೆಂಬುದು, ನಾವಾಗ ಸಮಾಲೋಚಿಸಿದ ತಜ್ಞರೆಲ್ಲರ ಅಭಿಪ್ರಾಯವಾಗಿತ್ತು. ಆದರೂ ಎರಡು ಸಾರಿ ಕ್ಯಾನ್ಸರ್ ಮಾರಕ ಮದ್ದುಗಳ ಪ್ರಯೋಗವನ್ನು (Anticancer Chemotherapy) ಅಳವಡಿಸಿದೆವು. ಅದರಿಂದ ಯಾವ ಪ್ರಯೋಜನವೂ ಕಂಡುಬರಲಿಲ್ಲ. ಮುಂದೆ ೭-೮ ತಿಂಗಳುಗಳಲ್ಲಿ ಅದು ಅತ್ಯಂತ ಚುರುಕಾಗಿ ಬೆಳವಣಿಗೆಯಾಗಿ, ಎದೆಗೂಡಿನೊಳಗೆ ವ್ಯಾಪಕವಾಗಿ ಹರಡಿರಬೇಕು. ಬಲಗಡೆ ಶ್ವಾಸಕೋಶದ ಮೇಲೆ ಅತೀವ ಒತ್ತಡ ಹೇರಿ ಅದರ ಮೂಲಕ ಉಸಿರಾಡುವ ಕ್ರಿಯೆಯೇ ನಿಂತು ಹೋಯಿತು. ಉಸಿರಾಟ ತುಂಬಾ ಪ್ರಯಾಸವಾಯಿತು. ಬರುಬರುತ್ತಾ ಮಲಗಲೂ ಸಾಧ್ಯವಾಗದೆ, ಕಡೆಯ ಎರಡು ತಿಂಗಳು ಕುಳಿತುಕೊಂಡೇ ಯಾತನೆ ಅನುಭವಿಸಿದಳು. ದಿನದ ೨೪ ಗಂಟೆಗಳೂ ಎಡೆಬಿಡದೆ ಆಮ್ಲಜನಕ ಸೇವನೆ ಮಾಡಿಸಬೇಕಾಯಿತು. ಅತ್ಯಂತ ಯಾತನಾಮಯ ರೀತಿಯಲ್ಲಿ ಸೊರಗಿ ದಿನಾಂಕ ಅಕ್ಟೋಬರ್ ೧೦ (೨೦೦೦)ರ ವಿಜಯದಶಮಿಯಂದು ಕೊನೆಯುಸಿರೆಳೆದಳು.

ಜನಿಸಿದಾರಭ್ಯ ನನ್ನ ಆಗುಹೋಗುಗಳನ್ನು ಜತನವಾಗಿ ನಿರ್ವಹಿಸುತ್ತಿದ್ದ ತಾಯಿಯನ್ನು ಕೆಲವು ವರ್ಷಗಳ ಹಿಂದೆ ಕಳೆದುಕೊಂಡಾಗ ಒಂದು ಬಗೆಯ ತಬ್ಬಲಿಯಾದ ಪ್ರಜ್ಞೆ ನನ್ನನ್ನಾವರಿಸಿತ್ತು. ಕಳೆದ ನಾಲ್ಕು ದಶಕಗಳಿಗಿಂತಲೂ ಹೆಚ್ಚು ಕಾಲ ಬಾಳ ಸಂಗಾತಿಯಾಗಿ ತೆರೆಮರೆಯಲ್ಲೇ ನನ್ನ ಯಶಸ್ಸಿಗೆ ಶ್ರಮಿಸುತ್ತಿದ್ದ ಪತ್ನಿಯ ಅಗಲಿಕೆಯಿಂದ ಈಗ ಸಂಪೂರ್ಣ ಅನಾಥನಂತಾದೆ. ಹಿಂದಿರುಗಿ ನೋಡಿದಾಗ ಎಂಥೆಂಥಾ ಕಷ್ಟದ ಸನ್ನಿವೇಶಗಳಲ್ಲಿ ಆಕೆಯ

ಸಹಾಯ ಸಹಕಾರಗಳು ನನ್ನ ಜೀವನದಲ್ಲಿ ನಿರ್ಣಾಯಕ ಪಾತ್ರವಹಿಸುತ್ತಿದ್ದವೆಂಬುದರ ಅರಿವಾಗುತ್ತದೆ. ನನ್ನ ಕಾರ್ಯ ಸಾಧನೆ ಹಾಗೂ ಯಶಸ್ಸಿಗೆ ಆಕೆ ಅವಿರತವಾಗಿ ಶ್ರಮಿಸುತ್ತಿದ್ದುದನ್ನು ದೂರದಿಂದಲೇ ಗಮನಿಸುತ್ತಿದ್ದ ಸಹೋದ್ಯೋಗಿಯೊಬ್ಬರು ಬಹಳ ಹಿಂದೆ ಬಹಿರಂಗವಾಗಿ ವ್ಯಕ್ತಪಡಿಸಿದ ಅಭಿಪ್ರಾಯದ ಮಾತುಗಳು ಅವಳಿಗೆ ತಕ್ಕುದಾದ ಶ್ರದ್ಧಾಂಜಲಿಯಾಗಬಹುದು. "ಡಾ॥ ಚಂದ್ರಪ್ಪ ಗೌಡರ ಈ ಸಾಧನೆಗಳಿಗೆ ಅವರ ಸಹಧರ್ಮಿಣಿಯ ಸಂಪೂರ್ಣ ಸಹಕಾರವೇ ಕಾರಣವೆಂದು ತಿಳಿಸಿ, ಅವರು ಶ್ರೀಮತಿಯವರನ್ನು ಅಭಿನಂದಿಸಿದರು; ಎಲ್ಲಾ ಡಾಕ್ಟರರ ಪತ್ನಿಯರೂ ಇದೇ ರೀತಿಯ ಸಂತೃಪ್ತಿಯ ಸಹಕಾರಗಳನ್ನು ಅವರವರ ಗಂಡಂದಿರಿಗೆ ನೀಡಿದ್ದೇ ಆದರೆ ಇಡೀ ರಾಜ್ಯದ ಆಸ್ಪತ್ರೆಗಳ ಡಾಕ್ಟರರೆಲ್ಲಾ ಚಂದ್ರಪ್ಪಗೌಡರಂತಾಗಿ ವೈದ್ಯಕೀಯ ಕ್ಷೇತ್ರದಲ್ಲಿ ಅಪೂರ್ವ ಸಾಧನೆಗಳನ್ನು ಸಾಧಿಸಬಹುದೆಂಬ ತಮ್ಮ ಬಿಚ್ಚು ಮನಸ್ಸಿನ ಮಾತುಗಳನ್ನು ಮುಚ್ಚುಮರೆ ಇಲ್ಲದೆ ಹೇಳಿದರು".* ಅಂತಹ ಸಹಕಾರದ ಸಹಧರ್ಮಿಣಿ ನನಗೆ ದೊರೆತದ್ದು ಸುದೈವವೆಂದೇ ಭಾವಿಸುತ್ತೇನೆ. ಕುಪ್ಪಳಿಯಲ್ಲಿ ನನಗೆ ತೀವ್ರ ಹೃದಯಾಘಾತವಾಗಿ ಮೃತ್ಯುಮುಖವಾಗಿದ್ದಾಗ ಧೃತಿಗೆಡದೆ ಸಮಯ ಸ್ಫೂರ್ತಿಯಿಂದ ಪಾರುಮಾಡಿ ಮೊದಲು ತಾನೇ ಇಹಲೋಕ ಯಾತ್ರೆ ಮುಗಿಸಿದ ಸಹಧರ್ಮಿಣಿಗೆ ಅದೇ ತಾನೆ ಬರೆದು ಮುಗಿಸಿದ **"ನನಗೆ 'ಬೈ-ಪಾಸ್' ಆಯಿತು"** ಕೃತಿಯನ್ನು 'ಅರ್ಪಣೆ' ಮಾಡಿರುವೆ. ಕೊನೆಯ ದಿನಗಳಲ್ಲಿ ಅದರ ಹಸ್ತ ಪ್ರತಿಯನ್ನು ನೋಡಿ ಹಸನ್ಮುಖಿಯಾದ ದೃಶ್ಯವನ್ನು ನಾನೆಂದೂ ಮರೆಯಲಾರೆ.

## ಕಡೆಯದಾಗಿ ಒಂದು ಬಿನ್ನಹ

ನನ್ನ ಜೀವನಾನುಭವಗಳನ್ನು ದಾಖಲಿಸುವ ಪ್ರಯತ್ನದ ಆರಂಭದಲ್ಲಿ ಅದು ಅಂತಿಮವಾಗಿ ಇಷ್ಟೊಂದು ದೀರ್ಘ ಬರಹವಾಗಬಹುದೆಂಬ ಅಂದಾಜಾಗಲಿಲ್ಲ. ವೈದ್ಯಕೀಯ ದಂಥ ವೃತ್ತಿಯ ಸಂದರ್ಭದಲ್ಲುಂಟಾಗುವ ಅನುಭವಗಳು, ಎದುರಿಸುವ ಸಮಸ್ಯೆಗಳು, ಮನಮಿಡಿಯುವ ಘಟನೆಗಳಲ್ಲಿ ಯಾವುದನ್ನು ದಾಖಲಿಸುವುದು, ಯಾವುದನ್ನು ಬಿಡುವುದು ಎಂಬುದೇ ದೊಡ್ಡ ಸಮಸ್ಯೆಯಾಗುತ್ತದೆ. ಇದೂ ಅಲ್ಲದೆ ಈ ಬರಹದ ತುಂಬಾ 'ನಾನು', 'ನನ್ನ' ಮುಂತಾದ ವೈಯಕ್ತಿಕವಾಗಿ ನನಗೆ ಸಂಬಂಧಿಸಿದಂತೆ ಉಲ್ಲೇಖಗಳು ಯಥೇಚ್ಛವಾಗಿ ನುಸುಳಿ ಕೊಂಡಿವೆ. ಈ ತರದ ಬರಹದಲ್ಲಿ ಅವು ಅನಿವಾರ್ಯವಾದುದರಿಂದ ಬಂದಿವೆಯೇ ಹೊರತು ನನ್ನ ಅಹಂಭಾವದ ಪ್ರದರ್ಶನಕ್ಕಲ್ಲವೆಂದು ನಿವೇದಿಸಲು ಬಯಸುತ್ತೇನೆ. ಸಹೃದಯ ಓದುಗರು ನನ್ನ ಅಂತಹ "ಅತಿರೇಕ ವರ್ತನೆ"ಯನ್ನು ಸಹಿಸಿಕೊಳ್ಳಬೇಕಾಗಿ ವಿನಂತಿಸುತ್ತೇನೆ. ಈ ಬರವಣಿಗೆಯಿಂದ ಯಾರಿಗಾದರೂ ಅಸಮಾಧಾನ ಅಥವಾ ಮುಜುಗರ ಉಂಟಾದರೆ ಮತ್ತೊಮ್ಮೆ ಅಂತಹವರ ಕ್ಷಮೆಯಾಚಿಸುತ್ತೇನೆ; ಅವರು ನನ್ನನ್ನು ಕ್ಷಮಿಸುತ್ತಾರೆಂದು ಆಶಿಸುತ್ತೇನೆ.

ನಮಸ್ಕಾರ

೨೬-೯-೨೦೦೧

ಶಿವಮೊಗ್ಗ.

*ಶಿವಮೊಗ್ಗೆಯಲ್ಲಿ ಬಡ್ತಿ ದೊರೆತು ಮಂಗಳೂರಿಗೆ ಹೋಗುವ ಸಮಯದಲ್ಲಿ ಸಹೋದ್ಯೋಗಿಗಳು ಏರ್ಪಡಿಸಿದ ಬೀಳ್ಕೊಡಿಗೆ ಸಂದರ್ಭದಲ್ಲಿ ಸಹೋದ್ಯೋಗಿ ವೈದ್ಯರೊಬ್ಬರಾಡಿದ ಈ ಮಾತುಗಳು; ಶಿವಮೊಗ್ಗಾದ ಬೃಹಸ್ಪತಿ ವಾಣಿ ವಾರಪತ್ರಿಕೆ ತನ್ನ ಏಪ್ರಿಲ್ ೧೨(೧೯೭೬) ಸಂಚಿಕೆಯಲ್ಲಿ ಪ್ರಕಟಿಸಿತ್ತು.

# ಒಂದು ಅನಿಸಿಕೆ

ಡಾ॥ ಹೆಚ್. ಡಿ. ಚಂದ್ರಪ್ಪಗೌಡರ ಅನೇಕ ಕೃತಿಗಳನ್ನು ಹಾಗೂ ಅವರ ಬರಹಗಳನ್ನು ಮೆಚ್ಚಿಕೊಂಡವರಲ್ಲಿ ನಾನೊಬ್ಬ, ಅವೆಲ್ಲ ಪ್ರಕಟವಾದ ನಂತರ ಓದಿದವು. ಆದರೆ, ಅವರ ವೃತ್ತಿ ಜೀವನದ ಅನುಭವಗಳನ್ನು ವಿವರಿಸುವ ಈ ಕೃತಿಯನ್ನು ಪ್ರಕಟಣೆಗೆ ಮುನ್ನವೇ ಓದಲು ಅವಕಾಶ ಮಾಡಿಕೊಟ್ಟು ಡಾ॥ ಚಂದ್ರಪ್ಪಗೌಡರು ನನ್ನ ಬಗೆಗೆ ಅಪಾರ ವಿಶ್ವಾಸ ತೋರಿದ್ದಾರೆ. ಇದಕ್ಕೆ ನಾನವರಿಗೆ ಋಣಿ.

ನವಕರ್ನಾಟಕ ಪ್ರಕಾಶನದ 'ಜ್ಞಾನ-ವಿಜ್ಞಾನ ಕೋಶ'ದ ಪ್ರಧಾನ ಸಂಪಾದಕರಲ್ಲೊಬ್ಬನಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ ಶಸ್ತ್ರವೈದ್ಯಕ್ಕೆ ಸಂಬಂಧಿಸಿದ ಲೇಖನಗಳನ್ನು ಬರೆದು ಕೊಟ್ಟ ಡಾ॥ ಚಂದ್ರಪ್ಪ ಗೌಡರೊಂದಿಗೆ ನಿಕಟವಾಗಿ ವ್ಯವಹರಿಸುವ ಅವಕಾಶ ನನಗೆ ಒದಗಿ ಬಂದಿತ್ತು. ಆಗ ಅವರು ನೀಡಿದ ಸಹಕಾರ, ತೋರಿದ ಸಜ್ಜನಿಕೆಗಳನ್ನು ನಾನು ಮರೆಯಲಾರೆ.

ಇನ್ನು ಈ ಕೃತಿಯನ್ನು ಕುರಿತು ಹೇಳುವುದಾದರೆ - ಇದೊಂದು ವಿಶಿಷ್ಟ ರೀತಿಯ ಬರಹ ಎಂದೇ ನನಗನ್ನಿಸುತ್ತದೆ. ಸಾಮಾನ್ಯ ವೈದ್ಯರ ಅನುಭವ ವೃತ್ತಾಂತಗಳನ್ನು ನಾವು ಬೇಕಾದಷ್ಟು ಓದಿದ್ದೇವೆ. ಆದರೆ ಶಸ್ತ್ರವೈದ್ಯರ ವೃತ್ತಿ ಅನುಭವ ವಿವರಿಸುವ ಇಂತಹ ಕೃತಿ ತುಂಬ ವಿರಳ, ಬಹುಶಃ ಕನ್ನಡದಲ್ಲಿ ಇದೇ ಮೊದಲಿನದೇನೋ.

ಈ ಕೃತಿಯಲ್ಲಿ ಶಸ್ತ್ರ ವೈದ್ಯಕ್ಕೆ ಹಾಗೂ ಆಡಳಿತ ನಿರ್ವಹಣೆಗೆ ಸಂಬಂಧಿಸಿದ ಅನೇಕಾನೇಕ ಪ್ರಸಂಗಗಳ ನಿರೂಪಣೆ ಇದೆ. ನಿರೂಪಣೆ ಎಷ್ಟು ಸರಳವಾಗಿ, ಎಷ್ಟು ಹೃದಯಂಗಮವಾಗಿ ಇದೆಯೆಂದರೆ, ಒಂದೊಂದು ಪ್ರಸಂಗವೂ ಒಂದೊಂದು ಸಣ್ಣ ಕಥೆಯಂತೆ ಓದಿಸಿಕೊಂಡು ಹೋಗುತ್ತದೆ. ಅವರು ಬಳಸಿರುವ ಭಾಷೆ, ವಿವರಣ ಶೈಲಿ ಅಷ್ಟು ಆಪ್ಯಾಯಮಾನವಾಗಿದೆ. ಅವಿಶ್ರಾಂತ ವೈದ್ಯವೃತ್ತಿಯ ಜೊತೆಗೆ ಇಂಥ ಉತ್ಕೃಷ್ಟ ಸಾಹಿತ್ಯ ರಚನೆಯನ್ನೂ ಮಾಡಿರುವುದು ಡಾ॥ ಚಂದ್ರಪ್ಪಗೌಡರ ಒಂದು ಅಮೋಘ ಸಾಧನೆಯೇ ಸರಿ. ಅಂತೆಯೇ ಅವರು ಅನೇಕ ಗೌರವಾರ್ಹ ಪ್ರಶಸ್ತಿ-ಪುರಸ್ಕಾರಗಳಿಗೆ ಭಾಜನರಾಗಿದ್ದಾರೆ.

ಇಂತಹ ಕೃತಿಯಿಂದ ಸಾಮಾನ್ಯ ಓದುಗ ಶಸ್ತ್ರಕ್ರಿಯೆಗೆ ಸಂಬಂಧಿಸಿ, ಅನೇಕಾನೇಕ ಹೊಸ ಹಾಗೂ ಉಪಯುಕ್ತ ವಿಷಯಗಳನ್ನು ಅರಿಯ ಬಲ್ಲವನಾದರೆ, ಈಗಷ್ಟೆ ವ್ಯಾಸಂಗ ಪೂರೈಸಿ ವೈದ್ಯ ವೃತ್ತಿ ಆರಂಭಿಸಿದ ವೈದ್ಯಶಾಸ್ತ್ರಾಭ್ಯಾಸಿಗಳಿಗೆ ಇದೊಂದು ಮಾರ್ಗದರ್ಶಕ ಕೈಪಿಡಿಯಂತಿದೆ.

ಶಸ್ತ್ರಕ್ರಿಯಾ ಕಾರ್ಯದಲ್ಲಷ್ಟೇ ಅಲ್ಲ, ಆಡಳಿತ ನಿರ್ವಹಣೆಯಲ್ಲೂ ಡಾ॥ಚಂದ್ರಪ್ಪ ಗೌಡರು ತೋರಿರುವ ನೀತಿ-ನಿಯಮ ಪಾಲನೆ, ಕರ್ತವ್ಯ ನಿಷ್ಠೆ, ಪ್ರಾಮಾಣಿಕತೆ, ಲಂಚ ರುಷುವತ್ತುಗಳ ಆಮಿಷಗಳಿಗೆ ಒಳಗಾಗದಿರುವಿಕೆ, ಕಾರ್ಯಕ್ಷಮತೆ, ಪ್ರಭಾವಗಳಿಗೆ ಮಣಿಯದಿರುವಿಕೆ - ಇವೆಲ್ಲಾ ವೈದ್ಯವೃತ್ತಿ ಆರಂಭಿಸುವವರಿಗೆ ಕೈದೀವಿಗೆಯಾಗಿ ನೆರವಾಗುವುದು ಖಂಡಿತ. ಅವರೆಲ್ಲಾ ಈ ಕೃತಿಯನ್ನು ಓದಿ, ಅದರಿಂದ ಪ್ರಭಾವಿತರಾಗಿ ಡಾ॥ ಚಂದ್ರಪ್ಪಗೌಡರಂತೆ ತಾವೂ ಆದರ್ಶಯುತ ಮಾರ್ಗಾನುಸರಣೆ ಮಾಡುವಂತೆ ಪ್ರೇರಿತರಾಗುತ್ತಾರೆಂದು ನಾನು ದೃಢವಾಗಿ ನಂಬಿದ್ದೇನೆ.

ಇಂಥ ಕೃತಿಯನ್ನು ಕನ್ನಡಿಗರಿಗೆ ನೀಡಿರುವ ಡಾ॥ ಚಂದ್ರಪ್ಪ ಗೌಡರು ನಿಜಕ್ಕೂ ಅಭಿನಂದನಾರ್ಹರು. ಇದೇ ತಮ್ಮ ಅಂತಿಮ ಕೃತಿ ಎಂದು ಅವರು ಹೇಳಿರುವರಾದರೂ ಅವರ ಲೇಖನಿಯಿಂದ ಇನ್ನೂ ಇಂಥ ಹಲವಾರು ಕೃತಿಗಳು ಹೊರಬರಲೆಂಬುದು ಕನ್ನಡಿಗರೆಲ್ಲರ ಹಾರೈಕೆಯಾಗಿದೆ.

ಬೆಂಗಳೂರು
10-08-2002.

**ಕೆ.ಎಲ್. ಗೋಪಾಲಕೃಷ್ಣರಾವ್**, ಅನುವಾದಕ (ನಿವೃತ್ತ)
ಪ್ರಗತಿ, ಮೀರ್, ಹಾಗೂ ರಾದುಗ ಪ್ರಕಾಶನ, ಮಾಸ್ಕೋ.

# ಒಂದು ಅಭಿಪ್ರಾಯ

ವೈದ್ಯರೊಬ್ಬರ ಉದ್ಯೋಗ ಸಂಸಾರ ಎಷ್ಟೊಂದು ವಿಪುಲವಾಗಿದೆ, ವೈವಿಧ್ಯಮಯವಾಗಿದೆ, ಶಾಖೋಪಶಾಖೆಗಳಾಗಿ ಬೆಳೆದಿದೆ; ರೋಗಪರಿಚಯ, ರೋಗನಿವಾರಣೆ, ಚಿಕಿತ್ಸೆಗಳೂ ಕೂಡ ಎಷ್ಟೊಂದು ಬೆಳೆದಿವೆಯೆಂದು ತಿಳಿದಾಗ ಅದೊಂದು ಅದ್ಭುತ ಪ್ರಪಂಚವೆಂದು ಭಾವಿಸುವುದು ಅನಿವಾರ್ಯವಾಗುತ್ತದೆ. ನೀವು ನಿಮ್ಮ ಕಷ್ಟಕೋಟಲೆಗಳ ಮಧ್ಯೆ ಆ ಅದ್ಭುತ ಪ್ರಪಂಚದ ಪರಿಚಯವನ್ನು ಕನ್ನಡ ನಾಡಿನ ಜನತೆಗೆ ಮಾಡಿಕೊಟ್ಟಿದ್ದೀರಿ. ನಿಮ್ಮ ಸಾಹಸಕ್ಕೆ ನನ್ನ ಧನ್ಯವಾದಗಳು.

ನಿಮ್ಮ ಹಿಂದಿನ ಪ್ರಕಟವಾದ ಕೃತಿಗಳ ಬಗ್ಗೆ ನಾಡಿನ ಹಿರಿಯ ಮತ್ತು ಕಿರಿಯ ಸಾಹಿತಿಗಳಿಂದ ಪ್ರಶಂಸಿತರಾಗಿದ್ದೀರಿ. ಅದರಂತೆ ಆತ್ಮ ಚರಿತೆಯೂ ಪ್ರಶಂಸೆಗೊಳಗಾಗುವುದರಲ್ಲಿ ಸಂದೇಹವಿಲ್ಲ.

ಶಿವಮೊಗ್ಗ
19-5-2002.

ಇಂತೀ ತಮ್ಮ ವಿಶ್ವಾಸಿ,
(ಸಹಿ)
**ಡಿ. ಪಿ. ಒಡೆಯರ್**
(ಖ್ಯಾತ ನ್ಯಾಯವಾದಿಗಳು, ಶಿವಮೊಗ್ಗ)

## ಪ್ರಕಟವಾದ ಪುಸ್ತಕಗಳು

1. **ಮದ್ಯಪಾನದ ಸಮಸ್ಯೆ** (1983) ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ.
2. **ವೈದ್ಯ ವಿಜ್ಞಾನ ಸಾಧಕರು** (1986) ಪ್ರಸಾ ರಾಂಗ, ಮೈಸೂರು ವಿಶ್ವವಿದ್ಯಾಲಯ.
3. **ಡಾ|| ಆಲ್ಬರ್ಟ್ ಶ್ವೈಯಿಟ್ಸರ್** (1990) ಮನೋಹರ ಗ್ರಂಥಮಾಲೆ, ಧಾರವಾಡ.
   2ನೇ ಮುದ್ರಣ (2000) ನವಕರ್ನಾಟಕ ಪ್ರಕಾಶನ, ಬೆಂಗಳೂರು
   (ಕುವೆಂಪು ವಿ.ವಿ. ಅವಿಸ್ತರ ಪಠ್ಯಪುಸ್ತಕ)
4. **ಜೀರ್ಣಾಂಗ ರೋಗಗಳು** (1991) ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು, ಬೆಂಗಳೂರು.
5. **ಭಟ್ಟಿ ಜಾರುವುದು** (1991) ಕರ್ನಾಟಕ ಸಾಹಿತ್ಯ ಪರಿಷತ್ತು, ಬೆಂಗಳೂರು.
6. **ವಿಶ್ವ ವಿಖ್ಯಾತ ವೈದ್ಯ ವಿಜ್ಞಾನಿಗಳು** (1992)
   - 5ನೇ ಮುದ್ರಣ, ನವಕರ್ನಾಟಕ ಪ್ರಕಾಶನ, ಬೆಂಗಳೂರು.
7. **ವೈದ್ಯಲೋಕದ ಕೌತುಕಗಳು** (1993)
   - 3ನೇ ಮುದ್ರಣ, ನವಕರ್ನಾಟಕ ಪ್ರಕಾಶನ, ಬೆಂಗಳೂರು.
8. **ಅಪೆಂಡಿಸೈಟಿಸ್ - ಪೂರ್ವೋತ್ತರ ಕಥೆ** (1994)
   - 3ನೇ ಮುದ್ರಣ, ನವಕರ್ನಾಟಕ ಪ್ರಕಾಶನ, ಬೆಂಗಳೂರು.
9. **ಕ್ಯಾನ್ಸರ್ ಲೋಕ** (1995)
   - 2ನೇ ಮುದ್ರಣ, ನವಕರ್ನಾಟಕ ಪ್ರಕಾಶನ, ಬೆಂಗಳೂರು.
10. **ಕಂಪ್ಯೂಟರ್ ಕಥೆ** (1993) - ಕ.ರಾ.ವಿ.ಪ., ಬೆಂಗಳೂರು - ಹಲವು ಮುದ್ರಣಗಳು.
11. **ಮಾನವಯಂತ್ರ ಕುಸಿದು ಬೀಳದಂತೆ ತಡೆಯುವುದು ಹೇಗೆ** (ಅನು : 1996)
    ನ್ಯಾಷನಲ್ ಬುಕ್ ಟ್ರಸ್ಟ್ ಇಂಡಿಯಾ, ನವದೆಹಲಿ.
12. **ಮಾದಕ ಮದ್ದುಗಳು** (ಅನುವಾದ; ಅಚ್ಚಿನಲ್ಲಿ)
    ನ್ಯಾಷನಲ್ ಬುಕ್ ಟ್ರಸ್ಟ್ ಇಂಡಿಯಾ, ನವದೆಹಲಿ.
13. **ಆಯುರ್ವೇದ ದರ್ಶನ** (ಅನುವಾದ; ಅಚ್ಚಿನಲ್ಲಿ)
    ನ್ಯಾಷನಲ್ ಬುಕ್‌ಟ್ರಸ್ಟ್ ಇಂಡಿಯಾ, ನವದೆಹಲಿ.
14. **ಜೋಸೆಫ್ ಲಿಸ್ಟರ್** (ಜೀವನ ಚರಿತ್ರೆ; 1995), ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.
15. **ಡಾ|| ಯಲ್ಲಾಪ್ರಗಡ ಸುಬ್ಬರಾವ್** (ಜೀವನ ಚರಿತ್ರೆ; 1999),
    ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.
16. **ಡಾ|| ವ್ಲಾದಿಮಿರ್ ಹಾಫ್‌ಕಿನ್** (ಜೀವನ ಚರಿತ್ರೆ, 2000),
    ನೆಲಮನೆ ಪ್ರಕಾಶನ, ಶ್ರೀರಂಗ ಪಟ್ಟಣ.
17. **ನಮ್ಮೂರಿನ ನೆನಪುಗಳು** (2000) ನೆಲಮನೆ ಪ್ರಕಾಶನ, ಶ್ರೀರಂಗ ಪಟ್ಟಣ.
18. **ವಿಜ್ಞಾನ ಸಾಹಿತ್ಯ ರ್ಗಿಣಿ** (2000) ಲೇಖನಗಳ ಸಂಪಾದನೆ
    ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.
19. **ಸಾಮಾನ್ಯ ಶಸ್ತ್ರವೈದ್ಯದ ಕಾಯಿಲೆಗಳು** (1993) ಕನ್ನಡ ವಿಶ್ವವಿದ್ಯಾಲಯ, ಹಂಪಿ.
20. **ನನಗೆ 'ಬೈ-ಪಾಸ್' ಆಯಿತು**, ನವಕರ್ನಾಟಕ ಪ್ರಕಾಶನ, ಬೆಂಗಳೂರು.
21. **ಆಪ್ತ ವೈದ್ಯಕೀಯ ಸಂಗಾತಿ 2002** (ಲೇಖನಗಳ ಸಂಕಲನ),
    ಸಂವಹನ ಪ್ರಕಾಶನ, ಮೈಸೂರು.

## ಲಭಿಸಿದ ಪ್ರಶಸ್ತಿ, ಪುರಸ್ಕಾರಗಳು :

1. **ಮೈಸೂರು ಶ್ರೀಮತಿ ಯಮುನಾಬಾಯಿ ಸ್ಮಾರಕ ಬಹುಮಾನ** (1987)
ಲೇಖನ: ಲೂಯಿ ಪ್ಯಾಶ್ಚರ್ ಮತ್ತು ರೇಬೀಸ್ ರೋಗದ ಕತೆ
ಪ್ರಕಟಣೆ : ಬಾಲವಿಜ್ಞಾನ, ಕ.ರಾ.ವಿ.ಪ. ಬೆಂಗಳೂರು.

2. **ಇಂಡಿಯನ್ ಸೈಕಿಯಾಟ್ರಿಕ್ ಅಸೋಸಿಯೇಷನ್** ಅವರ **ಡಾ॥ ಜಯರಾಮ್ ಅವಾರ್ಡ್**
ಲೇಖನ: ವಿವಾಹಪೂರ್ವ ವೈದ್ಯಕೀಯ ಸಮೀಕ್ಷೆ(1991-92)
ಪ್ರಕಟಣೆ : ಆರೋಗ್ಯ ಯೋಗ, ಮೈಸೂರು.

3. **ಕರ್ನಾಟಕ ಸಾಹಿತ್ಯ ಅಕಾಡೆಮಿ - ಪುಸ್ತಕ ಬಹುಮಾನ** (1993)
ಪುಸ್ತಕ: ವೈದ್ಯಲೋಕದ ಕೌತುಕಗಳು : **(ವಿಜ್ಞಾನ ಸಾಹಿತ್ಯ ಪ್ರಕಾರ)**
ಪ್ರಕಟಣೆ : ನವಕರ್ನಾಟಕ ಪ್ರಕಾಶನ, ಬೆಂಗಳೂರು.

4. **ಕರ್ನಾಟಕ ಸಾಹಿತ್ಯ ಅಕಾಡೆಮಿ : ಪುಸ್ತಕ ಬಹುಮಾನ** (1998)
ಪುಸ್ತಕ : ಮಾನವಯಂತ್ರ ಕುಸಿದು ಬೀಳದಂತೆ ತಡೆಯುವುದು ಹೇಗೆ
ಪ್ರಕಟಣೆ : ನ್ಯಾಷನಲ್ ಬುಕ್ ಟ್ರಸ್ಟ್, ನವದೆಹಲಿ. **-(ಅನುವಾದ 2 ಪ್ರಕಾರ)**

5. **ಕರ್ನಾಟಕ ಸಾಹಿತ್ಯ ಅಕಾಡೆಮಿ : ಪುಸ್ತಕ ಬಹುಮಾನ** (2000)
ಪುಸ್ತಕ : ಡಾ॥ ವ್ಲಾದಿಮಿರ್ ಹಾಫ್‌ಕಿನ್ **(ಜೀವನ ಚರಿತ್ರೆ ಪ್ರಕಾರ)**
ಪ್ರಕಟಣೆ : ನೆಲಮನೆ ಪ್ರಕಾಶನ, ಶ್ರೀರಂಗ ಪಟ್ಟಣ.

6. **ಆರ್ಯಭಟ ಸಾಹಿತ್ಯ ಪ್ರಶಸ್ತಿ** (1993)
ಪುಸ್ತಕ: ಸಾಮಾನ್ಯ ಶಸ್ತ್ರ ವೈದ್ಯದ ಕಾಯಿಲೆಗಳು.
ಪ್ರಕಟಣೆ : ಕನ್ನಡ ವಿಶ್ವವಿದ್ಯಾಲಯ, ಹಂಪಿ.

7. **ಕನ್ನಡ ವೈದ್ಯ ಸಾಹಿತ್ಯ ಪರಿಷತ್ತು : ರಸಋಷಿ ಕುವೆಂಪು ವೈದ್ಯ ಸಾಹಿತ್ಯ ಪುರಸ್ಕಾರ** (1996)
ಪುಸ್ತಕ : ಕ್ಯಾನ್ಸರ್ ಲೋಕ.
ಪ್ರಕಟಣೆ : ನವಕರ್ನಾಟಕ ಪ್ರಕಾಶನ, ಬೆಂಗಳೂರು.

8. **ಮೈಸೂರು ದೇಜಗೌ ಟ್ರಸ್ಟ್ : ವಿಶ್ವಮಾನವ ಪ್ರಶಸ್ತಿ** (1999)
ವಿಜ್ಞಾನ ಸಾಹಿತ್ಯ ಹಾಗೂ ಜೀವನ ಚರಿತ್ರೆಗಳಿಗಾಗಿ.

9. **ಬೆಂಗಳೂರು ಗೊರೂರು ಪ್ರತಿಷ್ಠಾನ : ರನ್ನ ಪ್ರಶಸ್ತಿ** (2000)
ಪುಸ್ತಕ : ಡಾ॥ ವ್ಲಾದಿಮಿರ್ ಹಾಫ್‌ಕಿನ್.
ಪ್ರಕಟಣೆ : ನೆಲಮನೆ ಪ್ರಕಾಶನ, ಶ್ರೀರಂಗ ಪಟ್ಟಣ.

# ಹಿನ್ನುಡಿ

ವಿದ್ಯೆ, ವಿದ್ವತ್ತು, ಸೃಜನಶೀಲ ಪ್ರತಿಭೆ ಮತ್ತು ವಿನಯಗಳಿಂದ ಕೂಡಿದ ಕನ್ನಡ ಸಾರಸ್ವತ ಲೋಕದ ಒಂದು ಜೀವಂತ ನಿದರ್ಶನ ಡಾ॥ ಎಚ್. ಡಿ. ಚಂದ್ರಪ್ಪಗೌಡ ಅವರು; ವೃತ್ತಿಯಲ್ಲಿ ವೈದ್ಯರಾಗಿ ಜನಸಾಮಾನ್ಯರ ಸೇವೆಗೈದು ಅಹರ್ನಿಶಿ ದುಡಿದು ಮೇಲ್ಪಂಕ್ತಿಯಲ್ಲಿ ನಿಂತವರು; ಜೊತೆಗೆ ಉತ್ತಮ ಆರೋಗ್ಯದ ಬಗ್ಗೆ ಜಾಗೃತಿಯುಂಟು ಮಾಡುವ ಉದ್ದೇಶದಿಂದ ವೈದ್ಯಕೀಯ ಸಾಹಿತ್ಯ ರಚನೆಯಲ್ಲಿ ಅಪಾರವಾಗಿ ತಮ್ಮನ್ನು ತೊಡಗಿಸಿಕೊಂಡು ಹತ್ತಾರು ಕೃತಿ ರಚಿಸಿ ಹಲವಾರು ಪ್ರಶಸ್ತಿಗಳಿಗೆ ಭಾಜನರಾಗಿರುತ್ತಾರೆ. ಪ್ಲೇಗ್ ವ್ಯಾಧಿಗೆ ನಿಯಂತ್ರಕ ಲಸಿಕೆ ಕಂಡು ಹಿಡಿದ ಡಾ॥ ಹಾಫ್‌ಕಿನ್‌ರ ಜೀವನಗಾಥೆ ಕೃತಿಗೆ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ದೊರಕಿರುವುದು ಇವರ ಸಾಹಿತ್ಯ ಸತ್ವಕ್ಕೆ ಸಂದ ನಿದರ್ಶನ. ಪ್ರಸ್ತುತದ ಆತ್ಮಚರಿತ್ರೆ ಜೀವನದ ಎಲ್ಲಾ ಮಜಲುಗಳನ್ನು ಪ್ರತಿಬಿಂಬಿಸುವಂತಿದ್ದು, ಸರಳ ಹಾಗೂ ಸಹಜ ಭಾಷೆಯಲ್ಲಿ ಅರಳಿದ ಮಂದಾರ ಕುಸುಮ. ಇದರಲ್ಲಿ ನೋವಿದೆ, ನಲಿವಿದೆ; ಎಂತಹ ಸಂದರ್ಭದಲ್ಲಿಯೂ ಧೃತಿಗೆಡದೆ ಹಿಡಿದ ಕೆಲಸವನ್ನು ಸಾಧಿಸುವ ಛಲವಿದೆ ಮತ್ತು ಜೀವನದ ಸಾಫಲ್ಯವನ್ನು ತಿಳಿಸಿಕೊಡುವ ಹಂಬಲವಿದೆ.

ಗ್ರಂಥದುದ್ದಕ್ಕೂ ಅವರ ಶ್ರಮನಿಷ್ಠೆ, ವಿದ್ವತ್ತುಗಳು ಎದ್ದು ಕಾಣುತ್ತವೆ. ಇಲ್ಲಿನ ವಿಚಾರಗಳು ಕೇವಲ ಪಾಂಡಿತ್ಯದ ನುಡಿಗಳಲ್ಲ; ಸ್ವಂತ ಅನುಭವದಿಂದ ಮೂಡಿ ಬಂದ ಶೃತಿ ವಾಕ್ಯಗಳು. ಆದುದರಿಂದ ಇವು ಓದುಗರ ಮನಸ್ಸಿನ ಮೇಲೆ ಅಳಿಸಲಾರದ ಮುದ್ರೆಯನ್ನು ಒತ್ತುತ್ತವೆ. ಗಾತ್ರ, ಗುಣಗಳಲ್ಲಿ ಇದು ಬಹು ದೊಡ್ಡ ಕೃತಿ; ವೈಜ್ಞಾನಿಕತೆ, ನಿಖರತೆ ಹೃದ್ಯತೆಗಳಲ್ಲಿ ಡಾ॥ ಎಚ್. ಡಿ. ಚಂದ್ರಪ್ಪಗೌಡರು ಅತ್ಯಂತ ಸಮರ್ಥವಾಗಿ ರಚಿಸಿರುವ ಆತ್ಮ ಚರಿತ್ರೆ; ಕೃತಿ ಸಾಹಿತ್ಯ ಕ್ಷೇತ್ರದಲ್ಲಿ ಒಂದು ಮಹತ್ವದ ಮೈಲುಗಲ್ಲಾಗಲಿ ಎಂದು ಹಾರೈಸುತ್ತೇನೆ.

(ಸಹಿ)

**ಡಾ॥ ಎಚ್. ಸುದರ್ಶನ್**
ಅಧ್ಯಕ್ಷರು,
ಕರ್ನಾಟಕ ಆರೋಗ್ಯ ಸೇವಾ ವ್ಯವಸ್ಥೆಯ
ಸುಧಾರಣಾ ಕಾರ್ಯದಳ
ಬೆಂಗಳೂರು.

**ಬೆಲೆ : ರೂ. 150/-**